C-NO-4227

ವಿರೂಪಾಕ್ಷ ಪಂಡಿತ ಕೃತ

# ಚೆನ್ನಬಸವ ಪುರಾಣ

ಗದ್ಯಾನುವಾದ :

ಎಂ. ಚಂದ್ರಶೇಖರ್

ಕನ್ನಡ ಸಾಹಿತ್ಯ ಪರಿಷತ್ತು
1977
ವಜ್ರ ಮಹೋತ್ಸವ

Q234:332
33L9.1

CC-0. Jangamwadi Math Collection. Digitized by eGangotri

C.No - 4227

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-140

ವಿರೂಪಾಕ್ಷ ಪಂಡಿತ ಕೃತ

# ಚೆನ್ನಬಸವ ಪುರಾಣ

ಮೊದಲ ಸಂಪುಟ

೧-೩ ಕಾಂಡಗಳು

ಗದ್ಯಾನುವಾದ :

ಎಂ. ಚಂದ್ರಶೇಖರ್



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು-18

1979

CC-0. Jangamwadi Math Collection. Digitized by eGangotri

CHENNABASAVA PURANA by Virupaksha Pandita. Original Text with Prose rendering in Kannada by Sri M. Chandrasekhar, Published by Kannada Sahitya Parishat, Chamarajpet, Bangalore-18.
Pages : 640+XXIV, Price : Rs. 15-00

© ಹಕ್ಕುಗಳು : ಕನ್ನಡ ಸಾಹಿತ್ಯ ಪರಿಷತ್ತು

ಮೊದಲ ಮುದ್ರಣ : 1979

ಮೊದಲ ಸಂಪುಟ

Q234:332
33L9.1
1754

ಬೆಲೆ : ಹದಿನೈದು ರೂಪಾಯಿಗಳು

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 4227

ಪ್ರಕಾಶಕರು :
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560 018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570 001.

CC-0. Jangamwadi Math Collection. Digitized by eGangotri

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತು ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನವರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಇವು ಆ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸಗನ್ನಡಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದ ಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿಯಲ್ಲಿ ಸುಮಾರು ಅರುವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23–9–73 ನೆಯ ಭಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದ ಕಾರ್ಯದ ವಿಷಯವನ್ನು

CC-0. Jangamwadi Math Collection. Digitized by eGangotri

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಳಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿನಾಥಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಉತ್ತಮವಾದ ಪರಿಣತಿ

CC-0. Jangamwadi Math Collection. Digitized by eGangotri

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು,

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು–ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದುವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

CC-0. Jangamwadi Math Collection. Digitized by eGangotri

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣಾ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡ ಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದ ಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತ ಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡ ಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15 ರಷ್ಟನ್ನು ಸಂಭಾವನೆಯಾಗಿ ಕೊಡ ತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟು ಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸ ಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ, ಪುಸ್ತಕ ಪ್ರಕಟಣೆಯಾದಮೇಲೆ ಅನುವಾದಕರಿಗೆ ಈ ಗ್ರಂಥದ ಹತ್ತು ಪ್ರತಿಗಳನ್ನು, ಅನುವಾದಕ ಮಂಡಲಿ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ

CC-0. Jangamwadi Math Collection. Digitized by eGangotri

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣಸಮಿತಿಯ ಪ್ರಧಾನ ಸಂಪಾದಕರಾದ ಡಾ॥ ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆ ಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977 ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿತ್ತು. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿ ಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದರು. ಅದಕ್ಕಾಗಿ ಅವರು ಆ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕ ರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿ ಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸು ತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾದ 20 ಅನುವಾದ ಗ್ರಂಥ ಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯು ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗುತ್ತದೆ. ಅನುವಾದ ಕೃತಿ

CC-0. Jangamwadi Math Collection. Digitized by eGangotri

ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಮುಂದಿಡಲಾಯಿತು. ರಾಜ್ಯ ಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯ ಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಅಧ್ಯಕ್ಷ

ಕನ್ನಡ ಸಾಹಿತ್ಯ ಪರಿಷತ್ತು

CC-0. Jangamwadi Math Collection. Digitized by eGangotri

# ಮು ನ್ನು ಡಿ

ಕನ್ನಡ ಸಾಹಿತ್ಯ ಪರಿಷತ್ತು ಹಳಗನ್ನಡ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡದಲ್ಲಿ ಸರಳ ಗದ್ಯದಲ್ಲಿ ಅನುವಾದಿಸಿ, ಕಾವ್ಯಾಭ್ಯಾಸಿಗಳಿಗೆ, ವಿದ್ಯಾರ್ಥಿಗಳಿಗೆ, ಸಾಮಾನ್ಯರಿಗೆ ಪರಿಚಯಮಾಡಿಸುವ ಯೋಜನೆಯೊಂದನ್ನು 1973 ರಲ್ಲಿ ಕೈಗೊಂಡಿತು. ಈ ಮಾಲೆಯಲ್ಲಿ ಈಗಾಗಲೆ ಹಲವಾರು ಕಾವ್ಯಗಳು ಪಠ್ಯಭಾಗಗಳೂ ಸೇರಿದಂತೆ ಕನ್ನಡ ಅನುವಾದಗಳೊಡನೆ ಪ್ರಕಟವಾಗಿವೆ. ಈ ಕಾರ್ಯದಲ್ಲಿ ಅರಿತು, ನುರಿತ ಕನ್ನಡ ವಿದ್ವಾಂಸರನೇಕರು ಪರಿಷತ್ತಿಗೆ ನೆರವು ನೀಡಿದ್ದಾರೆ. ಪರಿಷತ್ತಿನ ಈ ಯೋಜನೆ ಜನಪ್ರಿಯವಾಗಿದ್ದು ಈಗಾಗಲೇ ಪ್ರಕಟವಾಗಿರುವ ಅನುವಾದ ಗ್ರಂಥಗಳು ಸಾಕಷ್ಟು ಮಾರಾಟವಾಗಿವೆ. ಅವುಗಳ ಅವಶ್ಯಕತೆ ಕಂಡುಬಂದಿದೆ.

ಕನ್ನಡ ಕಾವ್ಯಗಳ ಪರಂಪರೆಯನ್ನು ಗಮನಿಸಿದರೆ, ನಮ್ಮ ಕವಿಗಳ ದೃಷ್ಟಿ ಕಾಲಕ್ಕೆ ತಕ್ಕಂತೆ ಹೇಗೆ, ಸಮಾಜದ ಅಗತ್ಯತೆಗೆ ತಕ್ಕಂತೆ ಹೇಗೆ ಪರಿವರ್ತನೆಗೊಳ್ಳುತ್ತಾ ಬಂದಿದೆ ಎಂಬುದನ್ನು ಕಾಣಬಹುದು. ಈ ದೃಷ್ಟಿ ಬದಲಾವಣೆಯಲ್ಲಿ ವಸ್ತುವಿನ ವೈವಿಧ್ಯವನ್ನೂ ಧರ್ಮಗಳ ಅಭಿಮಾನವನ್ನೂ, ಜೀವನದ ಧೋರಣೆಯನ್ನೂ. ಕಾವ್ಯರಚನಾ ಮಾರ್ಗದಲ್ಲಿ ನೂತನತೆಯನ್ನೂ ಕಾಣಬಹುದು. ಚಂಪುವಿನಿಂದ ರಗಳೆ, ರಗಳೆಯಿಂದ ಷಟ್ಪದಿ, ಷಟ್ಪದಿಯಲ್ಲಿ ವೈವಿಧ್ಯ, ಜೊತೆ ಜೊತೆಗೆ, ತ್ರಿಪದಿ, ಚೌಪದಿ, ಸಾಂಗತ್ಯ ಮೊದಲಾದ ಛಂದೋ ವಿಶೇಷಗಳನ್ನು ಕಾಣುತ್ತೇವೆ. 12-13ನೆಯ ಶತಮಾನದಲ್ಲಿ ಆರಂಭವಾದ ಷಟ್ಪದಿ ಪ್ರಕಾರಗಳಲ್ಲಿ ಭಾಮಿನಿ ವಾರ್ಧಕ ಷಟ್ಪದಿಗಳು ಕವಿಪ್ರಿಯವಾದುವು ; ಜನಪ್ರಿಯವೂ ಆದವು. ಭಾಮಿನಿಗೆ ಕುಮಾರವ್ಯಾಸ, ವಾರ್ಧಕಕ್ಕೆ ರಾಘವಾಂಕ ಲಕ್ಷ್ಮೀಶರು ಒಡೆಯರಾದರು. ವಾರ್ಧಕ ಷಟ್ಪದಿಯನ್ನು ಅವರಂತೆ ಬಳಸಿಕೊಂಡ ಮತ್ತೊಬ್ಬ ಕವಿ ವಿರೂಪಾಕ್ಷ ಪಂಡಿತ. ಅವನ ಕಾವ್ಯ ಚೆನ್ನಬಸವ ಪುರಾಣ.

'ಚೆನ್ನಬಸವ ಪುರಾಣ' ಒಂದು ವಿಶಿಷ್ಟವಾದ ಕಾವ್ಯ. ವೀರಶೈವ ಸಾಹಿತ್ಯ ಪ್ರಪಂಚದಲ್ಲಿ ಸಮಸ್ಯೆಯಾಗಿ ಉಳಿದಿರುವ 'ಸಿದ್ಧರಾಮ'ನ ಮತದ ಚರ್ಚೆಗೆ ತೀರ್ಮಾನವನ್ನು ಕೊಡಲು ಯತ್ನಿಸಿರುವ ಕಾವ್ಯ. ಸಿದ್ಧರಾಮನಿಗೆ ಚೆನ್ನಬಸವ ಶಿವನ ಲೀಲಾ ಮಾಹಾತ್ಮ್ಯವನ್ನು ಹೇಳುವ ಕಥಾವಿವರಣೆ, ಶಿವನ ಬಹುವಿಧ ಲೀಲೆಗಳು ಇಲ್ಲಿನ ಪುರಾಣ ವಸ್ತು.

ಕವಿ ಹಳೆಯ ಸಂಪ್ರದಾಯದಲ್ಲಿ ಈ ಕಾವ್ಯಪುರಾಣವನ್ನು ರಚಿಸಿದ್ದಾನೆ. 'ಕಥೆಯ ನಾಮಂ ಚೆನ್ನಬಸವ ಪೌರಾಣಮೀ । ಕಥೆಗೊಡೆಯನಾ ವಿಮಲ ಚೆನ್ನಬಸವೇಶ್ವರಂ !

CC-0. Jangamwadi Math Collection. Digitized by eGangotri

ಕಥೆಯ ಪೇಳ್ದಾತಂ ವಿರೂಪಾಕ್ಷ ಪಂಡಿತಾರಾಧ್ಯನಾಗಮ ಹೃದ್ಯನು ॥ (ಪೀಠಿಕಾ ಸಂಧಿ, ಪದ್ಯ 31) ಎಂದು ತನ್ನ ಉದ್ದೇಶವನ್ನು ಹೇಳಿಕೊಂಡಿದ್ದಾನೆ.

'ವರಲಕ್ಷಣಂ ಸುಛಂದಸ್ಸು ಸುತಶಬ್ದಮುರು । ತರ ರಸಾಲಂಕಾರಮತಿಶಯಾರ್ಥಂಗಳಿಂ । ವಿರಚಿಸಿದ ಕಾವ್ಯಂ' ಎಂದು ಕಾವ್ಯರಚನೆಯ ಕ್ರಮವನ್ನು ತಿಳಿಸಿದ್ದಾನೆ. ಇಂಥ ಕಾವ್ಯವನ್ನು ಹಳೆಯ ಕಾವ್ಯಾಭ್ಯಾಸ ರೀತಿಯಲ್ಲೇ ಅರ್ಥಮಾಡಬೇಕು. ಕಾವ್ಯದ ಸರಳ ಗದ್ಯಾನುವಾದ ಈ ಉದ್ದೇಶಕ್ಕೆ ಸಹಕಾರಿಯಾಗಬಹುದು. ಪರಿಷತ್ತಿನ ಈ ಪ್ರಕಟಣೆಯ ಪ್ರಯತ್ನ ಈ ದೃಷ್ಟಿಯಿಂದ ಸಾರ್ಥಕವಾಗಬಹುದು.

ಇಂಥ ಬೃಹದ್ ಗ್ರಂಥವನ್ನು ಶ್ರೀ ಎಂ. ಚಂದ್ರಶೇಖರ್ ಅವರು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರಾದ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮ ಅವರು ಪರಿಶೀಲಿಸಿ ಕೊಟ್ಟಿದ್ದಾರೆ. ಅನುವಾದಕರು ಆಚಾರ್ಯ ಪಾಠಶಾಲೆಯಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾರೆ. ಹಳಗನ್ನಡ ನಡುಗನ್ನಡ ಕಾವ್ಯಗಳನ್ನು ಅಭ್ಯಾಸಮಾಡಿ ಪಾಠ ಹೇಳಿ ಅನುಭವ ಗಳಿಸಿದ್ದಾರೆ. ಈ ಕಾವ್ಯವನ್ನು ವಿಶಿಷ್ಟವಾಗಿ ಅಭ್ಯಾಸಮಾಡಿ ತಮ್ಮ ಪಾಂಡಿತ್ಯವನ್ನು ರೂಢಿಸಿಕೊಂಡಿದ್ದಾರೆ.

ಈ ಕಾವ್ಯದಲ್ಲಿ ಪರಂಪರೆಯ ಪ್ರಕಾರ ಅಷ್ಟಾದಶ ವರ್ಣನೆಗಳು ಬಂದರೂ ಅಲ್ಲಲ್ಲಿ ಶೃಂಗಾರಾನ್ವಿತ ಸನ್ನಿವೇಶಗಳಲ್ಲಿ ಕವಿಕಾಲದ ಸಮಾಜದ ಯಥಾರ್ಥ ಚಿತ್ರಣವೂ ದೊರೆಯುವುದೆಂದು ಹೇಳಬಹುದು. ಯಾವುದಕ್ಕೂ ಅಭ್ಯಾಸಪೂರ್ಣ ವಿಂಗಡಣೆ ಅವಶ್ಯವೆಂದು ಬೇರೆ ಹೇಳಬೇಕಿಲ್ಲ. ಸಮಕಾಲೀನ ಸಮಾಜದ ಚಿತ್ರಣದ ಇಂತಹ ಅಂಶಗಳನ್ನು ಅಭ್ಯಸಿಸಿ ಇನ್ನೂ ಒಂದೆಡೆಗೆ ಸಂಗ್ರಹಿಸಬೇಕಾಗಿದೆ.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅದನ್ನು ಪರಿಶೀಲಿಸಿಕೊಟ್ಟ ವಿದ್ವಾನ್ ಶ್ರೀ ರಂಗನಾಥಶರ್ಮಾ ಅವರಿಗೂ ನಮ್ಮ ವಂದನೆಗಳು.

ಕನ್ನಡಿಗರು ಇದರ ಉಪಯೋಗವನ್ನು ಪಡೆಯಲಿ ಎಂದು ಬಯಸುತ್ತೇನೆ.

ಬೆಂಗಳೂರು
21-7-79

ವಿ. ಕೃ. ಗೋಕಾಕ್
ಪ್ರಧಾನ ಸಂಪಾದಕರು

CC-0. Jangamwadi Math Collection. Digitized by eGangotri

# ಬಿನ್ನಹ

ಹಳಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದಕ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಬೆಂಗಳೂರಿನ ಅನುವಾದಕ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಿರಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿದ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಡಲು ಒಪ್ಪಿದರು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು—ಎಂದು ನಿಶ್ಚಯಿಸಿಕೊಳ್ಳಲಾಯಿತು. ಅನುವಾದಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದುವು.

ಹೀಗೆ ಹಂತಹಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅವನ್ನು ಪರಿಶೀಲಿಸಿ ಯಥಾಮತಿಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು.

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರಂ) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪ್ರತಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯಸಾಧ್ಯವಲ್ಲ ; ಅಪೇಕ್ಷಣೀಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆನೋಡುವುದು ಕಠಿಣವೇ. ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

CC-0. Jangamwadi Math Collection. Digitized by eGangotri

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು, ಯಶಸ್ವಿಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನೂ ಅಭಿನಂದಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನ ದಿಂದ ಪ್ರೋತ್ಸಾಹಿಸಿದ್ದಾರೆ. ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆ ಗಳನ್ನು ಅರ್ಪಿಸುತ್ತೇನೆ. ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರ ವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಎನ್. ರಂಗನಾಥಶರ್ಮಾ
ಅಧ್ಯಕ್ಷ
ಬೆಂಗಳೂರು ಅನುವಾದಕ ಮಂಡಲಿ
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
1-8-79

CC-0. Jangamwadi Math Collection. Digitized by eGangotri

# ಪ್ರ ಸ್ತಾ ವ ನೆ

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ಗ್ರಂಥ ಪ್ರಕಟಣೆ ಒಂದು ಪ್ರಮುಖವಾದ ಚಟುವಟಿಕೆ. ಪ್ರಾರಂಭದಲ್ಲಿ ಪರಿಷತ್ತು ತನ್ನ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ಕೆಲವೇ ಪುಸ್ತಕಗಳನ್ನು ಪ್ರಕಟಿಸಿತು. ಆದರೆ ಆ ಪುಸ್ತಕಗಳು ಅತ್ಯಂತ ಅಮೂಲ್ಯದವೂ ಅಪೂರ್ವದವೂ ಅತ್ಯುಪಯುಕ್ತದವೂ ಆಗಿವೆ. 1969ರಿಂದ ಈಚೆಗೆ ಪರಿಷತ್ತು ತನ್ನ ಚಟುವಟಿಕೆಗಳನ್ನು ಯೋಜನಾಬದ್ಧವಾಗಿ ರೂಪಿಸಿಕೊಂಡು ತ್ರೈವಾರ್ಷಿಕ ಯೋಜನೆಯಲ್ಲಿ 100 ಪುಸ್ತಕಗಳನ್ನೂ ಪಂಚವಾರ್ಷಿಕ ಯೋಜನೆಯಲ್ಲಿ 150 ಪುಸ್ತಕಗಳನ್ನೂ ಹೊರತರಲು ಆಲೋಚಿಸಿತು. ಅದರಂತೆ ತ್ರೈವಾರ್ಷಿಕ ಯೋಜನೆಯ 100 ಪುಸ್ತಕಗಳೂ, ಪಂಚವಾರ್ಷಿಕ ಯೋಜನೆಯ 140 ಪುಸ್ತಕಗಳೂ ಈಗಾಗಲೆ ಪ್ರಕಟವಾಗಿವೆ. ಉಳಿದವು ಪ್ರಕಟಣೆಯ ಬೇರೆ ಬೇರೆ ಹಂತದಲ್ಲಿವೆ.

ಪರಿಷತ್ತು ಈಗ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಕ್ರಮಗಳನ್ನು ಆರಂಭಿಸಿದೆ. ಈ ಯೋಜನೆಯಲ್ಲೂ ಪುಸ್ತಕ ಪ್ರಕಟಣೆಯ ಚಟುವಟಿಕೆಯನ್ನೇ ಪ್ರಧಾನ ಕಾರ್ಯವನ್ನಾಗಿ ರೂಪಿಸಿಕೊಂಡಿದೆ. ಆದರೆ ಕಾಲವನ್ನು ಅನುಸರಿಸಿ ಆಯಾ ಕಾಲದ ಕನ್ನಡ ಸಾಹಿತ್ಯದ ಎಲ್ಲಾ ಆಯಾಮಗಳನ್ನೂ ಸಾಹಿತ್ಯಧೋರಣೆಯನ್ನೂ ಗಮನದಲ್ಲಿಟ್ಟು ಕೊಂಡು ಪ್ರಕಟಣೆಗೆ ಪುಸ್ತಕಗಳನ್ನು ಆಯ್ದುಕೊಳ್ಳುತ್ತಿದೆ. ಅದೆಂದರೆ ಪರಿಷತ್ತು ಪ್ರಕಟಿಸುವ ಗ್ರಂಥಗಳನ್ನೂ ಒಂದು ಗ್ರಂಥ ಪ್ರಕಟಣಾ ಸಲಹಾಸಮಿತಿ ಪರಿಶೀಲಿಸಿ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸುವಾಗ ಪುಸ್ತಕಗಳ ವಿಷಯವನ್ನು ಕುರಿತು ಕೆಲವೊಮ್ಮೆ ಆಯಾ ವಿಷಯದಲ್ಲಿ ತಜ್ಞರಾದವರ ಅಭಿಪ್ರಾಯವನ್ನು ಪಡೆಯುತ್ತದೆ.

24-7-78 ರಿಂದ ಹೊಸ ಪದಾಧಿಕಾರಿಗಳು ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಹೊಸ ದೃಷ್ಟಿಯಿಂದ ಗ್ರಂಥಪ್ರಕಟಣ ಸಲಹಾಸಮಿತಿಯನ್ನು ರಚಿಸಿದೆ. ಈ ಸಮಿತಿಯ ಸಲಹೆ ಸಹಕಾರಗಳಿಂದ ಇಂದಿನ ಪುಸ್ತಕಗಳು ಹೊರಬರುತ್ತಿವೆ. ಈ ಪುಸ್ತಕಗಳಲ್ಲಿ ಅಚ್ಚಾಗದ ಪ್ರಾಚೀನ ಗ್ರಂಥಗಳು, ಅವಶ್ಯಕವಾದ ಪ್ರಾಚೀನ ಗ್ರಂಥಗಳ ಪುನರ್ಮುದ್ರಣ, ಕವಿಕಾವ್ಯ ಪ್ರಶಸ್ತಿ ಗ್ರಂಥಗಳು, ಭಾಷಾಂತರ ಕೃತಿಗಳು, ಜನಸಾಮಾನ್ಯರಿಗಾಗಿ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ, ಜನಪದಸಾಹಿತ್ಯ, ನಿಘಂಟುಗಳು ಇರುತ್ತವೆ. ಈ ಸಮಿತಿಯ ಪ್ರಧಾನ ಸಂಪಾದಕತ್ವದ ಸ್ಥಾನವನ್ನು ಡಾ. ವಿ. ಕೃ. ಗೋಕಾಕರು ವಹಿಸಿಕೊಂಡಿದ್ದಾರೆ. ಆ ಸಮಿತಿಯಲ್ಲಿ ಈ ಕೆಳಕಂಡ ವಿದ್ವಾಂಸರು ಸಾಹಿತಿಗಳು ಸದಸ್ಯರಾಗಿದ್ದಾರೆ.

CC-0. Jangamwadi Math Collection. Digitized by eGangotri

| | |
|---|---|
| ಡಾ. ದಿ. ಜವರೇಗೌಡರು | ಡಾ. ಜಿ. ಎಸ್. ಶಿವರುದ್ರಪ್ಪ |
| ಡಾ. ಬಿ. ಎಸ್. ಕುಲಕರ್ಣಿ | ಶ್ರೀ ಜಿ. ಎಚ್. ನಾಯಕ |
| ಶ್ರೀ ವಿ. ಸೀ. ಹಿತ್ತಲಮನಿ | ಶ್ರೀ ವೈ. ಎನ್. ಕೃಷ್ಣಮೂರ್ತಿ |
| ಶ್ರೀ ಜಿ. ನಾರಾಯಣ | ರಾಜ್ಯ ಗ್ರಂಥಾಲಯಾಧಿಕಾರಿಗಳು |
| ರಾಜ್ಯ ಪಠ್ಯಪುಸ್ತಕ ಸಮಿತಿಯ ನಿರ್ದೇಶಕರು | |

ಅಲ್ಲದೆ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಡಿ. ಲಿಂಗಯ್ಯ, ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರು ಅಧಿಕಾರ ನಿಮಿತ್ತ ಸದಸ್ಯರಾಗಿರುತ್ತಾರೆ.

ಕನ್ನಡ ಜನತೆಗೆ ಒಳ್ಳೆಯ ಸಾಹಿತ್ಯವನ್ನು ಸುಲಭ ಬೆಲೆಗೆ ಒದಗಿಸಬೇಕು, ಕಾಲ ಕಾಲಕ್ಕೆ ಜನತೆಯ ಆಶೋತ್ತರಗಳನ್ನು ಪೂರೈಸುವಂತೆ ವೈಚಾರಿಕ, ವೈಜ್ಞಾನಿಕ ಸಾಹಿತ್ಯ ವನ್ನು ನೀಡಬೇಕು, ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಶ್ರೇಷ್ಠ ಕೊಡುಗೆಗಳನ್ನು ಪರಿಷತ್ತು ಜನತೆಗೆ ನೀಡಬೇಕು ಎಂಬ ಪರಿಷತ್ತಿನ ಧ್ಯೇಯ ಧೋರಣೆಗಳನ್ನು ಗಮನಿಸಿ ಕರ್ನಾಟಕ ರಾಜ್ಯ ಸರ್ಕಾರದವರು ಉದಾರ ಸಹಾಯ ನೀಡಿದ್ದಾರೆ ಮತ್ತು ನೀಡುತ್ತಿದ್ದಾರೆ.

ಪರಿಷತ್ತು ಈಗ ತನ್ನ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಗಳನ್ನು ಆರಂಭಿಸಿದೆ. ಆ ಅವಧಿಯಲ್ಲಿ ಮೇಲೆ ತಿಳಿಸಿದಂತೆ ಅನೇಕ ಹೊಸ ಪುಸ್ತಕಗಳನ್ನು ಹೊಸದಾಗಿ ಹಾಕಿಕೊಂಡ ಧ್ಯೇಯ ಧೋರಣೆಗಳಿಗನುಸಾರವಾಗಿ ಹೊರತರಲು ಯತ್ನಿ ಸುತ್ತದೆ ಎಂಬ ನಂಬಿಕೆ ನನಗಿದೆ. ಈ ಕಾರ್ಯದಲ್ಲಿ ಗ್ರಂಥಪ್ರಕಟಣ ಸಲಹಾಸಮಿತಿ ಸದಸ್ಯರು, ಲೇಖಕರು, ಸಾಹಿತ್ಯ ವಿದ್ವಾಂಸರು ಮತ್ತು ಸರ್ಕಾರ ಸಹಕಾರ ನೀಡುತ್ತಿದ್ದಾರೆ. ಅವರಿಗೆಲ್ಲ ಪರಿಷತ್ತು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪರಿಷತ್ತಿನ ಪ್ರಕಟಣೆಗಳು ಕನ್ನಡಿಗರಿಗೆ ಲಾಭದಾಯಕವಾಗಿರುವುದರಲ್ಲಿ ಸಂದೇಹ ವಿಲ್ಲ. ಈ ಲಾಭವನ್ನು ಅವರು ಪಡೆದು ನಾಡನುಡಿಯ ಸೇವೆಯಲ್ಲಿ ಪಾಲುದಾರರಾಗ ಬೇಕೆಂದು ಪ್ರಾರ್ಥಿಸುತ್ತೇನೆ.

**ಹಂಪ. ನಾಗರಾಜಯ್ಯ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

CC-0. Jangamwadi Math Collection. Digitized by eGangotri

# ಉಪೋದ್ಘಾತ

**ಕವಿ ಕಾವ್ಯ ವಿಚಾರ :—** ಈ ಕಾವ್ಯದ ಕರ್ತೃ 'ಕರ್ನಾಟಾದಿ ಅನೇಕ ಭಾಷೆಗಳಲ್ಲಿ ಪಂಡಿತನೂ, ವರಕವಿಗಳಲ್ಲಿ ಶ್ರೇಷ್ಠನೂ, ಶಿವಚಾರಸಂಪನ್ನನೂ, ಔದಾರ್ಯಾದಿ ಗುಣ ಗಳಿಂದ ಕೂಡಿದವನೂ' ಆದ ಪಂಡಿತಾರಾಧ್ಯ. ಇವನ ಕಾಲ ಎಂ. ಆರ್. ಶ್ರೀ. ಮತ್ತು ಸಿ. ಸಿ. ಬಸವನಾಳರು ಹೇಳುವಂತೆ 16ನೇ ಶ. ದ ಉತ್ತರಾರ್ಧ. ಈತನ ಮನೆದೈವ ಹರಿಹರ ರಾಘವಾಂಕರ ಇಷ್ಟದೈವವಾದ ಪಂಪಾವಿರೂಪಾಕ್ಷ (ಕಾವ್ಯದ ಪ್ರಾರ್ಥನಾ ಪದ್ಯಗಳಲ್ಲಿ ಇದನ್ನು ಗಮನಿಸಬಹುದು.) ಇವನೊಬ್ಬ ಹಿರಿಯ ಮಠದ ಪಟ್ಟಾಧಿಕಾರಿ. ಇವನ ಕಾಲದಲ್ಲಿ ವಿಜಯನಗರದ ಅರಸರ ಕೊಟ್ಟಕೊನೆಯ ವಂಶವಾದ ಅರವೀಡು ವಂಶದ ರಾಜರು ರಾಜ್ಯವಾಳುತ್ತಿದ್ದರು. ಈ ದಿಸೆಯಲ್ಲಿ ವಿರೂಪಾಕ್ಷ ಪಂಡಿತ, ಅರವೀಡು ವಂಶ ವಿಜಯನಗರದ ಕೊನೆಗಾಲ ಇವುಗಳ ಬಗೆಗೆ ಸಾಕಷ್ಟು ಸಂಶೋಧನೆ ನಡೆಯದಿರು ವುದು ಶೋಚನೀಯ ಸಂಗತಿ.

ಇವನು 'ತಾನು ಗ್ರಂಥವನ್ನು ತಾರಣ ಸಂವತ್ಸರದ ಶ್ರಾವಣ ಬಹುಳ ದಶಮಿಯ ಗುರುವಾರದಂದು ಮುಗಿಸಿದೆ'ನೆಂದು ಹೇಳಿಕೊಂಡಿದ್ದಾನೆ. ಆದರೆ ಇಲ್ಲಿ ಲೆಕ್ಕಾಚಾರ ತುಸು ತಪ್ಪಾಗಿದೆ. ಲೆಕ್ಕ ಹಾಕಿ ನೋಡಿದರೆ ಅದು 1506 ಎಂದು ನಿರ್ಧರಿತವಾಗುತ್ತದೆ. ಇಲ್ಲಿ ಶ್ರೀ ಗೋವಿಂದಪೈ ಅವರ ಅಭಿಪ್ರಾಯವನ್ನು ನಾವು ಅನುಮಾನಿಸಬೇಕಾಗುತ್ತದೆ. ಇತಿಹಾಸ ಪ್ರಸಿದ್ಧವಾದ-ವಿಜಯನಗರದಲ್ಲಿ ನಡೆದ ತಾಳಿಕೋಟೆ ಯುದ್ಧವನ್ನು ವಿರೂ ಪಾಕ್ಷ ಪಂಡಿತನು ಸಾಕ್ಷಾತ್ತಾಗಿ ಕಂಡಿರಬಹುದು ಎಂದು ಅನೇಕ ಪಂಡಿತರು ನಂಬುತ್ತಾರೆ.

ಇವನು ಹಂಪೆಯ ಹಿರಿಯ ಮಠವೊಂದಕ್ಕೆ ಪಟ್ಟಾಧಿಕಾರಿಯಾಗಿದ್ದನೆಂದು ಗೊತ್ತಾ ಗುತ್ತದೆ. ಆದರೆ ಎಲ್ಲ ಪಟ್ಟಾಧಿಕಾರಿಗಳ ಮಠಗಳು 'ಹಿರಿಯ ಮಠಗಳೆ'. ಇವನು ಅಭಿಮಾನಪೂರ್ವಕವಾಗಿ ತನ್ನ ಮಠ ಯಾವುದೆಂದು ಹೇಳದೆ ಹಿರಿಯ ಮಠವೆಂದು ಹೇಳಿಕೊಂಡಿದ್ದಾನೆ. ಇಲ್ಲಿ ಅವನ ಮಠದ ಅಭಿಮಾನವನ್ನು ಗುರುತಿಸಬಹುದು. ಕಾವ್ಯದಲ್ಲೆ ಲ್ಲಿಯೂ ತನ್ನ ತಂದೆ-ತಾಯಿಗಳೇ ಮುಂತಾದ ಲೌಕಿಕ ವಿಚಾರಗಳ ಬಗ್ಗೆ ಮೌನವಾಗಿರು ವುದರಿಂದ ಇವನೊಬ್ಬ ವೀರಶೈವ ವಿರಕ್ತ ಎನ್ನಬಹುದು. ಇವನಿಗೆ ಗುರುಪರಂಪರೆಯೇ ಮುಖ್ಯ. ಗುರುಪರಂಪರೆಯನ್ನು ಗೌರವವಾಗಿ ಸ್ಮರಿಸುತ್ತಾನೆ. ತನ್ನ ಗುರುವಾದ ಸಿದ್ಧವೀರೇಶನನ್ನು ಸ್ಮರಿಸಿ ಹಾಡಿ ಹೊಗಳಿದ್ದಾನೆ. ಅಲ್ಲದೆ ಮುಂದೆ ಮಳೆಯನ್ನು ತರಿಸಿ ಪವಾಡ ಮಾಡಿದ-ಮಳೆಯ ಮಲ್ಲೇಶನೆಂಬ ಗುರುವನ್ನು ತನ್ನ ಸಂಪ್ರದಾಯದ ಗುರುವೆಂದು ಹೇಳಿದ್ದಾನೆ. ಇಲ್ಲಿ ವೀರಶೈವ ಧರ್ಮದಂತೆ 'ಸಂಪ್ರದಾಯ'ಗಳು ಎಂದರೆ ಏನೆಂಬುದನ್ನು ಆಲೋಚಿಸಬೇಕು. ಒಂದೊಂದು ಪೀಠಕ್ಕೂ ಅವರವೇ ಆದ 'ಸಂಪ್ರ

CC-0. Jangamwadi Math Collection. Digitized by eGangotri

ದಾಯ'ಗಳಿರುತ್ತವೆ. ಆ ಸಂಪ್ರದಾಯಗಳನ್ನು ಗಮನಿಸಿದ ತಕ್ಷಣ ಆಯಾ ಪೀಠಗಳ ಹೆಚ್ಚಿನ ತಿಳುವಳಿಕೆ ನಮಗಾಗುತ್ತದೆ. ಇಲ್ಲಿ ಮಳೆಯ ಮಲ್ಲೇಶನ ಸಂಪ್ರದಾಯಕ್ಕೆ ಸೇರಿದ ವಿರೂಪಾಕ್ಷ ಪಂಡಿತನ ಬಗ್ಗೆ ಸಾಕಷ್ಟು ಕೆಲಸ ನಡೆದಿಲ್ಲವೆಂದೇ ವಿಷಾದದಿಂದ ಒಪ್ಪಿಕೊಳ್ಳಬೇಕು.

ತನ್ನ ಕಾವ್ಯದಲ್ಲಿ ಕವಿ ಹಿಂದಿನ ಕವಿಗಳನ್ನು ಸ್ಮರಿಸುವ ಸಂದರ್ಭದಲ್ಲಿ ಇವನ ಕಾಲಕ್ಕಾಗಲೇ ಅನೇಕರೀತಿಯಲ್ಲಿ ಕ್ರಾಂತಿಯನ್ನು ಮಾಡಿ ಹೊಸ ಸಂಪ್ರದಾಯವನ್ನೇ ಸೃಷ್ಟಿ ಮಾಡಿದ ಹರಿಹರ-ರಾಘವಾಂಕರನ್ನು ಧಾರಾಳವಾಗಿ ಹೊಗಳಿದ್ದಾನೆ. ಶಿವನನ್ನೇ-ಶಿವಭಕ್ತರನ್ನೇ ಕಾವ್ಯವಸ್ತುವನ್ನಾಗಿ ಮಾಡಿಕೊಂಡು ಹೊಗಳಿದ ಹರಿಹರನ ಧಾಟಿಯಲ್ಲಿ ಇವನೂ ತನ್ನ ಕಾವ್ಯದ ನಾಯಕನನ್ನಾಗಿ ಮಾಡಿ ಕೊಂಡಿರುವುದು ಪರಮ ಶಿವಭಕ್ತನಾದ ಚೆನ್ನಬಸವೇಶ್ವರನನ್ನು. ಜನಗಳು ತನ್ನ ಬಳಿ ಬಂದು ಶಿವಭಕ್ತನಾದ ಚೆನ್ನಬಸವನ ಪುರಾಣವನ್ನು ಹೇಳಲು ನೀನಲ್ಲದೆ ಅನ್ಯರಿಂದ ಸಾಧ್ಯವಿಲ್ಲವೆಂದು ಕೇಳಿಕೊಂಡದ್ದರಿಂದ ಈ ಕಾವ್ಯವನ್ನು ರಚಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ.

'ಗುಡಿಯೇ ಮಾತನಾಡಿದಂತೆ' ಶ್ರೀ ಚೆನ್ನಬಸವನ ಹೇಳಿಕೆಗೆ ಅನುಸಾರವಾಗಿ ತಾನು ಈ ಕೃತಿಯನ್ನು ಹೇಳಿದ್ದಾನೆ. ಮನುಷ್ಯಧರ್ಮದಂತೆ ಹಸಿವು, ಆಲಸ್ಯ, ನಿದ್ರೆಗಳಿಂದ ದುರ್ಬಲನಾದ ತಾನು ತಪ್ಪುಮಾಡುವುದು ಸಹಜ. ಆ ತಪ್ಪುಗಳನ್ನು ತಿದ್ದಿ ಕಾವ್ಯವನ್ನು ಸ್ವೀಕರಿಸಬೇಕು' ಎಂದು ವಿನಯಪ್ರದರ್ಶನ ಮಾಡಿದ್ದಾನೆ. ವಿರೂಪಾಕ್ಷ ಪಂಡಿತನ ಕಾಲದಲ್ಲೇ ಕಾವ್ಯಸಂಪ್ರದಾಯಗಳು ಉಳಿದುಬಂದಿದ್ದರಿಂದ ಇವನು ಪರಕವಿ ನಿಂದೆಯನ್ನು ಕಾವ್ಯದಲ್ಲಿ ಮಾಡಿದ್ದಾನೆ. ಇವನ ಹೆಸರಿಗೆ ಇನ್ನಾವ ಕಾವ್ಯಗಳೂ ಆರೋಪಿಸಲ್ಪಟ್ಟಿಲ್ಲವಾದ್ದರಿಂದ, ತಾನೂ ಹೇಳಿಕೊಂಡಿಲ್ಲವಾದ್ದರಿಂದ ಚೆನ್ನಬಸವ ಪುರಾಣವೊಂದೇ ಇವನ ಕೃತಿ ಎಂದು ಹೇಳಬಹುದು. ಸಿದ್ಧನಂಜೇಶನು ಬರೆದ 'ಗುರುರಾಜ ಚಾರಿತ್ರ' ದಲ್ಲಿ ಅನೇಕ ಅಂಶಗಳು ವಿರೂಪಾಕ್ಷಪಂಡಿತನ ಬಗ್ಗೆ ದೊರೆಯುತ್ತವೆ. ಇವನು ತನ್ನ ಕಾವ್ಯದಲ್ಲಿ ಬಾಣ, ಮಯೂರ, ಭವಭೂತಿ, ಕಾಳಿದಾಸ, ಮಲುಹಣ, ರಾಘವಾಂಕ, ಹರಿಹರ, ಹಲಾಯುಧ, ಉದ್ಭಟ, ಪಂಡಿತ, ಭೀಮ, ಮಗ್ಗೆಯ ಮಾಯಿದೇವ, ಚಾಮರಸ, ಶಂಕರ, ಕೆರೆಯ ಪದ್ಮರಸ ಮೊದಲಾದವರನ್ನು ಸ್ಮರಿಸಿ ತನ್ನ ಕಾವ್ಯವನ್ನು ಆರಂಭಿಸುತ್ತಾನೆ. ತನ್ನ ಕಾವ್ಯದಲ್ಲಿ ಕವಿ ಅನೇಕ ಐತಿಹಾಸಿಕ ಅಂಶಗಳನ್ನು ಹೇಳುತ್ತಾನೆ. ವೀರಶೈವ ಕ್ರಾಂತಿ ನಡೆದ ಅನಂತರ ಬಾಳೆಯ ಹೊನ್ನೂರು ಮಠ, ಗುಮ್ಮಳಾಪುರದ ಮಠ ಸ್ಥಾಪನೆಯಾದದ್ದರ ವಿಷಯ ಕಾವ್ಯದ ಕೊನೆಯಲ್ಲಿ ನಿರೂಪಿತವಾಗಿದೆ. ಇವೆಲ್ಲವೂ ಮಠಗಳ ಇತಿಹಾಸ ದೃಷ್ಟಿಯಿಂದ ಬಹಳ ಮುಖ್ಯವಲ್ಲವೆ? ಈ ದೃಷ್ಟಿಯ ಸಂಶೋಧನೆ ಇನ್ನೂ ನಡೆದಿಲ್ಲವೆಂಬುದನ್ನು ವಿಷಾದದಿಂದ ಸ್ಮರಿಸಬೇಕಾಗಿದೆ.

ಕೀರ್ತನೆಗಳ ಮೂಲಕ ಮತಪ್ರಚಾರ ಮಾಡುತ್ತಿದ್ದ ಕಾಲದಲ್ಲಿ ಬೆಳವಣಿಗೆಗೊಂಡ ರೀತಿ ಕೃತಿರಚನೆಗಳಿಂದ ಧರ್ಮಪ್ರಚಾರ ಮಾಡುವುದಕ್ಕೆ ಕಾರಣವಾಯಿತು. ಈ ಕಾಲ

CC-0. Jangamwadi Math Collection. Digitized by eGangotri

ದಲ್ಲಿಯೇ ಕವಿ ಚೆನ್ನಬಸವೇಶ್ವರನ ಚರಿತ್ರೆಯನ್ನು ಪುರಾಣವಾಗಿ ಬರೆದನು. ಅಂದಿನ ಕಾಲದಲ್ಲಿ ಪುರಾಣ ಮಾಧ್ಯಮವೇ ಮತಗಳ ಪ್ರಚಾರಕ್ಕೆ ಉತ್ತಮ ಸಾಧನವೆಂದು ಅರಿತ ಕವಿ ಈ ಪುರಾಣವನ್ನು ಹಾಡಲು ಯೋಗ್ಯವಾದ ಷಟ್ಪದಿಗಳ ಮೂಲಕ ರಚಿಸಿದ. ಈತನಿಗೆ ಪುರಾಣಪ್ರಜ್ಞೆ ಸಂಪೂರ್ಣವಾಗಿತ್ತು. ವೀರಶೈವ ಪುರಾಣಗಳು ಬೆಳೆದುಬಂದ ದಾರಿಯನ್ನು ಹೃದ್ಗತ ಮಾಡಿಕೊಂಡ ಕವಿ ಸಂಪ್ರದಾಯದ ಚೌಕಟ್ಟಿನಲ್ಲಿ ಯಶಸ್ವಿಯಾಗಿ ತನ್ನ ಕಾರ್ಯವನ್ನು ನಿರ್ವಹಿಸಿದ್ದಾನೆ. ಇದರಿಂದ ಈ ಪುರಾಣ 'ಚೆನ್ನಬಸವ ಪುರಾಣ' ವಾಗದೆ ವೀರಶೈವ ಧರ್ಮದ 'ಕೈಪಿಡಿ'ಯಾಗಿದೆಯೆಂದೇ ಹೇಳಬೇಕು. ಅನೇಕ ಸಂದರ್ಭ ಗಳಲ್ಲಿ ಕಾವ್ಯನಾಯಕ ಚೆನ್ನಬಸವಣ್ಣ ಗೌಣವಾಗಿ ಬಿಡುತ್ತಾನೆ. ವೀರಶೈವ ಧರ್ಮ ನಿರೂಪಣೆಯ ರೀತಿ ಪಲಗೆಯಾಚಾರ್ಯನ ವೀರಶೈವಾಮೃತವನ್ನು ನೆನಪಿಗೆ ತರುತ್ತದೆ. ಎಂ. ಆರ್. ಶ್ರೀ ಯವರ ಅಭಿಪ್ರಾಯದಂತೆ ಇದೊಂದು ಸಂಪೂರ್ಣ ಮತಗ್ರಂಥವಾಗಿ ಪರಿಣಮಿಸಿದೆ. ಚಾಮರಸ ತನ್ನ ನಾಯಕ ಅಲ್ಲಮನ ಚಿತ್ರಣದಲ್ಲಿ ತೋರಿದ ತಲ್ಲೀನತೆ ವಿರೂಪಾಕ್ಷ ಪಂಡಿತನಲ್ಲಿ ಕಂಡುಬರುವುದಿಲ್ಲವಾಗಿ ಕೇವಲ ಪಾಂಡಿತ್ಯಪ್ರೌಢಿಮೆ ಮತ್ತು ಮತಾಸಕ್ತಿಯೇ ಅವನ ಕೃತಿಯಲ್ಲಿ ಎದ್ದುಕಾಣುವ ಅಂಶವಾಗಿದೆ.

'ಚೆನ್ನಬಸವ ಪುರಾಣ'ದಲ್ಲಿ ಒಟ್ಟು ಅರವತ್ತ ಮೂರು ಸಂಧಿಗಳು ಬರುತ್ತವೆ. ಅವುಗಳಲ್ಲಿ ಚೆನ್ನಬಸವನ ಜೀವನ ಚರಿತ್ರೆ, ಸಿದ್ಧರಾಮನಿಗೆ ಅವನು ಮಾಡಿದ ಪಂಚ ವಿಂಶತಿ ಲೀಲೆಗಳ ಕಥನ (ಎಂ. ಆರ್. ಶ್ರೀ–ಹೇಳುವಂತೆ ಇಲ್ಲಿ ವೀರಶೈವೋಪದೇಶವನ್ನು ನಾವು ಸೇರಿಸಬಹುದು), ನೂತನ-ಪುರಾತನರ, ನೂರೊಂದು ವಿರಕ್ತರ, ಏಳುನೂರು ತೇರಸರ ಮತ್ತು ಇತರ ಶರಣರ ವೃತ್ತಾಂತಗಳು, ಕೆಲವು ಐತಿಹಾಸಿಕ ವಿಚಾರಗಳನ್ನು ಬೆರೆಸಿ ಹೇಳಿದ ಕಾಲಜ್ಞಾನ–ಹೀಗೆ ಅನೇಕ ವಿಷಯಗಳು ವೈವಿಧ್ಯಮಯವಾಗಿ ಹರಡಿಕೊಂಡಿವೆ.

ಕನ್ನಡ ಕಾವ್ಯದಲ್ಲಿ 'ಚೆನ್ನಬಸವ ಪುರಾಣ' ಬಹಳ ಜನಪ್ರಿಯವಾದ ಕಾವ್ಯವಾಗ ಬಹುದಿತ್ತು. ಈ ಕಾವ್ಯದ ಕಥಾನಾಯಕನಾದ ಚೆನ್ನಬಸವಣ್ಣ ಬಸವಣ್ಣನನ್ನು ಮೀರಿಸಿದ ಪವಾಡಪುರುಷನಾಗಲಿಲ್ಲವೆಂದು ಈ ಕಾವ್ಯಕ್ಕೆ ಸಿಕ್ಕಬೇಕಾದ ಪ್ರಾಶಸ್ತ್ಯ ಸಿಕ್ಕದಿರಬಹುದೊ ಏನೊ.

2906 ಪದ್ಯಗಳಿಂದ 63 ಸಂಧಿಗಳಿಂದ ಕೂಡಿದ ಈ ಬೃಹತ್ಕಾವ್ಯದಲ್ಲಿ ಪ್ರತಿಯೊಂದು ಸಂಧಿಯ ಪ್ರಾರಂಭದ ಮೊದಲನೆಯ ಪದ್ಯದಲ್ಲಿ ಯಮಕ, ಪ್ರಾಸ, ಅನುಪ್ರಾಸ, ಉಕ್ತಿ ಚಮತ್ಕಾರ, ಶ್ಲೇಷೆ ಮೊದಲಾದ ಪಾಂಡಿತ್ಯಪ್ರದರ್ಶನ ಗಳಲ್ಲಿಯೇ ಪಂಡಿತವರ್ಗದವರನ್ನು ಕವಿ ಆಕರ್ಷಿಸುತ್ತಾನೆ. ಇವನ ಕಾವ್ಯದಲ್ಲಿ ಗಮನಿಸಲೇ ಬೇಕಾದ ಇನ್ನೊಂದು ಅಂಶವೆಂದರೆ ಪ್ರತಿಯೊಂದು ಸಂಧಿಯ ಅಂತ್ಯಪದ್ಯವೂ ಮತ್ತು ಪ್ರತಿಯೊಂದು ಕಾಂಡಗಳ ಅಂತ್ಯಪದ್ಯವೂ ಒಂದೇ ರೀತಿಯಲ್ಲಿರುವುದು. ಈ ಕಾವ್ಯ ಸಂಪ್ರದಾಯಬದ್ಧವಾದ ಅಷ್ಟಾದಶ ವರ್ಣನೆಗಳಿಂದ ಕೂಡಿ ಮಹಾಕಾವ್ಯದ ಲಕ್ಷಣಗಳನ್ನೆಲ್ಲಾ ಒಳಗೊಂಡಿದೆ.

CC-0. Jangamwadi Math Collection. Digitized by eGangotri

ವಿರೂಪಾಕ್ಷ ಪಂಡಿತ ತನ್ನ ಕಾವ್ಯವಾದ 'ಚೆನ್ನಬಸವ ಪುರಾಣ'ದ ಮೂಲಕ ಶಿವನ ಲೀಲೆಗಳನ್ನು ವರ್ಣಿಸುತ್ತಾನೆ. ಜೊತೆಗೆ ಅನೇಕ ಶಿವಶರಣರ ವಿಚಾರಗಳನ್ನು ಹೇಳುತ್ತಾನೆ. ಕವಿ ಶಿವಲೀಲೆಗಳನ್ನು-ಶಿವಶರಣರ ವಿಚಾರಗಳನ್ನು ಹೇಳುವಾಗ ಭಕ್ತಿ, ಪಾಂಡಿತ್ಯಪೂರ್ಣ ಶ್ರದ್ಧೆ ಎದ್ದುತೋರುತ್ತದೆ. ಅವತಾರ ಲೀಲೆಗಳನ್ನು ವರ್ಣಿಸುವಾಗ ಕವಿಗೆ ಕಾಲದ ಗಣನೆಯಿಲ್ಲದೆ, ಕಥಾನಕದಲ್ಲಿ ತಾನೇ ಮುಳುಗಿಹೋಗುತ್ತಾನೆ. ಅನೇಕ ಶೈವರ ವೀರಶೈವರ ಶಿವರಶರಣರ ಕಥೆಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾನೆ. ಕಾರಣ ಅಷ್ಟುಹೊತ್ತಿಗೆ ಅವರೆಲ್ಲ ಪ್ರಮುಖರಾಗಿದ್ದಿರಬಹುದೆ ? ಕಾವ್ಯದ ಕೊನೆಯಲ್ಲಿ ಬರುವ ಘಟನೆಗಳನ್ನು ಗಮನಿಸಿದರೆ ಅಂದಿನ ಕಾಲದ ಐತಿಹಾಸಿಕ-ಸಾಮಾಜಿಕ ಚರಿತ್ರೆಯ ಮೇಲೆ ಬೆಳಕನ್ನು ಬೀರಬಹುದೆನಿಸುತ್ತದೆ.

ಪಿಂಡೋತ್ಪತ್ತಿ, ಕಾರಣ ಹಸುಗೆ ನಿರೂಪಣೆ, ದೀಕ್ಷಾ ವಿಧಾನ, ಲಿಂಗಾರ್ಚನೆ, ಷಟ್‌ಸ್ಥಲಗಳ ನಿರ್ಣಯ ಮುಂತಾದ ಅನೇಕ ಸಂಧಿಗಳಲ್ಲಿ ಬರುವ ವೀರಶೈವ ಧರ್ಮದ ಜಿಜ್ಞಾಸೆ ಹೊರನೋಟಕ್ಕೆ ಶುಷ್ಕವಾಗಿ ಕಂಡರೂ ಚಿರಂತನ ಆಧ್ಯಾತ್ಮಿಕ ದಾಹವನ್ನು ತೃಪ್ತಿಪಡಿಸುತ್ತದೆ. ಶಿವಶರಣರ ಧಾರ್ಮಿಕ ಕ್ರಾಂತಿಯ ಸಮಗ್ರ ಚಿತ್ರಣವನ್ನು ಪಡೆಯಲು ಈ ಕಾವ್ಯದಲ್ಲಿ ಉಲ್ಲಿಖಿತವಾಗಿರುವ ಶಿವಶರಣರ ಹೆಸರಿನ ಪಟ್ಟಿಯನ್ನು ಗಮನಿಸಿದರೆ ಸಾಕು. ಚೆನ್ನಬಸವ ಪುರಾಣದ ಕೊನೆಯ ಸಂಧಿಗಳು ಕನ್ನಡ ನಾಡಿನಲ್ಲಿ ನಡೆದುಹೋದ ಕ್ರಾಂತಿಯ ಸಾಮಾಜಿಕ-ಧಾರ್ಮಿಕ-ಆರ್ಥಿಕ-ಯುಗಮೌಲಿಕ-ಸಮಗ್ರ ಚಿತ್ರಣವನ್ನು ನಮಗೆ ಕೊಡುತ್ತದೆ.

ಅನೇಕಾನೇಕ ವೀರಶೈವ ಪುರಾಣಗಳಲ್ಲಿ ಕಂಡುಬಾರದ ಅವಧಾನ, ಸುಸಂಬದ್ಧತೆ, ಹಾಗೂ ಕ್ರಮಬದ್ಧ ನಿರೂಪಣೆ ವಿರೂಪಾಕ್ಷ ಪಂಡಿತನದು ಎನ್ನಬಹುದು. ಈ ಪುರಾಣದಲ್ಲಿ ಕೆಲವು ಕಡೆ ತತ್ವನಿರೂಪಣೆಯ ಸಂದರ್ಭಗಳಲ್ಲಿ ಕವಿಯ ಶೈಲಿ ನೇರ ಹಾಗೂ ಸರಳವಾಗಿದೆ. ವರ್ಣನಾಪ್ರಿಯತೆ ಅವನ ಕಾವ್ಯಗಳಲ್ಲಿ ಕಂಡುಬರುವ ಮತ್ತೊಂದು ಅಂಶ. ಯುದ್ಧವರ್ಣನೆಗಳು ಕಾವ್ಯದಲ್ಲಿ ಮೇಲಿಂದ ಮೇಲೆ ಪುನರಾವರ್ತನೆಗೊಂಡಿದ್ದರೂ ಬೇಸರ ಬಾರದಂತೆ ಕವಿ ವೈವಿಧ್ಯವನ್ನು ತೋರಿದ್ದಾನೆ. ಪ್ರಕೃತಿ ವರ್ಣನೆ, ಸ್ತ್ರೀವರ್ಣನೆ ಮೊದಲಾದ ಸಂದರ್ಭಗಳು ರಸಿಕರ ಮನಸ್ಸನ್ನು ಸೂರೆಗೊಳ್ಳುತ್ತವೆ.

ಚೆನ್ನಬಸವ ಪುರಾಣದ ಜನಪ್ರಿಯತೆಗೆ ಅನೇಕ ಭಾಷೆಗಳಲ್ಲಿ ಅದು ಭಾಷಾಂತರಿಸಲ್ಪಟ್ಟಿರುವುದೇ ಸಾಕ್ಷಿ. ಕನ್ನಡ ಗ್ರಂಥವೊಂದು ಈ ರೀತಿ ಅನೇಕ ಭಾಷೆಗಳಲ್ಲಿ ಭಾಷಾಂತರವಾಗಿರುವುದು ಕನ್ನಡಿಗರು ಹೆಮ್ಮೆಪಡುವ ವಿಷಯವಾಗಿದೆ.

ಎಂ. ಚಂದ್ರಶೇಖರ್

CC-0. Jangamwadi Math Collection. Digitized by eGangotri

# ವಿಷಯ ಸೂಚಿ



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

# ಆಧಾರ ಗ್ರಂಥಗಳು


1. ಚೆನ್ನಬಸವ ಪುರಾಣ—ಶಿ. ಶಿ. ಬಸವನಾಳ.
2. ಜಯಕರ್ನಾಟಕ.
3. ಪ್ರಭುಲಿಂಗ ಲೀಲೆ.
4. ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ.
5. ಚೆನ್ನಬಸವ ಪುರಾಣ ಸಂಗ್ರಹ—ಎಂ. ಆರ್. ಶ್ರೀ.
6. ಶಿವತತ್ವ ಚಿಂತಾಮಣಿ—ಎಸ್. ಬಸಪ್ಪ.
7. ಚನ್ನಬಸವಣ್ಣನ ಷಟ್‌ಸ್ಥಲ ಮಹಿಮೆ—ಆರ್. ಸಿ. ಹಿರೇಮಠ.
8. ಹರಿಹರ—ಡಿ. ಎಲ್. ಎನ್.
9. ರಾಘವಾಂಕ— ರಾಗೌ.
10. ಕರ್ನಾಟಕ ಕವಿ ಚರಿತೆ—ಆರ್, ನರಸಿಂಹಾಚಾರ್.
11. ಗಿರಿಜಾಕಲ್ಯಾಣ—ಎಸ್. ಸಿ. ನಂದೀ ಮಠ.
12. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ—ತ. ಸು. ಶಾಮರಾವ್, ಮ.ರಾಜೇಶ್ವರಯ್ಯ
13. ವೀರಶೈವ ಸಾಹಿತ್ಯ ಮತ್ತು ಇತಿಹಾಸ—ಶಿವಮೂರ್ತಿ ಶಾಸ್ತ್ರಿ.
14. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ—ಜಿ. ಎಸ್. ಶಿವರುದ್ರಪ್ಪ.


CC-0. Jangamwadi Math Collection. Digitized by eGangotri

# ಪೀಠಿಕಾ ಸಂಧಿ

ಸೂಚನೆ : ಪರಮಗುರು ಚೆನ್ನಬಸವಂ ಸಿದ್ಧರಾಮಂಗೆ
ಪರಮಶಿವತತ್ತ್ವಮಂ ತಿಳಿಪಿ ದೀಕ್ಷೆಯನಿತ್ತ
ಪರಮ ಸತ್ಕಥೆಯಿದಂ ಸದ್ಭಕ್ತರೊಲವಿನಿಂ ಕೇಳ್ದು ಕೃತಕೃತ್ಯರಹುದು

ಶ್ರೀ ಪರಮ ಸದ್ಗುರು ಪರಂ ಪರಂಜ್ಯೋತಿಸ್ಸ್ವ
ರೂಪನಾದ್ಯಂತರಹಿತಂ ನಿತ್ಯನದ್ವಯಂ
ಪಾಪರಹಿತಂ ಪರಬ್ರಹ್ಮ ಬ್ರಹ್ಮಜ್ಞಾನಬೋಧಾಸು ಕರ್ತೃವೆಂದು
ಗೋಪವಾಹನರಾವಗಂ ಬಿಡದೆ ನಿಮ್ಮಯಾ
ಶ್ರೀಪಾದಪದ್ಮಂಗಳಂ ಭಜಿಸುತಿಹರೆನ್ನ
ತಾಪತ್ರಯಂಗಳಂ ಹರಿಸಿ ರಕ್ಷಿಸು ನಿಮ್ಮನಾಂ ಪೊಗಳ್ವೆನೊಳ್ಕರಿಂದೆ ೧

ಶ್ರೀಗಿರಿಜೆಯಾಸ್ಯಕಮಳದ ಸೊಂಪು ಪೊಳೆಯೆ ಚರಿ
ದಾಗಿ ಕುಚಚಕ್ರಯುಮಳದ ಪೆಂಪು ಬಳೆಯೆ ತಲೆ
ವಾಗಿ ಕಣ್ನೈದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ
ಬೀಗೆ ಕುಂತಳತಮಂ ಸಾಗೆ ಚೆಂದುಟಿಗೆಂಪು
ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯ
ನಾಗೆಸೆವ ಪಂಪಾವಿರೂಪಾಕ್ಷ ಸೂರ್ಯನಾನಂದವಂ ನಮಗೀಯಲಿ ೨

ಸೂಚನೆ : ಶ್ರೇಷ್ಠ ಗುರುವಾದ ಚೆನ್ನಬಸವಣ್ಣನು ಸಿದ್ಧರಾಮಯ್ಯನಿಗೆ ಪವಿತ್ರವಾದ ಶಿವತತ್ತ್ವವನ್ನು ತಿಳಿಸಿದನು. ಶಿವದೀಕ್ಷೆಯನ್ನು ಕೊಟ್ಟನು. ಶ್ರೇಷ್ಠವೂ ಉತ್ತಮವೂ ಆದ ಈ ಕಥೆಯನ್ನು ಸದ್ಭಕ್ತರು ಪ್ರೀತಿಯಿಂದ ಕೇಳಬೇಕು. ಹಾಗೆ ಕೇಳಿ ಕೃತಕೃತ್ಯರಾಗಬೇಕು. ೧. ಶ್ರೇಷ್ಠನಾದ ಸದ್ಗುರುವು ಪರಂಜ್ಯೋತಿ ಸ್ವರೂಪನು, ಆದಿ ಅಂತ್ಯಗಳಿಲ್ಲದವನು, ಶಾಶ್ವತನು ಅದ್ವಿತೀಯನು ಪಾಪಗಳೇ ಇಲ್ಲದವನು, ಪರಬ್ರಹ್ಮ ಸ್ವರೂಪವಾದ ಬ್ರಹ್ಮಜ್ಞಾನಬೋಧೆಯನ್ನು ಮಾಡುವವನು ಎಂದು ಇಂದ್ರ, ಬ್ರಹ್ಮ, ವಿಷ್ಣು ಮೊದಲಾದವರು ಎಡೆಬಿಡದೆ ಯಾವಾಗಲೂ ನಿಮ್ಮ ಪವಿತ್ರವಾದ ಪಾದಕಮಲಗಳನ್ನು ಭಜಿಸುತ್ತಾರೆ. ಹೇ ಸ್ವಾಮಿ, ನೀವು ನನ್ನ ಕಷ್ಟಕಾರ್ಪಣ್ಯಗಳನ್ನು ಕಳೆದು ಕಾಪಾಡಿ. ನಿಮ್ಮನ್ನು ಬಹಳ ಪ್ರೀತಿಯಿಂದ ನಾನು ಹೊಗಳುತ್ತೇನೆ. ೨. ಮುಖವೆಂಬ ಕಮಲದ ಸೌಂದರ್ಯವು ಪ್ರಕಾಶಿಸಲು, ಚಕ್ರಾಕಾರದ ಎರಡು ಮೊಲೆಗಳ ಗಾತ್ರ ಹೆಚ್ಚಾಗಲು, ಆಕೆಯು ತಲೆಬಾಗಿದ್ದರಿಂದ ನೈದಿಲೆಯಾಕಾರದ ವಿಶಾಲವಾದ ಕಣ್ಣುಗಳ ಮನೋಹರತೆಯು ಕಡಿಮೆಯಾಗಲು, ಪರಿಮಳದಿಂದ ಕೂಡಿದ ನಿಶ್ವಾಸದ ಗಾಳಿಯು (ಮೂಗಿನ ಮೂಲಕ) ಸುಳಿದಾಡಲು,ಕಪ್ಪಾದ ಕೂದಲು ಚೆದುರಿಹೋಗಲು ಚೆಂದುಟಿಯು ಕೆಂಪು ಮಸುಕಾಗಲು ಕಾರಣವಾದ (ರತಿ)ಸುಖದ ಕಾಂತಿಯನ್ನು ಪಾರ್ವತಿಯ ಮುಖ

CC-0. Jangamwadi Math Collection. Digitized by eGangotri

ಶಿವ ಶಿವಗಣಾನಂದ ನಂದನಂದನಕಮಲ
ಭವನುತ ಮಹಾಮಹಿಮ ಹಿಮಕಿರಣ ಕಂಜಬಾಂ
ಧವ ಕೋಟಿತೇಜೋವಿರಾಜಿತಕಳೇವರ ವರಾಭರಣ ಚಕ್ಷುಃಶ್ರವ
ಶ್ರವಣಮಂಗಳನಾಮ ನಾಮರೂಪಕ್ರಿಯಾ
ದಿವಿಕಲ್ಪರಹಿತ ಹಿತಮಿತ್ರಧನರಾಜ ರಾ
ಜವಿಪಕ್ಷ ನೇತ್ರಸುಕುಮಾರಹರ ಹರ ವಿರೂಪಾಕ್ಷ ರಕ್ಷಿಸು ನತರನು ೩

ವರಜೂಟ ಧೃತರಾಜ ರಾಜರಾಜ ಪ್ರಸಖ
ನಿರುಪಮಿತ ನಿಷ್ಕಾಮಕಾಮ ಕಾಮಧ್ವಂಸಿ
ಹರವಿಜಿತಖಳ ಭೀಮ ಭೀಮ ಭೀಮಾನುಸಂಜಾತ ದಿವ್ಯಾಸ್ತ್ರಪ್ರದ
ಶರಣನುತ ಸುರಕಾಂತಕಾಂತ ಕಾಂತಾರ್ಧಾಂಗ
ಪುರವೈರಿಲಯ ಕಾಲಕಾಲ ಕಾಲಗ್ರೀವ
ನಿರುಪಮ ಸರೋಜಾತಜಾತ ಜಾತಾಧ್ವರಧ್ವಂಸಿ ಜಯ ಪಂಪಾಧಿಪ ೪

ದಲ್ಲಿ ಹರಡಿ, ಶಾಶ್ವತವಾಗಿ ಬೆಳಗುವ ಪಂಪಾವಿರೂಪಾಕ್ಷನೆಂಬ ಸೂರ್ಯನು ನಮಗೆ ಆನಂದವನ್ನು ಉಂಟುಮಾಡಲಿ. ೩. ಶಿವನು ಶಿವಗಣಗಳಿಗೆ ಆನಂದವನ್ನು ಉಂಟು ಮಾಡುವವನು, ಕೃಷ್ಣನಿಂದಲೂ ಬ್ರಹ್ಮನಿಂದಲೂ ಹೊಗಳಿಸಿಕೊಳ್ಳುವವನು, ಮಹಾ ಮಹಿಮೆಯುಳ್ಳವನು ಕೋಟಿ ಸೂರ್ಯ-ಚಂದ್ರರ ತೇಜಸ್ಸುಳ್ಳ ಶರೀರವುಳ್ಳವನು, ಸರ್ಪಗಳೆಂಬ ಶ್ರೇಷ್ಠವಾದ ಆಭರಣಗಳನ್ನು ಧರಿಸಿದವನು. ಇವನ ಹೆಸರನ್ನು ಕೇಳುವವರ ಕಿವಿಗಳಿಗೆ ಮಂಗಳ ಉಂಟಾಗುತ್ತದೆ. ನಾಮರೂಪಕ್ರಿಯಾದಿ ವಿಕಲ್ಪಗಳು ಇಲ್ಲದವನು. ಧನರಾಜನಾದ ಕುಬೇರನಿಗೆ ಹಿತಮಿತ್ರನು. ಚಂದ್ರನ ವೈರಿಯಾದ ಕಮಲದಂತೆ ಕಣ್ಣುಳ್ಳವನು ವಿಷ್ಣು. ವಿಷ್ಣುವಿನ ಮಗ ಮನ್ಮಥ. ಅವನನ್ನು ಸಂಹರಿಸಿ ದವನು ಶಿವ. ಇಂಥ ವಿರೂಪಾಕ್ಷನೇ, ನಮಸ್ಕರಿಸಿದವರನ್ನು ಕಾಪಾಡು. ೪. ಶ್ರೇಷ್ಠ ವಾದ ಜಟೆಯಲ್ಲಿ ಚಂದ್ರನನ್ನು ಧರಿಸಿದವನು, ರಾಜರಾಜನಾದ ಕುಬೇರನಿಗೆ ಒಳ್ಳೆಯ ಸ್ನೇಹಿತನಾದವನು, ಹೋಲಿಕೆಯಿಲ್ಲದವನು, ನಿಷ್ಕಾಮಕಾಮಿ, ಮನ್ಮಥನನ್ನು ಸಂಹರಿಸಿದವನು, ಶತ್ರುಗಳನ್ನು ಗೆದ್ದ ಶಿವ ಭಯಂಕರರಿಗೆ ಭಯಂಕರನಾದವನು, ಭೀಮನ ತಮ್ಮನಾದ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟವನು, ಇಂದ್ರನಿಂದ ನಮಸ್ಕರಿಸಿಕೊಳ್ಳುವವನು, ಮನೋಹರಳಾದ ಪಾರ್ವತಿಗೆ ಅರ್ಧದೇಹವನ್ನು ಕೊಟ್ಟವನು, ಪುರವೈರಿ, ಯಮನನ್ನು ಗೆದ್ದವನು, ನೀಲಕಂಠ, ಉಪಮಾತೀತ ನಾದವನು, ಬ್ರಹ್ಮನ ಮಗನಾದ ದಕ್ಷಬ್ರಹ್ಮನ ಯಾಗವನ್ನು ನಾಶಮಾಡಿದವನು.

CC-0. Jangamwadi Math Collection. Digitized by eGangotri

ಗೋಪಕ್ಷಹರಗೋಪ ಗೋಪಾವನತಚರಣ
ಗೋಪಕಂಧರಗೋಪ ಗೋಭೂಪ ಗತದೋಷ
ಗೋಪವಾಹನ ಗೋಪಚಾಪ ಗೋಪವಿಗೋಪ ಗೋಪಪತಿ ಗೋಪವಾಸ
ಗೋಪರಮವಸ್ತ್ರ ಗೋಶಸ್ತ್ರ ಗೋಪಾತ್ಮಜಾ
ಲಾಪಹರುಷಿತ ಗೋಮುಖಾದ್ಯಖಿಳ ಲೋಕೇಶ
ಗೋಪಾಟವಂಗಳಂ ಪಾಲಿಪ್ಪುದು ಪಂಪಾವಿರೂಪಾಕ್ಷ ಸುಜನರಕ್ಷ ೫

ಭೀಮ ಭೀಮಾಘಹರ ಜಿತಕಾಲ ಕಾಲಗಳ
ಸೋಮ ಸೋಮವಿಭೂಷ ಸುರಪಾಲಪಾಲ ಹೃತ
ಕಾಮ ಕಾಮಪ್ರದ ಸದಾರಾಜರಾಜನುತ ಗತತಾಪ ತಾಪಸನತ
ರಾಮ ರಾಮಾರ್ಧಾಂಗ ಗೋಕರ್ಣಕರ್ಣ ಗಿರಿ
ಧಾಮ ಧಾಮನಿಧಾನ ಪಂಪಾವಿರೂಪಾಕ್ಷ
ಪ್ರೇಮದಿಂ ಭಕ್ತರಂ ಸಲಹು ಸನ್ನುತ ಗಣಸ್ತೋಮ ನಿಸ್ಸೀಮಮಹಿಮ ೬

ಈ ಎಲ್ಲ ಗುಣಗಳನ್ನು ಹೊಂದಿದ ಪಂಪಾನಾಥನಿಗೆ ಜಯವಾಗಲಿ !. ೫. ಇಂದ್ರ, ಬ್ರಹ್ಮ, ವಿಷ್ಣು ಮುಂತಾದವರಿಂದ ಪಾದಗಳಿಗೆ ನಮಸ್ಕರಿಸಿಕೊಳ್ಳುವವನೆ, ತಲೆಯಲ್ಲಿ ಗಂಗೆಯನ್ನು ಧರಿಸಿದ ಶಿವನೆ, ಶಿರದಲ್ಲಿ ಜಟೆಯನ್ನು ಉಳ್ಳ ಶಿವನೆ, ದೋಷರಹಿತನೆ, ನಂದಿವಾಹನನೆ, ಮೇರುಪರ್ವತವನ್ನು ಧನುಸ್ಸನ್ನಾಗಿ ಮಾಡಿಕೊಂಡವನೆ, ವಿಶೇಷವಾದ ರಕ್ಷಣೆಯನ್ನು ಕೊಡುವ ಸಾಮರ್ಥ್ಯವುಳ್ಳ ಶಿವನೆ, ಪಶುಪತಿ, ಪರ್ವತವಾಸಿ, ದಿಕ್ಕನ್ನೇ ಶ್ರೇಷ್ಠವಾದ ವಸ್ತ್ರವನ್ನಾಗಿ ಉಳ್ಳ ದಿಗಂಬರನೆ, ಹಣೆಗಣ್ಣನ್ನು ಅಸ್ತ್ರವಾಗಿ ಉಳ್ಳವನೆ, ಗಿರಿಜೆಯ ಮಾತುಕತೆಗಳಿಂದ ಸಂತೋಷಗೊಳ್ಳುವವನೆ, ಸೂರ್ಯ ಚಂದ್ರರಿಗೆ ಆದಿಯಾದವನೆ, ಸಕಲ ಲೋಕಕ್ಕೂ ಒಡೆಯನಾದವನೆ, ಸದ್ಭಕ್ತರನ್ನು ರಕ್ಷಿಸುವ ಪಂಪಾವಿರೂಪಾಕ್ಷನೇ ಮಾತಿನ ಪಟುತ್ವವನ್ನು ದಯಪಾಲಿಸು. ೬. ಭಯಂಕರ ಪಾಪಗಳನ್ನು ಪರಿಹರಿಸುವ ಶಿವನೆ, ಯಮನನ್ನು ಗೆದ್ದವನೆ, ನೀಲಕಂಠ, ಉಮಾಸಹಿತನಾದವನೆ, ಚಂದ್ರನನ್ನು ಧರಿಸಿದವನೆ, ದೇವೇಂದ್ರನನ್ನು ರಕ್ಷಿಸುವವನೆ, ಕಾಮನನ್ನು ಗೆದ್ದವನೆ, ಬಯಸಿದುದನ್ನು ಕೊಡುವವನೆ, ಯಾವಾಗಲೂ ಕುಬೇರನಿಂದ ಹೊಗಳಿಸಿಕೊಳ್ಳುವವನೆ, ತಾಪತ್ರಯಗಳನ್ನು ನಿವಾರಿಸುವವನೆ, ತಪಸ್ವಿಗಳಿಂದ ನಮಸ್ಕರಿಸಿಕೊಳ್ಳುವವನೆ, ಸುಂದರಳಾದ ಪಾರ್ವತಿಯ ಅರ್ಧದೇಹದಿಂದ ಮನೋಹರನಾದವನೆ, ಹಾವನ್ನು ಕಿವಿಯ ಆಭರಣವನ್ನಾಗಿ ಮಾಡಿಕೊಂಡವನೆ, ಗಿರಿಯನ್ನೇ ಮನೆಯಾಗಿ ಉಳ್ಳವನೆ, ತೇಜೋನಿಧಿಯೆ, ಶ್ರೇಷ್ಠರಾದ ಭಕ್ತರ ಸಮೂಹವನ್ನು ಉಳ್ಳ ನಿಸ್ಸೀಮ ಮಹಿಮನಾದ ಪಂಪಾ

CC-0. Jangamwadi Math Collection. Digitized by eGangotri

ಭೇದಿಸಲ್ಕತ್ಯತಿಷ್ಠದ್ದಶಾಂಗುಲನೆನಿ
ಪ್ಪಾದಿಪರಶಿವನ ಸದ್ಧರ್ಮವೇ ರೂಪಾಗಿ
ಭೇದವಿಲ್ಲದೆ ತತ್ಶಿವಂಗೆ ವಾಹನವಾಗಿ ಸಕಲಗಣಕಧಿಪನಾಗಿ
ಮೇದಿನಿಯೊಳುಗ್ರತಪದಿಂ ಮೆಚ್ಚಿಸಿದ ಪರಶಿ
ಲಾದಂಗೆ ಸುತನಾಗಿ ತಾಂ ತಪದೊಳೀಶನಂ
ಸಾದರದೊಳೊಲಿಸಿ ಭಕ್ತಿಯನಾಂತು ರಂಜಿಸುವನಾದಿವೃಷಭಂಗೆರಗುವೆ ೭

ಮಂಗಳೆಯನಂಗದೊಳ್ ಸಂಗೊಳಿಸಿ ಪರಶಿವಂ
ಸಿಂಗಪೀಠದಿ ಪ್ರಮಥಗಂಗೆವಾಳುಕರು ಮುನಿ
ಪುಂಗವರ್ಷಟಿತೋಲಗಂಗೊಟ್ಟು ರಂಜಿಸುವ ರಂಗಮಂಟಪಕೆ ಬಂದು
ಪೊಂಗಿ ನಾಟ್ಯವನಾಡುತಂಗಜಾರಿಗೆ ನಮಿಸಿ
ದಂಗವರಿದಾ ಗಿರಿಜೆ ತುಂಗಕೋಪದಲಿ ತ
ನ್ನಂಗವಂ ತಾರೆನಲು ಹಿಂಗದುರೆ ಬಿಸುಟಮಲ ಭೃಂಗಿನಾಥಂಗೆ ಶರಣು ೮

ರುದ್ರನ ಲಲಾಟಾಕ್ಷಿಯಿಂದೊಗೆದು ಬಳಿಕಲಾ
ರುದ್ರರೂಪಂ ಧರಿಸಿ ದಕ್ಷಯಾಗಕೆ ನಡೆದು
ರುದ್ರಭಾಗವ ಬೇಡೆ ಕೊಡದಿರೆ ಶಿವದ್ರೋಹಿ ದಕ್ಷನಂ ಶಿರವನರಿದು

ವಿರೂಪಾಕ್ಷನೆ, ಪ್ರೇಮದಿಂದ ಭಕ್ತರನ್ನು ಕಾಪಾಡು. ೭. ಶಿವನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವವರಿಗೆ ಅತ್ಯತಿಷ್ಠದ್ದಶಾಂಗುಲನು, ಒಳ್ಳೆಯ ಧರ್ಮಸ್ವರೂಪದ ಸಾಕಾರಮೂರ್ತಿ ಆದಿಪರಮೇಶ್ವರ ಹೇ ಆದಿವೃಷಭ, ಯಾವ ವ್ಯತ್ಯಾಸವೂ ಇಲ್ಲದೆ ಆ ಪರಮೇಶ್ವರನಿಗೆ ನೀನು ವಾಹನನಾದೆ. ನೀನು ಎಲ್ಲ ಗುಣಗಳಿಗೂ ಒಡೆಯನಾದೆ. ಭೂಮಿಯಲ್ಲಿ ಉಗ್ರವಾದ ತಪಸ್ಸನ್ನು ಮಾಡಿ ಮೆಚ್ಚಿಸಿದ ಶಿಲಾದಂಗೆ ಮಗನಾದೆ. ನೀನು ತಪಸ್ಸನ್ನು ಮಾಡಿ ಈಶ್ವರನನ್ನು ಪ್ರೀತಿಯಿಂದ ಒಲಿಸಿಕೊಂಡೆ. ಹೀಗೆ ಭಕ್ತಿಯನ್ನು ಹೊಂದಿ ಪ್ರಕಾಶಿಸುವ ನಿನಗೆ ನಮಸ್ಕರಿಸುತ್ತೇನೆ. ೮. ಮಂಗಳಾಂಗಿಯಾದ ಪಾರ್ವತಿಯನ್ನು ತನ್ನ ದೇಹದಲ್ಲಿ ಸೇರಿಸಿಕೊಂಡಿದ್ದಾನೆ. ಇಂಥ ಪರಶಿವನು ಸಿಂಹಾಸನದ ಮೇಲೆ ಕುಳಿತಿದ್ದಾನೆ. ಅಲ್ಲಿ ಪ್ರಮಥರಿದ್ದಾರೆ, ಗಂಗೆಯಿದ್ದಾಳೆ, ಮಕ್ಕಳಾದ ವಿನಾಯಕ ಮತ್ತು ಷಣ್ಮುಖರಿದ್ದಾರೆ ಮುನಿಶ್ರೇಷ್ಠರಿದ್ದಾರೆ. ಇವರೆಲ್ಲರ ಜೊತೆಯಲ್ಲಿ ಪರಶಿವನು ಓಲಗಗೊಡುತ್ತಿದ್ದ. ಇಂಥ ಪ್ರಕಾಶಮಾನವಾದ ರಂಗಮಂಟಪಕ್ಕೆ ಭೃಂಗಿ ಬಂದು ಬಾಗಿ ಬಾಗಿ ನಾಟ್ಯವಾಡುತ್ತ ಪರಮೇಶ್ವರನಿಗೆ ಮಾತ್ರ ನಮಸ್ಕರಿಸಿದನು. ಇದನ್ನು ಅರ್ಥಮಾಡಿಕೊಂಡ ಗಿರಿಜೆಗೆ ಸಹಿಸಲಸಾಧ್ಯವಾದ ಕೋಪ ಬಂತು. ಕೋಪದಿಂದ ಅವನ ಅಂಗವನ್ನು ಕೊಡೆಂದು ಕೇಳಿದಳು. ಆಗ ಭೃಂಗಿಯು ಹಿಂದೆಗೆಯದೆ ಅದನ್ನು ಕೊಟ್ಟ. ಅಂಥ ಶ್ರೇಷ್ಠನಾದ ಭೃಂಗಿನಾಥನಿಗೆ ನಮಸ್ಕರಿಸುತ್ತೇನೆ. ೯. ವೀರಭದ್ರನು ಶಿವನ ಹಣೆಗಣ್ಣಿನಿಂದ ಹುಟ್ಟಿದನು. ಅನಂತರ ಭಯಂಕರ ರೂಪವನ್ನು ತಾಳಿ ದಕ್ಷನ ಯಾಗಕ್ಕೆ ಬಂದನು. ರುದ್ರನಿಗೆ ಸಲ್ಲಬೇಕಾದ ಯಾಗಭಾಗವನ್ನು ಬೇಡಿದನು. ಆಗ

CC-0. Jangamwadi Math Collection. Digitized by eGangotri

ರುದ್ರಸಖಮುಖ್ಯಸುರರು ಬಡಿದು ಪಿಡಿತಂದು
ರುದ್ರಂಗೆ ಸೆರೆಯನೊಪ್ಪಿಸಿದ ನೂತನ ಕಾಲ
ರುದ್ರನೆನಿಸುವ ವೀರಭದ್ರಂಗೆ ವಂದಿಪೆಂ ಭದ್ರಕಾಳೀವರಂಗೆ ೯

ಮೊಗವೈದಘೋರ ಸದ್ಯೋಜಾತ ತತ್ಪುರುಷ
ಮಿಗೆ ವಾಮದೇವಮೀಶಾನ್ಯಮೆಂದಿನ್ನೊಂದು
ಮೊಗಮುಂಟು ಪಾತಾಳಮೆಂದಪಂ ತತ್ವಜ್ಞರಲ್ಲದುಳಿದವರರಿಯರು
ಜಗವೆಲ್ಲಮರಿವಂತೆ ತೋರಬೇಕೆನುತಲಾ
ಮೊರ್ಗದಿಂದೆ ಶಿವ ತನ್ನ ತಾನೆ ಜನಿಸಿದನೆನಲ್
ಸೊಗಯಿಸುತ್ತಿದಂ ಕುಮಾರಸ್ವಾಮಿಯಡಿದಾವರೆಗಳಿಗಾರಡಿಯಪ್ಪೆನು ೧೦

ದರ್ಪಣದೊಳೆಸೆವ ಪ್ರತಿಬಿಂಬದಂತಾಗಸದೊ
ಳೊರ್ಪ ಸುರಚಾಪದಿರವೆಂತಂತೆ ದಗ್ಧಪಟ
ತೋರ್ಪಂತೆ ಘನಮರೀಚಿಯ ಜಲದ ನಿಲುವಿನಂತಾಲಿವರಲಂತೆ ಮಿಸುಪ
ಕರ್ಪುರಂ ಶಿಖಿಯೊಳೊಡವೆರೆದಂತೆ ಘೃತಸಿತಾ
ಸರ್ಪಿಯೊಳಗಣ ರೂಪಿನಂತಂತೆ ಮೆರೆವ ಕಂ
ದರ್ಪನಂ ಸುಟ್ಟತುಳನಿರ್ಮಾಯನಲ್ಲಮಪ್ರಭುರಾಯ ಸಲಹೆಮ್ಮನು ೧೧

ದಕ್ಷಬ್ರಹ್ಮನು ಅದನ್ನು ಕೊಡಲು ನಿರಾಕರಿಸಿದನು. ಆಗ ವೀರಭದ್ರನು ಶಿವದ್ರೋಹಿಯಾದ ದಕ್ಷನ ಶಿರವನ್ನು ಕಡಿದನು. ರುದ್ರಸಖನಾದ ವೀರಭದ್ರನು ಮುಖ್ಯರಾದ ದೇವತೆಗಳನ್ನು ಸದೆಬಡಿದು ಹಿಡಿದುತಂದು ಶಿವನಿಗೆ ಒಪ್ಪಿಸಿದನು. ಅಂತಹ ಭದ್ರಕಾಳೀವರನಾದ, ನೂತನ ಕಾಲರುದ್ರನೆನಿಸುವ ವೀರಭದ್ರನಿಗೆ ನಮಸ್ಕರಿಸುತ್ತೇನೆ. ೧೦. ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ ಎಂಬ ಐದು ಮುಖಗಳು ಶಿವನಿಗೆ ಇವೆ. ಇವಲ್ಲದೆ ಇನ್ನೊಂದು ಮುಖವಿದೆ. ಅದನ್ನು ಪಾತಾಳವೆನ್ನುತ್ತಾರೆ. ತತ್ವಜ್ಞರಲ್ಲದೆ ಉಳಿದವರು ಇದನ್ನು ಅರಿಯರು. ಇದನ್ನು ಜಗತ್ತಿಗೆಲ್ಲಾ ಅರ್ಥವಾಗುವಂತೆ ತೋರಿಸಬೇಕೆಂದು ಶಿವನು ತನ್ನನ್ನು ತಾನೆ ಆರು ಮುಖದಿಂದ ಸೃಷ್ಟಿಸಿಕೊಂಡನೋ ಎಂಬಂತೆ ಮನೋಹರವಾಗಿ ಕಾಣುತ್ತಿರುವ ಕುಮಾರಸ್ವಾಮಿಯ (ಷಣ್ಮುಖ ಸ್ವಾಮಿಯ) ಪಾದಕಮಲಗಳಿಗೆ ನಾನು ದುಂಬಿಯಾಗುತ್ತೇನೆ. ೧೧. ಕನ್ನಡಿಯಲ್ಲಿನ ಪ್ರತಿಬಿಂಬವೂ ಆಕಾಶದಲ್ಲಿನ ಕಾಮನಬಿಲ್ಲೂ ಸುಟ್ಟುಹೋದ ಪಟವೂ ಅಶಾಶ್ವತ. ಹಾಗೆಯೇ ದೊಡ್ಡದಾದ ಜಲಮರೀಚಿಕೆಯ ಆಳ ಅಶಾಶ್ವತವಾದುದರಿಂದ ಕಣ್ಣಿಗೆ ಕಾಣುವುದಿಲ್ಲ. ಮಳೆಯಲ್ಲಿ ಬೀಳುವ ಆಲಿಕಲ್ಲುಗಳು ಅಶಾಶ್ವತ, ಹೊಳೆಯುವ ಕರ್ಪೂರ ಬೆಂಕಿಯಲ್ಲಿ ಕಣ್ಣಿಗೆ ಕಾಣದಂತೆ ಒಂದಾಗಿಹೋಗುತ್ತದೆ. ಅದೇ ರೀತಿ ಸಕ್ಕರೆ ತುಪ್ಪದಲ್ಲಿ ಒಂದಾಗುತ್ತದೆ. ಹೀಗೆ ಕಂಡೂ ಕಾಣದಂತೆ ಮೆರೆದು ಮಾಯೆಯ ರೂಪದಲ್ಲಿ ಬಂದ ಮನ್ಮಥನನ್ನು ಗೆದ್ದ ಅತುಳ ನಿರ್ಮಾಯನಾದ ಅಲ್ಲಮಪ್ರಭುರಾಯನೇ,

CC-0. Jangamwadi Math Collection. Digitized by eGangotri

ಪಸುವೆನಿಸದಮಲ ಸುರಧೇನು ಮರನೆಂದೆನಿಸ
ದಸಮಕಲ್ಪದ್ರುಮಂ ಕಲ್ಲೆನಿಸಿಕೊಳ್ಳದಿಹ
ಮಿಸುಪ ಚಿಂತಾರತ್ನ ಖಣಿಯೆನಿಸದಿಪ ಮಹಾಪುರುಷ ತೃಣವೆನಿಸಿಕೊಳದ
ಪೊಸಮರುಜವಣಿ ಮನಂ ನುಡಿ ನೋಟ ನಡೆ ಕೈಗ
ಳೆಸೆವುತಿಪ ಪಂಚಪರುಷಮದಾಗಿ ರಂಜಿಸುವ
ಬಸವದಂಡಾಧೀಶ ಶರಣು ಮತ್ಪ್ರಾಣೇಶ ಭವನಾಶ ಭಕ್ತಿಕೋಶ ೧೨

ಸನ್ನುತ ಶಿವಪ್ರಸಾದವೆ ನಾಗಲಾಂಬಿಕೆಗೆ
ನನ್ನಿಯಿಂ ಶಿಶುವಾಗಿ ಜನಿಸಿ ಬಾಲ್ಯವನುಳಿದು
ಭಿನ್ನವಿಲ್ಲದೆ ಶಿವಗಣಕ್ಕೊಲಿದು ಸ್ಥಾವರಾದ್ಯನ್ಯಲಿಂಗದ ಭಜನೆಯ
ಮುನ್ನಮೇ ಬಿಡಿಸಿ ಷಟ್ಸ್ಥಲಮಾರ್ಗಮಂ ತಿಳಿಪಿ
ಚೆನ್ನಾಗಿ ಪ್ರಾಣಲಿಂಗದ ನೆಲೆಯನರುಹಿಕೊ
ಟ್ಟುನ್ನತಸುಮುಕ್ತಿಯೊಳಗಿಂಬಿಟ್ಟ ಪರಮಗುರು ಚೆನ್ನಬಸವಂಗೆ ಶರಣು ೧೩

ಸಿದ್ಧಮಿದು ಪಣೆಯೊಳಗೆ ಕಣ್ಣಹಿತ ಲೋಕ ಪ್ರ
ಸಿದ್ಧ ಶಿವ ತಾನೆ ಮಾನವರೂಪಿನಿಂ ಯೋಗ
ಸಿದ್ಧಾಂತಮಂ ಬಿತ್ತರಿಸಬಂದನಲ್ಲದೀತಂ ಮಿಕ್ಕ ನಾಡಾಡಿಯ

ನಮ್ಮನ್ನು ಕಾಪಾಡು. ೧೨. ಸ್ವರ್ಗದಲ್ಲಿರುವ ಕಾಮಧೇನು ಸಾಮಾನ್ಯ ಹಸುವಲ್ಲ. ಕಲ್ಪವೃಕ್ಷವು ಸಾಮಾನ್ಯವಾದ ಮರವೆನಿಸುವುದಿಲ್ಲ. ಪ್ರಕಾಶಮಾನವಾದ ಚಿಂತಾಮಣಿಯು ಕಲ್ಲೆನಿಸಿಕೊಳ್ಳುವುದಿಲ್ಲ. ಪ್ರಸಿದ್ಧವಾದ ಸ್ಪರ್ಶಶಿಲೆಯು ಸಾಮಾನ್ಯವಾದ ಗಣಿಗಳಲ್ಲಿ ದೊರೆಯುವುದಿಲ್ಲ. ಹೊಸದಾದ ಲಾವಂಚವು ಹುಲ್ಲುಕಡ್ಡಿ ಎನಿಸಿಕೊಳ್ಳುವುದಿಲ್ಲ. ಇದರಂತೆ ದಂಡಾಧೀಶನಾದ ಬಸವಣ್ಣನ ಮನಸ್ಸು ಮಾತು ನೋಟ ನಡತೆ ಕೈಗಳು ಐದು ಸ್ಪರ್ಶಮಣಿಗಳಂತೆ ಪ್ರಕಾಶಮಾನವಾಗಿದ್ದವು. ಭಕ್ತಿಭಂಡಾರಿಯೂ ಹುಟ್ಟು ಸಾವುಗಳಿಲ್ಲದವನೂ ನನ್ನ ಪ್ರಾಣಕ್ಕೆ ಒಡೆಯನೂ ಆದ ಬಸವಣ್ಣನಿಗೆ ನಮಸ್ಕರಿಸುತ್ತೇನೆ. ೧೩. ಸತ್ಯವಾಗಿಯೂ ಪವಿತ್ರವಾದ ಶಿವಪ್ರಸಾದವೇ ನಾಗಲಾಂಬಿಕೆಗೆ ಮಗುವಾಗಿ ಹುಟ್ಟಿತು. ಬಾಲ್ಯವನ್ನು ಕಳೆದು ಯಾವ ವ್ಯತ್ಯಾಸವೂ ಇಲ್ಲದೆ ಎಲ್ಲ ಶಿವಭಕ್ತರಿಗೂ ಒಲಿಯಿತು, ಅನಂತರ ಆತ್ಮಲಿಂಗವಲ್ಲದ ಸ್ಥಾವರ ಮೊದಲಾದ ಅನ್ಯಲಿಂಗದ ಪೂಜೆಯನ್ನು ಮಾಡದಂತೆ ಮೊದಲೇ ತಡೆದನು. ಷಟ್ಸ್ಥಲ ಮಾರ್ಗವನ್ನು ಚೆನ್ನಾಗಿ ಅರ್ಥವಾಗುವಂತೆ ತಿಳಿಸಿದನು, ಅನಂತರ ಪ್ರಾಣಲಿಂಗದ ಸ್ಥಾನ ನಿರ್ದೇಶನವನ್ನು ಮಾಡಿ ಕೊಟ್ಟನು. ಶ್ರೇಷ್ಠವಾದ ಮುಕ್ತಿಯೊಳಗೇ ಮನಸ್ಸನ್ನಿಟ್ಟ ಪರಮಗುರುವಾದ ಚೆನ್ನಬಸವಣ್ಣನಿಗೆ ವಂದಿಸುತ್ತೇನೆ, ೧೪. ಹಣೆಯೊಳಗೆ ಕಣ್ಣುಳ್ಳ ಲೋಕಪ್ರಸಿದ್ಧನಾದ ಶಿವನು ತಾನೇ ಮಾನವನಾಗಿ ಸಿದ್ಧರಾಮನ ರೂಪಿನಿಂದ ಯೋಗಸಿದ್ಧಾಂತವನ್ನು ವಿಸ್ತರಿಸಲು ಬಂದನು ಎಂಬುದು ನಿಶ್ಚಯ, ಅಲ್ಲದೆ ಇವನು ಸಾಮಾನ್ಯ ನಾಡಾಡಿಯಾದ

CC-0. Jangamwadi Math Collection. Digitized by eGangotri

ಸಿದ್ಧಮಾತ್ರನೆ ಮಹಾಯೋಗಸಂಸಿದ್ಧರಿಗೆ
ಸಿದ್ಧನೆಂದೆಲ್ಲಾಜನಂ ಪೊಗಳೆ ರಂಜಿಸುವ
ಸಿದ್ಧರಾಮೇಶನ ಪದಂಗಳೆಮಗೀಗೆ ಭಕ್ತಿಜ್ಞಾನ ವೈರಾಗ್ಯಮಂ ೧೪

ಚಿಕ್ಕನೆದ್ದಲ್ಲಮನೊಳರಿವನರಿಯಲ್ಕಾಗ
ಮುಕ್ಕಣ್ಣನರಸಿಯಂಶವೆ ಬಂದು ಧರೆಯೊಳಗೆ
ಧಿಕ್ಕರಿಸಿ ಕೌಶಿಕನ ವೈರಾಗ್ಯದಿಂ ನಡೆದು ಕಲ್ಯಾಣಪುರಕೆ ಪೋಗಿ
ಚಿಕ್ಕಬಸವಂ ಬಸವಮುಖ್ಯ ಪ್ರಮಥರ ಮುಂದೆ
ಮಿಕ್ಕಮಾತೇನಲ್ಲಮನೊಳರಿದು ಕದಳಿಯಂ
ಪೊಕ್ಕು ನಿರ್ವಾಣಪದವಿಯನಾಂತ ಮಾದೇವಿಯಕ್ಕನ ಪದಕ್ಕೆ ಶರಣು ೧೫

ಮೃಡನ ಕಿಡಿಗಣ್ಣಿನಿಂದೊಗೆದು ದಕ್ಷನತಲೆಯ
ಹೊಡೆದು ಹೋಮದೊಳಿಟ್ಟು ಕುರಿಯ ತಲೆಯಂ ಕೊಟ್ಟು
ಪೊಡವಿಯೊಳಗುದಿಸಿ ಬಿಜ್ಜಳನ ಪಡೆಯಂ ಮುರುಪಿ ನುತಿಸೆ ಮಗುಳ್ದಸುವನಿತ್ತು
ಬಡವಾದೆ ಬೇಡುವವರಿಲ್ಲೆಂದು ಬಸವ ತಾಂ
ನುಡಿಯೆ ಹಮ್ಮಂ ನಿಲಿಸಿ ಶಿವಭಕ್ತಸಂತತಿಯ
ಕಡುಮನದ ಮೈಲಿಗೆಯ ತೊಳೆದ ಮಡಿವಳತಂದೆ ಕೊಡು ಮತಿಗೆ ಮಂಗಳವನು
೧೬

ಯೋಗಿಯೆ ? ಮಹಾಯೋಗಿಗಳಾದ ಸಂಸಿದ್ಧರಿಗೂ ಮೀರಿದ ಸಿದ್ಧಪುರುಷ ಎಂದು ಎಲ್ಲ ಜನಗಳೂ ಹೊಗಳುತ್ತಿರಲು. ಶೋಭಿಸುತ್ತಿರುವ ಸಿದ್ಧರಾಮೇಶನ ಪಾದಕಮಲಗಳು ನಮಗೆ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಕೊಡಲಿ. ೧೫. ನಾವು ಅಲ್ಲಮನ ಅಂತರಂಗ ವನ್ನು ,ಅರ್ಥಮಾಡಿಕೊಳ್ಳುವುದು ಸಾಧ್ಯವಾಗದು. ಶಿವನ ಪತ್ನಿಯಾದ ಪಾರ್ವತಿಯ ಅಂಶದಿಂದ ಭೂಮಿಯಲ್ಲಿ ಅಕ್ಕಮಹಾದೇವಿ ಜನಿಸಿದಳು. ವೈರಾಗ್ಯದಿಂದ ಕೌಶಿಕರಾಜ ನನ್ನು ತಿರಸ್ಕರಿಸಿ ಕಲ್ಯಾಣಪುರಕ್ಕೆ ನಡೆದಳು. ಅನುಭವ ಮಂಟಪದಲ್ಲಿ ಚನ್ನಬಸವಣ್ಣ, ಬಸವಣ್ಣ ಮೊದಲಾದ ಮುಖ್ಯ ಪ್ರಮಥರ ಮುಂದೆ ಪರೀಕ್ಷೆಗೆ ಒಳಗಾದಳು. ಹೆಚ್ಚಿನ ಮಾತೇನು ? ಅವಳು ಅಲ್ಲಮನ ಅಂತರಂಗವನ್ನು ಅರ್ಥಮಾಡಿಕೊಂಡಳು. ಅನಂತರ ಕದಳಿಯ ವನವನ್ನು ಪ್ರವೇಶಮಾಡಿ ನಿರ್ವಾಣಪದವಿಯನ್ನು ಪಡೆದಳು. ಇಂಥ ಮಹದೇವಿಯಕ್ಕನ ಪಾದಗಳಿಗೆ ಶರಣಾಗುತ್ತೇನೆ. ೧೬. ಶಿವನ ಹಣೆಗಣ್ಣಿನಿಂದ ಹುಟ್ಟಿ ದಕ್ಷಬ್ರಹ್ಮನ ತಲೆಯನ್ನು ಕಡಿದು ಅದನ್ನು ಹೋಮಾಗ್ನಿಯಲ್ಲಿ ಹಾಕಿದನು. ಆ ತಲೆಗೆ ಬದಲಾಗಿ ಒಂದು ಕುರಿಯ ತಲೆಯನ್ನು ಕೊಟ್ಟನು ವೀರಭದ್ರ. ಆ ವೀರ ಭದ್ರನೇ ಭೂಮಿಯಲ್ಲಿ ಜನಿಸಿ ಬಿಜ್ಜಳನ ಸೈನ್ಯವನ್ನೆಲ್ಲ ನಾಶಮಾಡಿದನು. ಪ್ರಾರ್ಥಿಸಲು ಮತ್ತೆ ಅವರಿಗೆಲ್ಲ ಪ್ರಾಣವನ್ನು ಕೊಟ್ಟನು. "ಬೇಡುವವರಿಲ್ಲದೆ ನಾನು ಬಡವನಾದೆ" ಎಂದು ಬಸವಣ್ಣನು ಅಹಂಕಾರದಿಂದ ನುಡಿಯಲಾಗಿ ಅವನ ಗರ್ವವನ್ನು ಮುರಿದನು. ಶಿವಭಕ್ತ ಪರಂಪರೆಯ ಮನಸ್ಸಿನ ಕಶ್ಮಲವನ್ನು ತೊಳೆದನು. ಇಂಥ ಮಡಿವಾಳ ಮಾಚ

CC-0. Jangamwadi Math Collection. Digitized by eGangotri

ಮರುಳಶಂಕರದೇವರಿಂಗೆ ಮುನಿರಾಜಂಗೆ
ಕರಿಕಾಲಚೋಳಂಗೆ ಕಾಶಿರಾಜಂಗೆ ಶಂ
ಕರದಾಸಿಮಯ್ಯಂಗೆ ಸಕಳೇಶಮಾದಿರಾಜಂಗೆ ಸಾನಂದಮುನಿಗೆ
ಕರುಳ ಕೇತಯ್ಯಂಗೆ ಕಾಚಿರಾಜಂಗೆ ಕಿ
ನ್ನರಿಯ ಬೊಮ್ಮಯ್ಯಂಗೆ ಕೇಶಿರಾಜಂಗೆ ಪರಿ
ಪರಿಯ ಶಿವಶರಣರ್ಗೆ ಪರಮಸಂತಸದಿಂದೆ ಪರಿವಿಡಿಯೊಳೊಲಿದೆರಗುವೆ ೧೭

ಪರಶಿವಂ ಸಕಲಗಣಸಂಕುಲಕೆ ಪ್ರೀತಿಯಿಂ
ಹರಿಯಜಾಸುರ ಸುರಾದ್ಯಖಿಳದೇವವ್ರಜಕೆ
ಕರುಣದಿಂ ಶೈವೋಪದೇಶಮಂ ಕೊಟ್ಟು ರಕ್ಷಿಸಿ ಬಳಿಕ ಸಂತಸದೊಳು
ಧರೆಗಿಳಿದು ಮಳೆಯ ಮಲ್ಲೇಶನಾಮವನಾಂತು
ಚರರೂಪಿನಿಂದೆ ಮರ್ತ್ಯದ ಮಹಾ ಶರಣರ್ಗೆ
ಗುರುವೆನಿಸಿ ಸಕಲದೇಶಂಗಳಂ ಚರಿಸಿದಂ ಸರ್ವಜನರಂ ಪೊರೆವುತೆ ೧೮

ವರಖಿಲಿಂಧರರೇಳುನೂರ್ವರ್ಗೆ ಗುರುವಾಗಿ
ಹರುಷದಿಂ ಮಖ್ಖಕ್ಕೆ ಪೋಗಿ ಮಹಿಮೆಯ ತೋರಿ
ತುರುಕಾಣ್ಯದೊಳಗನಾವೃಷ್ಟಿದೋಷಂ ಬಂದು ಪಸರಿಸೆ ಪವಾಡದಿಂದೆ
ವರುಷಮಂ ಸುರಿಸಿ ಸುರಿತಾಳನಿಂ ಪೂಜೆಯಂ
ಪಿರಿದಾಗಿ ಕೈಕೊಂಡು ಘನತರದ ಕೀರ್ತಿಯಂ
ಧರಿಸಲಂದಂದಿತ್ತ ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು ೧೯

ತಂದೆಯೇ, ನನ್ನ ಬುದ್ಧಿಗೆ ಮಂಗಳವನ್ನು ಉಂಟುಮಾಡು. ೧೭. ಮರುಳು ಶಂಕರ ದೇವ, ಮುನಿರಾಜ, ಕರಿಕಾಲ ಚೋಳ, ಕಾಶಿರಾಜ, ಶಂಕರದಾಸಿಮಯ್ಯ, ಸಕಳೇಶಮಾದಿ ರಾಜ, ಸಾನಂದಮುನಿ, ಕರುಳಕೇತಯ್ಯ, ಕಾಚಿರಾಜ, ಕಿನ್ನರಿ ಬೊಮ್ಮಯ್ಯ, ಕೇಶಿರಾಜ ಮುಂತಾದ ಬೇರೆಬೇರೆಯ ಶಿವಶರಣರುಗಳಿಗೆ ಅತ್ಯಂತ ಸಂತೋಷದಿಂದ ಅನುಕ್ರಮದಲ್ಲಿ ನಮಸ್ಕರಿಸುತ್ತೇನೆ. ೧೮. ಪರಮೇಶ್ವರನು ಪ್ರೀತಿಯಿಂದ ತನ್ನ ಎಲ್ಲ ಭಕ್ತಸಮೂಹಕ್ಕೆ ವಿಷ್ಣು, ಬ್ರಹ್ಮ, ರಾಕ್ಷಸ ಮತ್ತು ದೇವಸಮೂಹಕ್ಕೆಲ್ಲ ಶೈವ ತತ್ತ್ವೋಪದೇಶವನ್ನು ಕೊಟ್ಟು ಕಾಪಾಡಿದನು. ಅನಂತರ ಸಂತೋಷದಿಂದ ಭೂಮಿಯಲ್ಲಿ ಅವತರಿಸಿ ಮಳೆಯ ಮಲ್ಲೇಶ ಎಂಬ ಹೆಸರನ್ನು ಪಡೆದನು. ಜಂಗಮರೂಪದಿಂದ ಭೂಮಿಯ ಮೇಲಿನ ಮಹಾಭಕ್ತರಿಗೆ ಗುರುವಾದನು. ಎಲ್ಲ ಜನರನ್ನೂ ಕಾಪಾಡುತ್ತ ಸಕಲ ದೇಶ ಗಳಲ್ಲಿಯೂ ಸಂಚರಿಸಿದನು. ೧೯. ಶ್ರೇಷ್ಠರಾದ ಏಳುನೂರು ಮುಸಲ್ಮಾನ ಬೈರಾಗಿ ಗಳಿಗೆ ಗುರುವಾದನು. ಸಂತೋಷದಿಂದ ಮುಸಲ್ಮಾನರ ಯಾತ್ರಾಸ್ಥಳವಾದ ಮಖ್ಖಾಕ್ಕೆ ಹೋದನು. ಅಲ್ಲಿ ತನ್ನ ಮಹಿಮೆಯನ್ನು ತೋರಿಸಿದನು. ಅರಬ್‌ದೇಶ ದಲ್ಲಿ ಅನಾವೃಷ್ಟಿದೋಷವು ಹರಡಿತ್ತು. ತನ್ನ ಪವಾಡದಿಂದ ಮಳೆಯನ್ನು ಸುರಿಸಿ ದನು. ಮುಸಲ್ಮಾನ ಸುಲ್ತಾನನಿಂದ ದೊಡ್ಡದಾದ ಪೂಜೆಯನ್ನು ಸ್ವೀಕರಿಸಿ, ಹೆಚ್ಚಿನ

CC-0. Jangamwadi Math Collection. Digitized by eGangotri

ಆ ಮಳೆಯ ಮಲ್ಲೇಶ್ವರನ ಸಾಂಪ್ರದಾಯದೊಳು
ಕಾಮಾಹಿತಂ ಪಟ್ಟಸ್ಥಲಾಬ್ಧಿವರ್ಧನ ಪೂರ್ಣ
ಸೋಮನತ್ಯಂತದೋಷಾಪಹಂ ದಕ್ಷನುಂ ಕಾರುಣ್ಯಭರಿತಹೃದಯಂ
ರಾಮಣೀಯಕ ಯಶಃಪ್ರೇಮಂ ಜಿತೇಂದ್ರಿಯತಿ
ಲಾಮಂ ಸುಗುಣಗಣೋದ್ದಾಮಂ ಪರಮಪುಣ್ಯ
ನಾಮನೆನಿಸುವ ಸಿದ್ಧವೀರೇಶನೆಸೆದನಂದವನಿಯೊಳು ಪೆಂಪುವಡೆದು ೨೦

ಪರಮಶಾಂತಿಯೆ ಮನೆ ಸದಯವೆ ಪರಿಕರವಾಗ
ಲಿರದೆ ಶಿವಲಿಂಗ ಚಿಂತನೆಯೆ ಮನೆವಾರ್ತೆ ಮ
ತ್ತಿರದೆ ಸತಿಯೇ ಮೋಕ್ಷಲಕ್ಷ್ಮಿ ಮಕ್ಕಳೆ ಶಿಷ್ಯರಾಗೆ ಸಂಸಾರಿಯಂತೆ
ಧರಣಿಯೊಳಗೆಸೆವ ವಿದ್ಯಾನಗರಿಯೊಳ್ ಮೆರೆವ
ಹಿರಿಯ ಮಠದೋಳ್ ಮಹಾಚರಲಿಂಗಸಹಿತ ಸ
ದ್ಗುರುವರಂ ಸಿದ್ಧವೀರೇಶನೊಪ್ಪಿರ್ದನಾ ಯತಿಯದೇಂ ಸಾಮಾನ್ಯನೆ ೨೧

ನೋಡಿದವನೇ ಶುಚಿ ಪದಾಬ್ಜಂಗಳಿಗೆ ತಲೆಯ
ನೀಡಿದವನೇ ಸುಕೃತಿ ಸಮ್ಮುಖದೊಳೊಮ್ಮೆ ಮಾ
ತಾಡಿದವನೇ ಶೈವಮಾರ್ಗಿ ಪ್ರತ್ಯುತ್ತರಂಬಡೆದವನೆ ನಿತ್ಯನೊಲ್ದು

ಕೀರ್ತಿಯನ್ನು ಗಳಿಸಿದನು. ಅಂದಿನಿಂದ ಮಳೆಯ ಮಲ್ಲೇಶ ಎಂಬ ಹೆಸರನ್ನು ಪಡೆದನು. ೨೦. ಆ ಮಳೆಯ ಮಲ್ಲೇಶನ ಸಂಪ್ರದಾಯದಲ್ಲಿ ಸಿದ್ಧವೀರೇಶನು ಹುಟ್ಟಿದನು. ಅವನು ಕೇಳಿದವರ ಕೋರಿಕೆಗಳನ್ನು ಈಡೇರಿಸುವವನು. ಸಮುದ್ರವು ಹೆಚ್ಚಲು ಚಂದ್ರನು ಹೇಗೆ ಕಾರಣನೋ ಹಾಗೆ ಷಟ್‌ಸ್ಥಲಮಾರ್ಗ ಸಂಪದ್ಭರಿತವಾಗಲು ಇವನು ಕಾರಣನು. ದೋಷಗಳನ್ನು ಪರಿಹರಿಸುವ ಸಾಮರ್ಥ್ಯ ಉಳ್ಳವನು. ಕರುಣೆಯಿಂದ ತುಂಬಿತುಳುಕುವ ಹೃದಯ ಉಳ್ಳವನು. ಮನೋಹರವಾದ ಕೀರ್ತಿಯಲ್ಲಿ ಪ್ರೀತಿಯುಳ್ಳವನು. ಇಂದ್ರಿಯವನ್ನು ಗೆದ್ದವರಲ್ಲಿ ತಿಲಕಪ್ರಾಯನು. ಒಳ್ಳೆಯ ಗುಣಗಳ ಸಮೂಹವನ್ನೇ ಹೊಂದಿರುವವನು. ಪರಮ ಪವಿತ್ರವಾದ ಹೆಸರನ್ನು ಪಡೆದಿರುವವನು. ಈ ಸಿದ್ಧವೀರೇಶ ಭೂಮಿಯಲ್ಲಿ ಪ್ರಖ್ಯಾತಿಯನ್ನು ಪಡೆದು ಶೋಭಿಸಿದನು. ೨೧. ಪರಮಶಾಂತಿಯೆ ಅವನ ನೆಲೆಮನೆ ; ದಯೆಯೇ ಪೂಜಾ ಸಾಮಗ್ರಿ. ಯಾವಾಗಲೂ ಶಿವಲಿಂಗಧ್ಯಾನವೇ ಮನೆಗೆಲಸ. ಹೆಂಡತಿಯೇ ಮೋಕ್ಷಲಕ್ಷ್ಮಿ. ಮಕ್ಕಳೇ ಅವನ ತತ್ತ್ವವನ್ನನುಸರಿಸುವ ಶಿಷ್ಯರು. ಇವನ್ನೆಲ್ಲ ಉಳ್ಳ ಸಂಸಾರಿಯಾಗಿ ಭೂಮಿಯಲ್ಲಿ ಪ್ರಖ್ಯಾತವಾದ ವಿಜಯನಗರದ ಹಿರಿಯಮಠವೊಂದರಲ್ಲಿ ಚಲಿಸುವ ಮಹಾಲಿಂಗದಂತೆ ಇದ್ದ ಸಿದ್ಧವೀರೇಶಯತಿ ಸಾಮಾನ್ಯನೇ ? ೨೨. ಸಿದ್ಧವೀರೇಶನನ್ನು ದರ್ಶಿಸಿದವನು ಶುಚಿರ್ಭೂತನಾಗುತ್ತಾನೆ. ಅವನ ಪಾದಕಮಲಗಳ ಮೇಲೆ ತಲೆಯಿಟ್ಟು ನಮಸ್ಕರಿಸಿದವನೇ ಪುಣ್ಯವಂತ. ಅವನೆದುರಿನಲ್ಲಿ ಮಾತನಾಡಿ ವಿಚಾರವಿನಿಮಯ ಮಾಡಿಕೊಂಡವನೇ ಶಿವತತ್ತ್ವಾನುಯಾಯಿ. ಉತ್ತರವನ್ನು ಪಡೆದವನೇ ಶಾಶ್ವತನು.

CC-0. Jangamwadi Math Collection. Digitized by eGangotri

ತವೆತಲೆಯು ಬಾಗಿ ನುಡಿಯುಡುಗುವಳಿಗಬ್ಬಿಗಂ
ಕವಿಯು ಶಿವಕವಿ ವಿರೂಪಾಕ್ಷ ನಿನ್ನಂತೆ ಪರ
ಕವಿಯು ನಾಲಗೆ ಕಿವಿ ಮನಂಗಳಂ ಸೆಳೆವವಂ ಕವಿಯಲ್ತೆ ಭೂತಳದೊಳು ೨೭

ಎನಲವರ ನುಡಿಗಳ್ಗೆ ತಲೆಯು ಬಾಗಿಸಿ ಪುರಾ
ತನ ಶಿವಕವೀಶ್ವರರ ಪಾದಾಂಬುಜಂಗಳಂ
ನೆನೆದು ಕರ್ಣಾಟಕವ್ಯಾಕರಣ ಛಂದಸ್ಸಲಂಕಾರ ಶಬ್ದಂಗಳ
ಅನುಗೊಳಿಸಿ ವರ್ಣಕಕ್ಕಿಲ್ಲ ಲಕ್ಷಣವೆಂಬ
ಜನರ ನಾಣ್ನುಡಿಯನಲ್ಲೆನಿಸಿ ಪೇಳ್ವೆಂ ವಿನೂ
ತನಕಾವ್ಯಮಂ ಜಗತ್ಸೇವ್ಯಮಂ ಕಿವಿಗೊಟ್ಟು ಕೇಳ್ವುದೆಲ್ಲಾ ಸುಜನರು ೨೮

ಸರಸಕವಿ ಬಾಣಂ ಮಯೂರ ಭವಭೂತಿ ಸ
ದ್ವರ ಕಾಳಿದಾಸ ಮಲುಹಣ ಮಳಯರಾಜನತಿ
ಬಿರುದಂಕ ಕವಿ ರಾಘವಾಂಕ ಹಂಪೆಯ ಹರೀಶ್ವರ ಹಲಾಯುಧನುದ್ಭಟ
ಗುರುಪಂಡಿತೇಶ ಪಾಲ್ಕುರಿಕೆಯಾರಾಧ್ಯ ಭೀ
ಮರಸ ಮೊಗ್ಗೆಯ ಮಾಯಿದೇವ ಚಾಮರಸ ಶಂ
ಕರ ಕೆರೆಯ ಪದ್ಮರಸರಾದಿ ಶಿವಕವಿಗಳಂ ಬಲಗೊಂಡು ಕೃತಿವೇಳ್ವೆನು ೨೯

ಬೆರಳನ್ನಿಟ್ಟುಕೊಂಡು ಮೇಲೆ ನೋಡುತ್ತಾರೆ. ಏನೂ ತೋಚದೆ ತಮ್ಮ ತಲೆಗಳನ್ನು ತಗ್ಗಿಸುತ್ತಾರೆ. ಅವರ ಮಾತೇ ನಿಂತುಹೋಗುತ್ತದೆ ಇಂಥ ಕೆಟ್ಟ ಕವಿಗಳು ಕವಿಗಳೆ ? ಶಿವಕವಿಯಾದ ವಿರೂಪಾಕ್ಷ ಪಂಡಿತನೆ, ನಿನ್ನ ಹಾಗೆ ಬೇರೆ ಕವಿಯ ನಾಲಗೆ, ಕಿವಿ ಮತ್ತು ಮನಸ್ಸುಗಳನ್ನು ಆಕರ್ಷಿಸುವ ಕವಿಗಳೇ ಭೂಮಿಯಲ್ಲಿ ನಿಜವಾದ ಕವಿಗಳಲ್ಲವೆ ? ೨೮. ಹೀಗೆಂದು ಹೇಳಲಾಗಿ ಅವರ ಮಾತುಗಳನ್ನು ಕೇಳಿ ವಿರೂಪಾಕ್ಷ ಪಂಡಿತನು ವಿನಯದಿಂದ ತಲೆಬಾಗಿಸಿದನು. ಪ್ರಾಚೀನ ಶಿವಕವಿಗಳ ಪಾದಕಮಲಗಳನ್ನು ಮನಸ್ಸಿನಲ್ಲಿ ನೆನಪು ಮಾಡಿಕೊಂಡನು. ಕನ್ನಡದ ವ್ಯಾಕರಣ, ಛಂದಸ್ಸು. ಅಲಂಕಾರ, ಶಬ್ದಗಳನ್ನು ಜೋಡಿಸಿ ಕಾವ್ಯ ಬರೆಯುತ್ತೇನೆ. ವರ್ಣಕಕ್ಕೆ ಲಕ್ಷಣವಿಲ್ಲ ಎಂಬ ಗಾದೆ ಮಾತನ್ನು ಸುಳ್ಳುಮಾಡಿ ಹೊಸ ರೀತಿಯ ಕಾವ್ಯವನ್ನು ಹೇಳುತ್ತೇನೆ. ಜಗತ್ತಿನ ಜನಗಳೆಲ್ಲ ಪೂಜಿಸುವ ಈ ಕಾವ್ಯವನ್ನು ಎಲ್ಲ ಸದ್ಭಕ್ತರೂ ಕಿವಿಗೊಟ್ಟು ಕೇಳಬೇಕು. ೨೯. ಸರಸಕವಿಯಾದ ಬಾಣ, ಮಯೂರ, ಭವಭೂತಿ, ಶ್ರೇಷ್ಠನಾದ ಕಾಳಿದಾಸ ಮಲುಹಣ, ಮಳೆಯರಾಜ, ಹೆಚ್ಚಿನ ಬಿರುದುಗಳನ್ನುಳ್ಳ ರಾಘವಾಂಕ ಕವಿ, ಹಂಪೆಯ ಹರೀಶ್ವರ, ಹಲಾಯುಧ, ಉದ್ಭಟ, ಗುರು ಪಂಡಿತೇಶ, ಪಾಲ್ಕುರಿಕೆಯ ಆರಾಧ್ಯ, ಸೋಮನಾಥ, ಭೀಮಕವಿ, ಮೊಗ್ಗೆಯ ಮಾಯಿದೇವ, ಚಾಮರಸ, ಶಂಕರ, ಕೆರೆಯ ಪದ್ಮರಸ ಮೊದಲಾದ ಶಿವಕವಿಗಳಿಗೆ ಭಕ್ತಿಯಿಂದ ನಮಸ್ಕರಿಸಿ ಈ ಕೃತಿಯನ್ನು

CC-0. Jangamwadi Math Collection. Digitized by eGangotri

ಗುಡಿಯೆ ಮಾತಾಡುವಂದದೊಳೋರ್ವನೊಳಗಿರ್ದು
ನುಡಿದರನ್ಯರ ಕಿವಿಗೆ ಪ್ರತಿಶಬ್ದದಿಂದಾಗ
ಲೊಡನೆ ತಾಂ ಕೇಳಬಂದಂತೆನ್ನ ಹೃತ್ಕಮಲಕರ್ಣಿಕಾಮಧ್ಯದಲ್ಲಿ
ಎಡವಿಡದೊಲಾವಾಗಮಿರ್ಪ ಪಂಪಾಕ್ಷೇತ್ರ
ದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿ
ನುಡಿಗಳಿಂದೀ ಚೆನ್ನಬಸವಪೌರಾಣಮಂ ಪೇಳ್ದೆನಧಿಕೋತ್ಸವದೊಳು ೩೦

ಕಥೆಯನಾಮಂ ಚೆನ್ನಬಸವಪೌರಾಣಮಿಾ
ಕಥೆಗೊಡೆಯನಾ ವಿಮಲ ಚೆನ್ನಬಸವೇಶ್ವರಂ
ಕಥೆಯ ಪೇಳ್ದಾತಂ ವಿರೂಪಾಕ್ಷಪಂಡಿತಾರಾಧ್ಯನಾಗಮಹೃದ್ಯನು
ಕಥೆಯನಾಲಿಸಿ ನವರಸಾಂಬುಧಿಯೊಳಾಳದೀ
ಕಥೆಯ ನಿಂದಿಸುವರ್ ತಕಾರ ದವ್ವಕ್ಕರದ
ಕಥೆಗಳಲ್ಲದೆ ಮನುಜರಲ್ಲವದರಿಂ ಭಕ್ತರೀ ಕಥೆಯ ಕೇಳ್ವುದೊಲಿದು ೩೧

ಕವಿತೆ ಬಾರದು ತನಗೆ ಪರರ ಕಾವ್ಯಂಗಳ
ರ್ಥವನು ತಿಳಿಯಲ್ಕರಿಯನಿಲ್ಲದತಿದೋಷಮಂ
ತವೆ ಕಲ್ಪಿಸಲ್ ಬಲ್ಲನಾವನಾ ಖಳನ ನಿಷ್ಠುರತನದ ನಿಂದೆಗಳ್ಕಿ
ನವರಸಾಲಂಕಾರಭರಿತಮಾಗಿರ್ಪ ಕ
ಬ್ಬವನೊಲ್ದು ಕಥಿಸದುಳಿದಪ್ಪುದು ನೀತಿಯೆ ತಮಕೆ
ರವಿಯಂಜಿ ಬೆಳಗದಿರ್ಪನೆ ಲೋಕಮಂ ತನ್ನ ವಿಮಲಕಿರಣಂಗಳಿಂದೆ ೩೨

ಹೇಳುತ್ತೇನೆ. ೩೦. ಯಾವನಾದರೊಬ್ಬ ಗುಡಿಯೊಳಗಿದ್ದು ಮಾತನಾಡಿದರೆ ಗುಡಿಯೇ ಮಾತನಾಡುವಂತೆ ಪ್ರತಿಧ್ವನಿಯು ಕೇಳಿಸುತ್ತದೆ. ಅದೇ ರೀತಿ ನನ್ನ ಹೃದಯಕಮಲ ಮಧ್ಯದಲ್ಲಿ ಎಡೆಬಿಡದೆ ಶಾಶ್ವತವಾಗಿರುವ ಪಂಪಾಕ್ಷೇತ್ರದ ಒಡೆಯನಾದ ವಿರೂಪಾಕ್ಷನೇ ಹೇಳಿಸಲಾಗಿ ಮನೋಹರವಾದ ಮಾತುಗಳಿಂದ ಈ ಚೆನ್ನಬಸವ ಪುರಾಣವನ್ನು ಬಹಳ ಉತ್ಸಾಹದಿಂದ ಹೇಳಿದೆನು. ೩೧. ಕಥೆಯ ಹೆಸರು ಚೆನ್ನಬಸವ ಪುರಾಣ. ಈ ಕಥೆಗೆ ನಾಯಕ ನಿಷ್ಕಳಂಕನಾದ ಚೆನ್ನಬಸವೇಶ್ವರ. ಕಥೆಯನ್ನು ಹೇಳಿದವನು ವೇದವೇದಾಂಗ ಗಳನ್ನು ಬಲ್ಲವನಾದ ವಿರೂಪಾಕ್ಷ ಪಂಡಿತಾರಾಧ್ಯನು. ಈ ಕಥೆಯನ್ನು ಕೇಳಿ ಸಂತೋಷ ದಿಂದ ನವರಸಗಳನ್ನು ಅನುಭವಿಸದೆ ಕಥೆಯನ್ನು ನಿಂದಿಸುವವರು ಕತ್ತೆಗಳಲ್ಲದೆ ಮನುಷ್ಯ ರಲ್ಲ. ಆದುದರಿಂದ ಭಕ್ತರಾದವರು ಪ್ರೀತಿಯಿಂದ ಈ ಕಥೆಯನ್ನು ಕೇಳಬೇಕು. ೩೨. ತನಗೆ ಕಾವ್ಯ ರಚಿಸುವ ಸಾಮರ್ಥ್ಯವಿಲ್ಲ. ಬೇರೆಯವರ ಕಾವ್ಯಗಳನ್ನು ಅರ್ಥಮಾಡಿ ಕೊಳ್ಳಲಾರ. ಆದರೂ ಕಾವ್ಯದಲ್ಲಿ ದೋಷವನ್ನು ಮಾತ್ರ ಹುಡುಕಬಲ್ಲ. ಅಂಥ ಕೆಟ್ಟ ವನ ಕಟುವಾದ ನಿಂದೆಗಳಿಗೆ ಹೆದರಿ, ನವರಸಗಳಿಂದ ಕೂಡಿದ ಈ ಕಾವ್ಯವನ್ನು ಪ್ರೀತಿ ಯಿಂದ ಹೇಳದೆ ಇರುವುದು ಶಿಷ್ಟಾಚಾರವೆನಿಸುವುದೆ? ಕತ್ತಲೆಗೆ ಹೆದರಿ ಸೂರ್ಯನು ತನ್ನ

CC-0. Jangamwadi Math Collection. Digitized by eGangotri

ಕವಿತೆಯೇ ಸಕಲ ವಿದ್ಯಕ್ಕಧಿಕವಂತದೇ
ಶಿವಕಾವ್ಯಮಾಗಲತ್ಯುತ್ತಮೋತ್ತಮವಲ್ಲಿ
ನವರಸಾಲಂಕಾರಮೊದವಿದೊಡೆ ಪುಣ್ಯಫಲವೇ ಬಹಳ ಪಕ್ವವಾಗಿ
ಸವಿಯಿತ್ತೊಡೆಂತಂತಟವರಿನಿಂ ಲೇಸ ಬ
ಲ್ಲ ವಿದಗ್ಧರೀ ಚೆನ್ನಬಸವ ಪೌರಾಣಮಂ
ಕಿವಿಗೊಟ್ಟು ಮತ್ಸರವ ಬಿಟ್ಟು ಸಂತಸವಟ್ಟು ಕೇಳ್ವುದು ವಿಲಾಸದಿಂದೆ ೩೩

ವರಲಕ್ಷಣಂ ಸುಛಂದಸ್ಸು ನುತಶಬ್ದಮುರು
ತರ ರಸಾಲಂಕಾರಮತಿಶಯಾರ್ಥಂಗಳಿಂ
ವಿರಚಿಸಿದ ಕಾವ್ಯಮಿದರೊಳಗೆ ತಪ್ಪಿಲ್ಲಮಾದೊಡಮೀ ಮಹಾಕೃತಿಯೊಳು
ನರದೇಹವಿದಕೆ ಪಸಿವಾಲಸ್ಯ ನಿದ್ರೆಗಳ್
ವೆರಸಿಪ್ಪವದರಿಂದಮೆತ್ತಾನುಮೊಂದು ತ
ಪ್ಪಿರಲದಂ ತಿರ್ದಿ ರಸಿಕರ್ ಕರುಣದಿಂದಿಳೆಯರಿಯೆ ಲೇಸ ಮೆರೆವುದೊಲಿದು ೩೪

ಕೇಳದೇ ಪೋದೊಡೊಂದರಿಯೆನಿನಿಸಾದೊಡಂ
ಕೇಳಿದೊಡೆ ಸಾಕವರ ಕಿವಿಯುಮಂ ಮನಮುಮಂ
ಕೋಳಹಿಡಿದೊಡನೆ ನಿರ್ಮಲಿನ ನವರಸಮಹಾದುಗ್ಧವಾರಾಸಿಯೊಳಗೆ

ನಿರ್ಮಲವಾದ ಕಿರಣಗಳಿಂದ ಲೋಕವನ್ನು ಬೆಳಗದೆ ಇರುತ್ತಾನೆಯೆ ? ೩೩. ಎಲ್ಲ ವಿದ್ಯೆಗಿಂತ ಹೆಚ್ಚಾದುದು ಕಾವ್ಯ. ಅದು ಶಿವಕಾವ್ಯವಾದರೆ ಅತ್ಯಂತ ಶ್ರೇಷ್ಠವಾದದ್ದು. ಆ ಕಾವ್ಯ ನವರಸ ಅಲಂಕಾರಗಳಿಂದ ಕೂಡಿದ್ದರೆ ಅದರ ಪುಣ್ಯಫಲವು ಹೆಚ್ಚಾಗುತ್ತದೆ. ಈ ರೀತಿ ಪಕ್ವವಾದ ಪುಣ್ಯಫಲದಿಂದ ಕಾವ್ಯವು ಆನಂದವನ್ನು ಕೊಡುವಂತೆ, ಈ ರೀತಿಯಾದ ಎಲ್ಲ ಗುಣಗಳಿಂದಲೂ ಚೆನ್ನಬಸವ ಪುರಾಣವು ಪ್ರಕಾಶಿಸುತ್ತದೆ. ಆದುದರಿಂದ ಬಹಳ ಬುದ್ಧಿವಂತರಾದ ಪಂಡಿತರು ಅಸೂಯೆಯನ್ನು ಬಿಟ್ಟು. ಸಂತೋಷಾನಂದದಿಂದ ಈ ಕಾವ್ಯವನ್ನು ಕಿವಿಗೊಟ್ಟು ಕೇಳಬೇಕು. ೩೪. ಕಾವ್ಯದ ಉತ್ತಮ ಲಕ್ಷಣಗಳಿಗೆ ಅನುಸಾರವಾಗಿ, ಉತ್ತಮವಾದ ಛಂದಸ್ಸಿಂದ, ಯೋಗ್ಯವಾದ ಶಬ್ದಗಳಿಂದ ಕಾವ್ಯವನ್ನು ಬರೆದಿದ್ದೇನೆ. ಇಲ್ಲಿ ಶ್ರೇಷ್ಠತರವಾದ ನವರಸ, ಅಲಂಕಾರಗಳು, ಅತಿಶಯವಾದ ಅರ್ಥಗಳೂ ಇವೆ. ಇದರೊಳಗೆ ತಪ್ಪಿಲ್ಲ. ಆದರೂ ಈ ಕಾವ್ಯವನ್ನು ಬರೆದ ನಾನೂ ಮನುಷ್ಯ ದೇಹವುಳ್ಳವನು. ಈ ದೇಹಕ್ಕೆ ಹಸಿವು, ಆಲಸ್ಯ, ನಿದ್ರೆಗಳು ಉಂಟು. ಆದ್ದರಿಂದ ಎಲ್ಲಿಯಾದರೂ ಒಂದೊಂದು ತಪ್ಪಿರಬಹುದು. ಸಹೃದಯರಾದವರು ಆ ತಪ್ಪನ್ನು ಕನಿಕರದಿಂದ ತಿದ್ದಿ ಇದರಲ್ಲಿರುವ ಒಳ್ಳೆಯದನ್ನು ಎಲ್ಲರೂ ತಿಳಿಯುವಂತೆ ಪ್ರೀತಿಯಿಂದ ಪ್ರಕಾಶಪಡಿಸುವುದು. ೩೫. ನನ್ನ ಕಾವ್ಯವನ್ನು ಕೇಳದೆಹೋದವರ ಬಗ್ಗೆ ನನಗೆ ಏನೂ ತಿಳಿಯದು. ಸ್ವಲ್ಪವಾದರೂ ಕೇಳಿದರೆ ಸಾಕು ಸಹೃದಯರಾದ ಅವರ ಕಿವಿಯನ್ನೂ ಮನಸ್ಸನ್ನೂ ಸೆರೆಹಿಡಿಯಬಲ್ಲುದು. ತಕ್ಷಣವೇ ಈ ನನ ಕಾವ್ಯವು

CC-0. Jangamwadi Math Collection. Digitized by eGangotri

ಆಳಿಸದೆ ಬಿಡದೆನ್ನ ಕೃತಿ ಕೇಳಿದುತ್ತರಂ
ಬೇಳಲಾರದೆ ಮೊಗಂ ಬೆಮರ್ದು ಕಂಗೆಟ್ಟೊಳ್ವ
ಖೂಳಕುಕವಿಯ ಕಾವ್ಯದಂತಲ್ಲ ಖಂಡಶರ್ಕರೆಯಿಂದಿಗಿನಿದುವಾಗಿ ೩೫

ಋತು ನಂದನಂ ತರಣಿ ಶಶಿ ಶರಧಿ ಪರಿಣಯಂ
ರತಿ ನಗರಿ ಗಿರಿ ಸುತಂ ವಾರಿ ಮಧು ವಿರಹಮುಂ
ನತದಂಡಯಾತ್ರೆ ಯಾನಂ ರಣಂ ನೃಪರೇಳ್ಗೆ ರಾಜಮಂತ್ರಂಗಳೆಂಬ
ನುತಿವಡೆದ ಪದಿನೆಂಟು ವರ್ಣನೆಗಳಿಂ ಸಮಾ
ಶ್ರಿತ ನವರಸಾದ್ಯಲಂಕಾರಂಗಳಿಂ ವಿಬುಧ
ತತಿ ಬಣ್ಣಿಪಂತುಸಿರ್ದೆನೀ ಕಾವ್ಯಮತಿಸೇವ್ಯಮಾದುದೆಂಬೊಲ್ ಸುಜನರು ೩೬

ಪರಿವಿಡಿಯೊಳೀ ಪುರಾಣದ ಕಥಾಕುಳಕಮುಂ
ವಿರಚಿಪೆಂ ಕೈಲಾಸವರ್ಣನಂ ನಾರದನ
ದರುಶನಂ ಚೆನ್ನಬಸವೋತ್ಪತ್ತಿ ಪುಷ್ಪಕೋತ್ಸಾಹವಮಾತನ ಸುಲೀಲೆ
ಅರಸಿನಾಸ್ಥಾನಮಾ ಪುರದೇಶವರ್ಣನಂ
ಗುರುಚೆನ್ನಬಸವನಾ ಸಿದ್ಧರಾಮೇಶ್ವರಂ
ಗೊರೆದ ಶಿವತತ್ತ್ವಮಾ ಶಿವನೇಕಪಾದದಿಂ ನಿಂದು ನರ್ತಿಸಿದ ಲೀಲೆ ೩೭

ನಿರ್ಮಲವಾದ ನವರಸದ ಮಹಾಕ್ಷೀರಸಮುದ್ರದಲ್ಲಿ ಮುಳುಗಿಸದೆ ಬಿಡುವುದಿಲ್ಲ. ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಲಾರದೆ ಮುಖವು ಬೆವತು ಕಂಗೆಟ್ಟು ಅರಚುವ ಕೆಟ್ಟ ಕವಿಗಳ ಕಾವ್ಯದಂತಲ್ಲ. ಈ ನನ್ನ ಕಾವ್ಯವು ಕಲ್ಲುಸಕ್ಕರೆಗಿಂತಲೂ ಸವಿಯಾದುದು. ೩೬. ಈ ಕಾವ್ಯದಲ್ಲಿರುವ ನವರಸಾದಿ ಅಲಂಕಾರಗಳಿಂದ ಪಂಡಿತರುಗಳು ಈ ಕಾವ್ಯವು ಬಹಳ ಯೋಗ್ಯವಾದುದೆಂದು ಹೇಳುವಂತೆ ಸೇವಿಸಲು ಅರ್ಹವಾದುದು ಎಂದು ಸಜ್ಜನರು ಹೇಳುವಂತೆ ಆರು ಋತುಗಳು, ನಂದನವನ, ಸೂರ್ಯ-ಚಂದ್ರರು, ಸಮುದ್ರ, ವಿವಾಹ-ಪ್ರಣಯ, ನಗರ-ಗಿರಿ, ಪುತ್ರೋತ್ಸವ, ನದಿ, ಮಧುಮಾಸ, ವಿರಹ, ದೊಡ್ಡ ದಂಡಯಾತ್ರೆಗಳು, ದೀರ್ಘಪ್ರಯಾಣಗಳು, ಭಯಂಕರ ಯುದ್ಧಗಳು, ರಾಜರ ಅಭ್ಯುದಯ, ರಾಜರ ಆಡಳಿತ ಮುಂತಾದ ಪ್ರಖ್ಯಾತವಾದ ಹದಿನೆಂಟು ವರ್ಣನೆಗಳನ್ನು ಈ ಕಾವ್ಯದಲ್ಲಿ ಸೇರಿಸಿದ್ದೇನೆ. ೩೭. ಪುರಾಣದ ಈ ಕಥೆಯಲ್ಲಿ ಕೈಲಾಸ ಪರ್ವತದ, ನಾರದ ಮಹರ್ಷಿಗಳ ದರ್ಶನದ, ಚೆನ್ನಬಸವಣ್ಣನ ಜನನದ ಮತ್ತು ಪುಷ್ಪಕೋತ್ಸವಗಳ ವಿಸ್ತಾರವಾದ ವರ್ಣನೆ ಇದೆ. ಚೆನ್ನಬಸವಣ್ಣನ ಉತ್ತಮ ಲೀಲೆಗಳು, ರಾಜರ ಆಸ್ಥಾನ ವರ್ಣನೆ, ನಗರ ಮತ್ತು ದೇಶಗಳ ವರ್ಣನೆ, ಗುರುವಾದ ಚೆನ್ನಬಸವೇಶ್ವರನು ಸಿದ್ಧರಾಮಣ್ಣನಿಗೆ ಮಾಡಿದ ಶಿವತತ್ತ್ವೋಪದೇಶ, ಪರಮೇಶ್ವರನು ಒಂದೇ ಕಾಲಿನಲ್ಲಿ ನಿಂತುಕೊಂಡು ನರ್ತಿಸಿದ ಲೀಲೆ ಮುಂತಾದುವನ್ನು ಅನುಕ್ರಮದಲ್ಲಿ ರಚಿಸುತ್ತೇನೆ.

CC-0. Jangamwadi Math Collection. Digitized by eGangotri

ಪರಮಸೋಮಂ ವೃಷಭಯಾನಮುರುಲಿಂಗಮುಂ
ದಿರದರ್ಧನಾರೀಶನಜಶಿರಚ್ಛೇದಮುಂ
ದುರುತರದ ಭಿಕ್ಷಾಟನಂ ದಕ್ಷಿಣಾಮೂರ್ತಿ ವಿಷ್ಣುಕಂಕಾಳಸುಧರ
ಗರಳಧರನಿಂದುಧರನಾ ಜಲಂಧರನ ಸಂ
ಹರಣಮಾ ಚಕ್ರದಾನಂ ಗಜಾಸುರಮಥನ
ಮಿರದೆ ದಕ್ಷಾಧ್ವರಂ ಹರಿಹರಂ ಕಾಮದಹನಂ ಶಿವೆಯ ಕಲ್ಯಾಣವು ೩೮

ವರಕುಮಾರೋತ್ಪತ್ತಿ ತಾರಕಾಸುರನ ಸಂ
ಹರಣಮಾ ತ್ರಿಪುರದಹನಂ ವಸಂತೋತ್ಸಾಹ
ಮುರುತರದ ಗಂಗಾಧರಂ ಬಳಿಕ್ಕಂಧಕಾಸುರಹರಂ ಕಾಲದಹನಂ
ಪರಮಸುಖವಹ ಮೂರ್ತಿಯರ್ಜುನಗೆ ಪಾಶುಪತ
ಶರವಿತ್ತ ಲೀಲೆಯಾ ಸೋಮಸೂರ್ಯಾನ್ವಯಂ
ಹರಶರಣಚರಿತೆ ದೀಕ್ಷಾವಿಧಾನಂ ಷಟ್ಸ್ಥಲಂ ಸುಕಾಲಜ್ಞಾನವು ೩೯

ಇಂತಿವೆಲ್ಲಂ ಚೆನ್ನಬಸವ ಪೌರಾಣದಾ
ದ್ಯಂತ ಸತ್ಕಥೆಯ ಸೂಚನೆಯಿದು ಪರಮಸುಖ
ಸಂತಸದಿ ಪೇಳ್ದರ್ಗೆ ಕೇಳ್ದರ್ಗೆ ಭಕ್ತಿಯಿಂ ಬರೆದೋದಿ ಪರಿಶಿದರ್ಗೆ
ಸಂತತಂ ಸಕಲಸುಖಮುಂ ಸಕಲ ಭೋಗಮುನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನವರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೪೦

ಪೀಠಿಕಾ ಸಂಧಿ ಸಂಪೂರ್ಣ

೩೮. ಚಂದ್ರನನ್ನು ಶಿರದಲ್ಲಿ ಧರಿಸಿದುದು, ನಂದಿವಾಹನನಾದದ್ದು, ಉರುಲಿಂಗಲೀಲೆ, ಅರ್ಧನಾರೀಶ್ವರನಾದದ್ದು, ಬ್ರಹ್ಮನ ತಲೆಯನ್ನು ಕಡಿದದ್ದು, ಭಿಕ್ಷಾಟನ ಮಾಡಿದುದು, ದಕ್ಷಿಣಾಮೂರ್ತಿಯಾದದ್ದು, ವಿಷ್ಣುವಿನ ಅಸ್ಥಿಪಂಜರವನ್ನು ಧರಿಸಿದ ಲೀಲೆ, ನೀಲಕಂಠನಾದದ್ದು, ಚಂದ್ರಶೇಖರನು ಜಲಂಧರನನ್ನು ಸಂಹರಿಸಿದ್ದು, ವಿಷ್ಣುವಿಗೆ ಚಕ್ರಪ್ರಧಾನ ಮಾಡಿದ್ದು, ಗಜಾಸುರಮಥನ, ದಕ್ಷನ ಯಾಗವನ್ನು ನಾಶಮಾಡಿದ್ದು, ಹರಿಯನ್ನು ಭಂಗಿಸಿದ್ದು (?), ಕಾಮದಹನ, ಗಿರಿಜೆಯ ವಿವಾಹ, ೩೯. ಕುಮಾರಸ್ವಾಮಿಯ ಜನನ, ತಾರಕಾಸುರನ ಸಂಹಾರ, ತ್ರಿಪುರದಹನ, ವಸಂತೋತ್ಸಾಹ, ಗಂಗೆಯನ್ನು ಧರಿಸಿದ್ದು, ಅಂಧಕಾಸುರ ಸಂಹಾರ, ಕಾಲದಹನ, ಸುಖವಹಮೂರ್ತಿ ಲೀಲೆ, ಅರ್ಜುನನಿಗೆ ಪಾಶುಪತವನ್ನು ಕೊಟ್ಟದ್ದು, ಚಂದ್ರ-ಸೂರ್ಯರ ವಂಶಗಳ ವರ್ಣನೆ, ಶಿವಶರಣರ ಚರಿತ್ರೆಗಳು, ದೀಕ್ಷೆಯನ್ನು ಕೊಡುವ ವಿಧಾನ, ಷಟ್ಸ್ಥಲ ತತ್ತ್ವ, ಕಾಲಜ್ಞಾನದ ರಹಸ್ಯಗಳು, ೪೦. ಈ ಎಲ್ಲವೂ ಸತ್ಕಥೆಯಾದ ಚೆನ್ನಬಸವ ಪುರಾಣದಲ್ಲಿ ಮೊದಲಿನಿಂದ ಕೊನೆಯವರೆಗೂ ಬರುವ ವಿಷಯಗಳ ಸೂಚನೆ. ಈ ಒಳ್ಳೆಯ ಕಥೆಯನ್ನು ಪರಮಸುಖ ಸಂತೋಷದಿಂದ ಹೇಳಿದವರಿಗೆ, ಕೇಳಿದವರಿಗೆ, ಭಕ್ತಿಯಿಂದ ಬರೆದವರಿಗೆ, ಓದಿದವರಿಗೆ, ವ್ಯಾಖ್ಯಾನ ಮಾಡಿದವರಿಗೆ ಪರಮೇಶ್ವರನ ಅವತಾರನಾದ ಚೆನ್ನಬಸವಣ್ಣನು ಪ್ರೀತಿಯಿಂದ ಯಾವಾಗಲೂ ಸಕಲ ಸುಖ-ಭೋಗ ಮತ್ತು ಅನಂತ ಸೌಭಾಗ್ಯವನ್ನು ಕೊಟ್ಟು ರಕ್ಷಿಸುವನು.

ಪೀಠಿಕಾ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಎರಡನೆಯ ಸಂಧಿ

ಸೂಚನೆ : ಪರಮ ಕೈಲಾಸಗಿರಿಶಿಖರದಾಸ್ಥಾನದೊಳ್
ಪರಮೇಷ್ಠಿ ವಿಷ್ಣು ಸುರ ನರ ಭುಜಂಗರ್ವೆರಸಿ
ಪರಮೇಶ್ವರಂ ಗಿರಿಜೆ ಸಹಿತಮತಿವಿಭವದಿಂದೊಡ್ಡೋಲಗದೊಳೆಸೆದನು

ಶ್ರೀಶ ದಿವಿಜೇಶ ವಾಗೀಶನತವರಪದಕು
ಶೇಶಯ ಸಮಸ್ತಲೋಕೇಶ ವಿನಮಿತ ಸುಪ್ರ
ಕಾಶ ಸನ್ನುತ ಪುಣ್ಯಕೋಶ ಪುಷ್ಕರ ವಿಪುಳಕೇಶಕೀನಾಶನಾಶ
ಆಶಾಸುವಸ್ತ್ರಭೂತೇಶ ಹಿಮಗಿರಿನಂದ
ನೇಶ ಪಾವನತರಸುವೇಷ ನಿಜಭಕ್ತಭವ
ಪಾಶಮಂ ಪರಿದು ಜಗದೀಶ ಪಂಪಾಪುರೀವಾಸ ನೀಂ ಸಲಹೆಮ್ಮನು ೧

ಈ ಕಥೆಗೆ ಮೊದಲಾವುದೆನಲೀಶ್ವರಾಜ್ಞೆಯೊಳು
ಲೋಕವೀರೇಳಜಾಂಡದೊಳೊಪ್ಪಲಲ್ಲಿ ಭೂ
ಲೋಕಮಿರ್ಪುದು ನೋಡಲೈವತ್ತು ಕೋಟಿ ಯೋಜನದಳತೆಯೊಳ್ ಚಕ್ರದ
ಆಕಾರದಂತದರೊಳೇಳ್ದ್ವೀಪಮನಿತುಮಂ
ಶ್ರೀಕರದಿ ಸಪ್ತಾಬ್ಧಿ ವೇಷ್ಟಿಸಿರೆ ಲವಣರ
ತ್ನಾಕರಂ ಮೊದಲ ಜಂಬೂದ್ವೀಪಮಂ ಬಳಸಿ ರಾಮಣೀಯಕಮಾದುದು ೨

ಸೂಚನೆ : ಪರಮೇಶ್ವರನು ಪಾರ್ವತಿಯ ಒಡಗೂಡಿ ಶ್ರೇಷ್ಠವಾದ ಕೈಲಾಸ ಪರ್ವತದ ಶಿಖರದಲ್ಲಿ ಬ್ರಹ್ಮ, ವಿಷ್ಣು, ದೇವತೆಗಳು, ಮಾನವರು ಮತ್ತು ನಾಗರು ಇವರೆಲ್ಲರನ್ನೂ ಕೂಡಿಕೊಂಡು ಬಹಳ ವೈಭವದಿಂದ ಒಡ್ಡೋಲಗದಲ್ಲಿ ವಿರಾಜಿಸಿದನು. ೧. ವಿಷ್ಣು, ಇಂದ್ರ, ಬ್ರಹ್ಮ ಇವರೆಲ್ಲರೂ ಸಮಸ್ತ ಲೋಕಗಳಿಗೂ ಒಡೆಯನಾದ ನಿನ್ನ ಪಾದಕಮಲಗಳಿಗೆ ನಮಸ್ಕರಿಸುತ್ತಾರೆ. ನೀನು ಸ್ವಯಂಪ್ರಕಾಶವುಳ್ಳವನು, ಪವಿತ್ರವಾದ ಪುಣ್ಯವನ್ನೇ ಸಂಪತ್ತಾಗಿ ಉಳ್ಳವನು. ಆಕಾಶವನ್ನೇ ನಿನ್ನ ಕೇಶರಾಶಿಯನ್ನಾಗಿ ಉಳ್ಳವನು. ಯಮನನ್ನು ಗೆದ್ದವನು, ದಿಗಂಬರ, ಭೂತಗಳ ಒಡೆಯ, ಗಿರಿರಾಜನ ಮಗಳಾದ ಪಾರ್ವತಿಯ ಪತಿ, ಮಂಗಳಕರವಾದ ರೂಪವುಳ್ಳವನು. ನಿನ್ನ ಭಕ್ತರ ಹುಟ್ಟು–ಸಾವುಗಳನ್ನು ನಾಶಮಾಡಿ, ಜಗದೀಶನಾದ ಪಂಪಾಪುರೀವಾಸನೇ, ನಮ್ಮನ್ನು ಕಾಪಾಡು. ೨. ಈ ಕಾವ್ಯದ ಕಥೆಗೆ ಆರಂಭ ಯಾವುದೆಂದರೆ : ಈಶ್ವರನ ಅಪ್ಪಣೆಯ ಪ್ರಕಾರ ಹದಿನಾಲ್ಕು ಬ್ರಹ್ಮಾಂಡಗಳಾದುವು. ಆ ಬ್ರಹ್ಮಾಂಡಗಳಲ್ಲಿ ಭೂಲೋಕವೂ ಒಂದು. ಅದು ನೋಡಲು ಐವತ್ತು ಕೋಟಿ ಯೋಜನದ ಅಳತೆಯಿಂದ ಚಕ್ರಾಕಾರವಾಗಿದೆ. ಈ ಭೂಲೋಕದಲ್ಲಿ ಏಳು ದ್ವೀಪಗಳಿವೆ. ಅವುಗಳನ್ನು ಏಳು ಸಮುದ್ರಗಳು ಸುತ್ತುಗಟ್ಟಿ ಶೋಭೆಯನ್ನುಂಟುಮಾಡಿವೆ. ಅವುಗಳಲ್ಲಿ ಒಂದಾದ ಲವಣಸಮುದ್ರವು



CC-0. Jangamwadi Math Collection. Digitized by eGangotri

ಮಕರ ಕರ್ಕಟ ಕಮಠ ಸಾಲೂರ ಕಿಂಚುಳಿಕ
ನಿಕರದಿಂ ತಿಮಿ ತಿಮಿಂಗಿಳ ಮುಖ್ಯ ಜಲಚರ
ಪ್ರಕರದಿಂ ಮೊಸಳೆ ನೀರಾನೆ ನೀರ್ವಾವು ನೀರುಡುಗಳ ಸಮೂಹದಿಂದೆ
ಅಕಳಂಕರತ್ನಂಗಳೋಳಿಯಿಂದೈತಪ್ಪ
ಸಕಲಭಂಗದ ಸುಳಿಯ ಸವ್ವಳಿಗಳಿಂದೊಳಗೆ
ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು ೩

ಅಡಿಗಡಿಗೆ ನಡೆವ ಪೇರ್ವಡಗುಗಳ ಬೆಡಗುಗಳ
ಘುಡಿಘುಡಿಸುತೇಳ್ವ ಮತ್ಸ್ಯಾಳಿಗಳ ಕೇಳಿಗಳ
ಬಿಡಬಿಡದೆ ನಡೆತಪ್ಪ ವೀಚಿಗಳ ರೋಚಿಗಳನುಗುಳ್ವ ನವರತ್ನಂಗಳ
ಎಡೆಯೆಡೆಯೊಳಿಡಿಕಿರಿದ ಡೋಣಿಗಳ ಶ್ರೇಣಿಗಳ
ಸಿಡಿಸಿಡಿದುರುಳ್ವ ಜಲಬಿಂದುಗಳ ಪೊಂದುಗಳ (?)
ತಡಿತಡಿಗಡರ್ವ ಜಲದೊತ್ತುಗಳ ಮುತ್ತುಗಳ ಪಡೆಪಿಂ ಕಡಲೆಸೆದುದು ೪

ಹರಿಯಳಿಯನಬುಜಜಂ ಮೊಮ್ಮನಿಂದಿರೆ ಕುವರಿ
ಸುರಗಂಗೆ ಸತಿಸುರರ ಪೊರೆವ ಚಂದ್ರಂ ಸುತಂ
ಸುರಪತಿಗೆ ಸಕಲಸಿರಿಯಿತ್ತು ಗಿರಿಜೆಯ ತಮ್ಮನಂ ಕಾಯ್ದನೆನುತಲುಬ್ಬಿ

ಜಂಬೂದ್ವೀಪವನ್ನು ಬಳಸಿ ಮನೋಹರವಾಗಿದೆ. ೩. ಆ ಸಮುದ್ರದಲ್ಲಿ ಮೊಸಳೆ, ಏಡಿ, ಆಮೆ, ಕಪ್ಪೆ, ಕಿಂಜುಳಿಕ ಮುಂತಾದ ಪ್ರಾಣಿಗಳ ಸಮೂಹವಿದೆ. ಮೀನು, ತಿಮಿಂಗಿಲ ಮುಂತಾದ ನೀರಿನಲ್ಲಿ ಚಲಿಸುವ ಪ್ರಮುಖ ಪ್ರಾಣಿಗಳ ಸಮೂಹವೂ ಅಲ್ಲಿದೆ ಮೊಸಳೆ, ನೀರಾನೆ, ನೀರುಹಾವು, ನೀರುಡ ಮುಂತಾದುವುಗಳ ಗುಂಪು ಅಲ್ಲಿದೆ. ಅನರ್ಘ್ಯವಾದ ವಜ್ರ ವೈಡೂರ್ಯ ಮುಂತಾದ ರತ್ನಗಳು ಅಲ್ಲಿವೆ. ಯಾವಾಗಲೂ ಚಲಿಸುವ ತೆರೆಯ ತುದಿಗಳಿಂದ ಕೂಡಿದ ಸುಳಿಗಳಿವೆ. ಒಳಗೆ ತಕಪಕನೆ ಕುದಿಯುವ ಬಡಬಾಗ್ನಿಯಿಂದ ಕೂಡಿ ಸಮುದ್ರವು ನೋಡಲು ಮನೋಹರವಾಗಿದೆ. ೪. ಅಲ್ಲಿ ಮತ್ತೆ ಮತ್ತೆ ಓಡಾಡುವ ದೊಡ್ಡ ಹಡಗುಗಳು ಇವೆ. ಆ ಹಡಗುಗಳು ಬಹಳ ಬೆಡಗನ್ನು ಉಂಟುಮಾಡುತ್ತಿವೆ. ಮೀನುಗಳು ಶಬ್ದ ಮಾಡುತ್ತ ಮೇಲೆದ್ದು ಆಟವಾಡು ತ್ತಿವೆ. ಸಮುದ್ರದ ತೆರೆಗಳು ಎಡೆಬಿಡದೆ ಅಪ್ಪಳಿಸುತ್ತಿವೆ. ನವರತ್ನಗಳು ಕಾಂತಿಯನ್ನು ಬೀರುತ್ತಿವೆ. ಸಮುದ್ರದ ಮೇಲೆ ಜಾಗವಿರುವೆಡೆಯಲ್ಲೆಲ್ಲಾ ದೋಣಿಗಳ ಸಾಲುಗಳಿಂದ ತುಂಬಿವೆ. ನೀರಿನ ಕಣಗಳು ಮೇಲೆ ಕೆಳಗೆ ಹಾರಿಬೀಳುತ್ತಿವೆ. ದಡಗಳಿಗೆ ನೀರಿನ ಅಲೆ ಗಳು ಒತ್ತುತ್ತಿವೆ. ಮುತ್ತುಗಳ ಕಾಂತಿಯಿಂದ ಸಮುದ್ರವು ರಾಜಿಸುತ್ತಿದೆ. ೫. ಸಮುದ್ರರಾಜನಿಗೆ ವಿಷ್ಣು ಅಳಿಯ, ಬ್ರಹ್ಮ ಮೊಮ್ಮಗ, ಲಕ್ಷ್ಮಿ ಮಗಳು, ದೇವ ಗಂಗೆಯು ಹೆಂಡತಿ, ದೇವತೆಗಳನ್ನು ಕಾಪಾಡುವ ಚಂದ್ರನೇ ಮಗ. 'ದೇವೇಂದ್ರನಿಗೆ ಸಕಲ ಸಂಪತ್ತನ್ನೂ ಕೊಟ್ಟೆ. ಗಿರಿಜೆಯ ತಮ್ಮನಾದ ಮೈನಾಕನನ್ನು ಕಾಪಾಡಿದೆ',

CC-0. Jangamwadi Math Collection. Digitized by eGangotri

ವರಮುನೀಶಂ ದಾಶರಥಿ ಜಾಮದಗ್ನಿಯರೊ
ಳಿರದೆ ಕಡುನೊಂದು ವಡಬಾಗ್ನಿಯಿಂದಳ್ಕುತಂ
ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿತಾಂ ಹೆಚ್ಚುಕುಂದಿನೊಳೆಸೆದುದು ೫

ಈ ತೆರದೊಳಬ್ಧಿ ತನ್ನಂ ಬಳಸಿರಲ್ ಕಾಶಿ
ಕೇತಾರ ಗಯೆ ನೀಲಕಂಠ ಶ್ರೀಶೈಲ ಸಂ
ಪೂತ ಗೋಕರ್ಣ ಪಂಪಾಕುರುಕ್ಷೇತ್ರಂಗಳೆಂಬ ಸುಕ್ಷೇತ್ರಂಗಳು
ಖ್ಯಾತಿಯಿಂ ತನ್ನೊಳೆಸೆದಿರಲಲ್ಲಿ ಸುರಮುನಿ
ವ್ರಾತಮತಿಧರ್ಮಾರ್ಥಕಾಮಮೋಕ್ಷಂಗಳನ
ತೀತತಪದಿಂ ಪಡೆವ ಪೆಂಪು ತನಗೆಸೆಯೆ ಜಂಬುದ್ವೀಪಮೊಪ್ಪಿರ್ದುದು ೬

ಸಂಗರದ ಸಿರಿಯಂತೆ ನವಖಂಡಮಯಮೊಪ್ಪ
ವಂಗದಂತಧಿಕ ವಿಷಯಾಳಿಮಯಮಂತರಿ
ಕ್ಷಾಂಗಣದೊಲುರುಸೌಮ್ಯಗುರುರಾಜಹಂಸತೇಜೋಮಯಂ ಋಷಿಗಳಂತೆ
ತುಂಗಕುಲಗೋತ್ರಶೋಭನಮಯಂ ಭೂಮಿಪಗ
ಣಂಗಳಂತೆಸೆವ ವಾಹಿನಿಮಯಂ ಕಾಮಿಯೊಲ್
ಪಿಂಗದಾಶಾವಲಂಬನಮೆನಿಸಿ ಮೆರೆವ ಜಂಬುದ್ವೀಪಮೊಪ್ಪಿರ್ದುದು ೭

ಎನ್ನುತ್ತ ಉಬ್ಬಿದೆ. 'ಅಗಸ್ತ್ಯ, ಶ್ರೀರಾಮ, ಪರಶುರಾಮರಿಂದ ವಿಶೇಷವಾಗಿ ನೊಂದೆನು. ಬಡಬಾಗ್ನಿಯಿಂದ ಅಳುಕುತ್ತ ಬಹಳ ಸೋಲನ್ನು ಅನುಭವಿಸಿದೆ' ಎಂದು ಸಮುದ್ರವು ಹೆಚ್ಚು ಕುಂದನ್ನನುಭವಿಸಿದೆ. ೬. ಈ ರೀತಿಯಾಗಿ ಲವಣಸಮುದ್ರವು ಜಂಬೂ ದ್ವೀಪವನ್ನು ಬಳಸಿದೆ. ಕಾಶಿ, ಕೇದಾರ, ಗಯೆ, ನೀಲಕಂಠ, ಶ್ರೀಶೈಲ, ಶ್ರೇಷ್ಠವಾದ ಗೋಕರ್ಣ, ಪಂಪಾಕ್ಷೇತ್ರ, ಕುರುಕ್ಷೇತ್ರ ಮುಂತಾದ ಪ್ರಸಿದ್ಧ ಪುಣ್ಯಕ್ಷೇತ್ರಗಳು ತನ್ನಲ್ಲಿವೆ. ಆ ಕ್ಷೇತ್ರಗಳಲ್ಲಿ ದೇವಮುನಿಗಳ ಸಮೂಹವು ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಘೋರ ತಪಸ್ಸಿನಿಂದ ಪಡೆಯುವ ಕೀರ್ತಿಯು ತನ್ನದು ಎಂಬಂತೆ ಜಂಬೂದ್ವೀಪವು ಕಂಗೊಳಿಸುತ್ತಿದೆ. ೭. ಸಿಂಗರಿಸಿಕೊಂಡ ಲಕ್ಷ್ಮಿಯಂತೆ ಒಂಬತ್ತು ಖಂಡಗಳು ಕಾಣುತ್ತಿದ್ದವು (ಯುದ್ಧದಲ್ಲಿ ಆದ ಹೊಸ ಮಾಂಸಖಂಡಗಳಂತೆ ಇತ್ತು.) ದೇಹದ ನಾನಾ ಭಾಗಗಳಂತೆ ಅನೇಕ ರಾಜ್ಯಗಳ ಸಮೂಹದಿಂದ ಕೂಡಿತ್ತು (ಇಂದ್ರಿಯವಿಷಯಗಳಾದ ಶಬ್ದ—ಸ್ಪರ್ಶಗಳಿಂದ ಕೂಡಿತ್ತು). ಆಕಾಶದ ಅಂಗಳದಂತೆ ಬಹಳ ಸೌಮ್ಯರಾದ ಗುರುಗಳ ಮತ್ತು ರಾಜಶ್ರೇಷ್ಠರ ತೇಜಸ್ಸಿನಿಂದ ಕೂಡಿತ್ತು (ಶ್ರೇಷ್ಠರಾದ ಬುಧ, ಬೃಹಸ್ಪತಿ, ಚಂದ್ರ, ಸೂರ್ಯ ಇವರ ತೇಜಸ್ಸಿನಿಂದ ಕೂಡಿತ್ತು). ಅಧಿಕ ಕೀರ್ತಿವಂತರಾದ ಋಷಿಗಳಂತೆ ಉನ್ನತವಾದ ಕುಲಪರ್ವತಗಳ ಸೌಂದರ್ಯದಿಂದ ಯುಕ್ತವಾಗಿತ್ತು (ಉತ್ತಮವಾದ ಕುಲಗೋತ್ರಗಳ ಸೌಭಾಗ್ಯದಿಂದ ಕೂಡಿತ್ತು). ರಾಜರುಗಳ ಸಮೂಹದಂತೆ ಕಾಣುವ ಅನೇಕ ನದಿಗಳಿಂದ ಕೂಡಿತ್ತು. (ಸೈನ್ಯದಿಂದ ಕೂಡಿತ್ತು). ಅಪಾರವಾದ ದಿಗ್‌ದಿಗಂತಗಳಿಗೆ ಈ ಜಂಬೂದ್ವೀಪ ಪ್ರಸರಿಸಿತ್ತು. (ಕಾಮಿಗಳಂತೆ ಹಿಂಗದ ಆಸೆಯನ್ನೇ

CC-0. Jangamwadi Math Collection. Digitized by eGangotri

ಇಂತು ತದ್ದ್ವೀಪದವನೀಮಧ್ಯದೊಳ್ ಭಗಣ
ಸಂತತಿಗಳೇ ಗೆಜ್ಜೆ ಚಂದ್ರಾರ್ಕಬಿಂಬಂಗ
ಳುಂ ತೋರ್ಪ ಕುಂಭಂಗಳದರ ಕೋಡ್ಗಲ್ಗಳೇ ಕೋಡ್ಗಳಾ ಕಂದರದೊಳು
ಅಂತ ರತ್ನಂಗಳೇ ಮಣಿಪೊರಜ ಕಳಧೌತ
ಕಾಂತಿ ಪೊಂಜೂಲೆನೆ ವಿರೂಪಾಕ್ಷನಡರೆ ಬೊ
ಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆನಲ್ ಕನಕಾಚಲಂ ಮೆರೆದುದು ೮

ಸುತ್ತಲುಂ ಮೇಲೆ ದಿಕ್ಪಾಲಕರ ನಗರಂಗ
ಳೊತ್ತೊತ್ತೆಯಿಂ ರುದ್ರ ವಿಷ್ಣು ಬ್ರಹ್ಮಾದಿಗಳ
ಪತ್ತನಂಗಳನಾಂತ ಪೆರ್ಮೆಯಿಂ ಝಗಝಗಿಸುವಾ ಮಹಾಕನಕಗಿರಿಯ
ಒತ್ತಿಲಿಹ ದಕ್ಷಿಣಾಶೆಯೊಳಂದು ಸಕಲ ದಿಗು
ಭಿತ್ತಿಯಂ ಬೆಳಗುತುಂ ಸರ್ವದೇವರ್ ಪೂಜಿ
ಸುತ್ತುಮಿಹ ಸ್ಫಟಿಕಸಂಘಟಿತಲಿಂಗವೊಯೆನಲ್ ಕೈಲಾಸಗಿರಿ ಮೆರೆದುದು ೯

ಸಾಹಸ್ರಕೋಟಿ ಶುಭ್ರಾಂಶುಗಳ ರುಚಿರಸಮ
ನಾಹರು ಹಿಳಿದು ತನ್ನಯ ಕಳೆಯಕೂಡಿ ಕ
ಣ್ಗಾಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ ಸಕಲ ಶಿವಶಾಸ್ತ್ರಂಗಳ

ಅವಲಂಬನವಾಗಿ ಪಡೆದಿತ್ತು). ಈ ರೀತಿಯಾಗಿ ಜಂಬೂದ್ವೀಪ ಮನೋಹರವಾಗಿತ್ತು. ೮. ಆ ಜಂಬೂದ್ವೀಪದ ಮಧ್ಯದಲ್ಲಿ ಕನಕಾಚಲವು, ವಿರೂಪಾಕ್ಷೇಶ್ವರನು, ಆರೋಹಿಸಲಿಕ್ಕೆಂದು ಬ್ರಹ್ಮನೇ ಸೃಷ್ಟಿಸಿ ಸಿದ್ಧಗೊಳಿಸಿದ ಪಟ್ಟದಾನೆಯೋ ಎಂಬಂತೆ ಮೆರೆಯುತ್ತಿದ್ದಿತು. ನಕ್ಷತ್ರಸಮೂಹವೇ ಅದರ ಗೆಜ್ಜೆಗಳು ; ಚಂದ್ರ ಸೂರ್ಯರೇ ಅದರ ಕುಂಭಗಳು ; ಕೋಡುಗಲ್ಲುಗಳೇ ಆ ಆನೆಯ ಕೋಡುಗಳು : ಅದರ ಕಣಿವೆ ಗುಹೆಗಳಲ್ಲಿರುವ ರತ್ನಗಳೇ ಅದರ ಮಣಿಖಚಿತವಾದ ಹಗ್ಗಗಳು ಮತ್ತು ಪರಿಶುದ್ಧವಾದ ಕಾಂತಿಯಿಂದ ಹೊಳೆಯುತ್ತಿದ್ದ ಹೊನ್ನಕಾಂತಿಯೇ ಆ ಆನೆಯ ಮೈಗೆ ಹೊದಿಸಿದ್ದ ಚಿನ್ನದ ಗೌಸು ಎಂಬಂತಿದ್ದಿತು. ೯. ಸುತ್ತಲೂ ಮೇಲೆ ದಿಕ್ಪಾಲಕರ ಪಟ್ಟಣಗಳು. ಅವುಗಳಿಗೆ ಒತ್ತೊತ್ತಾಗಿ ಶಿವ, ವಿಷ್ಣು, ಬ್ರಹ್ಮಾದಿಗಳ ಪಟ್ಟಣಗಳೂ ಅಲ್ಲಿವೆ. ಈ ನಗರಗಳನ್ನೆಲ್ಲ ಹೊಂದಿದ ಹಿರಿಮೆಯಿಂದ ಆ ಮಹಾಕನಕಗಿರಿ ಹೊಳೆಯುತ್ತಿದೆ. ಅದರ ಪಕ್ಕದಲ್ಲಿ ದಕ್ಷಿಣ ಭಾಗದಲ್ಲಿ ಸಕಲ ದಿಕ್ಕುಗಳನ್ನೂ ಬೆಳಗುತ್ತ ಎಲ್ಲ ದೇವರುಗಳೂ ಪೂಜಿಸುವ ಸ್ಫಟಿಕಶಿಲೆಯಿಂದ ಮಾಡಿದ ಲಿಂಗವೋ ಎನ್ನುವಂತೆ ಕೈಲಾಸಗಿರಿಯು ಮೆರೆಯುತ್ತಿದೆ. ೧೦. ಸಹಸ್ರಕೋಟಿ ಚಂದ್ರರ ಕಿರಣಗಳ ಮನೋಹರತೆಗೆ ಸಮನಾದ ಶಿವನು ತನ್ನ ತೇಜಸ್ಸನ್ನೆಲ್ಲ ಹಿಂಡಿ ತನ್ನ ಕಣ್ಣಿನ ರಕ್ಷಣೆಯಲ್ಲಿಯೇ ಗಟ್ಟಿ ಮಾಡಿದ ಪುಣ್ಯದ ಗಡಿಗೆಯೋ, ಎಲ್ಲ ಶಿವಶಾಸ್ತ್ರಗಳ ಲಕ್ಷಣಗಳಿಗೆ ಸರಿಯಾಗಿ

CC-0. Jangamwadi Math Collection. Digitized by eGangotri

ದೇಹನಿರ್ಮಳತೆಯೊಬ್ಬುಳಿಯಿಂ ಶಿವಗೆ ಸ
ನ್ಮೋಹಿತೋದ್ಯತ್ಶೀತವಾದುದೋಯೆಂತೆಂತು
ಮೂಹಿಸುವೊಡರಿದೆನಲ್ ಕೈಲಾಸಪರ್ವತಂ ರಾವಣೀಯಕವಾದುದು ೧೦

ತೋರ್ವ ಕಣಿಯೆಲ್ಲ ಪರುಷದ ಕಣಿಗಳಗ್ರದಿ ಪೊ
ಗರ್ವಡೆವ ರತ್ನಂಗಳೆಲ್ಲ ಚಿಂತಾರತ್ನ
ಮುರ್ವಿ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಲ್ಲಿ ಗಿರಿಸಾನುವಿಂದೆ
ಸೋರ್ವ ನಿರ್ಝರರಸಂ ಸಿದ್ಧರಸಮಲ್ಲಿರ್ಪ
ಸರ್ವ ಮೃಗಮುಪುಣ್ಯಮೃಗಕುಲಂ ಪೊಗಳೆ ಸಾ
ಸಿರ್ವರಹಿಪರ್ ನೆರೆಯರೆಂದೆನಲು ಕೈಲಾಸಪರ್ವತಂ ಕಣ್ಗೆಸೆದುದು ೧೧

ಆ ಗಿರಿಯ ಮೇಗೆ ರಂಜಿಪುದತುಳ ವೀರಶೈ
ವಾಗಮದ ಕೋಂಟೆಯಿಂದಮೃತದಗಳಿಂದೆ ವೈ
ರಾಗದಾಳ್ವೇರಿಯಿಂ ಜ್ಞಾನಕೇತುಗಳಿಂದೆ ಭಕ್ತಿಗಳ ತೆನೆಗಳಿಂದೆ
ಮೇಗೆಸೆವ ಮುಕುತಿಮುಗಿಲಟ್ಟಳೆಗಳಿಂ ಶ್ರುತಿಯ
ಬಾಗಿಲ್ಗಳಿಂ ಸತ್ಯದುನ್ನತ ಕದಂಗಳಿಂ
ಬಾಗೆ ಪುಣ್ಯಂಗಳ ನಿವಾಸಮಘನಾಶಮಾ ಕೈಲಾಸವಾಸಮುಂದು ೧೨

ಉಂಟಾದ ದೇಹದ ನಿರ್ಮಲವಾದ ಸಮೂಹದಿಂದ ಶಿವನಿಗೆ ಆಕರ್ಷಣೆಯುಂಟು ಮಾಡುವ ಪ್ರಕಾಶಮಾನವಾದ ಶೀತವೋ ಎಂದು ಊಹಿಸಲು ಕೂಡಾ ಅಸಾಧ್ಯವಾದುದು ಎನ್ನುವಂತೆ ಕೈಲಾಸಪರ್ವತವು ಮನೋಹರವಾಗಿದೆ. ೧೧. ಅಲ್ಲಿ ಕಾಣುವ ಗಣಿಗಳೆಲ್ಲ ಸ್ಪರ್ಶಶಿಲೆಯ ಗಣಿಗಳೆ. ಹೆಚ್ಚಾಗಿ ಕಾಂತಿಯನ್ನು ಹೊಂದಿದ ರತ್ನಗಳೆಲ್ಲ ಚಿಂತಾರತ್ನಗಳೆ, ಭೂಮಿಯಲ್ಲಿ ಬೆಳೆದಿರುವ ಎಲ್ಲ ಮರಗಳೂ ಕಲ್ಪವೃಕ್ಷಗಳು. ಅಲ್ಲಲ್ಲಿ ಪರ್ವತದ ತಪ್ಪಲುಗಳಲ್ಲಿ ಝರಿಗಳಿಂದ ಹರಿಯುವ ನೀರೆಲ್ಲ ಸಿದ್ಧರಸ, ಅಲ್ಲಿರುವ ಎಲ್ಲ ಪ್ರಾಣಿಗಳೂ ಪುಣ್ಯದಿಂದ ಕೂಡಿದ ಪ್ರಾಣಿಸಮೂಹ. ಇವೆಲ್ಲವನ್ನೂ ಹೊಗಳಲು ಸಾವಿರ ಆದಿಶೇಷರುಗಳಿಂದಲೂ ಸಾಧ್ಯವಿಲ್ಲ ಎಂಬುವಂತೆ ಕೈಲಾಸಪರ್ವತವು ಕಣ್ಣಿಗೆ ಸುಂದರವಾಗಿ ಕಾಣುತ್ತಿದೆ. ೧೨. ಆ ಗಿರಿಯ ಮೇಲೆ ಶ್ರೇಷ್ಠವಾದ ವೀರಶೈವಾಗಮವೇ ಕೋಟೆಯಂತೆ ಪ್ರಕಾಶಮಾನವಾಗಿತ್ತು. ಆ ಕೋಟೆಯ ಸುತ್ತ ಅಮೃತದ ಕಂದಕವಿದೆ. ವೈರಾಗ್ಯವೇ ಆ ಕೋಟೆಯ ಗೋಡೆಯಂತಿದೆ. ಅಲ್ಲಲ್ಲಿ ಜ್ಞಾನವೆಂಬ ಬಾವುಟಗಳಿವೆ. ಭಕ್ತಿಯೆಂಬ ಕೊತ್ತಳಗಳಿವೆ. ಎಲ್ಲಕ್ಕಿಂತ ಹೆಚ್ಚಾಗಿ ಮುಕ್ತಿಯೆಂಬ ಎತ್ತರವಾದ ಬುರುಜುಗಳಿವೆ. ವೇದವೆಂಬ ಬಾಗಿಲುಗಳಿವೆ. ಸತ್ಯವೇ ಅದರ ಶ್ರೇಷ್ಠವಾದ ಕದಗಳು. ಇವೆಲ್ಲವುಗಳಿಂದ ಕೂಡಿ ಕೈಲಾಸವಾಸವು ಪಾಪನಾಶ ಮತ್ತು ಪುಣ್ಯಗಳ ಮನೆ

CC-0. Jangamwadi Math Collection. Digitized by eGangotri

ಹರುಷದಿಂದಲ್ಲಿರ್ಪನೀಶನಹಿಭೂಷನಗ
ವರಜೇಶನುಗ್ರಭವಭಯವಿನಾಶಂ ದಿವಾ
ಕರಕೋಟಿಸುಪ್ರಕಾಶಂ ಮುಕ್ತಿಕೋಶಂ ಶಶಾಂಕಲೇಖಾವತಂಸಂ
ಸುರರಕ್ಷನಸುರಸಂಹಾರದಕ್ಷಂ ದಕ್ಷ
ಕರಿಕುಂಭವಿದಳನಾಪೇಕ್ಷ ಹರ್ಯಕ್ಷನಾ
ಹರಿಯಕ್ಷಿ ಪೂಜಿತಪದಂ ತ್ರಿಯಕ್ಷಂ ವಿರೂಪಾಕ್ಷಂ ವಿನೋದದಿಂದೆ ೧೩

ಪ್ರತಿದಿನಂ ಬಂದೋಲಗಂಗೊಡಂತೆ ಹರಿಯಜರ
ಸ್ತುತಿಯನಾಲಿಸುತೆ ನಾನಾ ಲೋಕಪಾಲಕರ
ಸ್ಥಿತಿಯಂ ವಿಚಾರಿಸುತೆ ಸದ್ಭಕ್ತ ಭಕ್ತಿಗೊಲಿಯುತ್ತೆ ಗಿರಿಜಾತೆ ಸಹಿತ
ಅತಿವಿಭವದಿಂದೆಸೆದು ನಿಜನಿಜಸ್ಥಳಕೆ ಶ್ರೀ
ಪತಿಮುಖ್ಯರಂತರಂಗಳನರಿದು ಕಳುಪಿ ಪಶು
ಪತಿ ವಿಮಲ ಸುಖಸಂಕಥಾ ವಿನೋದದೊಳೆ ಜಗವಂ ಪಾಲಿಸುತ್ತಿರ್ದನು ೧೪

ಅಂತೊಂದು ದಿನವೆಂದಿನಂತೆ ಶಿವನೋಲಗಕ
ನಂತ ವಿಷ್ಣುಗಳ ಗಣಿತಾಂಬುಜಭವರ್ ಸುರಪ
ಸಂತತಿ ಶಿಖಿವ್ರಜಂ ಯಮಸಮೂಹಂ ನಿರುತಿನಿಕರಮಾ ವರುಣವರ್ಗಂ

ಯಾಗಿದೆ. ೧೩. ಅಲ್ಲಿ ಈಶ್ವರನು ಸಂತೋಷದಿಂದ ಇದ್ದಾನೆ. ಅವನು ಸರ್ಪಗಳಿಂದ ಅಲಂಕೃತನಾಗಿದ್ದಾನೆ. ಗಿರಿಸುತೆಯ ಪತಿ. ಭಯಂಕರವಾದ ಜನನ ಮರಣಗಳ ಭಯ ವನ್ನು ನಾಶಮಾಡುವವನು. ಕೋಟಿ ಸೂರ್ಯರ ಪ್ರಕಾಶವುಳ್ಳವನು. ಮುಕ್ತಿಯನ್ನು ಸಂಪತ್ತನ್ನಾಗಿ ಉಳ್ಳವನು. ಅರ್ಧಚಂದ್ರನನ್ನು ಆಭರಣವನ್ನಾಗಿ ಉಳ್ಳವನು. ದೇವತೆಗಳನ್ನು ಕಾಪಾಡುವವನು. ರಾಕ್ಷಸರನ್ನು ಸಂಹರಿಸುವುದರಲ್ಲಿ ದಕ್ಷನಾದವನು. ದಕ್ಷನೆಂಬ ಆನೆಯ ಕುಂಭಸ್ಥಳವನ್ನು ಭೇದಿಸುವುದರಲ್ಲಿ ಸಿಂಹದಂತವನು. ವಿಷ್ಣುವಿನ ಕಣ್ಣುಗಳಿಂದ ಪೂಜಿಸಿಕೊಂಡ ಪಾದವುಳ್ಳವನು. ಇಂತಹ ತ್ರಿನೇತ್ರನಾದ ವಿರೂಪಾಕ್ಷನು. ವಿನೋದದಿಂದ ೧೪. ಪ್ರತಿದಿನವೂ ಬಂದು ಓಲಗವನ್ನು ಕೊಡುತ್ತಿದ್ದನು. ವಿಷ್ಣು ಮತ್ತು ಬ್ರಹ್ಮರ ಹೊಗಳಿಕೆಯನ್ನು ಕೇಳುತ್ತಿದ್ದನು. ನಾನಾ ಲೋಕರಕ್ಷಕರ ಕಷ್ಟಸುಖ ಗಳನ್ನು ವಿಚಾರಿಸುತ್ತಿದ್ದನು. ಸದ್ಭಕ್ತರ ಭಕ್ತಿಗೆ ಒಲಿಯುತ್ತಿದ್ದನು. ಪಾರ್ವತಿಯ ಸಂಗಡ ಅತಿವೈಭವದಿಂದ ಮೆರೆಯುತ್ತ, ವಿಷ್ಣು ಮೊದಲಾದ ಇತರ ಮುಖ್ಯಸ್ಥರುಗಳ ಅಂತರಂಗವನ್ನು ತಿಳಿದುಕೊಂಡು ಅವರವರ ವಾಸಸ್ಥಾನಕ್ಕೆ ಕಳಿಸುತ್ತಿದ್ದನು. ಈ ರೀತಿ ಯಾಗಿ ಪಶುಪತಿಯಾದ ಶಿವನು ಮಂಗಳಸೌಖ್ಯಗಳನ್ನುಂಟುಮಾಡುವ ಕಥಾಕಾಲಕ್ಷೇಪ ಗಳಿಂದ ವಿನೋದದಿಂದ ವಿಶ್ವವನ್ನು ಕಾಪಾಡುತ್ತಿದ್ದನು. ೧೫. ಆ ರೀತಿಯಲ್ಲಿ ಒಂದು ದಿವಸ ಎಂದಿನಂತೆ ಶಿವನ ಓಲಗಕ್ಕೆ ಅನಂತ ಲೋಕಗಳ ವಿಷ್ಣುಗಳು. ಅಸಂಖ್ಯಾತ ಬ್ರಹ್ಮರು, ದೇವೇಂದ್ರರು, ಅಗ್ನಿಗಳು, ಯಮಧರ್ಮರುಗಳ ಗುಂಪು, ನೈರುತ್ಯ ದಿಕ್ಕಿನ ಅಧಿಪತಿಗಳ ಗುಂಪು, ವರುಣದೇವತೆಗಳ ವರ್ಗ, ಅದೇ ರೀತಿಯಲ್ಲಿ ವಾಯುದೇವತೆಗಳ

CC-0. Jangamwadi Math Collection. Digitized by eGangotri

ಮುಂತೆ ವಾಯು ನಿಕಾಯಮುಂ ಕುಬೇರೌಘಮೋ
ರಂತೀಶವಿಸರಂ ಗರುತ್ಮಂ ಮರಾಳಂ ಗ
ಜಂ ತಗರ್ ಕೋಣಂ ನರಂ ನೆಗಳೆರಳೆ ಕುದುರೆಯೆತ್ತುಗಳೊಳ್ಪೆತಂದುದು ೧೫

ಸುಮನೋಗಣಂ ರಾಕ್ಷಸಸ್ತೋಮಮುಂ ಯಕ್ಷ
ಸಮುದಯಂ ಕಿನ್ನರವ್ಯೂಹಮುಂ ಗಂಧರ್ವ
ಸಮಿತಿ ಕಿಂಪುರುಷತತಿ ವಿದ್ಯಾಧರಾಳಿಯುಂ ಸಿದ್ಧಸಂಹತಿ ಗರುಡರ
ಸಮುದಾಯಮುಂ ಮಯೂರರ ನೆರವಿ ಗುಹ್ಯಕರ
ಸಮವಾಯಮುರಗವೃಂದಂ ಪಿಶಾಚೋತ್ಕರಂ
ಕ್ರಮದಿಂದೆ ಮಾನವಚಯಂ ರಾಗದಿಂದೀಶನೋಲಗಕೆ ಬರುತಿರ್ದುದು ೧೬

ತವಕದಿಂ ದ್ವಾದಶಾರ್ಕರ ಗೊಂದಣಂ ಮಹೋ
ತ್ಸವದೊಳೇಕಾದಶ ಮಹೇಶ್ವರರ ಹೊರಳಿ ವೈ
ಭವದೆ ನಾನಾ ಗ್ರಹಂಗಳ ತಂಡಮೊಲವಿಂ ಬಹ ನವಬ್ರಹ್ಮರೊಗ್ಗು
ಸುವಿಲಾಸದಿಂದಷ್ಟವಸುಗಳ ತೆರಳ್ಕೆ ಘನ
ಜವದಿಂದೆ ಸಪ್ತಋಷಿಗಳ ನೆರವಿ ಹರುಷದಿಂ
ತವೆ ಚತುರ್ದಶ ಮನುಗಳೊತ್ತೊತ್ತೆಯಾ ಶಿವಾಧವನೋಲಗಕೆ ಬಂದುದು ೧೭

ಸಮೂಹ, ಕುಬೇರರುಗಳ ಸಮೂಹ, ಸಾಲಾಗಿ ಕ್ರಮವಾಗಿ ಬರುವ ಈಶ್ವರ ದೇವತೆಗಳು, ತಮ್ಮ ವಾಹನಗಳಿಂದ ಗರುಡರು, ಹಂಸಗಳು, ಆನೆಗಳು, ಟಗರುಗಳು, ಕೋಣಗಳು, ಮನುಷ್ಯರು, ಮೊಸಳೆಗಳು, ಜಿಂಕೆಗಳು, ಕುದುರೆಗಳು, ಎತ್ತು ಮುಂತಾದ ವಾಹನಗಳ ಮೇಲೆ ಬಂದರು. ೧೬. ಈಶ್ವರನ ಸಭೆಗೆ ಪ್ರೀತಿಯಿಂದ ದೇವತೆಗಳು, ರಾಕ್ಷಸರು, ಯಕ್ಷರು, ಕಿನ್ನರರು, ಗಂಧರ್ವರು, ಕಿಂಪುರುಷರು, ವಿದ್ಯಾಧರರು, ಸಿದ್ಧರು, ಗರುಡರು, ಮಯೂರರು ಎಂಬ ಸ್ವರ್ಗವಾಸಿಗಳು ಕುಬೇರಾನುಚರರು, ನಾಗರು, ಪಿಶಾಚಿಗಳು ಇವರೆಲ್ಲರ ಸಮೂಹದೊಂದಿಗೆ ಅನುಕ್ರಮವಾಗಿ ಮಾನವರ ಸಮೂಹವೂ ಬರುತ್ತಿದ್ದಿತು. ೧೭. ಆ ಶಿವನ ಓಲಗಕ್ಕೆ ತ್ವರಿತದಿಂದ ಹನ್ನೆರಡು ಮಂದಿ ಸೂರ್ಯರು, ಬಹಳ ಉತ್ಸಾಹದಿಂದ ಹನ್ನೊಂದು ಮಂದಿ ಮಹೇಶ್ವರರು, ಸಡಗರದಿಂದ ನಾನಾ ಗ್ರಹಗಳ ತಂಡವು ಬಂದಿತು. ಪ್ರೀತಿಯಿಂದ ಒಂಬತ್ತು ಜನ ಬ್ರಹ್ಮರು, ಸಂಭ್ರಮದಿಂದ ಎಂಟು ಜನ ವಸುಗಳ ಸಮೂಹ, ಬಹಳ ವೇಗವಾಗಿ ಸಪ್ತ ಋಷಿಗಳ ಗುಂಪು ಬಂದಿತು. ಗುಂಪು ಗುಂಪಾಗಿ ಬಹಳ ಸಂತೋಷದಿಂದ ಹದಿನಾಲ್ಕು ಜನ ಮನುಗಳೂ ಅಲ್ಲಿಗೆ

CC-0. Jangamwadi Math Collection. Digitized by eGangotri

ತರತರಂಬಿಡಿದು ಸಂಭ್ರಮದಿಂದೆ ರೋಷಭಾ
ಸ್ಕರ ಭರದ್ವಾಜ ಮಾಂಡವ್ಯ ಮಾರ್ಕಂಡೇಯು
ವರರೋಮಜ ವ್ಯಾಸ ಬಕದಾಲ್ಭ್ಯ ಶುಕ ಪರಾಶರ ಭೃಗುವಗಸ್ತ್ಯ ಮೈತ್ರಿ
ವರವಾಲಖಿಲ್ಯ ಗಾಲವ ಗಾರ್ಗ್ಯ ದೂರ್ವಾಸ
ಶರಭ ಕೌಂಡಿನ್ಯ ಮುದ್ಗಲ ಪುಷ್ಪದತ್ತ ಭಾ
ಗುರಿ ಸನಕ ನಾರದ ಸನತ್ಕುಮಾರಾದಿ ಮುನಿವರರ್ವೈದೆ ಬರುತಿರ್ದರು ೧೮

ಸಿರಿ ಸರಸ್ವತಿ ಶಚಿಯಹಲ್ಯೆ ಲೋಪಾಮುದ್ರೆ
ಯರುಮರುಂಧತಿ ಮುಖ್ಯಪುಣ್ಯಾಂಗನಾಜನಂ
ಸುರಸೆಯೂರ್ವಸಿ ರಂಭೆ ಮೇನಕೆ ತಿಲೋತ್ತಮಾದ್ಯಮರವೇಶ್ಯಾಸಮೂಹಂ
ಪರಮಜಾಹ್ನವಿ ಸರಸ್ವತಿ ಕುಮುದ್ವತಿ ಪುಣ್ಯ
ಚರಿತೆ ಕಾವೇರಿ ಗೋದಾವರಿಗಳೆಂದೆಂಬ
ತರತರದ ನದ್ಯಂಗನಾಜನಂ ಶಿವನೋಲಗಕ್ಕೆ ನಡೆತರುತಿರ್ದುದು ೧೯

ರಾಗದಿಂ ಸಪ್ತಮಾತೃಕೆಯರಾ ಚೌಷಷ್ಟಿ
ಯೋಗಿನಿಯರಷ್ಟದಿಕ್ಸತಿಯರಶ್ವಿನಿಯಾದಿ
ಯಾಗಿರ್ದ ತಾರಾಂಗನೆಯರಖಿಳ ರುದ್ರಕನ್ನಿಕೆಯರತಿನಿಬಿಡಮಾದ
ನಾಗಕನ್ಯೆಯರಷ್ಟವಿಧ ಮಹಾಲಕ್ಷ್ಮಿಯರ್
ಭೂಗಗನಲೋಕಂಗಳಬಲಾಜನಂಗಳಿಂ
ಬಾಗಿ ಪಾರ್ವತಿಯ ಸಮ್ಮುಖದೊಳತಿಭಕ್ತಿಯಿಂ ನಿಂದಿರ್ದರೇವೇಳ್ವೆನು ೨೦

ಆಗಮಿಸಿದರು. ೧೮. ಸಾಲುಸಾಲಾಗಿ ಸಂಭ್ರಮದಿಂದ ರೋಷಭಾಸ್ಕರರಾದ ಭರದ್ವಾಜ, ಮಾಂಡವ್ಯ, ಮಾರ್ಕಂಡೇಯ, ಶ್ರೇಷ್ಠನಾದ ರೋಮಜಮುನಿ, ವ್ಯಾಸ, ಬಕದಾಲ್ಭ್ಯ, ಶುಕ, ಪರಾಶರ, ಭೃಗು, ಅಗಸ್ತ್ಯ, ಮೈತ್ರಿ, ಶ್ರೇಷ್ಠನಾದ ವಾಲಖಿಲ್ಯ, ಗಾಲವ, ಗಾರ್ಗ್ಯ, ದೂರ್ವಾಸ, ಶರಭ, ಕೌಂಡಿನ್ಯ, ಮುದ್ಗಲ, ಪುಷ್ಪದತ್ತ, ಭಾಗುರಿ, ಸನಕ, ನಾರದ, ಸನತ್ಕುಮಾರರೇ ಮೊದಲಾದ ಮುನಿಗಳು ಬರುತ್ತಿದ್ದರು. ೧೯. ಲಕ್ಷ್ಮಿ, ಸರಸ್ವತಿ, ಶಚಿ, ಅಹಲ್ಯೆ, ಲೋಪಾಮುದ್ರೆಯರೂ, ಅರುಂಧತಿ ಮುಂತಾದ ಮುಖ್ಯ ಪುಣ್ಯಾಂಗನೆಯರೂ, ಸುರಸೆ, ಊರ್ವಶಿ, ರಂಭೆ, ಮೇನಕೆ, ತಿಲೋತ್ತಮೆ ಮೊದಲಾದ ದೇವಲೋಕದ ವೇಶ್ಯೆಯರ ಸಮೂಹ, ಶ್ರೇಷ್ಠಳಾದ ಗಂಗೆ, ಸರಸ್ವತಿ, ಕುಮುದ್ವತಿ, ಪುಣ್ಯಚರಿತಳಾದ ಕಾವೇರಿ, ಗೋದಾವರಿಗಳೆಂಬ ನಾನಾ ನದಿಯ ಅಂಗನೆಯರು ಶಿವನ ಓಲಗಕ್ಕೆ ನಡೆದುಬರುತ್ತಿದ್ದರು. ೨೦. ಪ್ರೀತಿಯಿಂದ ಸಪ್ತಮಾತೃಕೆಯರು, ಅರವತ್ತನಾಲ್ಕು ಯೋಗಿನಿಯರು, ಅಷ್ಟದಿಕ್ಪಾಲಕರ ಪತ್ನಿಯರು, ಅಶ್ವಿನಿ ಮೊದಲಾದ ತಾರಾಂಗನೆಯರು, ಅಖಿಲ ರುದ್ರಕನ್ನಿಕೆಯರು, ನಾಗಕನ್ನಿಕೆಯರು, ಎಂಟು ವಿಧವಾದ ಮಹಾಲಕ್ಷ್ಮಿಯರು, ಭೂಮಿ ಮತ್ತು ಆಕಾಶಲೋಕಗಳ ಸ್ತ್ರೀಸಮೂಹ ಪಾರ್ವತಿಯ

CC-0. Jangamwadi Math Collection. Digitized by eGangotri

ಎಡಗಡೆಯೊಳಧಿಕತರವಿಭವದಿಂ ನಾರಿಯರ
ಗಡಣದಿಂ ಗಿರಿಜೆ ರಂಜಿಸಲಿಂದ್ರರುಗಳ ಸಂ
ಗಡಗೂಡಿ ವಿಷ್ಣು ತದ್ದಿಕ್ಕಿನೊಳ್ ಮೆರೆಯೆ ಸಂಯಮಿಗಳ ಸಮೂಹದಿಂದೆ
ಬಿಡದೆ ದಕ್ಷಿಣ ಭಾಗದೊಳ್ ನವಬ್ರಹ್ಮರುಗ
ಳೊಡಗೂಡಿ ಸರಸಿಜೋದ್ಭವನಿರಲ್ ವೇದಮು
ಗ್ಘಡಿಸೆ ತತ್ವಜ್ಞಾನರತ್ನಸಿಂಹಾಸನದೊಳೀಶ್ವರಂ ರಂಜಿಸಿದನು ೨೧

ಅಲುಗೆ ಭುಸ್ಸೆಂದೆಂಬ ಫಣಿಗಳಾಭರಣಮುವು
ತೊಳಗೆ ಶುದ್ಧಸ್ಫಟಿಕಸಂಕಾಶತನುಕಾಂತಿ
ಬೆಳಗೆ ದಿಗ್ಧರೆ ಪುಷ್ಕರಂಗಳಂ ಸ್ಮರಭಸ್ಮಧೂಳಿಯುಂಗದೊಳೆಸೆಯಲು
ಸುಳಿಪಲ್ಗಳುರೆ ಥಳತ್ಥಳಿಸೆ ಕೆಂಜೆಡೆ ಮಿರುಗೆ
ತಲೆಮಾಲೆಗಳ್ ಶೋಭೆವೆತ್ತು ರಂಜಿಸೆ ಮದನ
ಬಲಶಿಕ್ಷನಮಳಭಾಳಾಕ್ಷಂ ವಿರೂಪಾಕ್ಷನಿರ್ದಂ ವಿಲಾಸದಿಂದೆ ೨೨

ಆ ರುದ್ರಸಮ್ಮುಖದೊಳತಿವಿಭವದಿಂ ವಿಜಯ
ವೀರಭದ್ರಂ ನಂದಿ ಕಾರ್ತಿಕೇಯಂ ಭೃಂಗಿ
ವೀರವೀರಕನತುಳ ರೇಣುಕಂ ದಾರುಕಂ ಕಂಕಾಳಧರ ಗಣಪರು

ಮುಂದೆ ಅತಿಭಕ್ತಿಯಿಂದ ತಲೆಬಾಗಿ ನಿಂತದ್ದನ್ನು ಏನೆಂದು ಹೇಳಲಿ ! ೨೧. ಪರಶಿವನ ಎಡಭಾಗದಲ್ಲಿ ಬಹಳ ವೈಭವದಿಂದ ಹೆಂಗಸರ ಗುಂಪಿನಿಂದ ಕೂಡಿದ ಗಿರಿಜೆಯು ಮನೋಹರಳಾಗಿದ್ದಳು. ಅದೇ ದಿಕ್ಕಿನಲ್ಲಿ ಇಂದ್ರರುಗಳ ಸಮೂಹದಿಂದ ಕೂಡಿ ವಿಷ್ಣುವು ಮೆರೆಯುತ್ತಿದ್ದನು. ಇಂದ್ರಿಯನಿಗ್ರಹವುಳ್ಳವರ ಗುಂಪು ದಕ್ಷಿಣ ಭಾಗದಲ್ಲಿತ್ತು. ಅದೇ ಭಾಗದಲ್ಲಿ ಒಂಬತ್ತು ಜನ ಬ್ರಹ್ಮರುಗಳ ಜೊತೆಯಲ್ಲಿ ಬ್ರಹ್ಮನೂ ಇದ್ದನು. ವೇದಘೋಷಗಳು ನಡೆಯುತ್ತಿದ್ದುವು. ಆಗ ಈಶ್ವರನು ತತ್ವಜ್ಞಾನ ರತ್ನಸಿಂಹಾಸನದಲ್ಲಿ ಮೆರೆಯುತ್ತಿದ್ದನು. ೨೨. ಅವನ ಆಭರಣಗಳು ಬುಸುಗುಟ್ಟುವ ಸರ್ಪಗಳು. ಅವು ಅಲುಗಾಡುತ್ತಿವೆ. ಶುದ್ಧವಾದ ಸ್ಫಟಿಕಶಿಲೆಯನ್ನು ಹೋಲು ತ್ತಿರುವ ಅವನ ದೇಹದ ಕಾಂತಿ ಪ್ರಕಾಶಿಸುತ್ತಿತ್ತು. ಮನ್ಮಥನನ್ನು ಸುಟ್ಟ ಬೂದಿ ಅವನ ದೇಹದಲ್ಲಿ ಶೋಭಿಸುತ್ತಿತು. ಆಗ ಭೂಮಿ, ಆಕಾಶ, ದಿಕ್ಕುಗಳು ಅದರ ಪ್ರಕಾಶ ದಿಂದ ಬೆಳಗುತ್ತಿದ್ದುವು. ಅವನ ಬಿಳಿಯ ಹಲ್ಲುಗಳು ಥಳಥಳನೆ ಹೊಳೆಯುತ್ತಿದ್ದುವು, ಕೆಂಜಡೆಯು ಮಿರುಗುತ್ತಿದ್ದಿತು. ರುಂಡಮಾಲೆಗಳು ಶೋಭೆಗೊಂಡು ರಂಜಿಸುತ್ತಿದ್ದುವು. ಮನ್ಮಥನನ್ನು ಶಿಕ್ಷಿಸಿದ ಹಣೆಗಣ್ಣನ್ನುಳ್ಳ ವಿರೂಪಾಕ್ಷನು ವಿಲಾಸದಿಂದ ಇದ್ದನು. ೨೩. ಆ ರುದ್ರನ ಸಮ್ಮುಖದಲ್ಲಿ ಮಹಾವೈಭವದಿಂದ ವಿಜಯ ವೀರಭದ್ರ. ನಂದಿ. ಕಾರ್ತಿಕೇಯ, ಭೃಂಗಿ. ವೀರನಾದ ವೀರಕ, ಪರಾಕ್ರಮಿಯಾದ ರೇಣುಕ, ದಾರುಕ, ಕಂಕಾಳಧರ, ಗಣೇಶ ಮುಂತಾದವರೂ. ಭೈರವ. ಚಂಡೇಶ, ಕೂಷ್ಮಾಂಡ, ಅಂಗಾರಕ,

CC-0. Jangamwadi Math Collection. Digitized by eGangotri

ಭೈರವಂ ಚಂಡೇಶ ಕೂಷ್ಮಾಂಡನಂಗಾರ
ಧಾರ ಗಗನಾಂಗ ಧೂಮಾಂಗ ಶೈಲಾಂಗರೆಂ
ಬಾ ರೌದ್ರರೂಪಿನ ಮಹಾಗಣಂಗಳ್ ಮೆರೆವರೇನೆಂಬೆನಚ್ಚರಿಯನು ೨೩

ಕಡಲೇಳನೊಮ್ಮೆ ಸುರ್ರೆಂದು ಪೀರ್ವ ಮಹಾ
ವಡಬನಂ ಮಿಂಚುಬುಳುವೆಂಬ ವಾಸುಗಿಯ ಮಡಿ
ಪೆಡೆಯ ಕಿಳ್ತುಂ ಧರೆಯನೊಬ್ಬೆರಲೊಳಾಳ್ವ ಮುನಿದೊಡೆ ಸಕಲ ಜಗವನೊಮ್ಮೆ
ಸುಡುವ ಕನಕಾದ್ರಿಯಂ ಪಿಡಿಗುಂಡ ಮಾಳ್ಪ ನಭ
ದೆಡೆಯುಡುಗಳಂ ಕಳಲ್ಚುವ ಸೂರ್ಯಮಂಡಲವ
ನೊಡೆವ ಘುಡಿಘುಡಿಪ ಸಿಡಿಲಂ ಸೀಳ್ವ ರುದ್ರಗಣಮೆಡೆವಿಡದೆ ಕಣ್ಗೆಸೆದುದು ೨೪

ಪಂಚವದನಂಗಳಿಂ ದಶಭುಜಂಗಳೊಳೆ ತ್ರಿ
ಪಂಚನೇತ್ರಂಗಳಿಂ ವಿಷಕಂಠದಿಂ ದೆಸೆಗೆ
ಮಿಂಚುವೆಲುಮಾಲೆಯಿಂ ಪಿಡಿದಾ ತ್ರಿಶೂಲ ಡಮರುಗದೊಳಂ ಕೆಂಜೆಡೆಗಳ
ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರಚ
ರ್ಮಾಂಚಲದೊಳೈದೆ ಸಾರೂಪ್ಯದವರತ್ತಿತ್ತ
ಲುಂ ಚಲಿಸದಿರ್ಪ ಸಾಲೋಕ್ಯ ಸಾಮೀಪ್ಯದವರೆಸೆದಿರ್ದರೇನೆಂಬೆನು ೨೫

ಧಾರ, ಗಗನಾಂಗ, ಧೂಮಾಂಗ, ಶೈಲಾಂಗ ಎಂಬ ಬಹಳ ಭಯಂಕರವಾದ ರೂಪವನ್ನುಳ್ಳ ಮಹಾಗಣಗಳೂ ಮೆರೆಯುತ್ತಿದ್ದರು. ಅದರ ಆಶ್ಚರ್ಯವನ್ನು ಏನೆಂದು ಹೇಳಲಿ ? ೨೪. ಅಲ್ಲಿ ರುದ್ರಗಣಗಳ ಸಂದಣಿ ಕಣ್ಗೆ ಮನೋಹರವಾಗಿದೆ. ಅದು ಏಳು ಸಮುದ್ರಗಳನ್ನೂ ಒಂದೇ ಸಾರಿಗೆ ಸುರ್ರೆಂದು ಕುಡಿಯುವ ಹಾಗಿತ್ತು. ಭಯಂಕರವಾದ ಬಡಬಾಗ್ನಿಯನ್ನು ಮಿಂಚುಹುಳುವೆಂದು ಭಾವಿಸಿತ್ತು. ಭಾರದಿಂದ ಬಾಗಿದ ವಾಸುಕಿಯ ಹೆಡೆಯನ್ನು ಕಿತ್ತು ಭೂಮಿಯನ್ನೆಲ್ಲ ಒಂದೇ ಬೆರಳಿನಲ್ಲಿ ಆಳುವ ಶಕ್ತಿಯನ್ನು ಹೊಂದಿದ್ದಿತು. ಕೋಪ ಬಂದರೆ ಎಲ್ಲ ಜಗತ್ತನ್ನೂ ಸುಡುವ ಶಕ್ತಿಯನ್ನು ಹೊಂದಿದ್ದಿತು. ಕನಕಾದ್ರಿಯನ್ನು ಒಂದು ಮುಷ್ಟಿಯಲ್ಲಿ ಹಿಡಿಯಬಲ್ಲಂಥ ಗುಂಡನ್ನಾಗಿ ಮಾಡುವ ಶಕ್ತಿಯನ್ನು ಹೊಂದಿದ್ದಿತು. ಆಕಾಶದಲ್ಲಿನ ನಕ್ಷತ್ರಗಳನ್ನು ಕಿತ್ತುಹಾಕುವ ಶಕ್ತಿಯನ್ನು ಪಡೆದಿತ್ತು. ಸೂರ್ಯಮಂಡಲವನ್ನು ಭೇದಿಸುವ ಭಯಂಕರ ಶಬ್ದವನ್ನು ಉಂಟುಮಾಡುವ ಸಿಡಿಲನ್ನೇ ಸೀಳುವ ಶಕ್ತಿಯನ್ನುಳ್ಳವಾಗಿದ್ದವು. ೨೫. ಶಿವನು ಐದು ಮುಖಗಳಿಂದ ಕೂಡಿದ್ದನು, ಹತ್ತು ತೋಳುಗಳನ್ನು ಹೊಂದಿದ್ದನು, ಹದಿನೈದು ಕಣ್ಣುಗಳನ್ನು ಪಡೆದಿದ್ದನು, ವಿಷಕಂಠದಲ್ಲಿ ದಿಕ್ಕು ದಿಕ್ಕುಗಳಲ್ಲಿ ಮಿಂಚುವ ರುಂಡಮಾಲೆಯನ್ನು ಧರಿಸಿದ್ದನು. ತ್ರಿಶೂಲ, ಡಮರುಗಳನ್ನು ಹಿಡಿದಿದ್ದನು. ಕೆಂಪಾದ ಜಡೆಗಳ ಗೊಂಚಲುಗಳನ್ನೇ ಪಡೆದಿದ್ದನು. ಅಂಚನ್ನುಳ್ಳ ಹುಲಿಯ ಚರ್ಮವನ್ನು ಉಟ್ಟುಕೊಂಡು ಬರುತ್ತಿರಲು, ಅವನ ಹತ್ತಿರ ನಿಶ್ಚಲವಾಗಿದ್ದ ಸಾರೂಪ್ಯದವರಿದ್ದರು. ಸಾಲೋಕ್ಯ, ಸಾಮೀಪ್ಯದವರೂ ಅತ್ತಿತ್ತ ಚಲಿಸದೆ ನಿಂದಿದ್ದರು. ಅದನ್ನು

CC-0. Jangamwadi Math Collection. Digitized by eGangotri

ಸಮ್ಮುಖಂಬಿಡಿದು ನಿಲಿ ಹರಿಯಜರ್ ದಿಗಧಿಪರ್
ನಿಮ್ಮ ದೆಸೆಗಳ ಸಾರ್ದು ನಿಲ್ಲಿ ಮುನಿಪಾಲಕರ್
ಸುಮ್ಮನಿರಿಯಸುರತರಿಂಚಲ್ ಬೇಡಿಮಖಿಳ ದಿವಿಜಾಳಿ ಗಜಬಜಿಸಬೇಡ
ದ್ವಿಜವರ್ ಗುಜುಗುಜಸದಿರಿಮತುಳ ರುದ್ರಗಣ
ಮುಮ್ಮಸಗಬೇಡೆಂದು ತತ್ಸಭೆಯೊಳಾನಂದಿ
ಯುಮ್ಮಹಾಕಾಳರ್ ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದೆ ೨೬

ಬಿರುಬಿರನೆ ಕಂಗಳಂ ಬಿಟ್ಟು ಪಲ್ಲಂ ಕಿರಿದು
ಮುರುಗಿಸುತೆ ಮೊಗಮನಂಗುಷ್ಠಾಗ್ರದೊಳ್ ನಿಂದು
ಥರಥರಿಸಿ ನಿಲ್ಲುತುಂ ಕಂಠಮಂ ಹಿಂದಕ್ಕೆ ತಿರುಪಿ ಬಿರ್ರನೆ ಬೆರೆವುತೆ
ತಿರುತಿರುಗಿ ತಿರ್ರೆಂದು ತಿರುಗುತುಂ ದಿವಿಜರಂ
ಜರಜರೆವುತಭಿನಯಿಸಿ ಹಾಸ್ಯರಸಮಂ ಸಭೆಗೆ
ಕರೆಕರೆವುತುಂ ಭೃಂಗಿ ಭಕ್ತಿಯಿಂ ನಟಿಸುತುಂ ಶಿವನಿದಿರೊಳೆಸೆದಿರ್ದನು ೨೭

ಎಸೆವ ಪಂಚಮ ಮಧ್ಯ ಗಾಂಧಾರ ಷಡ್ಜ ಮೋ
ಹಿಸುವ ಧೈವತ ಋಷಭ ವರನಿಷಾದಸ್ವರದ
ಪಸರದಿಂ ಕಾಕಲಿಕಲಂ ಮಂಧ್ರ ತಾರಮೆಂಬವರ ನಿಲುಕಡೆಯನರಿದು

ಏನೆಂದು ಹೇಳಲಿ ? ೨೬. "ಬ್ರಹ್ಮ, ವಿಷ್ಣುಗಳೇ, ಸಮ್ಮುಖದಲ್ಲಿ ನಿಲ್ಲಿ. ದಿಕ್ಪಾಲಕರೇ, ನಿಮ್ಮ ನಿಮ್ಮ ದಿಕ್ಕುಗಳ ಬಳಿ ಹೋಗಿ ನಿಲ್ಲಿ. ಮುನಿಗಳೇ, ಸುಮ್ಮನಿರಿ, ರಾಕ್ಷಸರೇ, ನೀವು ಕೂಗಾಡಬೇಡಿ, ಸಮಸ್ತ ದೇವತೆಗಳ ಸಮೂಹವೆ, ಗಲಭೆ ಮಾಡಬೇಡಿ. ಬ್ರಾಹ್ಮಣ ಶ್ರೇಷ್ಠರೇ, ಗುಜು ಗುಜು ಶಬ್ದ ಮಾಡಬೇಡಿ. ಎಲೈ ರುದ್ರಗಣಗಳೇ, ಹೆಚ್ಚಾಗಿ ಆವೇಶಗೊಳ್ಳಬೇಡಿ,"—ಎಂದು ಆ ಸಭೆಯಲ್ಲಿ ನಂದಿ ಮತ್ತು ಮಹಾಕಾಳರು ಅತಿ ಭಕ್ತಿಯಿಂದ ವ್ಯವಸ್ಥೆಗೊಳಿಸುತ್ತಿದ್ದರು. ೨೭. ಶಿವನ ಎದುರಿನಲ್ಲಿ ಅತಿಭಕ್ತಿಯಿಂದ ಭೃಂಗಿಯು ನಾಟ್ಯವಾಡುತ್ತಿದ್ದನು. ಅವನು ಕಣ್ಣುಗಳನ್ನು ಬಿರುಬಿರನೆ ಬಿಡುತ್ತಿದ್ದನು. ಹಲ್ಲು ಕಿರಿಯುತ್ತಿದ್ದನು, ಮುಖವನ್ನು ವಕ್ರವಾಗಿ ಮಾಡುತ್ತಿದ್ದನು, ಉಂಗುಷ್ಠದ ತುದಿಯಲ್ಲಿ ನಿಲ್ಲುತ್ತಿದ್ದನು, ಒಮ್ಮೆ ಥರಥರ ನಡುಗುತ್ತ ನಿಲ್ಲುವನು ; ಕುತ್ತಿಗೆಯನ್ನು ಹಿಂದಕ್ಕೆ ತಿರುಗಿಸಿ ಸೆಟೆದು ಬೀಗುತ್ತಿದ್ದನು. ಮತ್ತೊಮ್ಮೆ ಸರಸರನೆ ತಿರ್ರನೆ ತಿರುಗುತ್ತ, ದೇವತೆಗಳನ್ನು ಕೆಣಕಿ ಹೀಯಾಳಿಸುತ್ತ, ಸಭೆಯಲ್ಲಿ ಹಾಸ್ಯರಸದ ಮಳೆಯನ್ನೇ ಕರೆಯುತ್ತ ನಟಿಸುತ್ತಿದ್ದನು. ೨೮. ಮತ್ತೊಂದೆಡೆಯಲ್ಲಿ ತುಂಬುರ ನಾರದರು ಪ್ರಸಿದ್ಧವಾದ ಪಂಚಮ, ಮಧ್ಯ, ಗಾಂಧಾರ, ಷಡ್ಜ : ಮೋಹಗೊಳಿಸುವ ಧೈವತ, ಋಷಭ ; ಶ್ರೇಷ್ಠವಾದ ನಿಷಾದಸ್ವರದ ವಿಸ್ತಾರದಿಂದ ಮಧುರವಾದ ಕಾಕಲಿಧ್ವನಿ, ಮಂಧ್ರ, ತಾರ ಎಂಬುವುಗಳ ನಿಲುಗಡೆಯನ್ನು ಅರ್ಥಮಾಡಿಕೊಂಡು, ಹೊಸ ಧ್ವನಿ,

CC-0. Jangamwadi Math Collection. Digitized by eGangotri.

ಪೊಸ ಭಣಿತೆ ಬೆಡಗು ಮಾಧುರಂ ನಯಂಗಳೊಳೆ ಶೋ
ಭಿಸುವ ತಾನಂಗಳೊಳ್ ಸಕಲ ರಾಗಂಗಳಿಂ
ದೊಸೆದು ತುಂಬರನಾರದರ್ ಪಾಡುತಿರ್ದರೊಂದೆಸೆಯೊಳತಿವಿಭವದಿಂದೆ ೨೮

ಘನಸುಷಿರಮಾನದ್ಧತತವೆಂಬ ವಾದ್ಯನಿ
ಸ್ವನದೊಳಂ ಗೋಪಾಂಗ ಪ್ರತ್ಯಂಗ ಭ್ರಮರಿ ಭಾ
ವನೆ ಮಂಡಲಂಗಳಿಂ ಶುದ್ಧ ದೇಸಿಗಳೊಳಳವಡಿಸಿ ಲಕ್ಷಣಯುಕ್ತದೆ
ಅನುಗೊಳಿಸಿ ಜಿಂದು ಜಕ್ಕಡಿ ಕೋಲಚಾರಿಗಳ್
ಪೊನೆಗಾಲ್ ಕಳಾಸ ಕೈಮುರೆ ತಿವ್ರಡೆ ಮುಡುಹುಮು
ಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು ೨೯

ರುದ್ರಾಣಿಯಿಂದಖಿಳ ಶೃಂಗಾರಮಾ ವೀರ
ಭದ್ರನಿಂ ವೀರಮೀಶ್ವರ ಮನದೊಳಂ ಕರುಣ
ಮದ್ರಿರೂಪದ ಮರುಳ್ಗಳಿಂದದ್ಭುತಂ ಭೃಂಗಿಯಿಂ ಹಾಸ್ಯಮಾ ಭಕ್ತರ
ಹೃದ್ರಚನೆಯೊಳ್ ಭಯಮುಮೆಲುವಾಲೆ ಪುಲಿದೊವಲ
ಮುದ್ರೆಯುವರಿಂದೆ ಬೀಭತ್ಸ ರೌದ್ರಂ ಮಹಾ
ರುದ್ರಗಣದಿಂ ಮುನಿಗಳಿಂ ಶಾಂತಿಯೆನಲಭವಸಭೆ ನವರಸದೊಳೆಸೆದುದು ೩೦

ಹಡಪಮಂ ಪಿಡಿದು ಧನದಂ ರಾಜಿಸಲ್ ಗಿಂಡಿ
ವಿಡಿಯೆ ವರುಣಂ ಮರುತನರಳ ಬಿಜ್ಜಣಿಗೆಯಂ
ಪಿಡಿದು ಬೀಸಲ್ ನಿರುತಿ ಕಾಳಾಂಜಿವಿಡಿಯೆ ಸುರಪಂ ರನ್ನಗನ್ನಡಿಯುನು

ಬೆಡಗು ಮಾಧುರ್ಯವನ್ನು ನವಿರುಗಳನ್ನು ಬೆರೆಸಿ ಶೋಭಿಸುವ ಸ್ವರವಿಸ್ತಾರದಿಂದ ಎಲ್ಲ ರಾಗಗಳನ್ನೂ ಸೊಗಸಾಗಿ ಹಾಡುತ್ತಿದ್ದರು. ೨೯. ಕೊಳಲು, ಆನದ್ಧತತವೆಂಬ ಘನ ವಾದ್ಯದ ಧ್ವನಿಯೊಂದಿಗೆ, ಗೋಪಾಂಗ, ಪ್ರತ್ಯಂಗ, ಭ್ರಮರಿ, ಭಾವನೆ, ಮಂಡಲಗಳಿಂದ ಶುದ್ಧ ದೇಸಿರಾಗಗಳಿಗೆ ಅಳವಡಿಸಿಕೊಂಡು ಲಕ್ಷಣಕ್ಕನುಗುಣವಾಗಿ ಸಿದ್ಧಗೊಳಿಸಿ. ಜಿಂದು. ಜಕ್ಕಡಿ. ಕೋಲಚಾರಿಗಳು, ಮೊನೆಗಾಲು, ಕಳಾಸ. ಕೈಮುರೆ. ತಿವ್ರಡೆ. ಮುಡುಹು ಮುಂತಾದ ಪ್ರಭೇದಗಳಿಂದ ನರ್ತನಮಾಡುವ ನರ್ತಕಿಯರು ಮನೋಹರವಾಗಿ ಕಾಣುತ್ತಿದ್ದರು. ೩೦. ಆ ಸಭೆಯಲ್ಲಿ ಪಾರ್ವತಿಯಿಂದ ಎಲ್ಲ ರೀತಿಯ ಶೃಂಗಾರ, ವೀರ ಭದ್ರನಿಂದ ವೀರ, ಈಶ್ವರನ ಮನಸ್ಸಿನಲ್ಲಿ ಕರುಣ, ಬೆಟ್ಟದಾಕಾರದ ಮರುಳುಗಳಿಂದ ಅದ್ಭುತ, ಭೃಂಗಿಯಿಂದ ಹಾಸ್ಯ, ಆ ಭಕ್ತರ ಹೃದಯದಲ್ಲಿ ಭಯ, ಎಲುಬುಗಳ ಹಾರ, ಹುಲಿಯಚರ್ಮದವರಿಂದ ಬೀಭತ್ಸ, ಮಹಾರುದ್ರಗಣಗಳಿಂದ ರೌದ್ರ, ಮುನಿಗಳಿಂದ ಶಾಂತ ಎನ್ನುವಂತೆ ಪರಮೇಶ್ವರನ ಸಭೆಯು ನವರಸಗಳಿಂದ ಶೋಭಿಸುತ್ತಿದ್ದಿತು. ೩೧. ಕುಬೇರನು ಹಣದ ಪೆಟ್ಟಿಗೆಯನ್ನು ಹಿಡಿದು ಶೋಭಿಸುತ್ತಿದ್ದನು. ವರುಣದೇವನು ಗಿಂಡಿಯನ್ನು ಹಿಡಿದಿದ್ದನು. ವಾಯುದೇವನು ಹೂವಿನ ಬೀಸಣಿಗೆಯನ್ನು ಹಿಡಿದು ಬೀಸುತ್ತಿದ್ದನು. ನೈರುತ್ಯನ ಕೈಯಲ್ಲಿ ರಸಪಾತ್ರೆಯಿದೆ. ದೇವೇಂದ್ರನು ರತ್ನದ ಕನ್ನಡಿ

CC-0. Jangamwadi Math Collection. Digitized by eGangotri

ಹಿಡಿಯೆ ಚಂದ್ರಾದಿತ್ಯರುಭಯಚಾಮರಗಳಂ
ಪಿಡಿದು ಢಾಳಿಸೆ ಹರಿಯಜಾದ್ಯಮರ ಸಂದೋಹ
ಮಡಿಗಡಿಗೆ ಮೆಯ್ಯಿಕ್ಕಿ ಮಗುಳೆದ್ದು ನಿಂದಿರ್ದು ನುತಿಸಿದರ್ ಭಕ್ತಿಯಿಂದೆ ೩೧

ಜಯತು ಭವಹರ ಜಯತು ಫಾಳಾಕ್ಷ ಜಯತು ಶಿವ
ಜಯತು ಭಿಕ್ಷಾಟನಪ್ರಿಯ ಜಯತು ಭೀಮಾಂಗ
ಜಯ ಭುಜಗಭೂಷ ಜಯಜಯತು ವೇದಾಭೇದ್ಯ ಜಯತು ಭೈರವಜನಕನೇ
ಜಯ ಭೋಗೀಶಯನನೇತ್ರಾರ್ಚಿತಪದದ್ವಂದ್ವ
ಜಯತು ಭೌಮಾಪರಗ್ರಹಕಲಾಜೂಟ ಜಯ
ಜಯ ಮದನಭಂಗ ಗಂಗಾಂಭಃಕಣಾಧಾರ ಜಯತು ಜಯತೆನುತಿರ್ದರು ೩೨

ಜಯ ಜಯತು ಸದ್ಭಕ್ತಭಕ್ತ ಭವಭಯನಾಶ
ಜಯ ಜಯತು ದಿಕ್ಪಾಲಪಾಲ ಪಾವಕನೇತ್ರ
ಜಯ ಜಯತು ಪರಬೊಮ್ಮ ಬೊಮ್ಮಬೋಧಾರಾಧ್ಯ ಜಯಜಯತು ನಿರ್ಮಾಯನೆ
ಜಯಜಯತು ಶ್ರೀನಾಥನಾಥ ನಾಥಾಭಾವ
ಜಯಜಯತು ಕೀನಾಶನಾಶ ನಾಶವಿದೂರ
ಜಯಜಯತು ನಿಷ್ಕಾಮಕಾಮ ಕಾಮವಿರಾಮ ಜಯತು ಜಯತೆನುತಿರ್ದರು ೩೩

ಯನ್ನು ಹಿಡಿದಿದ್ದನು. ಚಂದ್ರ ಸೂರ್ಯರು ಎರಡು ಚಾಮರಗಳನ್ನು ಹಿಡಿದು ಬೀಸು ತ್ತಿದ್ದರು. ವಿಷ್ಣು-ಬ್ರಹ್ಮರುಗಳೇ ಮೊದಲಾದ ದೇವತೆಗಳ ಸಮೂಹವು ಪದೇ ಪದೇ ಶಿವನಿಗೆ ನಮಸ್ಕರಿಸಿ ಮೇಲೆದ್ದು ನಿಂತು ಭಕ್ತಿಯಿಂದ ಸ್ತೋತ್ರ ಮಾಡುತ್ತಿದ್ದರು. ೩೨. ಹುಟ್ಟು ಸಾವುಗಳನ್ನು ನಾಶಮಾಡುವವನಿಗೆ ಜಯವಾಗಲಿ. ಹಣೆಗಣ್ಣುಳ್ಳವನಿಗೆ ಜಯವಾಗಲಿ. ಶಿವನೇ, ನಿನಗೆ ಜಯವಾಗಲಿ. ಭಿಕ್ಷಾಟನಪ್ರಿಯನೇ, ಜಯವಾಗಲಿ, ಭಯಂಕರ ದೇಹವುಳ್ಳ ಶಿವನಿಗೆ ಜಯವಾಗಲಿ, ಸರ್ಪಭೂಷಣನಿಗೆ ಜಯವಾಗಲಿ, ವೇದಗಳಿಗೆ ಕೂಡ ಅಭೇದ್ಯನಾದವನಿಗೆ ಜಯವಾಗಲಿ, ಭೈರವನ ತಂದೆಗೆ ಜಯವಾಗಲಿ. ವಿಷ್ಣುವಿನ ಕಣ್ಣುಗಳಿಂದ ಪೂಜಿಸಿಕೊಂಡವನಿಗೆ ಜಯವಾಗಲಿ, ಚಂದ್ರನನ್ನು ಜಟೆಯಲ್ಲಿ ಧರಿಸಿದವನಿಗೆ ಜಯವಾಗಲಿ, ಮನ್ಮಥನನ್ನು ಭಂಗಿಸಿದವನಿಗೆ ಜಯವಾಗಲಿ. ಗಂಗಾಧರನಿಗೆ ಜಯವಾಗಲಿ ಜಯವಾಗಲಿ ಎನ್ನುತ್ತಿದ್ದರು. ೩೩. ಸದ್ಭಕ್ತರ ಭಕ್ತನಿಗೆ ಜಯವಾಗಲಿ. ಹುಟ್ಟು ಸಾವುಗಳ ಭಯವನ್ನು ನಾಶಮಾಡಿದವನಿಗೆ ಜಯವಾಗಲಿ. ಅಷ್ಟದಿಕ್ಪಾಲಕ ರನ್ನು ಕಾಪಾಡುವವನಿಗೆ ಜಯವಾಗಲಿ. ಅಗ್ನಿಯಂತಹ ಹಣೆಗಣ್ಣುಳ್ಳವನಿಗೆ ಜಯ ವಾಗಲಿ. ಪರಬ್ರಹ್ಮನಿಗೆ ಬ್ರಹ್ಮನಾದವನಿಗೆ ಜಯವಾಗಲಿ. ತತ್ತ್ವೋಪದೇಶ ಮಾಡಿ ಪೂಜೆಯನ್ನು ಪಡೆಯುವವನಿಗೆ ಜಯವಾಗಲಿ. ನಿರ್ಮಾಯನಿಗೆ ಜಯವಾಗಲಿ. ವಿಷ್ಣುವಿನ ಒಡೆಯನಿಗೆ ಜಯವಾಗಲಿ. ಒಡೆಯನೆಂಬ ಭಾವನೆಯನ್ನುಂಟುಮಾಡುವವನಿಗೆ ಜಯವಾಗಲಿ. ಮೃತ್ಯುಂಜಯನಿಗೆ ಜಯವಾಗಲಿ. ನಾಶವಿಲ್ಲದವನಿಗೆ ಜಯವಾಗಲಿ.

CC-0. Jangamwadi Math Collection. Digitized by eGangotri

ಎಂದಿಂತು ನುತಿಪ ಹರಿಯಜ ಸುರೇಂದ್ರಾದಿಗಳ
ನಂದು ಕೃಪೆಯಿಂ ನೋಡಿ ಕರೆಕರೆದು ಕಣ್ಸನ್ನೆ
ಯಿಂದಂತರಂಗವರಿದೊಡನೆ ಮನ್ನಿಸುತೆ ಮುನಿಗಳ ಭಕ್ತಿಗಂ ಮೆಚ್ಚುತೆ
ಕುಂದಧವಳಾಂಶು ಭಸ್ಮಾಂಗನಗಜಾಂಗನಾ
ನಂದಸಂಬಂಧನಾಲಿಂಗನಮೃತಾಂಗನೆಯೊ
ಳೊಂದಿದಭವಂ ತ್ರಿಯಕ್ಷಂ ವಿರೂಪಾಕ್ಷನಂದೋಲಗದೊಳೆಸೆದಿರ್ದನು ೩೪

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದಿ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೫

## ಎರಡನೆಯ ಸಂಧಿ ಸಂಪೂರ್ಣ

ನಿಷ್ಕಾಮಕಾಮಿಗೆ ಜಯವಾಗಲಿ. ಮದನಧ್ವಂಸಿಗೆ ಜಯವಾಗಲಿ ಎನ್ನುತ್ತಿದ್ದರು. ೩೪. ಎಂದು ಈ ರೀತಿಯಾಗಿ ಸ್ತುತಿಸುತ್ತಿದ್ದ ವಿಷ್ಣು, ಬ್ರಹ್ಮ, ಇಂದ್ರಾದಿಗಳನ್ನು ಅಂದು ಅನು ಗ್ರಹ ದೃಷ್ಟಿಯಿಂದ ನೋಡಿದನು. ಅವರನ್ನೆಲ್ಲ ಕಣ್ಸನ್ನೆಯಿಂದಲೇ ಹತ್ತಿರಕ್ಕೆ ಕರೆದನು. ಅವರ ಅಂತರಂಗವನ್ನು ಅರ್ಥಮಾಡಿಕೊಂಡು ಅವರನ್ನು ಗೌರವಿಸಿದನು. ಮುನಿಗಳ ಭಕ್ತಿಗೆ ಮೆಚ್ಚಿದನು. ಚಂದ್ರನನ್ನು ಧರಿಸಿದವನು, ವಿಭೂತಿಯನ್ನು ಧರಿಸಿದವನು, ಪಾರ್ವತಿಯ ಸಂಬಂಧದಲ್ಲಿ ಆನಂದವುಳ್ಳವನು, ಗಂಗೆಯನ್ನು ಹೊಂದಿದ ಶಿವನಾದ ವಿರೂಪಾಕ್ಷನು ಅಂದು ಓಲಗದಲ್ಲಿ ಶೋಭಾಯಮಾನವಾಗಿದ್ದನು. ೩೫. ಈ ರೀತಿ ಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿ ದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗ ಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಎರಡನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂರನೆಯ ಸಂಧಿ

**ಸೂಚನೆ :** ಪಾರ್ವತಿಯ ಪ್ರಶ್ನೆಗೀಶಂ ತನ್ನ ಚಿತ್ಕಳೆಯ
ನುರ್ವಿಯೊಳಗುದಿಸೆಂದೊಡೇಕೆನಲ್ ಬಸವಾದಿ
ಸರ್ವರುಂ ನಿನ್ನ ಬರವಂ ಬಯಸುತಿಹರದಂ ಕೇಳೆಂದು ಪೇಳ್ದನಂದು

ಗಳಸಂಧಿಸಮ್ಮಿಳಿತ ಗರಳಾಷ್ಟವಿಗ್ರಹೋ
ಜ್ವಳ ವೃಷಭಯಾನ ಕಮಲಾಸನಾನತಪಾದ
ಖಳತನು ದ್ವೈಧೀಕೃತ ಪ್ರಕಟಖಡ್ಗ ಕೈಲಾಸಶಿಖರಿಸಮಾಶ್ರಯ
ಶಿಳಿಯ ಷಡ್ಗುಣದಂತೆ ರಾಜಿಸುವ ಪಾರ್ವತೀ
ಕಳಶಕುಚತಟಕುಂಕುಮಮುದ್ರಾಂಕಿತವಕ್ಷ
ಸಲಹು ಪಂಪಾವಿರೂಪಾಕ್ಷ ಲೋಕಾಧ್ಯಕ್ಷ ಭಾಳಾಕ್ಷ ನತಜನರನು ೧

ಈ ವಿಭವದಿಂದಭವನಿರಲಗಜೆ ನುಡಿದಳೆಲೆ
ದೇವ ಕೇಳಂದು ನಂದ್ಯಾದ್ಯಮರಗಣಕುಲಮ
ನಾ ವಸುಮತಿಗೆ ಕಳುಪುತವರ್ಗೆ ತತ್ತ್ವೋಪದೇಶಕೆ ನಮ್ಮ ಚಿತ್ಕಳೆಯನು
ನೀವೊಡನೆ ಕಳುಹಿದಪೆವೆಂದಿತ್ತ ನಂಬುಗೆಯ
ಪಾವನನಿರೂಪಮಂ ಸಲಿಸಬೇಡವೆಯೆನಲ್
ಭಾವಿಸಿ ಶಿವಂ ತನ್ನ ಹೃತ್ಕಮಲಮಧ್ಯಚಿತ್ಪ್ರಣವರೂಪಂ ನೆನೆದನು ೨

ಸೂಚನೆ : ಪಾರ್ವತಿಯು ಪ್ರಶ್ನೆಯನ್ನು ಕೇಳಿದಳು. ಆಗ ಪರಮೇಶ್ವರನು ತನ್ನ ಪರಮಜ್ಞಾನದ ಒಂದು ಅಂಶಕ್ಕೆ ಭೂಮಿಯಲ್ಲಿ ಜನಿಸುವಂತೆ ಅಪ್ಪಣೆಮಾಡಿದನು. ಆ ಅಂಶವು ಏಕೆಂದು ಪ್ರಶ್ನಿಸಲು ಬಸವ ಮುಂತಾದ ಎಲ್ಲರೂ ನಿನ್ನ ಬರವಿಗಾಗಿ ಕಾಯುತ್ತಿದ್ದಾರೆ ಎಂದು ಅದಕ್ಕೆ ಕಾರಣವನ್ನು ತಿಳಿಸಿದನು. ೧. ಹೇ ವಿಷಕಂಠನೇ, ಅಷ್ಟಮೂರ್ತಿಯೇ ಶ್ರೇಷ್ಠನಾದ ನಂದಿವಾಹನನೇ, ಬ್ರಹ್ಮನಿಂದ ನಮಸ್ಕರಿಸಿಕೊಳ್ಳುವ ಪಾದಗಳುಳ್ಳವನೇ, ಶತ್ರುಗಳ ದೇಹವನ್ನು ಸೀಳುವಂಥ ತೀಕ್ಷ್ಣವಾದ ಖಡ್ಗವುಳ್ಳವನೇ, ಕೈಲಾಸಪರ್ವತ ಶಿಖರದಲ್ಲಿ ವಾಸಿಸುವವನೇ, ಷಡ್ಗುಣಗಳಂತೆ ಶೋಭಿಸುವ ಪಾರ್ವತಿಯ ಕಳಶದಂತಿರುವ ಸ್ತನಗಳ ಬಳಿಯಿಂದ ಹರಿಯುತ್ತಿರುವ ಕುಂಕುಮದ್ರವದಿಂದ ಲೇಪಿತವಾದ ವಕ್ಷಸ್ಥಳವುಳ್ಳವನೇ, ಸಕಲ ಲೋಕಗಳಿಗೂ ಒಡೆಯನಾದ, ಹಣೆಯಲ್ಲಿ ಕಣ್ಣುಳ್ಳ, ಪಂಪಾವಿರೂಪಾಕ್ಷ ಸ್ವಾಮಿಯೇ ಶರಣಾಗತರನ್ನು ಕಾಪಾಡು. ೨. ಈ ರೀತಿಯಾಗಿ ಶಿವನು ವೈಭವದಿಂದ ಇದ್ದನು. ಆಗ ಪಾರ್ವತಿಯು ಅವನನ್ನು ಕುರಿತು, "ಹೇ ದೇವ, ಕೇಳು ; ಅಂದು ನಂದಿಯೇ ಮೊದಲಾದ ದೇವಗಣಗಳ ಸಮೂಹವನ್ನು ಆ ಭೂಮಿಗೆ ಕಳುಹಿಸುವಾಗ, ಅವರಿಗೆ ತತ್ತ್ವೋಪದೇಶ ಮಾಡಲು 'ನನ್ನ ಚಿತ್ಕಳೆಯನ್ನು ನಿಮ್ಮೊಡನೆ

CC-0. Jangamwadi Math Collection. Digitized by eGangotri

ನೆನೆಯಲಾ ಚಿತ್ಪ್ರಣವವೇ ಪೊಳೆದು ಶಿವಪಡಾ
ನನದಿಂದೆ ಕೋಟಿಸೂರ್ಯಪ್ರಭೆಯೊಳವತರಿಸಿ
ಘನತರದ ದಿವ್ಯಮೂರ್ತಿಯಸಾಂತು ಮುಂದೆನಿಂದಡಿಗಡಿಗೆ ಭಕ್ತಿಯಿಂದೆ
ಅನುನಯದೊಳೆರಗಲಾ ಷಣ್ಮುಖಿಯನೊಲಿದೆತ್ತಿ
ವಿನಯದಿಂದಪ್ಪಿ ಮುಂಡಾಡಿ ತೊಡೆಯೊಳಗಿಟ್ಟು
ಮಿನುಪ ರದನದ್ಯುತಿ ಸಭಾಂತರಂದೀವೆ ತತ್ಕುವರನೊಳಗಿಂತೆಂದನು ೩

ಕೇಳ್ಕುವರ ನಂದಿಮುಖ್ಯಾಮರಗಣಂ ಧರೆಗೆ
ಬೀಳ್ಕೊಂಡು ಪೋಗಿ ಮಾನವಜನ್ಮದೊಳ್ ಪುಟ್ಟಿ
ಬಾಳ್ಕೆಯಿಂದಿರ್ಪರಲ್ಲಿಗೆ ಪೋಗಿ ನೀಂ ಜನಿಸಿ ಶಿವತತ್ತ್ವಷಟ್ಸ್ಥಲವನು
ಅಳ್ಕರಿಂದುಪದೇಶವಿತ್ತು ಮುಕ್ತಿಗೆ ಸಲಿಸ
ವೇಳ್ಕುಮೆನಲಾ ಕುವರನತಿಶಯದೊಳೆರಗಿ ಪಣೆ
ಯೊಳ್ಕೆಯ್ಗಳಿಟ್ಟು ಬಿನ್ನಯ್ಸಿದಂ ಪರಶಿವಂಗಾದರದೊಳಾಕ್ಷಣದೊಳು ೪

ಮಾನವರೊಳುಂ ಜನಿಸಿ ಶಿವತತ್ತ್ವಷಟ್ಸ್ಥಲ ನಿ
ಧಾನಮಂ ನಂದಿ ಮೊದಲಾದಮರಗಣಕುಸಿರ್ವು
ದೇನಿದಕೆ ಕಾರಣಮೆನಲ್ ಶಿವಂ ನಕ್ಕು ನೀನರಿಯುವ ರಹಸ್ಯಮುಂಟೆ

ತಕ್ಷಣವೇ ಕಳಿಸುತ್ತೇನೆ' ಎಂದು ಕೊಟ್ಟ ಪವಿತ್ರವಾದ ಆಶ್ವಾಸನೆಯನ್ನು ಸಲ್ಲಿಸ ಬೇಡವೆ ?" ಎಂದಳು. ಅದನ್ನು ಪರಿಭಾವಿಸಿ ಶಿವನು ತನ್ನ ಹೃದಯಕಮಲಮಧ್ಯದ ಚಿತ್ಪ್ರಣವರೂಪವನ್ನು ನೆನೆದನು. ೩. ಈ ರೀತಿ ನೆನೆಯಲಾಗಿ ಚಿತ್ಪ್ರಣವವೇ ಪೊಳೆದು ಶಿವನ ಆರು ಮುಖದಿಂದ ಹುಟ್ಟಿತು. ಕೋಟಿ ಸೂರ್ಯಪ್ರಕಾಶದಿಂದ ಹುಟ್ಟಿ ಶ್ರೇಷ್ಠ ವಾದ ದಿವ್ಯಮೂರ್ತಿಯ ರೂಪದಲ್ಲಿ ಶಿವನ ಮುಂದೆ ನಿಂತು, ವಿನಯ ಮತ್ತು ಭಕ್ತಿ ಯಿಂದ ಮತ್ತೆ ಮತ್ತೆ ಪರಮೇಶ್ವರನ ಪಾದಗಳಿಗೆ ನಮಸ್ಕರಿಸಿತು. ಶಿವನು ಆರು ಮುಖಗಳ ಮೂರ್ತಿಯನ್ನು ಪ್ರೀತಿಯಿಂದ ಎತ್ತಿಕೊಂಡನು, ಪ್ರೀತಿಯಿಂದ ಅಪ್ಪಿ ಮುದ್ದಾಡಿದನು. ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ತನ್ನ ಹಲ್ಲಿನ ಪ್ರಭೆ ಸಭೆ ಯನ್ನು ತುಂಬಿ ಬೆಳಗುತ್ತಿರಲು, ಆ ತನ್ನ ಮಗನಿಗೆ ಈ ರೀತಿ ಹೇಳಿದನು. ೪. "ಕೇಳಯ್ಯ ಮಗನೆ, ನಂದಿ ಮುಂತಾದ ಮುಖ್ಯ ಅಮರಗಣಗಳು ಇಲ್ಲಿಂದ ಬೀಳ್ಕೊಂಡು, ಭೂ ಲೋಕಕ್ಕೆ ಹೋಗಿ, ಮಾನವಜನ್ಮದಲ್ಲಿ ಹುಟ್ಟಿ ಬಾಳುತ್ತಿದ್ದಾರೆ. ನೀನು ಅಲ್ಲಿಗೆ ಹೋಗಿ ಹುಟ್ಟು. ಶಿವತತ್ತ್ವವನ್ನೂ. ಷಟ್ಸ್ಥಲವನ್ನೂ ಪ್ರೀತಿಯಿಂದ ಉಪದೇಶ ಮಾಡಿ ಮುಕ್ತಿಗೆ ಸಲ್ಲುವಂತೆ ಮಾಡು" ಎನ್ನಲಾಗಿ, ಆ ಕುಮಾರನು ಬಹುಭಕ್ತಿಯಿಂದ ಅಡ್ಡಬಿದ್ದು, ಪ್ರೀತಿಯಿಂದ ಪರಶಿವನಲ್ಲಿ ಈ ರೀತಿ ವಿಜ್ಞಾಪಿಸಿದನು. ೫. "ನಾನು ಮಾನವರಲ್ಲಿ ಜನ್ಮವೆತ್ತಿ, ಶಿವತತ್ತ್ವ, ಷಟ್ಸ್ಥಲಗಳ ರಹಸ್ಯವನ್ನು ನಂದಿ ಮೊದಲಾದ ಅಮರಗಣಗಳಿಗೆ ಹೇಳಬೇಕೆ ? ಇದಕ್ಕೆ ಕಾರಣವೇನು ?" ಎಂದು ಕೇಳಿದನು. ಆ ಮಾತಿಗೆ ಶಿವನು ನಕ್ಕು "ನಿನಗೆ ಗೊತ್ತಿಲ್ಲದ ರಹಸ್ಯವೇನಿದೆ ? ಈ ನಮ್ಮ ನಿಜತತ್ತ್ವದ ಚಿತ್ಕಳಾರೂಪಿ ನೀನು.

CC-0. Jangamwadi Math Collection. Digitized by eGangotri

ಈ ನಮ್ಮ ನಿಜತತ್ತ್ವ ಚಿತ್ಕಳಾರೂಪೀ ಷ
ಡಾನನಂಗಳೊಳೆ ಷಟ್ತ್ರಿಣವರೂಪಾಗಿರ್ಪೆ
ನೀನೆ ಷಣ್ಮುಖಿ ಷಟ್ಸ್ಥಲಬ್ರಹ್ಮ ಕೇಳಬೇಕೆಂದೊಡಾಂ ಪೇಳ್ವೆನಿನ್ನು ೫

ಕೇಳಾದೊಡೆಲೆ ಷಟ್ಸ್ಥಲಬ್ರಹ್ಮ ಪಿಂತೆ ಕೆಲ
ಕಾಲದೊಳಗೊಂದು ದಿವಸಂ ನಂದಿ ಭೃಂಗಿ ಮಾ
ಕಾಳ ಮೊದಲಾದಸಂಖ್ಯಾತ ಗಣದೊಡನೆ ಗಿರಿಜಾತೆಸಹಿತೀ ಕ್ರಮದೊಳು
ಓಲಗಂಗೊಟ್ಟಿರ್ಪ ಸಮಯದೊಳ್ ನಾರದಂ
ಲೀಲೆಯಿಂ ಬಂದೆಮಗೆ ಸಾಷ್ಟಾಂಗದಿಂದೆರಗಿ
ಫಾಳವಿನ್ಯಸ್ತಕರಪುಟನಾಗಿ ನಮಿಸುತಿರೆ ನಂದೀಶನಿಂತೆಂದನು ೬

ಎಲೆ ಮುನಿಪ ನೀಂ ಬಂದ ಕಾರ್ಯಮಂ ದೇವೇಶ
ನೊಲವರಿದು ಬಿನ್ನಯಿಸೆನಲ್ ನಾರದಂ ನಿ
ಶ್ಚಲಚಿತ್ತದಿಂದೆಮ್ಮನೀಕ್ಷಿಸುತ್ತಭವ ನಿಮ್ಮಾಜ್ಞೆಯೊಳು ಲೋಕಂಗಳ
ತೊಳಲಿದೆಂ ಸಕಲ ಲೋಕಂಗಳೊಳ್ ಶಿವಭಕ್ತಿ
ಬಳೆವುತಿರ್ಪುದು ದಿನದಿನಕ್ಕಿತ್ತ ಭೂಲೋಕ
ದೊಳಗಿರ್ಪ ಭರತಖಂಡದ ಕರ್ಮಭೂಮಿಯೊಳ್ ಕಲಿ ಪ್ರಬಲಮಾಯ್ತೆಂದನು ೭

ಆರು ಮುಖಗಳಲ್ಲಿಯೂ ಷಟ್ತ್ರಿಣವ ರೂಪಾಗಿರುವೆ. ನೀನೆ ಆರು ಮುಖವುಳ್ಳ ಷಟ್ಸ್ಥಲ ಬ್ರಹ್ಮ. ನೀನೇ ಕೇಳಬೇಕು ಎಂದು ಇಷ್ಟಪಡುವುದಾದರೆ ಹೇಳುತ್ತೇನೆ, ಕೇಳು.'' ೬. ''ಎಲೈ ಷಟ್ಸ್ಥಲಬ್ರಹ್ಮಿಯೆ, ಕೇಳು. ಕೆಲವು ಕಾಲದ ಹಿಂದೆ ಒಂದು ದಿವಸ ನಂದಿ, ಭೃಂಗಿ, ಮಹಾಕಾಳ ಮೊದಲಾದ ಅಸಂಖ್ಯಾತ ಗಣಗಳ ಜೊತೆಯಲ್ಲಿ, ಪಾರ್ವತೀ ಸಮೇತನಾಗಿ ಇದೇ ರೀತಿಯಲ್ಲಿ ಓಲಗಗೊಟ್ಟಿದ್ದೆ. ಆ ಸಮಯದಲ್ಲಿ ನಾರದನು ಸಂತೋಷದಿಂದ ಬಂದು ನನಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹಣೆಯ ಮೇಲೆ ತನ್ನ ಎರಡು ಕೈಗಳನ್ನೂ ಜೋಡಿಸಿ ವಂದಿಸಿದನು. ಆಗ ನಂದೀಶನು ಹೀಗೆ ಹೇಳಿದನು: ೭. ''ಎಲೈ ಮುನಿ ಶ್ರೇಷ್ಠನೆ, ನೀನು ಬಂದ ಕೆಲಸವನ್ನು ಶಿವನ ಮನಸ್ಸನ್ನು ಅರ್ಥಮಾಡಿಕೊಂಡು ವಿಜ್ಞಾಪಿಸು ಎಂದನು. ಆಗ ನಾರದನು ನಿಶ್ಚಲವಾದ ಮನಸ್ಸಿನಿಂದ ನಮ್ಮನ್ನು ನೋಡುತ್ತ ''ಶಿವನೆ, ನಿನ್ನ ಅಪ್ಪಣೆಯಂತೆ ಎಲ್ಲ ಲೋಕಗಳನ್ನೂ ತಿರುಗಿದೆ; ಎಲ್ಲ ಲೋಕ ಗಳಲ್ಲಿಯೂ ಶಿವಭಕ್ತಿ ಅಭಿವೃದ್ಧಿಗೊಳ್ಳುತ್ತಿದೆ. ಆದರೆ ಇತ್ತಲಾಗಿ ಭೂಲೋಕದಲ್ಲಿ ಇರುವ ಕರ್ಮಭೂಮಿಯಾದ ಭರತಖಂಡದಲ್ಲಿ ಮಾತ್ರ ಕಲಿಯ ಪ್ರಭಾವ ಹೆಚ್ಚಾಗಿದೆ''



CC-0. Jangamwadi Math Collection. Digitized by eGangotri

ಸತ್ಯಮಳಿದುದು ಸದಾಚಾರಂಗಳಡಗಿರ್ಪು
ವತ್ಯಧಿಕ ಶಿವಭಕ್ತಿಗಳ್ ಮಸುಳ್ದಿರ್ಪವೌ
ಚಿತ್ಯ ಶೀಲಂಗಳರೆತುವು ಶಿವಾಗಮ ಪುರಾಣಂಗಳವು ಕನಸಾದುವು
ನಿತ್ಯಸತ್ಕ್ರಿಯೆಗಳುಡುಗಿದುವಖಿಳ ಸದ್ಧರ್ಮ
ಕೃತ್ಯಮುವು ಬಯಲಾಯ್ತು ಧರೆಯ ರಾಜವ್ರಜಂ
ಪ್ರತ್ಯೇಕಮವಿಚಾರ ದುರ್ನೀತಿ ದುಷ್ಕೃತಾಸ್ಪದಿಗಳಾಯ್ತೆಂದುಸಿರ್ದನು ೮

ಜಿನ ಬುದ್ಧ ಚಾರ್ವಾಕಮತಮಿರದೆ ಪೆರ್ಚಿ ನೂ
ತನಮಾಗಿ ಪಿರಿದು ಶಿವಮತಮನುರೆ ಜರೆವುತುಂ
ಘನಲಿಂಗ ಜಂಗಮ ಪ್ರಸಾದ ಪಾದೋದಕ ವಿಭೂತಿ ರುದ್ರಾಕ್ಷಗಳನು
ತನತನಗೆ ಪಳಿವುತುಂ ಶಿವಭಕ್ತಿಯುಕ್ತ ಸ
ಜ್ಜನರನತಿನಿಂದಿಸುತ್ತಂ ಜಂಗಮವ ಕಂಡು
ಮುನಿವುತಿರ್ಪರ್ ಪ್ರಭುಗಳುಂ ಪ್ರಜೆಗಳಾಸ್ಥಳದೊಳಭವ ಚಿತ್ತೈಸೆಂದನು ೯

ಎಲ್ಲೆಲ್ಲಿಯುಂ ಶಿವಾಲಯದ ಬಾಗಿಲ್ಗಳವು
ಕಲ್ಲಿಂದೆ ಮುಚ್ಚಿದುವು ಜಂಗಮಸ್ಥಲದ ಮಠ
ಮೆಲ್ಲಮುಂ ಬಯಲಾದುವಧಿಕಪುರಮಾನ್ಯ ಸಂತತಿ ಚರಕೆ ಸಲೆ ಸಂದುವು

ಎಂದನು. ೮. "ಸತ್ಯವು ಮರೆಯಾಯಿತು. ಸದಾಚಾರಗಳು ಕಣ್ಮರೆಯಾಗಿವೆ. ಶ್ರೇಷ್ಠವಾದ ಶಿವಭಕ್ತಿಯು ಅಡಗಿದೆ. ಔಚಿತ್ಯ-ಶೀಲಗಳು ನಾಶವಾದವು. ಶಿವಾಗಮಗಳು ಮತ್ತು ಶಿವಪುರಾಣಗಳು ಕನಸಿನಂತಾದುವು. ದಿನನಿತ್ಯದ ಸತ್ಕ್ರಿಯೆಗಳು ಕಡಿಮೆಯಾದುವು. ಸಕಲ ಸದ್ಧರ್ಮಗಳ ಕರ್ಮಗಳು ಮಾಯವಾದುವು. ಭೂಮಿಯಲ್ಲಿರುವ ರಾಜರು ಬೇರೆ ಬೇರೆ ಅವಿಚಾರ, ದುರ್ನೀತಿ. ದುಷ್ಕೃತ್ಯಗಳಿಗೆ ಒಳಗಾಗಿದ್ದಾರೆ" ಎಂದು ಹೇಳಿದನು. ೯. "ಜೈನ, ಬೌದ್ಧ ಮತ್ತು ಚಾರ್ವಾಕ ಮತಗಳು ಹೆಚ್ಚಾಗಿ ಹರಡುತ್ತಿವೆ. ಹೊಸದಾಗಿ ಹುಟ್ಟಿದ ಈ ಧರ್ಮಗಳು ಶೈವಧರ್ಮವನ್ನು ಬಹುವಾಗಿ ಹೀಯಾಳಿಸುತ್ತಿವೆ. ಮಹತ್ವವುಳ್ಳ ಲಿಂಗ, ಜಂಗಮ, ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷಿಗಳನ್ನು ಜನರು ತಮಗೆ ತಾವೇ ಹಳಿಯುತ್ತಿದ್ದಾರೆ. ಶಿವಭಕ್ತಿಯಿಂದ ಕೂಡಿದ ಸಜ್ಜನರನ್ನು ಅತಿಯಾಗಿ ನಿಂದಿಸುತ್ತಾರೆ. ಜಂಗಮರನ್ನು ಕಂಡರೆ ರಾಜರು ಮತ್ತು ಪ್ರಜೆಗಳು ಕೋಪಗೊಳ್ಳುತ್ತಾರೆ. ಎಲೆ ಶಿವನೆ, ಕೇಳು" ಎಂದನು. ೧೦. "ಎಲ್ಲೆಲ್ಲಿ ನೋಡಿದರೂ ಶಿವದೇವಾಲಯಗಳ ಬಾಗಿಲುಗಳು ಕಲ್ಲುಗಳಿಂದ ಮುಚ್ಚಿವೆ. ಜಂಗಮಸ್ಥಳಗಳಾದ ಮಠಗಳೆಲ್ಲಾ ಶೂನ್ಯವಾದುವು. ಪುರದ ಮಾನ್ಯರುಗಳೆಲ್ಲ ಕಾಣೆಯಾಗಿದ್ದಾರೆ. ಎಲ್ಲಿ ನೋಡಿದರೂ

CC-0. Jangamwadi Math Collection. Digitized by eGangotri

ಎಲ್ಲೆಡೆಯೊಳುಂ ಜಿನಾಲಯಮಯಂ ಸಕಲ ಜನ
ರೆಲ್ಲರುಂ ಜಿನಭಕ್ತಿಯುಕ್ತರಲ್ಲಿಯ ಮುನಿಗೆ
ಳೆಲ್ಲರುಂ ಜಿನಮುನಿಗಳರಸಿ ನೋಡಿದೊಡೆ ಶಿವಲಾಂಛನಮದಿಲ್ಲೆಂದನು ೧೦

ಪುಸಿ ನುಸುಳ್ ಗನ್ನಗತಕಂ ಕಳವು ಕೊಲೆ ಕೇಡು
ಕಿಸುರುಂ ಕೃತಘ್ನಭಾವಂ ನಿಂದೆ ಮಾಯೆ ದು
ರ್ವ್ಯಸನಂ ವಿಕಾರಂ ಕುತರ್ಕಂ ಕುಮಾರ್ಗಮವ್ರತಮವಾಚ್ಯಂ ನಿಷ್ಠುರಂ
ಪಿಸುಣಂ ಪರಾಭವಂ ಕಲಹಮುಂ ಕಪಟಮಳಿ
ಜಸಮತಿಕ್ರೂರಮನ್ಯಾಯಮಿವು ಪೆರ್ಚಿ ತ
ದ್ವಸುಮತೀವನಿತೆ ತಾಳದೆ ಕಂಪಿಸುತ್ತಿರ್ಪಳೇನೆಂಬೆನಚ್ಚರಿಯುಮನು ೧೧

ಪತಿಗಳಿರಲನ್ಯರೊಳ್ ನೆರೆವರಂಗನೆಯರಾ
ಪತಿಹಿತೆಯರಿರಲಸತಿಗೊಲಿದಿರ್ಪರಾ ಪುರುಷ
ರತುಳದ್ವಿಜರಧಮಕುಲದೊಳ್ ವೆರಸಿ ವರ್ತಿಪರ್ ಧರ್ಮಕರ್ಮವನೆಣಿಸವೆ
ಅತಿಹೀನರೈಶ್ವರ್ಯದಿಂ ಬಾಳ್ವರಾಚಾರ
ಯುತರೆತ್ತಲಾನುಮಿರಲವರುಂ ದರಿದ್ರಸಂ
ಗತರಾಗಿ ಜೀವಿಪರ್ ಸೀಗೆಯೊಳಗಣ ಬಾಳೆಯಂತೆಂದನಾ ಮುನಿಪನು ೧೨

ಜಿನಾಲಯಗಳೇ ತುಂಬಿವೆ. ಎಲ್ಲ ಜನರೂ ಜಿನಭಕ್ತರೇ ಆಗಿದ್ದಾರೆ. ಅಲ್ಲಿಯ ಮುನಿಗಳೆಲ್ಲರೂ ಜಿನಮುನಿಗಳೇ. ಅಲ್ಲಿ ಹುಡುಕಿನೋಡಿದರೂ ಒಂದಾದರೂ ಶೈವಧರ್ಮದ ಗುರುತೇ ಇಲ್ಲ'' ಎಂದನು. ೧೧. ''ಸುಳ್ಳು, ತಲೆತಪ್ಪಿಸಿಕೊಂಡು ಹೋಗುವುದು, ಠಕ್ಕುತನ, ಕಳ್ಳತನ, ಕೊಲೆ, ಕೆಟ್ಟದ್ದನ್ನು ಮಾಡುವುದು, ಮತ್ಸರ, ಮಾಡಿದ ಉಪಕಾರವನ್ನು ಮರೆಯುವುದು, ಬೈಯುವುದು, ಮಾಯಮಾಟ, ಕೆಟ್ಟಚಾಳಿ, ಕುರೂಪು, ಕುತರ್ಕ, ಕೆಟ್ಟದಾರಿ, ವ್ರತಗಳನ್ನು ಮಾಡದಿರುವುದು, ನಿಂದೆ, ನಿಷ್ಠುರ, ಚಾಡಿಹೇಳುವುದು, ಸೋಲು, ಜಗಳ, ಮೋಸ, ಅಪಕೀರ್ತಿ, ಅತಿಕ್ರೂರಸ್ವಭಾವ, ಅನ್ಯಾಯ ಇವೆಲ್ಲವೂ ಹೆಚ್ಚಾಗಿವೆ. ಆ ಭೂವನಿತೆಯು ಇವುಗಳ ಭಾರವನ್ನು ತಾಳಲಾರದೆ ನಡುಗುತ್ತಿದ್ದಾಳೆ. ಆಶ್ಚರ್ಯವನ್ನು ಏನು ಹೇಳಲಿ ?'' ೧೨. ''ಗಂಡಂದಿರು ಜೀವಿಸಿರುವಾಗಲೇ ಹೆಂಗಸರು ಬೇರೆಯವರ ಸಂಗಮಾಡುತ್ತಾರೆ. ಪತಿಗೆ ಹಿತವನ್ನು ಬಯಸುವ ಸತಿಯರಿದ್ದರೂ ಪುರುಷರು ನೀತಿಗೆಟ್ಟ ಹೆಂಗಸಿಗೆ ಒಲಿಯುತ್ತಾರೆ. ಶ್ರೇಷ್ಠರಾದ ಬ್ರಾಹ್ಮಣರು ಕೆಟ್ಟ ಕುಲದಲ್ಲಿ ಸೇರಿ ವ್ಯವಹರಿಸುತ್ತಾರೆ. ಧರ್ಮಕರ್ಮಗಳನ್ನು ಲೆಕ್ಕಿಸುವುದಿಲ್ಲ. ಹೀನ ಜನರು ಐಶ್ವರ್ಯದಿಂದ ಬಾಳುತ್ತಾರೆ. ಆಚಾರವಂತರು ಎಲ್ಲಿಯಾದರೂ ಇದ್ದರೆ ಅವರು ದಾರಿದ್ರ್ಯದಿಂದ ಜೀವಿಸುತ್ತಾರೆ. ಅವರೆಲ್ಲ ಸೀಗೆಯೊಳಗಣ ಬಾಳೆಯಂತೆ ಯಾತನೆಯನ್ನು ಅನುಭವಿಸುತ್ತ

CC-0. Jangamwadi Math Collection. Digitized by eGangotri

ಈ ದುರಾಚಾರಮಂ ಪೊರ್ದದಲ್ಲಲ್ಲಿ ಪರ
ವಾದಿಗಳ ಕಣ್ಗಳ್ಗೆ ಕಾಣಿಸದೆ ಗೋಪ್ಯದಿಂ
ಮೇದಿನಿಯ ಮರೆಯೊಳಿಹ ನವನಿಧಿಗಳಂತೆ ಬಿದಿರಡವಿಯುರುಗಲ್ ಮುಸುಕಿದ
ಆ ದಿವ್ಯಚಂದನದ್ರುಮಗಳೆನೆ ದುರ್ದಿವಸ
ದಾದಿತ್ಯಕಿರಣಂಗಳಂತಭವ ನಿಮ್ಮ ಶ್ರೀ
ಪಾದಭಕ್ತರ್ ದುರಿತಮುಕ್ತರಿಪ್ಪರ್ ಕೋಟಿಗೋರೊರ್ವರೆಂದುಸಿರ್ದನು ೧೩

ಉರಿವ ಬೇಸಗೆಯೊಳೊಣಗುವ ಬಳ್ಳಿಗಳ್ ಮಳೆಯ
ನಿರುಳ ಚಕ್ರಾಬ್ಜಂಗಳರ್ಕನಂ ದಾರಿದ್ರ್ಯ
ದುರವಣೆಯೊಳಗೆ ನೊಂದ ಮಾನವಂ ಪರಮಸೌಭಾಗ್ಯಮಂ ಬಯಸುವಂತೆ
ಪರಸಮಯಮಿನ್ನೆಂದಿಗಡಗಿ ಪೋಪುದೊ ನಮ್ಮ
ಹರಸಮಯಮೆಂದಧಿಕಮಪ್ಪುದೋಯೆಂದು ಶಿವ
ಶರಣರೊಳಗೊಳಗೆ ಬಿಸುಸುಯ್ವುದಂ ಕಿವಿಯಾರೆ ಕೇಳ್ದೆನಾನೆಂದುಸಿರ್ದನು ೧೪

ಈ ವಾರ್ತೆಯಂ ಬಿನ್ನಂಪಂಗೆಯ್ಯಲೆಂದಾಂ ಮ
ಹಾವೇಗದಿಂ ಬಂದೆನಾ ಮನುಜರೆಲ್ಲರುಂ
ಸಾವ ಹುಟ್ಟುವ ದಂದುಗಕ್ಕೊಳ್ಗಾಗಿ ಬರಿದೆ ಕೆಡುತಿರ್ಪರದನುಸಿರಲಳವೆ

ಇದ್ದಾರೆ" ಎಂದು ನಾರದಮುನಿಯು ಹೇಳಿದನು. ೧೩. "ಹೇ ಅಭವ, ನಿಮ್ಮ ಶ್ರೀಪಾದ ಭಕ್ತರು ಅಲ್ಲಲ್ಲಿ ಈ ದುರಾಚಾರಗಳಿಗೆ ಬಲಿಯಾಗದೆ ಅನ್ಯಮತೀಯರ ಕಣ್ಣಿಗೆ ಬೀಳದೆ ಅಡಗಿಕೊಂಡಿದ್ದಾರೆ. ಭೂಮಿಯಲ್ಲಿ ಅಡಗಿರುವ ನವನಿಧಿಗಳಂತೆಯೂ, ಬಿದಿರು ಕಾಡು ಮತ್ತು ದೊಡ್ಡ ಬಂಡೆಗಳಿಂದ ತುಂಬಿದ ಕಾಡಿನ ಮಧ್ಯೆ ಇರುವ ಆ ಪವಿತ್ರವಾದ ಗಂಧದ ಮರಗಳಂತೆಯೂ, ದಟ್ಟವಾದ ಮೋಡಗಳಿಂದ ಕವಿದಿರುವ ದಿನದ ಸೂರ್ಯನ ಕಿರಣಗಳಂತೆಯೂ, ಪಾಪದಿಂದ ಮುಕ್ತರಾದ ನಿಮ್ಮ ಭಕ್ತರು ಕೋಟಿಗೊಬ್ಬೊಬ್ಬರು ಇದ್ದಾರೆ" ಎಂದು ಹೇಳಿದನು. ೧೪. "ಉರಿಯುವ ಬೇಸಗೆಯಲ್ಲಿ ಒಣಗುವ ಬಳ್ಳಿಗಳು ಮಳೆಯನ್ನು ಬಯಸುತ್ತವೆ. ರಾತ್ರಿಯಲ್ಲಿ ಚಕ್ರವಾಕಪಕ್ಷಿಗಳು ಮತ್ತು ಕಮಲಗಳು ಸೂರ್ಯೋದಯವನ್ನು ಬಯಸುತ್ತವೆ. ಹೆಚ್ಚಾದ ದಾರಿದ್ರ್ಯದಿಂದ ನೊಂದಿರುವ ಮನುಷ್ಯನು ಅಧಿಕ ಸೌಭಾಗ್ಯವನ್ನು ಬಯಸುತ್ತಾನೆ. ಹಾಗೆಯೇ ಅನ್ಯಮತದ ಪ್ರಾಬಲ್ಯವು ಎಂದಿಗೆ ನಶಿಸಿಹೋಗುತ್ತದೆಯೋ, ನಮ್ಮ ಶೈವಧರ್ಮವು ಎಂದು ಪ್ರಾಬಲ್ಯ ಪಡೆಯುತ್ತದೆಯೋ ಎಂದು ಶಿವಶರಣರು ಒಳಗೊಳಗೇ ನಿಟ್ಟುಸಿರು ಬಿಡುತ್ತಿದ್ದುದನ್ನು ನಾನು ಕಿವಿಯಾರೆ ಕೇಳಿದೆ" ಎಂದು ಹೇಳಿದನು. ೧೫. "ನಾನು ನಿಮಗೆ ಈ ವಿಷಯವನ್ನು ವಿಜ್ಞಾಪಿಸಬೇಕೆಂದು ಬಹಳ ತ್ವರೆಯಿಂದ ಇಲ್ಲಿಗೆ ಬಂದೆನು. ಆ ಮಾನವರೆಲ್ಲರೂ ಸಾಯುವ ಮತ್ತು ಹುಟ್ಟುವ ಕಷ್ಟಕ್ಕೆ ಒಳಗಾಗಿ ವ್ಯರ್ಥವಾಗಿ ಕೆಡುತ್ತಿದ್ದಾರೆ. ಅದನ್ನು

CC-0. Jangamwadi Math Collection. Digitized by eGangotri

ದೇವರರಿಯದ ಪ್ರಪಂಚುಂಟೆ ನಾನಾ ಜೀವ
ಭಾವಚೇಷ್ಟಿತಸೂತ್ರಧಾರಕನೆ ಸಕಲರಂ
ಪಾವನಂ ಮಾಳ್ಪೊಡಿದು ಸಮಯಮಘನಾಶ ಸರ್ವೇಶ ಚಿತ್ತೈಸೆಂದನು ೧೫

ಹರುಷದಿಂದದು ನಿಮಿತ್ತಂ ದೇವರಧಿಕಗುರು
ಚರಮೂರ್ತಿಯಾಗಿ ಮರ್ತ್ಯಕ್ಕೆ ಬಿಜಯಂಗೆಯ್ದು
ಪರಸಮಯಖಂಡನೋದ್ದಂಡಮಂ ಮೆರೆದು ಶ್ರುತದೃಷ್ಟದ ಪವಾಡಂಗಳ
ಧರೆಗೊಲ್ದು ತೋರಿಸುತೆ ಗುರು ಲಿಂಗ ಜಂಗಮದ
ಚರಣೋದಕ ಪ್ರಸಾದಂಗಳ ಮಹಾತ್ಮೆಯಂ
ವಿರಚಿಸಿ ಶಿವಾಚಾರಸಂಪನ್ನರೆನಿಸಿ ಮನುಜರನುಳಿಹಬೇಕೆಂದನು ೧೬

ಮಾನವರ ಭವಬಂಧಮಂ ಪರಿದು ರಕ್ಷಿಸೆಂ
ದಾ ನಾರದಂ ನುಡಿಯಲಾರ ಕಳುಪುವೆವೆಂದು
ಜಾನಿಸುತ್ತಿರೆ ಗಿರಿಜೆ ನುಡಿದಳಿಲೆ ದೇವ ಮರ್ತ್ಯರ್ ಭವಕೆ ಬಹರೆಂಬುದ
ಆನರಿವೆನೀ ಭವದ ಕೋಟಲೆಗೆ ತವ ಮಹಾ
ಸ್ಥಾನದೊಳಗಿರ್ಪ ಘನಮಹಿಮರುಂ ಬಹರೊ ಪರ
ಮಾನಂದ ನಿತ್ಯಸುಖದಿಂದಿರ್ಪರೋ ನಿರೂಪಿಸವೇಳ್ಕುಮೆನಗೆಂದಳು ೧೭

ಇಷ್ಟು ಎಂದು ಹೇಳಲು ಸಾಧ್ಯವಿಲ್ಲ. ದೇವ, ನಿನಗೆ ತಿಳಿಯದ ಜಗತ್ತು ಇದೆಯೆ ? ಎಲ್ಲಾ ಜೀವಿಗಳ ಭಾವ ಚೇಷ್ಟೆಗಳಿಗೆ ಸೂತ್ರಧಾರನು ನೀನು. ಎಲ್ಲರನ್ನೂ ಪಾವನರನ್ನಾಗಿ ಮಾಡುವುದಕ್ಕೆ ಇದು ಸರಿಯಾದ ಸಮಯ. ಪಾಪಗಳನ್ನು ನಾಶಮಾಡುವವನಾದ ಸರ್ವೇಶನೆ ಕೇಳು'' ಎಂದನು. ೧೬. ''ಆ ಕಾರಣದಿಂದ ತಾವು ಸಂತೋಷದಿಂದ ಶ್ರೇಷ್ಠ ಗುರುಚರಮೂರ್ತಿಯಾಗಿ ಭೂಮಿಗೆ ದಯಮಾಡಿಸಬೇಕು. ಅನ್ಯಮತಗಳ ಖಂಡನೆಯನ್ನು ಮಾಡಿ ಶಿವಧರ್ಮವನ್ನು ಮೇಲೆತ್ತಿ ಮೆರೆಯಿಸಿ. ಪ್ರೀತಿಯಿಂದ ಭೂಮಿಗೆ ಕೇಳುವಂತಹ, ಕಾಣುವಂತಹ ಪವಾಡಗಳನ್ನು ತೋರಿಸಿ. ಗುರು, ಲಿಂಗ, ಜಂಗಮಗಳ ಪಾದೋದಕ, ಪ್ರಸಾದಗಳ ಮಹಿಮೆಯನ್ನು ತೋರಿಸಿ, ಮಾನವರು ಶಿವಾಚಾರ ಸಂಪನ್ನರಾಗುವಂತೆ ಮಾಡಿ ಅವರನ್ನು ಉದ್ಧಾರ ಮಾಡಬೇಕು'' ಎಂದನು. ೧೭. ''ಮಾನವರ ಹುಟ್ಟುಸಾವುಗಳ ಸಂಕೋಲೆಯನ್ನು ಹರಿದು ಕಾಪಾಡು'' ಎಂದು ನಾರದನು ಹೇಳಿದನು. (ಶಿವನು ಭೂಲೋಕಕ್ಕೆ) ಯಾರನ್ನು ಕಳಿಸಬೇಕೆಂದು ಯೋಚಿಸುತ್ತಿರಲು ಪಾರ್ವತಿಯು, ''ದೇವ, ಮಾನವರು ಹುಟ್ಟುಸಾವುಗಳನ್ನು ಉಳ್ಳವರು ಎಂಬುದನ್ನು ನಾನು ತಿಳಿದಿದ್ದೇನೆ. ಈ ಹುಟ್ಟುಸಾವುಗಳ ತೊಂದರೆಗೆ ನಿಮ್ಮ ಆಸ್ಥಾನದಲ್ಲಿ ಇರುವ ಶ್ರೇಷ್ಠರಾದ ಮಹಿಮಾವಂತರು ಕೂಡ ಒಳಗಾಗುತ್ತಾರೆಯೋ, ಇಲ್ಲವೇ ಅವರೆಲ್ಲರೂ ಪರಮಾನಂದ

CC-0. Jangamwadi Math Collection. Digitized by eGangotri

ಈ ದುರಾಚಾರಮಂ ಪೊರ್ದದಲ್ಲಲ್ಲಿ ಪರ
ವಾದಿಗಳ ಕಣ್ಗಳ್ಗೆ ಕಾಣಿಸದೆ ಗೋಪ್ಯದಿಂ
ಮೇದಿನಿಯ ಮರೆಯೊಳಿಪ ನವನಿಧಿಗಳಂತೆ ಬಿದಿರಡವಿದುರುಗಲ್ ಮುಸುಕಿದ
ಆ ದಿವ್ಯಚಂದನದ್ರುಮಗಳೆನೆ ದುರ್ದಿವಸ
ದಾದಿತ್ಯಕಿರಣಂಗಳಂತಭವ ನಿಮ್ಮ ಶ್ರೀ
ಪಾದಭಕ್ತರ್ ದುರಿತಮುಕ್ತರಿಪ್ಪರ್ ಕೋಟಿಗೋರ್ವರೆಂದುಸಿರ್ದನು ೧೩

ಉರಿವ ಬೇಸಗೆಯೊಳೊಣಗುವ ಬಳ್ಳಿಗಳ್ ಮಳೆಯ
ನಿರುಳ ಚಕ್ರಾಬ್ಜಂಗಳರ್ಕನಂ ದಾರಿದ್ರ್ಯ
ದುರವಣೆಯೊಳಗೆ ನೊಂದ ಮಾನವಂ ಪರಮಸೌಭಾಗ್ಯಮಂ ಬಯಸುವಂತೆ
ಪರಸಮಯಮಿನ್ನೆಂದಿಗಡಗಿ ಪೋಪುದೊ ನಮ್ಮ
ಪರಸಮಯಮೆಂದಧಿಕಮಪ್ಪುದೋಯೆಂದು ಶಿವ
ಶರಣರೊಳಗೊಳಗೆ ಬಿಸುಸುಯ್ವುದಂ ಕಿವಿಯಾರೆ ಕೇಳ್ದೆನಾನೆಂದುಸಿರ್ದನು ೧೪

ಈ ವಾರ್ತೆಯಂ ಬಿನ್ನಪಂಗೆಯ್ಯಲೆಂದಾಂ ಮ
ಹಾವೇಗದಿಂ ಬಂದೆನಾ ಮನುಜರೆಲ್ಲರುಂ
ಸಾವ ಹುಟ್ಟುವ ದಂದುಗಕ್ಕೊಳಲ್ಪಟ್ಟು ಬರಿದೆ ಕೆಡುತಿರ್ಪರದನುಸಿರಲಳವೆ

ಇದ್ದಾರೆ'' ಎಂದು ನಾರದಮುನಿಯು ಹೇಳಿದನು. ೧೩. ''ಹೇ ಅಭವ, ನಿಮ್ಮ ಶ್ರೀಪಾದ ಭಕ್ತರು ಅಲ್ಲಲ್ಲಿ ಈ ದುರಾಚಾರಗಳಿಗೆ ಬಲಿಯಾಗದೆ ಅನ್ಯಮತೀಯರ ಕಣ್ಣಿಗೆ ಬೀಳದೆ ಅಡಗಿಕೊಂಡಿದ್ದಾರೆ. ಭೂಮಿಯಲ್ಲಿ ಅಡಗಿರುವ ನವನಿಧಿಗಳಂತೆಯೂ, ಬಿದಿರು ಕಾಡು ಮತ್ತು ದೊಡ್ಡ ಬಂಡೆಗಳಿಂದ ತುಂಬಿದ ಕಾಡಿನ ಮಧ್ಯೆ ಇರುವ ಆ ಪವಿತ್ರವಾದ ಗಂಧದ ಮರಗಳಂತೆಯೂ, ದಟ್ಟವಾದ ಮೋಡಗಳಿಂದ ಕವಿದಿರುವ ದಿನದ ಸೂರ್ಯನ ಕಿರಣಗಳಂತೆಯೂ, ಪಾಪದಿಂದ ಮುಕ್ತರಾದ ನಿಮ್ಮ ಭಕ್ತರು ಕೋಟಿಗೊಬ್ಬೊಬ್ಬರು ಇದ್ದಾರೆ'' ಎಂದು ಹೇಳಿದನು. ೧೪. ''ಉರಿಯುವ ಬೇಸಗೆಯಲ್ಲಿ ಒಣಗುವ ಬಳ್ಳಿಗಳು ಮಳೆಯನ್ನು ಬಯಸುತ್ತವೆ. ರಾತ್ರಿಯಲ್ಲಿ ಚಕ್ರವಾಕಪಕ್ಷಿಗಳು ಮತ್ತು ಕಮಲಗಳು ಸೂರ್ಯೋದಯವನ್ನು ಬಯಸುತ್ತವೆ. ಹೆಚ್ಚಾದ ದಾರಿದ್ರ್ಯದಿಂದ ನೊಂದಿರುವ ಮನುಷ್ಯನು ಅಧಿಕ ಸೌಭಾಗ್ಯವನ್ನು ಬಯಸುತ್ತಾನೆ. ಹಾಗೆಯೇ ಅನ್ಯಮತದ ಪ್ರಾಬಲ್ಯವು ಎಂದಿಗೆ ನಶಿಸಿಹೋಗುತ್ತದೆಯೋ, ನಮ್ಮ ಶೈವಧರ್ಮವು ಎಂದು ಪ್ರಾಬಲ್ಯ ಪಡೆಯುತ್ತದೆಯೋ ಎಂದು ಶಿವಶರಣರು ಒಳಗೊಳಗೇ ನಿಟ್ಟುಸಿರು ಬಿಡುತ್ತಿದ್ದುದನ್ನು ನಾನು ಕಿವಿಯಾರೆ ಕೇಳಿದೆ'' ಎಂದು ಹೇಳಿದನು. ೧೫. ''ನಾನು ನಿಮಗೆ ಈ ವಿಷಯವನ್ನು ವಿಜ್ಞಾಪಿಸಬೇಕೆಂದು ಬಹಳ ತ್ವರೆಯಿಂದ ಇಲ್ಲಿಗೆ ಬಂದೆನು. ಆ ಮಾನವರೆಲ್ಲರೂ ಸಾಯುವ ಮತ್ತು ಹುಟ್ಟುವ ಕಷ್ಟಕ್ಕೆ ಒಳಗಾಗಿ ವ್ಯರ್ಥವಾಗಿ ಕೆಡುತ್ತಿದ್ದಾರೆ. ಅದನ್ನು

CC-0. Jangamwadi Math Collection. Digitized by eGangotri

ದೇವರರಿಯದ ಪ್ರಪಂಚುಂಟೆ ನಾನಾ ಜೀವ
ಭಾವಚೇಷ್ಟಿತಸೂತ್ರಧಾರಕನೆ ಸಕಲರಂ
ಪಾವನಂ ಮಾಳ್ಪೊಡಿದು ಸಮಯಮಘನಾಶ ಸರ್ವೇಶ ಚಿತ್ತೈಸೆಂದನು ೧೫

ಹರುಷದಿಂದದು ನಿಮಿತ್ತಂ ದೇವರಧಿಕಗುರು
ಚರಮೂರ್ತಿಯಾಗಿ ಮರ್ತ್ಯಕ್ಕೆ ಬಿಜಯಂಗೆಯ್ದು
ಪರಸಮಯಖಂಡನೋದ್ದಂಡದಮಂ ಮೆರೆದು ಶ್ರುತದೃಷ್ಟದ ಪವಾಡಂಗಳ
ಧರೆಗೊಲ್ದು ತೋರಿಸುತೆ ಗುರು ಲಿಂಗ ಜಂಗಮದ
ಚರಣೋದಕ ಪ್ರಸಾದಂಗಳ ಮಹಾತ್ಮೆಯಂ
ವಿರಚಿಸಿ ಶಿವಾಚಾರಸಂಪನ್ನರೆನಿಸಿ ಮನುಜರನುಳಿಹಬೇಕೆಂದನು ೧೬

ಮಾನವರ ಭವಬಂಧಮಂ ಪರಿದು ರಕ್ಷಿಸೆಂ
ದಾ ನಾರದಂ ನುಡಿಯಲಾರ ಕಳುಪುವೆವೆಂದು
ಜಾನಿಸುತ್ತಿರೆ ಗಿರಿಜೆ ನುಡಿದಳೆಲೆ ದೇವ ಮರ್ತ್ಯರ್ ಭವಕೆ ಬಹರೆಂಬುದ
ಆನರಿವೆನೀ ಭವದ ಕೋಟಲೆಗೆ ತವ ಮಹಾ
ಸ್ಥಾನದೊಳಗಿರ್ಪ ಘನಮಹಿಮರುಂ ಬಹರೊ ಪರ
ಮಾನಂದ ನಿತ್ಯಸುಖದಿಂದಿರ್ಪರೋ ನಿರೂಪಿಸವೇಳ್ಪುದೆನಗೆಂದಳು ೧೭

ಇಷ್ಟು ಎಂದು ಹೇಳಲು ಸಾಧ್ಯವಿಲ್ಲ. ದೇವ, ನಿನಗೆ ತಿಳಿಯದ ಜಗತ್ತು ಇದೆಯೆ ? ಎಲ್ಲಾ ಜೀವಿಗಳ ಭಾವ ಚೇಷ್ಟೆಗಳಿಗೆ ಸೂತ್ರಧಾರನು ನೀನು. ಎಲ್ಲರನ್ನೂ ಪಾವನರನ್ನಾಗಿ ಮಾಡುವುದಕ್ಕೆ ಇದು ಸರಿಯಾದ ಸಮಯ. ಪಾಪಗಳನ್ನು ನಾಶಮಾಡುವವನಾದ ಸರ್ವೇಶನೆ ಕೇಳು'' ಎಂದನು. ೧೬. ''ಆ ಕಾರಣದಿಂದ ತಾವು ಸಂತೋಷದಿಂದ ಶ್ರೇಷ್ಠ ಗುರುಚರಮೂರ್ತಿಯಾಗಿ ಭೂಮಿಗೆ ದಯಮಾಡಿಸಬೇಕು. ಅನ್ಯಮತಗಳ ಖಂಡನೆಯನ್ನು ಮಾಡಿ ಶಿವಧರ್ಮವನ್ನು ಮೇಲೆತ್ತಿ ಮೆರೆಯಿಸಿ, ಪ್ರೀತಿಯಿಂದ ಭೂಮಿಗೆ ಕೇಳುವಂತಹ, ಕಾಣುವಂತಹ ಪವಾಡಗಳನ್ನು ತೋರಿಸಿ, ಗುರು, ಲಿಂಗ, ಜಂಗಮಗಳ ಪಾದೋದಕ, ಪ್ರಸಾದಗಳ ಮಹಿಮೆಯನ್ನು ತೋರಿಸಿ, ಮಾನವರು ಶಿವಾಚಾರ ಸಂಪನ್ನರಾಗುವಂತೆ ಮಾಡಿ ಅವರನ್ನು ಉದ್ಧಾರ ಮಾಡಬೇಕು'' ಎಂದನು. ೧೭. ''ಮಾನವರ ಹುಟ್ಟುಸಾವುಗಳ ಸಂಕೋಲೆಯನ್ನು ಹರಿದು ಕಾಪಾಡು'' ಎಂದು ನಾರದನು ಹೇಳಿದನು. (ಶಿವನು ಭೂಲೋಕಕ್ಕೆ) ಯಾರನ್ನು ಕಳಿಸಬೇಕೆಂದು ಯೋಚಿಸುತ್ತಿರಲು ಪಾರ್ವತಿಯು, ''ದೇವ, ಮಾನವರು ಹುಟ್ಟುಸಾವುಗಳನ್ನು ಉಳ್ಳವರು ಎಂಬುದನ್ನು ನಾನು ತಿಳಿದಿದ್ದೇನೆ. ಈ ಹುಟ್ಟುಸಾವುಗಳ ತೊಂದರೆಗೆ ನಿಮ್ಮ ಆಸ್ಥಾನದಲ್ಲಿ ಇರುವ ಶ್ರೇಷ್ಠರಾದ ಮಹಿಮಾವಂತರು ಕೂಡ ಒಳಗಾಗುತ್ತಾರೆಯೋ, ಇಲ್ಲವೇ ಅವರೆಲ್ಲರೂ ಪರಮಾನಂದ

CC-0. Jangamwadi Math Collection. Digitized by eGangotri

ಲೇಸು ಲೇಸೌ ಗಿರಿಜೆಯೀಗ ನಿನ್ನಯ ವಾಗ್ವಿ
ಲಾಸಮಿತ್ತುದು ಮನಕೆ ಮುದಮನೀ ಕೃಷ್ಣಕಮ
ಲಾಸನಾದ್ಯಮರರ್ಗೆಯುಂ ಕಡೆಗೆ ಭವಬಂಧಮುಂಟೆನಲ್ ಗಿರಿಜೆ ಕೇಳ್ದು
ಈ ಸಮಸ್ತರ ಭವದ ಕೋಟಲೆಗಳಂ ಪಿಂಗಿ
ಪಾ ಸಮರ್ಥೋದ್ಯೋಗಮುಂಟೆಯೆನಲುಂಟಿದು ಮ
ಹಾಸಾಧ್ಯನಿತ್ಯತ್ತ್ವ ನಿಜಸುಖಂ ಷಟ್ಸ್ಥಲರಹಸ್ಯಮೆನಲಿಂತೆಂದಳು ೧೮

ಎಲೆ ದೇವ ಭವರೋಗವೈದ್ಯ ನೀವೆನಗೆ ನಿ
ರ್ಮಲವೆನಿಪ ನಿತ್ಯನಿಜಸುಖಮೀವ ಷಟ್ಸ್ಥಲಂ
ತಿಳಿವಂತೆ ಬೋಧಿಸಿ ಕೃತಾರ್ಥೆಯುಂ ಮಾಡಬೇಕೆಂದಗಜೆ ಬಿನ್ನಯಿಸಲು
ನಲಿದು ನಂದೀಶ್ವರಂ ತಾನಂದು ಸಕಲ ಗಣ
ಕುಲಹೃದಯಮರಿದಾಕೆಯಂತರಂಗದ ಕರುಣ
ದೊಲವನುರೆ ತಿಳಿದು ಕೈಮುಗಿದು ನಿಂದಭವ ಬಿನ್ನಪವನವಧರಿಸೆಂದನು ೧೯

ದೇವ ಕೇಳೀ ಜಗನ್ಮಾತೆಯಪ್ಪೀ ಮಹಾ
ದೇವಿ ನಮ್ಮೆಲ್ಲರಂ ಸಲಹಬೇಕೆಂಬ ಸ
ದ್ಭಾವದೊಲವಿಂದೆ ನಿಮ್ಮಂಘ್ರಿಕಮಲಂಗಳ್ಗೆ ಬಿನ್ನವಿಪ ಬಿನ್ನಪವನು

ದಿಂದ ನಿತ್ಯಸುಖಿಗಳಾಗಿರುತ್ತಾರೆಯೋ ನನಗೆ ವಿವರಿಸಬೇಕು" ಎಂದಳು. ೧೮. "ಒಳ್ಳೆಯದು ಪಾರ್ವತಿ. ಈಗ ನಿನ್ನ ಮಾತಿನ ಚಾತುರ್ಯವು ನನ್ನ ಮನಸ್ಸಿಗೆ ಆನಂದವನ್ನು ಉಂಟುಮಾಡಿತು. ವಿಷ್ಣು, ಬ್ರಹ್ಮ ಮೊದಲಾದ ಅಮರರಿಗೂ ಸಹ ಹುಟ್ಟು ಸಾವುಗಳ ಬಂಧನವಿದೆ" ಎಂದನು. ಅದನ್ನು ಕೇಳಿ ಪಾರ್ವತಿಯು, "ಈ ಎಲ್ಲರ ಹುಟ್ಟುಸಾವುಗಳ ಸಂಕಟಗಳನ್ನು ಪರಿಹರಿಸುವ ಸಾಮರ್ಥ್ಯವುಳ್ಳ ಉಪಾಯವಿದೆಯೆ ?" ಎಂದಳು. "ಇದೆ, ಅದು ಮಹಾ ಅಸಾಧ್ಯವಾದ ನಿತ್ಯತ್ವವಾದ ನಿಜಸುಖ. ಅದೇ ಷಟ್ಸ್ಥಲ ರಹಸ್ಯ" ಎಂದು ಶಿವನು ಹೇಳಲು, ಪಾರ್ವತಿಯು ಈ ರೀತಿ ನುಡಿದಳು. ೧೯. "ಎಲೈ ದೇವನೆ. ನೀನು ಭವರೋಗ ವೈದ್ಯ, ನನಗೆ ಪರಿಶುದ್ಧವಾದ ಸತ್ಯವೂ ಶಾಶ್ವತವೂ ಆದ ಸುಖವನ್ನು ಕೊಡುವ ಷಟ್ಸ್ಥಲವನ್ನು ಅರ್ಥವಾಗುವಂತೆ ಉಪದೇಶಮಾಡಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕು" ಎಂದು ಪಾರ್ವತಿಯು ವಿಜ್ಞಾಪಿಸಿದಳು.ಆಗ ನಂದೀಶ್ವರನಿಗೆ ಸಂತೋಷವಾಯಿತು. ಅವನು ಎಲ್ಲ ಗಣಸಮೂಹಗಳ ಮನಸ್ಸನ್ನು ತಿಳಿದುಕೊಂಡು, ಪಾರ್ವತಿಯ ಅಂತರಂಗದಲ್ಲಿರುವ ಕರುಣೆಯಿಂದ ಕೂಡಿದ ಅಭಿಮಾನವನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಕೈಮುಗಿದುಕೊಂಡು ನಿಂತು "ಪರಮೇಶ್ವರನೆ, ನನ್ನ ವಿಜ್ಞಾಪನೆಯನ್ನು ಕೇಳು" ಎಂದನು. ೨೦. "ಎಲೈ ದೇವ, ಜಗನ್ಮಾತೆಯಾದ ಈ ಮಹಾದೇವಿಯು ನಮ್ಮೆಲ್ಲರನ್ನೂ ಕಾಪಾಡಬೇಕೆಂಬ ಸದ್ಭಾವನೆಯಿಂದ ಮತ್ತು ನಮ್ಮ ಮೇಲಿನ ಪ್ರೀತಿಯಿಂದ ನಿಮ್ಮ ಪಾದಕಮಲಗಳಲ್ಲಿ ವಿಜ್ಞಾಪನೆ ಮಾಡಿಕೊಂಡಳು. ಆ ವಿಜ್ಞಾಪನೆಯನ್ನು

CC-0. Jangamwadi Math Collection. Digitized by eGangotri

ಸಾವಧಾನದಿ ಕೇಳ್ದು ನಿಮ್ಮ ನಿಜನಿತ್ಯಸುಖ
ಮೀವ ಷಟ್ಸ್ಥಲವನುರೆ ತಿಳಿಪಿ ನಮ್ಮೆಲ್ಲರಂ
ಕಾವುದೆಂದೆನುತಲತಿಭಕ್ತಿಯಿಂ ಕೈಮುಗಿದು ನಂದಿಕೇಶಂ ನುಡಿದನು ೨೦

ಇಂತೆನುತ್ತಾದಿವೃಷಭಂ ನುಡಿಯಲಿಮಗಧಿಕ
ಸಂತೋಷಮುದಿಸಿ ನಂದೀಶ ನೀಂ ಪೆರನೆ ನ
ಮ್ಮಂತರಂಗದೊಳಿರ್ಪ ನಿರ್ಮಲಿನ ಧರ್ಮಸ್ವರೂಪಂ ದ್ವಿತೀಯ ಶಂಭು
ಅಂತರಹಿತಂ ಜಗತ್ಪಾವನಂ ನೀನರಿಯ
ದಂತಾ ರಹಸ್ಯಮುಂಟೇ ಸುಷಟ್ಸ್ಥಲದಿಂದ
ಸಂತಶಿವಶರಣರಂ ನಿತ್ಯರಂ ಮಾಡಲೋಸುಗ ಕೇಳ್ದೆಯೆನಲೆಂದನು ೨೧

ಸ್ವಾಮಿ ನಿಮ್ಮಡಿಯ ಲೆಂಕರ ಪರಮ ಲೆಂಕನೆನ
ಗೀ ಮಾತದೇಕೆನ್ನ ಬಿನ್ನಪಂಗೇಳಿ ನ
ಮ್ಮೀ ಮಹಾಗಣಕೆ ಷಟ್ಸ್ಥಲಮಾರ್ಗಮಂ ತಿಳಿಪಿ ಸಲಹೆಂದು ಬಿನ್ನಯಿಸಲು
ಈ ಮಾತುಗೇಳ್ದಾತನಂತರಂಗಂದಿಳಿದು
ಭೂಮಿಯೊಳ್ ವೀರಶೈವೋದ್ಧರಣಕಾರಣಂ
ಪ್ರೇಮದಿಂ ನಂದಿಯಂ ಕಳುಪಬೇಕೆನುತೆ ನಿಶ್ಚಯಿಸಿ ಮತ್ತಿಂತೆಂದನು ೨೨

ನೀವು ತಾಳ್ಮೆಯಿಂದ ಕೇಳಿ ನಮ್ಮೆಲ್ಲರಿಗೂ ಶಾಶ್ವತವಾದ ಸುಖವನ್ನು ಕೊಡುವ ನಿಮ್ಮ ಷಟ್ಸ್ಥಲವನ್ನು ನಮಗೆ ಚೆನ್ನಾಗಿ ತಿಳಿಸಿ ಕಾಪಾಡಬೇಕು'' ಎಂದು ಬಹಳ ಭಕ್ತಿಯಿಂದ ಕೈ ಮುಗಿದುಕೊಂಡು ಹೇಳಿದನು. ೨೧. ''ಹೀಗೆಂದು ಆದಿವೃಷಭನು ಕೇಳಲು ನಮಗೆ ಬಹಳ ಸಂತೋಷವಾಯಿತು. ನಂದೀಶನೆ, ನೀನು ಬೇರೆಯವನೆ ? ನೀನು ನಮ್ಮ ಅಂತರಂಗ ದಲ್ಲಿರುವ ನಿರ್ಮಲವಾದ ಧರ್ಮಸ್ವರೂಪ, ಎರಡನೆಯ ಶಿವ, ಅಂತ್ಯವಿಲ್ಲದವನು. ಜಗತ್ತಿಗೆ ಪಾವನಸ್ವರೂಪನು, ನಿನಗೆ ಗೊತ್ತಿಲ್ಲದ ರಹಸ್ಯ ಏನುಂಟು ? ಅಸಂಖ್ಯಾತ ಶಿವಶರಣರನ್ನು ಮುಕ್ತರನ್ನಾಗಿ ಮಾಡುವುದಕ್ಕೋಸ್ಕರ ನೀನು ಈ ಷಟ್ಸ್ಥಲವನ್ನು ಕೇಳಿದೆ'' ಎನ್ನಲು, ನಂದೀಶನು ಹೀಗೆ ಹೇಳಿದನು. ೨೨. ''ಸ್ವಾಮಿ, ನಾನು ನಿಮ್ಮ ಸೇವಕರ ಸೇವಕ. ನನಗೆ ಇಂತಹ ಮಾತುಗಳನ್ನು ನೀವು ಏಕೆ ಹೇಳುವಿರಿ ? ನನ್ನ ವಿಜ್ಞಾಪನೆಯನ್ನು ಕೇಳಿ. ನಮ್ಮ ಈ ಮಹಾಗಣಗಳಿಗೆ ಷಟ್ಸ್ಥಲಮಾರ್ಗವನ್ನು ತಿಳಿಸಿ ಸಲಹಬೇಕು'' ಎಂದು ವಿಜ್ಞಾಪಿಸಿದನು. ಈ ಮಾತುಗಳನ್ನು ಕೇಳಿ, ಶಿವನು ನಂದಿಯ ಅಂತರಂಗವನ್ನು ಅರಿತುಕೊಂಡು, ಭೂಲೋಕದಲ್ಲಿ ವೀರಶೈವಧರ್ಮದ ಉದ್ಧಾರ ಮಾಡಲು ಪ್ರೀತಿಯಿಂದ ಈ ನಂದಿಯನ್ನೇ ಕಳುಹಿಸಬೇಕೆಂದು ನಿರ್ಧಾರ ಮಾಡಿಕೊಂಡು

CC-0. Jangamwadi Math Collection. Digitized by eGangotri

ಪರಮ ಷಟ್ಸ್ಥಲಮಾರ್ಗಮೀ ಶರೀರದೊಳಿಲ್ಲಿ
ದೊರಕಲರಿಯದು ನಂದಿಕೇಶ್ವರನೆ ಕೇಳಯ್ಯ
ಭರತಖಂಡದ ಕರ್ಮಭೂಮಿಯುಂಟಲ್ಲಿ ನೀವೆಲ್ಲರುಂ ಪೋಗಿ ಬಳಿಕ
ನರಜನ್ಮದೊಳ್ ಜನಿಸಿ ಪ್ರತಿನಾಮ ರೂಪು ಕ್ರಿಯೆ
ವೆರಸಿ ನಿರ್ಮಳ ವೀರಶೈವಮಾರ್ಗವನುಮಾ
ಚರಿಸಿ ನಡೆದಲ್ಲದೀ ಷಟ್ಸ್ಥಲಂ ಸಾಧ್ಯಮಲ್ಲೆನೆ ವೃಷಭನಿಂತೆಂದನು ೨೩

ತಂದೆತಾಯ್ಗಳ್ ತಮ್ಮ ಮಕ್ಕಳ್ಗೆ ತನಿವಾಲ
ತಂದಳ್ಕರಿಂದೆರೆವ ಮಾಳ್ಕೆಯಿಂ ನೀವೀಗ
ಲೆಂದಂತೆ ನರಜನ್ಮದೊಳ್ ಪುಟ್ಟಿ ವೀರಶೈವಾಚಾರದಿಂದಿರುತಿರೆ
ಎಂದಿಗೀ ಶಿವತತ್ತ್ವಷಟ್ಸ್ಥಲಂ ಸಕಲಗಣ
ವೃಂದಕ್ಕೆ ಸಾಧ್ಯಮಹುದಲ್ಲಿ ಬೋಧಿಸುವರಾ
ರೆಂದು ಕೃಪೆಯಿಂ ನಿರೂಪಿಸವೇಳ್ಕುಮೆಮಗೆಂದು ನಂದಿಕೇಶಂ ನುಡಿದನು ೨೪

ಎಲೆ ನಂದಿಕೇಶ ಕೇಳ್ ಭೂಮಿಯೊಳ್ ಜನಿಸಿ ಮನ
ವೊಲಿದು ಜಂಗಮದಾ ಪ್ರಸಾದ ಪಾದೋದಕಂ
ಗಳನಾಂತು ಗುರುಲಿಂಗಭಕ್ತಿಯಿಂ ವೀರಶೈವಾಚಾರದಿಂದಿರುತಿರೆ

ಮತ್ತೆ ಹೀಗೆ ಹೇಳಿದನು. ೨೩. "ಅಯ್ಯಾ ನಂದಿಕೇಶ್ವರನೆ ಕೇಳು. ಈ ಜನ್ಮದಲ್ಲಿ ಈ ಕೈಲಾಸದಲ್ಲಿ ಷಟ್ಸ್ಥಲಮಾರ್ಗವು ಸಿದ್ಧಿಸಲಾರದು. ಭರತಖಂಡದಲ್ಲಿ ಕರ್ಮಭೂಮಿಯೊಂದಿದೆ. ಅಲ್ಲಿಗೆ ನೀವೆಲ್ಲರೂ ಹೋಗಿ ಮಾನವರಾಗಿ ಜನಿಸಿರಿ. ಪ್ರತಿಯೊಬ್ಬರೂ ಬೇರೆ ಬೇರೆಯಾಗಿ ಹುಟ್ಟಿ, ಬೇರೆ ಬೇರೆ ಹೆಸರನ್ನು ಪಡೆದು, ರೂಪವನ್ನು ತಳೆದು, ಕೆಲಸಗಳಲ್ಲಿ ತೊಡಗಿ, ನೀವೆಲ್ಲರೂ ಪವಿತ್ರವಾದ ವೀರಶೈವಮಾರ್ಗವನ್ನು ಅನುಸರಿಸಿ ನಡೆಯಿರಿ. ಇಲ್ಲದಿದ್ದರೆ ಷಟ್ಸ್ಥಲತತ್ತ್ವವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದು" ಎಂದನು. ಆಗ ನಂದಿಯು ಶಿವನನ್ನು ಕುರಿತು, ೨೪. "ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಮಧುರವಾದ ಹಾಲನ್ನು ಪ್ರೀತಿಯಿಂದ ಕುಡಿಸುತ್ತಾರೆ. ಅದೇ ರೀತಿ ನೀವು ಈಗ ಹೇಳಿದಂತೆ ಮನುಷ್ಯಜನ್ಮದಲ್ಲಿ ಹುಟ್ಟಿ, ವೀರಶೈವಾಚಾರದಿಂದ ಇದ್ದರೆ, ಈ ಶಿವತತ್ತ್ವಷಟ್ಸ್ಥಲವು ಎಲ್ಲ ಗಣಸಮೂಹಕ್ಕೂ ಅಲ್ಲಿ ಯಾವಾಗ ಸಾಧ್ಯವಾಗುತ್ತದೆ ? ಅಲ್ಲಿ ಈ ತತ್ತ್ವವನ್ನು ಭೋಧಿಸುವವರು ಯಾರು? ಕೃಪೆಯಿಟ್ಟು ನಮಗೆ ತಿಳಿಸಬೇಕು" ಎಂದು ಕೇಳಿದನು. ೨೫. "ಎಲೆ ನಂದಿಕೇಶನೆ, ನೀನು ಭೂಮಿಯಲ್ಲಿ ಹುಟ್ಟಿ, ಮನಃಪೂರ್ವಕವಾಗಿ ಜಂಗಮ. ಮಹಾಪ್ರಸಾದ, ಪಾದೋದಕಗಳನ್ನು ಪಡೆದು, ಗುರು, ಲಿಂಗಭಕ್ತಿಯಿಂದ ವೀರಶೈವ

CC-0. Jangamwadi Math Collection. Digitized by eGangotri

ಸಲೆ ನಿನ್ನ ಭಕ್ತಿಯೊಳು ಲಿಂಗರೂಪಹೆವು ನಿ
ರ್ಮಲಭಾವಕೊಲಿದು ಜಂಗಮವಹೆವು ಷಟ್ಸ್ಥಲಂ
ದಿಳಿಪಲೆಮ್ಮಯ ಚಿತ್ಕಳಾಕುಮಾರಂ ಬರ್ಪನೆನೆ ಗಿರಿಜೆಯಿಂತೆಂದಳು ೨೫

ಶಿವನೆ ಕೇಳೆನ್ನ ಬಸಿರೊಳ್ ಪುತ್ರರುದಿಸದೀ
ವಿವರಮಂ ದೇವರರಿವಿರಿ ಮಕ್ಕಳಂ ಪಡೆವ
ನೆವನಿದೊಂದಿದೆ ಷಟ್ಸ್ಥಲಂ ತಿಳಿವೊಡೆನ್ನ ಚಿತ್ಕಳೆಯೆ ನಂದೀಶನೊಡನೆ
ಅವನಿತಳದೊಳ್ ಜನಿಸಲಾ ಸತಿಯು ಗರ್ಭದೊಳ್
ತವೆ ತವಜ್ಞಾನಸುತನುದಿಸಿ ನಂದ್ಯಾದ್ಯಮರ
ನಿವಹಕ್ಕೆ ಷಟ್ಸ್ಥಲವನುಪದೇಶವೀವಂತೆ ಕರುಣಿಸುವುದೆನಗೆಂದಳು ೨೬

ಎಂದೊಡಂತಾಗಲೌ ಗಿರಿಜೆ ನಾರದನಿಂದು
ಬಂದ ಕಾರ್ಯಂ ಸಫಲಮಾಯ್ತು ನಿನ್ನಿಂದಮೀ
ನಂದೀಶನಿಂದೆ ಮರ್ತ್ಯದ ಮಹಾಗಣಕೆ ನೋಡಲ್ ಭವಂ ಹಿಂಗಿದಪುದು
ಮುಂದೆ ಭೂಲೋಕದೊಳ್ ವೀರಶೈವಂ ನೆಲೆಗೆ
ನಿಂದಪುದು ನೀವೆಲ್ಲರುಂ ಪೋಗಿ ಜನಿಸಲಾಂ
ಹಿಂದೆಮ್ಮ ಸುಜ್ಞಾನಪುತ್ರನಂ ಕಳುಹಿದಪೆವೆನೆ ವೃಷಭನಿಂತೆಂದನು ೨೭

ಮಾರ್ಗವನ್ನು ಅನುಸರಿಸುತ್ತಿರು. ಆಗ ನಿನ್ನ ಭಕ್ತಿಯ ಪ್ರಭಾವದಿಂದ ನಾನು ಲಿಂಗರೂಪವನ್ನು ಧರಿಸುತ್ತೇನೆ. ಪರಿಶುದ್ಧವಾದ ಭಾವಕ್ಕೆ ಒಲಿದು ಜಂಗಮರೂಪವನ್ನು ಪಡೆಯುತ್ತೇನೆ. ಆಗ ಷಟ್ಸ್ಥಲಮಾರ್ಗವನ್ನು ತಿಳಿಸಲು ನಮ್ಮ ಚಿತ್ಕಳೆಯ ಕುಮಾರನು ಬರುತ್ತಾನೆ'' ಎನ್ನಲು ಗಿರಿಜೆಯು ಹೀಗೆ ಹೇಳಿದಳು. ೨೬. "ಶಿವನೆ, ನನ್ನ ಹೊಟ್ಟೆಯಲ್ಲಿ ಮಕ್ಕಳು ಹುಟ್ಟದಿರುವ ವಿಷಯ ನಿನಗೆ ತಿಳಿದಿದೆ. ಮಕ್ಕಳನ್ನು ಪಡೆಯುವುದಕ್ಕೆ ಇದೊಂದು ನೆವ ಇದೆ. ಷಟ್ಸ್ಥಲವನ್ನು ತಿಳಿಯುವುದಾದರೆ ನಂದೀಶನ ಜೊತೆಯಲ್ಲಿ ನನ್ನ ಚಿತ್ಕಳೆಯೇ ಭೂಮಿಯಲ್ಲಿ ಸ್ತ್ರೀಯಾಗಿ ಹುಟ್ಟಲಿ. ಆ ಸತಿಯ ಗರ್ಭದಲ್ಲಿ ನಿಮ್ಮ ಜ್ಞಾನಸುತನು ಉದಿಸಲು, ಆ ಮಗನೆ ನಂದಿ ಮೊದಲಾದ ಅಮರಗಣಗಳಿಗೆ ಷಟ್ಸ್ಥಲವನ್ನು ಉಪದೇಶಿಸುವಂತೆ ಅನುಗ್ರಹಿಸಬೇಕು'' ಎಂದಳು. ೨೭. ಆಗ ಶಿವನು ಗಿರಿಜೆಯನ್ನು ಕುರಿತು, "ಹಾಗೆಯೇ ಆಗಲಿ ; ನಾರದನು ಈ ದಿನ ಬಂದ ಕೆಲಸ ಕೈಗೂಡಿತು. ನಿನ್ನಿಂದಲೂ ಮತ್ತು ಈ ನಂದೀಶನಿಂದಲೂ ಭೂಲೋಕದ ಭಕ್ತರ ಭವಬಂಧ ಕಷ್ಟ ಕಳೆದುಹೋಗುತ್ತದೆ. ಭೂಲೋಕದಲ್ಲಿ ಇನ್ನು ಮುಂದೆ ವೀರಶೈವ ಧರ್ಮವು ಸ್ಥಿರವಾಗಿ ನಿಲ್ಲುತ್ತದೆ. ನೀವೆಲ್ಲರೂ ಹೋಗಿ ಅಲ್ಲಿ ಜನಿಸಿರಿ. ಅನಂತರ ನಿಮ್ಮ ಹಿಂದೆಯೇ ನನ್ನ ಸುಜ್ಞಾನಪುತ್ರನನ್ನು ಕಳಿಸುತ್ತೇನೆ'' ಎನ್ನಲು ನಂದಿಯು ಹೀಗೆಂದನು.

CC-0. Jangamwadi Math Collection. Digitized by eGangotri

ಕಳುಪಿದಪಿರೇ ಕಳುಪಿದಪೆವು ನಂಬಲೆ ನಂಬು
ತಳುವಿಲ್ಲ ನಿನ್ನನಗಲೆವು ಮಗನೆ ಪೋಗು ಕ
ತ್ತಲೆಯನೊಳ್ಪೆಳಗು ಪುಸಿಯುಂ ದಿಟಂ ವಿಷಮನಮೃತಂ ಪುಣ್ಯಮಾ ಪಾಪವ
ಸಲೆ ತೆವರುವಂತೆ ಪರವಾದಮಂ ಗೆಲ್ದು ಭೂ
ತಳದೊಳಗಣಿತ ಪವಾಡಂಗಳಂ ಮೆರೆದು ನಿ
ರ್ಮಳಭಕ್ತಿಯಿಂ ವೀರಶೈವಮಾರ್ಗಂಬಿಡಿದು ನಡೆಯೆಂದು ಬೀಳ್ಕೊಟ್ಟೆವು ೨೮

ಜೀಯ ಬದುಕಿದೆವೆಂದಸಂಖ್ಯಾತಗಣದೊಳತಿ
ಪ್ರೀಯದಿಂದೆದ್ದುದೇಳ್ನೂರೆಪ್ಪತ್ತಮರಗಣ
ಮಾಯತಿಕೆಯಿಂ ರುದ್ರಕನ್ಯೆಯರ್ ಕೆಲಕೆಲರ್ಸಹಿತಮತಿಭಕ್ತಿಯಿಂದೆ
ದಾಯದಿಂದೆರಗಿ ಬೀಳ್ಕೊಂಡು ನಾನಾ ನರರ
ಕಾಯದೊಳ್ ಜನಿಸಿ ತತ್ತಜ್ಜಾತಿಯಿಂದೆಸೆವ
ಕಾಯಕಂಗಳನಾಂತು ವೀರಶೈವಾಚಾರದಿಂದಿರ್ಪರವರೆಂದನು ೨೯

ಇನ್ನವರೊಳಧಿಕನಿರ್ಮಾಯನಲ್ಲಮನಾಗಿ
ಯೆನ್ನ ಪ್ರತಿಬಿಂಬಮೇ ಸಿದ್ಧರಾಮನುಮಾಗಿ
ಚೆನ್ನವೀರೇಶ್ವರನೆ ಮಡಿವಳಯ್ಯಗಳಾಗಿ ಮಾದೇವಿಯೆನಿಪ ರುದ್ರ

೨೮. ''ಕಳಿಸುತ್ತೀರಾ ?'', ''ಕಳಿಸುತ್ತೇವೆ! '' ; ''ನಂಬಲೆ?'' ''ನಂಬು, ತಡಮಾಡುವುದಿಲ್ಲ. ನಿನ್ನನ್ನು ಅಗಲಿ ನಾವು ಇರುವುದಿಲ್ಲ. ಮಗನೇ ಹೋಗು. ಕತ್ತಲೆಯನ್ನು ಒಳ್ಳೆಯ ಬೆಳಕೂ, ಸುಳ್ಳನ್ನು ಸತ್ಯವೂ, ವಿಷವನ್ನು ಅಮೃತವೂ, ಪಾಪವನ್ನು ಪುಣ್ಯವೂ ನಾಶ ಮಾಡುತ್ತದೆ. ಹಾಗೆಯೇ ಅನ್ಯಮತವನ್ನು ಗೆದ್ದು, ಪ್ರಪಂಚದಲ್ಲಿ ಅನೇಕ ಪವಾಡಗಳನ್ನು ಮೆರೆದು, ನಿರ್ಮಲವಾದ ಭಕ್ತಿಯಿಂದ ವೀರಶೈವಮಾರ್ಗವನ್ನು ಅನುಸರಿಸಿ ನಡೆ'' ಎಂದು ಕಳಿಸಿಕೊಟ್ಟೆವು. ೨೯. ಸ್ವಾಮಿಯೆ, ಬದುಕಿದೆವು ಎಂದು ಬಹಳ ಸಂತೋಷದಿಂದ ಅಲ್ಲಿ ನೆರೆದಿದ್ದ ಅಸಂಖ್ಯಾತ ಗಣಗಳಲ್ಲಿ ಏಳು ನೂರ ಎಪ್ಪತ್ತು ಅಮರಗಣಗಳು ಎದ್ದುವು. ಶ್ರದ್ಧಾಸಕ್ತಿಗಳಿಂದ ರುದ್ರಕನ್ನೆಯರು ಕೆಲ ಕೆಲವರ ಸಹಿತ ಬಹಳ ಭಕ್ತಿಯಿಂದ ಸಾಲು ಸಾಲಾಗಿ ನಿಂತು ನಮಸ್ಕರಿಸಿ, ಅಲ್ಲಿಂದ ಹೊರಟು, ಬೇರೆ ಬೇರೆ ಮನುಜದೇಹದಲ್ಲಿ ಹುಟ್ಟಿದರು. ಆಯಾ ಜಾತಿಯವರಿಗೆ ಯೋಗ್ಯವಾದ ಕಾಯಕಗಳನ್ನು ಕೈಗೊಂಡು ವೀರಶೈವಧರ್ಮದಲ್ಲಿ ನಡೆಯುತ್ತಿರುವರು'' ಎಂದನು. ೩೦. ''ಅವರಲ್ಲಿ ಶ್ರೇಷ್ಠನಾದ ನಿರ್ಮಾಯನು ಅಲ್ಲಿ ಮಗನಾಗಿ ಹುಟ್ಟಿದ್ದಾನೆ. ನನ್ನ ಪ್ರತಿಬಿಂಬವೇ ಸಿದ್ಧರಾಮನಾಗಿ ಹುಟ್ಟಿದ್ದಾನೆ. ಚೆನ್ನವೀರೇಶ್ವರನೇ ಮಡಿವಳಯ್ಯನಾಗಿ ಹುಟ್ಟಿದ್ದಾನೆ, ಮಾದೇವಿಯೆನ್ನುವ ರುದ್ರಕನ್ನಿಕೆಯೇ ಮಾದೇವಿಯಕ್ಕ

CC-0. Jangamwadi Math Collection. Digitized by eGangotri

ಕನ್ನೆಯೀ ಮಾದೇವಿಯಕ್ಕ ತಾನಾಗಿ ಪ್ರ
ಸನ್ನತೆಯೊಳವನಿಯೊಳಗಲ್ಲಲ್ಲಿ ಜನಿಸಿರ್ಪ
ರುನ್ನತಶಿವಾಚಾರಿ ಗಿರಿಜೆ ನಂದಿಯರಿರವನಿನ್ನು ನೀಂ ಕೇಳೆಂದನು ೩೦

ರಾಜಿಸುವನೊರ್ವ ವಿಪ್ರಂ ಮಂಡಿಗೆಯ ಮಾದಿ
ರಾಜವೆಸರಿಂದಾತನರ್ಧಾಂಗಿ ಮಾದಾಂಬಿ
ಕಾಜಠರದೊಳಗೆ ಪಾರ್ವತಿಯು ಚಿತ್ಕಳೆಯುದಿಸಿ ನಾಗಲಾಂಬಿಕೆವೆಸರೊಳು
ಆ ಜಗನ್ಮಾತೆಯಿರ್ಪಳಾಕೆಯೊಡನಾ ಬಸವ
ರಾಜವೆಸರಿಂ ನಂದಿಕೇಶ್ವರಂ ಜನಿಸಿ ಕಡು
ತೇಜದಿಂ ಕಲ್ಯಾಣಪುರದರಸು ಬಿಜ್ಜಳನ ಮಂತ್ರಿಯಾಗಿರುತಿರ್ಪನು ೩೧

ಆ ಸಕಲ ಸಚಿವರ ಶಿರೋರತ್ನವೆನಿಸಿ ಮ
ತ್ತಾ ಸಮಸ್ತಾಮರಗಣಂಗಳ್ಗೆ ಮುಖವೆನಿಸಿ
ಸಾಸದ ಪವಾಡಂಗಳಂ ಮೆರೆದು ಪರಸಮಯಗರ್ವಮಂ ಜರೆದು ಮುರಿದು
ಓಸರಿಸದೊಲಿದು ಲಕ್ಷದಮೇಲೆ ತೊಂಬತಾ
ರ್ಸಾಸಿರ ಮಹಾಜಂಗಮಕ್ಕೆ ಮೃಷ್ಟಾನ್ನಮಂ
ದಾಸೋಹಮಂ ಮಾಡುತಾವಗಂ ನಿನ್ನ ಬರವಂ ಬಯಸುತಿರುತಿರ್ಪನು ೩೨

ಆ ನಂದಿಕೇಶನೆಮ್ಮಯ ಭಕ್ತಿರೂಪು ಪ್ರಭು
ತಾನೆಮ್ಮ ವೈರಾಗ್ಯರೂಪು ನೀನೆಮ್ಮ ಸು
ಜ್ಞಾನರೂಪಾ ನಾಗಲಾಂಬಿಕೆಯೆ ಗಿರಿಸುತಾರೂಪಾಕೆಯುದರದಲ್ಲಿ

ನಾಗಿ ಹುಟ್ಟಿದ್ದಾಳೆ. ಇವರೆಲ್ಲ ಸಂತೋಷದಿಂದ ಭೂಮಿಯಲ್ಲಿ ಅಲ್ಲಲ್ಲಿ ಜನಿಸಿರುತ್ತಾರೆ. ಶ್ರೇಷ್ಠ ಶಿವಧರ್ಮಾನುಯಾಯಿಗಳಾದ ಪಾರ್ವತಿ ಮತ್ತು ನಂದೀಶರ ವಿಷಯವನ್ನು ನೀನು ಕೇಳು'' ಎಂದನು. ೩೧. ''ಮಂಡಿಗೆಯ ಮಾದಿರಾಜನೆಂಬೊಬ್ಬ ಬ್ರಾಹ್ಮಣನು ಪ್ರಸಿದ್ಧನಾಗಿದ್ದಾನೆ. ಅವನ ಪತ್ನಿ ಮಾದಾಂಬಿಕೆ. ಆಕೆಯ ಹೊಟ್ಟೆಯಲ್ಲಿ ಪಾರ್ವತಿಯ ಚಿತ್ಕಳೆಯು ನಾಗಲಾಂಬಿಕೆ ಎಂಬ ಹೆಸರನ್ನು ಪಡೆದು ಹುಟ್ಟಿತು. ಆಕೆಯ ಜೊತೆಯಲ್ಲಿ ಬಸವರಾಜನೆಂಬ ಹೆಸರಿನಿಂದ ನಂದಿಕೇಶ್ವರನು ಹುಟ್ಟಿದ್ದಾನೆ. ಮತ್ತು ಕಲ್ಯಾಣಪುರದ ರಾಜನಾದ ಬಿಜ್ಜಳನಿಗೆ ಮಂತ್ರಿಯಾಗಿ ಪ್ರಖ್ಯಾತನಾಗಿದ್ದಾನೆ, ೩೨. ಆ ಬಿಜ್ಜಳನ ಆಸ್ಥಾನದಲ್ಲಿದ್ದ ಎಲ್ಲ ಮಂತ್ರಿಗಳಿಗೂ ಬಸವರಾಜನು ನಾಯಕರತ್ನನಾಗಿದ್ದಾನೆ. ಎಲ್ಲ ಭಕ್ತರ ಸಮೂಹಕ್ಕೆ ಮುಖ್ಯಸ್ಥನಾಗಿದ್ದಾನೆ. ಅದ್ಭುತವಾದ ಪವಾಡಗಳನ್ನು ತೋರಿಸಿ, ಅನ್ಯಮತದ ಗರ್ವವನ್ನು ಕುಗ್ಗಿಸಿ ಮುರಿದಿದ್ದಾನೆ. ಅಳುಕದೆ ಮನದೊಲವಿನಿಂದ ಒಂದು ಲಕ್ಷದ ತೊಂಬತ್ತಾರು ಸಾವಿರ ಮಹಾಜಂಗಮರಿಗೆ ಮೃಷ್ಟಾನ್ನದ ದಾಸೋಹವನ್ನು ಮಾಡುತ್ತಾ ಸದಾ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದಾನೆ. ೩೩. ಆ ನಂದೀಶ್ವರನು ನಮ್ಮ ಭಕ್ತಿಯ ಪ್ರತಿರೂಪ. ಪ್ರಭುದೇವನೇ ನಮ್ಮ ವೈರಾಗ್ಯದ ರೂಪ. ನೀನು ನಮ್ಮ ಸುಜ್ಞಾನದ ಪ್ರತೀಕ. ಆ ನಾಗಲಾಂಬಿಕೆಯೇ ಪಾರ್ವತಿಯ

CC-0. Jangamwadi Math Collection. Digitized by eGangotri

ನೀನವನಿಯೊಳ್ ಸ್ವೇಚ್ಛೆಯಿಂದುದಿಸಿಯವರನನು
ಮಾನಿಸದೆ ಗುರುಭಾವದೊಳ್ ಕಂಡು ತತ್ತ್ವಮಂ
ನೀನವರ ಗುರುವಾಗಿ ತಿಳಿಸು ತಳುವದೆ ಷಟ್ಸ್ಥಲಬ್ರಹ್ಮ ಹೋಗೆಂದವನು ೩೩

ಎನೆ ಮಹಾದೇವ ನೀವಿಂತೆಂದು ನುಡಿವಾಗ
ಲೆನಗೇಂ ಸ್ವತಂತ್ರತೆಯೆ ನೀವಿರಿಸಿದಂತಿರ್ಪೆ
ನೆನಲೀಶ್ವರಂ ನಕ್ಕು ತನ್ನ ಸುಜ್ಞಾನರೂಪಂ ಮುಖದೊಳೊಲಿದಡಗಿಸಿ
ಘನಹರುಷದಿಂದಲೀಶ್ವರನಂದು ತನ್ನ ಕ
ಣ್ಗೊನೆಯೊಳೋಲಗವಂ ವಿಸರ್ಜಿಸುತ್ತಾಕ್ಷಣಂ
ನೆನೆದು ಕಲ್ಯಾಣಪುರದೊಳಗಿರ್ಪ ನಾಗಲಾಂಬಿಕೆಯ ಗೃಹವಂ ಸಾರ್ದನು ೩೪

ಇಂತೆಸೆವ ಚೆನ್ನಬಸವೇಶನ ಪುರಾಣವಂ
ಸಂತಸದಿ ಬರೆದವರ್ಗೋದಿದರ್ಗರ್ಥಮಾ
ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೫

## ಮೂರನೆಯ ಸಂಧಿ ಸಂಪೂರ್ಣ

ಪ್ರತಿರೂಪ. ಆಕೆಯ ಉದರದಲ್ಲಿ ನೀನು ಭೂಮಿಯಲ್ಲಿ ಸ್ವಇಚ್ಛೆಯಿಂದ ಜನ್ಮ ತಾಳು. ಅವರೆಲ್ಲರನ್ನು ಶಂಕೆಯಿಲ್ಲದೆ ಪೂಜ್ಯಭಾವದಿಂದ ಕಾಣು. ನೀನು ಗುರುವಾಗಿ ಅವರಿಗೆ ಶಿವತತ್ತ್ವವನ್ನು ತಿಳಿಸು. ಎಲೈ ಷಟ್ಸ್ಥಲಬ್ರಹ್ಮಿಯೇ ವಿಳಂಬ ಮಾಡದೆ ಹೋಗು" ಎಂದನು. ೩೪. ಹೀಗೆ ಹೇಳಿದ ಶಿವನ ಮಾತಿಗೆ ನಂದಿಯು, "ಮಹಾದೇವ, ನೀವು ಹೀಗೆ ಹೇಳುವಾಗ ನನಗೇನು ಸ್ವಾತಂತ್ರ್ಯವಿದೆ? ನೀವು ಇರಿಸಿದಂತೆ ಇರುತ್ತೇನೆ" ಎನ್ನಲು, ಈಶ್ವರನು ನಕ್ಕು ತನ್ನ ಸುಜ್ಞಾನರೂಪವನ್ನು ಪ್ರೀತಿಯಿಂದ ಮುಖದಲ್ಲಿ ಅಡಗಿಸಿಕೊಂಡನು. ಬಹಳ ಸಂತೋಷದಿಂದ ಅಂದು ಈಶ್ವರನು ತನ್ನ ಕಣ್ಣ ಕೊನೆಯ ಸನ್ನೆಯಿಂದಲೇ ಒಡ್ಡೋಲಗವನ್ನು ಮುಕ್ತಾಯ ಮಾಡಿ. ಆಕ್ಷಣವೇ ಕಲ್ಯಾಣಪುರದಲ್ಲಿರುವ ನಾಗಲಾಂಬಿಕೆಯ ಮನೆಯನ್ನು ಕುರಿತು ನಡೆದನು. ೩೫. ಈ ರೀತಿಯಲ್ಲಿ ಕಂಗೊಳಿಸುವ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ. ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಕಾಮವೈರಿಯಾದ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖ, ಭೋಗ ಮತ್ತು ಅನಂತ ಸೌಭಾಗ್ಯಗಳನ್ನು ಕೊಟ್ಟು ಕಾಪಾಡುವನು,

## ಮೂರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ನಾಲ್ಕನೆಯ ಸಂಧಿ

ಸೂಚನೆ : ಧರೆಯೊಳುದಿಸಿರ್ದ ನಂದ್ಯಾದ್ಯಮರಗಣಕೆ ತ
ತ್ತ್ವರಹಸ್ಯಮಂ ತಿಳಿಪ ಶಿವಚಿತ್ಕಳಾರೂಪ
ಮುರುಪ್ರಸಾದದೆ ನಾಗಲಾಂಬೆಯುದರದವನೊಪೆದು ಚೆನ್ನಬಸವಂ ಜನಿಸಿದಂ

ಕುಮುದಸಖಿವರ ಕಲಾಭರಣ ಪಾವನಚರಣ
ಕುಮುದಖಿಳವನವುಹಾದಾವ ದೇವರದೇವ
ಕುಮುದಾರ್ಕವಹ್ನಿತ್ರಿಣೇತ್ರ ಸನ್ನುತಗಾತ್ರ ಸುಪವಿತ್ರ ಸಚ್ಚರಿತ್ರ
ಕುಮುದವಾಹನವಿನುತಪಾದ ಗಿರಿಜಾನಯನ
ಕುಮುದಚಂದ್ರಮ ವಿಕಾಶಿಸು ನಿನ್ನ ಭಕ್ತಹೃತ್
ಕುಮುದಮಂ ಪಂಪಾವಿರೂಪಾಕ್ಷ ಸುಜನಸಂರಕ್ಷ ಗೀರ್ವಾಣಪಕ್ಷ ೧

ಇರಲಿತ್ತ ನಾಗಲಾಂಬಿಕೆ ಮಹಾಭಕ್ತಿಯಿಂ
ಗುರುಲಿಂಗಜಂಗಮಾರ್ಚನೆಯನೊಲವಿಂ ಮಾಡಿ
ಪರಮಪ್ರಸಾದಮಂ ಸವಿದು ಶಯ್ಯೆಯೊಳಂದು ಪರಶಿವಧ್ಯಾನದಿಂದೆ
ಹರುಷದಿಂ ಯೋಗನಿದ್ರಾಮುದ್ರಿತಾಕ್ಷಿ ತ
ತ್ಪರವಶದೊಳಿರಲೀಶ್ವರಂ ಕರುಣದಿಂದೆ ವರ
ಚರಮೂರ್ತಿಯಾಗಿ ತತ್ಸತಿಯನೇಳೆಂದೊಡನೆ ಕರೆದೆಚ್ಚರಿಸಿ ನುಡಿದನು ೨

ಸೂಚನೆ : ಭೂಮಿಯಲ್ಲಿ ಹುಟ್ಟಿದ ನಂದಿಯೇ ಮೊದಲಾದ ಅಮರಗಣಗಳಿಗೆ ತತ್ತ್ವದ ರಹಸ್ಯವನ್ನು ತಿಳಿಸಲು ಶಿವನ ಚಿತ್ಕಳಾರೂಪನಾದ ಚೆನ್ನಬಸವನು ಶ್ರೇಷ್ಠವಾದ ವರಪ್ರಸಾದದಿಂದ ನಾಗಲಾಂಬಿಕೆಯ ಗರ್ಭದಲ್ಲಿ ಜನಿಸಿದನು. ೧. ಚಂದ್ರನನ್ನು ಶ್ರೇಷ್ಠವಾದ ಆಭರಣವನ್ನಾಗಿ ಉಳ್ಳವನೇ, ಪವಿತ್ರವಾದ ಪಾದವುಳ್ಳವನೇ, ನಿಷ್ಠುರರಾದ ರಾಕ್ಷಸರ ಸಮೂಹಕ್ಕೆ ಭಯಂಕರವಾದ ದಾವಾಗ್ನಿಯಂತಿರುವವನೇ, ದೇವರದೇವ. ಚಂದ್ರ, ಸೂರ್ಯ, ಅಗ್ನಿಯೆಂಬ ಮೂರು ಕಣ್ಣುಳ್ಳವನೇ, ಎಲ್ಲರಿಂದಲೂ ಹೊಗಳಿಸಿಕೊಳ್ಳುವ ಆಕಾರವುಳ್ಳವನೇ, ಪುಣ್ಯಮೂರ್ತಿಯೇ, ಒಳ್ಳೆಯ ಚಾರಿತ್ರ್ಯವುಳ್ಳವನೇ, ಇಂದ್ರನಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳವನೇ, ಗಿರಿಜೆಯ ಕಣ್ಣೆಂಬ ಕನ್ನೈದಿಲೆಗೆ ಚಂದ್ರನಂತಿರುವ, ಸುಜನರನ್ನು ಸಂರಕ್ಷಿಸುವ, ದೇವತೆಗಳ ಪಕ್ಷಪಾತಿಯಾದ ಪಂಪಾ ವಿರೂಪಾಕ್ಷನೇ, ಭಕ್ತರ ಹೃದಯವೆಂಬ ನೈದಿಲೆಯನ್ನು ಅರಳಿಸು. ೨. ಹೀಗೆ ಇರುವಾಗ ಇತ್ತಕಡೆ ನಾಗಲಾಂಬಿಕೆಯು ಮಹಾಭಕ್ತಿ ಪ್ರೀತಿಗಳಿಂದ ಗುರುಲಿಂಗಜಂಗಮ ಪೂಜೆಯನ್ನು ಮಾಡಿದಳು. ಪವಿತ್ರವಾದ ಪ್ರಸಾದವನ್ನು ಸ್ವೀಕರಿಸಿ ಹಾಸಿಗೆಯಲ್ಲಿ ಪರಮೇಶ್ವರನ ಧ್ಯಾನ ಮಾಡುತ್ತಾ ಸಂತೋಷದಿಂದ ಮಲಗಿ ಯೋಗನಿದ್ರೆಯಿಂದ ಕಣ್ಣುಗಳನ್ನು ಮುಚ್ಚಿದ್ದಳು. ಹೀಗೆ ಅವಳು ಪರವಶಳಾಗಿದ್ದಾಗ ಶಿವನು ಕರುಣೆಯಿಂದ

CC-0. Jangamwadi Math Collection. Digitized by eGangotri

ಎಲೆ ತರುಣಿ ಕೊಳ್ಳೌ ಮಹಾಪ್ರಸಾದವನೆನಲ್
ನಲಿದು ಕೈಕೊಂಡು ಲಿಂಗಕೆ ಕೊಟ್ಟು ತಾಂ ಕೊಂಡ
ಬಳಿಕ ಚರರೂಪನಡಗಿಸಿ ಪಂಚವದನ ದಶಭುಜ ತ್ರಿಪಂಚಾಕ್ಷಿಯಿಂದೆ
ಪೊಳೆವ ಫಣಿಕಟಕ ತ್ರಿಶೂಲ ಡಮರುಗದಿಂದೆ
ಪುಲಿದೊವಲಿನುಡಿಗೆಯಿಂ ಪಾರ್ವತಿಸಮೇತದಿಂ
ದೊಲಿದು ಪ್ರಸನ್ನಭಾವದೊಳೆ ಪರಶಿವನಾಗಳಾ ತರುಣಿಗಿಂತೆಂದನು ೩

ಲಲಿತಾಂಗಿ ಸಂಕಲ್ಪಮಂ ಮಾಡಬೇಡ ನಾಂ
ತಿಳಿಪುವೆಂ ಪೊಸತಪ್ಪ ಚೋದ್ಯಮಂ ನೀಂ ಕೇಳ್ವು
ದೊಲಿದು ನಮ್ಮೀ ಚಿತ್ಕಳಾಮೃತಪ್ರಸಾದಮಿದರಿಂ ನಿನ್ನ ಗರ್ಭದೊಳಗೆ
ತೊಳಗುವೆಮ್ಮೀ ಷಣ್ಮುಖಸ್ಥಿತಪ್ರಣವನಿ
ರ್ಮಳರೂಪನಾ ಷಟ್ಸ್ಥಲಬ್ರಹ್ಮಿ ಸಕಲಭೂ
ತಳವಂದ್ಯನಗಣಿತಪವಾಡಪುರುಷಂ ಜನಿಪನೆಂದೀಶ್ವರಂ ನುಡಿದನು ೪

ಪೊಸತಪ್ಪ ವೀರಶೈವಾಚಾರಮಂ ಪ್ರತಿ
ಷ್ಠಿಸಿ ಜೈನ ಬೌದ್ಧ ಚಾರ್ವಾಕರ ಮತವನಳಿದು
ಬಸವಾದಿ ಪ್ರಮಥರ್ಗೆ ಷಟ್ಸ್ಥಲಬ್ರಹ್ಮೋಪದೇಶದಿಂ ನಿಜಪದವನು

ಜಂಗಮಮೂರ್ತಿಯಾಗಿ ಬಂದು ಆ ಸತೀಶಿರೋಮಣಿಯನ್ನು ಏಳು ಎಂದು ಕರೆದು ಎಚ್ಚರಿಸಿ ಹೇಳಿದನು. ೩. “ಎಲೈ ತರುಣಿಯೆ, ಈ ಮಹಾಪ್ರಸಾದವನ್ನು ತೆಗೆದುಕೊ” ಎಂದನು. ಅವಳು ಸಂತೋಷದಿಂದ ಅದನ್ನು ಸ್ವೀಕರಿಸಿ, ಆತ್ಮಲಿಂಗಕ್ಕೆ ನಿವೇದಿಸಿ, ತಾನೂ ತೆಗೆದುಕೊಂಡಳು. ಅನಂತರ ಶಿವನು ಜಂಗಮರೂಪವನ್ನು ಮರೆಮಾಡಿ ಐದು ಮುಖಗಳು, ಹತ್ತು ಕೈಗಳು, ಹದಿನೈದು ಕಣ್ಣುಗಳು, ಹೊಳೆಯುವ ಹಾವಿನ ಕಡಗ, ತ್ರಿಶೂಲ, ಡಮರುಗ, ಹುಲಿಯ ಚರ್ಮದ ಉಡುಗೆಯನ್ನು ಧರಿಸಿ, ಪಾರ್ವತೀ ಸಮೇತನಾಗಿ ಹರ್ಷದಿಂದ ಆ ತರುಣಿಯನ್ನು ಕುರಿತು ಹೀಗೆ ಹೇಳಿದನು. ೪. “ಕೋಮಲಾಂಗಿ, ಚಿಂತಿಸಬೇಡ. ನಾನು ತಿಳಿಸುವ ಹೊಸದಾದ ಸೋಜಿಗವನ್ನು ನೀನು ಪ್ರೀತಿಯಿಂದ ಕೇಳು. ಈ ಅಮೃತಸಮಾನವಾದ ಪ್ರಸಾದವು ನಮ್ಮ ಚಿತ್ಕಳಾರೂಪದಿಂದ ಉಂಟಾದುದು. ಇದರಿಂದ ನಿನ್ನ ಗರ್ಭದಲ್ಲಿ ಪ್ರಕಾಶಮಾನವಾದ, ಆರು ಮುಖವುಳ್ಳ, ನಿರ್ಮಲವಾದ ಓಂಕಾರಸ್ವರೂಪಿಯಾದ ಷಟ್ಸ್ಥಲಬ್ರಹ್ಮಿ ಜನಿಸುವನು. ಅವನು ಭೂಲೋಕದಲ್ಲಿ ಎಲ್ಲರಿಂದಲೂ ಗೌರವ ಪಡೆಯುತ್ತಾನೆ; ಮತ್ತು ಅಸಂಖ್ಯಾತವಾದ ಪವಾಡಗಳನ್ನು ಮೆರೆಯುತ್ತಾನೆ” ಎಂದು ಈಶ್ವರನು ಹೇಳಿದನು. ೫. “ವಿನೂತನವಾದ ವೀರಶೈವ ಧರ್ಮವನ್ನು ಸ್ಥಾಪಿಸಿ, ಜೈನ ಬೌದ್ಧ ಚಾರ್ವಾಕರ ಮತಗಳನ್ನು ನಾಶಗೊಳಿಸುತ್ತಾನೆ. ಬಸವನೇ ಮುಂತಾದ ಪ್ರಮಥರಿಗೆ ಷಟ್ಸ್ಥಲಬ್ರಹ್ಮೋಪದೇಶದಿಂದ ಕೈಲಾಸಪದವಿ

CC-0. Jangamwadi Math Collection. Digitized by eGangotri

ಒಸೆದೀವೆನೌ ನಿನ್ನ ಗರ್ಭದರ್ಭಕನುದಯಿ
ಪ್ಪೊಸಗೆಯಂ ಸಕಲಗಣಕರಿಪು ಶೀಘ್ರದೊಳೆನು
ತ್ತುಸಮಾಪ್ತ್ರಶಿಕ್ಷಂ ವಿರೂಪಾಕ್ಷನಾ ನಿರಾಕಾರ ರೂಪಂವಳಿದನು ೫

ಆನಿತರೊಳ್ ಕಣ್ದೆರೆದು ನಾಗಲಾಂಬಿಕೆ ತನ್ನ
ಮನೆಯೊಳೀಶ್ವರಮೂರ್ತಿಯಂ ಕಾಣದಿಂತಿದೇಂ
ಕನಸಾಗಿಯುಂ ಕನಸಿನಂದವಲ್ಲಿದು ನೋಡೆ ಪ್ರತ್ಯಕ್ಷಮೆಂಬಂತಿರೆ
ಮನದೊಳಗೆ ವಿಸ್ಮಯರಸಂ ತುಳುಕುತಿದೆಯೆನ್ನ
ನೆನಹಿನೊಳು ಶಿವರೂಪು ಹೊಳೆವುತಿದೆ ಚೋದ್ಯಮಿಂ
ದೆನುತೆ ಜಾನಿಪ ಸಮಯದೊಳ್ ಬೆಳಗುಜಾವಗೋಳಿಗಳುಲಿದುವೇನೆಂಬೆನು ೬

ಇಂದಿರನ ದೆಸೆಗೆಂಪು ಮೂಡೆ ಕತ್ತಲೆಯೋಡೆ
ಮಂದಾನಿಲಂ ತಂಪು ತೀಡೆ ಭ್ರಮರಂ ಪಾಡೆ
ಬಂದು ಚಕ್ರಂ ಕೂಡೆ ಕೈರವಂ ಬಾಡೆ ಕಮಲಂ ಬಿರಿದು ನಗೆಯೊಳಾಡೆ
ಮುಂದೊರ್ವ ವೀರಶೈವಾಚಾರ್ಯನೀ ಧರೆಗೆ
ಬಂದಿದಕೆ ನೂರುಮಡಿಯಾಗಿ ಬೆಳಗಂ ತೋರ್ಪ
ನೆಂದು ಸೂಚಿಸುವಂದದಿಂದುದಯಶೈಲಾಗ್ರದೊಳ್ ದಿನಪನುದಯಿಸಿದನು ೭

ಯನ್ನು ಮುಕ್ತಿಯನ್ನು ಕರುಣಿಸುತ್ತಾನೆ. ನಿನ್ನ ಗರ್ಭದಲ್ಲಿ ಮಗುವು ಹುಟ್ಟುವ ಶುಭ ವಾರ್ತೆಯನ್ನು ಶೀಘ್ರವಾಗಿ ಎಲ್ಲ ಗಣಗಳಿಗೂ ತಿಳಿಸು" ಎನ್ನುತ್ತ ಮನ್ಮಥನನ್ನು ಶಿಕ್ಷಿಸಿದ ವಿರೂಪಾಕ್ಷನು ಮಾಯವಾದನು. ೬. ಅಷ್ಟರಲ್ಲಿ ನಾಗಲಾಂಬಿಕೆಯು ಕಣ್ಣುಬಿಟ್ಟು ನೋಡಿದಳು. ತನ್ನ ಮನೆಯಲ್ಲಿ ಈಶ್ವರಮೂರ್ತಿಯು ಕಾಣಲಿಲ್ಲ. ಇದು ಕನಸಾದರೂ ಕನಸಿನ ರೀತಿಯಲ್ಲ, ಇದನ್ನು ಪರಿಭಾವಿಸಲಾಗಿ ಪ್ರತ್ಯಕ್ಷವೋ ಎನ್ನುವಂತೆ ಇದೆ. ಮನಸ್ಸಿನಲ್ಲಿ ವಿಸ್ಮಯ ತುಂಬಿ ತುಳುಕಾಡುತ್ತಿದೆ. ನನ್ನ ನೆನಪಿನಲ್ಲಿ ಶಿವನ ರೂಪು ಹೊಳೆಯುತ್ತಿದೆ. ಇದೇನು ಆಶ್ಚರ್ಯ ! ಎಂದು ಆಲೋಚಿಸುತ್ತಿರುವ ಸಮಯದಲ್ಲಿ ಬೆಳಗಿನ ಜಾವದ ಕೋಳಿಗಳು ಕೂಗಿದುವು. ೭. ಪೂರ್ವದಿಕ್ಕಿನಲ್ಲಿ ಅರುಣೋದಯವಾಯಿತು. ಕತ್ತಲೆಯು ಓಡಿಹೋಯಿತು. ಮಂದಮಾರುತ ತಂಪಾಗಿ ಬೀಸಿತು. ದುಂಬಿಗಳು ಹಾಡಿದುವು. ಚಕ್ರವಾಕಪಕ್ಷಿಗಳು ಒಂದುಗೂಡಿದವು. ನೈದಿಲೆಯ ಹೂಗಳು ಬಾಡಿದುವು. ಕಮಲಗಳು ಅರಳಿ ನಗೆಯನ್ನು ಬೀರುತ್ತಿದ್ದುವು. ಮುಂದೊಬ್ಬ ವೀರಶೈವ ಆಚಾರ್ಯಪುರುಷನು ಈ ಭೂಮಿಗೆ ಬಂದು, ಇದಕ್ಕೆ ನೂರರಷ್ಟು ಬೆಳಕನ್ನು ತೋರುತ್ತಾನೆ ಎಂಬುದನ್ನು

CC-0. Jangamwadi Math Collection. Digitized by eGangotri

ಆ ಕಾಲದೊಳ್ ಭಕ್ತಿಯಿಂ ನಾಗಲಾಂಬಿಕೆಯು
ಮಾಕಾಂತಪೂಜೆಯಂ ತೀರ್ಚಿಯಾ ಬಸವಾದ್ಯ
ನೇಕರೊಡನೀವಾರ್ತೆಯಾದ್ಯಂತಮಂ ಹಿಂಚುಮುಂಚೆನಿಸದಾಂ ಪೇಳಲು
ಬೇಕೆಂದು ಬೇಗಮನುಭವಮಂಟಪಕ್ಕೆ ಬಂ
ದಾ ಕಾರ್ಯಮಂ ಮಹಾಗಣಕುಲಂ ಕೇಳ್ವಂತೆ
ಜೋಕೆ ಮಿಗೆ ಬಸವದಂಡಾಧೀಶನೊಳು ಸವಿಸ್ತರವಾಗಿ ವಿರಚಿಸಿದಳು ೮

ಕೇಳ್ದು ಮುದಮಂ ತಾಳ್ದನಾ ಬಸವನುತ್ಸವಂ
ದಾಳ್ದುದು ಗಣಪ್ರತತಿ ನಾಗಲಾಂಬಿಕೆಯು ಮೊಗ
ಮಾಳ್ದುದು ವಿಕಾಸಮಂ ಗರ್ಭಚಿಹ್ನಂ ದಿನದಿನಕ್ಕೆ ತಲೆದೋರಲೊಪನೆ
ನೀಳ್ದುದೆಲ್ಲರ ಮನೋಹರುಷಲತೆ ಧಾರುಣಿಯೊ
ಳೆಳ್ದು ಶೈವಾಚಾರಮಂದನಾಚಾರಮಂ
ತೂಳ್ದುದು ಸುಗರ್ಭದೊಳಗಿರ್ಪ ಪರಶಿವನ ಚಿತ್ಕಳೆಯದೇಂ ಸಾಮಾನ್ಯಮೋ ೯

ಕ್ಷೀರಾಬ್ಧಿಮಧ್ಯಚಿಂತಾರತ್ನದಂತೆ ನವ
ಶಾರದಾಭ್ರದ ಮರೆಯ ಶಶಿಯಂತೆ ಸತ್ಪುಣ್ಯ
ಧಾರುಣಿಯೊಳಿರ್ಪ ನವನಿಧಿಯಂತೆ ಗುರುಬೋಧೆಯೊಳಗಿರ್ಪ ಮುಕ್ತಿಯಂತೆ

ಸೂಚಿಸುವಂತೆ ಪೂರ್ವ ಗಿರಿಯ ತುದಿಯಲ್ಲಿ ಸೂರ್ಯನು ಹುಟ್ಟಿದನು. ೮. ಆ ಸಮಯದಲ್ಲಿ ನಾಗಲಾಂಬಿಕೆಯು ಭಕ್ತಿಯಿಂದ ಶಿವಪೂಜೆಯನ್ನು ಮಾಡಿ ಮುಗಿಸಿದಳು. ಈ ಸುದ್ದಿಯ ಸಮಸ್ತವನ್ನೂ ಇದ್ದುದಿದ್ದಂತೆ ಬಸವಣ್ಣನೇ ಮೊದಲಾದ ಅನೇಕರೊಡನೆ ಹೇಳಬೇಕೆಂದು ತ್ವರೆಯಿಂದ ಅನುಭವಮಂಟಪಕ್ಕೆ ಬಂದಳು. ಆ ಸಂಗತಿಯನ್ನು ಮಹಾ ಭಕ್ತರ ಸಮೂಹಕ್ಕೆಲ್ಲ ಕೇಳುವಂತೆ ಜಾಗರೂಕತೆಯಿಂದಲೂ ಸಂಭ್ರಮದಿಂದಲೂ, ಬಸವ ದಂಡಾಧೀಶನಿಗೆ ವಿವರವಾಗಿ ಹೇಳಿದಳು. ೯. ಈ ಸುದ್ದಿಯನ್ನು ಕೇಳಿ ಬಸವಣ್ಣನು ಸಂತೋಷಗೊಂಡನು. ಗಣಗಳ ಸಮೂಹ ಸಂಭ್ರಮಗೊಂಡಿತು. ನಾಗಲಾಂಬಿಕೆಯ ಮುಖವು ವಿಕಾಸವಾಯಿತು. ಅವಳಿಗೆ ದಿನದಿನಕ್ಕೆ ಗರ್ಭದ ಚಿಹ್ನೆ ತಲೆದೋರಿತು. ಎಲ್ಲರ ಮನಸ್ಸಿನ ಉಲ್ಲಾಸವೆಂಬ ಬಳ್ಳಿ ಹಬ್ಬಿತು. ಭೂಮಿಯಲ್ಲಿ ಅಂದು ಶೈವಾಚಾರವು ಮೇಲೆದ್ದು ಅನಾಚಾರವನ್ನು ಹೊಡೆದಟ್ಟಿತು. ಅವಳ ಪುಣ್ಯಗರ್ಭದಲ್ಲಿದ್ದ ಪರಶಿವನ ಚಿತ್ಕಳೆಯ ಮಹಿಮೆ ಅದೇನು ಸಾಮಾನ್ಯವೆ ? ೧೦. ಕ್ಷೀರಸಾಗರದ ಮಧ್ಯದಲ್ಲಿರುವ ದಿವ್ಯರತ್ನದಂತೆ, ಆಕಾಶದಲ್ಲಿ ಶರತ್ಕಾಲದ ಶುಭ್ರವಾದ ಮೋಡದ ಮರೆಯಲ್ಲಿ ಇರುವ ಚಂದ್ರನಂತೆ, ಸತ್ಪುಣ್ಯಕರವಾದ ಭೂಮಿಯಲ್ಲಿ ಹುದುಗಿರುವ ನವನಿಧಿಯಂತೆ. ಗುರುವಿನ ಸುಜ್ಞಾನಬೋಧೆಯಲ್ಲಿ ಅಡಗಿರುವ ಮುಕ್ತಿಯಂತೆ, ಆ ಸೂರ್ಯಕಾಂತಶಿಲೆಯಲ್ಲಿರುವ

CC-0. Jangamwadi Math Collection. Digitized by eGangotri

ಆ ರವಿಗ್ರಾವಗುಪ್ತಜ್ಯೋತಿಯಂತೆ ಮಂ
ದಾರಮುಕುಳದೊಳಿರ್ಪ ಸುರಭಿಯಂತಧಿಕಗಂ
ಭೀರಾಬ್ಧಿ ನಾಗಲಾಂಬಿಕೆಯ ಬಸಿರೊಳು ತತ್ತ್ವನಿಧಿ ಗೋಪ್ಯದಿಂದಿರ್ದನು ೧೦

ತ್ರಿವಳಿಗಳ್ ಮಸುಳಿದುವು ಬಾಸೆ ಕಪ್ಪೇರಿದುದು
ಧವಳವಾಸ್ಯಾಬ್ಜಕದರ್ದುದು ಕುಚಂ ಕೊರ್ಬಿದುವು
ತವೆ ಚೂಚುಕಂ ತರ್ಗಿದುವು ನಾಭಿ ಪೊರಪೊಣ್ಮಿತಸಿಯ ನಡುವುಂ ಬಳೆದುದು
ಸವಿನುಡಿಯನಾಶ್ರಯಿಸಿತಲಸಿಕೆ ವಿಶೇಷಮಾಂ
ದ್ಯವನಾಂತುದೊಳ್ನಡೆ ಬಳಲ್ಕೆಯಂ ಧರಿಸಿತುರು
ಗೆವೆಗಣ್ಣ ನೋಟಮೆಸೆದುದು ಗರ್ಭಸೂಚಕಂ ಚೆಲ್ವಾದುದಾ ಬಾಲೆಯ ೧೧

ಕಮಲಜಾಂಡಂಗಳನನಂತಮಂ ತಾಳ್ದ ಶಿವ
ಸಮರೂಪನಂ ತರುಣಿ ತಾಳ್ದಳಿದು ಚೋದ್ಯಮೆಂ
ದಮರಗಣದಿಂ ದಿಟ್ಟಿಯಾದಪುದು ಮತ್ಸುತಂಗೆಂದು ಗಿರಿರಾಜತನುಜೆ
ಮಮತೆಯಿಂ ತದ್ಗರ್ಭರಕ್ಷಣೆಕೆ ಬರೆದ ಕಾ
ಳಿಮಲೇಖೆಯೋ ಶಿವಜ್ಞಾನದೀಪದ ಕುಡಿಯೊ
ಳಮರ್ದ ಧೂಮಚ್ಛವಿಯೊಯೆಂದೆನಲ್ ಕಪ್ಪಡರ್ದ ನಿಡುಬಾಸೆ ಕಣ್ಗೆಸೆದುದು ೧೨

ಗುಪ್ತಜ್ಯೋತಿಯಂತೆ, ಮಂದಾರದ ಹೂವಿನಲ್ಲಿರುವ ಮಧುವಿನಂತೆ, ಸಮುದ್ರದಂತೆ ನಾಗಲಾಂಬಿಕೆಯ ಗಂಭೀರವಾದ ಗರ್ಭಸುಧಾಂಬುಧಿಯಲ್ಲಿ ತತ್ತ್ವನಿಧಿಯಾದ ಪರಶಿವನ ಚಿತ್ಕಳಾಸ್ವರೂಪವು ಗುಪ್ತವಾಗಿದ್ದಿತು. ೧೧. ಆ ಬಾಲಕಿಯಾದ ನಾಗಲಾಂಬೆಯ ಹೊಟ್ಟೆಯ ಮೇಲಿನ ಮೂರುಗೆರೆಗಳು ಮಾಯವಾದುವು, ಹೊಟ್ಟೆಯ ಮೇಲಿನ ಕೂದಲು ಕಪ್ಪಾಯಿತು, ಮುಖಕಮಲವು ಬಿಳಿದಾಯಿತು. ಮೊಲೆಗಳು ದಪ್ಪವಾದವು, ಮೊಲೆಯ ತೊಟ್ಟುಗಳು ಕಂದುಬಣ್ಣಕ್ಕೆ ತಿರುಗಿದುವು, ಹೊಕ್ಕಳು ಹೊರಹೊಮ್ಮಿತು, ಸಣ್ಣನಾದ ನಡು ದಪ್ಪವಾಯಿತು. ಅವಳ ಸವಿನುಡಿಯಲ್ಲಿ ಬಳಲಿಕೆಯು ತೋರಿತು. ನಡಿಗೆ ನಿಧಾನವಾಯಿತು. ಒತ್ತಾದ ಕಣ್ಣಿನ ಎವೆಗಳು ಬಳಲಿಕೆಯ ನೋಟವನ್ನು ಬೀರಿತು. ಹೀಗೆ ಆ ಬಾಲಕಿಯ ಗರ್ಭಚಿಹ್ನೆಯು ಮನೋಹರವಾಗಿ ಕಂಗೊಳಿಸಿತು. ೧೨. ಅನೇಕ ಬ್ರಹ್ಮಾಂಡಗಳನ್ನು ತಾಳಿರುವ ಶಿವನಿಗೆ ಸಮನಾದ ರೂಪವನ್ನು ಆ ಯುವತಿ ಧರಿಸಿದ್ದಾಳೆ. ಇದೇನು ಆಶ್ಚರ್ಯ ! ಎಂದು ಉದ್ಗರಿಸುವ ದೇವತೆಗಳ ನೋಟದಿಂದ ತನ್ನ ಮಗನಿಗೆ ದೃಷ್ಟಿಯಾಗುತ್ತದೆ ಎಂದು ಪಾರ್ವತಿಯು ವಾತ್ಸಲ್ಯದಿಂದ ಆ ಗರ್ಭರಕ್ಷಣೆಗಾಗಿ ಬರೆದ ಕಪ್ಪಾದ ಗೆರೆಯೊ ! ಶಿವಜ್ಞಾನವೆಂಬ ದೀಪದ ಕುಡಿಯಿಂದ ಹೊರಟ ಹೊಗೆಯ ಕಾಂತಿಯೋ ! ಎನ್ನುವಂತೆ ಅವಳ ಬಸಿರ ಮೇಲಿನ ಕಪ್ಪಾದ ಕೂದಲು ನೋಟಕ್ಕೆ



CC-0. Jangamwadi Math Collection. Digitized by eGangotri

ಚಾರ್ವಾಕ ಜಿನ ಬುದ್ಧಮೆಂಬೀ ಮತತ್ರಯಮು
ಮುರ್ವರೆಯ ಭಾರಮೀ ಭಕ್ತರ ಭವಂ ನಾಡೆ
ತೋರ್ವ ಖಳರೇಳ್ಗೆಯೆಂದೆಂಬರಿಪ್ಪತ್ರಯಂ ಮಸುಳ್ದಪುವು ತತ್ತರುಣಿಯಾ
ಪೂರ್ವತಾಪತ್ರಯಂ ಪೋಪುದೆನುತಂ ಮುಂದೆ
ಸಾರ್ವಂತೆ ತ್ರಿವಳಿಯಡಗಿದುವು ಶಿವತತ್ತ್ವಮದು
ಬೇರ್ವರೆಯಲಜ್ಞಾನಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನವಸುಳಿದುದು ೧೩.

ತರಣಿಪ್ರಕಾಶಂ ಕುಮಾರನಾ ಗರ್ಭದೊಳ
ಗಿರೆ ಮನಸ್ತಿಮಿರಮತಿಭಯದಿ ಪೊರಮಟ್ಟು ಕುಚ
ಗಿರಿಯನಡರ್ದುದೊ ಏರಿದು ಶಿವತತ್ತ್ವರಸಪೂರ್ಣಮಾದ ಕಲಧೌತಂಗಳ
ಭರಣಿಗಳ ಬಾಯ್ಗಿರಿಸಿದಿಂದ್ರನೀಲದ ಮಣಿಯ
ಬಿರುಡೆಗಳೊ ಪೇಳೆನಲ್ ಸ್ತನಚೂಚುಕದ ಕಪ್ಪು
ಕರಮೊಪ್ಪಲೊಪ್ಪಿನಳ್ ನಾಗಲಾಂಬಿಕೆಯುಂದು ಕರುವಿಟ್ಟ ಮುಕ್ತಿಯಂತೆ ೧೪

ಶಿವಕಥಾಮೃತವನೊಲಿದಾಲಿಸುವ ಬಯಕೆಯು
ತ್ಸವದೊಳೀಶ್ವರಪೂಜೆಯಂ ಮಾಳ್ಪ ಬಯಕೆ ಕಡು
ತವಕದಿಂ ಗುರು ಲಿಂಗ ಜಂಗಮದ ತೀರ್ಥಪ್ರಸಾದಮುಮನುಣ್ಬ ಬಯಕೆ

ಮನೋಹರವಾಯಿತು. ೧೩. ಭೂಮಿಗೆ ಭಾರವಾಗಿದ್ದ ಚಾರ್ವಾಕ, ಜಿನ ಮತ್ತು ಬೌದ್ಧಮತಗಳೂ ; ಭಕ್ತರ ಹುಟ್ಟು-ಸಾವುಗಳ ದಂದುಗ ಚೆನ್ನಾಗಿ ಪ್ರಕಟವಾಗುತ್ತಿರುವ ದುಷ್ಟರ ಏಳ್ಗೆ ಈ ಮೂರು ಅನಿಷ್ಟಗಳೂ ಕಾಂತಿಗುಂದಿ ಮರೆಯಾಗುವುವು. ಆ ತರುಣಿಯ ಹಿಂದಿನ ತಾಪತ್ರಯಗಳೆಲ್ಲಾ ಪರಿಹಾರವಾಗುವುವು ಎಂದು ಸಾರಿಹೇಳುವಂತೆ ಆಕೆಯ ಹೊಟ್ಟೆಯ ಮೇಲಿದ್ದ ಮೂರು ಗೆರೆಗಳು ಮರೆಯಾದುವು. ಶಿವತತ್ತ್ವವು ಬೇರು ಬಿಡಲು ಅಜ್ಞಾನಕೂಪ ಹಾಳಾಯಿತು ಎನ್ನುವಂತೆ ಹೊಕ್ಕುಳ ಕುಳಿಯು ಮೇಲೆ ಬಂದಿತು. ೧೪. ಸೂರ್ಯನಂತೆ ಪ್ರಕಾಶಮಾನನಾದ ಮಗನು ಅವಳ ಗರ್ಭದಲ್ಲಿದ್ದ ಕಾರಣ ಅವಳ ಮನಸ್ಸಿನ ಅಜ್ಞಾನವೆಂಬ ಕತ್ತಲೆಯು ಅತಿಭಯಗೊಂಡು ಹೊರಹೊರಟು ಅವಳ ಸ್ತನಗಳೆಂಬ ಬೆಟ್ಟವನ್ನು ಏರಿದುವೋ, ಶ್ರೇಷ್ಠವಾದ ಶಿವತತ್ತ್ವರಸದಿಂದ ಪೂರ್ಣವಾಗಿ ತುಂಬಿದ್ದ ; ಶುಭ್ರವಾಗಿ ಹೊಳೆವ ಬೆಳ್ಳಿಯ ಭರಣಿಗಳ ಬಾಯಿಗೆ ಇಂದ್ರನೀಲರತ್ನದ ಬಿರಡೆಯನ್ನು ಇಟ್ಟಿರುವರೋ ಹೇಳು ಎನ್ನುವಂತೆ ಅವಳ ಮೊಲೆಯ ತೊಟ್ಟುಗಳ ಕಪ್ಪು ಶೋಭಿಸುತ್ತ ಇರಲು ನಾಗಲಾಂಬಿಕೆ ಮುಕ್ತಿಯನ್ನೇ ಎರಕ ಹೊಯ್ದಂತೆ ಕಾಣುತ್ತಿದ್ದಳು. ೧೫. ಈಶ್ವರನ ಕಥೆಯನ್ನು ಒಲಿದು ಕೇಳುವ, ಸಂಭ್ರಮದಿಂದ ಶಿವನ ಪೂಜೆಯನ್ನು ಮಾಡುವ, ಬಹಳ ಉತ್ಸಾಹದಿಂದ ಗುರು-ಲಿಂಗ-ಜಂಗಮದ ತೀರ್ಥಪ್ರಸಾದಗಳನ್ನು ಸೇವಿಸುವ, ಜಂಗಮರಿಗೆ ಕಲ್ಪವೃಕ್ಷ,

CC-0. Jangamwadi Math Collection. Digitized by eGangotri

ದಿವಿಜತರುವನಮುಮಂ ಸಿದ್ಧರಸಸಿಂಧುಮಮಂ
ನವನಿಧಿಗಳಂ ಸುರಪಧೇನುಮಂ ಜಂಗಮದ
ನಿವಹಕೆಡೆಮಾಡುವೀ ಬಯಕೆಯಲ್ಲದೆ ಮಿಕ್ಕ ಬಯಕೆಯಿಲ್ಲೆಳೆವಸಿರೊಳು ೧೫

ಪಲತೆರದ ಗರ್ಭಚಿಹ್ನಂಗಳಿಂದಿಂತು ತ
ಲ್ಲಲನೆ ಕೆಲಕೆಲವು ದಿವಸಂಗಳಂ ಕಳೆಯೆ ಪುರ
ದೊಳಗೆ ಗುಜುಗುಜು ಮಸಗಿ ನಾಗಲಾಂಬಿಕೆ ಗಡ ವಿರಕ್ತೆ ಗಡ ರಾಯಗುರುವ
ಬಲುದಣಾಯಕ ಬಸವನಕ್ಕ ಗಡ ಗರ್ಭಮಂ
ತಳೆದಳ್ಗಡೇಂ ಚಿತ್ರಮೆಂದು ಮನೆಮನೆ ನೀರ
ಹೊಳೆ ಬೀದಿಬೀದಿಯೊಳಗೀ ವಾರ್ತೆ ಪುರಜನದ ಕರ್ಣಂಗಳೊಳಗಿಡಿದುದು ೧೬

ಆಕೆ ದೈವಜ್ಞೆಯೆಂಬರ್ ಕೆಲಬರುತ್ತಮರ್
ಜೋಕೆ ಮಿಗೆ ಮಧ್ಯಮರ್ ವಿಸ್ಮಯಂಬಡುವರವಿ
ವೇಕಿ ನೀಚರು ಹಾಸ್ಯಮಾಡುವರದಂ ಕೇಳ್ದು ಮತ್ತೊರ್ವ ಪಿಸುಣರರಸಂ
ಭೂಕಾಂತ ಬಿಜ್ಜಳಂಗರಿಪಬೇಕೆನುತೆ ಬಂ
ದೇಕಾಂತದೋಲಗದೊಳೀ ವಾರ್ತೆಯಂ ಪೇಳೆ
ಪೋಕನಿವನಿವನ ನುಡಿ ಪುಸಿಯೆನಲ್ ಭಾಷೆಯಂ ಬರೆಸಿ ಮತ್ತಿಂತೆಂದನು ೧೭

ಸಿದ್ಧರಸದ ಸಮುದ್ರವನ್ನು, ನವನಿಧಿಗಳನ್ನು,ಕಾಮಧೇನುವನ್ನು ಉಣಬಡಿಸಬೇಕೆಂಬ ಈ ಬಯಕೆಗಳಲ್ಲದೆ ಆ ಎಳೆಯ ಬಸಿರಿಯಾದ ನಾಗಲಾಂಬಿಕೆಗೆ ಬೇರೆ ಬಯಕೆಗಳು ಇರಲಿಲ್ಲ. ೧೬. ಈ ರೀತಿಯ ಹಲವು ಗರ್ಭದ ಚಿಹ್ನೆಗಳು ಆ ತರುಣಿಗೆ ಉಂಟಾದವು. ಕೆಲವು ದಿವಸಗಳು ಕಳೆದವು. ಆಗ ಆ ಪಟ್ಟಣದ ಜನರಲ್ಲಿ ಗುಜುಗುಜು ಹೆಚ್ಚಿತು. ನಾಗಲಾಂಬಿಕೆಯಂತೆ ? ಆಕೆ ವಿರಕ್ತೆಯಂತೆ ? ರಾಯಶ್ರೇಷ್ಠ ದೊಡ್ಡ ದಂಡನಾಯಕನಾದ ಬಸವಣ್ಣನ ಅಕ್ಕನಲ್ಲವೆ ? ಅವಳು ಬಸಿರಿಯಾಗಿದ್ದಾಳೆಯಲ್ಲವೆ ? ಇದೇನು ವಿಚಿತ್ರ ! ಎಂದು. ಮನೆಮನೆಗಳಲ್ಲಿ, ನೀರಿನ ಹೊಳೆಯ ಹತ್ತಿರ, ಬೀದಿ ಬೀದಿಗಳಲ್ಲಿ ಜನಗಳ ಕಿವಿಗಳಲ್ಲಿ ಈ ಮಾತುಗಳು ತುಂಬಿದುವು. ೧೭. ಉತ್ತಮರಾದ ಕೆಲವರು ಆಕೆಯನ್ನು ದೈವಾಂಶಸಂಭೂತಗಳು ಎನ್ನುವರು, ಮಧ್ಯಮರಾದ ಕೆಲವರು ಅತಿಯಾದ ಎಚ್ಚರಿಕೆಯಿಂದ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ. ಅವಿವೇಕಿಗಳೂ ನೀಚರೂ ಹಾಸ್ಯಮಾಡುತ್ತಾರೆ. ಅದನ್ನು ಕೇಳಿದ ಮತ್ತೊಬ್ಬ ಮಹಾಚಾಡಿಕೋರನು, ರಾಜನಾದ ಬಿಜ್ಜಳನಿಗೆ ಈ ಸಂಗತಿಯನ್ನು ತಿಳಿಸಬೇಕೆನ್ನುತ್ತ ಬಂದು, ಏಕಾಂತದ ಓಲಗದಲ್ಲಿ ಈ ಸುದ್ದಿಯನ್ನು ಅವನಿಗೆ ಹೇಳಿದನು. 'ಇವನು ನೀಚ, ತಲೆತಿರುಕ. ಇವನ ಮಾತು ಸುಳ್ಳು' ಎನ್ನಲು ಅವನು ಪ್ರಮಾಣ

CC-0. Jangamwadi Math Collection. Digitized by eGangotri

ಕರದ ಕಂಕಣಕೆ ಕನ್ನಡಿಯುಂಟೆ ಜೀಯ ಬಹು
ಪರಿಯೊಳಾಂ ಬಿನ್ನಯಿಸಲಂಜುವೆಂ ನಿಮಗೆ ತವ
ಚರಣಪಂಕಜದಾಣೆ ಪುಸಿ ದಿಟಂ ನೋಳ್ಪೊಡಿದು ವೇಳೆಯಾ ಬಸವಣ್ಣನ
ವರಗೃಹಾಂತಸ್ಥದನುಭವಮಂಟಪದೊಳೀಗ
ಹರಭಕ್ತರುಂ ನೀಲಲೋಚನೆಯುಮಾ ಗರ್ಭ
ವರಸಿಯುಂ ಸಹ ಬಸವನಿರ್ದಪಂ ದೇವರ್ಕೈತರೆ ಕಾಣಬಹುದೆಂದನು ೧೮

ಎನೆ ಬಿಜ್ಜಳಂ ವಿಸ್ಮಯಂಬಟ್ಟು ನೋಡಬೇ
ಕೆನುತೆ ಸಕಲಪ್ರಧಾನರ್ವೆರಸಿ ಕೆಲವು ಪರಿ
ಜನಸಹಿತಲರಮನೆಯನೊಳಪೊಕ್ಕು ಬರಲಸಂಖ್ಯಾತಗಣದೊಡನೆ ಬಸವಂ
ಘನಹರುಷದಿಂ ಕಾಣುತಿದಿರೆದ್ದು ಬಂದು ಸ
ದ್ವಿನಯಮುಂ ನುಡಿದು ಕರೆತಂದವಮಳರತ್ನರಂ
ಜನಸಿಂಹಪೀಠದೊಳ್ ಕುಳ್ಳಿರಿಸಿ ದಶನದೀಧಿತಿ ಪೊಳೆಯಲಿಂತೆಂದನು ೧೯

ಎಲೆ ರಾಯ ಕೇಳ್ ನಿನ್ನ ಬಲ್ಲೆಯದ ಮೊನೆಗೆ ಮಾ
ರ್ಮಲೆವ ಪರನೃಪರಿಲ್ಲ ವಾಣಿಗಪಜಯಮಿಲ್ಲ
ಮಿಳೆಯಸಿರಿಗಂ ಬಾಧೆಯಿಲ್ಲವನುಜಾಗ್ರಜಸುತರ್ಕರೊಳ್ ಭೇದವಿಲ್ಲ

ಮಾಡಿ ಮತ್ತೆ ಹೀಗೆ ಹೇಳಿದನು : ೧೮. "ಕೈಯಲ್ಲಿ ಕಟ್ಟಿರುವ ಕಂಕಣಕ್ಕೆ ಕನ್ನಡಿ ಬೇಕೆ ? ಮಹಾಸ್ವಾಮಿ ನಿಮಗೆ ಎಲ್ಲವನ್ನೂ ಹೇಳಲು ನಾನು ಅಂಜುತ್ತೇನೆ. ನಿಮ್ಮ ಪಾದಗಳಾಣೆ. ಇದು ಸುಳ್ಳೋ ನಿಜವೋ ಎಂದು ತಿಳಿಯಲು ಇದೇ ಸರಿಯಾದ ಸಮಯ. ಈಗ ಬಸವಣ್ಣನವರ ಮನೆಯಲ್ಲಿ ಇರುವ ಅನುಭವಮಂಟಪದಲ್ಲಿ ಶಿವಭಕ್ತರೂ, ನೀಲಲೋಚನೆಯೂ ಮತ್ತು ಗರ್ಭವನ್ನು ಧರಿಸಿದ ನಾಗಲಾಂಬಿಕೆಯೂ ಇದ್ದಾರೆ. ಬಸವಣ್ಣನೂ ಇದ್ದಾನೆ. ಪ್ರಭುಗಳೇ ಬಂದು ಅದನ್ನು ಕಾಣಬಹುದು" ಎಂದನು. ೧೯. ಆ ಚಾಡಿಕೋರನು ಹೀಗೆ ಹೇಳಲಾಗಿ ಬಿಜ್ಜಳನು ಆಶ್ಚರ್ಯಗೊಂಡನು. ಇದನ್ನು ಪರಾಂಬರಿಸಿ ನೋಡಬೇಕೆಂದು ಎಲ್ಲ ಮಂತ್ರಿಗಳೊಡನೆ ಕೆಲವು ಪರಿಜನರ ಸಹಿತ ಬಸವಣ್ಣನ ಮನೆಯನ್ನು ಪ್ರವೇಶಿಸಿದನು. ಹೀಗೆ ಬಂದ ಬಿಜ್ಜಳನನ್ನು ಅಸಂಖ್ಯಾತ ಭಕ್ತರ ಜೊತೆಯಲ್ಲಿದ್ದ ಬಸವಣ್ಣನು ಕಂಡು ಬಹಳ ಸಂತೋಷದಿಂದ ಎದ್ದುಬಂದು, ಇದಿರುಗೊಂಡು, ವಿನಯದ ಮಾತುಗಳನ್ನು ಆಡಿ, ರಾಜನನ್ನು ಕರೆತಂದು, ಶ್ರೇಷ್ಠವಾದ ರತ್ನಸಿಂಹಾಸನದಲ್ಲಿ ಕೂಡಿಸಿ, ತನ್ನ ದಂತಕಾಂತಿಯು ಪಸರಿಸುತ್ತಿರಲು ಈ ರೀತಿ ಹೇಳಿದನು. ೨೦. "ಎಲೈ ಮಹಾರಾಜನೇ, ಕೇಳು, ನಿನ್ನ ಈಟಿಯ ಮೊನೆಯನ್ನು ಎದುರಿಸಿ ಮಲೆತು ನಿಲ್ಲುವ ಶತ್ರುರಾಜರುಗಳಿಲ್ಲ. ನಿನ್ನ ಮಾತಿಗೆ ಎಂದಿಗೂ ಸೋಲಿಲ್ಲ. ನಿನ್ನ ರಾಜ್ಯದ ಸಿರಿಗೆ ಯಾವ ಬಾಧೆಯೂ ಇಲ್ಲ. ಅಣ್ಣ-ತಮ್ಮಂದಿರು ಮತ್ತು ಮಕ್ಕಳಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಅಪಾರವಾದ ಹಣದ ಭಂಡಾರ ನಿನ್ನಲ್ಲಿದೆ. ನಿನ್ನ ಚತುರಂಗಸೈನ್ಯವು

CC-0. Jangamwadi Math Collection. Digitized by eGangotri

ಹಲವು ಕೋಶಕೆ ಕಡಿಮೆಯಿಲ್ಲವೀ ಚತುರಂಗ
ಬಲದೊಳೆರಡಿಲ್ಲವಿಂದೆನ್ನೆಡೆಗೆ ನೀಂ ಬರ್ಪ
ಬಲುಗಜ್ಜವಾವುದುಂಟೆನೆ ಕೇಳಿ ನಸುನಗೆಯೊಳವನೀಶನಿಂತೆಂದನು ೨೦

ಮಾನನಿಧಿ ಬಸವದಂಡೇಶ ನೀನೆನ್ನೀ ಪ್ರ
ಧಾನಿಯಾಗಿರ್ಪನ್ನವೆನ್ನ ಸೌಭಾಗ್ಯಕ್ಕೆ
ಹಾನಿಯೆಲ್ಲಿಹುದೆಂದು ಮಾರುತ್ತರಂಗೊಟ್ಟು ಕೆಲಬಲವ ನೋಡುತಿರಲು
ಆ ನಾಗಲಾಂಬಿಕೆಯ ಗರ್ಭಸೌಂದರ್ಯಮಂ
ತಾನರಿದು ತತ್ಸತಿಯ ಪೆಸರ್ವಿಡಿವುತುಂ ವಿರತೆ
ನೀನಾರವೇಂ ಕಾರಣಂ ವೃಥಾಗರ್ಭಮಾಯ್ತೆನಲಾಕೆಯಿಂತೆಂದಳು ೨೧

ಪೊಡವೀಶ ನೀಂ ಕೇಳತಕ್ಕುದೀ ಗರ್ಭಮಾ
ಮೃಡಚಿತ್ಕಳಾಮೃತಪ್ರಸಾದದಿಂದಾದುದೆಂ
ದೊಡೆ ಸಕಲ ಶಿವಭಕ್ತರೆಲ್ಲರುಂ ತತ್ಪ್ರಸಾದಿಗಳವರ್ಗೀ ಗರ್ಭದ
ಗೊಡವೆಯುಂ ಕಂಡುಕೇಳಿದುದಿಲ್ಲವೆನೆ ಪುಸಿಯ
ನುಡಿವಳಲ್ಲೀಶ್ವರಂ ಕರುಣದಿಂ ತನ್ನ ಮುಖ
ದೆಡೆಯ ಸುಜ್ಞಾನಪುತ್ರಂ ಜನಿಪನೆಂದಿತ್ತನೆನಲರಸನಿಂತೆಂದನು ೨೨

ಆ ಶಿವಜ್ಞಾನಭರಿತಂ ನಿನ್ನ ಗರ್ಭದೊಳ
ಗೀಶಕೃಪೆಯಿಂ ಬಂದನಾದೊಡದುಲೇಸು ಮ
ತ್ತಾ ಶಿಶುವೆ ತಾನೆಮ್ಮೊಳೀ ವಾರ್ತೆಯಂ ಪೇಳೆ ನಿಜವೆಂಬ ಕಟಕಿ ನೃಪನ

ಎರಡು ಬಗೆಯುವುದಿಲ್ಲ. ಹೀಗಿರುವಾಗ ನೀನು ಇಂದು ನನ್ನ ಬಳಿಗೆ ಬರುವಂತಹ ಮಹತ್ಕಾರ್ಯ ಯಾವುದು ?" ಎಂದನು. ಅದನ್ನು ಕೇಳಿ ನಸುನಗುತ್ತಾ ಬಿಜ್ಜಳ ರಾಜನು ಹೀಗೆ ಹೇಳಿದನು. ೨೧. "ಮಾನನಿಧಿಯಾದ ಬಸವದಂಡಾಧೀಶನೆ, ನೀನು ನನ್ನ ಪ್ರಧಾನಿಯಾಗಿರುವವರೆಗೆ ನನ್ನ ಸೌಭಾಗ್ಯಕ್ಕೆ ಹಾನಿಯೆಲ್ಲಿದೆ?" ಎಂದು ಪ್ರತ್ಯುತ್ತರ ಹೇಳಿ, ಅಕ್ಕಪಕ್ಕವನ್ನು ನೋಡುತ್ತಿರುವಾಗ ಆ ನಾಗಲಾಂಬಿಕೆಯ ಗರ್ಭಸೌಂದರ್ಯವನ್ನು ತಿಳಿದುಕೊಂಡು, ಅವಳನ್ನು ಕುರಿತು, "ವಿರಕ್ತೆ, ನೀನಾರು ? ಏನು ಕಾರಣದಿಂದ ನಿನಗೆ ನಿಷ್ಕಾರಣವಾಗಿ ಗರ್ಭವಾಯಿತು ?" ಎಂದು ಕೇಳಲು, ಆಕೆ ಹೀಗೆ ಹೇಳಿದಳು. ೨೨. "ರಾಜನೇ, ಇದು ನೀನು ಕೇಳತಕ್ಕದ್ದು. ಈ ಗರ್ಭವು ಆ ಪರಮೇಶ್ವರನ ಚಿತ್ಕಳಾಮೃತಪ್ರಸಾದದಿಂದ ಆಯಿತು," ಎಂದು ಹೇಳಿದಳು. ಆಗ, "ಎಲ್ಲ ಶಿವಭಕ್ತರೂ ಶಿವಪ್ರಸಾದಿಗಳೇ ಆದರೆ ಅವರಿಗೆ ಈ ಗರ್ಭವುಂಟಾಗುವ ವಿಚಾರವನ್ನು ನಾವು ಕಂಡಿಲ್ಲ, ಕೇಳಿಲ್ಲ" ಎಂದನು. ಆ ಮಾತಿಗೆ ಸತಿ ನಾಗಲಾಂಬೆಯು "ಸುಳ್ಳನ್ನು ಹೇಳುವವಳಲ್ಲ. ಈಶ್ವರನು ಕರುಣೆಯಿಂದ ಆತನ ಸುಜ್ಞಾನಪುತ್ರನು ಹುಟ್ಟುತ್ತಾನೆ ಎಂದು ಹೇಳಿ ನನಗೆ ವರವನ್ನು ಕೊಟ್ಟನು" ಎನ್ನಲು, ರಾಜನು ಹೀಗೆ ಹೇಳಿದನು. ೨೩. "ಆ ಶಿವಜ್ಞಾನಸಂಪನ್ನನು ನಿನ್ನ ಬಸುರಿನಲ್ಲಿ ಈಶ್ವರನ ಕೃಪೆಯಿಂದ ಹುಟ್ಟಿಬಂದರೆ ಒಳ್ಳೆಯದು. ಮತ್ತೆ ಆ

CC-0. Jangamwadi Math Collection. Digitized by eGangotri

ಆಶಯುವನರಿದಾಕೆಯುದರಮಧ್ಯದಲಿ ನಿಖಿ
ಳಾಶೆಯುಂ ತೀವಲೆಲ್ಲಾ ಜನರ್ ಕೇಳೆ ಬಸ
ವೇಶಮುಖ್ಯರ್ ನಲಿಯೆ ಪೊಣ್ಮಿತೊಂದಾನೊಂದು ನುಡಿಯುದೇಂ ಬಣ್ಣಿಸುವೆನು ೨೩.

ಕಳಕಳವಿದೇಕೆ ಹೋ ಹೋ ನಿಲ್ಲು ನಿಲ್ಲು ಬಿ
ಜ್ಜಳನೃಪತಿಯಾಗಸಂ ನೆಲಕಿಳಿದೊಡಂ ಧರಾ
ತಳವಿರದೆ ಪಾತಾಳಕದ್ದೊಡಂ ಶಿವಶರಣರಿಂದೆ ಪುಸಿನುಡಿ ಬರ್ಪುದೆ
ವಿಳಸದ್ವಿರೂಪಾಕ್ಷ ಷಣ್ಮುಖಸ್ಥಿತಸುಚಿ
ತ್ಕಳೆಯಲ್ಲದಾಂ ರಕ್ತರೇತಃಪ್ರಯುತಪಿಂಡ
ಮೊಳಗಲ್ಲವೆಂಬ ಗಂಭೀರಸ್ವರಂ ಪೊಣ್ಮೆ ಬಿಜ್ಜಳಂ ಬೆರಗಾದನು ೨೪

ಚೋಳಿಯಕ್ಕಂಗೆ ಭೀಮೇಶ್ವರಂ ನುಡಿದುದಂ
ಜೋಳರಾಸಿಯೊಳೆ ಬಾಹೂರಬೊಮ್ಮಣ್ಣಂಗೆ
ಭಾಳನಯನಂ ನುಡಿದನೆಂದು ಬಸವಂಗೆ ಸಂಗಮನಾಥ ನುಡಿದನೆಂದು
ಹೇಳುವರ್ ಕಿನ್ನರಯ್ಯಂಗೆ ತ್ರಿಪುರಾಂತಕಂ
ಕೇಳೆ ನುಡಿದುದ ಕೇಳ್ದೆನೀ ಗರ್ಭದರ್ಭಕಂ
ಕೇಳದೇ ನುಡಿದುದಚ್ಚರಿಯೆನುತೆ ಬಿಜ್ಜಳಂ ವಿಸ್ಮಯದೊಳಿಂತೆಂದನು ೨೫

ಮಗುವೇ ನಮಗೆ ಈ ಸಂಗತಿಯನ್ನು ಹೇಳಿದರೆ ಆಗ ಇದು ನಿಜವೆಂದು ನಂಬುತ್ತೇನೆ'' ಎಂದು [ಚುಚ್ಚುಮಾತುಗಳನ್ನಾಡುವ ರಾಜನ ದುರುದ್ದೇಶವನ್ನು ತಿಳಿದುಕೊಂಡು ಆಕೆಯ ಗರ್ಭದ ಮಧ್ಯದಿಂದ, ಎಲ್ಲ ದಿಕ್ಕುಗಳನ್ನೂ ತುಂಬುವಂತೆ, ಎಲ್ಲ ಜನರೂ ಕೇಳುವಂತೆ ಬಸವೇಶ ಮೊದಲಾದ ಮುಖ್ಯರು ಸಂತೋಷಪಡಲು ಒಂದು ಧ್ವನಿಯು ಹೊರಟಿತು. ಆ ಅದ್ಭುತವನ್ನು ಏನೆಂದು ಬಣ್ಣಿಸಲಿ. ೨೪. ''ಅಯ್ಯಾ ಬಿಜ್ಜಳ ಮಹಾರಾಜನೆ, ಗಲಭೆಯೇಕೆ ! ನಿಲ್ಲು ನಿಲ್ಲು. ಆಕಾಶವೇ ನೆಲಕ್ಕೆ ಇಳಿದರೂ ಭೂಮಿಯೇ ಪಾತಾಳದಲ್ಲಿ ಮುಳುಗಿದರೂ ಶಿವಶರಣರಿಂದ ಸುಳ್ಳುಮಾತು ಬರುತ್ತದೆಯೆ ? ನಾನು ಪವಿತ್ರನಾದ ವಿರೂಪಾಕ್ಷನ ಷಣ್ಮುಖಸ್ಥಿತವಾದ ಚಿತ್ಕಳೆಯಲ್ಲದೆ ರಕ್ತ–ವೀರ್ಯಗಳಿಂದ ಕೂಡಿದ ಪಿಂಡವಲ್ಲ'' ಎಂಬ ಗಂಭೀರವಾದ ಧ್ವನಿಯು ಹೊರಹೊರಟಿತು. ಅದನ್ನು ಕೇಳಿ ಬಿಜ್ಜಳನು ಬೆರಗಾದನು. ೨೫. ''ಚೋಳಿಯಕ್ಕನಿಗೆ ಭೀಮೇಶ್ವರನು, ಜೋಳದ ರಾಶಿಯಲ್ಲಿ ಬಾಹೂರ ಬೊಮ್ಮಣ್ಣನಿಗೆ ಭಾಳಾಕ್ಷನು, ಬಸವಣ್ಣನಿಗೆ ಸಂಗಮನಾಥನು, ಕಿನ್ನರಯ್ಯನಿಗೆ ತ್ರಿಪುರಾಂತಕನು ಅವರು ಕೇಳಲಾಗಿ ಮಾತನಾಡಿದರೆಂದು ಕೇಳಿದ್ದೇನೆ. ಆದರೆ ಈ ಗರ್ಭದಲ್ಲಿರುವ ಕೂಸು ನಾನು ಕೇಳದೆಯೇ ಮಾತನಾಡಿದುದು ಆಶ್ಚರ್ಯ''

CC-0. Jangamwadi Math Collection. Digitized by eGangotri

ಪ್ರತ್ಯಕ್ಷವಿರೆ ಪ್ರಮಾಣಿಸಿ ನೋಡಬೇಕೆಂಬು
ದತ್ಯಧಿಕ ನೀತಿಶಾಸ್ತ್ರಮದುಂಟುಮದರಿಂದ
ನಿತ್ಯವಹ ಮಾನವಶರೀರದಿಂ ಮಲಮೂತ್ರರಕ್ತಮಾಂಸಂಗಳೊಳಗೆ
ನಿತ್ಯವಹ ಶಿವನ ಚಿತ್ಕಳೆಯಿರ್ಪುದೆಂಬುದಿದು
ಸತ್ಯಮೇಯೆಂದೆನಲ್ಕಜ್ಞರನೊಡಂಬಡಿಪ
ಕೃತ್ಯಮಂ ತಿಳಿದು ತನ್ನೊಳ್ ವಿಚಾರಿಸಿ ನಾಗಲಾಂಬೆಯೆಂದಿಂತೆಂದಳು ೨೬

ಅಕ್ಕಕ್ಕ ಮೂತ್ರಮಲಮಾಂಸರಕ್ತಂಗಳೊಳ
ಗಿಕ್ಕುಮೇ ಶಿವಮೂರ್ತಿಯೆನ್ನುದರದೊಳಗವರ
ತೊಕ್ಕಿಲ್ಲಮೆನೆ ಬಿಜ್ಜಳಂ ಕೇಳ್ದು ದೃಷ್ಟವಿಲ್ಲದ ನಿನಗೆ ಬರಿಯಮಾತು
ತಕ್ಕುದೇಯೆನೆ ದೃಷ್ಟಮಂ ತೋರ್ಪುದೀ ಶಿವಗ
ಣಕ್ಕದೇನರಿದು ನೋಡಾದೊಡೆನುತಾಗ ನಸು
ನಕ್ಕು ತನ್ನುದರವನುಗುರ್ಗೊನೆಗಳಿಂ ಬಗಿದಳೇನೆಂಬೆನಚ್ಚರಿಯನು ೨೭

ಮೇಲುಗುರ್ಗೊನೆ ಸೋಂಕಲುದರದೊಳ್ ಪೊಳೆಪೊಳೆವ
ಬಾಲಾರ್ಕಕೋಟಿಪ್ರಕಾಶದಿಂ ಮೆರೆವ ಭಸಿ
ತಾಲೇಪನದೆ ಥಳಥಳಿಪ ನಗೆಮೊಗದ ಕರ್ಣಕುಂಡಲಯುಗಂಗಳಿಂದೆ

ಎನ್ನುತ್ತ ಬಿಜ್ಜಳನು ವಿಸ್ಮಯದಿಂದ ಈ ರೀತಿ ಹೇಳಿದನು. ೨೬. 'ಪ್ರತ್ಯಕ್ಷವಾಗಿದ್ದರೂ ಪ್ರಮಾಣಿಸಿ ನೋಡಬೇಕು' ಎಂಬ ಶ್ರೇಷ್ಠವಾದ ನೀತಿಶಾಸ್ತ್ರವುಂಟು. ಆದ್ದರಿಂದ ಅಶಾಶ್ವತವಾದ ಮಾನವಶರೀರದಿಂದ ಮಲ-ಮೂತ್ರ, ರಕ್ತ-ಮಾಂಸಗಳಲ್ಲಿ ಶಾಶ್ವತವಾದ ಶಿವನ ಚಿತ್ಕಳೆ ಇರುತ್ತದೆ ಎಂದು ಹೇಳುವುದು ಸತ್ಯವೆ ?'' ಎನ್ನಲಾಗಿ, ಅಜ್ಞಾನಿಗಳನ್ನು ಒಡಂಬಡಿಸುವ ರೀತಿ ಯಾವುದೆಂದು ನಾಗಲಾಂಬಿಕೆಯು ತನ್ನಲ್ಲಿಯೇ ಆಲೋಚಿಸಿ ಈ ರೀತಿ ಹೇಳಿದಳು. ೨೭. ''ಅಹುದಹುದು ಮೂತ್ರ–ಮಲ, ಮಾಂಸ-ರಕ್ತಗಳಲ್ಲಿ ಶಿವನ ಮೂರ್ತಿಯು ಇರುತ್ತದೆಯೆ ? ನನ್ನ ಗರ್ಭದಲ್ಲಿ ಅವುಗಳ ಅಂಶಲೇಶವಿಲ್ಲ'' ಎಂದು ಹೇಳಿದಳು. ಅದನ್ನು ಕೇಳಿದ ಬಿಜ್ಜಳನು ''ಸಾಕ್ಷಿಯಿಲ್ಲದೆ ನಿನಗೆ ಬರಿಯ ಮಾತು ಯೋಗ್ಯವೆ ?'' ಎಂದನು. ''ಈ ಶಿವಭಕ್ತರಿಗೆ ಸಾಕ್ಷಿಯನ್ನು ತೋರಿಸುವುದು ಅಸಾಧ್ಯವೆ ? ಹಾಗಾದರೆ ನೋಡು'' ಎಂದು ನಸುನಗುತ್ತಾ ತನ್ನ ಹೊಟ್ಟೆಯನ್ನು ಉಗುರುಗಳ ಕೊನೆಯಿಂದ ಸೀಳಿದಳು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೨೮. ಹೊಟ್ಟೆಯ ಮೇಲ್ಭಾಗದಲ್ಲಿ ಉಗುರಿನ ಕೊನೆ ಸೋಕಲು, ಹೊಳೆಯುವ ಕೋಟಿ ಬಾಲಸೂರ್ಯರ ಪ್ರಕಾಶದಿಂದ ಮೆರೆಯುವ, ವಿಭೂತಿಯನ್ನು ಧರಿಸಿ ಥಳಥಳನೆ ಹೊಳೆಯುವ, ನಗು

CC-0. Jangamwadi Math Collection. Digitized by eGangotri

ಆಲೋಲಮಾದ ಕಿರುಜಡೆಗಳಿಂ ಸುರಕುಸುಮ
ಮಾಲಿಕಾಮಧ್ಯದೊಳ್ ಶಿವಲಿಂಗಧರನಾಗಿ
ಬಾಲಕಂ ನೋಳ್ಪ ಸಭೆಯುಂ ವಿಸ್ಮಯಾರ್ಣವದೊಳದ್ದಿದನದೇಂ ಪೊಗಳ್ವೆನು ೨೮

ದೇವದುಂದುಭಿ ಮೊಳಗಿದುವು ಸುರರ್ ನಲಿದು ಕುಸು
ಮಾವಳಿಯ ವೃಷ್ಟಿಯುಂ ಕರೆದರಾ ಸ್ಥಾನಿಕರ
ನಾವರಿಸಿದುದು ಭಕ್ತಿರಸಜಲಧಿ ಬಸವನಾನಂದದೊಳ್ ಮೆಯ್ಮರೆದನು
ಕಾವುದೆನ್ನಪರಾಧಶತಮನೆಂದಾ ಬಿಜ್ಜ
ಳಾವನೀಶಂ ಮಹಾಭಯಭರಿತಭಕ್ತಿಯಿಂ
ಕೇವಲಜ್ಞಾನಯುತನಾಗಿ ಧರೆಯೊಳ್ ಮೆಯ್ಯನಿಕ್ಕಿ ಬಳಿಕಿಂತೆಂದನು ೨೯

ಹಿಂದೆ ರಂಭೆಯು ವಾದದಿಂದಲಾ ಶುಕಮುನಿಪ
ನಂದು ತನ್ನುದರವಂ ಬಗಿದು ತೋರಿಸಿದನಂ
ತೆಂದು ಚೋಳಂಗೆ ಪೂಸಲನುದರವಂ ಬಗಿದು ತೋರಿಸಿದನೆಂದು ಬಳಿಕ
ಚಂದದಿಂ ಸಿದ್ಧರಾಮಂ ಸೊನ್ನಲಾಪುರದೆ
ನಿಂದು ತನ್ನುದರವಂ ಬಗಿದು ತೋರಿಸಿದನಂ
ತೆಂದು ಪೇಳ್ವರ್ ನಾನಿದಂ ಕಂಡೆನೆನುತೆ ಬಿಜ್ಜಳನೃಪಂ ಬೆರಗಾದನು ೩೦

ಮುಖವನ್ನುಳ್ಳ, ಅಲುಗಾಡುತ್ತಿರುವ ಕರ್ಣಕುಂಡಲಗಳನ್ನು ಧರಿಸಿದ, ಕಿರುಜಡೆಗಳಿಂದ ಕೂಡಿದ ಬಾಲಕನು ದೇವಲೋಕದ ಹೂಗಳ ಮಾಲೆಗಳ ಮಧ್ಯದಲ್ಲಿ ಶಿವಲಿಂಗವನ್ನು ಧರಿಸಿಕೊಂಡು ಬಾಲಕನೊಬ್ಬನು ತನ್ನನ್ನು ನೋಡುತ್ತಿರುವ ಸಭೆಯನ್ನು ವಿಸ್ಮಯ ಸಮುದ್ರದಲ್ಲಿ ಮುಳುಗಿಸಿದನು. ಅದನ್ನು ಏನೆಂದು ಹೊಗಳಲಿ ? ೨೯. ಆಗ ದೇವ ದುಂದುಭಿಗಳು ಮೊಳಗಿದವು. ದೇವತೆಗಳು ಸಂತೋಷಗೊಂಡು ಹೂಮಳೆಯನ್ನು ಸುರಿಸಿದರು. ಆ ಸ್ಥಳದಲ್ಲಿದ್ದವರನ್ನು ಭಕ್ತಿರಸವೆಂಬ ಸಮುದ್ರವು ಆವರಿಸಿತು. ಬಸವಣ್ಣನು ಆನಂದದಿಂದ ಮೈಮರೆತನು. ಬಿಜ್ಜಳಮಹಾರಾಜನು 'ನನ್ನ ನೂರು ಅಪರಾಧಗಳನ್ನೂ ಕ್ಷಮಿಸಿ ಕಾಪಾಡಬೇಕೆಂದು' ಮಹಾಭಯಭಕ್ತಿಯಿಂದ ಕೇವಲ ಜ್ಞಾನದಿಂದ ಕೂಡಿದವನಾಗಿ ಅಡ್ಡಬಿದ್ದು ಅನಂತರ ಹೀಗೆ ಹೇಳಿದನು. ೩೦. "ಹಿಂದೆ ರಂಭೆಯು ವಾದಮಾಡಲಾಗಿ ಶುಕಮುನಿಯು ತನ್ನ ಹೊಟ್ಟೆಯನ್ನು ಬಗಿದು ತೋರಿಸಿದನು ; ಪೂಸಲನು ಚೋಳನಿಗೆ ತನ್ನ ಹೊಟ್ಟೆಯನ್ನು ಬಗಿದು ತೋರಿಸಿದನು ; ಅನಂತರ ಸಿದ್ಧರಾಮನು ಸೊನ್ನಲಾಪುರದಲ್ಲಿ ನಿಂತು ಅಂದವಾಗಿ ತನ್ನ ಹೊಟ್ಟೆಯನ್ನು ಬಗಿದು ತೋರಿಸಿದನು, ಎಂದು ಹೇಳುತ್ತಾರೆ. ನಾನು ಈಗ ಇದನ್ನು ಪ್ರತ್ಯಕ್ಷವಾಗಿ

CC-0. Jangamwadi Math Collection. Digitized by eGangotri

ಚಿದ್ರೂಪ ನಿನ್ನಿರವನರಿಯದುದಂ ಜರೆದ ನಿಂ
ದಾದ್ರೋಹವೊಂದು ಶಿವಶರಣೆಯಂ ಜರೆದ ಭ
ಕ್ತದ್ರೋಹವೆರಡು ಶಿವವಾಕ್ಯಮಂ ಪುಸಿಯೆಂದ ದೈವದ್ರೋಹಂ ಮೂರಿದು
ಉದ್ರೇಕದಿಂದುದರವೊಡೆಯಿಸಿದ ಸತಿದ್ರೋ
ಹದ್ರೋಹ ನಾಲ್ಕಿವನರಿಯದಿರ್ದುದಾ
ತ್ಮದ್ರೋಹವೈದು ಮಾಡಿದೆನೀಯೈದುಂ ಕ್ಷಮಿಸೆಂದು ಪೊಗಳ್ದನವನು ೩೦

ಒಂದು ಕಡೆಯೊಳ್ ಬಿಜ್ಜಳಂ ಪೊಗಳುತಿರೆ ಮ
ತ್ತೊಂದು ಕಡೆಯೊಳ್ ದಂಡನಾಥಂ ನುತಿಸೆ
ಒಂದು ದಿಕ್ಕಿನೊಳಸಂಖ್ಯಾತಗಣವೆತ್ತಿ ಜಯಜಯವೆಂದು ನುತಿಸುತಿರಲು
ಹಿಂದೆ ಮುಂದೆಡಬಲದೊಳುತ್ತಮರು ಭಕ್ತರುಂ
ನಿಂದು ಕೊಂಡಾಡುತಿರೆ ನೀಲಾಂಬೆ ಸಹಿತ ಸತಿ
ವೃಂದದೊಡಗೂಡಿ ನಲಿಯುತ್ತೆ ಮೊದಲೊಳ್ ಪವಾಡಂ ವಿಭವದಿಂ ಮೆರೆದುದು ೩೧

ಆ ಸಮಯದೊಳ್ ನಾಗಲಾಂಬಿಕೆಯು ನಲಿದು ಗ
ರ್ಭಾಸನದ ಶಿಶುವನಂಗೈತಳಕೆ ತರಲೊಡನ
ಮೇಸು ಬಲ್ಲೋ ಶಿವಮಹಾತ್ಮೆಯಂ ಕಾಣ್ಬರಾರೆಂಬ ಶಂಕಾಜಾಲಮಂ

ನೋಡಿದೆನು" ಎಂದು ಬಿಜ್ಜಳರಾಜನು ಬೆರಗಾದನು. ೩೦. "ಎಲೈ ಚಿದ್ರೂಪನೆ. ನಿನ್ನ ಅಸ್ತಿತ್ವವನ್ನು ಅರ್ಥಮಾಡಿಕೊಳ್ಳದೆ ಹೀಯಾಳಿಸಿದ ನಿಂದಾದ್ರೋಹ ಒಂದು. ಶಿವ ಶರಣೆಯಾದ ಇವಳನ್ನು ಜರಿದ ಭಕ್ತದ್ರೋಹ ಎರಡು. ಶಿವನ ವಾಣಿಯು ಸುಳ್ಳೆಂದು ಹೇಳಿದ ದೈವದ್ರೋಹ ಮೂರು. ಆವೇಗದಿಂದ ಈಕೆಯ ಗರ್ಭವನ್ನು ಸೀಳಿಸಿದ ಸತಿ ದ್ರೋಹ ನಾಲ್ಕು. ಈ ನಾಲ್ಕು ದ್ರೋಹಗಳನ್ನೂ ಅರ್ಥಮಾಡಿಕೊಳ್ಳದ ಆತ್ಮದ್ರೋಹ ಐದನೆಯದು. ನಾನು ಈ ಐದು ದ್ರೋಹಗಳನ್ನು ಮಾಡಿದ್ದೇನೆ. ನನ್ನನ್ನು ಕಾಪಾಡು" ಎನ್ನುತ್ತ ಅವನು ಹೊಗಳಿದನು. ೩೧. ಒಂದು ಕಡೆಯಲ್ಲಿ ಹೀಗೆ ಬಿಜ್ಜಳನು ಹೊಗಳು ತ್ತಿದ್ದನು. ಇನ್ನೊಂದು ಕಡೆಯಲ್ಲಿ ಬಸವದಂಡಾಧೀಶ್ವರನು ಸ್ತೋತ್ರಮಾಡುತ್ತಿದ್ದನು. ಒಂದು ದಿಕ್ಕಿನಲ್ಲಿ ಅಸಂಖ್ಯಾತವಾದ ಭಕ್ತರ ಗಣವು ಜಯಕಾರ ಮಾಡಿ ಹೊಗಳುತ್ತಿತ್ತು. ಹಿಂದೆ ಮುಂದೆ, ಎಡ ಬಲಗಳಲ್ಲಿ ದೊಡ್ಡವರೂ, ಭಕ್ತರೂ ನಿಂತು ಕೊಂಡಾಡುತ್ತಿದ್ದರು. ಹೆಂಗಸರ ಗುಂಪಿನೊಂದಿಗೆ ನೀಲಾಂಬಿಕೆಯು ಕೂಡಿ ಸಂತೋಷಪಡುತ್ತಿರಲು ಮೊದಲ ಪವಾಡವು ವೈಭವದಿಂದ ಮೆರೆಯುತ್ತಿತ್ತು. ೩೨. ಆ ಸಮಯದಲ್ಲಿ ನಾಗಲಾಂಬಿಕೆಯು ಸಂತಸದಿಂದ ತನ್ನ ಗರ್ಭಾಸನದಲ್ಲಿ ಕಾಣಿಸಿದ ಶಿಶುವನ್ನು ಅಂಗೈಗೆತ್ತಿಕೊಂಡಳು. ಆ ಕೂಡಲೇ ಶಿವನ ಮಹಿಮೆಗೆ ಏನು ಸಾಮರ್ಥ್ಯವಿದೆಯೋ ಅದನ್ನು ಅರ್ಥಮಾಡಿಕೊಳ್ಳ,

CC-0. Jangamwadi Math Collection. Digitized by eGangotri

ಆ ಸಭೆಗೆ ಬೀಸಿ ತೆಳ್ವಸಿರೆಂದಿನಂತಾಯ್ತು
ಭೂಸತಿಯು ಪೊರೆ ಕಮಠದಿಗ್ಗಜಂಗಳ ಭರಂ
ವಾಸುಗಿಯ ಭಾರವಿಳಿದುದು ತತ್ತ್ವನಿಧಿ ಜನನಕಾಲದೊಳ್ ಚೋದ್ಯಮೆನಲು ೩೩

ಕಡಿದೊಣಗಿದಖಿಳ ವೃಕ್ಷಂಗಳ್ ಕೊನರ್ತುವೆ
ಲ್ಲೆಡೆಯೊಳುಂ ಬರಡುಗಳ್ ಕೊಡವಾಲ್ಗಳಂ ಕರೆಯು
ತೊಡಗಿದುವು ಕಗ್ಗಲ್ಗಳೊಸರ್ದುದಾ ಕೊಯ್ದ ಫಲತತಿ ಮಗುಳೆ ಫಲವಾದುವು
ಸಡಗರದೊಳಂ ಶಿವಾಲಯದ ಕಲ್ಬೊಂಬೆಗಳ್
ನಡೆದು ನರ್ತಿಸುತಿರ್ದುವಾಕ್ಷಣಂ ಜೈನರೆರ್ದೆ
ಯೊಡೆವುತಿರ್ದುವು ಷಟ್ಸ್ಥಲಬ್ರಹ್ಮ ಭೂತಳದೊಳವತರಿಸಲೇನೆಂಬೆನು ೩೪

ಕಳವಳಿಸಿದಂ ಕಾಲನಡಗಿದಂ ಪೂಗೋಲ
ನಳವಳಿದುದಜ್ಞಾನವಿಳಿದುದು ಮನದ ಮಾನ
ದೊಳಗೊಳಗೆ ಕಂದಿದಳ್ ಮಾಯೆ ಪೋದುದಸೂಯೆ ಷಡ್ವರ್ಗಮೇನಾದುವೋ
ಸಲೆ ಕೆಟ್ಟುದಪಮೃತ್ಯು ಜ್ವಲಿಸಿದುದು ಭಯಬಿತ್ತು
ನೆಲೆಗುಂದಿದಳ್ ಮಾರಿ ತೊಲಗಿತಘಚಯಭೂರಿ
ಲಲಿತಮುಕ್ತಿಸ್ವರೂಪಂ ಸತ್ಕಲಾಪನವತರಿಸಿದಾಕ್ಷಣಮಿಳೆಯೊಳು ೩೫

ವವರು ಯಾರು ಎಂದು ಆ ಸಭೆಗೆ ಸಂದೇಹದ ಬಲೆಯನ್ನು ಬೀಸಿ ನಾಗಲಾಂಬಿಕೆಯ ತೆಳುವಾದ ಹೊಟ್ಟೆಯು ಎಂದಿನಂತೆ ಕೂಡಿಕೊಂಡಿತು. ಭೂದೇವಿಯ ಹೊರೆ, ಕೂರ್ಮ, ದಿಗ್ಗಜಗಳ ಮತ್ತು ಆದಿಶೇಷನ ಭಾರವು ಆ ತತ್ತ್ವನಿಧಿಯು ಹುಟ್ಟಿದ ಕಾಲದಲ್ಲಿ ಆಶ್ಚರ್ಯವೆಂಬಂತೆ ಕಡಿಮೆ ಆಯಿತು. ೩೪. ಷಟ್ಸ್ಥಲಬ್ರಹ್ಮಯು ಭೂಮಿಯಲ್ಲಿ ಜನಿಸಲು ಕಡಿದು ಒಣಗಿಹೋದ ಎಲ್ಲ ಮರಗಳೂ ಚಿಗುರಿದುವು. ಎಲ್ಲ ಕಡೆಗಳಲ್ಲಿಯೂ ಗೊಡ್ಡುಗಳು ಕೊಡಗಟ್ಟಲೆ ಹಾಲನ್ನು ಕರೆಯತೊಡಗಿದುವು, ಕಗ್ಗಲ್ಲುಗಳಿಂದ ನೀರು ಒಸರಿತು. ಕೊಯ್ದ ಮರಗಳು ಪುನಃ ಹಣ್ಣು ಬಿಟ್ಟವು. ಶಿವದೇವಾಲಯದಲ್ಲಿದ್ದ ಕಲ್ಲು ಗೊಂಬೆಗಳು ಸಡಗರದಿಂದ ನಡೆದು ನರ್ತಿಸಿದವು. ಆ ಕ್ಷಣವೇ ಜೈನರ ಎದೆಗಳು ಒಡೆಯುತ್ತಿದ್ದವು. ಇದನ್ನು ಏನೆಂದು ಹೇಳಲಿ ? ೩೫. ಲಲಿತ ಮುಕ್ತಿಸ್ವರೂಪನೂ, ಸತ್ಕಲಾಪನೂ ಭೂಮಿಯಲ್ಲಿ ಅವತರಿಸಿದಾಕ್ಷಣ ಯಮಧರ್ಮನು ಕಳವಳಪಟ್ಟನು. ಮನ್ಮಥನು ಮರೆಯಾದನು. ಅಜ್ಞಾನವು ಕ್ಷೀಣವಾಯಿತು. ಅಭಿಮಾನ ಕಡಿಮೆಯಾಯಿತು. ಮಾಯೆಯು ಒಳಗೊಳಗೇ ಸೊರಗಿದಳು. ಅಸೂಯೆ ಹೋಯಿತು, ಅರಿಷಡ್ವರ್ಗಗಳು ಏನಾದುವೊ ? ಅಪಮೃತ್ಯು ಹಿಮ್ಮೆಟ್ಟಿತು. ಭಯದ ಬೀಜವೇ ಸುಟ್ಟುಹೋಯಿತು.

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲ ಸುಖಮಂ ಸಕಲ ಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರವೆನಿಸುವ ಚೆನ್ನಬಸವೇಶನಳ್ಕರಿಂದೆ ೩೬

## ನಾಲ್ಕನೆಯ ಸಂಧಿ ಸಂಪೂರ್ಣ

ಮಾರಿ ದಿಕ್ಕುತಪ್ಪಿದಳು. ಭಯಂಕರ ಪಾಪಸಮೂಹ ಓಡಿಹೋಯಿತು. ೩೬. ಈ ರೀತಿಯಲ್ಲಿ ವಿರಾಜಿಸುವ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ. ಓದಿದವರಿಗೆ. ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ. ವಾಚನ ಮಾಡಿದವರಿಗೆ. ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ. ಎಲ್ಲ ಭೋಗಗಳನ್ನೂ. ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ನಾಲ್ಕನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಐದನೆಯ ಸಂಧಿ

ಸೂಚನೆ : ಲೀಲೆಯಿಂ ಚೆನ್ನಬಸವಣ್ಣನಂ ಬಿಜ್ಜಳನೃ
ಪಾಲಕಂ ಪುಷ್ಪಕೋತ್ಸವಮನಾಗಿಸೆ ಬಳಿಕ
ಬಾಲಲೀಲೆಯ ಕಳೆದು ಶರಣರೊಡಗೂಡಿ ಸುಖಮಿರ್ದನತಿಸಂತಸದೊಳು

ಬೆರಲ ಕಳಿಕೆಗಳ ಭುಜಶಾಖೆಗಳ ರಂಜಿಸುವ
ಕೊರಲ ಗರಳದ ಮಧುವ್ರತದ ದಂತಪ್ರಭೆಯು
ವರಕುಸುಮಮಂಜರಿಯ ಜಡೆಯೆಡೆಯ ಬಾಂದೊರೆಯ ಮಕರಂದಸಂದೋಹದ
ಮುರಿದ ಜಡೆಗಳ ರಜಃಪಿಂಜರದ ಸಂತತಂ
ಸುರನರೋರಗ ಶುಕಪಿಕಾಳಿಗಾಶ್ರಯಮಾದ
ಪರಮ ಪಂಪಾವಿರೂಪಾಕ್ಷಕಲ್ಪದ್ರುಮಂ ಪೊರೆಯಲಾನತಜನರನು ೧

ಬಳಿಕ ಬಿಜ್ಜಳನೃಪತಿ ಬಸವಣ್ಣನಂ ಕರೆದು
ಪೊಳಲನುರೆ ಸಿಂಗರಿಸವೇಳ್ಕೆಂಬ ಮಾತು ಬಾ
ಯೊಳಗಿರಲ್ ನೆಗಳ್ದುವಲ್ಲಲ್ಲಿ ನಾನಾ ಪಟ್ಟಿ ಝಲ್ಲಿ ಕನ್ನಡಿ ಕಳಸದಿಂ
ನಿಳಯನಿಳಯದ ಮುಂದೆ ಬಲ್ಗುರುಜುಗಳ್ ನಡುವೆ
ತೊಳಪ ಮಣಿ ಗುಡಿ ತೋರಣಂಗಳಿಂ ಪನ್ನೀರ
ಚಳೆಯದಿಂದಗರುಧೂಪದ ಹೊಗೆಗಳಿಂ ಬೀದಿಬೀದಿಗಳ್ ಚೆಲ್ವಾದುವು ೨

ಸೂಚನೆ : ಬಿಜ್ಜಳರಾಜನು ಸಂತೋಷದಿಂದ ಚೆನ್ನಬಸವಣ್ಣನಿಗೆ ಪುಷ್ಪಕೋತ್ಸವ ವನ್ನು ಮಾಡಿಸಿದನು. ಅನಂತರ ಚೆನ್ನಬಸವಣ್ಣನು ತನ್ನ ಬಾಲ್ಯಾವಸ್ಥೆಯನ್ನು ಕಳೆದು ಶಿವಶರಣರ ಜೊತೆಯಲ್ಲಿ ಸಂತೋಷದಿಂದ ಸುಖವಾಗಿದ್ದನು. ೧. ಬೆರಳೇ ಮೊಗ್ಗುಗಳು, ಭುಜಗಳೇ ರೆಂಬೆಗಳು, ಮನೋಹರವಾದ ಕುತ್ತಿಗೆಯ ವಿಷದ ಕಪ್ಪುಬಣ್ಣವೇ ದುಂಬಿ. ಹಲ್ಲುಗಳ ಪ್ರಕಾಶವೇ ಒಳ್ಳೆಯ ಹೂಗಳ ಗೊಂಚಲು, ಜಡೆಗಳಲ್ಲಿರುವ ಗಂಗೆಯೇ ಮಧು, ತಿರುಚಿದ ಜಡೆಗಳೇ ಹೊಳೆಯುವ ಬಂಗಾರದ ಪರಾಗವನ್ನು ಹೊಂದಿದ್ದವು. ಯಾವಾಗಲೂ ದೇವತೆಗಳು, ಮಾನವರು, ನಾಗರು, ಗಿಳಿ–ಕೋಗಿಲೆಗಳ ಸಮೂಹಗಳಿಗೆ ಆಶ್ರಯವಾಗಿದ್ದ ಶ್ರೇಷ್ಠವಾದ ಪಂಪಾವಿರೂಪಾಕ್ಷನೆಂಬ ಕಲ್ಪವೃಕ್ಷವು ನಮಸ್ಕರಿಸುತ್ತಿರುವ ಭಕ್ತರನ್ನು ಕಾಪಾಡಲಿ. ೨, ಅನಂತರ ಬಿಜ್ಜಳರಾಜನು ಬಸವಣ್ಣನನ್ನು ಕರೆದು ಪಟ್ಟಣವನ್ನು ಚೆನ್ನಾಗಿ ಶೃಂಗಾರ ಮಾಡಬೇಕೆಂದು ಹೇಳಿದನು. ಆ ಮಾತು ಇನ್ನೂ ರಾಜನ ಬಾಯಿ ಯಲ್ಲಿರುವಾಗಲೇ ಅಲ್ಲಲ್ಲಿ ವಿವಿಧ ರೀತಿಯ ತೋರಣ. ಗೊಂಡೆಯ ಸಾಲು, ಕಳಶ-ಕನ್ನಡಿ ಗಳು ಕಂಡುಬಂದವು. ಮನೆ ಮನೆಗಳ ಮುಂದೆ ಅಲಂಕರಿಸಿದ ಮಂಟಪಗಳಿದ್ದವು, ಅವುಗಳ ಮಧ್ಯೆ ಹೊಳೆಯುವ ಮಣಿಖಚಿತವಾದ ಬಾವುಟಗಳು ಮತ್ತು ತೋರಣಗಳನ್ನು ಕಟ್ಟಿ

CC-0. Jangamwadi Math Collection. Digitized by eGangotri

ಪಚ್ಚೆಗಳ ಕಂಬಂಗಳಿಂ ಪವಳವಲಗೆಗಳ
ಮುಚ್ಚಳ್ಗಳಿಂ ನೀಲಮಣಿಯ ಲೋವೆಗಳಿಂ ವಿ
ಯಚ್ಚರಾಂಗಣಕಡರ್ದ ವಜ್ರವೈಡೂರ್ಯ ಮಾಣಿಕ್ಯದೊಳ್ ನೆಲೆನೆಲೆಗಳ
ಅಚ್ಚಮುತ್ತಿನ ಗುಡಿಗಳಿಂ ಝಲ್ಲಿ ಪಟ್ಟಿಗಳ
ಕುಚ್ಚುಗಳ ಸಂಪಣೆಗಳಿಂ ಕೇರಿಕೇರಿಯೊಳ್
ಪೆಚ್ಚಿದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳೇನೆಂಬೆನು. ೩

ವಿವರಿಸುವೊಡೀ ಮಹೋತ್ಸವಮನೀಕ್ಷಿಸೆ ಬಂದ
ದಿವಿಜರ ವಿಮಾನಂಗಳೋ ಪಟ್ಟ್ಣಲಬ್ರಹ್ಮಿ
ಯವತರಿಸಲೀ ಪುರವೊಳಿರ್ಪ ಶಿವಶರಣಸಂತತಿಯ ಸಾಯುಜ್ಯಪದಕೆ
ತವಕದಿಂದೊಯ್ಯಲೈತಂದ ಸತ್ಪುಷ್ಪಕದ
ನಿವಹವೋ ಪೇಳೆನಲ್ ಪುರದೊಳೆಲ್ಲೆಲ್ಲಿಯುಂ
ನವಕುರುಜುಗಳ್ ಮಹಾಮೇರುವೆಗಳುಂ ಮೆರೆದುವೇನೆಂಬೆನಚ್ಚರಿಯನು ೪

ವಿರಚಿಸಿದ ಸಾರಣೆಯ ಕಾರಣೆಯ ಧಾರುಣಿಯ
ಪರಿವಿಡಿಯೊಳೋರಣದ ತೋರಣದ ಪೂರಣದ
ಸರದ ಪೂಗಂಪುಗಳ ಸೊಂಪುಗಳ ತಂಪುಗಳ ಸಿರಿಗಂಧ ಪನ್ನೀರೊಳು

ಲಾಗಿತ್ತು. ಪನ್ನೀರನ್ನು ಚಿಮುಕಿಸಲಾಗಿತ್ತು. ಅಗರು ಮುಂತಾದ ಸುಗಂಧದ್ರವ್ಯಗಳ ಹೊಗೆಯಿಂದ ಬೀದಿ–ಬೀದಿಗಳು ಮನೋಹರವಾಗಿದ್ದುವು. ೩. ಪಚ್ಚೆಗಳಿಂದ ಮಾಡಿದ ಕಂಬಗಳಿದ್ದುವು. ಹವಳದ ಹಲಗೆಗಳಿಂದ ಮಾಡಿದ ಮಾಳಿಗೆಗಳಿದ್ದುವು. ನೀಲಮಣಿಗಳ ಸೂರುಗಳಿದ್ದುವು. ದೇವತೆಗಳ ಅಂಗಳದವರೆಗೆ ಹಬ್ಬಿಕೊಂಡ ವಜ್ರ ವೈಡೂರ್ಯ ಮಾಣಿಕ್ಯದಿಂದ ಕೂಡಿದ ಉಪ್ಪರಿಗೆಯ ಮನೆಗಳಿದ್ದುವು. ಅಲ್ಲಿ ಅಚ್ಚಮುತ್ತಿನಿಂದ ಮಾಡಿದ ಗೊಂಚಲುಗಳಿದ್ದುವು. ಗೊಂಡೆಗಳ ಸಾಲು ತೋರಣಗಳು, ಕುಚ್ಚುಗಳ ಸಮೂಹಗಳಿಂದ ಅಲಂಕೃತವಾದ ಗೋಪುರಾಕಾರದ ಮಂಟಪಗಳು ಕೇರಿ ಕೇರಿಗಳಲ್ಲಿ, ಮನೆ ಮನೆಯ ಬಾಗಿಲುಗಳಲ್ಲಿಯೂ ಲೆಕ್ಕವಿಲ್ಲದಷ್ಟು ಕಂಡುಬಂದುವು. ಇವುಗಳನ್ನು ಏನೆಂದು ಹೇಳಲಿ ? ೪, ಈ ಮಹೋತ್ಸವವನ್ನು ನೋಡಲು ದೇವತೆಗಳು ವಿಮಾನಗಳಲ್ಲಿ ಬಂದರೋ ! ಪಟ್ಟ್ಣಲಬ್ರಹ್ಮೆಯು ಜನ್ಮತಾಳಲು ಆ ಊರಿನಲ್ಲಿರುವ ಶಿವಶರಣರ ಸಮೂಹವನ್ನು ಮುಕ್ತಿಗೆ ಬೇಗನೆ ಕೊಂಡೊಯ್ಯಲು ಬಂದ ದೇವರಥಗಳ ಸಮೂಹವೊ ಎನ್ನುವಂತೆ ಆ ಪಟ್ಟಣದಲ್ಲಿ ಎಲ್ಲೆಲ್ಲಿಯೂ ಹೊಸ ಬುರುಜುಗಳು. ದೊಡ್ಡದಾದ ಗೋಪುರಾಕಾರದ ಮಂಟಪಗಳು ಶೋಭಿಸಿದುವು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೫. ನೆಲವನ್ನು ಸಾರಿಸಿ ಬಣ್ಣದ ರಂಗವಲ್ಲಿಗಳಿಂದ ಅಲಂಕರಿಸಿದ್ದರು. ಕ್ರಮವಾಗಿ ಅಚ್ಚುಕಟ್ಟಾದ ತೋರಣಗಳನ್ನು ಕಟ್ಟಿದ್ದರು. ಹೂವಿನ ಮಾಲೆಗಳು ಸುವಾಸನೆಯಿಂದ ತಂಪಾಗಿ ಸೊಂಪಾಗಿದ್ದುವು. ಶ್ರೀಗಂಧವನ್ನು ಬೆರೆಸಿದ ಪನ್ನೀರನ್ನು ಚಿಮುಕಿಸಿದ್ದರು, ಇಂತಹ ಸುಂದರವಾದ ಮನೆ

SRI JAGADGURU VISHWARADHYA
JNANA SIMHASAN JNANAMANDIR
LIBRARY
CC-0. Jangamwadi Math Collection. Digitized by eGangotri
Jangamawadi Math, Varanasi
Acc. No. 4227

ಬೆರಸಿರ್ಪ ಚಳಿಯುದ ಸುನಿಳಯುದ ಸುಕಳೆಯುಗಳೊ
ಳಿರದೆ ಬರ್ಪಾರತಿಯು ಮೂರುತಿಯುರಾರತಿಯು
ತರತರದ ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರಮೊಸೆದುದು ೫

ತರಿಸಿದಂ ರತ್ನಮಯಪುಷ್ಪಕವನೊಲಿದವರೊ
ಳಿರಿಸಿದಂ ನಾಗಾಂಬೆಯುಂ ಕುವರನಂ ನಮಸ್
ಕರಿಸಿದಂ ತಾನವರ್ಗೆ ಚತುರಂಗಮುಂ ಪುರಜನಂಗಳುಂ ಮಂತ್ರಿಗಳನು
ಕರೆಸಿದಂ ಪುರದ ವಾರಾಂಗನಾನಿಕರವಂ
ಬರಿಸಿದಂ ಶೈವದೊಳ್ ಭಯಭರಿತಭಕ್ತಿಯುಂ
ಧರಿಸಿದಂ ಜಿನಬಿಜ್ಜಳಂ ಹರುಷದಿಂದುತ್ಸವಂಗೈಸಲನುವಾದನು ೬

ಪಟಹ ನಿಸ್ಸಾಳ ಗಿಡಿಬಿಡಿ ಭೇರಿ ಡವುಡೆ ಜೇ
ಗಟೆ ಕರಡೆ ಕಂಸಾಳ ಡೊಳ್ಳಾರಿ ಟುಮುಕು ತಂ
ಬಟವೆಸೆವ ವೀರಣ ಡಮಾನ ಚಂಬಕ ಬುರುಗುಗಾಳೆ ಹೆಗ್ಗಾಳೆ ಗಜರ್ವ
ಪಟುಕಹಳೆಯುಂ ಕೊಂಬುಗಹಳೆ ಪೊಂಗಹಳೆಯು
ತ್ಕಟತಾಳ ಮದ್ದಳೆಗಳೆಂಬ ಬಹುವಾದ್ಯದು
ಬ್ಬಟೆಯುಖಿಳದೆಸೆಯೊಳಾವರಿಸಲಾ ಕುವರನ ಸುಪುಷ್ಪಕಂ ಪೊರಮಟ್ಟುದು ೭

ಪೇಳಲೇಂ ಪುರಮುಖ್ಯಸತಿಯುರೆಡಬಲದೊಳಂ
ಡಾಳಿಸಲ್ ಧವಳಚಮರಂಗಳಂ ಬಿಜ್ಜಳನ್ನೃ
ಪಾಲಕಂ ಕಾಲ್ನಡೆಯೊಳಖಿಲಮಂತ್ರಿಪ್ರಮುಖಪರಿಜನದ ಗಡಣದಿಂದೆ

ಗಳಿಂದ ರತಿಯಂತೆ ಸೌಂದರ್ಯವತಿಯರಾದ ಹೆಂಗಸರು ತರತರದ ಆರತಿಯನ್ನು ಹೊತ್ತು ಬರುತ್ತಿದ್ದರು, ಕೇರಿ ಕೇರಿಗಳಲ್ಲಿ ದೊಡ್ಡ ಭೇರಿಗಳ ಶಬ್ದದಿಂದ ಆ ಪಟ್ಟಣವು ಮೆರೆಯುತ್ತಿದ್ದಿತು. ೬. ಜೈನನಾದ ಬಿಜ್ಜಳನು ರತ್ನಮಯವಾದ ದೇವರಥವನ್ನು ತರಿಸಿ, ಅದರಲ್ಲಿ ಉತ್ಸಾಹದಿಂದ ನಾಗಲಾಂಬಿಕೆಯನ್ನೂ ಮಗುವನ್ನೂ ಕೂಡಿಸಿ. ತಾನು ಅವರಿಗೆ ನಮಸ್ಕರಿಸಿದನು. ತನ್ನ ಚತುರಂಗಸೈನ್ಯವನ್ನೂ, ಪುರಜನಗಳನ್ನೂ, ಮಂತ್ರಿಗಳನ್ನೂ ಕರೆಸಿದನು. ಆ ನಗರದ ವೇಶ್ಯೆಯರ ಸಮೂಹವನ್ನು ಬರಿಸಿದನು. ವೀರಶೈವಧರ್ಮದಲ್ಲಿ ಭಯದಿಂದ ತುಂಬಿದ ಭಕ್ತಿಯನ್ನು ಹೊಂದಿ, ಸಂತೋಷದಿಂದ ಉತ್ಸವವನ್ನು ಮಾಡಿಸಲು ಸಿದ್ಧನಾದನು. ೭. ಆಗ ನಗಾರಿ, ಡೋಲು, ಡಮರುಗ, ಭೇರಿ. ಸಣ್ಣ ಡೋಲು, ಜಾಗಟೆ, ಮೃದಂಗ, ದೊಡ್ಡ ಕಂಚಿನತಾಳ, ನಗಾರಿ, ಸಣ್ಣ ಮತ್ತು ದೊಡ್ಡ ತಮಟೆಗಳು, ಜೋಡುತಮಟೆ, ಜೋಡಿಡೊಳ್ಳು, ಚಂಬಕ. ಬುರುಗುಕಹಳೆ, ಹೆಗ್ಗಾಳೆಗಳು ಮತ್ತು ಶಬ್ದಮಾಡುವ ಪಟುಕಹಳೆ, ಕೊಂಬುಗಹಳೆ, ಬಂಗಾರದ ಕಹಳೆ. ದೊಡ್ಡತಾಳ, ಮದ್ದಳೆ ಮುಂತಾದ ನಾನಾ ತರಹದ ವಾದ್ಯಗಳ ಅಬ್ಬರವು ಎಲ್ಲ ದಿಕ್ಕಿನಲ್ಲಿಯೂ ವ್ಯಾಪಿಸಲು ಕುಮಾರನ ಸುಂದರವಾದ ಪುಷ್ಪಕೋತ್ಸವವು ಹೊರಟಿತು. ೮. ಅದನ್ನು ಏನೆಂದು ವರ್ಣಿಸಲಿ ? ಎಡ ಬಲಗಳಲ್ಲಿ ಊರಿನ ಪ್ರಮುಖ ಸ್ತ್ರೀಯರು ಬಿಳಿಯ

CC-0. Jangamwadi Math Collection. Digitized by eGangotri

ಓಲೈಸಿ ಬರೆ ಬಸವದಂಡೇಶಮುಖ್ಯಶರ
ಣಾಳಿ ಜಯತೆಂದೆನುತೆ ಬರೆ ಸಮ್ಮುಖಂಬಿಡಿದು
ಬಾಲೆಯರ್ ನರ್ತನವನಾಡಲಾ ಸುಕುಮಾರಕಂ ಮೆರೆದು ಬರುತಿರ್ದನು ೮

ವಾದ್ಯಮೇನಕ್ಕ ನೀಂ ಕೇಳ್ದುದಿಲ್ಲವೆ ತಂಗಿ
ಚೋದ್ಯಮಂ ಬಸವನಗ್ರಜೆ ನಾಗಲಾಂಬಿಕೆಗ
ಭೇದ್ಯಮಪ್ಪ ಭವಪ್ರಸಾದಪಾಲಿತಗರ್ಭದೊಳ್ ಬಿಜ್ಜಳಂ ಕೇಳಿದ
ಸಾಧ್ಯವಿಲ್ಲದ ಪ್ರಶ್ನೆಗುತ್ತರಿಸಿ ಲೋಕದಾ
ರಾಧ್ಯನಪ್ಪೊಂದು ಶಿಶು ಬಂತು ಗಡಮೆಂದು ಪುರ
ದಾದ್ಯಂತದಬಲಾಜನಂ ನೋಡಲೌತ್ಸುಕ್ಯದಿಂದಯ್ದೆ ಪೊರಮಟ್ಟುದು ೯

ಅಂಗಜನ ಕಣೆಗಳಂ ಬೀರೆ ನೋಟಂ ಮೊಗಂ
ತಿಂಗಳಂ ಮೀರೆ ನಸುನಗೆಯ ಸೊಂಪಡರ್ದು ಬೆ
ಳ್ದಿಂಗಳಂ ಕರೆಯೆ ಭೂಷಣಮಣಿಪ್ರಭೆ ತಟಿತ್ಸಂಪದಮನಯ್ದೆ ಜರೆಯೆ
ಪೊಂಗಳಸಮೊಲೆ ಮೇಲುದಂ ನೂಂಕೆ ಮಧ್ಯಂ ಬೆ
ಡಂಗಿನಿಂ ಬಳ್ಕೆ ಮುಡಿ ಪೂಗಳಂ ಕೆದರೆ ಕಾ
ಲುಂಗುರಗಳೊದರೆ ತವಕದೊಳಯ್ದಿದರ್ ಪುರವರಾಂಗನೆಯರಾ ಕ್ಷಣದೊಳು ೧೦

ಚಾಮರಗಳನ್ನು ಬೀಸುತ್ತಿದ್ದರು. ಬಿಜ್ಜಳರಾಯನು ಕಾಲ್ನಡಿಗೆಯಲ್ಲಿ ಸಕಲ ಮಂತ್ರಿ ಮುಖ್ಯರ ಮತ್ತು ಪರಿಜನರ ಸಮೂಹದೊಡನೆ ಸೇವೆ ಮಾಡುತ್ತ ಬರುತ್ತಿದ್ದನು. ಬಸವದಂಡಾಧೀಶನೂ ಮತ್ತು ಮುಖ್ಯ ಶರಣರೂ ಜಯಕಾರ ಮಾಡುತ್ತ ಗುಂಪಾಗಿ ಬರುತ್ತಿದ್ದರು. ಉತ್ಸವದ ಮುಂಭಾಗದಲ್ಲಿ ಬಾಲೆಯರು ನರ್ತನ ಮಾಡುತ್ತ ಬರುತ್ತಿರಲು ಆ ಸುಕುಮಾರನು ವೈಭವದ ಮೆರವಣಿಗೆಯಲ್ಲಿ ಬರುತ್ತಿದ್ದರು. ೯. 'ಇದೇನಕ್ಕ ವಾದ್ಯಗಳ ಮೊಳಗು ? ನೀನು ಆಶ್ಚರ್ಯದ ಸಂಗತಿಯನ್ನು ಕೇಳಲಿಲ್ಲವೆ ತಂಗಿ ? ಬಸವಣ್ಣನ ಅಕ್ಕ ನಾಗಲಾಂಬಿಕೆಗೆ, ಅರಿಯಲಸಾಧ್ಯವಾದ ರೀತಿಯಲ್ಲಿ ಪರಮೇಶ್ವರನು ಅನುಗ್ರಹಿಸಿ ಕೊಟ್ಟ ಪ್ರಸಾದದಿಂದ ಗರ್ಭವುಂಟಾಯಿತು. ಉತ್ತರಿಸಲು ಅಸಾಧ್ಯವಾದ ಪ್ರಶ್ನೆಗಳನ್ನು ಬಿಜ್ಜಳನು ಕೇಳಿದ. ಆ ಪ್ರಶ್ನೆಗಳಿಗೆ ಉತ್ತರವನ್ನಿತ್ತು ಲೋಕಾರಾಧ್ಯವಾದ ಶಿಶುವೊಂದು ಜನಿಸಿತಲ್ಲವೆ ?' ಎಂದು ಪಟ್ಟಣದ ಎಲ್ಲ ಅಬಲೆಯರೂ ಅದನ್ನು ನೋಡುವ ಕುತೂಹಲ ಮತ್ತು ಆಸೆಯಿಂದ ಹೊರಟಿದ್ದಾರೆ. ೧೦. ಹೀಗೆ ಹೊರಟ ಹೆಂಗಸರ ಕಣ್ನೋಟ ಮನ್ಮಥನ ಬಾಣದಂತೆ ಇತ್ತು. ಅವರ ಮುಖಗಳು ಬೆಳುದಿಂಗಳಿನ ಕಾಂತಿಯನ್ನು ಮೀರಿಸಿದ್ದವು. ಅವರ ನಸುನಗೆಯ ಸೊಂಪು ಹೆಚ್ಚಾಗಿ ಬೆಳದಿಂಗಳನ್ನು ಕರೆಯುವಂತೆ ಇತ್ತು. ಅವರು ಧರಿಸಿದ್ದ ಆಭರಣಗಳ ಕಾಂತಿ ಮಿಂಚನ್ನು ಅಣಕಿಸುವಂತಿತ್ತು. ಹೊನ್ನಿನ ಕಳಶದಂತಹ ಅವರ ಮೊಲೆಗಳು ಮೇಲಿನ ಸೆರಗನ್ನು ನೂಕಿದವು. ತೆಳ್ಳಗಿದ್ದ ಸೊಂಟವು ವೈಯಾರದಿಂದ ಬಳುಕುತ್ತಿತ್ತು. ತುರುಬುಗಳು ಹೂಗಳಿಂದ ಅಲಂಕೃತ

CC-0. Jangamwadi Math Collection. Digitized by eGangotri

ಎಸೆವ ಮಾಡಗಳ ನೆಲೆನೆಲೆಗಳೊಳ್ ನಿಂದು ಶೋ
ಭಿಸುವ ಮಾಳಿಗೆಯನಿರದೇರಿ ಪೊಂಜಗಲಿಯೊಳ್
ಮಿಸುಪ ಕಂಬಂಗಳಂ ನೆಮ್ಮಿ ಮಂಟಪದಿಕ್ಕೆಲಂಗಳೊಳ್ ಪಂತಿವಿಡಿದು
ಒಸೆದು ಮಂದಿರಬಹಿದ್ವಾರದೊಳ್ ನಿಂದು ನಿ
ಟ್ಟಿಸುವ ಶಶಿಮುಖಿಯರಲ್ಲಲ್ಲಿ ಕರುವಿಟ್ಟೆರೆದ
ಪೊಸ ಪೊನ್ನ ಪುತ್ತಳಿಗಳಂತೆ ಕಣ್ಗೊಳಿಸಿದರದೇನೆಂಬೆನಚ್ಚರಿಯನು ೧೧

ವಸುಧೆಯಂ ಪಾದಾಬ್ಜರಾಮುಗುರ್ವೆಳ್ಪುಗಳ್
ಪಸದನಂಗೆಯ್ಯೆ ನೂಪುರಕಂಕಣಸ್ವನಂ
ದೆಸೆಗಳೊಳ್ ಪೊಣ್ಮೆ ನಯನಾಂಶು ಗಗನಕೆ ತಟಿಲ್ಲತೆಯ ಪರ್ಬಂ ಪಡೆಯಲಃ
ಪೊಸಬಗೆಯ ನಡೆಯಂಚೆವಿಂಡನೊದವಿಸೆ ಮೆಯ್ಯ
ಬಿಸಜಗಂಧಂ ತುಂಬಿವಿಂಡುಮಂ ನೆರಪೆ ತಾ
ವಸಮಾಸ್ತ್ರನಸ್ತ್ರಂಗಳೆಡೆಯಾಡುವಂತೆ ಬರುತಿರ್ದರಖಿಳಸ್ತ್ರೀಯರು ೧೨

ಕುರುಳ್ಗಳುಂ ಹಾರಂಗಳುಂ ಕುಣಿಯೆ ಕುಚಯುಗಂ
ವರನಿತಂಬಂ ಕದಕ್ಕದಿಸೆ ಮೇಲುದ ನಿರಿಗ
ಳಿರದೆ ಪಯ್ಸರಿಸೆ ಲಾವಣ್ಯಜಲಮುಂ ಘರ್ಮಜಲಬಿಂದುಗಳ್ ತುಳುಂಕೆ

ವಾಗಿದ್ದುವು. ಕಾಲುಂಗುರಗಳು ಘಲುಘಲು ಶಬ್ಧಮಾಡುತ್ತಿರಲು ಆ ಊರಿನ ಹೆಂಗಸರು ಉತ್ಸವವನ್ನು ನೋಡುವ ಆತುರದಿಂದ ಕೂಡಲೇ ಹೊರಬಂದರು. ೧೧. ಆ ಉತ್ಸವವನ್ನು ನೋಡಲು ಶೋಭಿಸುವ ಉಪ್ಪರಿಗೆಗಳ ಮೇಲೆ ನಿಂತಿದ್ದರು. ಅಲಂಕೃತವಾದ ಮಾಳಿಗೆಗಳನ್ನು ಹತ್ತಿದ್ದರು. ಬಂಗಾರದ ಜಗುಲಿಗಳ ಮೇಲೆ ಹೊಳೆಯುವ ಕಂಬಗಳನ್ನು ಒರಗಿಕೊಂಡು ನಿಂತಿದ್ದರು. ಮಂಟಪದ ಎರಡು ಕಡೆಗಳಲ್ಲಿಯೂ ಸಾಲಾಗಿ ನಿಂತಿದ್ದರು. ಮನೆಯ ಹೊರಭಾಗದಲ್ಲಿ ನಿಂತು ಕುತೂಹಲದಿಂದ ನಿಟ್ಟಿಸುತ್ತಾ ಇದ್ದರು. ಇಂತಹ ಚಂದ್ರಮುಖಿಯರು ಅಲ್ಲಲ್ಲಿ ಎರಕಹೊಯ್ದ ಹೊಸ ಬಂಗಾರದ ಗೊಂಬೆಗಳಂತೆ ಕಾಣಿಸುತ್ತಿದ್ದರು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೧೨. ಹೆಂಗಸರು ಪಾದಗಳಿಗೆ ಹಚ್ಚಿಕೊಂಡಿದ್ದ ಕೆಂಪುಬಣ್ಣದಿಂದ ಹೊರಡುವ ಕಾಂತಿ ಮತ್ತು ಅವರ ಕಾಲಿನ ಉಗುರುಗಳಿಂದ ಹೊರಟ ಕಾಂತಿ ಭೂಮಿಯನ್ನು ಅಲಂಕರಿಸಿತ್ತು. ಅವರು ಧರಿಸಿದ್ದ ಗೆಜ್ಜೆ ಮತ್ತು ಕಡಗಗಳಿಂದ ಹೊರಡುತ್ತಿದ್ದ ಧ್ವನಿ ದಿಕ್ಕು ದಿಕ್ಕುಗಳಲ್ಲಿಯೂ ಹರಡಿತ್ತು. ಅವರ ಕಣ್ಣೋಟ ಆಕಾಶಕ್ಕೆ ಮಿಂಚಿನ ಬಳ್ಳಿಯನ್ನು ಹಬ್ಬಿಸಿದಂತೆ ಇತ್ತು. ಅವರ ಹೊಸ ರೀತಿಯ ನಡಿಗೆ ಹಂಸಗಳ ಹಿಂಡನ್ನು ಒದಗಿಸಿತ್ತು. ಅವರ ಮೈಯಿಂದ ಹೊರಡುತ್ತಿದ್ದ ಕಮಲದ ಪರಿಮಳ ತುಂಬಿಗಳ ಗುಂಪನ್ನು ಸ್ವಾಗತಿಸಿತು. ಮನ್ಮಥನ ಪುಷ್ಪಬಾಣಗಳು ತಿರುಗಾಡುವಂತೆ ಆ ಸ್ತ್ರೀಯರೆಲ್ಲ ಬರುತ್ತಿದ್ದರು. ೧೩. ಅವರ ಮುಂಗುರುಳುಗಳು ಮತ್ತು ಹಾರಗಳು ಕುಣಿಯುತ್ತಿದ್ದುವು. ಅವರ ಎರಡು ಮೊಲೆಗಳೂ, ಪಿರ್ರೆಗಳೂ ಮೇಲಕ್ಕೆ ಕೆಳಕ್ಕೆ ಆಡುತ್ತಿದ್ದವು. ಮೇಲ್ಸೆರಗು

CC-0. Jangamwadi Math Collection. Digitized by eGangotri

ಚರಣಂಗಳುಂ ನುಡಿಗಳುಂ ತಡಂಬಡಿಸಲತಿ
ಭರವಸದೊಳಿನ್ತುಂದು ನೋಳ್ಪ ತರುಣೀಜನಂ
ಸ್ಮರನ ಕುಲದೇವತೆಯುರೆಡೆಯಾಡುವಂತೆಸೆದರೇನೆಂಬೆನಚ್ಚರಿಯನು ೧೩

ನಲ್ಲನಂ ಬಿಟ್ಟೇತಕೋಡಿಬಂದಪೆ ಪೋಗ
ನಲ್ಲ ಕುಚಭರಕೆ ನಡು ಮುರಿವುದೆಂಬಾಳಿಯುರ
ನೊಲ್ಲುಮಂ ವಿಾರಿ ತೊಡೆಗಿಳಿವ ಕಟಿಸೂತ್ರಮಂ ಮುರಿದಿಡುತ್ತಂದುಗೆಗಳ
ನಿಲ್ಲದೀಡಾಡಿ ಬಿಡುಮುಡಿಯು ಕಟ್ಟದೆ ತವಕ
ದಲ್ಲಿ ನೋಳ್ಪುತ್ಸುಕ್ಯದಿಂ ಮಂದಿಯುಂ ಬಗಿದು
ಚೆಲ್ಲೆಗಂಗಳೊಳೀಕ್ಷಿಸುತ್ತಿರ್ದಳೊರ್ವಳಾ ಕುವರನ ಮಹೋತ್ಸವವನು ೧೪

ಎಳೆನೀಲ ಪಚ್ಚೆ ಪಳಗೆಂಪು ಮುತ್ತುಗಳ ನಿ
ರ್ಮಳಕಾಂತಿಯಿಂದೆಸೆವ ಪುಷ್ಪಕಂಗಂಡು ತಿಳಿ
ಗೊಳನುಂ ಬನಂ ಪದ್ಮಮುಂ ಜೊನ್ನವೆಂದು ವಿಾನ್ ಮೃಗಮಳಿ ಚಕೋರಂಗಳು
ಪೊಳೆವ ಚಂಚಲಿಪ ಕವಿವೊಲಿವ ನೋಟಗಳ ಕೋ
ಮಳೆಯರಾ ವರಕುಮಾರನನೀಕ್ಷಿಸುವ ಭಾವ
ಮಲರ್ಗಳಿಂ ಪುರವನಿತೆ ಬಹುರೂಪನಾಂತು ಪೂಜಿಸುವಂತೆ ಚೆಲ್ವಾದುದು ೧೫

ಮತ್ತು ನೆರಿಗೆಗಳು ನಿಲ್ಲದೆ ಜಾರುತ್ತಿದ್ದವು. ಅವರ ಸೌಂದರ್ಯಜಲ ಮತ್ತು ಬೆವರು ಹನಿಗಳು ತುಳುಕುತ್ತಿದ್ದವು. ಪಾದಗಳು ಮತ್ತು ಮಾತು ತಡಬಡಿಸುತ್ತಿದ್ದವು. ಅತಿ ಉತ್ಸಾಹದಿಂದ ಬಂದು ಆ ಉತ್ಸವವನ್ನು ನೋಡುತ್ತಿರುವ ತರುಣಿಯರು ಮನ್ಮಥನ ಕುಲದೇವತೆಯರು ಓಡಾಡುವಂತೆ ಕಾಣುತ್ತಿದ್ದ ಆ ಆಶ್ಚರ್ಯನ್ನು ಏನೆಂದು ಹೇಳಲಿ ? ೧೪. 'ಗಂಡನನ್ನು ಬಿಟ್ಟು ಏತಕ್ಕೆ ಓಡಿಬಂದೆ ? ಹೋಗಬಾರದು. ನಿನ್ನ ಮೊಲೆಗಳ ಭಾರಕ್ಕೆ ಸೊಂಟವು ಮುರಿದುಹೋಗುತ್ತದೆ' ಎಂಬ ಗೆಳತಿಯರ ಮಾತುಗಳನ್ನೂ ಲಕ್ಷಿಸದೆ ಒಬ್ಬ ಹೆಂಗಸು ತೊಡೆಗಳಿಗೆ ಜಾರುತ್ತಿದ್ದ ಸೊಂಟದ ಪಟ್ಟಿಯನ್ನು ಕಿತ್ತು ಹಾಕುತ್ತ, ಕಾಲುಂದಿಗೆಗಳನ್ನು ತೆಗೆದು ಬಿಸಾಡುತ್ತ, ಬಿಚ್ಚಿಹೋದ ತುರುಬನ್ನು ಕೂಡ ಕಟ್ಟದೆ, ತವಕದಿಂದಲೂ ಉತ್ಸವವನ್ನು ನೋಡುವ ಉತ್ಸಾಹಭರದಿಂದಲೂ ಜನಗಳನ್ನು ಅತ್ತಿತ್ತ ಸರಿಸಿ, ವಿಲಾಸದ ಕಣ್ನೋಟದಿಂದ ಆ ಕುಮಾರನ ಮಹೋತ್ಸವವನ್ನು ನೋಡುತ್ತಿದ್ದಳು. ೧೫. ಆ ದೇವರಥವು ಎಳೆನೀಲಿ, ಪಚ್ಚೆ, ಹೊಳೆಯುವ ಕೆಂಪು ಮತ್ತು ಮುತ್ತುಗಳ ನಿರ್ಮಲವಾದ ಕಾಂತಿಯಿಂದ ಪ್ರಕಾಶಮಾನವಾಗಿತ್ತು. ಅದನ್ನು ಮಿಾನು ತಿಳಿಯಾದ ಕೊಳವೆಂದು ಭಾವಿಸಿತ್ತು. ಜಿಂಕೆ ವನವೆಂದು ಭಾವಿಸಿತ್ತು. ದುಂಬಿಗಳು ಕಮಲದ ಹೂವೆಂದು ಭಾವಿಸಿದ್ದುವು. ಚಕೋರಪಕ್ಷಿಗಳು ಬೆಳದಿಂಗಳೆಂದು ಭಾವಿಸಿದ್ದವು. ಆ ಕುಮಾರಶ್ರೇಷ್ಠನನ್ನು ನೋಡುವ ಕೋಮಲೆಯರ ಹೊಳೆಯುವ, ಚಂಚಲವಾದ, ಆವರಿಸುವ, ಪ್ರೀತಿಸುವ ನೋಟದ ವಿವಿಧ ಭಾವಭಂಗಿಗಳು ಆ ಪುರವನಿತೆ ಅನೇಕ ರೂಪಗಳನ್ನು ಧರಿಸಿ, ಆ ಶಿಶುವನ್ನು ಹೂವುಗಳಿಂದ ಪೂಜಿಸುವಳೋ



CC-0. Jangamwadi Math Collection. Digitized by eGangotri

ಶಾರದೆಗೆ ಸಾಟಿಯಿಂದ್ರಾಣಿಗೆಣೆ ಸಿರಿಗೆ ಸರಿ
ಯಾ ರತಿಗೆ ಪಡಿಯಹಲ್ಯೆಗೆ ಸಮಮರುಂಧತಿಯೊ
ಳೋರಗೆಯೆನಿಪ್ಪ ಪುರವರ ಮಹಾಸತಿಯರವೆ ಭಯಭರಿತ ಭಕ್ತಿಯಿಂದ
ತೋರಬಿಡುಮುತ್ತಿನಾರತಿ ಪಚ್ಚೆಯಾರತಿ ಮ
ಹಾರತ್ನದಾರತಿ ಸೊಡರ್ಗಳಾರತಿಗಳಿಂ
ಬಾರತಿಗಳಿಂ ನಿವಾಳಿಸಿ ಪರಸಿ ಸೇಸೆಯಿಂ ತಳಿದರಧಿಕೋತ್ಸವದೊಳು ೧೬

ಆರತಿಯನೆತ್ತಿದ ಮಹಾಸತೀಜನಕೆ ಪಿರಿ
ಹಾರದಿಂ ಪೊಂಗಳಿಂ ವಸ್ತ್ರಂಗಳಿಂ ರತ್ನ
ಹಾರಂಗಳಿಂ ಸುತಾಂಬೂಲಂಗಳಿಂ ಮಹಾಭೂಷಣಪ್ರತತಿಗಳನು
ಆರಯ್ದು ಕೊಡಿಸಿ ನಾನಾ ವರ್ಣಮು ಮಹಾ
ಭೂರಿದಕ್ಷಿಣೆಗಳಿಂ ದಣಿಸುತಂ ಬಸವನಿಂ
ದೋರಂತೆ ಬಿಜ್ಜಳನೃಪಂ ಸಕಲಸಂಭ್ರಮದೊಳೊಡನಯ್ದಿ ಬರುತಿರ್ದನು ೧೭

ಇಂತಖಿಳವಿಭವದಿಂದುತ್ಸವಂಗೆಯ್ದು ತವ
ನಂತರಂ ಬಸವನರಮನೆಗೊಡನೆ ಬಂದು ನಿ
ಮ್ಮಂತಪ್ಪರುಂಟೆಯೆಂದುಪಚರಿಸಿ ಸಕಲ ವಸ್ತ್ರಾಭರಣದುಡುಗೊರೆಗಳ
ಮುಂತಿರಿಸಿ ಸತ್ಕುಮಾರಂಗೆರಗಿ ತನ್ನ ಮನೆ
ಗಂ ತಿರುಗಿದಂ ಬಿಜ್ಜಳಂ ಬಳಿಕ್ಕಿತ್ತ ಗಣ
ಸಂತತಿಗಳಿಂ ಕೂಡಿಕೊಂಡು ಬಸವಂ ತನ್ನ ನಿಳಯಮಂ ಪೊಕ್ಕನಂದು ೧೮

ಎಂಬಂತೆ ಮನೋಹರವಾಗಿದ್ದಿತು. ೧೬. ಆ ಪಟ್ಟಣದಲ್ಲಿದ್ದ ಮಹಾಪತಿವ್ರತಾ ಸ್ತ್ರೀಯರು ಬಹಳ ಭಯಭಕ್ತಿಯಿಂದ ಆ ಶಿಶುವನ್ನು ಹರಸಿ ಅಕ್ಷತೆಯನ್ನು ಸಂತೋಷದಿಂದ ಹಾಕಿದರು. ಅವರು ಸರಸ್ವತಿಗೆ, ಶಚೀದೇವಿಗೆ, ಲಕ್ಷ್ಮಿಗೆ, ರತಿಗೆ, ಅಹಲ್ಯೆಗೆ, ಅರುಂಧತಿಗೆ ಸಮನಾಗಿದ್ದ ಸತಿಯರು. ದೊಡ್ಡ ಮುತ್ತಿನ ಆರತಿ, ಪಚ್ಚೆಯ ಆರತಿ, ಮಹಾರತ್ನದ ಆರತಿ, ದೀಪಗಳ ಆರತಿ ಎಂಬ ನಾನಾರೀತಿಯ ಆರತಿಯನ್ನು ಬೆಳಗಿ ಆ ಮಗುವಿಗೆ ನಿವಾಳಿಸುತ್ತಿದ್ದರು. ೧೭. ಈ ರೀತಿ ಆರತಿಯನ್ನು ಬೆಳಗುತ್ತಿದ್ದ ಸ್ತ್ರೀಯರಿಗೆ ಬಿಜ್ಜಳನು ಹಿಡಿಯ ತುಂಬ ಬಂಗಾರವನ್ನೂ, ಬಟ್ಟೆಗಳನ್ನೂ, ರತ್ನಹಾರಗಳನ್ನೂ, ತಾಂಬೂಲಗಳನ್ನೂ, ಅಮೂಲ್ಯವಾದ ಆಭರಣಗಳನ್ನೂ ವಿಚಾರಿಸಿ ಕೊಡಿಸಿ ಎಲ್ಲ ಮತಸ್ಥರಿಗೂ ಹೇರಳವಾಗಿ ದಕ್ಷಿಣೆಗಳನ್ನು ಕೊಡಿಸಿ ತೃಪ್ತಿಪಡಿಸುತ್ತಿದ್ದನು. ಬಸವಣ್ಣನೊಡನೆ ಬಿಜ್ಜಳರಾಜನೂ ಎಲ್ಲ ರೀತಿಯ ಸಂಭ್ರಮದಿಂದ ಬರುತ್ತಿದ್ದನು. ೧೮. ಈ ರೀತಿ ಸಕಲ ವೈಭವದಿಂದ ಉತ್ಸವವನ್ನು ಮಾಡಿಸಿದನು. ಅನಂತರ ಬಸವಣ್ಣನ ಅರಮನೆಗೆ ಜೊತೆಯಲ್ಲಿ ಬಂದು 'ನಿಮ್ಮಂಥವರು ಇದ್ದಾರೆಯೆ' ? ಎಂದು ಉಪಚರಿಸಿದನು. ಎಲ್ಲ ರೀತಿಯ ವಸ್ತ್ರ ಆಭರಣಗಳ ಉಡುಗೊರೆಯನ್ನು ಕುಮಾರನ ಮುಂದೆ ಇರಿಸಿ ನಮಸ್ಕರಿಸಿದನು. ಅನಂತರ ಬಿಜ್ಜಳನು ತನ್ನ ಮನೆಗೆ ತೆರಳಿದನು.

CC-0. Jangamwadi Math Collection. Digitized by eGangotri

ಹರುಷದಿಂದಂತಃಪುರಾಂಗನೆಯರೆಲ್ಲರಂ
ಕರೆಸಿದಳ್ ನೀಲಲೋಚನೆ ಮಹಾವಿಭವದಿಂ
ಪರಿಪರಿಯ ಬಣ್ಣದಾರತಿಗಳಂ ಹೊನ್ನ ಪರಿವಾಣಂಗಳೊಳ್ ತುಂಬಿಸಿ
ತರತರಂಬಿಡಿದು ನಡೆತಂದು ನಾಗಾಂಬೆಗಂ
ವರಕುವರಗಂ ನಿವಾಳಿಸಿ ಬಿಸುಟು ತೂಪಿರಿದು
ಪರಸಿ ಸೇಸೆಯ ತಳಿದರಾ ಸಮಯದೊಳ್ ದಿನಪನಸ್ತಗಿರಿಯಂ ಸಾರ್ದನು ೧೯

ಆನಿತರೊಳ್ ಸಂಜೆಗತ್ತಲೆ ತಾರೆ ದೀಪವೊ
ಳ್ನೆಯ ನೈದಿಲ್ ಚಕೋರಾಬ್ಧಿ ದೇಗುಲವರೆಯ
ಧ್ವನಿಗಳುರೆ ಪೆರ್ಚಿದುವು ಬಸವನುಂ ನಾಗಲಾಂಬಿಕೆ ನೀಲಲೋಚನೆಯರು
ಘನತರದ ಜಂಗಮಾರ್ಚನೆಯನೊಲವಿಂ ಮಾಡಿ
ಮನವೊಲಿದು ತತ್ಪ್ರಸಾದವನಖಿಳ ಭಕ್ತರಂ
ವಿನಯದಿಂ ಪಂಕ್ತಿಯೊಳ್ ಕೂಡಿಕೊಂಡಾರೋಗಿಸಿದರಧಿಕ ಭಕ್ತಿಯಿಂದೆ ೨೦

ಆ ಭೋಜನಾಂತರದೊಳಖಿಳಭಕ್ತರ್ಗೆ ವ
ಸ್ತ್ರಾಭರಣಮುಡುಗೊರೆಗಳಂ ಕೊಟ್ಟು ಬಳಿಕು ಮ
ನೋಭರಿತಪ್ರೀಯದಿಂದುಪಚರಿಸಿ ಕಳುಪಿ ಬಸವಂ ನೀಲಲೋಚನೆಯರು

ಇತ್ತಲಾಗಿ ಬಸವಣ್ಣನೂ ಭಕ್ತರ ಜೊತೆಯನ್ನು ಕೂಡಿಕೊಂಡು ತನ್ನ ಮನೆಯನ್ನು ಪ್ರವೇಶಿಸಿದನು. ೧೯. ನೀಲಾಂಬಿಕೆಯು ಸಂತೋಷದಿಂದ ಅಂತಃಪುರದ ಹೆಂಗಸರನ್ನೆಲ್ಲ ಕರೆಸಿದಳು. ಬಹಳ ವೈಭವದಿಂದ ಅನೇಕ ರೀತಿಯ ಬಣ್ಣದ ಆರತಿಗಳನ್ನು ಬಂಗಾರದ ಹರಿವಾಣಗಳಲ್ಲಿ ತುಂಬಿಸಿದಳು. ಸಾಲು ಸಾಲಾಗಿ ಅವರೆಲ್ಲರೂ ಬಂದು ನಾಗಲಾಂಬಿಕೆಗೂ ಮತ್ತು ಆ ವರಕುಮಾರನಿಗೂ ನಿವಾಳಿಸಿ ಅನಿಷ್ಟನಿವಾರಣೆಗಾಗಿ ವಿಭೂತಿಯನ್ನು ಬಿಸುಟರು. ಊದಿ ಆಶೀರ್ವಾದ ಮಾಡಿ ಅಕ್ಷತೆಯನ್ನು ಹಾಕಿದರು. ಅಷ್ಟುಹೊತ್ತಿಗೆ ಸೂರ್ಯನು ಪಶ್ಚಿಮಾದ್ರಿಯನ್ನು ಸೇರಿದನು, ಎಂದರೆ ಮುಳುಗಿದನು. ೨೦. ಅಷ್ಟರಲ್ಲಿ ಸಂಜೆಗತ್ತಲಾಯಿತು. ನಕ್ಷತ್ರಗಳು ಮಿನುಗಿದುವು. ದೀಪಗಳು ಬೆಳಗಿದವು. ಚಂದ್ರೋದಯವಾಯಿತು. ನೈದಿಲೆಯ ಮೊಗ್ಗುಗಳು ಅರಳಿದವು. ಚಕೋರಪಕ್ಷಿಗಳು ಸೇರಿದವು. ದೇವಸ್ಥಾನದ ನಗಾರಿಯ ಶಬ್ದ ಹೆಚ್ಚಾಯಿತು. ಬಸವಣ್ಣ, ನಾಗಲಾಂಬಿಕೆ, ನೀಲಲೋಚನೆಯರು ಶ್ರೇಷ್ಠತರವಾದ ಜಂಗಮಪೂಜೆಯನ್ನು ಪ್ರೀತಿಯಿಂದ ಮಾಡಿದರು. ಅಚ್ಚ ಭಕ್ತಿಯಿಂದ ಆ ಪ್ರಸಾದವನ್ನು ಎಲ್ಲ ಭಕ್ತರೊಡನೆಯೂ ವಿನಯದಿಂದ ಪಂಕ್ತಿಯಲ್ಲಿ ಕೂಡಿಕೊಂಡು ಊಟಮಾಡಿದರು. ೨೧. ಊಟವಾದನಂತರ ಎಲ್ಲ ಭಕ್ತರಿಗೂ ವಸ್ತ್ರ ಆಭರಣಗಳ ಉಡುಗೊರೆಯನ್ನು ಕೊಟ್ಟು, ಮನಸ್ಸಿಗೆ ತೃಪ್ತಿ ಆಗುವಂತೆ ಉಪಚರಿಸಿ ಕಳುಹಿಸಿ ಬಸವಣ್ಣ ಮತ್ತು ನೀಲಲೋಚನೆಯರು ಸಹಜವಾದ ಭಾವದಿಂದ ಮಲಗಿದರು.

CC-0. Jangamwadi Math Collection. Digitized by eGangotri

ಸ್ವಾಭಾವದಿಂದೆ ಪವಡಿಸಿದರತಿಮೃದುವಾಗಿ
ಶೋಭಿಸುವ ಪಾಸಿನೊಳ್ ನಾಗಲಾಂಬಿಕೆ ದುಷ್ಟ
ತೇಭಕಂಠೀರವಕುಮಾರಕಂ ಮಗ್ಗುಲೊಳಗೆಸೆಯೆ ನಿದ್ರೆಯೊಳಿರ್ದಳು ೨೦

ಈ ಪರಿಯೊಳಿವರಿರ್ದರತ್ತ ಕೈಲಾಸದೊಳ
ಗಾ ಪಾರ್ವತಿಯುಮೀಶನುಂ ತಮ್ಮ ಕುವರಂ ಮ
ಹಾಪವಾಡಂಗಳಂ ಮೆರೆದು ಜನಿಸಿದನಾತನಂ ನೋಳ್ಪೆವೆಂದು ಕೂಡೆ
ಗೋಪತಿಯನೇರಿ ಘನತರದ ವೈಭವದಿಂದ
ಲಾ ಪರಮಗಣರುದ್ರಕನ್ಯೆಯರ್ವೆರಸಿ ಪು
ತ್ರಾಪೇಕ್ಷೆಯಿಂ ನಾಗಲಾಂಬಿಕೆಯ ಸೆಜ್ಜೆವನೆಯಂ ಪೊಕ್ಕರುತ್ಸವದೊಳು ೨೨

ಗಂಗಾನದಿಯ ತಟದೊಳೆಸೆವ ಶುದ್ಧಸ್ಫಟಿಕ
ಲಿಂಗದಂತಮೃತವಾರ್ಧಿಯ ಪೊರೆಯೊಳಿರ್ಪ ನೆರೆ
ದಿಂಗಳಂತಮಲಕಮಲಾಕರದೆ ಕೆಲದಳೊಪ್ಪುವ ರಾಜಹಂಸನಂತೆ
ಮಂಗಳಾಕರೆ ನಾಗಲಾಂಬಿಕೆಯ ಮಗ್ಗುಲಂ
ಸಿಂಗರಿಸಿ ತೋರ್ಪ ಶಿಶುವಂ ಕಂಡು ಹರುಷಾಶ್ರು
ಪಿಂಗದೊಡನುದುರೆ ಮಗನಂ ಗಿರಿಜೆ ತೆಗೆದೆತ್ತಿಕೊಂಡಳತ್ಯುತ್ಸವದೊಳು ೨೩

ಬಳಿಕಮಾ ಸಮಯದೊಳಗೀಶ್ವರಂ ಸತ್ಪಂಚ
ಕಳಶಂಗಳಂ ಸ್ಥಾಪನಂಗೆಯ್ದು ಪಾರ್ವತಿಯ
ನೊಲವಿನಿಂ ಕುಳ್ಳಿರಿಸಿ ಪುತ್ರಂಗೆ ತ್ರಿವಿಧದೀಕ್ಷೆಗಳಿಂ ತ್ರಿಲಿಂಗಂಗಳ

ದುಷ್ಕೃತ್ಯಗಳು ಎಂಬ ಆನೆಗೆ ಸಿಂಹದೋಪಾದಿಯಲ್ಲಿದ್ದ ಕುಮಾರನು ತನ್ನ ಮಗ್ಗುಲಲ್ಲಿ ನಿದ್ರೆಹೋಗುತ್ತ ಇರಲು ನಾಗಲಾಂಬಿಕೆಯು ಅತಿಮೃದುವಾಗಿ ಶೋಭಿಸುವ ಹಾಸಿಗೆಯಲ್ಲಿ ನಿದ್ರೆ ಮಾಡುತ್ತಿದ್ದಳು. ೨೨. ಈ ರೀತಿ ಇವರು ಇದ್ದಾಗ ಅತ್ತ ಕೈಲಾಸದಲ್ಲಿ ಪಾರ್ವತಿಯೂ ಈಶ್ವರನೂ ತಮ್ಮ ಕುಮಾರನು ಅದ್ಭುತವಾದ ಪವಾಡಗಳನ್ನು ತೋರಿಸಿ ಜನಿಸಿದನು. ಅವನನ್ನು ನೋಡೋಣವೆಂದು ಇಬ್ಬರೂ ನಂದಿಯನ್ನೇರಿ, ಬಹಳ ವೈಭವದಿಂದ, ಶ್ರೇಷ್ಠ ಗಣಗಳು ಮತ್ತು ರುದ್ರಕನ್ಯೆಯರ ಜೊತೆಗೂಡಿ, ಮಗನ ಮೇಲಿನ ಆಸೆಯಿಂದ ನಾಗಲಾಂಬಿಕೆಯು ಮಲಗಿದ್ದ ಮನೆಗೆ ಸಂಭ್ರಮದಿಂದ ಪ್ರವೇಶ ಮಾಡಿದರು. ೨೩. ಗಂಗಾನದಿಯ ತೀರದಲ್ಲಿ ಪ್ರಕಾಶಿಸುವ ಶುದ್ಧ ಸ್ಫಟಿಕಲಿಂಗದಂತೆ, ಕ್ಷೀರಸಾಗರದಲ್ಲಿರುವ ಚಂದ್ರನಂತೆ, ನಿರ್ಮಲವಾದ ಕಮಲಸರೋವರದಲ್ಲಿರುವ ರಾಜಹಂಸದಂತೆ, ಮಂಗಳಾಂಗಿಯಾದ ನಾಗಲಾಂಬಿಕೆಯ ಮಗ್ಗುಲಲ್ಲಿ ಮಗುವು ಬೆಳಗುತ್ತಿತ್ತು. ಅದನ್ನು ಗಿರಿಜೆಯು ನೋಡಿ ಹರುಷಾಶ್ರುಗಳುದುರುತ್ತಿರಲು ಮಗನನ್ನು ಅತ್ಯಂತ ಸಂತೋಷ ಸಂಭ್ರಮಗಳಿಂದ ತೆಗೆದು ಎತ್ತಿಕೊಂಡಳು. ೨೪. ಅನಂತರ ಆ ಸಮಯದಲ್ಲಿ ಈಶ್ವರನು ಪಂಚಕಳಶಗಳನ್ನು ಸ್ಥಾಪನೆ ಮಾಡಿ, ಪಾರ್ವತಿಯನ್ನು ಪ್ರೀತಿಯಿಂದ ಅಲ್ಲಿ ಕೂಡಿಸಿ, ಮಗನಿಗೆ ತ್ರಿವಿಧ ದೀಕ್ಷೆಯನ್ನು ಕೊಟ್ಟನು. ಸಂತೋಷದಿಂದ ತ್ರಿಲಿಂಗಗಳನ್ನು ತ್ರಿವಿಧಾಂಗಗಳಲ್ಲಿ

CC-0. Jangamwadi Math Collection. Digitized by eGangotri

ನಲಿದು ತ್ರಿವಿಧಾಂಗಂಗಳೊಳು ಪ್ರತಿಷ್ಠಿಸಿ ಶರಣ
ಕುಲಕೀ ಪ್ರಕಾರದೊಳ್ ದೀಕ್ಷೆಗೆಯ್ಯೆಂದು ಕೃಪೆ
ಯೊಳೆ ನಿರೂಪಿಸುವನೋ ಪೇಳೆನಲ್ ಮೊದಲ ಲಿಂಗವನೆ ದೀಕ್ಷೆಯಿನಿತ್ತನು ೨೪

ಉನ್ನತ ಸುತೇಜಂಗಳೊಳ್ ರೂಪಿನೊಳ್ ಸುಪ್ರ
ಸನ್ನತೆಯೊಳಂ ಶೈವಕಳೆಯೊಳಂ ತತ್ತ್ವಸಂ
ಪನ್ನತೆಯೊಳಂ ಪವಾಡಂಗಳಿಂ ಬಸವಣ್ಣನಿಂದವಿಾ ಸುಕುಮಾರನು
ಚೆನ್ನಾಗಿ ತೋರ್ಪನೆಲೆ ಗಿರಿಜೆ ನೋಡೆಂದೀಶ್ವ
ರನ್ನಿಧಾನಿಸಿ ಮನೋಹರುಷದಿಂದೀತಂಗೆ
ಚೆನ್ನಬಸವಣ್ಣನೆಂಬೀ ನಾಮವೇ ಸಾಮ್ಯವೆಂದು ಗಣಕುಲಕೊರೆವನು ೨೫

ನೋಡುವರ್ ನಲಿವರೊಲಿವರ್ ತಲೆಯನಲುಗಿ ಮು
ಡಾಡುವರ್ ನಗುವರೊಗುವರ್ ಮಿಗುವ ಸುಖದೊಳೋ
ಲಾಡುವರ್ ಚುಂಬಿಪರ್ ನಂಬಿಪರ್ ತಂಬಿಸುವರಳ್ತಿಯಿಂ ಮುದ್ದುಗಳನು
ಬೇಡುವರ್ ಕೆಯ್ಗಳೊಳ್ ಮೆಯ್ಗಳೊಳ್ ಬಾಯ್ಗಳೊಳ
ಗಾಡಿಸುವರಾಯೆಂದು ದಾಯೆಂದು ಬಾಯೆಂದು
ಪಾಡುವರ್ ನೀಡುವರ್ ಬೇಡುವರ್ ಕುವರನಂ ಶಿವಶಿವೆಯರಳ್ಕರಿಂದೆ ೨೬

ಪರಿಪರಿಯೊಳಿಂತಾ ಕುಮಾರನಂ ಮುದ್ದಿಸು
ತ್ತಿರೆ ಹರಹರಾ ಪುತ್ರಮೋಹವಿನ್ನೆಂತುಟೋ
ತೊರೆದೊಗುವ ಪಾಲ್ಗಳಿಂ ಬಿಗಿದ ಗುರುಕುಚದ ಮೇಲುದನೊಯ್ಯನೋಸರಿಸುತೆ

ಪ್ರತಿಷ್ಠಾಪನೆ ಮಾಡಿದನು. ಇದೇ ರೀತಿಯಲ್ಲಿ ಶರಣಕುಲಕ್ಕೆಲ್ಲ ನೀನು ದೀಕ್ಷೆಯನ್ನು ಕೊಡು ಎಂದು ವಿಧಿಸುವನೋ ಎನ್ನುವಂತೆ ಇಷ್ಟಲಿಂಗದ ದೀಕ್ಷೆಯನ್ನು ಕೊಟ್ಟನು. ೨೫. 'ಒಳ್ಳೆಯ ತೇಜಸ್ಸಿನಲ್ಲಿ, ಪ್ರಸನ್ನಮನೋಭಾವದಲ್ಲಿ, ಶಿವಕಳೆಯಲ್ಲಿ, ತತ್ತ್ವಜ್ಞಾನ ಸಂಪತ್ತಿನಲ್ಲಿ, ಪವಾಡಗಳನ್ನುಮೆರೆಯುವುದರಲ್ಲಿ ಈ ಕುಮಾರನು ಬಸವಣ್ಣನನ್ನೂ ಚೆನ್ನಾಗಿ ಮೀರಿಸುತ್ತಾನೆ, ಎಲೈ ಪಾರ್ವತಿ, ನೋಡು' ಎಂದು ಈಶ್ವರನು ತನ್ನಲ್ಲಿಯೇ ವಿಚಾರ ಮಾಡಿ, ಸಂತೋಷವಾದ ಮನಸ್ಸುಳ್ಳವನಾಗಿ, 'ಇವನಿಗೆ ಚೆನ್ನಬಸವಣ್ಣ ಎಂಬ ಹೆಸರೇ ಸರಿಯಾದುದು' ಎಂದು ಭಕ್ತರಿಗೆಲ್ಲ ಹೇಳಿದನು. ೨೬. ಪಾರ್ವತಿ—ಪರಮೇಶ್ವರರು ಬಹಳ ಪ್ರೀತಿ ವಾತ್ಸಲ್ಯಗಳಿಂದ ಕುಮಾರನನ್ನು ನೋಡುವರು, ಸಂತೋಷಪಡುವರು, ಪ್ರೀತಿಸುವರು. ತಲೆಯನ್ನು ಅಲ್ಲಾಡಿಸಿ ಮುದ್ದಿಸುವರು. ನಗುವರು, ಉತ್ಸಾಹಿಸುವರು. ಹೆಚ್ಚಾದ ಸುಖದಿಂದ ಓಲಾಡುವರು, ಚುಂಬಿಸುವರು, ನಂಬಿಸುವರು, ತಡೆಯುವರು, ಮುತ್ತುಗಳನ್ನು ಕೊಡೆಂದು ಬೇಡುವರು. ಕೈಯಲ್ಲಿ, ಮೈಯಲ್ಲಿ, ಬಾಯಲ್ಲಿ ಆಡಿಸುವರು. ಆಯೆಂದು, ದಾಯೆಂದು, ಬಾಯೆಂಪು ಹಾಡುವರು, ಕೊಡುವರು, ಬೇಡುವರು. ೨೭. ಹೀಗೆ ಆ ಕುಮಾರನನ್ನು ನಾನಾ ರೀತಿಯಲ್ಲಿ ಮುದ್ದಾಡಿದರು. ಶಿವ ಶಿವಾ, ಪುತ್ರಮೋಹ ಇನ್ನೆಂತಹುದೋ ! ತುಂಬಿಹರಿಯುವ ಹಾಲಿನಿಂದ ಶಿವೆಯ ತೋರ ಮೊಲೆಗಳು ಬಿಗಿಯು

CC-0. Jangamwadi Math Collection. Digitized by eGangotri

ಗಿರಿಜೆ ಮಗನಂ ತೆಗೆದು ಸೋಂಗಿಲೊಳಗಿಟ್ಟಧಿಕ
ಹರುಷದಿಂ ಮೊಲೆಯೂಡಿ ಮುಂಡಾಡಿ ಕೊಂಡಾಡಿ
ಪರಸಿ ಪೊಂದೊಟ್ಟಿಲೊಳ್ ತೂಗಿದಳ್ ಮಿಗೆ ರುದ್ರಕನ್ಯೆಯರ ಮೇಳದಿಂದೆ ೨೭

ಉಕ್ಕುವತಿಹರುಷದಿಂದಮ್ಮವ್ವೆಯುಂ ಚೋಳಿ
ಯಕ್ಕ ಚಂಗಳೆ ನಿಂಬಿ ದುಗ್ಗಳೆಯುಮೆಸೆವ ಸ
ತ್ಯಕ್ಕ ಕಮಳವ್ವೆ ಬಾಚವ್ವೆ ಮೊದಲಾದಖಿಳ ರುದ್ರಕನ್ನಿಕೆಯರೊಲಿದು
ರಕ್ಷೆಯುಂ ಪಣೆಗಿಟ್ಟು ತೂಪಿರಿದು ಪರಸಿ ಹಸು
ಮಕ್ಕಳ ಶಿರೋಮಣಿಯೆ ಸಿಂಗರದ ಕಣಿಯೆ ಜೋ
ಚಿಕ್ಕಬಸವಣ್ಣ ಜೋಜೋಯೆಂದು ಪಾಡಿ ತೂಗುತ್ತಿರ್ದರುತ್ಸವದೊಳು ೨೮

ಜೋಜೋ ಮಹೇಶ ಷಣ್ಮುಖಜನಿತಸನ್ಮೂರ್ತಿ
ಜೋಜೋ ಮಹಾವೀರಶೈವೋದ್ಧರಣಕೀರ್ತಿ
ಜೋಜೋ ಮಹಾದೇವಿಯಾನಂದವಾರ್ಧಿವರ್ಧನಕಳಾಪೂರ್ಣಚಂದ್ರ
ಜೋಜೋ ಸಕಲ ಭಕ್ತಹೃದಯಪಂಕಜಮಿತ್ರ
ಜೋಜೋ ಮಹಾಶರಣಗಣಭವಾಂಬುಧಿಛತ್ರ
ಜೋಜೋ ಪರಬ್ರಹ್ಮರೂಪ ಜೋಜೋಯೆಂದು ಪಾಡಿ ತೂಗುತ್ತಿರ್ದರು ೨೯

ತ್ತಿದ್ದುವು. ತಕ್ಷಣ ಅವುಗಳನ್ನು ಮುಚ್ಚಿದ್ದ ಸೆರಗನ್ನು ಮೆಲ್ಲನೆ ಸರಿಸಿ, ಪಾರ್ವತಿಯು ಮಗುವನ್ನು ಎತ್ತಿ ಮಡಿಲಲ್ಲಿ ಇಟ್ಟುಕೊಂಡು, ಅಧಿಕ ಸಂತೋಷದಿಂದ ಮೊಲೆಯನ್ನು ಊಡಿದಳು, ಮುದ್ದಾಡಿದಳು, ಕೊಂಡಾಡಿದಳು, ಹರಸಿದಳು ರುದ್ರಕನ್ಯೆಯರ ಜೊತೆಗೆ ಮಗುವನ್ನು ಬಂಗಾರದ ತೊಟ್ಟಿಲಲ್ಲಿ ಇಟ್ಟು ತೂಗಿದಳು. ೨೮. ಉಕ್ಕುತ್ತಿರುವ ಸಂತೋಷದಿಂದ ಅಮ್ಮವ್ವೆ, ಚೋಳಿಯಕ್ಕ, ಚಂಗಳೆ, ನಿಂಬಿ, ದುಗ್ಗಳೆ, ಶೋಭಿಸುತ್ತಿದ್ದ ಸತ್ಯಕ್ಕ, ಕಮಲವ್ವೆ, ಬಾಚವ್ವೆ ಮೊದಲಾದ ಎಲ್ಲ ರುದ್ರಕನ್ನಿಕೆಯರೂ ಪ್ರೀತಿಯಿಂದ ಮಗುವಿನ ಹಣೆಗೆ ರಕ್ಷೆಗಾಗಿ ಭಸ್ಮವಿಟ್ಟು, ಭಸ್ಮವನ್ನು ಗಾಳಿಗೆ ಊದಿ ಆಶೀರ್ವಾದಮಾಡಿ ಹಸುಮಕ್ಕಳ ಶಿರೋಮಣಿಯೆ, ಸಿಂಗರದ ಕಣಿಯೇ ಜೋ, ಚಿಕ್ಕ ಬಸವಣ್ಣ ಜೋ ಜೋ ಎಂದು ಜೋಗುಳ ಹಾಡಿ ಸಡಗರದಿಂದ ತೂಗುತ್ತಿದ್ದರು. ೨೯. ಈಶ್ವರನ ಆರು ಮುಖದಿಂದ ಹುಟ್ಟಿದ ಸನ್ಮೂರ್ತಿಯೆ ಜೋ ಜೋ, ವೀರಶೈವಧರ್ಮವನ್ನು ಉದ್ಧಾರ ಮಾಡುವ ಕೀರ್ತಿಶಾಲಿಯೇ ಜೋ ಜೋ, ಪಾರ್ವತಿಯ ಆನಂದವೆಂಬ ಸಮುದ್ರವನ್ನು ಹರ್ಷದಿಂದುಬ್ಬಿಸುವ ಪೂರ್ಣಚಂದ್ರನೇ. ಜೋ ಜೋ, ಎಲ್ಲ ಭಕ್ತರ ಹೃದಯಕಮಲ ಗಳನ್ನೂ ಅರಳಿಸುವಂತಹ ಸೂರ್ಯನೇ ಜೋ ಜೋ, ಶಿವಶರಣ ಸಮೂಹದ ಭವ ಸಾಗರವನ್ನು ದಾಟಿಸುವ ನಾವೆಯಂತಿರುವವನೇ ಜೋ ಜೋ, ಪರಬ್ರಹ್ಮಸ್ವರೂಪನೇ

CC-0. Jangamwadi Math Collection. Digitized by eGangotri

ಎಂದಿಂತು ಪಾಡುತುಂ ಪರಸುತುಂ ತೂಗುತಾ
ನಂದದಿಂದಾ ಗಿರಿಜೆ ನಾಗಲಾಂಬಿಕೆಗೆ ನಗು
ತೆಂದಳೆಲೆ ತಂಗಿ ನೀನೆನ್ನ ರೂಪೀ ಶಿಶುವೆ ಶಿವಕುಮಾರಂ ತಿಳಿಯಲು
ಮುಂದೆ ಮಜ್ಜನಭೋಜನಾದಿ ನಾನಾಕ್ರಿಯೆಗ
ಳೊಂದರೊಳ್ ನರವೇಷಕಾಯಮಂ ನವೆಸಬೇ
ಡೆಂದು ಕೈವೆಡೆಗೊಟ್ಟಳೇಂ ವಿಶೇಷಮೊ ಪುತ್ರಮೋಹಮಿಾ ಲೋಕದೊಳಗೆ ೩೦

ಅನ್ನೆಗಂ ಶಿವಶಿವೆಯರಿನಿತೆಸಗಿದೀ ವಿವರ
ಮನ್ನೆಲಕೆ ಸಾರ್ವಂತೆ ಮುಂಗೋಳಿಗಳ್ ಕೂಗೆ
ಕನ್ನೆಯ್ದಿಲರಮೆ ಮುಗಿಯಲ್ ಕಮಲಮರೆವಿರಿಯೆ ತಂಗಾಳಿ ತಲೆದೋರಲು
ಮುನ್ನೀಸರಾಗಮುವನೆಚ್ಚರಿಸಲಳಿಕುಲಂ
ಸನ್ನುತಗಣಂಗಳೊಡವರೆ ಶಿವಂ ಶಿವೆಯುರಾ
ಚೆನ್ನಬಸವಣ್ಣನಂ ಮುಂದಾಡಿ ಕೈಲಾಸಕಯ್ದಿದರ್ ಸಂತಸದೊಳು ೩೧

ಇತ್ತಲೀ ನಾಗಲಾಂಬಿಕೆ ಶಿವಂ ಪೋಗಲೆ
ಚ್ಚೆತ್ತು ವಿಸ್ಮಿತೆಯಾಗಿ ತಿಳಿದು ನಲವಿಂ ತನ್ನ
ಚಿತ್ತದಿಂ ಕನಸಾಗಿಯುಂ ಕನಸುಮಲ್ಲಮಿದು ತಾಂ ವಿಚಾರಿಸಿ ನೋಡಲು
ಒತ್ತಿನೊಳ್ ಪೂಜಿಸಿದ ಮಣಿಗಳಸಮಿವೆ ಶೋಭೆ
ವೆತ್ತ ಪೊಂದೊಟ್ಟಿಲಿದೆ ಪ್ರತ್ಯಕ್ಷಮೆಂದು ತ
ನ್ನುತ್ತಮಾಂಗವನೊಲೆವುತಿರ್ದಿನಂ ದಿನಪನಡರಿದನುದಯಪರ್ವತವನು ೩೨

ಜೋ ಜೋ ಎಂದು ಹಾಡಿ ತೂಗುತ್ತಿದ್ದರು. ೩೦. ಈ ರೀತಿಯಲ್ಲಿ ಹಾಡುತ್ತ, ಆಶೀರ್ವಾದ ಮಾಡುತ್ತ, ತೂಗುತ್ತಾ ಆನಂದದಿಂದ ಪಾರ್ವತಿಯು ನಾಗಲಾಂಬಿಕೆಯನ್ನು ಕುರಿತು ನಗುತ್ತ 'ಎಲೆ ತಂಗಿ, ನೀನೇ ನನ್ನ ಸ್ವರೂಪ. ಈ ಮಗುವೇ ಶಿವನ ಮಗನೆಂದು ತಿಳಿ, ಮುಂದೆ ಸ್ನಾನ, ಊಟ ಮುಂತಾದ ಕ್ರಿಯೆಗಳಲ್ಲಿ ಈ ನರವೇಷದಲ್ಲಿರುವ ಮಗುವನ್ನು ನವೆಸಬೇಡ' ಎಂದು ಆ ಮಗುವನ್ನು ನಾಗಲಾಂಬಿಕೆಯ ರಕ್ಷಣೆಗೆ ಕೊಟ್ಟಳು. ಈ ಲೋಕದಲ್ಲಿ ಪುತ್ರವ್ಯಾಮೋಹವು ಎಂತಹ ಅತಿಶಯವಾದದ್ದು ! ೩೧. ಅಷ್ಟರಲ್ಲಿ ಪಾರ್ವತಿ–ಪರಮೇಶ್ವರರು ಹೀಗೆ ಮಾಡಿದ ವಿವರಗಳನ್ನು ಪ್ರಪಂಚಕ್ಕೆಲ್ಲ ಸಾರುವಂತೆ ಮುಂಜಾವಿನ ಕೋಳಿಗಳು ಕೂಗಿದವು. ಅರಳಿದ ಕನ್ನೈದಿಲೆ ಮುಚ್ಚಿಕೊಂಡಿತು, ಕಮಲ ಅರ್ಧ ಬಿರಿಯಿತು, ತಂಗಾಳಿ ಬೀಸಿತು, ತುಂಬಿಗಳ ಸಮೂಹ ಸುರ್ಯೋದಯವಾಗುವುದನ್ನು ಎಚ್ಚರಿಸಿತು. ಆಗ ಶ್ರೇಷ್ಠರಾದ ಶಿವಗಣಗಳ ಜೊತೆಯಲ್ಲಿ ಪಾರ್ವತಿ–ಪರಮೇಶ್ವರರು ಚೆನ್ನಬಸವಣ್ಣನನ್ನು ಮುದ್ದಿಸಿ ಸಂತೋಷದಿಂದ ಕೈಲಾಸಕ್ಕೆ ಹೋದರು. ೩೨. ಶಿವನು ಹೋದಮೇಲೆ ಇತ್ತ ನಾಗಲಾಂಬಿಕೆಯು ಎಚ್ಚರಗೊಂಡಳು. ಆಶ್ಚರ್ಯದಿಂದ ಇದು ಕನಸಾದರೂ ಕನಸಲ್ಲ. ಪರೀಕ್ಷಿಸಿ ನೋಡಿದರೆ ಪಕ್ಕದಲ್ಲಿ ಪೂಜೆಮಾಡಿದ ಮಣಿಕಳಶಗಳಿವೆ. ಪ್ರಕಾಶಮಾನವಾದ ಬಂಗಾರದ ತೊಟ್ಟಿಲಿದೆ. ಇದು ನಿಜ ಎಂದು ತನ್ನ ಮನಸ್ಸಿ

CC-0. Jangamwadi Math Collection. Digitized by eGangotri

ಆ ಕಾಲದೊಳ್ ನಾಗಲಾಂಬೆ ಬಸವಣ್ಣಂಗ
ನೇಕಹರುಷಂ ಪುಟ್ಟಲೀಶ್ವರಂ ಬಂದು ಮ
ತ್ತೀ ಕುವರಗಂ ದೀಕ್ಷೆಯಂ ಕೊಟ್ಟು ಪೆಸರನಿಟ್ಟಂದವಂ ಪೇಳ್ದು ಬಳಿಕ
ಜೋಕೆಯಿಂದಿಟ್ಟ ಕಲಶಂಗಳಂ ತೊಟ್ಟಿಲುಮ
ನಾ ಕೆಲವು ಕುರುಪುಗಳನೆಲ್ಲವಂ ತೋರಲ್ ಶು
ಭಾಕಾರಶಿಶುವಿದೆನ್ನಯ ಕಣ್ಣ ಪುಣ್ಯನಿಧಿಯೆನುತೆ ನುತಿಸುತ್ತಿರ್ದನು ೩೩

ಪಲತೆರದಲೊಳಳಿಯನಂ ಕೊಂಡಾಡಿ ಮುಂಡಾಡಿ
ನಲವು ಮಿಗೆ ಬಸವನಿರುತಿರೆ ಕ್ರಮಕ್ರಮದೊಳಂ
ಬಳೆವ ಶಶಿಕಳೆಯಂತೆ ಪೆರ್ಚಿಯುದಯಾದಿತ್ಯನಂತಖಿಳ ತೇಜದಿಂದೆ
ಗಳಿಗೆಗಳಿಗೆಗೆ ವರ್ಧಿಸುತ್ತಿರ್ದನಾ ಸಮು
ಜ್ವಲಮುಕ್ತಿಯೇ ರೂಪುವೆತ್ತಂತೆ ಶೈವನಿ
ರ್ಮಳಕಳೆಯೆ ಬಾಲ್ಯತ್ವಮಂ ಧರಿಸಿದಂದದಿಂ ಚೆಲ್ವಾದನಾ ಕುವರನು ೩೪

ಸಲೆನೆವನ ಪೊರ್ದದ ಮುಗುಳ್ನಗೆಯಿನಕ್ಕರಂ
ಗಳೊಳೆಸೆಯದಿಹ ಮುದ್ದುನುಡಿಗಳಿಂ ಬರಿದೆ ತ
ನ್ನೊಳಗೆ ತಾನಾನಂದಿಪಾಟದಿನಕಾರಣಂ ಪರಿದತ್ತ ಪರಿದು ನೋಳ್ಪ

ನಲ್ಲಿ ತಿಳಿದು ಸಂತೋಷದಿಂದ ತಲೆಯನ್ನು ತೂಗುತ್ತಿರಲು ಸೂರ್ಯನು ಉದಯ ಪರ್ವತವನ್ನು ಏರಿದನು. ೩೩. ಆಗ ನಾಗಲಾಂಬಿಕೆ ಮತ್ತು ಬಸವಣ್ಣ ಇವರಿಗೆ ಬಹಳ ಸಂತೋಷವಾಯಿತು. ಈಶ್ವರನೇ ಬಂದು ಈ ಕುಮಾರನಿಗೆ ದೀಕ್ಷೆಯನ್ನು ಕೊಟ್ಟು ಹೆಸರನ್ನು ಇಟ್ಟುಹೋದ ರೀತಿಯನ್ನು ನಾಗಲಾಂಬಿಕೆ ಹೇಳಿದಳು. ಅನಂತರ ಎಚ್ಚರಿಕೆ ಯಿಂದ ಅಲ್ಲಿ ಇಟ್ಟಿದ್ದ ಕಳಶಗಳನ್ನು ತೊಟ್ಟಿಲನ್ನು ಮತ್ತು ಕೆಲವು ಗುರುತುಗಳನ್ನು ತೋರಿಸಿದಳು. ಮಂಗಳಾಕಾರನಾದ ಈ ಮಗು ನನ್ನ ಕಣ್ಣಿನ ಪುಣ್ಯದ ನಿಧಿ ಎಂದು ಬಸವಣ್ಣನು ಹೊಗಳುತ್ತಿದ್ದನು. ೩೪. ಬಸವಣ್ಣನು ತನ್ನ ಅಳಿಯನನ್ನು ಹಲವು ರೀತಿ ಯಲ್ಲಿ ಕೊಂಡಾಡಿ ಮುದ್ದಿಸಿ ಅತ್ಯಂತ ಸಂತೋಷದಿಂದಿರಲು, ಕ್ರಮೇಣ ಬೆಳೆಯುವ ಚಂದ್ರನ ಕಳೆಯಂತೆ ವೃದ್ಧಿಹೊಂದುತ್ತ, ಬಾಲಸೂರ್ಯನಂತೆ ಪ್ರಕಾಶಮಾನವಾಗಿ ಕ್ಷಣ ಕ್ಷಣಕ್ಕೂ ಬೆಳೆಯುತ್ತಿದ್ದನು. ಉಜ್ವಲವಾದ ಮುಕ್ತಿಯೇ ರೂಪನ್ನು ಪಡೆದಂತೆ. ಶಿವನ ನಿರ್ಮಲವಾದ ಕಳೆಯೇ ಬಾಲತ್ವವನ್ನು ಪಡೆದಂತೆ ಆ ಕುಮಾರನು ಚೆಲುವಾದನು. ೩೫. ಯಾವ ಕಾರಣವೂ ಇಲ್ಲದೆ ಮುಗುಳ್ನಗುವನು. ಅಕ್ಷರದಲ್ಲಿ ಸೆರೆಹಿಡಿಯಲಾಗದ ಮುದ್ದುಮಾತುಗಳನ್ನು ಆಡುವನು. ಸುಮ್ಮಸುಮ್ಮನೆ ತನ್ನಲ್ಲೇ ತಾನು ಆನಂದಿಸುವ ಆಟದಿಂದ, ಹೊಳೆಯುವ ಕಣ್ಣುಗಳ ನೋಟದಿಂದ ಕಾರಣವಿಲ್ಲದೆಯೇ ಹೋದ ಕಡೆಗೇ

CC-0. Jangamwadi Math Collection. Digitized by eGangotri

ತೊಳಪ ಕಂಗಳ ನೋಟದಿಂ ಬೆರಲ ಚುಂಬಿಸು
ತ್ತಳುತೆ ಜೋಗುಳವಾಡೆ ನಲಿವುತುಂ ಪೊಂದೊಟ್ಟಿ
ಲೊಳಗೆ ಶಿಶುಲೀಲೆಯಿಂ ಕೆಲದಿನಂ ತಾಯ್ಗೆ ಹರುಷಂದೋರಿದಂ ಕುವರನು ೩೫

ರಕ್ಷೆವಣಿ ಪುಲಿಯುಗುರ್ ಗೆಜ್ಜೆ ಮಾಗಾಯ್ ಮುತ್ತಿ
ನೆಕ್ಕಸರಮುಡಿದಾರ ಕಾಲ ಕಡಗಂ ಪಣೆಯೊ
ಳಿಕ್ಕಿದ ಸುಭಸಿತಮರಳೆಲೆಯೆನಿಪ ಪರಿಪರಿಯ ಬಾಲದೊಡಿಗೆಗಳನಾಂತು
ಉಕ್ಕುತಿಹ ತಾಯ ಮೊಲೆವಾಲುಣುತೆ ಸೋಗಿಲೊಳ್
ನಕ್ಕಾಡುತುಂ ಮುದ್ದುಗರೆವುತುಂ ಲೀಲೆಯಿಂ
ಮಕ್ಕಳಾಟಿಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ ಕ್ರಮದೊಳು ೩೬

ನೊಸಲಗಣ್ಣವನ ಸುತನೆಂಬುದಂ ಧರೆಗೆ ಸೂ
ಚಿಸುವೊಲುಜ್ವಲಿಸುವರಳೆಲೆಯೊಪ್ಪೆ ಪೆಡೆವಣಿಗ
ಳೆಸೆವ ಫಣಿಕುಂಡಲನ ಕುವರನೆಂದರಿಪವೊಲ್ ಕಿವಿಗಳೊಳ್ ವೊಂಜರಿಗೆಯ
ಮಿಸುಪ ತುದಿಯೊಳ್ ರನ್ನಮಾಗಾಯ್ಗಳೊಲೆದಾಡೆ
ಸಸಿದಲೆಯನಣುಗನೆಂಬುದ ತೋರುವಂತೆ ರಾ
ಜಿಸಲುರದೊಳೆಳವರೆಯ ಮಾಳ್ಕೆಯಿಂ ಪುಲಿಯುಗುರ್ ಬಾಲಕಂ ಕಣ್ಗೆಸೆದನು ೩೭

ತಿರುಗಿನೋಡುವನು, ಬೆರಳನ್ನು ಚೀಪುತ್ತ ಅಳುವನು,ಜೋಗುಳವನ್ನು ಹಾಡಿದರೆ ನಲಿಯು ವನು.ಈ ರೀತಿ ಬಂಗಾರದ ತೊಟ್ಟಿಲಲ್ಲಿ ಕುಮಾರನು ತನ್ನ ಬಾಲಲೀಲೆಗಳಿಂದ ಕೆಲವು ದಿವಸ ತಾಯಿಗೆ ಹರುಷವನ್ನುಂಟುಮಾಡಿದನು. ೩೬. ರಕ್ಷಾಮಣಿ, ಹುಲಿಯುಗುರು, ಗೆಜ್ಜೆ, ಮಾವಿನೆಲೆಯಾಕಾರದ ಆಭರಣ, ಮುತ್ತಿನ ಏಕಾವಳಿಸರ, ಉಡಿದಾರ, ಕಾಲಕಡಗ, ಹಣೆ ಯಲ್ಲಿಟ್ಟ ಪವಿತ್ರವಾದ ವಿಭೂತಿ, ಅರಳಿಎಲೆಯ ಆಕಾರದ ಆಭರಣ ಮುಂತಾದ ಬಾಲ ತೊಡಿಗೆಗಳನ್ನು ಧರಿಸಿ, ಉಕ್ಕಿಹರಿಯುತ್ತಿದ್ದ ತಾಯಿಯ ಮೊಲೆಹಾಲನ್ನು ಕುಡಿಯುತ್ತ ಅವಳ ಮಡಿಲಲ್ಲಿ ನಕ್ಕು ಆಡುತ್ತಾ ಮುದ್ದುಗರೆಯುತ್ತಿದ್ದನು. ಹೀಗೆ ಜಗವನ್ನು ಆಡಿಸುವ ಸೂತ್ರಧಾರನಾದವನು ಸಂತೋಷದಿಂದ ಕ್ರಮವಾಗಿ ಮಕ್ಕಳಾಟವನ್ನು ತೋರಿಸಿದನು. ೩೭. ಈಶ್ವರನ ಮಗನೆಂಬುದನ್ನು ಪ್ರಪಂಚಕ್ಕೆ ಸೂಚಿಸುವಂತೆ ಉಜ್ವಲವಾದ ಅರಳೆಲೆಯ ಆಭರಣವು ಕಂಗೊಳಿಸುತ್ತಿತ್ತು. ಕಿವಿಯಲ್ಲಿ ಹಾವಿನ ಆಭರಣವನ್ನು ಧರಿಸಿರುವ ಶಿವನ ಮಗನೆಂದು ತಿಳಿಸುವಂತೆ ಇವನ ಕಿವಿಯಲ್ಲಿ ಬಂಗಾರದ ವಂಕಿಯಿತ್ತು. ಅದರ ತುದಿಯಲ್ಲಿ ಹೊಳೆಯುವ ಚಿನ್ನದ ಮಾಗಾಯಿಗಳು ತೂಗಾಡುತ್ತಿದ್ದುವು. ಚಂದ್ರಶೇಖರನ ಮಗ ನೆಂದು ತೋರಿಸುವಂತೆ ಎದೆಯ ಮೇಲೆ ಅರ್ಧಚಂದ್ರಾಕಾರದ ಹುಲಿಯುಗುರು ರಾಜಿಸು

CC-0. Jangamwadi Math Collection. Digitized by eGangotri

ತೊಳಗುವ ಕಳಂಕಮುಂ ತಳೆದ ಪೂರ್ಣೇಂದುವುಂ
ಡಳದಂತೆ ಕಜ್ಜಳಂಬೊರೆದು ಕಣ್ಗೊಳಿಪ ಮುಂ
ಗಳವುುಖಿಂಗಾಣುತಿದು ಶಶಿಯೆಂದು ಸಕಲ ತಾರಾಂಗನೆಯರೊಲಿದು ಬಂದು
ನೆಲಸಿದರೊ ತತ್ಸಮೀಪದೊಳೆಂದೆನಲ್ಕೆ ಥಳ
ಥಳಿಪ ಮುತ್ತಿನ ಕಂಠಮಾಲೆ ಕಣ್ಗೆಸೆಯೆ ಕ
ಣ್ಗಳ ಪುಣ್ಯಮೇ ಬಳೆವ ತೆರದೊಳಾ ಚೆನ್ನಬಸವಂ ವರ್ಧಿಸುತ್ತಿರ್ದನು ೩೮

ಮೇಲೆ ಪರವಾದಿಗಳ ಬಾಯ್ಗಳಂ ಪೊಯ್ವಂತೆ
ತೋಳಾಟವಾಡಿ ಕೈಸನ್ನೆಯಿಂದಾ ಮುಕ್ತಿ
ಬಾಲೆಯಂ ಕೆಳೆತನಕೆ ಕರೆವಂತೆ ಹೊನ್ನತಾಗುಬ್ಬಿಯಾಟಂಗಳಾಡಿ
ಲೀಲೆಯಿಂ ನೆಲಕಿಳಿಪೆ ಖಳರೆದೆಗಳಿಂತು ಮೊಳ
ಕಾಲೊಳೊದೆದಪೆನೆಂಬವೋಲಂಬೆಗಾಲಿಟ್ಟು
ಲೀಲೆಯಿಂ ಶೈವಮಂ ನೆಲೆಗೆ ನಿಲಿಪಂತೆ ನಿಂದಾಡುತಿರ್ಪಂ ಕುವರನು ೩೯

ಮೆಲ್ಲಮೆಲ್ಲನೆ ದಟ್ಟಡಿಯನಿಡಲ್ ಗೆಜ್ಜೆಗಳ್
ಘಲ್ಲಘಲ್ಲೆನೆ ಸಕಲ ಪರವಾದಿಹೃದಯಮುವು
ಝಲ್ಲಝಲ್ಲೆನೆ ಪಳಿಕಿನಿಂ ಸವೆದ ನೆಲೆಗಟ್ಟು ಜಾರ್ವುದೆಲೆ ಚೆನ್ನಬಸವ

ತ್ತಿತ್ತು. ಈ ರೀತಿಯಲ್ಲಿ ಬಾಲಕನು ಕಣ್ಣಿಗೆ ಮನೋಹರವಾಗಿ ಕಂಡನು. ೩೮. ಕಳಂಕ ವನ್ನು ಹೊಂದಿದ್ದರೂ ಹೊಳೆಯುತ್ತಿರುವ ಪೂರ್ಣಚಂದ್ರನಂತೆ ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡು ಚೆನ್ನಬಸವಣ್ಣನು ಮನೋಹರವಾಗಿ ಕಾಣುತ್ತಿದ್ದನು. ಇವನ ಮಂಗಳಕರ ವಾದ ಮುಖವನ್ನು ಕಾಣುತ್ತಲೇ ಚಂದ್ರನೆಂದು ಭಾವಿಸಿ ನಕ್ಷತ್ರಕನ್ನಿಕೆಯರು ಒಲಿದು ಸಮೀಪಕ್ಕೆ ಬಂದು ನೆಲಸಿದರೋ ಎನ್ನುವಂತೆ ಬಾಲಕನ ಕೊರಳಿನಲ್ಲಿ ಥಳಥಳಿಸುತ್ತಿದ್ದ ಮುತ್ತಿನ ಹಾರ ಕಂಗೊಳಿಸಿತ್ತು. ನೋಡುವವರ ಕಣ್ಣಿನ ಪುಣ್ಯವೇ ಬೆಳೆಯುವಂತೆ ಚೆನ್ನ ಬಸವಣ್ಣನು ಅಭಿವೃದ್ಧಿಹೊಂದುತ್ತಿದ್ದನು. ೩೯. ಪರವಾದಿಗಳ ಬಾಯಿಗಳ ಮೇಲೆ ಹೊಡೆಯುವಂತೆ ತೋಳನ್ನು ಆಡಿಸುತ್ತಿದ್ದನು. ಕೈಸನ್ನೆಯಿಂದ ಮುಕ್ತಿಯೆಂಬ ಬಾಲೆ ಯನ್ನು ಗೆಳೆತನಕ್ಕೆ ಕರೆಯುವಂತೆ ಹೊನ್ನತಾಗುಬ್ಬಿಯಾಟಗಳನ್ನು ಆಡಿ ಕೈಗಳನ್ನು ವಿನೋದದಿಂದ ಕೆಳಗಿಳಿಸುತ್ತಿದ್ದನು. ದುಷ್ಟರ ಎದೆಗಳನ್ನು ಈರೀತಿ ಮೊಣಕಾಲಿನಿಂದ ಒದೆಯುತ್ತೇನೆ ಎಂಬಂತೆ ಅಂಬೆಗಾಲಿಡುತ್ತಿದ್ದನು. ವಿಲಾಸದಿಂದ ಶೈವಧರ್ಮವನ್ನು ಸ್ಥಿರವಾಗಿ ನಿಲ್ಲಿಸುವನೋ ಎಂಬಂತೆ ನಿಲ್ಲುತ್ತಿದ್ದನು. ಹೀಗೆ ಕುಮಾರನು ಅನೇಕ ಆಟಗಳನ್ನಾಡುತ್ತಿದ್ದನು. ೪೦. ಅವನು ಮೆಲ್ಲಮೆಲ್ಲನೆ ಪುಟ್ಟ ಪುಟ್ಟ ಹೆಜ್ಜೆಗಳನ್ನು ಇಟ್ಟಾಗ ಕಾಲಿನ ಗೆಜ್ಜೆಗಳು ಘಲ್ ಘಲ್ ಎಂದು ಶಬ್ದ ಮಾಡುತ್ತಿದ್ದುವು. ಆ ಶಬ್ದ ದಿಂದ ಎದುರಾಳಿಗಳ ಎದೆ ಝಲ್ಲೆನ್ನುತ್ತಿದ್ದಿತು. "ಸ್ಫಟಿಕಶಿಲೆಯಿಂದ ಮಾಡಿದ ನೆಲ ಜಾರುತ್ತದೆ, ಚೆನ್ನಬಸವ, ನಿಲ್ಲು ನಿಲ್ಲು," ಎಂದು ದಾದಿಯರು ಹೇಳುತ್ತಿದ್ದರು. ಆ

CC-0. Jangamwadi Math Collection. Digitized by eGangotri

ನಿಲ್ಲುನಿಲ್ಲೆಂಬ ದಾದಿಯರ ಮಾತು ಮೀರು
ತಲ್ಲಿಗಲ್ಲಿಗೆ ನಿಂದುನಿಂದು ನೋಡುತ್ತೆ ಮೊಳೆ
ವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋರಿಸಿದನು ೪೦

ಪಸುಳೆತನದೊಳ್ ಪ್ರಣವಮಂ ಶರಣಗಣಕೆ ಬೋ
ಧಿಸುವನೀ ಕುವರನೆಂಬೊಲ್ ತೊದಲ್ವಾತು ರಂ
ಜಿಸಿದುಮೀಶ್ವರರೂಪನೀತನೀತನ ಪದವನೆಮ್ಮಂತೆ ಸಕಲಜನರು
ಒಸೆದಪ್ಪಿರಿಲ್ ಮುಕ್ತಿಯಪ್ಪುದೆಂಬೀ ಮಾತು
ಪುಸಿಯಲ್ಲವೆಂದು ಪಂಗುರಿಪಂತೆ ಚರಣದೊಳ್
ಮಿಸುನಿಯಂದುಗೆ ಝಣಝಣೆಂದುಮಡಿಗಡಿಗುಲಿಯೆ ನಡೆದಾಡಿದಂ ಕುವರನು ೪೧

ನಿಮಿಷನಿಮಿಷಕೆ ಜಾವಜಾವಕ್ಕೆ ದಿನದಿನಕೆ
ಕ್ರಮಮೊಳಂ ಬಳೆದು ತನ್ನೊಡನಾಡಿಗಳ್ವೆರಸು
ವಿಮಲ ತಾರಾಗಣದ ನಡುವೆ ಕಂದಂ ಕುಂದನಳಿದಿಂದುವೊಪ್ಪುವಂತೆ
ರಮಣೀಯಮೆನಿಪ ಮುತ್ತಿನ ಕಂಠಮಾಲೆಯೊಳ
ಗಮರ್ದ ನಾಯಕರತ್ನದಂತೆ ಬಿಸುಗದಿರಳಿದ
ಹಿಮಕಿರಣನಂತೆ ನೋಳ್ಪರ ಕಣ್ಗೆ ಚೆನ್ನಬಸವಂ ಚೆನ್ನಮಂ ತಳೆದನು ೪೨

ಮಾತನ್ನು ಮೀರಿ ಅಲ್ಲಲ್ಲಿ ನಿಂತು ನೋಡುತ್ತ, ಮೊಳೆಯುತ್ತಿದ್ದ ಹಲ್ಲು ಮತ್ತು ಸುರಿಯುವ ಜೊಲ್ಲು ಹೊಳೆಯುವಂತೆ ನಸುನಗುತ್ತ ಚೆನ್ನಬಸವಣ್ಣನು ಬಾಲಲೀಲೆಯನ್ನು ತೋರಿಸಿದನು. ೪೧. ಹಸುಳೆಯಾಗಿರುವಾಗಲೇ ಈ ಶಿವಭಕ್ತರ ಸಮೂಹಕ್ಕೆ ಓಂಕಾರ ವನ್ನು ಬೋಧಿಸುವನೆಂಬಂತೆ ತೋರುತ್ತಿದ್ದುವು ಅವನ ತೊದಲುಮಾತುಗಳು. 'ಇವನು ಈಶ್ವರಸ್ವರೂಪನು. ಇವನ ಪಾದಗಳನ್ನು ನಮ್ಮ ಹಾಗೆ ಎಲ್ಲರೂ ಪ್ರೀತಿಯಿಂದ ಅಪ್ಪಿಕೊಂಡರೆ ಅವರಿಗೆ ಮುಕ್ತಿ ದೊರೆಯುತ್ತದೆ' ಎನ್ನುವ ಈ ಮಾತು ಸುಳ್ಳಲ್ಲ ಎಂಬುವುದನ್ನು ಸಾರುವಂತೆ ತನ್ನ ಕಾಲಿನಲ್ಲಿದ್ದ ಬಂಗಾರದ ಕಾಲಂದುಗೆಗಳು ಝಣ ಝಣ ಎಂದು ಮತ್ತೆ ಮತ್ತೆ ಶಬ್ದಮಾಡುವಂತೆ ಕುಮಾರನು ನಡೆದಾಡಿದನು. ೪೨. ಕ್ರಮವಾಗಿ ನಿಮಿಷ ನಿಮಿಷಕ್ಕೆ, ಜಾವ ಜಾವಕ್ಕೆ, ದಿನ ದಿನಕ್ಕೆ ಕುಮಾರನು ಬೆಳೆಯು ತ್ತಿದ್ದನು. ತನ್ನ ಒಡನಾಡಿಗಳನ್ನು ಕೂಡಿಕೊಂಡು ನಿರ್ಮಲವಾದ ನಕ್ಷತ್ರಗಳ ಗುಂಪಿನ ಮಧ್ಯೆ ದೋಷವನ್ನು ಬಿಟ್ಟು ಚಂದ್ರನು ಪ್ರಕಾಶಿಸುವಂತೆ ಕುಮಾರನು ಇದ್ದನು. ಮನೋಹರವಾದ ಮುತ್ತಿನ ಕಂಠಮಾಲೆಯಲ್ಲಿ ಇರುವ ಶ್ರೇಷ್ಠನಾಯಕರತ್ನದಂತೆ, ಸೂರ್ಯನು ಮುಳುಗಿದ ಮೇಲೆ ಹುಟ್ಟುವ ಚಂದ್ರನಂತೆ ನೋಡುವವರ ಕಣ್ಣಿಗೆ ಚೆನ್ನ

CC-0. Jangamwadi Math Collection. Digitized by eGangotri

ಬಾಲಕಂ ಕ್ರಮದೊಳಿಂತಭಿವರ್ಧಿಸುತ್ತಿರಲ್
ಕಾಲಕಾಲಂಗಳಂ ಬಯಸಿ ನಾನಾ ಶಾಸ್ತ್ರ
ಜಾಲ ವೇದಾಗಮ ಪುರಾಣಮಿವು ಮೊದಲಾದ ಸಕಲ ವಿದ್ಯಾಪ್ರಭೆಗಳು
ಮೇಲೆಮೇಲ್ಕೈತಂದು ಕೈಮುಗಿದು ಪದತಳವ
ನೋಲಗಿಸಿಕೊಂಡಿರ್ಪುವೆಂದೊಡಿಶ್ವರಸುತನ
ಲೀಲೆಯಂ ಬಣ್ಣಿಸಲ್ ಸಾಧ್ಯಮಲ್ಲೆನೆ ಚೆನ್ನಬಸವಣ್ಣನೊಪ್ಪಿರ್ದನು ೪೩

ತಾಮರಸಕೈರವಂಗಳ ವಿಕಾಸಂಗಳಂ
ತಾಮತಿಕ್ರಮಿಸಿದುವು ನಿಡಿದುಗಣ್ ಪುರ್ಬುಗಳ್
ಕಾಮಕೋದಂಡಮಂ ದಂಡಿಸಿದುವಾ ಮುಖಂ ಮುಕುರದಿರವಂ ಪಳಿದುದು
ಕೋಮಲಾಂಗಂ ಸೊಂಪಡರ್ದುದಾ ತೋಳ್ಗಳು
ದ್ದಾಮದಿಕ್ಕರಿಕರಮನುರೆ ಜರೆದುವತುಳರಂ
ಭಾಮಂಗಳಂಗಳೆದುವೊಳ್ತೊಡೆಗಳೆನಲೆಳೆಯ ಪರಯುಮಮರ್ದುದು ಕುವರನ ೪೪

ಪಡಪವರಂ ಬಿಜ್ಜಣಿಗರನಾ ಕಾಳಾಂಜಿ
ವಿಡಿವರಂ ಪಾದುಕಾಧಾರರಂ ಚಮರಮಂ
ಪಿಡಿದು ಡಾಳಿಸುವರಂ ಗಿಂಡಿವಿಡಿವರ ಮುಖ್ಯವಿನಿಯೋಗದೆಳೆವಕ್ಕಳ

ಬಸವಣ್ಣನು ಮನೋಹರವಾಗಿದ್ದನು. ೪೩. ಹೀಗೆ ಬಾಲಕನು ಕ್ರಮಕ್ರಮವಾಗಿ ಬೆಳೆಯುತ್ತಿದ್ದನು. ಕಾಲಕಾಲಕ್ಕೆ ಸರಿಯಾಗಿ ನಾನಾ ಶಾಸ್ತ್ರಗಳ ಗುಂಪು, ವೇದ ಆಗಮ ಪುರಾಣ ಮೊದಲಾದ ಎಲ್ಲ ವಿದ್ಯೆಗಳ ತೇಜಸ್ಸೂ, ಒಂದಾದ ಮೇಲೊಂದು ಬಂದು ಕೈಮುಗಿದು. ಅವನ ಪಾದಸೇವೆ ಮಾಡಿಕೊಂಡಿದ್ದುವು ಎಂದಾಗ ಈಶ್ವರನ ಮಗನ ಲೀಲೆಯನ್ನು ವರ್ಣಿಸಲು ಸಾಧ್ಯವಿಲ್ಲ ಎನ್ನುವಂತೆ ಚೆನ್ನಬಸವಣ್ಣನು ರಾಜಿಸುತ್ತಿದ್ದನು. ೪೪. ಅವನ ವಿಶಾಲವಾದ ಕಣ್ಣುಗಳು ತಾವರೆ ಮತ್ತು ಕಮಲಗಳ ಅರಳುವಿಕೆಯನ್ನೂ ಮೀರಿಸಿದ್ದುವು. ಅವನ ಕೊಂಕಾದ ಹುಬ್ಬುಗಳು ಮನ್ಮಥನ ಕೋದಂಡವನ್ನು ಸೋಲಿಸಿದವು. ಅವನ ಕಾಂತಿಯುಕ್ತವಾದ ಮುಖವು ಕನ್ನಡಿಯನ್ನೇ ಹೀಯಾಳಿಸಿತು : ಕೋಮಲವಾದ ಅಂಗಾಂಗಗಳು ಚೆಲ್ವಿಕೆಯನ್ನು ಪಡೆದವು ; ತೋಳುಗಳು ದೊಡ್ಡ ದಿಗ್ಗಜಗಳ ಸೊಂಡಿಲನ್ನು ತಿರಸ್ಕರಿಸಿದುವು ; ಮನೋಹರವಾದ ತೊಡೆಗಳು ಬಾಳೆಯ ದಿಂಡುಗಳನ್ನು ಅಲ್ಲಗಳೆದವು. ಈ ರೀತಿಯಾಗಿ ಆ ಕುಮಾರನಿಗೆ ಎಳೆಯ ಹರೆಯವು ಪ್ರಾಪ್ತವಾಯಿತು. ೪೫. ಬಸವಣ್ಣನು ತಾಂಬೂಲಚೀಲದವರನ್ನು, ಬೀಸಣಿಗೆಯವರನ್ನು, ಆ ಪನ್ನೀರುದಾನಿಯನ್ನು ಹಿಡಿದವರನ್ನು ಪಾದುಕೆಗಳನ್ನು ಹಿಡಿದು ಕೊಂಡಿರುವವರನ್ನು, ಚಾಮರವನ್ನು ಹಿಡಿದು ಬೀಸುವವರನ್ನು, ಗಿಂಡಿಪಾತ್ರೆಯನ್ನು ಹಿಡಿಯುವ ಮುಖ್ಯ ಊಳಿಗದ ಎಳೆಮಕ್ಕಳನ್ನು ಸಂತೋಷದಿಂದ ನೇಮಿಸಿದ್ದನು.

CC-0. Jangamwadi Math Collection. Digitized by eGangotri

ಕಡುವಿಲಾಸದೊಳವರ್ಚಿಸಿಕೊಟ್ಟು ತನ್ನ ಕ
ಣ್ಗೆಡೆಯ ಪುಣ್ಯದಪುಂಜವೆಂದು ನಿಚ್ಚಂ ಸುಖಂ
ಬಡೆದು ತನ್ಮೂರ್ತಿಯಂ ನೋಡುತುಂ ಬಸವನತ್ಯುತ್ಸವದೊಳಿರುತಿರ್ದನು 	೪೫

ನೋಡುತುಂ ಥಳಥಳಿಪ ವದನಮಂ ಸುಖದೊಳೋ
ಲಾಡುತುಂ ಗುರುಮೂರ್ತಿಯೆಂದರಿದು ವಂದನಂ
ಮಾಡುತುಂ ಚಿತ್ತದೊಳ್ ಚೆನ್ನಬಸವನ ಮೊಗಂ ಕಣ್ಗಳ್ಗೆ ಮರೆಯಾಗಲು
ಬಾಡುತುಂ ಕಂಡೊಡನೆ ಹರ್ಷವಾರ್ಧಿಯೊಳಗೀ
ಸಾಡುತುಂ ಪಲತೆರದ ಸಿಂಗರಂಗಂಡು ಮು
ದ್ದಾಡುತುಂ ಜಾವಾತನಂ ಬಸವದಂಡೇಶ್ವರಂ ಸುಖದೊಳಿರುತಿರ್ದನು 	೪೬

ಇರುತಿರಲೊಂದು ದಿವಸಂ ಬಸವರಾಜನತಿ
ಹರುಷದಿಂದಳಿಯನ ಮೊಗಂ ನೋಡಿ ನಮಗೆ ಸ
ದ್ಗುರುವೀತನೆಂದು ಹೃದಯದೊಳರಿದು ತನ್ನ ಭಕ್ತಿಯೊಳು ಬೇರರಮನೆಯೊಳು
ಇರಿಸಬೇಕೆಂದೆನುತೆ ಶಿಲ್ಪಿಗಳನಾಕ್ಷಣಂ
ಕರೆಸಿ ನುಡಿದಂ ನಮ್ಮ ಮನೆಗೆಲದೊಳರಮನೆಯ
ನಿರವಾಗಿಸೆನಲವರ್ ಭಯಭರಿತಭಕ್ತಿಯಿಂ ನಿರ್ಮಿಸಿದರೇನೆಂಬೆನು 	೪೭

ತನ್ನ ಕಣ್ಣಿನ ತುಂಬ ತುಂಬುವ ಪುಣ್ಯದರಾಶಿಯೆಂದು ಯಾವಾಗಲೂ ಸುಖವನ್ನು ಹೊಂದಿ ಆ ಮೂರ್ತಿಯನ್ನು ನೋಡುತ್ತ ಬಸವಣ್ಣನು ಅಧಿಕ ಸಂತೋಷದಿಂದ ಇರುತ್ತಿದ್ದನು. ೪೬. ಪ್ರಕಾಶಮಾನವಾದ ಬಾಲಕನ ಮುಖವನ್ನು ನೋಡುತ್ತಾ ಸುಖದಲ್ಲಿ ಓಲಾಡುತ್ತಿದ್ದನು. ನನ್ನ ಗುರುಮೂರ್ತಿ ಇವನೆಂದು ತಿಳಿದು ಮನಸ್ಸಿನಲ್ಲಿ ನಮಸ್ಕರಿಸುತ್ತಿದ್ದನು. ಚೆನ್ನಬಸವಣ್ಣನ ಮುಖವು ತನ್ನ ಕಣ್ಣುಗಳಿಂದ ಮರೆಯಾದ ತಕ್ಷಣ ಬಾಡುತ್ತಿದ್ದನು. ಕಂಡ ಕೂಡಲೇ ಅತ್ಯಂತ ಸಂತೋಷದಲ್ಲಿ ಮುಳುಗುತ್ತಿದ್ದನು. ಪಲವು ರೀತಿಯ ಅಲಂಕಾರವನ್ನು ನೋಡಿ ಸೋದರಳಿಯನನ್ನು ಮುದ್ದಾಡುತ್ತ ಬಸವ ದಂಡೇಶನು ಸುಖದಲ್ಲಿ ಇರುತ್ತಿದ್ದನು. ೪೭. ಹೀಗೆ ಇರಲು ಒಂದು ದಿವಸ ಬಸವಣ್ಣನು ಬಹಳ ಸಂತೋಷದಿಂದ ತನ್ನ ಅಳಿಯನ ಮುಖವನ್ನು ನೋಡಿ 'ನಮಗೆ ಇವನು ಸದ್ಗುರುವಾಗತಕ್ಕವನು' ಎಂದು ತನ್ನ ಮನಸ್ಸಿನಲ್ಲಿ ತಿಳಿದು ಅವನನ್ನು ಭಕ್ತಿಯಿಂದ ಬೇರೆ ಅರಮನೆಯಲ್ಲಿ ಇರಿಸಬೇಕು ಎಂದುಕೊಂಡನು. ಕೂಡಲೇ ಶಿಲ್ಪಿಗಳನ್ನು ಕರೆಸಿ, ನಮ್ಮ ಮನೆಯ ಪಕ್ಕದಲ್ಲಿ ಒಂದು ಅರಮನೆಯನ್ನು ಬೇಗ ನಿರ್ಮಿಸಿ ಎಂದು ಹೇಳಿದನು. ಅವರು ಭಯಭಕ್ತಿಯಿಂದ ಅರಮನೆಯನ್ನು ನಿರ್ಮಿಸಿದರು. ಅದನ್ನು ಏನೆಂದು

CC-0. Jangamwadi Math Collection. Digitized by eGangotri

ನೀಲರತ್ನಂಗಳಿಂ ನೆಲೆಗಟ್ಟು ಪಳಿಕುಗಳ
ಸಾಲೆಸೆವ ಭಿತ್ತಿಗಳ್ ವಜ್ರದೊಳ್ಗಂಬಂಗ
ಳಾ ಲಲಿತಪಚ್ಚೆಗಳ ತೊಲೆ ರನ್ನಬೋದುಗೆಗಳಾ ಪ್ರವಾಳಂಗಳಿಂದೆ
ಮೇಲೆಸೆವ ಜಂತೆಗಳ್ ತೋರ್ಪ ನವಪುಷ್ಯರಾ
ಗಾಳಿಯಿಂ ಸಮೆದ ಬಾಗಿಲ್ ಪೊಂಗದಂಗಳಿಂ
ಪೇಳಲಚ್ಚರಿಯಾದುದರಮನೆಯುದಾ ವಿಶ್ವಕರ್ಮನಿರ್ಮಿತದಂತಿರೆ ೪೮

ಎಸೆದುವಲ್ಲಲ್ಲಿ ವಾಸ್ತುಕ್ರಮಂಬಿಡಿದು ರಂ
ಜಿಸುವ ಮಜ್ಜನಶಾಲೆಯುಂ ಸೂಪಶಾಲೆ ಶೋ
ಭಿಸುವ ಭೋಜನಶಾಲೆಯುಂ ಮಂತ್ರಶಾಲೆ ನರ್ತನಶಾಲೆ ವಸ್ತ್ರಶಾಲೆ
ಮಿಸುಪ ಹಯಶಾಲೆ ಗಜಶಾಲೆಯೋಲಗಶಾಲೆ
ಪೊಸ ಗೀತಶಾಲೆಯೊಪ್ಪುವ ಶಯನಶಾಲೆ ಭಾ
ವಿಸಲರಸುಶ್ರೀವಿಗುಳ್ಳನಿತು ಶಾಲೆಗಳೊಪ್ಪಿದುವು ರತ್ನರಂಜನದೊಳು ೪೯

ಸಕಲಕೋಶದ ಗೃಹಂಗಳ್ ತೈಲಘೃತಗುಡ
ಪ್ರಕರರಸಭಾಂಡದುಗ್ರಾಣದೊಳ್ಮನೆಗಳುಂ
ಸುಕರಧಾನ್ಯದ ಕಣಜಗಳ್ ಸರ್ವವಿನಿಯೋಗದವರಿಪ್ಪ ಚಾವಡಿಗಳು

ಹೇಳಲಿ ? ೪೮. ಆ ಮನೆಯ ನೆಲಗಟ್ಟು ನೀಲರತ್ನಗಳಿಂದ ಮಾಡಿತ್ತು. ಅದರ ಗೋಡೆಗಳಲ್ಲಿ ಸ್ಫಟಿಕಶಿಲೆಗಳು ಸಾಲುಸಾಲಾಗಿದ್ದವು. ವಜ್ರಗಳಿಂದ ಮಾಡಿದ ಉತ್ತಮವಾದ ಕಂಬಗಳಿದ್ದವು. ತೊಲೆಗಳು ಮನೋಹರವಾದ ಪಚ್ಚೆಗಳಿಂದ ಮಾಡಿದ್ದವು. ಬೋದುಗೆಗಳು ರತ್ನಮಯವಾಗಿದ್ದಿತು. ಮೇಲೆ ಪ್ರಕಾಶಮಾನವಾಗಿದ್ದ ಅಡ್ಡ ತೊಲೆಗಳು ಹವಳದಿಂದ ಮಾಡಿತ್ತು. ಅಲ್ಲಿಯ ಬಾಗಿಲುಗಳು ನಿರ್ಮಲವಾದ ಪುಷ್ಯರಾಗರತ್ನದಿಂದ ಮಾಡಿದ್ದುವು. ಆ ಬಾಗಿಲುಗಳಿಗೆ ಬಂಗಾರದ ಕದಗಳಿದ್ದುವು. ಈ ರೀತಿ ಆಶ್ಚರ್ಯವನ್ನುಂಟುಮಾಡುವ ಅರಮನೆ ದೇವಶಿಲ್ಪಿಯಾದ ವಿಶ್ವಕರ್ಮನಿಂದ ಮಾಡಿದೆಯೋ ಎನ್ನುವಂತಿತ್ತು. ೪೯. ಅಲ್ಲಲ್ಲಿ ಸ್ನಾನಗೃಹಗಳು, ಅಡಿಗೆಮನೆಗಳು, ಊಟದ ಮನೆಗಳು, ಮಂತ್ರಾಲೋಚನೆಯ ಮನೆಗಳು, ನರ್ತನಶಾಲೆ, ವಸ್ತ್ರಗಳನ್ನಿಡುವ ಶಾಲೆಗಳು ಶೋಭಿಸುತ್ತಿದ್ದುವು. ಕುದುರೆಲಾಯ, ಆನೆಕರೋಟಿ, ಸಭಾಂಗಣಗಳು, ಸಂಗೀತ ಶಾಲೆಗಳು, ಮಲಗುವ ಮನೆಗಳು ಈ ರೀತಿ ರಾಜಶ್ರೀವಿಗನುಗುಣವಾಗಿ ರತ್ನಮಯವಾದ ಅನೇಕ ಶಾಲೆಗಳು ಶಿಲ್ಪಶಾಸ್ತ್ರಕ್ಕನುಗುಣವಾಗಿ ಶೋಭಿಸಿದವು. ೫೦. ಎಲ್ಲ ರೀತಿಯ ಕೋಶಾಗಾರಗಳೂ ಅಲ್ಲಿದ್ದುವು. ಎಣ್ಣೆ, ತುಪ್ಪ, ಬೆಲ್ಲ ಮುಂತಾದ ರಸಗಳ ಪಾತ್ರೆಯಿಂದ ಕೂಡಿದ ಉಗ್ರಾಣದ ಒಳ್ಳೆಯ ಮನೆಗಳು ಅಲ್ಲಿದ್ದವು. ಒಳ್ಳೆಯ ಧಾನ್ಯದ ಕಣಜಗಳಿದ್ದುವು. ಎಲ್ಲವನ್ನೂ ವಿತರಣೆ ಮಾಡುವವರ ಚಾವಡಿಗಳಿದ್ದುವು. ಸುಂದರವಾಗಿ

CC-0. Jangamwadi Math Collection. Digitized by eGangotri

ಪ್ರಕಟತರ ತರುಲತೆಗಳುಂ ರನ್ನಜಗಲಿ ರ
ಮ್ಯಕಸರಸಿ ಕೃತಕಾದ್ರಿಗಳ್ ತರತರದೊಳಿರ
ಲ್ಕಕಳಂಕ ಕೇಳೀವನಂ ಮೆರೆದುದನಿತು ಲೋಕದ ವನವನುರೆ ಜರೆಯುತೆ ೫೦

ತರತರದೊಳೆಸೆವ ಬಾಗಿಲ ಗೋಪುರಂಗಳೊಳ್
ಕರುವಿಟ್ಟ ಪುತ್ಥಳಿಗಳಿಂ ಭಿತ್ತಿಭಿತ್ತಿಯೊಳ್
ಬರೆದ ನಾನಾ ತೆರದೊಳೆಸೆವ ಬೊಂಬೆಗಳಿಂದೆ ಕಸ್ತೂರಿಕುಂಕುಮದೊಳು
ಪೊರೆದ ಸಾರಣೆಗಳಿಂ ಕಾರಣೆಗಳಿಂ ಚಿತ್ರ
ತರಪಟ್ಟೆ ಝಲ್ಲಿ ಕನ್ನಡಿ ಕಳಸ ಮುತ್ತುಗಳ
ಪರಿಪರಿಯ ರನ್ನಗಳ ಕುಚ್ಚುಗಳ ಮೇಲ್ಕಟ್ಟಿನಿಂ ಕರಂ ಚೆಲ್ವಾದುದು ೫೧

ಬಾಗಿಲ್ಗಳಾರೆಸೆದುವರಮನೆಗೆ ಹೇಮಮಯ
ಮಾಗಿ ತೋರ್ಪುವು ವಿಶಾಲಂಗಳಿಂದವರವರ
ಮೇಗೆ ಮುಗಿಲಂ ಮುಟ್ಟುವುಪ್ಪರಿಗೆಗಳ ಮೆರೆದುವಾರು ಮಣಿಖಚಿತವಾಗಿ
ಭೂಗಗನಪಾತಾಳದರಮನೆಗಳಿವರೊಡನೆ
ತೂಗೆ ಸರಿಬಾರವೆಂದೆಲ್ಲರುಂ ಪೊಗಳಲತಿ
ವೇಗದಿಂದಾ ಶಿಲ್ಪಿಗಂ ಬಂದು ಮೆಯ್ಯಿಕ್ಕಿ ಬಸವನೊಡನಿಂತೆಂದನು ೫೨

ಕಾಣುವ ಮರಬಳ್ಳಿಗಳಿದ್ದುವು. ರತ್ನದ ಜಗಲಿಗಳಿದ್ದುವು. ಮನೋಹರವಾದ ಸರೋವರಗಳಿದ್ದುವು. ಕೃತಕವಾಗಿ ಮಾಡಿದ ಬೆಟ್ಟಗಳಿದ್ದುವು. ಈ ರೀತಿ ವಿಧವಿಧವಾದ ನಿರ್ಮಲವಾದ ಆಟದ ಅಡವಿಗಳು ಪ್ರಪಂಚದಲ್ಲಿದ್ದ ಎಲ್ಲ ಉದ್ಯಾನಗಳನ್ನೂ ಹೀಯಾಳಿಸುವಂತೆ ಇದ್ದುವು. ೫೧. ನಾನಾ ರೀತಿಯಲ್ಲಿ ಶೋಭಿಸುವ ಬಾಗಿಲುಗಳು—ಅಲ್ಲಿ ಗೋಪುರಗಳೂ ಇದ್ದುವು. ಆ ಗೋಪುರಗಳಲ್ಲಿ ಕೆತ್ತಿದ ಪ್ರತಿಮೆಗಳಿದ್ದುವು. ಗೋಡೆಗೋಡೆಗಳಲ್ಲಿ ಬರೆದ ನಾನಾ ರೀತಿಯಲ್ಲಿ ರಂಜಿಸುವ ಬೊಂಬೆಗಳಿದ್ದುವು. ಕಸ್ತೂರಿ ಕುಂಕುಮದಿಂದ ಸಾರಿಸಿ ಅಲಂಕಾರ ಮಾಡಿದ ರಂಗೋಲೆಗಳು ಇದ್ದುವು. ಚಿತ್ರ–ವಿಚಿತ್ರವಾದ ಪಟ್ಟೆಗಳು, ಗೊಂಡೆಗಳ ಸಾಲುಗಳು, ಕನ್ನಡಿಗಳು, ಕಳಶಗಳು, ಮುತ್ತುಗಳು, ಬಗೆ ಬಗೆಯ ರತ್ನದ ಕುಚ್ಚುಗಳ ಮೇಲುಕಟ್ಟಿನಿಂದ ಅರಮನೆಯು ಬಹು ಚೆಲುವಾಯಿತು. ೫೨. ಆ ಅರಮನೆಗೆ ಆರು ಬಾಗಿಲುಗಳಿದ್ದುವು. ಅವುಗಳೆಲ್ಲ ಬಂಗಾರದವುಗಳಾಗಿ ವಿಶಾಲವಾಗಿ ಇದ್ದುವು. ಅವುಗಳ ಮೇಲೆ ಆಕಾಶವನ್ನು ಮುಟ್ಟುವ ಮಣಿಖಚಿತವಾದ ಆರು ಉಪ್ಪರಿಗೆಗಳಿದ್ದುವು. ಭೂ, ಸ್ವರ್ಗ, ಪಾತಾಳಲೋಕಗಳಲ್ಲಿ ಇರುವ ಯಾವ ಅರಮನೆಗಳೂ ಇದಕ್ಕೆ ಸರಿಸಮನಾಗುವುದಿಲ್ಲ ಎಂದು ಎಲ್ಲರೂ ಹೊಗಳುತ್ತಿರಲು ಅದನ್ನು ನಿರ್ಮಿಸಿದ ಶಿಲ್ಪಿಯು ತ್ವರೆಯಿಂದ ಬಂದು, ಬಸವಣ್ಣನಿಗೆ ನಮಸ್ಕರಿಸಿ ಹೀಗೆ ಹೇಳಿದನು.

CC-0. Jangamwadi Math Collection. Digitized by eGangotri

ಜೀಯ ಚಿತ್ತಯ್ಸು ಬಹುರಚನೆಯಿಂದರಮನೆಯ
ನೊಯ್ಯಾರದಿಂ ಗೆಯ್ದೆನೀಕ್ಷಿಸೆನೆ ಹರುಷಪೂ
ರಾಯಮಾನಸನಾಗಿ ಬಸವನಾ ಚೆನ್ನಬಸವಂಗೂಡಿ ನೋಳ್ಪಾಗಲು
ತೋಯಜಾಕರದಂತೆ ಪದ್ಮಾಲಯಂ ಶಿವನ
ಕಾಯದಂದದೆ ಸರ್ವಮಂಗಳಾಲಂಕೃತಂ
ಕಾಯಜನ ಪಿತನಂತನಂತಮಣಿರಂಜಿತದೊಳರಮನೆ ವಿರಾಜಿಸಿದುದು ೫೩.

ಇಂತು ನಾನಾ ಕುಶಲದಿಂದೊಪ್ಪುವರಮನೆಯ
ನಂತವಿಭವಂಗಂಡು ತಲೆದೂಗಿ ಬಸವನ
ತ್ಯಂತವಿಸ್ಮಿತನಾಗಿ ಶಿಲ್ಪಿಗಂಗುಡುತೊಡಂಗಳನಿತ್ತು ಸಲೆ ಮನ್ನಿಸಿ
ಮುಂತಿರ್ಪ ಚೆನ್ನಬಸವಣ್ಣಂಗೆ ನಮಿಸಿ ತಾಂ
ಸಂತತಂ ಮಾಳ್ಪ ಭಕ್ತಿಯನೊಲಿದು ಕೈಕೊಳುತ
ಸಂತಸದೊಳೀ ಮನೆಯೊಳಿರ್ದೆಮಗೆ ಸಕಲ ಶಿವತತ್ತ್ವಮಂ ಬೋಧಿಸುವುದು ೫೪

ಅದು ನಿಮಿತ್ತದೊಳೆನ್ನ ಬಿನ್ನಪಂಗೇಳ್ದು ನೀ
ವಿದರೊಳಿರ್ದೆನ್ನ ಮನದಿಷ್ಟಮಂ ಸಲಿಸೆನಲ್
ಹೃದಯದೊಳ್ ಚೆನ್ನಬಸವಂ ತಿಳಿದು ಪರಮಗುರುವಚನವೆಂದೇ ಭಾವಿಸಿ

೫೩. 'ಸ್ವಾಮಿ ಕೇಳಬೇಕು! ಬಹುವಿಧವಾದ ರಚನೆಗಳಿಂದ ಈ ಅರಮನೆಯನ್ನು ಶ್ರಮವಿಲ್ಲದೆ ನಿರ್ಮಿಸಿದೆನು. ಅದನ್ನು ಬಂದು ನೋಡಿ'—ಎಂದು ಹೇಳಿದನು. ಆಗ ಬಸವಣ್ಣನು ಹರುಷತುಂಬಿದ ಮನಸ್ಸುಳ್ಳವನಾಗಿ, ಚೆನ್ನಬಸವಣ್ಣನ ಜೊತೆಗೂಡಿ ಬಂದು ನೋಡಿದನು. ಆ ಪದ್ಮಾಲಯವು ಪದ್ಮಸರೋವರದಂತೆ ಇತ್ತು. ಶಿವನ ದೇಹವು ಸರ್ವಮಂಗಳಕರವಾದ ಅಲಂಕಾರದಿಂದ, ಮನ್ಮಥನ ತಂದೆಯಾದ ವಿಷ್ಣುವಿನಂತೆ ಬಹಳಷ್ಟು ರತ್ನಗಳಿಂದ ಅಲಂಕಾರಗೊಂಡು ಅರಮನೆಯು ಶೋಭಿಸುತ್ತಿತ್ತು.
೫೪. ಹೀಗೆ ನಾನಾ ರೀತಿಯ ಕುಶಲತೆಯನ್ನು ತೋರುವ ಅಲಂಕಾರಗಳಿಂದ ಶೋಭಿಸುವ ಅರಮನೆಯ ಅಪಾರವೈಭವವನ್ನು ನೋಡಿ ಬಸವಣ್ಣನು ಮೆಚ್ಚಿ ಬಹಳ ವಿಸ್ಮಯಗೊಂಡು ತಲೆದೂಗಿ, ಆ ಶಿಲ್ಪಿಗನಿಗೆ ಉಡುಗೆತೊಡುಗೆಗಳನ್ನಿತ್ತು ಸನ್ಮಾನಿಸಿದನು. ತನ್ನ ಮುಂದಿದ್ದ ಚೆನ್ನಬಸವಣ್ಣನಿಗೆ ನಮಿಸಿ 'ತಾವು ನಾನು ನಡೆಸುವ ಭಕ್ತಿಯನ್ನು ಈ ಮನೆಯಲ್ಲಿದ್ದುಕೊಂಡು ಸಂತೋಷದಿಂದ ಸ್ವೀಕರಿಸಿ, ನಮಗೆಲ್ಲ ಶಿವತತ್ತ್ವವನ್ನು ಬೋಧಿಸಬೇಕು' ೫೫. 'ಆದ್ದರಿಂದ ನನ್ನ ವಿಜ್ಞಾಪನೆಯನ್ನು ಕೇಳಿ. ನೀವು ಇಲ್ಲೇ ಇದ್ದುಕೊಂಡು ನನ್ನ ಮನಸ್ಸಿನ ಅಭಿಲಾಷೆಯನ್ನು ಪೂರ್ಣಗೊಳಿಸಿ' ಎಂದು ಹೇಳಿದನು. ಚೆನ್ನಬಸವಣ್ಣನು ತನ್ನ ಮನಸ್ಸಿನಲ್ಲಿ ಈ ಮಾತನ್ನು ಪರಮ ಗುರುವಿನ ಅಪ್ಪಣೆ ಎಂದೇ ತಿಳಿದು, 'ನಿರ್ಮಲ

CC-0. Jangamwadi Math Collection. Digitized by eGangotri

ಸದಮಲಜ್ಞಾನಿ ನೀವಿರಿಸಿದಂತಿರ್ಪೆನೆನೆ
ಮುದದೊಳಾ ಬಸವದಂಡೇಶ್ವರಂ ತದ್ರಾಜ
ಸದನಕ್ಕೆ ಧನಧಾನ್ಯ ಮೊದಲಾದ ಸಂಪದವನಿಂಬಿಟ್ಟನಾಕ್ಷಣದೊಳು ೫೫

ಅಕಳಂಕಚರಿತ ಬಸವಂ ಚೆನ್ನಬಸವಂಗೆ
ಸಕಲ ವಿನಿಯೋಗದವರಂ ಕೊಟ್ಟು ಭಕ್ತಿಯಿಂ
ಮುಕುಳಿತಕರಂಗಳಿಂ ಬಿನ್ನವಿಸಿ ನಾಗಲಾಂಬೆಯ ಕರೆಸಲಾಕ್ಷಣದೊಳು
ಸಕಲ ವೈಭವದಿಂದೆ ಹೊನ್ನಂದಣವನೇರಿ
ಮುಕುರಮುಖಿಯರ್ವೆರಸಿ ನಡೆತಂದು ನವರತ್ನ
ನಿಕರನಿರ್ಮಿತದಿಂದಲೆಸೆವ ರಾಜಾಲಯವನೊಳಪೊಕ್ಕಳುತ್ಸವದೊಳು ೫೬

ಉಕ್ಕುವತಿಹರುಷದಿಂ ಬಸವಣ್ಣನಾಗ ತ
ಮ್ಮಕ್ಕ ನಾಗಾಂಬೆಯೊಡನೀಕುಮಾರಕನೆಸೆವ
ಮುಕ್ಕಣ್ಣನಪರಾವತಾರನೆಂದೇ ತಿಳಿದು ಸಲಹೆಂದು ಪೇಳ್ದು ಬಳಿಕ
ಚಿಕ್ಕಬಸವಂಗೆರಗಿ ಬಸವ ತನ್ನಾಲಯಂ
ಜೊಕ್ಕನೀ ಚೆನ್ನಬಸವಂ ತನ್ನ ಬಾಗಿಲ್ಗೆ
ತಕ್ಕರಂ ಕಾಪಿರಿಸಬೇಕೆಂದು ಹೃದಯದೊಳ್ ತಿಳಿದು ಬಳಿಕಾ ಕ್ಷಣದೊಳು ೫೭

ಆರು ಬಾಗಿಲಿನೊಳಾರು ಸ್ಥಳವನುಸಿರದೊಡೆ
ಮೂರುಕಣ್ಣುಳ್ಳರಂ ಬಿಡಬೇಡವೆಂದು ಪೇ
ಳ್ದಾರುಮುಂದಿಯನಧಿಕಷಟ್ಸ್ಥಲಬ್ರಹ್ಮಿಗಳ ಬಾಗಿಲ ಪರೀಕ್ಷೆಗಿರಿಸಿ

ವಾದ ಜ್ಞಾನಿಯೇ, ನೀವಿರಿಸಿದಂತೆ ನಾನಿರುತ್ತೇನೆ' ಎಂದನು. ಬಸವಣ್ಣನು ಬಹಳ ಸಂತೋಷದಿಂದ ಆ ಅರಮನೆಯಲ್ಲಿ ಧನ-ಧಾನ್ಯ ಮೊದಲಾದ ಸಂಪತ್ತನ್ನು ತಕ್ಷಣವೇ ಸಿದ್ಧಪಡಿಸಿಟ್ಟನು. ೫೬. ನಿರ್ಮಲವಾದ ಚಾರಿತ್ರ್ಯವನ್ನುಳ್ಳ ಬಸವಣ್ಣನು ಚೆನ್ನ ಬಸವಣ್ಣನಿಗೆ ಎಲ್ಲ ರೀತಿಯ ಸೇವಕರನ್ನೂ ಒದಗಿಸಿ, ಭಕ್ತಿಯಿಂದ ಕೈಮುಗಿದುಕೊಂಡು ವಿಜ್ಞಾಪನೆ ಮಾಡಿಕೊಂಡನು. ನಾಗಲಾಂಬೆಯನ್ನು ಕರೆಸಿದನು. ಅವಳು ಕೂಡಲೇ ಎಲ್ಲ ವೈಭವದಿಂದ ಬಂಗಾರದ ಪಲ್ಲಕ್ಕಿಯನ್ನು ಏರಿ ಕಾಂತಿಯಿಂದೊಡಗೂಡಿದ ಸ್ತ್ರೀಯರ ಜೊತೆಯಲ್ಲಿ ಬಂದು. ನವರತ್ನಗಳಿಂದ ನಿರ್ಮಿತವಾಗಿ ಶೋಭಿಸುವ ಅರಮನೆಯನ್ನು ಸಂಭ್ರಮದಿಂದ ಪ್ರವೇಶ ಮಾಡಿದಳು. ೫೭. ಉಕ್ಕುತ್ತಿರುವ ಸಂತೋಷದಿಂದ ಬಸವಣ್ಣನು ತನ್ನ ಅಕ್ಕನಾದ ನಾಗಲಾಂಬಿಕೆಗೆ 'ಈ ಮಗನು ಪ್ರಸಿದ್ಧನಾದ ಮುಕ್ಕಣ್ಣನ ಅಪರಾವತಾರವೆಂದೇ ತಿಳಿದು ಕಾಪಾಡು' ಎಂದು ಹೇಳಿ, ಅನಂತರ ಚೆನ್ನಬಸವಣ್ಣನಿಗೆ ನಮಸ್ಕಾರಮಾಡಿ, ತನ್ನ ಮನೆಗೆ ಹಿಂದಿರುಗಿದನು. ಇತ್ತ ಚೆನ್ನಬಸವಣ್ಣನು ತನ್ನ ಮನೆಯ ಬಾಗಿಲುಗಳಿಗೆ ಯೋಗ್ಯರಾದವರನ್ನು ಕಾವಲಿರಿಸಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ ಆಕ್ಷಣವೇ, ೫೮. 'ಈ ಆರು ಬಾಗಿಲುಗಳಲ್ಲಿಯೂ ಷಟ್ಸ್ಥಲವನ್ನು ಹೇಳದವರನ್ನು ಅವನು ಈಶ್ವರನೇ ಆದರೂ ಒಳಕ್ಕೆ ಬಿಡಬೇಡಿ' ಎಂದು ಆರುಮಂದಿ ಷಟ್ಸ್ಥಲಬ್ರಹ್ಮಿಗಳನ್ನು ಕಾವಲಾಗಿರಿಸಿದನು.



CC-0. Jangamwadi Math Collection. Digitized by eGangotri

ಆರು ಮುಖದೊಳ್ ಜನಿಸಿದವುಳಸ್ವರೂಪನೀ
ರಾರುಸಾವಿರ ಷಟ್ಸ್ಥಲಬ್ರಹ್ಮಿಗಳನೊಯ್ದು
ಮೀರಿದಾ ಜಂಗಮಾರ್ಚನೆಯನೊಲವಿಂ ಮಾಡುತಿರ್ದನತಿಭಕ್ತಿಯಿಂದ ೫೮

ವಿನಯದಿಂ ಷಟ್ಸ್ಥಲಬ್ರಹ್ಮಿಗಳನೊಲ್ದು ಭೋ
ಜನಶಾಲೆಯೊಳ್ ತರತರಂಬಿಡಿದು ರಂಜಿಸುವ
ಘನತರದ ರತ್ನಮಯವಾದ ಗದ್ದುಗೆಯ ಮೇಲೊಲ್ದು ಕುಳ್ಳಿರಿಸಲವರು
ಆನುವಿನಂದರ್ಘ್ಯಪಾದ್ಯಾದಿ ಸತ್ಕ್ರಿಯೆಗಳಿಂ
ಮನವೊಲ್ದು ಶಿವಪೂಜೆಯಂ ಮಾಡೆ ಬಳಿಕ ಮಿನು
ಮಿನುಪ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿಕರವನು ೫೯

ಪರಿಮಳಿಪ ರಾಜಾನ್ನ ಸೂಪ ಘೃತಸಂಕುಲಂ
ಪರಿಪರಿಯ ತಾಳಲುಪ್ಪಿನಕಾಯ್ ಪಳಿದ್ಯ ಕ
ಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲರಸಾಯನದ ಸೀಕರಣೆಗಳನು
ಪರಮಮಧುಶರ್ಕರಾನೀಕಭಕ್ಷ್ಯಂಗಳಂ
ಪರಮಾನ್ನ ದಧಿ ದುಗ್ಧ ಮುಂತಾದ ಭೋಜ್ಯಪರಿ
ಕರಮನುರೆ ನೀಡಿಸಿದನಾ ಮಹಾಚರಕೊಲ್ದು ಚೆನ್ನಬಸವೇಶನಂದು ೬೦

ಕಚ್ಚರಿಯನುರೆ ಸವಿದು ಸವಿದು ತತ್ಸ್ವಾದಕೊ
ಲ್ದಚ್ಚರಿಯ ಮಾಡುತೆ ಪಳಿದ್ಯಂಗಳಂ ಸುರಿದು
ಮೆಚ್ಚುತುಂ ಕೆಲದ ಬಟ್ಟಲ ನವ್ಯಘೃತದ ಪರಿಮಳಕೆ ತಲೆಗಳನೊಲೆವುತೆ

ಆರು ಮುಖದಲ್ಲಿ ಹುಟ್ಟಿದ ನಿರ್ಮಲಸ್ವರೂಪನಾದ ಆವನು ಹನ್ನೆರಡು ಸಾವಿರ ಷಟ್ಸ್ಥಲ ಬ್ರಹ್ಮಿಗಳನ್ನು ಕರೆದುಕೊಂಡು ಮಿತಿಮೀರಿದ ಜಂಗಮಾರ್ಚನೆಯನ್ನು ಪ್ರೀತಿ-ಭಕ್ತಿಗಳಿಂದ ಮಾಡುತ್ತಿದ್ದನು. ೫೯. ಆ ಷಟ್ಸ್ಥಲಬ್ರಹ್ಮಿಗಳನ್ನು ವಿನಯದಿಂದ ಭೋಜನಶಾಲೆಗೆ ಕರೆದುಕೊಂಡುಹೋದನು. ಅಲ್ಲಿ ಸಾಲುಸಾಲಾಗಿ ಶ್ರೇಷ್ಠರತ್ನಗಳಿಂದ ಕೂಡಿ ಹೊಳೆಯುವ ಗದ್ದುಗೆಗಳ ಮೇಲೆ ಕೂಡಿಸಿದನು. ಅವರೆಲ್ಲರೂ ಕೈಕಾಲುಗಳನ್ನು ತೊಳೆದುಕೊಂಡು ಸತ್ಕ್ರಿಯೆಗಳಿಂದ ಮನಃಪೂರ್ವಕವಾಗಿ ಶಿವಪೂಜೆಯನ್ನು ಮಾಡಿದರು. ಅನಂತರ ಥಳಥಳಿಸುವ ಬಂಗಾರದ ಹರಿವಾಣಗಳಲ್ಲಿ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ನೀಡಿದರು. ೬೦. ಚೆನ್ನಬಸವಣ್ಣನು ಶ್ರೇಷ್ಠರಾದ ಜಂಗಮರಿಗೆ ಸುವಾಸನೆಯನ್ನು ಬೀರುವ ರಾಜಾನ್ನ, ಸಾರು, ತುಪ್ಪ ಮೊದಲಾದವುಗಳನ್ನು ನೀಡಿಸಿದನು. ಬಗೆಬಗೆಯ ಉಪ್ಪಿನಕಾಯಿಗಳನ್ನೂ, ಮೇಲೋಗರಗಳು, ಬಜ್ಜಿಯನ್ನು, ಬಾಳಕಗಳನ್ನು, ಮಾಗಿದ ಹಣ್ಣುಗಳ ರಸಾಯನಗಳ ಸೀಕರಣೆಗಳನ್ನು, ಜೇನು ಸಕ್ಕರೆಗಳಿಂದ ಕೂಡಿದ ಭಕ್ಷ್ಯಗಳನ್ನು, ಪಾಯಸ, ಮೊಸರು, ಹಾಲು ಮೊದಲಾದ ಭೋಜನದ ಪದಾರ್ಥಗಳನ್ನು ನೀಡಿಸಿದನು. ೬೧. ಕಚ್ಚಡಿಯನ್ನು ಮೆದ್ದು, ಅದರ ರುಚಿಗೆ ಮೆಚ್ಚಿ ಆಶ್ಚರ್ಯಪಟ್ಟರು. ಪಳಿದ್ಯ ಗಳನ್ನು ಸದ್ದಾಗುವಂತೆ ತಿಂದು ಮೆಚ್ಚಿದರು. ಪಕ್ಕದ ಬಟ್ಟಲಿನಲ್ಲಿದ್ದ ಆಗತಾನೆ ಕಾಸಿದ

CC-0. Jangamwadi Math Collection. Digitized by eGangotri

ಪೆಚ್ಚುತುಂ ಸೀಕರಣೆ ರಸಪಾನಗಳ ಸವಿಗೆ
ಪಚ್ಚಡಿಯು ಮೆಲ್ದದರ ರುಚಿಯು ಕೊಂಡಾಡುತ್ತೆ
ಸಚ್ಚಿದಾನಂದಸ್ವರೂಪ ನೀಂ ಬಾಳೆಂದು ಪರಸಿದರ್ ಪ್ರೀತಿಯಿಂದೆ ೬೧

ಪಾಯಸವನುಂಡು ಸವಿನೋಡಿದಿರೆಯಿದು ದಿವಿಜ
ರಾಯಂಗೆ ದುರ್ಲಭಂ ಮೇಣೊಂದು ಬಾರಿ ಕ
ಜ್ಜಾಯಮಂ ಸಲಿಸೆ ನೀವಿಂಪಹುದು ಪರುಷಿಗೀ ರುಚಿಯೆತ್ತಣಿಂ ಬಂದುದೋ
ಬಾಯ ಸವಿಯೊರೆತಪ್ಪುದು ಶಿವಶಿವಾ ಬಟ್ಟಲ ರ
ಸಾಯನವನೀಂಟೆ ಸುಧೆಯೆಣೆಯಹುದೆ ಪೇಳೆಂದು
ಪ್ರೀಯದಿಂದೋರೊರ್ವರೊಡನೆ ಮಾತಾಡುತಾರೋಗಿಸಿದರೇನೆಂಬೆನು ೬೨

ಪರಿಪರಿಯೊಳೆಸೆವ ಭೋಜನ ಪರಿಕರಂಗಳ ಸು
ಪರಿಮಳವನಾಚಾರಲಿಂಗಕ್ಕೆ ರಸವನಂ
ದಿರದೆ ಗುರುಲಿಂಗಕ್ಕೆ ರೂಪವನೆ ಶಿವಲಿಂಗಕದರ ಸತ್‌ಸ್ಪರ್ಶನವನೆ
ಚರಲಿಂಗಕೋರೊರ್ವರೊಳ್ ನುಡಿವ ಶಬ್ದಮಂ
ಪರಮಪ್ರಸಾದಲಿಂಗಕ್ಕೆ ಪರಿಣಾಮಮಂ
ಪರಮಹಾಲಿಂಗಕರ್ಪಿಸಿದರತಿಸುಯಜ್ಞಾನದಿಂದದೇಂ ಬಣ್ಣಿಸುವೆನು ೬೩

ಹರುಷದಿಂದಿಂತು ಷಡ್ವಿಧಲಿಂಗಮುಖದಿಂದೆ
ಪರಿಪರಿಯ ಷಡ್ರಸಾನ್ನಂಗಳಂ ಸವಿಸವಿದು
ಪರಿತುಷ್ಟರಾಗಿ ಹಸ್ತಂಗಳಂ ಪ್ರಕ್ಷಾಲನಂಗಳಂ ಮಾಡಿ ಬಳಿಕ

ತುಪ್ಪದ ಸುವಾಸನೆಗೆ ಮೆಚ್ಚಿ ತಲೆದೂಗಿದರು. ಸೀಕರಣೆ ಮತ್ತು ರಸಪಾನಗಳ ಸವಿಗೆ ಹಿಗ್ಗಿದರು. ಪಚ್ಚಡಿಯನ್ನು ಮೆದ್ದು ಅದರ ರುಚಿಯನ್ನು ಕೊಂಡಾಡುತ್ತ, 'ಸಚ್ಚಿದಾನಂದ ಸ್ವರೂಪನಾದ ಚೆನ್ನಬಸವಣ್ಣನೇ ನೀನು ಬಾಳು, ಎಂದು ಪ್ರೀತಿಯಿಂದ ಹರಸಿದರು. ೬೨. 'ಪಾಯಸವನ್ನು ತಿಂದು ರುಚಿಯನ್ನು ನೋಡಿದಿರಾ ? ಇದು ದೇವೇಂದ್ರನಿಗೂ ದೊರೆಯದು. ಮತ್ತೊಂದು ಸಾರಿ ಕಜ್ಜಾಯದ ರುಚಿ ನೋಡಿದರೆ ನಿಮಗೆ ಹಿತವಾಗುತ್ತದೆ. ಈ ತೊಪ್ಪೆಗೆ ಈ ರುಚಿ ಎಲ್ಲಿಂದ ಬಂತೊ ! ಇದರ ರುಚಿಗೆ ಬಾಯಲ್ಲಿ ನೀರೂರುತ್ತದೆ. ಶಿವ ಶಿವಾ, ಬಟ್ಟಲಿನಲ್ಲಿರುವ ರಸಾಯನವನ್ನು ಕುಡಿದರೆ ಅಮೃತವು ಇದಕ್ಕೆ ಸಮನಾಗುವುದೆ ? ಹೇಳಿ' ಎಂದು ಆನಂದದಿಂದ ಒಬ್ಬರಿಗೊಬ್ಬರು ಹೇಳುತ್ತಾ, ಮಾತನಾಡುತ್ತಾ ಊಟಮಾಡಿದರು. ಅದನ್ನು ವರ್ಣಿಸುವುದಕ್ಕಾಗದು. ೬೩. ಎಚ್ಚರದಿಂದ ವಿಧವಿಧವಾದ ಭೋಜನಪದಾರ್ಥಗಳ ಸುವಾಸನೆಯನ್ನು ಆಚಾರಲಿಂಗಕ್ಕೆ ಅರ್ಪಿಸಿದರು. ಅದರ ರಸವನ್ನು ಗುರುಲಿಂಗಕ್ಕೆ, ಅದರ ರೂಪವನ್ನು ಶಿವಲಿಂಗಕ್ಕೆ. ಅದರ ಸ್ಪರ್ಶವನ್ನು ಚರಲಿಂಗಕ್ಕೆ, ಒಬ್ಬರಿಗೊಬ್ಬರು ಮಾತನಾಡುವ ಶಬ್ದವನ್ನು ಪರಮಪ್ರಸಾದಲಿಂಗಕ್ಕೆ, ಅದರ ಪರಿಣಾಮವನ್ನು ಮಹಾಲಿಂಗಕ್ಕೆ ಅರ್ಪಿಸಿದರು. ೬೪. ಈ ರೀತಿಯಲ್ಲಿ ಸಂತೋಷದಿಂದ ಆರು ವಿಧವಾದ ಲಿಂಗಮುಖದಿಂದ ಬಗೆಬಗೆಯ ಷಡ್ರಸಾನ್ನಗಳನ್ನು ಚೆನ್ನಾಗಿ

CC-0. Jangamwadi Math Collection. Digitized by eGangotri

ಇರದೆ ತದ್ದ್ರವಮನೊಡನಾಯತಂಗೆಯ್ಯಲತಿ
ಪರಮಪರಿಣಾಮದಿಂ ಚೆನ್ನಬಸವೇಶ್ವರಂ
ಸರಸಕರ್ಪೂರ ತಾಂಬೂಲಂಗಳಂ ಕೊಡಿಸಿದಂ ಮಹಾಭಕ್ತಿಯಿಂದೆ ೬೪

ಬಿಡದಿಂತು ಜಂಗಮಾರ್ಚನೆಯನೊಲವಿಂ ಮಾಡು
ತೊಡನೆ ತತ್ಪಾದೋದಕಪ್ರಸಾದವನಾಂತು
ಕಡುವಿಲಾಸದೊಳೆ ಸದ್ಭಕ್ತಸಂತತಿವೆರಸಿ ಶಿವತತ್ತ್ವಗೋಷ್ಠಿಯಿಂದೆ
ಮೃಡಚಿತ್ಪ್ರಸಾದಸುಕುಮಾರನಮೃತೋದ್ಧಾರ
ನುಡುಪಸಮಶಾಂತನಾದ್ಯಂತರಹಿತಂ ಶರಣ
ರೊಡೆಯಂ ಜಿತೇಂದ್ರಿಯರ ತಲೆರನ್ನ ಚೆನ್ನಬಸವಂ ಸುಖದೊಳಿರುತಿರ್ದನು ೬೫

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೬೬

ಐದನೆಯ ಸಂಧಿ ಸಂಪೂರ್ಣ

ಸವಿದು ತೃಪ್ತರಾಗಿ, ಕೈಗಳನ್ನು ತೊಳೆದುಕೊಂಡರು. ಅನಂತರ ಗಂಧವನ್ನು ಸ್ವೀಕರಿಸಿದರು. ಆಗ ಪರಮ ತೃಪ್ತಿಯಿಂದ ಚೆನ್ನಬಸವಣ್ಣನು ಅವರಿಗೆ ಕರ್ಪೂರದ ಪರಿಮಳ ಮಿಶ್ರಿತವಾದ ತಾಂಬೂಲವನ್ನು ಮಹಾಭಕ್ತಿಯಿಂದ ಕೊಡಿಸಿದನು. ೬೪. ಈ ರೀತಿಯಾಗಿ ಒಂದೇ ಸಮನೆ, ಲೋಪವಿಲ್ಲದೆ ಜಂಗಮಾರ್ಚನೆಯನ್ನು ಭಕ್ತಿಯಿಂದ ಮಾಡಿದನು. ಅವರ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿದನು. ಬಹಳ ಉಲ್ಲಾಸದಿಂದ ಭಕ್ತರ ಗುಂಪಿನೊಡನೆ ಶಿವತತ್ತ್ವಗೋಷ್ಠಿಯಲ್ಲಿ ಇದ್ದನು. ಈ ರೀತಿಯಾಗಿ ಶಿವನ ಚಿತ್ಪ್ರಸಾದದ ಮಗನಾದ, ದೇವತೆಗಳನ್ನು ಉದ್ಧರಿಸಿದವನೂ, ಚಂದ್ರನಿಗೆ ಸಮನಾದ ಶಾಂತಗುಣವನ್ನುಳ್ಳವನೂ, ಆದಿ-ಅಂತ್ಯಗಳಿಲ್ಲದವನೂ, ಶರಣಜನರ ಒಡೆಯನೂ, ಜಿತೇಂದ್ರಿಯರಿಗೆ ತಲೆಮಣಿಯಂತಿರುವ ಚೆನ್ನಬಸವಣ್ಣನು ಸುಖದಿಂದ ಇರುತ್ತಿದ್ದನು. ೬೫. ಈ ರೀತಿಯಲ್ಲಿ ಶ್ರೇಷ್ಠವಾದ ಈ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಪ್ರೀತಿಯಿಂದ ಕೊಟ್ಟು ಕಾಪಾಡುವನು.

ಐದನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಆರನೆಯ ಸಂಧಿ

ಸೂಚನೆ : ಬಸವಂಗೆ ಪ್ರಾಣಲಿಂಗವನರಿಹಿಕೊಟ್ಟು ಸಂ
ತಸದಿ ಕಿಚ್ಚಿನ ಪವಾದಂ ಗೆಲ್ದು ಬಳಿಕಲಾ
ಬಸವನಸು ಪೋಗಲದನುಸಿರೆ ಮರಳಿಸಿ ಚೆನ್ನಬಸವಣ್ಣನೊಪ್ಪಿರ್ದನು

ಕಮಲಸಂಭವಮುಖ್ಯ ದಿವಿಜವಂದಿತಪಾದ
ಕಮಲ ವಿಮಲಸ್ಫಟಿಕಸಂಕಾಶ ಚಾರುತರ
ಕಮಲಧರ ವರಕಲಾಭೂಷ ಮಂಜುಳಭಾಷ ಜಗದೀಶ ಮುಕ್ತಿಕೋಶ
ಕಮಲಾರ್ಕಕೋಟಿಪ್ರಭಾಪೂರ ಗುಣಸಾರ
ಕಮಲಸಖಪುತ್ರಗಾತ್ರಾರಣ್ಯವನದಾವ
ಕಮಲತ್ರಿತ(ಯ) ಪ(ರಿ)ಗ್ರಹ ಮಹಾಮಹಿಮ ನೀಂ ಸಲಹು ಪಂಪಾವಲ್ಲಭ ೧

ಇಂತಿರುತ್ತಿರಲಿತ್ತಲೊಂದಿನದೊಳುದಯಸಮ
ನಂತರದೊಳಾ ಬಸವನತ್ಯಧಿಕ ಶಿವಪೂಜೆ
ಯಂ ತೀರ್ಚಿ ಬಳಿಕಿನ್ನು ಚೆನ್ನಬಸವಣ್ಣನಿಂದಂ ಮಹಾಷಟ್ಸ್ಥಲವನು
ತಾಂ ತಿಳಿಯಬೇಕೆನುತೆ ನಡೆಗೊಳಲ್ ಗಣಕುಲಂ
ಪಿಂತೆ ಬರೆ ಪಡಿಯರರ ತಂಡಮುಗ್ಗಡಿಸಲೋ
ರಂತಳಿಯನರಮನೆಯ ಬಾಗಿಲ್ಗಳಂ ಕಳೆದು ಬರುತಿರ್ದನುತ್ಸವದೊಳು ೨

ಸೂಚನೆ : ಬಸವಣ್ಣನಿಗೆ ಪ್ರಾಣಲಿಂಗದ ಸ್ವರೂಪವನ್ನು ತಿಳಿಸಿಕೊಟ್ಟು ಕಿಚ್ಚಿನ ಪವಾಡವನ್ನು ಗೆದ್ದು ಅನಂತರ ಬಸವಣ್ಣನು ಸಾಯಲು ಅವನನ್ನು ಮತ್ತೆ ಬದುಕಿಸಿ ಚೆನ್ನಬಸವಣ್ಣನು ಕಂಗೊಳಿಸುತ್ತಿದ್ದನು. ೧. ಬ್ರಹ್ಮನೇ ಮೊದಲಾದ ಮುಖ್ಯ ದೇವತೆಗಳಿಂದ ತನ್ನ ಪಾದಕಮಲಗಳಿಗೆ ನಮಸ್ಕರಿಸಿಕೊಳ್ಳುವವನೆ ; ಮನೋಹರವಾದ, ನಿರ್ಮಲವಾದ ಸ್ಫಟಿಕದ ಕಾಂತಿಯುಳ್ಳವನೆ ; ಲಾವಣ್ಯಮಯ ನಾದ ಶಶಿಯನ್ನು ಭೂಷಣವಾಗಿ ಉಳ್ಳವನೆ ; ಮಧುರಭಾಷಿಯೆ, ಜಗದೀಶನೆ, ಮುಕ್ತಿಗೆ ಆಗರವಾದವನೆ ; ಕೋಟಿ ಸೂರ್ಯಪ್ರಕಾಶವುಳ್ಳವನೆ ; ಗುಣಸಾರನೆ ; ಮೃತ್ಯುವೆಂಬ ಅರಣ್ಯವನ್ನು ಸುಟ್ಟುಹಾಕುವ ಮೃತ್ಯುಂಜಯನೆ ; ಕಮಲ ಶಬ್ದದ ಅರ್ಥವಾದ (ಗಂಗಾ) ಜಲ, ತಾವರೆ ಮತ್ತು ಜಿಂಕೆಗಳನ್ನು ಧರಿಸಿರುವ ಮಹಾತ್ಮನೆ, ಪಂಪಾ ವಿರೂಪಾಕ್ಷ ಸ್ವಾಮಿಯೇ ಕಾಪಾಡು. ೨. ಹೀಗೆ ಇರುತ್ತಿರಲು ಒಂದು ದಿನ ಬೆಳಗಿನ ಸಮಯದಲ್ಲಿ ಬಸವಣ್ಣನು ಪರಶಿವನ ಪೂಜೆಯನ್ನು ಮಾಡಿ ಮುಗಿಸಿ, ಅನಂತರ ಚೆನ್ನ ಬಸವಣ್ಣನಿಂದ ಮಹಾ ಷಟ್ಸ್ಥಲವನ್ನು ತಿಳಿದುಕೊಳ್ಳಬೇಕೆಂದು ಹೊರಟನು. ಅವನ ಹಿಂದೆ ಭಕ್ತರ ಗುಂಪೇ ಬಂದಿತು. ಬಾಗಿಲು ಕಾಯುವವರು ಪರಾಕು ಹೇಳುತ್ತಿರಲು,

CC-0. Jangamwadi Math Collection. Digitized by eGangotri

ಅನ್ನೆಗಂ ಬಾಗಿಲವನಿರದೊರ್ವನೈತಂದು
ಚೆನ್ನಬಸವಣ್ಣಂಗೆ ಕೈಮುಗಿದು ತತ್ತ್ವಸಂ
ಪನ್ನ ಕೇಳಿದೆ ದಣ್ಣಾಯಕ ಬಸವರಾಜನೈತಂದನೆನೆ ಭೋಂಕನೆದ್ದು
ತನ್ನವರ್ಗಗಳೊಡನಿದಿರ್ವರೆ ಕಂಡು ಬಸವಣ್ಣ
ಸನ್ನುತಸುಭಕ್ತಿಯಿಂ ನಮಿಸೆ ಕೆಲಸಿಡಿದು ಬೇ
ಗನ್ನಮಿಸಬಪ್ಪಳಿಯನಂ ಕಂಡು ಸೆಳೆದು ಬಿಗಿಯಪ್ಪಿದಂ ಹರುಷದಿಂದ ೩

ಸಲೆ ಮೋಹರಸವಧಿಕಭಕ್ತಿರಸಮೊಡವೆರೆದು
ತುಳುಕಲಳಿಯನ ನೋಡಿ ಹಿಗ್ಗುತುಂ ಹರುಷದಿಂ
ಹಲವು ಪರಿಯಿಂ ನುತಿಸಿ ರತ್ನಮಯಮಂಟಪದೊಳೆಸೆವ ಗದ್ದುಗೆಯ ಮೇಲೆ
ಒಲಿದು ಕುಳ್ಳಿರಿಸಿ ತಾನುಂ ಕುಳಿತು ಷಟ್ಸ್ಥಲಂ
ದಿಳಿಯಬೇಕೆನುತಲತಿವಿನಯದಿಂ ಸಕಲಗಣ
ಕುಲವನೆಡಬಲದೊಳ್ ಸಮೀಪದೊಳ್ ಕುಳ್ಳಿರಿಸಿದಂ ಬಸವನಳ್ತಿಯಿಂದೆ ೪

ಈ ತೆರದೊಳೊಲಿದು ಕುಳ್ಳಿರ್ದು ಬಸವಣ್ಣನತಿ
ಪ್ರೀತಿ ಮಿಗಲಳಿಯನ ಮೊಗಂ ನೋಡಿ ನಗುತಾದು
ದೇ ತತ್ತ್ವನಿಧಿ ಶಿವಾರ್ಚನೆಯೆನಲ್ ಚೆನ್ನಬಸವಂ ನಕ್ಕು ವಿನಯದಿಂದೆ

ಬಸವಣ್ಣನು ಬಹುಸಡಗರದಿಂದ ಅಳಿಯನಾದ ಚೆನ್ನಬಸವಣ್ಣನ ಅರಮನೆಯ ಬಾಗಿಲನ್ನು ದಾಟಿ ಒಳಕ್ಕೆ ಬರುತ್ತಿದ್ದನು. ೩. ಅಷ್ಟರಲ್ಲಿ ಬಾಗಿಲು ಕಾಯುವವನೊಬ್ಬನು ಓಡಿ ಬಂದು ಚೆನ್ನಬಸವಣ್ಣನಿಗೆ ಕೈಮುಗಿದು, 'ಎಲೈ ತತ್ತ್ವಸಂಪನ್ನನೆ ಕೇಳು, ಇದೊ, ದಂಡನಾಯಕನಾದ ಬಸವರಾಜನು ಬಂದನು' ಎಂದು ಹೇಳಿದನು. ಚೆನ್ನಬಸವಣ್ಣನು ಕೂಡಲೆ ಮೇಲೆದ್ದು ತನ್ನ ಪರಿವಾರದೊಡನೆ ಇದಿರುಗೊಳ್ಳಲು, ಅವನನ್ನು ಕಂಡು ಬಸವಣ್ಣನು ಭಕ್ತಿಯಿಂದ ನಮಸ್ಕರಿಸಿದನು. ಆ ತಕ್ಷಣ ಪಕ್ಕಕ್ಕೆ ಸರಿದು ತನಗೆ ನಮಸ್ಕರಿಸಲು ಬರುತ್ತಿರುವ ಅಳಿಯನನ್ನು ನೋಡಿ, ಬಸವಣ್ಣನು ಕೈಚಾಚಿ ಸೆಳೆದು, ಆನಂದದಿಂದ ಬಿಗಿಯಾಗಿ ಅಪ್ಪಿಗೊಂಡನು. ೪. ಅವನ ಮೇಲಿನ ಮೋಹ ಮತ್ತು ಭಕ್ತಿಗಳು ಒಂದಾಗಿ ತುಂಬಿ ತುಳುಕುತ್ತಿರಲು, ಅಳಿಯನನ್ನು ನೋಡಿ ಸಂತೋಷದಿಂದ ಬಸವಣ್ಣನ ಮುಖ ಹಿಗ್ಗಿತು. ಅವನನ್ನು ಹಲವು ರೀತಿಯಿಂದ ಸ್ತುತಿಸಿದನು. ರತ್ನಖಚಿತವಾದ ಮಂಟಪದಲ್ಲಿದ್ದ ಗದ್ದುಗೆಯ ಮೇಲೆ ಅವನನ್ನು ಪ್ರೀತಿಯಿಂದ ಕುಳ್ಳಿರಿಸಿ ತಾನೂ ಕುಳಿತನು. ಎಲ್ಲ ಭಕ್ತರನ್ನೂ ಎಡ ಬಲದಲ್ಲಿ ತನ್ನ ಸಮೀಪದಲ್ಲಿ ಪ್ರೀತಿಯಿಂದ ಕುಳ್ಳಿರಿಸಿ. ಚೆನ್ನಬಸವಣ್ಣನನ್ನು ಕುರಿತು, ಷಟ್ಸ್ಥಲತತ್ತ್ವವನ್ನು ತಿಳಿಯಹೇಳಬೇಕೆಂದು ಬಹುವಿನಯದಿಂದ ಕೇಳಿದನು. ೫. ಈ ರೀತಿಯಲ್ಲಿ ಕುಳಿತಿದ್ದ ಬಸವಣ್ಣನು ಹೆಚ್ಚಾದ ಪ್ರೀತಿಯಿಂದ ಅಳಿಯನ ಮುಖವನ್ನು ನೋಡಿ ನಗುತ್ತಾ, 'ಎಲೈ ತತ್ತ್ವನಿಧಿಯಾದ ಚೆನ್ನಬಸವಣ್ಣ, ಶಿವಾರ್ಚನೆ ಆಯಿತೆ ?' ಎಂದು ಕೇಳಿದನು. ಆ ಮಾತಿಗೆ ಚೆನ್ನಬಸವಣ್ಣನು ನಕ್ಕು ವಿನಯದಿಂದ

CC-0. Jangamwadi Math Collection. Digitized by eGangotri

ಜ್ಯೋತಿಯಿಲ್ಲದ ಕಣ್ಗೆ ಬೆಳಗುಂಟೆ ಗುರುವಿನ ಮ
ಹಾತಿಶಯದೀಕ್ಷೆಯಿಲ್ಲದೆ ಶಿವಾರ್ಚನೆಯೆಂಬ
ಮಾತುಂಟೆ ಸೆಜ್ಜೆಯಂ ಬಿಚ್ಚೀಶ್ವರಾರ್ಚನೆಗನುಜ್ಞೆಯಂ ಮಾಡೆಂದನು ೫

ಹರಹರಾ ಲೋಕದೊಳಗೆಲ್ಲಿಯುಂ ಶಿಷ್ಯಂಗೆ
ಗುರುವಿನುಪದೇಶಮುಂಟೆಂಬುದಂ ಬಲ್ಲೆನಾಂ
ಗುರುವಿಂಗೆ ಶಿಷ್ಯನುಪದೇಶಮಂ ಮಾಡಿದೆಡೆಯುಂಟೆ ನೀನೆಲ್ಲರಂತೆ
ನರನೆ ಪರಶಿವ ಚಿತ್ಕಲಾನಂದರೂಪ ತ
ತ್ತ್ವರಹಸ್ಯಮಂ ತಿಳಿಪಿ ನಮ್ಮ ರಕ್ಷಿಸಬಂದ
ಗುರುಸಂಗಮೇಶ್ವರಂ ನೀಂ ನಿನಗೆ ದೀಕ್ಷೆಯಂ ಮಾಡಲಂಜುವೆನೆಂದನು ೬

ಎನಲಂಜಲೇತಕೆಲೆ ಬಸವಣ್ಣ ನೀಂ ಕೊಟ್ಟ
ಘನಲಿಂಗಮಂ ಕೊಂಡಡಂಗಿದನಿಮಿಷನಂದ
ಮೆನಗಿಲ್ಲ ಬಲ್ಮೆಗೈವವನಲ್ಲಮೀ ಲಿಂಗಲಕ್ಷಣಂಗಳನಾದೊಡೆ
ಎನಗೆ ತಿಳಿಪೆಂದು ಸೆಜ್ಜೆಯ ಲಿಂಗಮಂ ತೆಗೆದು
ವಿನಯದಿಂ ಕೈಯೊಳಿಡೆ ಲಿಂಗಲಕ್ಷಣಮನೆ
ಳ್ಳನಿತು ಪರಿಕಿಸಲಾಗದೆನುತೆ ಮರಳೀಯಲಿದು ಗುರುದೀಕ್ಷೆಯೆನಗೆಂದನು ೭

ಎಂದೊಡೆನ್ನಯ ಹಿಂದನೆಚ್ಚರಿಸಿ ಕರುಣದಿಂ
ಮುಂದಣ ಭವಂಗಳೆವ ತಂದೆ ನೀನಿರಲಾವ
ದಂದುಗವುದಿಲ್ಲನಿಮಿಷಂಗೆ ಕೊಟ್ಟೊಡೆ ಕೊಂಡಡಂಗಿದ ಮಹಾಲಿಂಗವು

'ಹಚ್ಚಿದ ದೀಪವಿಲ್ಲದೆ ಕಣ್ಣುಗಳಿಗೆ ಬೆಳಕುಂಟೆ ? ಗುರುವಿನಿಂದ ಮಹಾಪವಿತ್ರವಾದ ದೀಕ್ಷೆಯಿಲ್ಲದೆ ಶಿವಾರ್ಚನೆ ಎಂಬುದು ಇದೆಯೆ ? ಕರಡಿಗೆಯನ್ನು ಬಿಚ್ಚಿ ಈಶ್ವರನ ಪೂಜೆಗೆ ಅಪ್ಪಣೆಯನ್ನು ಮಾಡು' ಎಂದನು. ೬. 'ಶಿವ ಶಿವಾ ! ಪ್ರಪಂಚದಲ್ಲಿ ಶಿಷ್ಯನಿಗೆ ಗುರುಗಳು ಉಪದೇಶಮಾಡುವುದುಂಟು ಎಂಬುದನ್ನು ನಾನು ಬಲ್ಲೆ. ಆದರೆ ಗುರುವಿಗೆ ಶಿಷ್ಯನು ಉಪದೇಶಮಾಡಿದುದು ಉಂಟೆ ? ನೀನು ಎಲ್ಲರಂತೆ ಸಾಮಾನ್ಯ ಮನುಷ್ಯನೆ ? ಪರಶಿವನ ಚಿತ್ಕಳಾನಂದರೂಪನು. ಶಿವತತ್ತ್ವ ರಹಸ್ಯವನ್ನು ತಿಳಿಸಿ ನಮ್ಮನ್ನು ಕಾಪಾಡಲು ಬಂದ ಗುರುಸಂಗಮೇಶ್ವರ ನೀನು. ನಿನಗೆ ದೀಕ್ಷೆಯನ್ನು ಕೊಡಲು ಅಂಜುತ್ತೇನೆ' ಎಂದನು. ೭. ಹೀಗೆನ್ನಲು 'ಹೆದರುವುದು ಏತಕ್ಕೆ ಬಸವಣ್ಣ ? ನೀನು ಕೊಟ್ಟ ಘನ ಶಿವಲಿಂಗವನ್ನು ಸ್ವೀಕರಿಸಿ ಮಾಯವಾದ ಅನಿಮಿಷಯ್ಯನಂತೆ ಅದೃಶ್ಯನಾಗುವ ಸಾಮರ್ಥ್ಯವು ನನಗಿಲ್ಲ. ಈ ಲಿಂಗಲಕ್ಷಣಗಳನ್ನಾದರೂ ಎನಗೆ ತಿಳಿಸು' ಎಂದು ಸೆಜ್ಜೆಯಿಂದ ಲಿಂಗವನ್ನು ತೆಗೆದು ಚೆನ್ನಬಸವಣ್ಣನು ವಿನಯದಿಂದ ಅವನ ಕೈಯಲ್ಲಿಟ್ಟನು. 'ಲಿಂಗಲಕ್ಷಣವನ್ನು ಸ್ವಲ್ಪವೂ ವಿವರಿಸಲು ಸಾಧ್ಯವಿಲ್ಲ' ಎಂದು ಹೇಳುತ್ತಾ ಲಿಂಗವನ್ನು ಬಸವಣ್ಣನು ಚೆನ್ನಬಸವಣ್ಣನಿಗೇ ಹಿಂತಿರುಗಿಸಿದನು. 'ಇದೇ ನನಗೆ ಗುರುದೀಕ್ಷೆ' ಎಂದು ಚೆನ್ನಬಸವಣ್ಣನು ಹೇಳಿದನು. ೮. ಎನ್ನಲಾಗಿ 'ನನ್ನ ಹಿಂದಿನ ವಿಷಯಗಳನ್ನು ಎಚ್ಚರಿಸಿ ಮುಂದಿನ ಭವವನ್ನು ಕಳೆಯುವ

CC-0. Jangamwadi Math Collection. Digitized by eGangotri

ಇಂದೆನಗೆ ಸಾಧ್ಯಮಪ್ಪುದು ಸಂಗಮೇಶ್ವರನ
ದೆಂದೆತ್ತಿಕೊಂಬನದನರಿಪಿ ಸಲಹೆನುತಡಿಗೆ
ವಂದಿಸಿದ ಬಸವದಂಡೇಶಂಗೆ ಮಗುಳ್ದೆರಗಿ ಚೆನ್ನಬಸವಂ ನುಡಿದನು ೮

ಎಳೆಯ ಹೂಮಿಡಿಗಳಂ ಹರಿದು ಹಣ್ಣಂ ಮಾಡ
ಲಳವೆ ನೀಂ ಬಂದ ಮಣಿಹದೊಳಗೆಳ್ಳನಿತುಮಂ
ಕಳೆದುದಿಲ್ಲೀಗ ನೀನಿಷ್ಟಲಿಂಗವನರ್ಚಿಪಂತಮಲಹೃದಯದಲ್ಲಿ
ಒಲಿದು ಪೂಜಿಸಿ ಪ್ರಾಣಲಿಂಗ ಲಿಂಗಪ್ರಾಣ
ದೊಳಗರ್ಪಿತಾವಧಾನವನರಿದು ಷಟ್ಸ್ಥಲಂ
ದಿಳಿದಲ್ಲದೀ ಬರಿಯ ಮಾತಿಂದೆ ಸಾಧ್ಯಮಲ್ಲೆನೆ ಬಸವನಿಂತೆಂದನು ೯

ಲೇಸಂ ನಿರೂಪಿಸಿದೆ ಚೆನ್ನಬಸವಣ್ಣ ನಾ
ನೀಸು ದಿನಪರಿಯಂತರಂ ಬಹಿಃಕ್ರಿಯೆಗಳಿಂ
ಹೂಸಿ ಹುಂಡನಮಾಡಿ ಹೊರಗೆ ನಾಂ ಪೂಜಿಸಿ ವೃಥಾ ದಿನಂಗಳು ಸವೆದುವು
ಓಸರಿಸದೀ ಪ್ರಾಣಲಿಂಗದನುವಂ ಮುಂದೆ
ಲೇಸೆನಿಪ ಷಟ್ಸ್ಥಲವಿಭೇದಮಂ ತಿಳಿಪೆನ
ಲ್ಕಾ ಸಕಲಗಣರೆಲ್ಲರರಿವಂತೆ ತಿಳಿಪಲ್ಕೆ ಬಸವಣ್ಣನಿಂತೆಂದನು ೧೦

ತಂದೆ ನೀನು. ನೀನಿರುವಾಗ ನನಗೆ ಯಾವ ಕಷ್ಟವೂ ಇಲ್ಲ. ಅನಿಮಿಷಯ್ಯನು ತೆಗೆದು ಕೊಂಡು ಮಾಯವಾದ ಮಹಾಲಿಂಗವು ಮತ್ತೆ ಯಾವಾಗ ದೊರೆಯುತ್ತದೆ ? ಸಂಗಮೇಶ್ವರನು ನನ್ನನ್ನು ಎತ್ತಿಕೊಂಡು ಉದ್ಧರಿಸುವನು ? ಎಂಬುದನ್ನು ತಿಳಿಸಿ ನನ್ನನ್ನು ಕಾಪಾಡು' ಎಂದು ಹೇಳುತ್ತ ಬಸವದಂಡೇಶನು ನಮಸ್ಕರಿಸಿದನು. ಹೀಗೆ ನಮಸ್ಕರಿಸಿದ ಬಸವಣ್ಣನಿಗೆ ತಾನು ಮತ್ತೆ ನಮಸ್ಕಾರಮಾಡಿ ಚೆನ್ನಬಸವಣ್ಣನು ಹೀಗೆ ಹೇಳಿದನು. ೯. 'ಎಳೆಯದಾದ ಹೂವು ಮತ್ತು ಹೀಚುಗಾಯಿಗಳನ್ನು ಕಿತ್ತು ಹಣ್ಣನ್ನು ಮಾಡಲು ಸಾಧ್ಯವೆ ? ನೀನು ಬಂದ ಕಾರ್ಯಭಾರವು ಸ್ವಲ್ಪವೂ ಮುಗಿದಿಲ್ಲ. ಈಗ ನೀನು ಇಷ್ಟಲಿಂಗವನ್ನು ನಿರ್ಮಲವಾದ ಹೃದಯದಲ್ಲಿ ಪೂಜಿಸುವಂತೆ ಪ್ರೀತಿಯಿಂದ ಪ್ರಾಣ ಲಿಂಗವನ್ನು ಪೂಜಿಸು. ಲಿಂಗದಲ್ಲಿ ನಿನ್ನ ಪ್ರಾಣವನ್ನು ಅರ್ಪಿಸಿ ಸದ್ಭಾವಗಳನ್ನು ಅರಿತು ಷಟ್ಸ್ಥಲವನ್ನು ತಿಳಿದುಕೊಂಡಲ್ಲದೆ ಬರಿಯ ಮಾತಿನಿಂದ ಸಾಧ್ಯವಿಲ್ಲ' ಎಂದನು. ಅದಕ್ಕೆ ಬಸವಣ್ಣನು ಹೀಗೆ ಹೇಳಿದನು, ೧೦. 'ಚೆನ್ನಬಸವಣ್ಣ, ಒಳ್ಳೆಯ ಮಾತನ್ನೇ ಹೇಳಿದೆ. ನಾನು ಇಷ್ಟು ದಿನಗಳೂ ಬಹಿರಂಗಕ್ರಿಯೆಗಳಿಂದ ಲೇಪಿಸಿ ಸೋಮಾರಿಯಾಗಿದ್ದು ಹೊರಗೆ ಮಾತ್ರ ಪೂಜಿಸಿ ದಿನಗಳು ವ್ಯರ್ಥ್ಯವಾಗಿ ಕಳೆದು ಹೋದುವು. ಅನುಮಾನಿಸದೆ ಪ್ರಾಣಲಿಂಗದ ರೀತಿಯನ್ನು, ಮುಂದೆ ಒಳ್ಳೆಯದೆನ್ನುವ ಷಟ್ಸ್ಥಲಗಳ ಬಗೆಯನ್ನೂ ನನಗೆ ತಿಳಿಸು' ಎನ್ನಲು, ಎಲ್ಲ ಗಣಗಳಿಗೂ ಅರ್ಥವಾಗುವಂತೆ ಚೆನ್ನಬಸವಣ್ಣನು ಷಟ್ಸ್ಥಲತತ್ವವನ್ನು ತಿಳಿಸಿದನು. ಆಗ ಬಸವಣ್ಣನು ಹೀಗೆ ಹೇಳಿ

CC-0. Jangamwadi Math Collection. Digitized by eGangotri

ಎನ್ನ ಸದ್ಗುರುವೆ ಸುರತರುವೆ ಮುಕ್ತಿಯ ಕರುವೆ
ಚೆನ್ನಬಸವೇಶ ಭವನಾಶ ನೀಂ ಕರುಣದಿಂ
ಚೆನ್ನಾಗಿ ಪ್ರಾಣಲಿಂಗದ ನೆಲೆಯನರಿಪಿ ಕಿಡಿಸಿದೆ ಭವಭವಾಂತರವನು
ಇನ್ನಿಂದಲೆನಗೆ ಸಂಗನ ಬಸವನೆಂಬ ಪೆಸ
ರಿನ್ನಾದುದೀಗಲನಿಮಿಷನ ವೃತ್ತಾಂತಮಂ
ಚೆನ್ನಾಗಿ ತಿಳಿಪೆನಲ್ ಸುಜ್ಞಾನದಿಂದರಿದು ಚೆನ್ನಬಸವಂ ಪೇಳ್ದನು ೧೧

ಆಲಿಸನಿಮಿಷಗಮಲಲಿಂಗಮಂ ನೀನಿತ್ತ
ಮೇಲೆ ತಲ್ಲಿಂಗದೊಳ್ ಮನ ಲೀನವಾಗಿ ಕ
ಣ್ಣಾಲಿಗಳ್ ನಟ್ಟು ದಿಟ್ಟಿಯಲಿ ನಿಬ್ಬೆರಗಾಗಿ ನಿಜಸುಖಸಮಾಧಿಯೊಳಿರೆ
ಪೇಳಲೇನಲ್ಲಮಪ್ರಭುವಲ್ಲಿಗೈತಂದು
ಮೇಳದಿಂದಾತನಂಗೈಲಿಂಗಮಂ ಕೊಂಡು
ಲೀಲೆಯಿಂ ನಿನ್ನ ಮನೆಗೈತಹಂ ನಿನ್ನಯ ಮಹಾತ್ಮೆಯಂ ಪೊಗಳಲಳವೇ ೧೨

ಆಲಿಸೆಲೆ ಬಸವ ನೀಂ ಪರಶಿವನ ನೇಮದಿಂ
ದೇಳುನೂರೆಪ್ಪತ್ತಮರಗಣಂಗಳ್ವೆರಸಿ
ಲೀಲೆಯಿಂ ವೀರಶೈವಾಚಾರವಂ ಪ್ರತಿಷ್ಠಿಸಲೆಂದು ಕರುಣದಿಂದೆ

ವನು. ೧೧. 'ನನ್ನ ಸದ್ಗುರುವೆ, ಮನೋಭೀಷ್ಟವನ್ನು ಸಲ್ಲಿಸುವ ಕಲ್ಪತರುವೆ, ಮುಕ್ತಿಯ ನೆಲೆಯೆ. ಭವನಾಶನೆ, ಚೆನ್ನಬಸವೇಶನೆ, ನೀನು ಕರುಣೆಯಿಂದ ಪ್ರಾಣಲಿಂಗದ ಸ್ವರೂಪವನ್ನು ಚೆನ್ನಾಗಿ ತಿಳಿಸಿ, ನನ್ನ ಜನ್ಮ ಜನ್ಮಾಂತರಗಳನ್ನು ಹೋಗಲಾಡಿಸಿದೆ. ಇನ್ನು ಮುಂದೆ ನಿನ್ನಿಂದ ನನಗೆ ಸಂಗನಬಸವಣ್ಣ ಎಂಬ ಹೆಸರಾಯಿತು. ಈಗ ಅನಿಮಿಷಯ್ಯನ ವಿಷಯವನ್ನು ಪೂರ್ಣವಾಗಿ ತಿಳಿಸು' ಎಂದು ಹೇಳಿದನು. ಆಗ ಚೆನ್ನಬಸಣ್ಣನು ಅದನ್ನು ತನ್ನ ಸುಜ್ಞಾನದಿಂದ ತಿಳಿದುಕೊಂಡು ಹೇಳಿದನು. ೧೨. 'ಕೇಳು, ನೀನು ಅನಿಮಿಷಯ್ಯನಿಗೆ ಪರಿಶುದ್ಧವೂ ಪವಿತ್ರವೂ ಆದ ಲಿಂಗವನ್ನು ಕೊಟ್ಟಮೇಲೆ ಆ ಲಿಂಗದಲ್ಲಿಯೇ ಅವನ ಮನಸ್ಸು ಐಕ್ಯವಾಗಿ ಅವನ ಕಣ್ಣಾಲಿಗಳು ಆ ಲಿಂಗದಲ್ಲಿಯೇ ನೆಟ್ಟವು. ಹೀಗೆ ನಿಬ್ಬೆರಗಾದ ದೃಷ್ಟಿಯಿಂದ ನೋಡುತ್ತ ಶಾಶ್ವತವಾದ ಸುಖದ ಸಮಾಧಿಯಲ್ಲಿರಲು ಅಲ್ಲಮಪ್ರಭುವು ಅಲ್ಲಿಗೆ ಬಂದು ಲೀಲೆಯಿಂದ ಆತನ ಅಂಗೈಯಲ್ಲಿರುವ ಲಿಂಗವನ್ನು ಸ್ವೀಕರಿಸಿ ಸಂತೋಷದಿಂದ ನಿನ್ನ ಮನೆಗೆ ಬರುತ್ತಾನೆ. ನಿನ್ನ ಮಹಿಮೆಯನ್ನು ಹೊಗಳಲು ಸಾಧ್ಯವೆ ?' ೧೩. 'ಕೇಳಯ್ಯ ಬಸವಣ್ಣ, ನೀನು ಈಶ್ವರನ ಅಪ್ಪಣೆಯಂತೆ ವೀರಶೈವಧರ್ಮವನ್ನು ಸ್ಥಾಪಿಸಬೇಕೆಂದು ಲೀಲೆಯಿಂದ ಏಳನೂರ ಎಪ್ಪತ್ತು ಅಮರಗಣಗಳ ಜೊತೆಯಲ್ಲಿ

CC-0. Jangamwadi Math Collection. Digitized by eGangotri

ಭೂಲೋಕಕ್ಕೈತಂದೆ ನಿನ್ನ ಮಹಿಮೆಯನೊಲ್ದು
ಪೇಳಲೆನ್ನಳವೆ ನೀನನಿಮಿಷಂಗೊಲಿದಿತ್ತ
ಮೇಲೆ ತಲ್ಲಿಂಗದೊಳ್ ಬೆರಗಾಗಿ ನಿಜಸುಖಸಮಾಧಿಯೊಳಗಿರುತಿರ್ದನು ೧೩

ಇಂತು ನಿತ್ಯಾನಂದಸೌಖ್ಯದಿಂದಿರ್ಪ ಸಮ
ಯಂತರದೊಳಲ್ಲಮಪ್ರಭುವೆನಿಪ ಜಂಗಮಂ
ತಾಂ ತಡೆಯದಲ್ಲಿಗೈತಂದಾತನಂಗೈಯ ಲಿಂಗಮಂ ತೆಗೆದುಕೊಂಡು
ಮುಂತು ನಿಜಸುಖದೊಳೋಲಾಡುತುಂ ಪಾಡುತುಂ
ಮುಂತೆ ನಿನ್ನಮಳನಿಜಭಕ್ತಿಯುಂ ನೋಡುವತಿ
ಸಂತಸದೊಳೈತರ್ಪನೆಲೆ ಬಸವ ನಿನ್ನಯ ಮಹಾತ್ಮೆಯುಂ ತಿಳಿಯಲಳವೇ ೧೪

ಜಂಗಮಪ್ರಾಣಿ ನೀನೆಂಬುದಂ ಕೇಳುತುಂ
ಜಂಗಮಂ ನಿನ್ನ ಮನೆಗೈತಹಂ ನೀಂ ಮಾಳ್ಪ
ಜಂಗಮಾರ್ಚನೆಯ ತೆರನಿಂತಲ್ಲ ನಿನ್ನ ಮನೆಯೊಳಗುದಾಸೀನದಿಂದೆ
ಲಿಂಗಶೋಭರುಮಂಗಶೋಭರುಮೆನಿಪ್ಪ ಘನ
ಜಂಗಮವನಿರಿಸಿ ಕೊಂಡಿರಬಾರದಲ್ಲಮಂ
ಜಂಗಮಸ್ಥಲವಾಂತು ನಿನ್ನ ಮನೆಗೈತರಲ್ ಕಾಣ್ಬುದಘಟಿತವೆಂದನು ೧೫

ಅದುಕಾರಣಂ ಮಹಂತಿಂಗೊಲ್ದು ಮಠಗಳಂ
ಹದುಳನರಿದೊಡನೆ ಕಟ್ಟಿಸಿಯವರನಿಂಬಿಟ್ಟು
ಪದಪಿನಿಂದಿಪ್ಪ ಲಕ್ಕದ ಮೇಲೆ ತೊಂಬತಾರ್ಸಾಸಿರ ಸುಜಂಗಮವನು

ಭೂಲೋಕಕ್ಕೆ ಬಂದೆ. ನಿನ್ನ ಮಹಿಮೆಯನ್ನು ವರ್ಣಿಸಲು ನನಗೆ ಅಸಾಧ್ಯ. ನೀನು ಅನಿಮಿಷಯ್ಯನಿಗೆ ಪ್ರೀತಿಯಿಂದ ಲಿಂಗವನ್ನು ಕೊಟ್ಟ ಮೇಲೆ ಅವನು ಆ ಲಿಂಗದಲ್ಲಿಯೇ ವಿಸ್ಮಯಗೊಂಡು ತನ್ನ ಸುಖದ ಸಮಾಧಿಸ್ಥಿತಿಯಲ್ಲಿ ಇರುತ್ತಿದ್ದಾನೆ'. ೧೪. 'ಈ ರೀತಿಯಲ್ಲಿ ಶಾಶ್ವತವಾದ ಆನಂದದ ಸುಖದಲ್ಲಿ ಇದ್ದಾಗ ಅಲ್ಲಮಪ್ರಭು ಎಂಬ ಜಂಗಮನು ಅಲ್ಲಿಗೆ ಬಂದು, ಆತನ ಅಂಗೈಯ ಲಿಂಗವನ್ನು ತಾನು ತೆಗೆದುಕೊಂಡು, ತನ್ನ ಸುಖದಲ್ಲಿ ಮೈಮರೆಯುತ್ತ ಹಾಡುತ್ತಾ ನಿನ್ನ ನಿರ್ಮಲವಾದ ಪರಿಶುದ್ಧವಾದ ಭಕ್ತಿಯನ್ನು ನೋಡಲು ಅತಿಸಂತೋಷದಿಂದ ಬರುತ್ತಾನೆ. ಎಲೆ ಬಸವಣ್ಣ, ನಿನ್ನ ಮಹಿಮೆಯನ್ನು ತಿಳಿಯಲು ಸಾಧ್ಯವೆ ?' ೧೫. 'ನೀನು ಜಂಗಮಪ್ರಾಣಿ ಎಂಬುದನ್ನು ಕೇಳಿ ಆ ಅಲ್ಲಮನೆಂಬ ಜಂಗಮನು ನಿನ್ನ ಮನೆಗೆ ಬರುತ್ತಾನೆ. ನೀನು ಮಾಡುತ್ತಿರುವ ಜಂಗಮಾರ್ಚನೆಯ ರೀತಿ ಇದಲ್ಲ. ನಿನ್ನ ಮನೆಯಲ್ಲಿ ಸೋಮಾರಿತನದಿಂದ ಕೆಲವರು ಲಿಂಗಶೋಭರಾಗಿಯೂ ಅಂಗಶೋಭರಾಗಿಯೂ ಇರುವ ಜಂಗಮರನ್ನು ಇಟ್ಟುಕೊಂಡಿರಬಾರದು. ಅಲ್ಲಮನು ಜಂಗಮಾಕಾರದಿಂದ ನಿನ್ನಾ ಮನೆಗೆ ಬರುತ್ತಾನೆ. ಆಗ ಅಲ್ಲಿ ಅಸಾಧಾರಣವಾದ ಸಂಗತಿಯೊಂದು ಕಾಣುತ್ತದೆ.'' ೧೬. 'ಆದ್ದರಿಂದ ಪೂಜ್ಯರಾದವರಿಗೆ ಅವರ ರಕ್ಷಣೆಗಾಗಿ ಮಠಗಳನ್ನು ಕಟ್ಟಿಸಿ ಅವರನ್ನು ಅಲ್ಲಿ ಸಮಾಧಾನ

CC-0. Jangamwadi Math Collection. Digitized by eGangotri

ನಮವಿನಯ ಭಯಭರಿತ ಭಕ್ತಿಯಿಂದು ನಿನ್ನ
ಸದನಕ್ಕೆ ಕರೆತಂದು ಮೃಷ್ಟಾನ್ನಮುಂ ನೀಡಿ
ಮುದದೊಳವರೇನ ಬೇಡಿದಡೀ ಸುವಸ್ತುಗಳನಿತ್ತು ಕಳುಪುವುದೆಂದನು ೧೭

ಇಂತೆಂದು ಚೆನ್ನಬಸವಂ ಬಸವರಾಜಂಗ
ನಂತವಿಧದಿಂ ತಿಳಿಯೆ ಪೇಳೆ ಬಸವಣ್ಣನ
ತ್ಯಂತ ಹರುಷದೊಳೆಂದನೆನಗೇಂ ಸ್ವತಂತ್ರ ನೀವಿರಿಸಿದಂತಿರ್ಪೆನೆನುತೆ
ಸಂತೋಷದಿಂದಲಾ ಗಣಕುಲಂ ಸಹಿತೆದ್ದು
ಮುಂತಿರ್ಪ ಚೆನ್ನಬಸವಣ್ಣಂಗೆ ನಮಿಸಿ ಬಳಿ
ಕಂ ತಿರುಗಿದಂ ತನ್ನ ಮನೆಗಿತ್ತಲಾ ಬಸವದಂಡೇಶನಳ್ತಿಯಿಂದೆ ೧೭

ಉಕ್ಕುವತಿಹರುಷದಿಂ ಬಸವಣ್ಣನರಮನೆಗೆ
ಚಿಕ್ಕಬಸವಂ ಬಂದು ಬಳಿಕಲಾ ಮನೆಯ ಮುಂ
ದಿಕ್ಕೆಲನ ನೋಡಲಲ್ಲೆಸೆದಿರ್ಪ ಘನತರದ ಬಯಲೊಳತಿರಮ್ಯವಾಗಿ
ಲಕ್ಕದಿಂ ಮೇಲೆ ತೊಂಬತ್ತಾರು ಸಾಸಿರದ
ಲೆಕ್ಕದಿಂ ಮೆರೆವ ಜಂಗಮಕೆ ಮಠಗಳನಾಗ
ಳಿಕ್ಕೆಕ್ಕೆಯಿಂದೆ ಕಟ್ಟಿಸಿ ಬಳಿಕಲವರೊಳಾ ಜಂಗಮವನಿಂಬಿಟ್ಟನು ೧೮

ದಿಂದ ನೆಲೆಗೊಳಿಸು, ಉತ್ಸಾಹದಿಂದಿರುವ ಲಕ್ಷದ ತೊಂಬತ್ತಾರುಸಾವಿರ ಉತ್ತಮರಾದ ಜಂಗಮರನ್ನು ನಯವಿನಯ ಭಯಭಕ್ತಿಯಿಂದ ನಿನ್ನ ಮನೆಗೆ ಕರೆದುತಂದು, ಮೃಷ್ಟಾನ್ನವನ್ನು ನೀಡಿ, ಅವರೇನು ಬೇಡಿದರೂ ಆ ಸುವಸ್ತುಗಳನ್ನು ಸಂತೋಷದಿಂದ ಕೊಟ್ಟು ಕಳುಹಿಸು' ಎಂದನು. ೧೭. ಈ ರೀತಿಯಲ್ಲಿ ಚೆನ್ನಬಸವಣ್ಣನು ಅನೇಕ ಪ್ರಕಾರವಾಗಿ ಬಸವಣ್ಣನಿಗೆ ಅರ್ಥವಾಗುವಂತೆ ಹೇಳಿದನು. ಆಗ ಬಸವಣ್ಣನು ಬಹಳ ಸಂತೋಷದಿಂದ 'ನನಗೇನೂ ಸ್ವಾತಂತ್ರ್ಯವಿಲ್ಲ, ನೀವು ಇರಿಸಿದಂತೆ ಇರುತ್ತೇನೆ' ಎಂದು ಹೇಳಿ ಸಂತೋಷದಿಂದ ಆ ಗಣಸಮೂಹದೊಡನೆದ್ದು ಮುಂದಿದ್ದ ಚೆನ್ನಬಸವಣ್ಣನಿಗೆ ನಮಸ್ಕರಿಸಿ ತನ್ನ ಮನೆಗೆ ಹೊರಟನು. ೧೮. ಅತಿಸಂತೋಷದಿಂದ ಬಸವಣ್ಣನ ಅರಮನೆಗೆ ಚೆನ್ನಬಸವಣ್ಣನು ಬಂದು ಆ ಮನೆಯ ಮುಂದೆ ಎರಡು ಕಡೆಗೂ ನೋಡಿದನು. ಅಲ್ಲಿದ್ದ ದೊಡ್ಡ ಬಯಲಿನಲ್ಲಿ ನೋಡಲು ಆನಂದವಾಗುವಂತೆ ಸೇರಿದ್ದ ಲಕ್ಷದ ತೊಂಬತ್ತಾರುಸಾವಿರ ಜಂಗಮರಿಗೆ ಒಂದಾದ ಮೇಲೊಂದರಂತೆ ಮಠಗಳನ್ನು ಕಟ್ಟಿಸಿ ಆ ಮಠಗಳಲ್ಲಿ ಜಂಗಮರು ಸಂತೋಷ ಸಮಾಧಾನಗಳಿಂದಿರಲು ಅನುವು ಮಾಡಿ

CC-0. Jangamwadi Math Collection. Digitized by eGangotri

ಲಿಂಗಶೋಭರುಮಂಗಶೋಭರುಮನೆಲ್ಲರಂ
ಮುಂಗಡೆಯ ಮಠಕೆ ನಡೆಯೆನಲಾರೆವೆಂದೆನಲು
ಹಿಂಗದಾ ಮನೆಗೆ ಕಿಚ್ಚಿಕ್ಕಿಸಲ್ ಧಗಧಗೆಂದುರಿಯಲದ ಕಾಣುತವರು
ಅಂಗಲಾಚುತ್ತೆದ್ದು ಬಿದ್ದು ಕೈಕಾಲೊಡೆದು
ಮುಂಗಾಣದೋಡುತಿರಲವರೊಳಗೆ ಮೂವರೇ
ಲಿಂಗಸಂಧಾನದಿಂದಿರಲವರೊಳೊರ್ವ ತನ್ನೊತ್ತಿನವಗಿಂತೆಂಬನು ೧೯

ಇಲ್ಲಿ ಮನೆ ಕಿಚ್ಚೇಳುತಿದಿಕೊ ನೋಡೆನಲೊರ್ವ
ಯೆಲ್ಲಿಯೆನೆ ಮತ್ತೊರ್ವನೆಂದನೆಲವೋ ನಿಮ್ಮ
ಸೊಲ್ಲಡಗದೇ ಕೆಡೆದುಕೊಳ್ಳಿಯೆನಲವರಿರದೆ ಮೊದಲಂತೆ ಪವಡಿಸಿರಲು
ಮೆಲ್ಲನಾ ಮೂವರಂ ಭೀತಿಯಿಂದೋಡುತಿ
ರ್ಪೆಲ್ಲರಂ ಕರೆತಂದು ಬೇರೆ ಮಠಗಳೊಳಿರಿಸಿ
ನಿಲ್ಲದಾ ಕಿಚ್ಚನೇ ನಿಲಿಸಿ ತದ್ಗೃಹವನೇ ಮುನ್ನಿನಂತಿರವೇಳ್ದನು ೨೦

ಎಂದಿನಿಂದಾ ಗೃಹಂ ನೋಡಲತಿಪೊಸಬಗೆಯ
ಚಂದದಿಂದಿರಲನಿತುಮಂ ಬಿಜ್ಜಳಂ ಕೇಳ್ದು
ಬಂದು ತದ್ಗೃಹವ ನಿಟ್ಟಿಸಿ ಬಸವನೊಡನೆ ನಿನ್ನಳಿಯನತಿಘನಮಹಿಮನು

ಕೊಟ್ಟನು. ೧೯. ಲಿಂಗಶೋಭರು ಮತ್ತು ಅಂಗಶೋಭರು ಎಲ್ಲರನ್ನೂ ಮುಂದಿರುವ ಮಠಕ್ಕೆ ನಡೆಯಿರಿ ಎನ್ನಲು ಅವರು ಸಾಧ್ಯವಿಲ್ಲವೆಂದರು. ಆಗ ಚೆನ್ನಬಸವಣ್ಣನು ಹಿಂಜರಿಯದೆ ಆ ಮನೆಗೆ ಬೆಂಕಿ ಇಡಿಸಿದನು. ಅದು ಧಗಧಗ ಎಂದು ಉರಿಯಿತು. ಅದನ್ನು ನೋಡುತ್ತಲೆ ಆವರು ಅಂಗಲಾಚುತ್ತ ಎದ್ದುಬಿದ್ದು ಕೈಕಾಲೊಡೆದು ಮುಂದಿರು ವುದನ್ನು ನೋಡದೆ ಓಡಿದರು. ಅವರಲ್ಲಿ ಮೂವರು ಮಾತ್ರ ತಮ್ಮ ಲಿಂಗದ ಅನು ಸಂಧಾನದಲ್ಲಿದ್ದರು. ಅವರಲ್ಲಿ ಒಬ್ಬನು ತನ್ನ ಪಕ್ಕದಲ್ಲಿದ್ದ ಇನ್ನೊಬ್ಬನಿಗೆ ಈ ರೀತಿ ಹೇಳಿದನು. ೨೦. 'ಇಲ್ಲಿ ಮನೆ ಬೆಂಕಿ ಹತ್ತಿ ಉರಿಯುತ್ತಿದೆ ನೋಡಿ' ಎನ್ನಲು ಮತ್ತೊಬ್ಬನು 'ಎಲ್ಲಿ' ಎಂದನು. ಇನ್ನೊಬ್ಬನು 'ಎಲವೋ ನಿಮ್ಮ ಸೊಲ್ಲಡಗುವುದಿಲ್ಲವೆ? ಸುಮ್ಮನೆ ಬಿದ್ದುಕೊಳ್ಳಿ' ಎಂದನು. ಅವರು ಮೊದಲಿನಂತೆಯೇ ಮಲಗಿದರು. ಆಗ ಆ ಮೂವರನ್ನೂ ಹೆದರಿಕೆಯಿಂದ ಓಡುತ್ತಿದ್ದ ಎಲ್ಲರನ್ನೂ ಕರೆದುಕೊಂಡು ಬಂದು ಬೇರೆ ಮಠಗಳಲ್ಲಿ ಇರಿಸಿದನು. ಮತ್ತು ಹೊತ್ತಿದ್ದ ಬೆಂಕಿಯನ್ನು ಆರಿಸಿ ಆ ಮನೆಯನ್ನು ಮೊದಲಿದ್ದಂತೆಯೇ ಇರಲು ಹೇಳಿದನು. ೨೧. ಆ ಮನೆಯು ನೋಡಲು ಎಂದಿಗಿಂತಲೂ ಹೊಸರೀತಿಯಲ್ಲಿ ಚೆನ್ನಾಗಿತ್ತು. ಈ ಸಂಗತಿಯನ್ನು ಕೇಳಿ ಬಿಜ್ಜಳನು ಅಲ್ಲಿ ಬಂದು, ಆ ಮನೆಯನ್ನು ನೋಡಿ, ಬಸವಣ್ಣನೊಡನೆ ನಿನ್ನ ಅಳಿಯನು ಬಹಳ ಮಹಿಮೆಯುಳ್ಳ

CC-0. Jangamwadi Math Collection. Digitized by eGangotri

ಎಂದು ಕೊಂಡಾಡುತಾ ಚೆನ್ನಬಸವಣ್ಣಗಾ
ನಂದದಿಂದೆರಗಿ ಬೀಳ್ಕೊಂಡನವನಿಪನಿತ್ತ
ಲಂದು ಬಸವಂ ಚೆನ್ನಬಸವನುಂ ತಮ್ಮ ಮನೆಗಳೊಳ್ಸೈದೆ ಸುಖದಿರ್ದರು ೨೦

ಬಸವನ ಸುಭಕ್ತಿಯಾತನ ಪವಾಡಂಗಳೊಂ
ದೆಸಕಮಂ ಕರ್ಣಪಾರಂಪರೆಗಳಿಂದಮಾ
ಲಿಸಿ ನೋಡಿ ಸಂತಸಂಬಡುವೆನೆಂದೊರ್ವ ಜಂಗಮದೇವರ್ಸೈದೆ ಬಂದು
ಮಿಸುಗುವರಮನೆಯನೊಳಪುಗೆ ಸಮಯವಲ್ಲೆಂ
ದುಸಿರಲಾ ನುಡಿಗೇಳಿ ನೊಂದು ತಿರುಗಲ್ ಬಸವ
ನಸುಪೋದುವವರೊಡನೆ ಪೋಗಿ ತ್ರಿಪುರಾಂತಕಾಲಯದೊಳಗೆ ಮಂಡಿಸಿದರು ೨೨

ಆ ಸಮಯದೊಳ್ ಬಿಜ್ಜಳಂ ಬಸವರಾಜನ ನಿ
ವಾಸಕ್ಕೆ ದೂತನಂ ಕರೆಯಲಟ್ಟಲ್ಕವಂ
ಭಾಸುರಶಿವಾಚಾರಿಯರಮನೆಯ ಬಾಗಿಲೊಳಗಿರ್ದವರಿಗರಿಪಲೊಡನೆ
ಈಸು ಪೊತ್ತೇಕೆ ಪವಡಿಸಿದನೆಂದೆಬ್ಬಿಸಲ್
ಶ್ವಾಸವಿಲ್ಲದೆ ಡಿಂಬವಿರೆ ಕಂಡು ಸರ್ವರುಂ
ಮೋಸವಾದುದು ಬಸವಗೆನುತಳುವ ಕಳಕಳಂ ಪಸರಿಸಿದುದರಮನೆಯೊಳು ೨೩

ವನು' ಎಂದು ಕೊಂಡಾಡಿ, ಆ ಚೆನ್ನಬಸವಣ್ಣನಿಗೆ ಸಂತೋಷದಿಂದ ನಮಸ್ಕರಿಸಿ ಬೀಳ್ಕೊಂಡನು. ಅನಂತರ ಬಸವಣ್ಣನೂ ಚೆನ್ನಬಸವಣ್ಣನೂ ತಮ್ಮ ಮನೆಗಳಿಗೆ ಹೋಗಿ ಸುಖದಿಂದಿದ್ದರು. ೨೨. ಬಸವಣ್ಣನ ಭಕ್ತಿಯನ್ನು ಆತನ ಅದ್ಭುತ ಪವಾಡಗಳನ್ನು ಕರ್ಣ ಪರಂಪರೆಯಿಂದ ಕೇಳಿದ ಒಬ್ಬ ಜಂಗಮದೇವರು ಅವನನ್ನು ನೋಡಿ ಸಂತೋಷಪಡುವೆ ನೆಂದು ಹೇಳಿ ಅಲ್ಲಿಗೆ ಬಂದರು. ಪ್ರಕಾಶಿಸುತ್ತಿದ್ದ ಆ ಅರಮನೆಯನ್ನು ಪ್ರವೇಶಿಸಲು, "ಒಳಹೊಗಲು ಇದು ಸಮಯವಲ್ಲ" ಎಂಬ ಮಾತನ್ನು ಕೇಳಿ ಮನದಲ್ಲಿ ನೊಂದುಕೊಂಡು ಹಿಂದಿರುಗಿದರು, ಆಗ ಅವರೊಡನೆ ಬಸವಣ್ಣನ ಪ್ರಾಣವೂ ಹೋಯಿತು. ಆ ಜಂಗಮ ದೇವರು ಹೋಗಿ ತ್ರಿಪುರಾಂತಕ ದೇವಾಲಯದಲ್ಲಿ ಕುಳಿತರು. ೨೩. ಅದೇ ಸಮಯಕ್ಕೆ ಬಿಜ್ಜಳನು ಬಸವಣ್ಣನನ್ನು ಕರೆತರಲು ಅವನ ಮನೆಗೆ ದೂತನನ್ನು ಕಳಿಸಿದನು. ಅವನು ಬಂದು ಶ್ರೇಷ್ಠವಾದ ಶಿವಾಚಾರಿಯಾದ ಬಸವರಾಜನ ಅರಮನೆಯ ಬಾಗಿಲು ಕಾಯುವ ವರಿಗೆ ಅದನ್ನು ಹೇಳಿದನು. ಅವರು ಬಂದು ಇಷ್ಟುಹೊತ್ತು ಏಕೆ ಮಲಗಿದ್ದಾನೆ ಎಂದು ಬಸವನನ್ನು ಎಬ್ಬಿಸಲು ಜೀವವಿಲ್ಲದೆ ಬರಿಯ ದೇಹವಿರುವುದನ್ನು ನೋಡಿ ಎಲ್ಲರೂ 'ಬಸವಣ್ಣನಿಗೆ ಮೋಸವಾಯಿತು' ಎಂದು ರೋದಿಸುವ ಶಬ್ದವು ಅರಮನೆಯಲ್ಲೆಲ್ಲ

CC-0. Jangamwadi Math Collection. Digitized by eGangotri

ಅರಮನೆಯು ಕಳಕಳವನರಿದು ಪೊತಂ ಮಹೀ
ಶ್ವರನೊಡನೆ ಬಸವರಾಜಂ ಮರಣವಾದನೆಂ
ದೊರೆಯಲಾ ಬಿಜ್ಜಳಂ ಕಾಲ್ನಡೆಯೊಳೈತಂದು ಬಸವನರಮನೆಯ ಪುಗಲು
ಇರದೆ ಸಮ್ಯಜ್ಞಾನದೃಷ್ಟಿಯಿಂದರಿದು ತ
ನ್ನರಮನೆಯಲಿ ಚೆನ್ನಬಸವೇಶ್ವರಂ ಬಸವ
ನರಮನೆಗೆ ಬರೆ ಬಿಜ್ಜಳಂ ಜನದ ಕಳಕಳವನಾಕ್ಷಣಂ ಮಾಣಿಸಿದನು ೨೪

ಬಂದುದಾಗಳೆ ಸಕಲಭಕ್ತಮಾಹೇಶ್ವರರ
ವೃಂದವಮಾ ಬಿಜ್ಜಳಂ ಬಸವನಂ ನೋಡಿ ಕಡು
ನೊಂದು ನುಡಿದಂ ಚೆನ್ನಬಸವಣ್ಣನೊಡನಕಾರಣಮೃತಂ ಬಸವಣ್ಣಗೆ
ಬಂದುದೇಕೆನೆ ನಗುತೆ ಬಾಗಿಲ್ಗೆ ಜಂಗಮಂ
ಬಂದುನಿಲ್ಲೆನೆ ಮುಗಿದು ಪೋದನಾತನ ಕೂಡೆ
ಯಿಂದೀತನಸು ಪೋದುದೆಂದುಸಿರಿ ಬಾಗಿಲವರಂ ಕರೆಸಿ ಬೆಸಗೊಂಡನು ೨೫

ಆರಾದೊಡಂ ಬಾಗಿಲಕೆ ಬಂದು ಪೋದರೆ ವಿ
ಚಾರದಿಂದುಸಿರೆನಲ್ಕವರೆಂದರೆಲೆ ದೇವ
ದೂರದೇಶಾಂತರದಿನೊರ್ವ ಜಂಗಮದೇವರೈದೆ ಮನೆಯೊಳಪುಗಲ್ಕೆ

ಹರಡಿತು. ೨೪. ಅರಮನೆಯ ರೋದನದ ಧ್ವನಿಯನ್ನು ಕೇಳಿ ದೂತನು ಬಿಜ್ಜಳ ಮಹಾರಾಜನಿಗೆ ಬಸವಣ್ಣನು ಸತ್ತುಹೋದ ಸುದ್ದಿಯನ್ನು ಹೇಳಿದನು. ಬಿಜ್ಜಳನು ನಡೆದುಕೊಂಡೇ ಬಂದು ಬಸವನ ಅರಮನೆಯನ್ನು ಪ್ರವೇಶಿಸಿದನು. ಚೆನ್ನಬಸವಣ್ಣನು ತನ್ನ ಅರಮನೆಯಲ್ಲಿಯೇ ತನ್ನ ಸಮ್ಯಜ್ಞಾನದೃಷ್ಟಿಯಿಂದ ಈ ಸಂಗತಿಯನ್ನು ತಿಳಿದುಕೊಂಡು ಬಸವಣ್ಣನ ಅರಮನೆಗೆ ಬರಲು, ಬಿಜ್ಜಳನು ಜನಗಳ ಗದ್ದಲವನ್ನು ನಿಲ್ಲಿಸುವಂತೆ ಹೇಳಿಸಿದನು. ೨೫. ತಕ್ಷಣವೇ ಎಲ್ಲ ಭಕ್ತರ, ಮಾಹೇಶ್ವರರ ಸಮೂಹವೇ ಅಲ್ಲಿಗೆ ಬಂದಿತು. ಮರಣಹೊಂದಿದ ಬಸವಣ್ಣನನ್ನು ನೋಡಿ ಬಿಜ್ಜಳನು ಬಹಳ ವ್ಯಥೆಗೊಂಡು ಚೆನ್ನಬಸವಣ್ಣನನ್ನು ಕುರಿತು 'ಕಾರಣವಿಲ್ಲದೆಯೇ ಬಸವಣ್ಣನಿಗೆ ಮರಣವು ಏಕುಂಟಾಯಿತು ?' ಎಂದು ಕೇಳಿದನು. ಅದಕ್ಕೆ ಚೆನ್ನಬಸವಣ್ಣನು ನಗುತ್ತಾ, 'ಬಾಗಿಲಿಗೆ ಬಂದ ಜಂಗಮನನ್ನು ತಡೆಯಲು ಆತ ಸಿಟ್ಟುಗೊಂಡು ಹೋದನು. ಆತನನ್ನೇ ಬಸವಣ್ಣನ ಪ್ರಾಣವೂ ಹಿಂಬಾಲಿಸಿತು' ಎಂದು ಹೇಳಿ ಬಾಗಿಲು ಕಾಯುವವರನ್ನು ಕರೆಸಿ ಕೇಳಿದನು. ೨೬. 'ಯಾರಾದರೂ ಮನೆಯ ಬಾಗಿಲಿಗೆ ಬಂದುಹೋದರೆ ? ಜ್ಞಾಪಿಸಿಕೊಂಡು ಹೇಳು' ಎಂದು ಕೇಳಲು, ಅವರು 'ಎಲೈ ಸ್ವಾಮಿಯೆ, ದೂರದೇಶದಿಂದ ಒಬ್ಬ ಜಂಗಮದೇವರು ಬಂದಿದ್ದರು. ಮನೆಯೊಳಗೆ ಪ್ರವೇಶಿಸಲು ಪ್ರಯತ್ನಿಸಿದರು.

CC-0. Jangamwadi Math Collection. Digitized by eGangotri

ಚಾರಿಸಲ್ ಪೋದರೆನೆ ತ್ರಿಪುರಾಂತಕನ ಗುಡಿಯೊ
ಳೋರಂತೆ ಕುಳಿತಿರ್ಪರೀಕ್ಷಣಂ ಪೋಗಿ ಕರೆ
ತಾರೆನಲ್ಕತಿವೇಗದಿಂ ಪೋಗಿ ಬಸವಣ್ಣನರಮನೆಗೆ ಕರೆತಂದರು ೨೬

ಆಪಲೇನಾತನರಮನೆವೊಗಲ್ ಬಸವನುಸಿ
ರಾಡಿದುದು ಮೂಗಿನೊಳ್ ತಾಣತಾಣಂಗಳೊಳ್
ನಾಡಿಗಳ್ ನೆಲೆಗೊಂಡುವತಿಸಮಿಪಕೆ ಬರಲ್ ತನು ಚೇತನಂಬಡೆದುದು
ಗಾಡದಿಂ ಬಸವನಿದಿರಿಗೆ ಬರಲ್ಕೊಡನೆದ್ದು
ಮಾಡೆ ಸಾಷ್ಟಾಂಗಪ್ರಣಾಮಮಂ ಕಂಡು ಕೊಂ
ಡಾಡಿ ಬಿಜ್ಜಳನೃಪಂ ಚೆನ್ನಬಸವಣ್ಣನಂ ತನ್ನರಮನೆಗೆ ಪೋದನು ೨೭

ಇತ್ತಲೀ ಬಸವನಂ ಚೆನ್ನಬಸವಣ್ಣನಂ
ಚಿತ್ತಹರುಷದೊಳಖಿಲಭಕ್ತ ಮಾಹೇಶ್ವರರ
ಮೊತ್ತಮೆಲ್ಲಂ ಪೊಗಳೆ ಬಸವಣ್ಣನೊಡನೊಲಿದು ಚೆನ್ನಬಸವಣ್ಣನಾಗ
ಬಿತ್ತರಿಸಿದಂ ವೃಥಾಪ್ರಾಣಮಂ ಬಿಡುತಿರ್ಪ
ದುತ್ತಮವೆ ಜಂಗಮಂ ಲಿಂಗದೊಳಗಾಗಲಸು
ವಿತ್ತು ಕಳೆವುದು ಜಂಗಮಪ್ರಾಣಿಗಳ ನೀತಿಯ್ಯೆಸಿದನುಚಿತವೆಂದನು ೨೮

ನಾವು ತಡೆಯಲು ಹೊರಟುಹೋದರು' ಎಂದು ಹೇಳಿದರು. 'ಆ ಜಂಗಮರು ಒಬ್ಬರೇ ತ್ರಿಪುರಾಂತಕನ ಗುಡಿಯಲ್ಲಿ ಕುಳಿತಿದ್ದಾರೆ. ಹೋಗಿ ತಕ್ಷಣ ಕರೆದುಕೊಂಡು ಬಾ' ಎಂದು ಚೆನ್ನಬಸವಣ್ಣನು ಹೇಳಲು ಕಾವಲಿನವರು ಜಾಗ್ರತೆ ಹೋಗಿ ಬಸವಣ್ಣನ ಅರಮನೆಗೆ ಅವನನ್ನು ಕರೆದುಕೊಂಡು ಬಂದರು. ೨೭. ಏನು ಹೇಳಲಿ, ಜಂಗಮನು ಅರಮನೆಯನ್ನು ಪ್ರವೇಶಿಸಿದ ತಕ್ಷಣ ಬಸವಣ್ಣನ ಮೂಗಿನಲ್ಲಿ ಉಸಿರಾಟ ಪ್ರಾರಂಭವಾಯಿತು. ಎಲ್ಲ ಭಾಗ ದಲ್ಲಿಯೂ ನಾಡಿಗಳು ಹಿಂದಿನಸ್ಥಿತಿಗೆ ಬಂದುವು. ಆತನು ಹತ್ತಿರಕ್ಕೆ ಬರಲು ಬಸವಣ್ಣನ ಶರೀರ ಚೇತನವನ್ನು ಪಡೆಯಿತು. ಆತನು ವೇಗವಾದ ನಡಿಗೆಯಿಂದ ಎದುರಿಗೆ ಬರಲು ಬಸವಣ್ಣನು ತಕ್ಷಣ ಎದ್ದು ಆ ಜಂಗಮೋತ್ತಮನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ದನು. ಇದನ್ನು ನೋಡಿ ಬಿಜ್ಜಳರಾಜನು ಸಂತೋಷದಿಂದ ಚೆನ್ನಬಸವಣ್ಣನನ್ನು ಹೊಗಳಿ ತನ್ನ ಅರಮನೆಗೆ ಹಿಂದಿರುಗಿದನು. ೨೮. ಇತ್ತಕಡೆಯಲ್ಲಿ ಬಸವಣ್ಣನನ್ನೂ, ಚೆನ್ನಬಸವಣ್ಣ ನನ್ನೂ ಎಲ್ಲ ಭಕ್ತ ಮತ್ತು ಮಾಹೇಶ್ವರರ ಸಮೂಹವೂ ಆನಂದದಿಂದ ಹೊಗಳಿತು. ಆಗ ಚೆನ್ನಬಸವಣ್ಣನು ಬಸವಣ್ಣನನ್ನು ಕುರಿತು 'ಜಂಗಮನು ಲಿಂಗದಲ್ಲಿ ಒಂದಾಗಲು ಪ್ರಾಣ ವನ್ನು ತ್ಯಜಿಸುವುದು ಜಂಗಮಪ್ರಾಣಿಗಳ ನೀತಿ. ಆದರೆ ಹೀಗೆ ವ್ಯರ್ಥವಾಗಿ ಅಸುವನ್ನು

CC-0. Jangamwadi Math Collection. Digitized by eGangotri

ಹಿಂಗದಾಲಿಸು ಬಸವದಂಡೇಶ ನೀಂ ಪ್ರಾಣ
ಲಿಂಗ ಲಿಂಗಪ್ರಾಣಸಂಬಂಧಿಗಳನಮಲ
ಜಂಗಮಪ್ರಾಣಿಗಳ ಚಾರಿತ್ರಮಂ ಪೇಳ್ವೆನೊರ್ವ ಶಿವಶರಣರಣುಗಂ
ಲಿಂಗಣ್ಣನೆಂಬಾತನಿರದಾಡುತಿರೆ ಕೊರಲ
ಲಿಂಗವೋಸರಿಸಿ ಪೋಗಲ್ಕವನ ತಾಯ್ ಕಂಡು
ಲಿಂಗಣ್ಣ ಕೇಳ್ ಕೊರಲ ಲಿಂಗವಿಲ್ಲೆನೆ ಪ್ರಾಣವಡಗಿತವನೊಡಲಿನಿಂದ ೨೯

ಅಂಗಲಾಚುತ್ತವನ ತಾಯ್ತಂದೆಗಳ್ ನೆರೆಯು
ಸಂಗಡಿಗ ಬಂಧುಬಳಗಂಗಳಳುತಿರೆ ಚಿಕ್ಕ
ಲಿಂಗಣ್ಣನಾ ಲಿಂಗಮಂ ಕಂಡು ತಂದವನ ಕೊರಲಿಂಗೆ ಹಾಯ್ಕಲೊಡನೆ
ಲಿಂಗಣ್ಣನಸು ಬರಲ್ ಕಾಣುತ್ತಲಾ ಚಿಕ್ಕ
ಲಿಂಗಣ್ಣನೆಂದನೆಲೆಯಣ್ಣ ಕೇಳಿದು ಪ್ರಾಣ
ಲಿಂಗಿಗಳ ಸನ್ಮಾರ್ಗವಿಂತಲ್ಲಮೆನಲವರ ಗುರುವಾಗ ಕೇಳ್ದನದನು ೩೦

ಹರುಷದಿಂದಾ ಚಿಕ್ಕಲಿಂಗಣ್ಣನಿರುತಂದಿ
ನಿರುಳು ಮಲಗಿರಲವನ ಕೊರಲ ಲಿಂಗವನೆ ಕೊಂ
ಡರುಣೋದಯದೊಳೆದ್ದು ಪುಷ್ಪಮಂ ತರಪೋದನವರ ಗುರುವತ್ತಲಿತ್ತ

ನೀಗುವುದು ಒಳ್ಳೆಯದೆ? ಇದು ಉಚಿತವಲ್ಲ' ಎಂದನು. ೨೯. 'ಪ್ರಾಣಲಿಂಗ, ಲಿಂಗಪ್ರಾಣ ಸಂಬಂಧಿಗಳ ಮತ್ತು ಪರಿಶುದ್ಧವಾದ ಜಂಗಮಪ್ರಾಣಿಗಳ ಚರಿತ್ರೆಯನ್ನು ಹೇಳುತ್ತೇನೆ, ಬಸವದಂಡೇಶನೆ, ನೀನು ತಡೆಯದೆ ಕೇಳು, ಒಬ್ಬ ಶಿವಶರಣನ ಮಗ ಲಿಂಗಣ್ಣನೆಂಬುವನು ಆಟವಾಡುತ್ತಿದ್ದನು. ಆಗ ಅವನ ಕೊರಳಿನಲ್ಲಿದ್ದ ಲಿಂಗವಲ್ಲಿಯೋ ಬಿದ್ದುಹೋಯಿತು. ಅವನ ತಾಯಿ ಅದನ್ನು ಗಮನಿಸಿ ಲಿಂಗಣ್ಣ, ನಿನ್ನ ಕುತ್ತಿಗೆಯಲ್ಲಿ ಲಿಂಗ ಇಲ್ಲವಲ್ಲ ! ಎನ್ನಲು, ಕೂಡಲೇ ಲಿಂಗಣ್ಣನ ಪ್ರಾಣವು ಶರೀರದಿಂದ ಹೊರಟುಹೋಯಿತು. ೩೦. ಆಗ ಅವನ ತಂದೆ ತಾಯಿಗಳೂ, ಅಕ್ಕಪಕ್ಕದ ಸ್ನೇಹಿತರೂ, ಬಂಧು ಬಳಗದವರೂ ದುಃಖದಿಂದ ಅಂಗಲಾಚಿ ಬೇಡುತ್ತ ಅಳುತ್ತಿರಲು ಚಿಕ್ಕಲಿಂಗಣ್ಣನೆಂಬುವನು, ಆ ಬಿದ್ದು ಹೋದ ಲಿಂಗವನ್ನು ಹುಡುಕಿತಂದು ಅವನ ಕೊರಳಿಗೆ ಹಾಕಿದನು. ತಕ್ಷಣವೇ ಲಿಂಗಣ್ಣ ನಿಗೆ ಪ್ರಾಣಬಂದಿತು. ಅದನ್ನು ನೋಡುತ್ತಲೆ ಚಿಕ್ಕಲಿಂಗಣ್ಣನು 'ಎಲೆ ಅಣ್ಣ, ಪ್ರಾಣ ಲಿಂಗಿಗಳ ರೀತಿ ಇದಲ್ಲವೇ' ಎನ್ನಲು ಅವರ ಗುರುವು ಕೇಳಿದನು. ೩೧. ಚಿಕ್ಕ ಲಿಂಗಣ್ಣನು ಸಂತೋಷದಿಂದ ಅಂದಿನ ರಾತ್ರಿ ಮಲಗಿದ್ದನು. ಅವನ ಗುರುವು ಅವನ ಕುತ್ತಿಗೆಯಲ್ಲಿದ್ದ ಲಿಂಗವನ್ನು ಎತ್ತಿಕೊಂಡು ಬೆಳಗಿನ ಜಾವದಲ್ಲೆದ್ದು ಹೂವನ್ನು ತರಲು ಹೋದನು. ಇತ್ತಲಾಗಿ ಚಿಕ್ಕಲಿಂಗಣ್ಣನ ದೇಹ ಪ್ರಾಣವಿಲ್ಲದೆ ಇತ್ತು. ಅದನ್ನು ಕಂಡ

CC-0. Jangamwadi Math Collection. Digitized by eGangotri

ಹರಣವಿಲ್ಲದೆ ಚಿಕ್ಕಲಿಂಗಣ್ಣನಿರೆ ಕಾಣು
ತಿರದವನ ತಾಯ್ತಂದೆಗಳ್ ಮರುಗುತಿರಲವರ
ಗುರುವೈದಿಯವನಲಿಂಗವನವನ ಕೊರಲಿಂಗೆ ಹಾಯ್ಕಲಸು ಬಂದುದೊಡನೆ ೩೧

ಆಲಿಸೈ ಸತ್ಯಣ್ಣನೆಂಬ ಜಂಗಮ ತನ್ನ
ಸೂಳೆಯೊಳ್ ಸುರತಸಲ್ಲಾಪದಿಂ ರತಿರಾಜ
ಕೇಳಿಯೊಳ್ ಕೂಡಿರುತೆ ಲಿಂಗವೊತ್ತುವುದೆಂದು ತೆಗೆದಾಗಲಾ ಮಂಚದ
ಮೇಲಿರಿಸಿಕೊಂಡಿರಲ್ಕಾ ಸುದ್ದಿಯಂ ನಾವು
ಕೇಳಿ ತಲ್ಲಿಂಗಮಂ ಕಳವಿನಿಂ ತರಿಸಲತಿ
ಲೀಲೆಯಿಂದಾತನಸು ಪೋದುದದ ಕಾಣುತಾ ಸೂಳೆಯಸುವುಂ ಪೋದುದು ೩೨

ಮರಳಿ ಸತ್ಯಣ್ಣಗಳ ಗಳಕೆ ತಲ್ಲಿಂಗಮಂ
ತರಿಸಿ ಹಾಯ್ಕಾಗಾತನಸು ಬಂದುದಾ ಕ್ಷಣಂ
ಪೊರೆಯೊಳಸುಗಳೆದಿರ್ದ ವೇಶ್ಯೆಗಂ ಪರಣವೈತಂದುದಿನ್ನಾಲಿಸುವುದಂ
ಸರಸದಿಂ ಪ್ರಹರಿಯಾ ಮಾರಣ್ಣನಂದು ತ
ನ್ನರಸಿಯೊಳ್ ಕೂಡುತಿರೆ ಲಿಂಗವೊತ್ತುವುದೆಂದು
ಕೊರಲ ಲಿಂಗಂಗಳಂ ತೆಗೆದು ಮಂಚದೊಳಿರಿಸಿ ರತಿಕೇಳಿಯಿಂದಿರ್ದರು ೩೩

ಆ ಸಮಯದಿಂದಿರ್ವರೆದ್ದು ಲಿಂಗಂಗಳಂ
ಮೋಸದಿಂ ಪಲ್ಲಟದಿ ಧರಿಸಿ ಮಂಚವನಿಳಿಯೆ
ಶ್ವಾಸಂಗಳಿಲ್ಲದಿರಲದ ಕೇಳುತವರ ಮನೆಗಂ ನೀರತರಲು ಪೋದ

ಅವನ ತಂದೆ ತಾಯಿಗಳು ದುಃಖಿಸುತ್ತಿದ್ದರು. ಆ ವೇಳೆಗೆ ಅವರ ಗುರುವು ಬಂದು ಲಿಂಗವನ್ನು ಚಿಕ್ಕಲಿಂಗಣ್ಣನ ಕೊರಳಿಗೆ ಹಾಕಲು, ತಕ್ಷಣವೇ ಪ್ರಾಣವು ಬಂದಿತು. ೩೨. "(ಬಸವಣ್ಣನೇ) ಕೇಳಯ್ಯ. ಸತ್ಯಣ್ಣ ಎಂಬ ಒಬ್ಬ ಜಂಗಮನು ತನ್ನ ಸೂಳೆಯೊಂದಿಗೆ ಸುರತಸಲ್ಲಾಪ ಮಾಡುತ್ತ ರತಿಕ್ರೀಡೆಯಲ್ಲಿ ಕೂಡಿಕೊಂಡಿದ್ದನು. ಆ ಸಮಯದಲ್ಲಿ ತಾನು ಧರಿಸಿದ್ದ ಲಿಂಗವು ಒತ್ತುವುದೆಂದು ಅದನ್ನು ತೆಗೆದು ಮಂಚದಮೇಲೆ ಇರಿಸಿದನು. ಆ ವಿಷಯವನ್ನು ನಾವು ಕೇಳಿ ಕಳ್ಳತನದಿಂದ ಆ ಲಿಂಗವನ್ನು ತರಿಸಿದೆವು. ಆ ಕೂಡಲೇ ಸತ್ಯಣ್ಣನ ಪ್ರಾಣವು ಹೋಯಿತು. ಅವನು ಸತ್ತುದನ್ನು ಕಂಡು ಸೂಳೆಯ ಪ್ರಾಣವೂ ಹೋಯಿತು. ೩೩. ಪುನಃ ಸತ್ಯಣ್ಣನ ಕುತ್ತಿಗೆಗೆ ಆ ಲಿಂಗವನ್ನು ತರಿಸಿ ಹಾಕಿದಾಗ ಅವನ ಪ್ರಾಣವು ಬಂದಿತು. ತಕ್ಷಣವೇ ಪಕ್ಕದಲ್ಲಿ ಪ್ರಾಣವನ್ನು ಕಳೆದುಕೊಂಡಿದ್ದ ವೇಶ್ಯೆಗೂ ಬಂದಿತು. ಮತ್ತೂ ಕೇಳು, ಪ್ರಹರಿ ಮಾರಣ್ಣನು ಆದಿನ ತನ್ನ ಹೆಂಡತಿಯ ಜೊತೆಯಲ್ಲಿ ಕೂಡಿರುವಾಗ ಲಿಂಗವು ಒತ್ತುವುದೆಂದು ಕೊರಳಿನ ಲಿಂಗಗಳನ್ನು ತೆಗೆದು ಮಂಚದಮೇಲಿಟ್ಟು ಸಂಭೋಗಸುಖವನ್ನು ಅನುಭವಿಸುತ್ತಿದ್ದರು. ೩೪. ಸಂಭೋಗಾನಂತರ ಅವರಿಬ್ಬರೂ ಎದ್ದು ತಿಳಿಯದೆ ಒಬ್ಬರ ಲಿಂಗವನ್ನು ಮತ್ತೊಬ್ಬರು ಬದಲಾಯಿಸಿ ಧರಿಸಿ ಮಂಚದಿಂದ ಇಳಿದರು. ಕೂಡಲೆ ಅವರ ಉಸಿರಾಟವು ನಿಂತುಹೋಯಿತು.



CC-0. Jangamwadi Math Collection. Digitized by eGangotri

ದಾಸಿಗಂದಸು ಜೀಯ್ದುದಂ ಕಂಡು ಬಂದು ನಮು
ಗಾ ಸುದ್ದಿಯುಂ ಪೇಳೆ ಪೋಗಿ ಸತ್ಯಣ್ಣಗಳ
ನೇ ಸಮೀಪಕೆ ಕರೆಸಿಯಿವರಳಿದರೇಕೆನಲ್ಕಾತನಿರದಿಂತೆಂದಸು ೩೪

ಲಿಂಗಂಗಳಿವರ್ಗೆ ಪಲ್ಲಟವಾದುವೆನಲವರ
ಲಿಂಗಂಗಳವರವರ ಗಳಕೆ ಸೇರಿಸಲೊಡನೆ
ಹಿಂಗಿರ್ದ ದಂಪತಿಗಳಸುಗಳೈತಂದುವಾ ದಾಸಿಗಂದಸು ಬಂದುದು
ಲಿಂಗಣ್ಣನುಂ ಚಿಕ್ಕಲಿಂಗಣ್ಣನುಂ ಶರಣ
ಸಂಗಿ ಸತ್ಯಣ್ಣನುಂ ಮಾರಣ್ಣನಂದಾತ
ಸಂಗನೆಯುಮಿವರೆಲ್ಲರುಂ ಪ್ರಾಣಲಿಂಗಿಗಳ್ ಬಸವಣ್ಣ ಕೇಳೆಂದನು ೩೫

ಘಟ್ಟಿವಳದೇವರೊಲವಿಂ ತನ್ನ ಲಿಂಗಮಂ
ಕಟ್ಟಿ ತನ್ನಯ ಕಾಲ್ಗೆ ನಡೆಯೆ ಚರಗತಿಗಳದ
ನೆಟ್ಟನೇ ಕಂಡು ತಲ್ಲಿಂಗಮಂ ಸೆಳೆದುಕೊಳಲಿರದೊಂದು ಪೆರ್ಗುಂಡನು
ಕಟ್ಟಿ ಕೊರಳಲಿ ಪುರದ ಬಾಗಿಲೊಳ ನಿಂದಿರಲ್
ಬಟ್ಟೆಯಿಲ್ಲದೆ ಸರ್ವರುಂ ತರುಬಿ ನಿಲೆ ಮರಳಿ
ಕೊಟ್ಟೊಡಾ ಲಿಂಗದೊಳಗಾ ಗುಂಡನಡಗಿಸಿದನೆಲ್ಲರುಂ ಚೋದ್ಯಮೆನಲು ೩೬

ಇದನ್ನು ಕೇಳಿ ಅವರ ಮನೆಗೆ ನೀರನ್ನು ತರಲು ಹೋದ ದಾಸಿಯ ಪ್ರಾಣವೂ ಹೋಯಿತು. ಇದನ್ನು ನೋಡಿಬಂದು ನಮಗೆ ಆ ಸುದ್ದಿಯನ್ನು ಹೇಳಲಾಗಿ ಸತ್ಯಣ್ಣನನ್ನು ಹತ್ತಿರಕ್ಕೆ ಕರೆಯಿಸಿ ಈ ಇಬ್ಬರೂ ಏಕೆ ಸತ್ತರೆಂದು ಕೇಳಲು ಅವನು ಹೀಗೆ ಹೇಳಿದನು. ೩೫. ಅವರಿಬ್ಬರ ಪ್ರಾಣಲಿಂಗಗಳೂ ಅದಲುಬದಲಾದುವು ಎಂದು ಹೇಳಲು, ಅವರವರ ಲಿಂಗವನ್ನು ಅವರವರ ಕುತ್ತಿಗೆಗೆ ಸೇರಿಸಿದ ತಕ್ಷಣ ದಂಪತಿಗಳಿಗೆ ಹೋಗಿದ್ದ ಪ್ರಾಣಗಳು ಬಂದುವು. ಆ ದಾಸಿಗೂ ಆಗ ಪ್ರಾಣ ಬಂದಿತು. ಲಿಂಗಣ್ಣ, ಚಿಕ್ಕಲಿಂಗಣ್ಣ, ಶರಣಸಂಗಿ ಸತ್ಯಣ್ಣ, ಮಾರಣ್ಣ ಮತ್ತು ಆತನ ಹೆಂಡತಿ ಇವರೆಲ್ಲರೂ ಪ್ರಾಣಲಿಂಗಿಗಳು, ಬಸವಣ್ಣ, ಕೇಳು" ಎಂದನು. ೩೬. "ಘಟ್ಟಿವಳಯ್ಯನು ತನ್ನ ಲಿಂಗವನ್ನು ತನ್ನ ಕಾಲಿಗೆ ಕಟ್ಟಿಕೊಂಡು ನಡೆದಾಡುತ್ತಿದ್ದನು. ಜಂಗಮರು ಅದನ್ನು ನೋಡಿ ಅದನ್ನು ಅವನಿಂದ ಸೆಳೆದುಕೊಂಡರು. ಆಗ ಅವನು ದೊಡ್ಡ ಗುಂಡೊಂದನ್ನು ಕುತ್ತಿಗೆಗೆ ಕಟ್ಟಿಕೊಂಡು ನಗರದ ಬಾಗಿಲಲ್ಲಿ ನಿಂತನು. ನಡೆದಾಡಲು ದಾರಿಯಿಲ್ಲದೆ ಎಲ್ಲರೂ ಗುಂಪುಮಾಡಿ ನಿಂತು ಲಿಂಗವನ್ನು ಪುನಃ ಅವನಿಗೆ ಹಿಂತಿರುಗಿಸಿದರು. ಎಲ್ಲರೂ ಆಶ್ಚರ್ಯಪಡುತ್ತಿರಲು ಅವನು ಆ ಲಿಂಗದಲ್ಲಿಯೇ ಆ ದೊಡ್ಡಗುಂಡನ್ನು ಅಡಗಿಸಿದನು.

CC-0. Jangamwadi Math Collection. Digitized by eGangotri

ಇನ್ನಾಲಿಸಾ ಘಟ್ಟಿವಳನೆ ಲಿಂಗಪ್ರಾಣಿ
ಚೆನ್ನೆಯರೆನಿಪ್ಪರಾ ದಾಸಿವೇಶ್ಯೆಯರಿರ್ವ
ರನ್ನೋಡೆ ಜಂಗಮಪ್ರಾಣಿಗಳವರ್ ತಿಳೆಯೆ ಜಂಗಮಂ ಮುನಿದು ಪೋಗೆ
ನಿನ್ನಂತೆ ಪ್ರಾಣವಂ ಬಿಟ್ಟರೇ ನೀಂ ಪಿಂತೆ
ಕಿನ್ನರಯ್ಯಂಗಳೊಡನಳಿದುದಲ್ಲೆಂದೆವೇ
ಮುನ್ನ ಮೋದರಕೇತಿತಂದೆಗಳ ಕೂಡೆ ಹರಣವನುಳಿದುದಲ್ಲೆಂದೆವೇ ೩೭

ಇನ್ನಖಿಳದೇಶದ ಸುಭಕ್ತಮಾಹೇಶ್ವರರ್
ನಿನ್ನೊಡನೆ ಮರ್ತ್ಯಕ್ಕೈತಂದಮರಗಣನಿಕರ
ಮುನ್ನೋಡಲಿಲ್ಲಿಗಿನ್ನೈತರ್ಪರಿಂತು ನಿನ್ನಸು ಮಕ್ಕಳಾಟಿಕೆಯೊಳು
ತನ್ನ ತಾನೇ ಪೋಗಿ ಬರಲೇಕೆ ಸಾಕೆನು
ತ್ತನ್ನುಡಿದು ಬಸವಂಗೆ ತಿಳಿಪಿ ತನ್ನಾಲಯಕೆ
ಚೆನ್ನಬಸವಂ ಬಂದು ಶಿವತತ್ತ್ವಗೋಷ್ಠಿಯಿಂ ಸುಖಮಿರ್ದನುತ್ಸವದೊಳು ೩೮

ಚೆನ್ನಬಸವನೆ ಶಿವಂ ಬಸವನೇ ವೃಷಭನಾ
ಕನ್ನೇಶ ಬಿಜ್ಜಳರೆ ಶಿವಪುರದ್ವಾರವಂ
ಚೆನ್ನಾಗಿ ಕಾದಿಪ್ಪ ದ್ರವಿಡಕೇಸರಿಗಳೆಂದೆಂಬರಾ ಕಲ್ಯಾಣವೇ
ನನ್ನಿಯಿಂ ಕೈಲಾಸಮಲ್ಲಿರ್ಪ ಶಿವಭಕ್ತ
ರುನ್ನೋಡೆ ಪ್ರಮಥಗಣನಿಕರಮಲ್ಲಿಯ ಜನಂ
ಸನ್ನುತಸದಾಚಾರಸಂಪನ್ನರೆನಿಪರವರಿರವನಭಿವರ್ಣಿಸುವೆನು ೩೯

೩೭. "ಇನ್ನೂ ಕೇಳು, ಘಟ್ಟಿವಳಯ್ಯನು ಲಿಂಗಪ್ರಾಣಿ, ಹೆಂಗಸರಾದ ಆ ದಾಸಿ ಮತ್ತು ವೇಶ್ಯೆಯರು ಇಬ್ಬರೂ ಜಂಗಮಪ್ರಾಣಿಗಳು. ಹಾಗೆ ನೋಡಿದರೆ ಜಂಗಮರು ಕೋಪಗೊಂಡು ಹೋದಾಗ ಅವರು ನಿನ್ನ ಹಾಗೆ ಅವರು ಪ್ರಾಣವನ್ನು ಬಿಟ್ಟರೆ ? ನೀನು ಹಿಂದೆ ಕಿನ್ನರಯ್ಯನ ಜೊತೆಯಲ್ಲಿ ಮೃತನಾದುದನ್ನು ಅಲ್ಲ ಎಂದೆವೆ ? ಮುಂಚೆ ಮೋದರ ಕೇತಯ್ಯನ ಜೊತೆ ಪ್ರಾಣಬಿಟ್ಟುದನ್ನು ಅಲ್ಲ ಎಂದೆವೆ ? ೩೮. ಇನ್ನೂ ಎಲ್ಲ ದೇಶದ ಉತ್ತಮಭಕ್ತ-ಮಾಹೇಶ್ವರರೂ, ನಿನ್ನ ಜೊತೆಯಲ್ಲಿ ಭೂಮಿಗೆ ಬಂದ ಆ ದೇವತೆಗಳ ಸಮೂಹವೂ ನಿನ್ನನ್ನು ನೋಡಲು ಇಲ್ಲಿಗೆ ಬರುತ್ತಾರೆ. ನಿನ್ನ ಪ್ರಾಣವು ಮಕ್ಕಳ ಆಟದಂತೆ ತನ್ನಿಷ್ಟಕ್ಕೆ ತಾನೆ ಹೋಗಿ ಮತ್ತೆ ಬರುವುದು ಸಾಕು" ಎಂದು ಹೇಳಿ, ಬಸವಣ್ಣನಿಗೆ ತಿಳಿಸಿ, ಚೆನ್ನಬಸವಣ್ಣನು ತನ್ನ ಮನೆಗೆ ಹಿಂದಿರುಗಿದನು ಮತ್ತು ಅಲ್ಲಿ ಶಿವತತ್ತ್ವಗೋಷ್ಠಿಯಲ್ಲಿ ಸುಖಸಂತೋಷಗಳಿಂದ ಇದ್ದನು. ೩೯. ಚೆನ್ನಬಸವಣ್ಣನೇ ಶಿವ. ಬಸವಣ್ಣನೇ ನಂದಿ, ಆ ಬಿಜ್ಜಳ ಕನ್ನೇಶರೇ ಕೈಲಾಸದ್ವಾರವನ್ನು ಚೆನ್ನಾಗಿ ಕಾಯುತ್ತಿರುವ ದ್ರವಿಡ-ಕೇಸರಿ ಎನ್ನುವವರು. ನಿಜಕ್ಕೂ ಕಲ್ಯಾಣವೇ ಕೈಲಾಸ, ಕಲ್ಯಾಣದಲ್ಲಿರುವ ಶಿವಭಕ್ತರೇ ಪ್ರಮಥಗಣಸಮೂಹ, ಅಲ್ಲಿರುವ ಜನಗಳೆಲ್ಲರೂ ಒಳ್ಳೆಯ ಸದಾಚಾರ

CC-0. Jangamwadi Math Collection. Digitized by eGangotri

ಪುಸಿ ಕಳವು ಪಾದರಂ ದುರ್ನೀತಿ ವೈರವುಳಿ
ಜಸಮಾರ್ಗಮುಂ ತಕ್ಕು ಪಳಿವು ಬೆಳುಂಗವತೆ ದು
ರ್ವ್ಯಸನಂ ದುರಾಚಾರಮನ್ಯಾಯವಾರಡಿ ಕೃತಘ್ನತೆ ವಿರೋಧಭಾವಂ
ಗಸಣಿ ದುರ್ಜನಮವಿಶ್ವಾಸಂ ಪರಾಭವಂ
ಕಿಸುರು ಗಾವಳಿ ಬಂದಿ ಗಳಹತನಮವಿವೇಕ
ಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ವಿಸುಕವೇವಣ್ಣಿಸುವೆನು ೪೦

ಗರುವಿಕೆ ಕಲಾಪ್ರೌಢಿ ಗಾಂಭೀರ್ಯಮುಗ್ಗಳಿಕೆ
ಗುರುಸೇವೆ ವಿಭವಂ ಶುಭಂ ಸುಖಂ ಸನ್ಮಾರ್ಗ
ಮರಿಜಯಂ ನೀತಿ ನಿಪುಣತೆ ಸದಾಶಿವಭಕ್ತಿ ದಾಕ್ಷಿಣ್ಯಮುತ್ಕುದಾರಂ
ಪರಹಿತಂ ಧರ್ಮಂ ವಿವೇಕಂ ವಿಚಾರಮಾ
ದರಣೆ ಸೌಭಾಗ್ಯಂ ಸದಾರೋಗ್ಯಮೆಂಬುವಿವು
ಪರಿಪೂರ್ಣಮಾಗಿರ್ಪುವಾ ನಗರದೊಳು ಚೆನ್ನಬಸವನಿರಲೇವೇಳ್ವೆನು ೪೧

ಪರವಶ ಪರಾಭವ ತೊದಲ್ ಕರ್ಕಶಂಗಳಿವು
ಸುರತಾಂತ್ಯ ವತ್ಸರ ಸುಬಾಲ ಕಾಂತಾಸ್ತನದೊ
ಳೊರೆವುದೇಂ ಬಂಡು ಬಕ್ಕೊಡಿ ಭಂಗ ಬಂಧನ ಕನಲ್ಕೆ ಕಳಕಳವೆಂಬಿವು

ಸಂಪನ್ನರು. ಅವರು ಇರುವ ರೀತಿಯನ್ನು ವಿಶೇಷವಾಗಿ ವರ್ಣಿಸುತ್ತೇನೆ. ೪೦. ಸುಳ್ಳು, ಕಳ್ಳತನ, ಹಾದರ, ಕೆಟ್ಟ ನಡತೆ, ವೈರ, ಅಪಕೀರ್ತಿ, ಮೋಸ, ನಿಂದೆ, ಹಗಲುದರೋಡೆ, ದುರ್ವ್ಯಸನ, ದುರಾಚಾರ, ಅನ್ಯಾಯ, ಕೆಟ್ಟಮಾತು, ಕೃತಘ್ನತೆ, ವಿರೋಧ, ಕೋಟಲೆಗಳು, ದುರ್ಜನರು, ಅಪನಂಬಿಕೆ, ಸೋಲು, ಕಲಹ, ಆರ್ಭಟ, ಲೂಟಿ, ವ್ಯರ್ಥವಾದ ಮಾತು, ಅವಿವೇಕ ಇವುಗಳು ಯಾವುವೂ ಆ ಚೆನ್ನಬಸವಣ್ಣನಿರುವ ರಾಜ್ಯದಲ್ಲಿ ಸುಳಿದಾಡುವುದೂ ಇಲ್ಲ. ೪೧. ಶ್ರೇಷ್ಠತೆ, ಕಲಾಪ್ರೌಢಿಮೆ, ಗಾಂಭೀರ್ಯ, ಆಧಿಕ್ಯ, ಗುರುಸೇವೆ,ವೈಭವ, ಮಂಗಳ, ಸುಖ,ಸನ್ಮಾರ್ಗ,ಶತ್ರುಗಳ ಮೇಲೆ ದಿಗ್ವಿಜಯ, ನೀತಿ, ನೈಪುಣ್ಯ, ಸದಾಶಿವಭಕ್ತಿ, ದಾಕ್ಷಿಣ್ಯ, ಉದಾರತೆ, ಅನ್ಯರಿಗೆ ಹಿತವನ್ನು ಬಯಸುವುದು, ಧಾರ್ಮಿಕತೆ, ವಿವೇಕ, ಸದ್ವಿಚಾರ, ಆದರಣೆ, ಸೌಭಾಗ್ಯ, ಸದಾ ಆರೋಗ್ಯ ಎಂಬ ಇವುಗಳು ಚೆನ್ನಬಸವಣ್ಣನಿರುವ ಆ ನಗರದಲ್ಲಿ ಪರಿಪೂರ್ಣವಾಗಿದ್ದುವು. ೪೨. ಸಂಭೋಗಾಂತ್ಯದಲ್ಲಿ ಮೈಮರೆಯುವಿಕೆ, ಸಂವತ್ಸರದಲ್ಲಿ ಪರಾಭವ, ಮಕ್ಕಳಲ್ಲಿ ತೊದಲುಮಾತು, ಸ್ತ್ರೀಯ ಮೊಲೆಯಲ್ಲಿ ಕಠಿಣತೆ, ಕಮಲದಲ್ಲಿ ಮಧು, ಶೃಂಗಾರದಲ್ಲಿ ಬೆರಗಾಗುವ ಭಾವ, ಕೊಳದಲ್ಲಿ ಅಲೆ, ಕೇದಗೆಯ ಹೂವಿನಲ್ಲಿ ರಚನೆ, ವಿಯೋಗದಲ್ಲಿ ಬೇಗುದಿ, ಬಹು ವಿರಹಗೊಂಡವರಲ್ಲಿ

CC-0. Jangamwadi Math Collection. Digitized by eGangotri

ಸರಸಿಜಂ ರತಿ ಸರಸಿ ಗರಿವೂ ವಿಯೋಗ ಘನ
ವಿರಹಿಜನದೊಳಗಲ್ಲದೇ ನೋಡಲಾ ನಾಡ
ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲೇನೆಂಬೆನಚ್ಚರಿಯನು ೪೨

ಗುಣವಂಚಕತ್ವಮಾ ನಾಡ ಪಂಕೇಜಾತ
ಗಣದೊಳಾರಡಿವಾತು ತುಂಬಿಯೊಳ್ ನೀರಸಂ
ಮಣಿಗಳೊಳು ಕೊಲ್ಲೆಂಬ ನುಡಿ ಲೆತ್ತವಾಡುವೆಡೆಯೊಳ್ ಮಹಾಶೋಕೋದ್ಭವಂ
ಅಣಿಯರಂ ವನದೊಳ್ ಕುಜಪ್ರಭಾವಂ ನಭೋ
ಗಣದೊಳ್ ವಿರಾಗಮಬ್ಜಾಕರದೊಳಳಿಯಾಸೆ
ಯೆಣಿಸಲ್ಕೆ ಕುಸುಮತರುಗಳೊಳಲ್ಲದಿಲ್ಲವಾ ಜನಪದದೊಳೇನೆಂಬೆನು ೪೩

ಪಿಡಿಯೆಂಬರಾ ಕರಿಣಿಯಂ ಲತಾವೃದ್ಧಿಯಂ
ಕುಡಿಯೆಂಬರಾ ಪುಳಿಂದರ ಬೇಂಟೆಗೋಲ್ಗಳಿಂ
ಬಡಿಯೆಂಬರಂಬರವಿಶೇಷಮಂ ಪಳಿಯೆಂಬರಲರುಣಿಯನಳಿಯೆಂಬರು

ಕಾತರತೆ ಇದೆಯೇ ಹೊರತು ಪರೀಕ್ಷಿಸಿ ನೋಡಿದರೆ ಆ ದೇಶದ ಹಿರಿಯೂರ ಪಟ್ಟಣದ ಪಾಳಯದ ಜನಗಳಲ್ಲಿ ಕಂಡುಬರುತ್ತಿರಲಿಲ್ಲ. ಈ ಆಶ್ಚರ್ಯವನ್ನು ಏನೆಂದು ಹೇಳಲಿ ? [ಶ್ಲೇಷಾರ್ಥ : ಜನರಲ್ಲಿ ಪರಾಧೀನತೆ, ಸೋಲು, ಸುಳ್ಳು, ಕ್ರೂರ ನಡತೆ ಇರಲಿಲ್ಲ. ಅದೇ ರೀತಿ ಲಜ್ಜಾಸ್ಪದ ನಡತೆ, ಭೀತಿ, ಕಪಟ, ಸೆರೆ ಇಡುವುದು, ಸಿಟ್ಟು, ಚಿಂತೆ ಮುಂತಾದುವು ಆ ದೇಶದ ಹಿರಿಯೂರ ಪಟ್ಟಣದ ಪಾಳಯದ ಜನಗಳಲ್ಲಿ ಇಲ್ಲ] ೪೩. ಕಮಲನಾಳಗಳಲ್ಲಿ ವಂಚಕತ್ವ ಗುಣ ಎಂದರೆ ಡೊಂಕಾಗಿರುವ ಗುಣವು ಇತ್ತು. ಆರಡಿ ಎಂಬ ಮಾತು ದುಂಬಿಗಳಿಗೆ ಮಾತ್ರ ಅನ್ವಯಿಸುತ್ತಿತ್ತು. ರಸಹೀನತೆ ಕೇವಲ ರತ್ನಗಳಲ್ಲಿ ಮಾತ್ರ ಇತ್ತು. ಪಗಡೆ ಆಟ ಆಡುವಾಗ ಮಾತ್ರ ಕೊಲ್ಲು ಎಂಬ ಪದವನ್ನು ಬಳಸುತ್ತಿದ್ದರು. ದೊಡ್ಡ ಅಶೋಕವೃಕ್ಷವು ಹೆಚ್ಚಾಗಿ ಕಾಡಿನಲ್ಲಿ ಇತ್ತು. ಕುಜಗ್ರಹ ದೋಷವು ಕೇವಲ ಆಕಾಶದ ನಕ್ಷತ್ರಗಳ ಸಮೂಹದಲ್ಲಿ ಮಾತ್ರ ಇತ್ತು. ಹಕ್ಕಿಗಳ ಧ್ವನಿ ಸರೋವರದಲ್ಲಿ, ದುಂಬಿಗಳ ಆಸೆ ಹೂಬಿಟ್ಟ ಮರಗಳಲ್ಲಿ ಮಾತ್ರ ಇದ್ದುವೇ ಹೊರತು ಆ ಜನಗಳಲ್ಲಿ ಇರಲಿಲ್ಲ. [ಶ್ಲೇಷಾರ್ಥ : ಜನಗಳು ಒಳ್ಳೆಯ ಗುಣಗಳಿಂದ ವಂಚಿತರಾಗಿರಲಿಲ್ಲ, ಚಾಡಿಮಾತು ಇರಲಿಲ್ಲ, ನೀರಸಸ್ವಭಾವದವರಾಗಲಿಲ್ಲ, ಕೊಲ್ಲು ಎಂಬ ಕೆಟ್ಟ ಮಾತನ್ನು ಅವರು ಆಡುತ್ತಿರಲಿಲ್ಲ, ಅತಿದುಃಖ ಅವರಲ್ಲಿರಲಿಲ್ಲ, ಹೀನಕುಲದಲ್ಲಿ ಹುಟ್ಟಿದವನು ಯಾರೂ ಇರಲಿಲ್ಲ. ಅವರು ಅಲಸಿಗಳಲ್ಲ, ಹೀನವಾದ ಆಸೆ ಅವರಿಗಿರಲಿಲ್ಲ]. ೪೪. ಹೆಣ್ಣಾನೆಯನ್ನು ಮಾತ್ರ ಪಿಡಿ ಎನ್ನುತ್ತಿದ್ದರು.. ಚಿಗುರಿದ ಬಳ್ಳಿಯ ತುದಿಯನ್ನು ಮಾತ್ರ ಕುಡಿ ಎನ್ನುತ್ತಿದ್ದರು ಬೇಡರು ಬೇಟೆಯಾಡಲು ಬಳಸುತ್ತಿದ್ದ ಕೋಲುಗಳಿಗೆ ಮಾತ್ರ ಬಡಿ ಎನ್ನುತ್ತಿದ್ದರು. ರೇಷ್ಮೆಬಟ್ಟೆಯನ್ನು ಮಾತ್ರ ಪಳಿ

CC-0. Jangamwadi Math Collection. Digitized by eGangotri

ಉಡಿಯೆಂಬರುರುನಿತಂಬೋರ್ಧ್ವಮಂ ಸಂತತಂ
ಮಡಿಯೆಂಬರೆಸೆವ ದವನಾದಿಗಳ್ ಬೆಳೆವೆಡೆಯ
ನಡಿಯೆಂಬರಂಘ್ರಿಗಳನಲ್ಲದೀ ನುಡಿಗಳಂ ನುಡಿಯರಾ ಜನಪದದೊಳು ೪೪

ಎಲ್ಲರುಂ ಧರ್ಮಿಗಳ್ ಧಾನುಷ್ಕರೆಂದೆನಿಸ
ರೆಲ್ಲರುಂ ಸರ್ವಜ್ಞರಾ ಬುದ್ಧರೆಂದೆನಿಸ
ರೆಲ್ಲರುಂ ಸಾರಸ್ವತಾಯುಕ್ತರಾಗಿಯುಂ\ತಾಂ ಜಡಧಿಯೆಂದೆನಿಸರು
ಎಲ್ಲರುಂ ರಾಗಿಗಳ್ ಕಾಮಾರ್ಥರೆಂದೆನಿಸ
ರೆಲ್ಲರುಂ ಧನಪರುಂ ಗುಹ್ಯಕೇಶ್ವರರೆನಿಸ
ರೆಲ್ಲರುಂ ಬಲಯುತರ್ ಗೋಪಾಲರೆನಿಸರಾ ವಿಷಯದ ಸಮಸ್ತಜನರು ೪೫

ಪ್ರಕಟಕಂಟಕಹರವಿರೋಧಂಗಳೆಸೆವ ಕೇ
ತಕಿಯೊಳ್ ಮಧುಪ್ರೀತಿ ಪುಷ್ಪಿಣೀಸಂಗಮಳಿ
ನಿಕರದೊಳ್ ತಾಡನಂ ದೈನ್ಯವಚನಂ ಚಂಚಲಾಕ್ಷಿಯರ ಸದ್ರತಿಯೊಳು
ವಿಕಳಸ್ವನಂ ಜಡಾಶ್ರಯಮುಂ ಸರಸ್ಸಿನೊಳ್
ಸುಕುಟಿಲಗಮನವಿಷಕ್ರೂರಂಗಳುರುವಹಿ
ಪ್ರಕರದೊಳಗಲ್ಲದಾ ನಗರದೊಳಗಿಲ್ಲಲ್ಲಿ ಚೆನ್ನಬಸವೇಶನಿರಲು ೪೬

ಎನ್ನುತ್ತಿದ್ದರು. ದುಂಬಿಯನ್ನು ಅಳಿ ಎನ್ನುತ್ತಿದ್ದರು. ಸೊಂಟದ ಹಿಂದಿನ ಮೇಲ್ಭಾಗವನ್ನು ಮಾತ್ರ ಉಡಿ ಎನ್ನುತ್ತಿದ್ದರು. ದವನ ಮುಂತಾದುವುಗಳನ್ನು ಬೆಳೆಯುವ ಸ್ಥಳಗಳನ್ನು ಮಡಿ ಎನ್ನುತ್ತಿದ್ದರು. ಪಾದಗಳನ್ನು ಅಡಿ ಎನ್ನುತ್ತಿದ್ದರಲ್ಲದೆ ಬೇರೆಯ ಅರ್ಥದಲ್ಲಿ ಆ ಪದಗಳನ್ನು ಜನಗಳು ಬಳಸುತ್ತಿರಲಿಲ್ಲ. [ಶ್ಲೇಷಾರ್ಥ: ಹಿಡಿ, ಮದ್ಯಪಾನ ಮಾಡು, ಹೊಡಿ, ಬಯ್ಯಿ, ಕತ್ತರಿಸು, ಸಾಯಿ, ತೊಲಗು ಮುಂತಾದ ವ್ಯರ್ಥವಾದ ಮಾತುಗಳನ್ನು ಜನರು ಬಳಸುತ್ತಿರಲಿಲ್ಲ]. ೪೫. ಆ ನಾಡಿನ ಜನರೆಲ್ಲರೂ ಧರ್ಮಿಗಳು, ಆದರೂ ಬಿಲ್ಗಾರರಲ್ಲ. ಎಲ್ಲರೂ ಎಲ್ಲವನ್ನೂ ಬಲ್ಲವರು, ಆದರೆ ಬುದ್ಧರಲ್ಲ. ಎಲ್ಲರೂ ವಿದ್ಯೆಯನ್ನು ಹೊಂದಿದ್ದರೂ ಕೂಡ ಬ್ರಹ್ಮರಲ್ಲ.ಅನುರಾಗವುಳ್ಳವರಾದರೂ ಕಾಮಿಗಳಲ್ಲ. ಐಶ್ವರ್ಯವಂತರಾದರೂ ಕುಬೇರರಲ್ಲ. ಎಲ್ಲರೂ ಶಕ್ತಿವಂತರಾದರೂ ಪ್ರಜಾರಕ್ಷಕರಲ್ಲ. ೪೬. ಮುಳ್ಳಿನಿಂದ ಕೂಡಿರುವುದು ಮತ್ತು ಹರನಿಗೆ ವಿರೋಧಿಯಾದದ್ದು ಎಂದರೆ ಕೇದಗೆ ಮಾತ್ರ ಮಕರಂದದ ಮೇಲಿನ ಪ್ರೀತಿ, ಹೂವಿನ ಸಂಗ ಇವು ದುಂಬಿಗಳಲ್ಲಿ ಮಾತ್ರ. ತಾಕಲಾಟ ಮತ್ತು ದೈನ್ಯವಾದ ಮಾತು ಉತ್ತಮ ರತಿಕ್ರೀಡೆಯಲ್ಲಿ ಮಾತ್ರ. ಪಕ್ಷಿಗಳ ಮಧುರಧ್ವನಿ, ನೀರಿನ ಆಶ್ರಯ ಕೊಳಗಳಲ್ಲಿ ಮಾತ್ರ. ಕುಟಿಲತೆಯಿಂದ ಕೂಡಿದ ನಡಿಗೆ, ವಿಷ-ಕ್ರೂರ ಸ್ವಭಾವಗಳು ಭಯಂಕರವಾದ ಹಾವುಗಳಲ್ಲಿ ಮಾತ್ರವಲ್ಲದೆ ಚೆನ್ನಬಸವಣ್ಣನು ಇರುವ ಆ ನಗರದಲ್ಲಿ ಇಲ್ಲ. [ಶ್ಲೇಷಾರ್ಥ: ಉಪದ್ರವ ಕೊಡುವವರು ಮತ್ತು ಶಿವನ ವಿರೋಧಿಗಳು ಅಲ್ಲಿರಲಿಲ್ಲ. ಹೆಂಡದ ಮೇಲಿನ ಪ್ರೀತಿ ಮತ್ತು ಪುಷ್ಪವತಿಯರಾದ ಸ್ತ್ರೀಸಂಗ, ಹೊಡೆದಾಟ, ದೈನ್ಯತೆ, ಕೆಟ್ಟಮಾತು, ಸೋಮಾರಿತನ, ದುರ್ಮಾರ್ಗದಲ್ಲಿ ನಡೆಯು

CC-0. Jangamwadi Math Collection. Digitized by eGangotri

ರಾಜನಂ ಸಕಳಂಕನೆನಿಸಿ ಪಾತಾಳದಹಿ
ರಾಜನಂ ವಿದಧಾರಿಯೆನಿಸಿ ಪ್ರಾಲೇಯಗಿರಿ
ರಾಜನಂ ಗತಿಹೀನನೆನಿಸಿ ಮೂವಿಧಿಗೊಳಿಸಿ ನುತಸುರತರಂಗಿಣಿಯನು
ರಾಜನಯ್ಮನ ಭಂಗಯುತನೆನಿಸಿ ವರದಿವಿಜ
ರಾಜನಾನೆಯ ಮತ್ತನೆನಿಸಿ ಸದ್ಗುರು ಬಸವ
ರಾಜನಳಿಯಂ ಚೆನ್ನಬಸವರಾಜನ ಕೀರ್ತಿ ರಾಜಿಸಿತು ಮೂಜಗದೊಳು ೪೭

ಬಸವನಗ್ರಜೆ ನಾಗಲಾಂಬಿಕೆಯು ರಂಜಿಸುವ
ಬಸಿರೊಳ್ ಶಿವಪ್ರಸಾದಾರ್ಭಕಂ ಬಳೆವುತಂ
ವಸುಧೀಶ ಬಿಜ್ಜಳನ ಮಾತಿಗುತ್ತರವಿತ್ತು ಚೋದ್ಯದಿಂ ಜನಿಸಿದ ಗಡ
ಬಸವಂಗೆ ಪ್ರಾಣಲಿಂಗವನರಿಪಿದಂ ಚೆನ್ನ
ಬಸವ ಗಡ ಪೆಸರಾತನುಂ ಮಹಾಬಸವನುಂ
ಮಿಸುಗುವ ಪವಾಡಪುರುಷರ್ ಗಡೀಕ್ಷಿಪೆವೆಂದು ಶರಣರ್ಬೈತರುತಿರ್ಪರು ೪೮

ಅಂಗ ಮಲೆಯಾಳ ಮಾಳವ ಮಗಧ ಬರ್ಬರ ಕ
ಳಿಂಗ ಕಾಶ್ಮೀರ ಕೊಂಕಣ ಸಿಂಧು ಹಮ್ಮೀರ
ವಂಗ ಹೊಯಿಸಳ ತುಳುವ ಚೋಳ ಚೇರಮ ಪಾಂಡ್ಯ ಯವನ ಸೌವೀರ ಮಚ್ಛ
ಬಂಗಾಳ ಜೈನ ಜೋನೆಗ ಸಗರ ಪೈವಿಗ ತೆ
ಲುಂಗ ಗುರ್ಜರ ಗೌಳ ನೇಪಾಳ ಸೌರಾಷ್ಟ್ರ
ಸಿಂಗಳ ದ್ರವಿಡ ಕಾಂಬೋಜದೇಶದ ಸಕಲ ಶರಣರ್ಬೈತರುತಿರ್ದರು ೪೯

ವ್ರದು, ದ್ವೇಷ, ಕ್ರೂರಸ್ವಭಾವಗಳು ಚೆನ್ನಬಸವಣ್ಣನು ಇರುವ ಆ ನಗರದಲ್ಲಿ ಇರಲಿಲ್ಲ]. ೪೭. ಚಂದ್ರನನ್ನು ಕಳಂಕವುಳ್ಳವನೆನಿಸಿದ, ಪಾತಾಳದಲ್ಲಿರುವ ಆದಿಶೇಷನನ್ನು ವಿಷಧಾರಿ ಎನ್ನಿಸಿದ, ಹಿಮಗಿರಿರಾಜನನ್ನು ಗತಿಹೀನ ಎನಿಸಿದ, ಪುಣ್ಯಕರಳಾದ ಆಕಾಶಗಂಗೆಯನ್ನು ಮೂರು ಬಟ್ಟೆಯಾಗಿಸಿದ, ಕ್ಷೀರಸಮುದ್ರವನ್ನು ಅಲೆಯುಳ್ಳದ್ದು ಎನಿಸಿದ, ಐರಾವತ ವನ್ನು ಮದದಿಂದ ಕೂಡಿದ್ದು ಎನಿಸಿದ, ಈ ರೀತಿ ಸದ್ಗುರುವೆನಿಸಿದ ಬಸವರಾಜನ ಅಳಿಯನಾದ ಚೆನ್ನಬಸವಣ್ಣನ ಕೀರ್ತಿ ಮೂರು ಲೋಕಗಳಲ್ಲಿಯೂ ಬೆಳಗಿತು. ೪೮. ಬಸವಣ್ಣನ ಅಕ್ಕನಾದ ನಾಗಲಾಂಬಿಕೆಯ ಶೋಭಿಸುವ ಬಸುರಿನಲ್ಲಿ ಶಿವಪ್ರಸಾದದ ಮಗುವು ಬೆಳೆಯುತ್ತಿದ್ದು, ರಾಜನಾದ ಬಿಜ್ಜಳನ ಸಂಶಯದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಆಶ್ಚರ್ಯಕರವಾದ ರೀತಿಯಲ್ಲಿ ಹುಟ್ಟಿದನಂತೆ ! ಬಸವಣ್ಣನಿಗೆ ಪ್ರಾಣಲಿಂಗ ರಹಸ್ಯದ ಉಪದೇಶವನ್ನು ಮಾಡಿದನಂತೆ! ಅವನ ಹೆಸರು ಚೆನ್ನಬಸವಣ್ಣನಂತೆ? ಅವನೂ ಮತ್ತು ಬಸವಣ್ಣನೂ ಪ್ರಸಿದ್ಧರಾದ ಪವಾಡಪುರುಷರಂತೆ ? ಅವರ ದರ್ಶನವನ್ನು ಮಾಡುತ್ತೇವೆ ಎಂಬುದಾಗಿ ಶರಣರು ಅಲ್ಲಿಗೆ ಬರುತ್ತಿದ್ದರು. ೪೯. ಅಂಗ, ಮಲೆಯಾಳ, ಮಾಳವ, ಮಗಧ, ಬರ್ಬರ, ಕಳಿಂಗ, ಕಾಶ್ಮೀರ, ಕೊಂಕಣ, ಸಿಂಧು, ಹಮ್ಮೀರ, ವಂಗ, ಹೊಯಿಸಳ, ತುಳುವ, ಚೋಳ, ಚೇರಮ, ಪಾಂಡ್ಯ, ಯವನ, ಸೌವೀರ, ಮತ್ಸ್ಯ,

CC-0. Jangamwadi Math Collection. Digitized by eGangotri

ಲಾಟ ಪಾಂಚಾಳ ವೈದರ್ಭ ಕುರು ಕುಕುರ ಕರ
ಹಾಟ ಕರ್ಪರಯವಂತಿಕ ಪಾರಿಯಾತ್ರ ಕ
ರ್ಣಾಟ ಕೋಶಲ ಮಂದಭದ್ರ ಕುಂತಳ ಮಹಾಚೀನಕ ವಿದೇಹ ಮೆರೆವ
ಭೋಟಕ ತುರುಷ್ಕವೊಡ್ಡಿಯ ಪಾರಸಿಕ ಮಹಾ
ಘೋಟಕ ಪುಳಿಂದಕ ಸ್ತ್ರೀರಾಜ್ಯ ಕೊಂಗು ಮಾ
ರಾಟ ಮೊದಲಾದ ದೇಶದ ಶರಣಸಂಕುಲಂ ಬರುತಿರ್ದುದುತ್ಸವದೊಳು ೫೦

ಇಂತು ಛಪ್ಪನ್ನದೇಶದೊಳೆಸೆವ ಶಿವಭಕ್ತ
ಸಂತತಿಗಳೈತರ್ಪುದಂ ತನ್ನ ಸುಜ್ಞಾನ
ದಿಂ ತಿಳಿದು ಚೆನ್ನಬಸವೇಶ್ವರಂ ಬಸವರಾಜಂಗಿರದೆ ಪೇಳಲೊಡನೆ
ಸಂತಸದೆ ಚಾರರಂ ಕರೆಸಿ ಬೆಸವೇಳಲ
ತ್ಯಂತವಸ್ತುಗಳ ವಿಸ್ತಾರದಿಂ ನಗರವನ
ನಂತವಿಭವದೆ ಸಿಂಗರದಲೊಪ್ಪವಿಟ್ಟರದನೇನೆಂದು ಬಣ್ಣಿಸುವೆನು ೫೧

ಕಟ್ಟಿದುವು ಮನೆಮನೆಯ ಮುಂದಾಗಲಿರದೆ ಸಾ
ಲಿಟ್ಟುವು ಮಕರತೋರಣಂಗಳಾಕಾಶಮಂ
ಮುಟ್ಟಿದುವು ಕೇತನಪ್ರತತಿಗಳ ನಿರ್ಜರರ ನಾಕಲೋಕಕೆ ದಾಳಿಯ
ನಿಟ್ಟುದಿರದಗರುಧೂಪದ ಧೂಮಮೆಣ್ದೆಸೆಯ
ಮೆಟ್ಟಿದುದು ಸಕಲವಾದ್ಯಂಗಳ ನಿನದಮುಳ್ಳಿ
ಪಟ್ಟರಚ್ಚರಿಯಯುರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು ೫೨

ಬಂಗಾಳ, ಜೈನ, ಜೋನೆಗ, ಸಗರ, ಹೈವಿಗ, ತೆಲುಗ, ಗುರ್ಜರ, ಗೌಳ, ನೇಪಾಳ, ಸೌರಾಷ್ಟ್ರ, ಸಿಂಹಳ, ದ್ರವಿಡ, ಕಾಂಬೋಜ ಮುಂತಾದ ದೇಶಗಳ ಎಲ್ಲ ಶರಣರೂ ಬರುತ್ತಿದ್ದರು. ೫೦. ಲಾಟ, ಪಾಂಚಾಳ, ವಿದರ್ಭ, ಕುರು, ಕುಕುರ, ಕರಹಾಟ, ಕರ್ಪರ, ಅವಂತಿಕ, ಪಾರಿಯಾತ್ರ, ಕರ್ಣಾಟ, ಕೋಸಲ, ಮಂದಭದ್ರ, ಕುಂತಳ, ಮಹಾಚೀನಕ, ವಿದೇಹ, ಪ್ರಸಿದ್ಧವಾದ ಭೋಟಕ, ತುರ್ಕಿದೇಶದವರು, ಒಡ್ಡಿಯ, ಪಾರಸಿಕ, ಮಹಾ ಘೋಟಕ, ಪುಳಿಂದಕ, ಸ್ತ್ರೀರಾಜ್ಯ, ಕೊಂಗುನಾಡು, ಮರಾಟ ಮೊದಲಾದ ದೇಶಗಳ ಶರಣರ ಸಮೂಹವು ಸಂಭ್ರಮದಿಂದ ಬರುತ್ತಿದ್ದರು. ೫೧. ಹೀಗೆ ಐವತ್ತಾರು ದೇಶದ ಮಹಾ ಶಿವಭಕ್ತರ ಸಮೂಹವು ಬರುತ್ತಾ ಇತ್ತು. ಇದನ್ನು ಚೆನ್ನಬಸವಣ್ಣನು ತನ್ನ ಸುಜ್ಞಾನದಿಂದ ತಿಳಿದುಕೊಂಡು ಬಸವಣ್ಣನಿಗೆ ಹೇಳಿದನು. ಆಗ ಬಸವಣ್ಣನು ಸಂತೋಷ ದಿಂದ ಸೇವಕರನ್ನು ಕರೆದು ಅಪ್ಪಣೆಮಾಡಿದ. ಆ ಸೇವಕರು ಅನೇಕ ವಸ್ತುಗಳನ್ನು ಹೇರಳವಾಗಿ ತಂದು, ನಗರವನ್ನು ಬಹಳ ವೈಭವದಿಂದ ಸಿಂಗರಿಸಿ ಅಚ್ಚುಕಟ್ಟಾಗಿ ಇಟ್ಟರು. ಅದನ್ನು ಏನೆಂದು ವರ್ಣಿಸಲಿ. ೫೨. ಮನೆಮನೆಗಳ ಮುಂಭಾಗದಲ್ಲಿ ಮಕರತೋರಣಗಳ ಸಾಲನ್ನು ರಚಿಸಿದರು. ಧ್ವಜಗಳ ಸಮೂಹ ಆಕಾಶವನ್ನು ಮುಟ್ಟಿತು. ಅಗರುಧೂಪದ ಹೊಗೆ ದೇವತೆಗಳ ಸ್ಥಾನವಾದ ಸ್ವರ್ಗಕ್ಕೆ ದಾಳಿ ಇಟ್ಟಿತು. ಎಲ್ಲ ವಿಧ

CC-0. Jangamwadi Math Collection. Digitized by eGangotri

ಇಂದು ರವಿವೀಥಿಗಳ ಪನ್ನೀರ ಚಳೆಯದಿಂ
ದಂದವಡೆದುವು ಮೌಕ್ತಿಕದ ರಂಗವಲಿ ಕಣ್ಗೆ
ಸಂದುದಬಲಾಜನಂ ಕಳಸ ಕನ್ನಡಿವಿಡಿದು ನಡೆಗೊಂಡುದುತ್ಸವದೊಳು
ಮುಂದೆ ಶೋಭಾನವಂ ಪಾಡುತಡಿಯಿಟ್ಟುದಾ
ನಂದದಿಂ ಮೈದೆಯರ್ ತೂರ್ಯತ್ರಯವುಮುದಿತಿ
ನಂದನನ ನಾಟ್ಯಶಾಲೆಯ ಮಿಗಿಸಿತೇನೆಂಬೆನಿದಿರ್ಗೊಳ್ವ ಸಂಭ್ರಮವನು ೫೩

ಕರಡೆ ಕಂಸಾಳ ಮಂಗಳ ಧವಳಶಂಖಿಂಗ
ಳುರುರವಂ ಶಿವನ ಬಿರುದಾವಳಿಯ ಬಣ್ಣಿಸುವ
ಪರಮಪಾಠಕರ ಕೈವಾರಮಡಿಯಿಡುವ ಕಾಂತೆಯರಂದುಗೆಯ ನಿನಾದಂ
ಸರವೆತ್ತಿ ಪಾಡುವ ಮೈದೆಯರ ಗಾನಂ ದಿಗೀ
ಶ್ವರರ ಕಿವಿಗಾನಂದವಂ ಕರೆಯೆ ಕಣ್ಗೆಸೆದು
ವಿರದೆ ವ್ಯಾಸನ ತೋಳ್ ವೃಷಧ್ವಜ ಪತಾಕೆ ಪಲ್ಲವ ಸತ್ತಿಗೆಯ ಸಾಲ್ಗಳು ೫೪

ಪರತರಣರೊಡಗೂಡಿ ಚೆನ್ನಬಸವಣ್ಣ ಸಹಿ
ತರಮನೆಯ ಪೊರಮಟ್ಟು ಬಸವದಂಡಾಧಿಪಂ
ಪರಮ ಭಕ್ತಿಯಲಿ ನಡೆದಿದಿರ್ಗೊಂಡು ಬಂದ ಶಿವಶರಣಸಂಕುಲಕೆರಗಲು

ವಾದ ವಾದ್ಯಗಳ ಧ್ವನಿಯು ಎಂಟು ದಿಕ್ಕಿಗೂ ಹರಡಿತು.ಅಪ್ಸರೆಯರು ಆನಂದಿತರಾದರು. ಆ ಉತ್ಸವವನ್ನು ನೋಡುವ ಆಸೆಯಿಂದ ಪಟ್ಟಣದ ಜನರೆಲ್ಲ ನಡೆದುಬಂದರು. ೫೩. ಚಂದ್ರ ಮತ್ತು ಸೂರ್ಯವೀದಿಗಳು ಪನ್ನೀರನ್ನು ಚಿಮುಕಿಸಿದುದರಿಂದ ಶೃಂಗಾರಗೊಂಡವು. ಅಲ್ಲಿ ಮುತ್ತಿನ ರಂಗವಲ್ಲಿಗಳು ಕಾಣಿಸಿಕೊಂಡವು. ಹೆಂಗಸರು ಕಳಶ-ಕನ್ನಡಿಗಳನ್ನು ಹಿಡಿದುಕೊಂಡು ಸಂತೋಷ, ಸಂಭ್ರಮಗಳಿಂದ ಮುಂದೆ ನಡೆದರು. ಮುತ್ತೈದೆಯರು ಮಂಗಳಗೀತೆಗಳನ್ನು ಹಾಡುತ್ತಾ ಮುಂದೆ ಹೋಗುತ್ತಿದ್ದರು. ಗೀತ, ನಾಟ್ಯ ಮತ್ತು ವಾದ್ಯಗಳ ಸಮ್ಮೇಳನವು ದೇವೇಂದ್ರನ ನಾಟ್ಯಶಾಲೆಯನ್ನು ಮೀರಿಸಿತು. ಆ ಶರಣ ಸಂಕುಲವನ್ನು ಎದುರುಗೊಳ್ಳುವ ಸಂಭ್ರಮವನ್ನು ಏನೆಂದು ಹೇಳಲಿ ? ೫೪. ಕರಡೆ, ಕಂಸಾಳೆ, ಮಂಗಳಕರವಾದ ಬಿಳಿಯ ಶಂಖಗಳು, ಹೆಚ್ಚಾದ ಶಬ್ದ, ಶಿವನ ಬಿರುದಾವಳಿ ಗಳನ್ನು ವರ್ಣಿಸಿ ಹೊಗಳುತ್ತಿರುವ ಸ್ತುತಿಪಾಠಕರ ಅಭಿಮಾನ,ನಡೆದಾಡುತ್ತಿದ್ದ ಹೆಂಗಸರ ಕಾಲಂದುಗೆಗಳ ಶಬ್ದ, ಸ್ವರವೆತ್ತಿ ಹಾಡುತ್ತಿರುವ ಮುತ್ತೈದೆಯರ ಗಾನ, ಇದೆಲ್ಲವೂ ದಿಕ್ಪಾಲಕರ ಕಿವಿಗಳಿಗೆ ಆನಂದವನ್ನುಂಟುಮಾಡುತ್ತಿದ್ದವು. ಆ ಉತ್ಸವದಲ್ಲಿ ವ್ಯಾಸನ ತೋಳು ನಂದಿಧ್ವಜ, ಬಾವುಟಗಳು ಶ್ವೇತಛತ್ರಿಗಳ ಸಾಲುಗಳು ಕಣ್ಣಿಗೆ ಮನೋಹರ ವಾಗಿ ಕಂಡವು. ೫೫. ಶಿವಭಕ್ತರ ಜೊತೆಯಲ್ಲಿ ಚೆನ್ನಬಸವಣ್ಣನನ್ನು ಕರೆದುಕೊಂಡು ಅರಮನೆಯಿಂದ ಹೊರಟು ಬಸವದಂಡಾಧೀಶನು ಬಹು ಉತ್ತಮ ಭಕ್ತಿಯಿಂದ ನಡೆದುಬಂದು ಶಿವಶರಣರ ಸಮೂಹವನ್ನು ಇದಿರುಗೊಂಡು ಅವರಿಗೆ ನಮಸ್ಕರಿಸಿದನು.

CC-0. Jangamwadi Math Collection. Digitized by eGangotri

ಹರುಷದಿನವರ್ ಚೆನ್ನಬಸವ ಬಸವೇಶ್ವರ
ರ್ಗಿರದೆ ಸಾಷ್ಟಾಂಗದಿಂ ನಮಿಸಲವರಿರ್ವರುಂ
ಕರುಣದಿಂದೆತ್ತಿ ಬಸವಂಗೆ ಬಳಿಕಾ ಚೆನ್ನಬಸವನೊಲಿದಿಂತೆಂದನು ೫೫

ಆಲಿಸೈ ಬಸವದಂಡೇಶ ಕಾಶ್ಮೀರಭೂ
ಪಾಲನೀ ಮಹದೇವ ರಾಣಿಯರ್ಕೂಡೆ ಶ್ರೀ
ಶೈಲದಿಂ ಶಿವಯೋಗಿ ಮಲ್ಲರಸನಾಜ್ಞೆಯಿಂದಿಲ್ಲಿಗೊಲಿದಯ್ತಂದನು
ಲೀಲೆಯಿಂ ಸಕಳೇಶ ಮಾದರಸನೀತನೇ
ಕಾಳಿಂಗದೇಶದಿಂ ಬಂದನಿಂದಿಲ್ಲಿಗಿಂ
ಶೀಲವಂತಂ ಮರುಳಶಂಕರಂ ಕೇಳೆಂದು ಚೆನ್ನಬಸವಂ ಪೇಳ್ದನು ೫೬

ಈತನೇ ಮಡಿವಾಳ ಮಾಚಯ್ಯನೆಂಬ ವಿ
ಖ್ಯಾತಪುರುಷಂ ನೋಡು ಹಿಪ್ಪಲಿಗೆಯಿಂ ಬಂದ
ನೀತನೇ ಸುಜ್ಞಾನಿದೇವನೆಂಬಾತನಾ ಕಟಕದಿಂದೈತಂದನು
ಈತನೇ ಮಾತಂಗಮನೆಂಬ ಶರಣನತಿ
ಪ್ರೀತಿಯಿಂ ತನ್ನ ಗುರುಸುಜ್ಞಾನಿದೇವನ ಮ
ಹಾತಿಶಯರುಂಡಕ್ಕೆ ಮುಂಡಮಂ ಮುಂಡಕ್ಕೆ ರುಂಡಮಂ ನೆರೆ ಪಡೆದನು ೫೭

ಇಂತಖಿಳ ಭಕ್ತ ಮಾಹೇಶ್ವರರ ಮಹಿಮೆಯಾ
ದ್ಯಂತಮಂ ಚೆನ್ನಬಸವಂ ಪೇಳೆ ಕೇಳ್ದು ತದ
ನಂತರದೆ ಸಕಲಗಣಕುಲಕೆ ಮಗುಳೆರಗಿ ಬಸವೇಶನತಿಭಕ್ತಿಯಿಂದ

ಅವರೆಲ್ಲ ಸಂತೋಷದಿಂದ ಚೆನ್ನಬಸವಣ್ಣನಿಗೂ ಮತ್ತು ಬಸವಣ್ಣನಿಗೂ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಅವರಿಬ್ಬರೂ ಕರುಣೆಯಿಂದ ಅವರುಗಳನ್ನು ಮೇಲೆತ್ತಿ, ಅನಂತರ ಚೆನ್ನಬಸವಣ್ಣನು ಪ್ರೀತಿಯಿಂದ ಬಸವಣ್ಣನಿಗೆ ಈ ರೀತಿ ಹೇಳಿದನು. ೫೬. "ಕೇಳಯ್ಯ ಬಸವಣ್ಣ, ಈ ಮಹದೇವನೆಂಬಾತನು ಕಾಶ್ಮೀರದ ರಾಜ. ಶ್ರೀಶೈಲದಿಂದ ಶಿವಯೋಗಿ ಮಲ್ಲರಸನ ಆಜ್ಞೆಯಂತೆ ರಾಣಿಯರ ಜೊತೆಗೂಡಿ ಪ್ರೀತಿಯಿಂದ ಇಲ್ಲಿಗೆ ಬಂದಿದ್ದಾನೆ. ಈತನೇ ಸಕಲೇಶಮಾದರಸ. ಈತನು ಇಲ್ಲಿಗೆ ಕಾಳಿಂಗದೇಶದಿಂದ ಬಂದಿದ್ದಾನೆ. ಕೇಳು, ಈ ಶೀಲವಂತನೇ ಮರುಳ ಶಂಕರದೇವ" ಎಂದು ಚೆನ್ನಬಸವಣ್ಣನು ಹೇಳಿದನು. ೫೭. "ನೋಡು, ಇವನೇ ಮಡಿವಾಳ ಮಾಚಯ್ಯನೆಂಬ ಪ್ರಸಿದ್ಧಪುರುಷ, ಹಿಪ್ಪಲಿಗೆಯಿಂದ ಬಂದಿದ್ದಾನೆ. ಈತನೇ ಸುಜ್ಞಾನಿದೇವ ಎಂಬುವನು, ಕಟಕ ಎಂಬಲ್ಲಿಂದ ಬಂದಿದ್ದಾನೆ. ಈತನೇ ಮಾತಂಗತಮನೆಂಬ ಶರಣನು, ಅತಿಶಯವಾದ ಪ್ರೀತಿಯಿಂದ ತನ್ನ ಗುರುವಾದ ಸುಜ್ಞಾನಿದೇವನ ರುಂಡಕ್ಕೆ ಮುಂಡವನ್ನೂ, ಮುಂಡಕ್ಕೆ ರುಂಡವನ್ನೂ ಪಡೆದನು". ೫೮. ಈ ರೀತಿಯಲ್ಲಿ ಎಲ್ಲ ಭಕ್ತ-ಮಾಹೇಶ್ವರರ ಮಹಿಮೆಗಳೆಲ್ಲವನ್ನೂ ಮೊದಲಿಂದ ಕಡೆಯವರೆಗೆ ಚೆನ್ನಬಸವಣ್ಣನು ಹೇಳಲು ಬಸವಣ್ಣನು ಕೇಳಿ, ಅನಂತರ ಎಲ್ಲ ಭಕ್ತ ಸಮೂಹಕ್ಕೂ ಮತ್ತೆ ಬಹಳ ಭಕ್ತಿಯಿಂದ ನಮಸ್ಕರಿಸಿ, ಬಸವಣ್ಣನು ಮುಂದೆ

CC-0. Jangamwadi Math Collection. Digitized by eGangotri

ಮುಂತೆ ನಾನಾ ವಾದ್ಯಘೋಷದಿಂ ತನ್ನ ಮನೆ
ಗಂತರಿಸದೊಡನೆ ಕರೆತಂದಧಿಕ ವಿಭವದಿಂ
ಸಂತೋಷದಿಂದೆ ಮಜ್ಜನ ಭೋಜನಾದಿ ಸತ್ಕಾರಮಂ ಮಾಡಿಸಿದನು ೫೮

ಅವರವರನುಚಿತವಚನಂಗಳಿಂ ಸತ್ಕರಿಸಿ
ವಿವಿಧೋಪಚಾರಂಗಳಂ ಮಾಡಿ ಬಳಿಕಲಾ
ಶಿವಭಕ್ತಸಂತತಿಗೆ ಮಠಮನೆಗಳಂ ಕೊಡಿಸಿ ಸ್ವಾಸ್ತಿಗಳ ಮಾಡಿ ಕೆಲರ್ಗೆ
ವಿವರದಿಂ ಕೆಲಬರ್ಗೆ ಕಾಯಕಂಗಳ ಕಟ್ಟಿ
ಸುವಿಲಾಸದಿಂದಲಾ ಚೆನ್ನಬಸವಂ ಬಸವ
ನವಿರಳಾನಂದದಿಂ ಶಿವತತ್ತ್ವಗೋಷ್ಠಿಯಿಂ ಸುಖಿವಿರ್ದರುತ್ಸವದೊಳು ೫೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲ ಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೬೦

### ಆರನೆಯ ಸಂಧಿ ಸಂಪೂರ್ಣ

ನಾನಾ ವಾದ್ಯಗಳ ಧ್ವನಿಯೊಡನೆ ತನ್ನ ಮನೆಗೆ ಕೂಡಲೆ ಕರೆತಂದನು. ಬಹಳ ವೈಭವ-ಸಂತೋಷಗಳಿಂದ ಮನಃಪೂರ್ವಕವಾಗಿ ಎಲ್ಲರಿಗೂ ಒಂದೇ ರೀತಿಯಲ್ಲಿ ಸ್ನಾನ, ಭೋಜನ ಮೊದಲಾದ ಸತ್ಕಾರವನ್ನು ಮಾಡಿಸಿದನು. ೫೯. ಅವರೆಲ್ಲರನ್ನೂ ಉಚಿತವಾದ ಮಾತುಗಳಿಂದ ಸತ್ಕರಿಸಿದನು. ಅನೇಕ ರೀತಿಯ ಉಪಚಾರಗಳನ್ನು ಮಾಡಿದನು. ಅನಂತರ ಆ ಶಿವಭಕ್ತರೆಲ್ಲರಿಗೂ ಮನೆಮಠಗಳನ್ನು ಕೊಡಿಸಿದನು. ಕೆಲವರಿಗೆ ಸ್ವಂತ ಆಸ್ತಿಪಾಸ್ತಿಗಳನ್ನು ಮಾಡಿಸಿಕೊಟ್ಟನು. ಕೆಲವರಿಗೆ ಬೇರೆಬೇರೆಯ ಕಾಯಕಗಳನ್ನು ನಿಯಮಿಸಿದನು. ಚೆನ್ನಬಸವಣ್ಣ ಬಸವಣ್ಣ ಇಬ್ಬರೂ ಈ ರೀತಿ ಅತ್ಯಂತ ಸಂತೋಷಾನಂದಗಳಿಂದ ಶಿವತತ್ತ್ವಗೋಷ್ಠಿಯಲ್ಲಿ ಉತ್ಸಾಹದಿಂದ ಸುಖವಾಗಿದ್ದರು. ೬೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

### ಆರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಏಳನೆಯ ಸಂಧಿ

ಸೂಚನೆ : ವಿಸ್ತಾರದಿಂದೆಸೆವ ಬಿಜ್ಜಳಮಹೀಪಾಲ
ನಾಸ್ಥಾನಕೈತಂದು ಮಂಚಣ್ಣ ಚಹಡಿಯಂ
ವಿಸ್ತಾರದಿಂ ಪೇಳೆ ಕೇಳ್ದು ಭೂಪಂ ಚೆನ್ನಬಸವನಂ ಕರೆಯಿಸಿದನು

ಪರಮೇಷ್ಠಿ ಸಕಲರಂ ಪಡೆದೆನೆನಲಾತನಂ
ಸರಸಿಜಂ ಪಡೆದೆನೆಂದೆನಲದಂ ಹರಿ ತನ್ನ
ವರನಾಭಿಯಿಂ ಪಡೆದೆನೆನಲಾತನಂ ಶರಧಿ ತಾಳ್ದೆನೆನಲದ ಮುನಿಪನು
ಧರಿಸಲಾತನ ಹರವಿ ಧರಿಸಲದ ಭೂಮಿ ತಾಂ
ಧರಿಸಲದ ಫಣಿಪಾಲ ಧರಿಸಲದು ಶಿವೆಯ ಕಿರು
ಬೆರಲಿಗುಂಗುರವಾಗಲಾ ಶಿವೆಯನೆಡದೊಡೆಯೊಳಾಂತ ಶಿವ ಸಲಹೆಮ್ಮನು ೧

ಇರಲಿತ್ತ ರಿಪುರಾಯಮೇಘಜಂಝಾನಿಲಂ
ಪರರಾಯಗರ್ವ ಪರ್ವತದಳನದಂಭೋಳಿ
ಧುರಮತ್ತರಾಯಮದಮಾತಂಗತುಂಗಕುಂಭಸ್ಥಳವಿದಾರಣಹರಿ
ಅರಿರಾಯವಾರ್ಧಿಶೋಷಣ ವಾಡಬಾನಲಂ
ಬಿರುದಂಕರಾಯ ಫಣಿಕುಲಗರುಡನಧಟ ರಾ
ಯರಗಂಡನೆನಿಪ ಬಿಜ್ಜಳಮಹಾರಾಯನೊಡ್ಡೋಲಗದೊಳೊಪ್ಪಿರ್ದನು ೨

ಸೂಚನೆ : ಒಂದು ದಿವಸ ವೈಭವದಿಂದ ಸೇರಿದ್ದ ಬಿಜ್ಜಳನ ಆಸ್ಥಾನಕ್ಕೆ ಮಂಚಣ್ಣನು ಬಂದನು. ರಾಜನಿಗೆ ಚೆನ್ನಾಗಿ ಚಾಡಿಯನ್ನು ಹೇಳಿದನು. ಅದನ್ನು ಕೇಳಿ ರಾಜನು ಚೆನ್ನಬಸವನನ್ನು ಕರೆಯಿಸಿದನು. ೧. ಬ್ರಹ್ಮನು 'ನಾನು ಎಲ್ಲರನ್ನೂ ಸೃಷ್ಟಿ ಮಾಡಿದೆ' ಎಂದ. 'ನಾನು ಬ್ರಹ್ಮನನ್ನು ಪಡೆದೆ' ಎಂದಿತು ಕಮಲ. ವಿಷ್ಣುವು 'ನನ್ನ ಹೊಕ್ಕಳಿನಲ್ಲಿ ಅದನ್ನು ಪಡೆದೆ' ಎಂದ. 'ಆ ವಿಷ್ಣುವನ್ನು ನಾನು ಹೊಂದಿದ್ದೆನು' ಎಂದಿತು ಸಮುದ್ರ. ಆ ಸಮುದ್ರವನ್ನು ಅಗಸ್ತ್ಯಮುನಿಯು ಕುಡಿದನು. ಅವನನ್ನು (ಅಗಸ್ತ್ಯನನ್ನು) ಮಡಕೆಯು ಪಡೆಯಿತು. ಆ ಮಡಕೆಯನ್ನು ಭೂಮಿ ಧರಿಸಿತ್ತು. ಭೂಮಿಯನ್ನು ಆದಿ ಶೇಷನು ಧರಿಸಿದನು. ಆದಿಶೇಷನನ್ನು ಪಾರ್ವತಿಯು ತನ್ನ ಕಿರುಬೆರಳಿಗೆ ಉಂಗುರವಾಗಿ ಧರಿಸಿದಳು. ಅಂಥ ಪಾರ್ವತಿಯನ್ನು ಎಡತೊಡೆಯಲ್ಲಿ ಧರಿಸಿದಂತಹ ಶಿವನು ನಮ್ಮನ್ನು ಕಾಪಾಡಲಿ. ೨. ಹೀಗಿರಲು ಇತ್ತ 'ಶತ್ರುರಾಜರೆಂಬ ಮೋಡಗಳಿಗೆ ಚಂಡಮಾರುತ','ಶತ್ರು ರಾಜರ ಗರ್ವವೆನ್ನುವ ಪರ್ವತವನ್ನು ಸೀಳುವ ವಜ್ರಾಯುಧ', 'ಯುದ್ಧದಲ್ಲಿ ಮದಿಸಿದ ರಾಜರೆಂಬ ಮದ್ದಾನೆಗಳ ಎತ್ತರವಾದ ಕುಂಭಸ್ಥಳವನ್ನು ಬಗೆದು ಹೋಳುಮಾಡುವ ಸಿಂಹ', 'ಶತ್ರುರಾಜರೆಂಬ ಸಮುದ್ರವನ್ನು ಶೋಷಿಸುವ ವಡಬಾಗ್ನಿ', 'ಬಿರುದುಗಳನ್ನು ಹೊತ್ತ ಪ್ರಸಿದ್ಧರಾದ ರಾಜರೆಂಬ ಸರ್ಪಕುಲಕ್ಕೆ ಗರುಡ', 'ಪರಾಕ್ರಮಿಗಳಾದ ರಾಜರಿಗೇ

CC-0. Jangamwadi Math Collection. Digitized by eGangotri

ಉದಯಾಚಲದ ಮೇಲೆ ಕಂಗೊಳಿಪ ರವಿಯಂತೆ
ಪದಪಿನಿಂ ಕನಕಸಿಂಹಾಸನದ ಮೇಲೆ ಭೂ
ಸುದತಿಯಧಿನಾಯಕಂ ಬಿಜ್ಜಳಂ ರತ್ನಭೂಷಣಕಾಂತಿ ರುಚಿಗಳಂತೆ
ಒದವಿ ನೆರೆ ತೊರೆ ಪರರಾಜನಿಸ್ತೇಜನ
ಗ್ಗದ ವೈರಿಸೈನ್ಯತಿಮಿರಾಪನೋದಕ್ಷಮಂ
ಸದಮಲಂ ಪದ್ಮಿನೀಚಿತ್ತಾನುಕೂಲನೊಪ್ಪಿರ್ದನೊಡ್ಡೋಲಗದೊಳು ೩

ಪೊಳೆವ ಮಕುಟದ ರತ್ನಕಾಂತಿಗಳ್ ದಿಗ್ಭಿತ್ತಿ
ಗಳೊಳಮರ್ದು ನಾನಾ ವಿಚಿತ್ರಚಿತ್ರದ ತೆರದೆ
ತೊಳಗೆ ಭೂಷಣ ಖಚಿತ ಮೌಕ್ತಿಕ ಮರೀಚಿ ಪಗಲೊಳು ಜೊನ್ನಮಂ ಪ್ರಕಟಿಸೆ
ಥಳಥಳಿಸುವಂಗಲತೆಯೊಳ್ ಪುದಿದ ಸಕಲಪರಿ
ಮಳಕೆರಗುವಳಿಮಾಲೆ ಮೇಲೆ ಮಂಡಳಿಸಿ ನಿಲೆ
ಕೆಲಬಲದ ಗದ್ದುಗೆಗಳೊಳು ಮಂಡಲಾಧೀಶರೊಪ್ಪಿರ್ದರಾ ಭೂಪನಾ ೪

ಮುರಿದ ಮೀಸೆಗಳ ಕೆಂಗಣ್ಣುಗಳ ಪಣೆಯ ಕ
ಸ್ತುರಿಯತಿಲಕದ ಮೆಯ್ಗೆ ಪೊರೆದ ಗಂಧದ ಕಾಲ
ಬಿರುದುತೊಡರಿನ ವಾಮಕರದ ಪೊಂಜರಪಣಿಯ ಬೆರಲ ಮಣಿಮುದ್ರಿಕೆಗಳ

ಗಂಡಾಂತರವನ್ನು ಉಂಟುಮಾಡುವ ಶೌರ್ಯವುಳ್ಳವನು' ಎಂಬ ಬಿರುದುಗಳನ್ನು ಪಡೆದಿದ್ದ ಬಿಜ್ಜಳ ಮಹಾರಾಜನು ರಾಜಸಭೆಯಲ್ಲಿ ಶೋಭಿಸುತ್ತಿದ್ದನು. ೩. ಉದಯ ಪರ್ವತದ ಮೇಲೆ ಪ್ರಕಾಶಿಸುವ ಸೂರ್ಯನಂತೆ, ಕನಕಸಿಂಹಾಸನದ ಮೇಲೆ ಸೌರಂಭ ದಿಂದ ಭೂವನಿತೆಯ ಒಡೆಯನಾದ ಬಿಜ್ಜಳನು ಮನೋಹರವಾದ ವಜ್ರ-ವೈಡೂರ್ಯ ಕಾಂತಿಗಳಿಂದ ಹೆಚ್ಚಾಗಿ ಪ್ರಕಾಶಮಾನವಾಗಿ ಕಾಣುತ್ತಿದ್ದ. ಶತ್ರುರಾಜರನ್ನು ನಿಸ್ತೇಜ ಗೊಳಿಸುವವನೂ, ಬಲಶಾಲಿಗಳಾದ ಶತ್ರುಸೈನ್ಯವೆಂಬ ಕತ್ತಲೆಯನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳವನೂ, ನಿಷ್ಕಲ್ಮಷನೂ, ಉತ್ತಮವಾದ ಪದ್ಮಿನೀಜಾತಿಯ ಸ್ತ್ರೀಯರ ಮನಸ್ಸಿಗೆ ಅನುಕೂಲನೂ ಆದ ಬಿಜ್ಜಳನು ಒಡ್ಡೋಲಗದಲ್ಲಿ ಒಪ್ಪಿದ್ದನು. ೪. ಹೊಳೆ ಯುವ ಕಿರೀಟಗಳ ರತ್ನಕಾಂತಿಯು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿ ಚಿತ್ರವಿಚಿತ್ರವಾಗಿ ಪ್ರಕಾಶಿಸುತ್ತಿತ್ತು. ಮುತ್ತುಗಳಿಂದ ಕೂಡಿದ ಆಭರಣದ ಕಾಂತಿಯು ಹಗಲಿನಲ್ಲಿಯೇ ಬೆಳುದಿಂಗಳನ್ನು ಚೆಲ್ಲಿತ್ತು. ಕಾಂತಿಯಿಂದ ಕೂಡಿದ್ದ ಕೋಮಲವಾದ ಅಂಗಾಂಗಗಳಿಗೆ ಹಚ್ಚಿಕೊಂಡಿದ್ದ ನಾನಾವಿಧ ಪರಿಮಳದ್ರವ್ಯದ ಸುವಾಸನೆಗೆ ದುಂಬಿಗಳ ಸಮೂಹವು ಮುತ್ತಿಕೊಂಡಿದ್ದಿತು. ಈ ರೀತಿ ಅಕ್ಕಪಕ್ಕದ ಸಿಂಹಾಸನಗಳ ಮೇಲೆ ಬಿಜ್ಜಳಭೂಪಾಲನ ಮಾಂಡಲಿಕರು ಮಂಡಿಸಿದ್ದರು. ೫. ಬಾಗಿ ಹುರಿಮಾಡಿದ ಮೀಸೆಗಳು, ಕೆಂಪಾದ ಕಣ್ಣುಗಳು, ಹಣೆಯ ಮೇಲೆ ಕಸ್ತೂರಿತಿಲಕ, ಮೈಯಿಗೆಲ್ಲ ಬಳಿದಿದ್ದ ಸುಗಂಧ, ಬಿರುದಿನ ಪೆಂಡೆಯಗಳನ್ನು ಕಟ್ಟಿದ್ದ ಕಾಲುಗಳು, ಎಡಗೈಯಲ್ಲಿ ಬಂಗಾರದ ಚೈನು, ಬೆರಳುಗಳಲ್ಲಿ

CC-0. Jangamwadi Math Collection. Digitized by eGangotri

ಕೊರಲಹಾರದ ಕರ್ಣಭೂಷಣದ ಝುಳಪಿಸುವ
ಕರವಾಳ ಹೊಳಹುಗಳ ಬಳೆದ ಮುಡುಹುಗಳ ಸಂ
ಗರಧೀರರಾಜಸುಕುಮಾರರೊಪ್ಪಿರ್ದರವನೀಪಾಲನಿಕ್ಕೆಲದೊಳು ೫

ಬೆಸಸಿದೊಳಿಗವನಾ ಪಡಿಹಾರರಿಂದಲೊದ
ಗಿಸಿ ಕಾರ್ಯಭಾಗವಿಡಿದರಸನಿಚ್ಛೆಯನರಿದು
ಬೆಸುಗೆಬಿಡಿದಂತೆ ಹತ್ತಿಸಿ ಹವಣನಾರಯ್ದು ಲಂಚವಂ ಮೊದಲೆ ಕೊಂಡು
ಕಸವರವನರಮನೆಯ ಭಂಡಾರಕೊದಗಿಸುವ
ಪೆಸರುಳ್ಳ ರಾಜಮಂತ್ರಿಗಳಿರ್ದರಿಕ್ಕೆಲದೆ
ಬಸವೇಶನುಳಿಯೆ ಮಿಕ್ಕವರವನಿಪಾಲಕುಲತಿಲಕ ಬಿಜ್ಜಳರಾಯನಾ ೬

ಕರಡು ದಿನವಹಿವರ್ಗ ಮಾಸಾಂತಕಾದಿಗಳ
ಬರೆದೋದಿ ಸರಿದೋರಿ ಭೇದಕರ್ ಬಹುವಿಧದೆ
ಪರಿಕಿಸಲೊಳಗುಗಾಣದಂತೆ ಛಿದ್ರಿಸಿ ತೆಗೆವ ಜಾಣ್ಮೆ ಕಡುಸ್ಸೈಜವಾಗೆ
ಪರಮಲಂಚವೆ ತಮಗೆ ಜೀವನವೆದೆನಿಸಿ ಚ
ಚ್ಚರದಿಂದಲೈಶ್ವರ್ಯವಂ ಪಡೆದು ನೆರೆ ಬಾಳ್ವ
ಕರಣಿಕಶಿರೋಮಣಿಗಳೊಪ್ಪಿರ್ದರಾ ಬಿಜ್ಜಳಾವನಿಪನೋಲಗದೊಳು ೭

ರತ್ನದ ಉಂಗುರಗಳು, ಕೊರಳಿನಲ್ಲಿ ಹಾರಗಳು, ಕಿವಿಯಲ್ಲಿ ಆಭರಣಗಳು ಇದ್ದವು. ಕೈಯಲ್ಲಿ ಝಳಪಿಸುವ ಕತ್ತಿ, ಬಲಿಷ್ಠವಾಗಿ ಬೆಳೆದ ಭುಜಗಳು ಇವುಗಳಿಂದ ಕಂಗೊಳಿಸುತ್ತಿದ್ದ ಯುದ್ಧದಲ್ಲಿ ಧೀರರಾದ ರಾಜಕುಮಾರರು ಬಿಜ್ಜಳರಾಯನ ಎರಡು ಪಕ್ಕದಲ್ಲಿಯೂ ಇದ್ದರು. ೬. ರಾಜನು ಹೇಳಿದ ಕೆಲಸವನ್ನು ಸೇವಕರಿಂದ ಮಾಡಿಸಿ ಅವನ ಇಚ್ಛೆಯನ್ನು ಅರ್ಥಮಾಡಿಕೊಂಡು, ಬೆಸುಗೆಹಾಕಿದಂತೆ ವರ್ತಿಸುತ್ತ, ಅವರವರ ಯೋಗ್ಯತೆಗೆ ತಕ್ಕಂತೆ ಲಂಚವನ್ನು ಮೊದಲೇ ತೆಗೆದುಕೊಂಡು, ಅರಮನೆಯ ಭಂಡಾರಕ್ಕೆ (ಸಂಪತ್ತು) ಚಿನ್ನವನ್ನು ಒದಗಿಸುವ ಖ್ಯಾತಿಹೊಂದಿದ ಬಸವಣ್ಣನನ್ನು ಬಿಟ್ಟು ಉಳಿದ ರಾಜಮಂತ್ರಿಗಳು ಬಿಜ್ಜಳರಾಜನ ಎರಡು ಕಡೆಯೂ ಇದ್ದರು. ೭. ಕಚ್ಚಾಲೆಕ್ಕ, ಮುಖ್ಯಲೆಕ್ಕಾಚಾರ, ಮಾಸ, ವರ್ಷಗಳ ಲೆಕ್ಕಗಳನ್ನು ಕರಣಿಕರು ಬರೆಯುತ್ತಿದ್ದರು. ಅದನ್ನು ಲೆಕ್ಕಪರಿಶೋಧಕರು ಬರೆದೋದಿ, ಸರಿದೋದಿ, ಬಹುವಿಧವಾಗಿ ಪರೀಕ್ಷಿಸಿದರೂ ಅದರಲ್ಲಿನ ದೋಷವು ಕಾಣದಂತೆ ರಹಸ್ಯವಾಗಿಡುವ ಬುದ್ಧಿವಂತಿಕೆ ಅವರಿಗೆ (ಎಂದರೆ ಕರಣಿಕರಿಗೆ) ಸಹಜವಾಗಿದ್ದಿತು. ಅತಿಯಾದ ಲಂಚವೇ ಅವರ ಉದ್ಯೋಗವೆನಿಸಿತ್ತು. ಬಹು ಎಚ್ಚರಿಕೆಯಿಂದ ಸಂಪತ್ತನ್ನು ಗಳಿಸಿ ಸುಖವಾಗಿ ಬಾಳುತ್ತಿದ್ದರು. ಹೀಗೆ ಬಾಳುವ ಕರಣಿಕಶಿರೋ

CC-0. Jangamwadi Math Collection. Digitized by eGangotri

ಶ್ರುತಿ ಶಬ್ದ ತರ್ಕವೇದಾಂತಾರ್ಥಕೋವಿದರ್
ನುತಪುರಾಣಾಗಮವಿಚಾರನಿಪುಣರ್ ಸಮು
ನ್ನತಕನಕಪೀಠದೊಳ್ ಬೆಳೆದ ಗಡ್ಡದ ರತ್ನಕುಂಡಲಯುಗಂಗಳೆಸೆವ
ಶ್ರುತಿಪುಟಂಗಳ ಮೇಲುಗುಲ್ಲಾಯಿಗಳ ಸಮಾ
ಶ್ರಿತಯಜ್ಞಸೂತ್ರಕಾಸೀಮುದ್ರಿಕೆಗಳ ಪ್ರ
ಚಿತನಿಕರವೊಪ್ಪಿರ್ದುದವನಿಪಾಲಕನ ಬಲಗಡೆಯೊಳ್ ವಿಲಾಸದಿಂದೆ ೮

ಪರದೇಶಕಾಲ ಶಾರೀರಸೂತ್ರಂಗಳಂ
ಪರಿವಿಡಿಯೊಳಷ್ಟಮಸ್ಥಾನಭೇದಂಗಳಂ
ಪರಿಕಿಸಲ್ ಸಕಲರೋಗಂಗಳ ನಿಧಾನಂಗಳರಿದಾ ಚಿಕಿತ್ಸೆಗಳನು
ಹರುಷದಿಂ ಮಾಳ್ಪ ಸದ್ಧರ್ಮದಯದಾಕ್ಷಿಣ್ಯ
ಪರಮಶಿವಭಕ್ತಿ ನಿರ್ಮತ್ಸರಂಗಳೊಳೆಸೆವ
ರುರುತರಸುವೈದ್ಯರೊಪ್ಪಿರ್ದರಾ ಬಿಜ್ಜಳಮಹೀಪಾಲನೋಲಗದೊಳು ೯

ನುಡಿದು ಪೊಗಳಿಸಿಕೊಂಬ ಪದಬಂಧರೀತಿಯಂ
ಬಿಡದೆ ಬಲ್ಲವರ ತಲೆದೂಗಿಸಿ ಸಮಸ್ಯವಂ
ಕೊಡಲೊಡನೆ ಪೂರಿಸುವ ಘಟಿಕಾಶತಕವನುಸಿರ್ದಾಕ್ಷಣಂ ಮೆಚ್ಚುಗಳನು

ಮಣಿಗಳು ಆ ಬಿಜ್ಜಳರಾಜನ ಆಸ್ಥಾನದಲ್ಲಿ ಇದ್ದರು. ೮. ವೇದ, ಶಬ್ದಶಾಸ್ತ್ರ, ತರ್ಕ, ವೇದಾಂತ, ಅರ್ಥಶಾಸ್ತ್ರ ಇವುಗಳಲ್ಲಿ ವಿಶೇಷ ಪಾಂಡಿತ್ಯವುಳ್ಳವರು ಅಲ್ಲಿದ್ದರು. ಶ್ರೇಷ್ಠ ವಾದ ಪುರಾಣ, ಆಗಮವಿಚಾರಗಳಲ್ಲಿ ನಿಪುಣರಾದವರು ಇದ್ದರು. ಉನ್ನತವಾದ ಬಂಗಾರದ ಆಸನಗಳಲ್ಲಿ ಬೆಳೆದ ಗಡ್ಡಗಳಿಂದಲೂ ಶೋಭಿಸುವ ಕಿವಿಯ ರತ್ನಕುಂಡಲ ಗಳಿಂದಲೂ, ಕಿವಿಗಳು ಮುಚ್ಚುವಂತೆ ಹಾಕಿಕೊಂಡಿದ್ದ ಕುಲಾವಿಗಳಿಂದಲೂ, ಧರಿಸಿದ್ದ ಯಜ್ಞೋಪವೀತ, ಕಾಸೀಮುದ್ರೆಗಳಿಂದಲೂ ಬೆಳಗುತ್ತ ಆ ರಾಜನ ಬಲಭಾಗದಲ್ಲಿ ಮಂಡಿಸಿದ್ದರು. ೯. ಆ ಬಿಜ್ಜಳರಾಜನ ಆಸ್ಥಾನದಲ್ಲಿ ಶ್ರೇಷ್ಠರಾದ ವೈದ್ಯರಿದ್ದರು. ಅವರು ದೇಶ ಕಾಲ ಶಾರೀರಸೂತ್ರಗಳನ್ನು ಅನುಕ್ರಮವಾಗಿ ತಿಳಿದಿದ್ದರು. ಅಷ್ಟಮ ಸ್ಥಾನ ಭೇದಗಳನ್ನು ಪರೀಕ್ಷಿಸುವ ಸಾಮರ್ಥ್ಯ ಹೊಂದಿದ್ದರು. ಎಲ್ಲ ರೀತಿಯ ರೋಗಗಳ ಮೂಲಕಾರಣಗಳನ್ನು ಕಂಡುಹಿಡಿದು ಚಿಕಿತ್ಸೆಗಳನ್ನು ಮಾಡುತ್ತಿದ್ದರು. ಅವರು ಧರ್ಮ, ದಯೆ, ದಾಕ್ಷಿಣ್ಯ, ಉನ್ನತ ಶಿವಭಕ್ತಿ ಹೊಂದಿ ಯಾರಲ್ಲಿಯೂ ದ್ವೇಷವಿಲ್ಲದವರಾಗಿದ್ದರು. ೧೦. ಆ ರಾಜನ ಬಲಭಾಗದ ರತ್ನಖಚಿತವಾದ ಆಸನಗಳನ್ನು ಕವಿಶ್ರೇಷ್ಠರು ಅಲಂಕರಿ ಸಿದ್ದರು. ಅವರು ಮಾತನಾಡುವುದರಲ್ಲಿ ಎಲ್ಲರಿಂದಲೂ ಹೊಗಳಿಸಿಕೊಳ್ಳುವರು. ಉತ್ತಮವಾದ ಪದಗಳ ಜೋಡಣೆಯ ಮಾರ್ಗವನ್ನು ಬಿಡದೆ ಪಂಡಿತರ ತಲೆದೂಗಿಸು ವರು. ಯಾರಾದರೂ ಸಮಸ್ಯೆಯನ್ನು ಕೊಟ್ಟರೆ ಕೂಡಲೇ ಪೂರ್ಣಮಾಡುತ್ತಿದ್ದರು.

CC-0. Jangamwadi Math Collection. Digitized by eGangotri

ಪಡೆವ ನವರಸರಸಿಕರೆಸೆವ ಕರ್ಣಾಟಕದ
ಬೆಡಗುಗಳ ಬಲ್ಲ ಸತ್ಕವಿಗಳೊಪ್ಪಿರ್ದರಾ
ಪೊಡವಿಪಾಲಕ ಬಿಜ್ಜಳನ ಬಲದ ಕಡೆಯು ಮಣಿಮಯದ ಗದ್ದುಗೆಗಳಲ್ಲಿ ೧೦

ಬಿರುದುರಾಯರ ಗಂಡ ಬೇಡಿದರವರ್ಗೀವ
ಗುರುದಾನರಾಧೇಯ ಶರನಿಧಿಸಮಾನ ಭಾ
ಸುರಮಹಾಗಂಭೀರ ತರುಣೀನಿಕಾಯಲೋಚನಕುಮುದಕುಲಶಶಾಂಕ
ಶರಣಾಗತಾನಂದಚೂತವನಚೈತ್ರ ಭೂ
ವರಶಿಖಾಮಣಿ ಜೀಯ ಬ್ರಹ್ಮಾಯು ನಿನಗೆಂದು
ಕರವೆತ್ತಿ ಪೊಗಳ್ವ ಪಾಠಕರ ಕೈವಾರ ಕಿವಿಗಿಡಿದುದಾ ನೃಪಸಭೆಯೊಳು ೧೧

ತಳಿರಡಿಗಳೊಳ್ದೊಡೆಗಳವರ್ದ ಬಲ್ಪೊರದಾರ
ಸೆಳೆನಡುವಿನವರ್ದ ಬಾಸೆಯು ಬಲ್ಮೊಲೆಗಳ ಥಳ
ಥಳಿಪ ನುಣ್ಗೊರಲ ನಳಿತೋಳ್ಗಳೆಸೆವಿಂದುಟಿಯು ಮೊಲ್ಲೆವಲ್ಗಳ ಸೊಗಸುವ
ತೊಳಪಗಣ್ಗಳ ತೆಳ್ಗದಂಪುಗಳ ಸಂಪಗೆಯು
ಪಳಿವ ಮೂಗಿನ ಚೆಲ್ವ ಕುಡಿಹುಬ್ಬುಗಳ ತುಂಬಿ
ಗಳ ಪೋಲ್ವ ಸುಳಿಗುರುಳ್ಗಳ ಪೆಣ್ಗಳಿರ್ದರಂದರಸಿನೊಡ್ಡೋಲಗದೊಳು ೧೨

ಒಂದು ಘಳಿಗೆಯಲ್ಲಿ ನೂರು ಪದ್ಯಗಳನ್ನು ರಚಿಸಿ ಹೇಳಿ ಬಹುಮಾನಗಳನ್ನು ಗಳಿಸುವ ನವರಸರಸಿಕರಾಗಿದ್ದರು. ಶ್ರೇಷ್ಠವಾದ ಕರ್ನಾಟಕದ ಸೌಂದರ್ಯ ಚಮತ್ಕಾರಗಳನ್ನು ಅವರೆಲ್ಲರೂ ಬಲ್ಲವರಾಗಿದ್ದರು. ೧೧. 'ಬಿರುದು ಹೊತ್ತ ರಾಜರ ಗಂಡ', 'ಬೇಡಿದವರಿಗೆ ವಿಶೇಷವಾಗಿ ದಾನಮಾಡುವ ಕರ್ಣ', 'ಸಾಗರಕ್ಕೆ ಸಮನಾಗಿ ಪ್ರಕಾಶಿಸುವ ಮಹಾಗಾಂಭೀರ್ಯ ಉಳ್ಳವನೇ' 'ತರುಣೀಜನಸಮೂಹದ ಕಣ್ಣೆಂಬ ಕನ್ನೈದಿಲೆಗಳಿಗೆ ಚಂದ್ರನಂತಿರುವವನೇ' 'ಶರಣಾಗತರಾದವರ ಆನಂದವೆಂಬ ಮಾವಿನಮರಗಳ ಕಾಡಿಗೆ ಚೈತ್ರಮಾಸದಂತಿರುವವನೇ', 'ರಾಜಾಧಿರಾಜ, ಪ್ರಭುವೇ, ನಿನಗೆ ದೀರ್ಘಾಯುವಾಗಲಿ' ಎಂದು ಕೈಯೆತ್ತಿ ಹೊಗಳುವ ಮಂಗಳಪಾಠಕರ ಸ್ತುತಿ ಆ ರಾಜನ ಸಭೆಯಲ್ಲಿದ್ದವರ ಕಿವಿಗಳಲ್ಲಿ ತುಂಬಿತು. ೧೨. ಬಿಜ್ಜಳರಾಜನ ಒಡ್ಡೋಲಗದಲ್ಲಿ ಸುಂದರಿಯರಾದ ಹೆಂಗಸರಿದ್ದರು. ಚಿಗುರಿನಂತಿರುವ ಪಾದಗಳು ; ಚೆಲುವಾಗಿ ಬೆಳೆದ ತೊಡೆಗಳು ; ಅದಕ್ಕೊಪ್ಪುವಂತೆ ಕೊಬ್ಬಿ ಬೆಳೆದಿದ್ದ ನಿತಂಬಗಳು ; ತೆಳುವಾದ ನಡು ; ಹೊಕ್ಕುಳಿಂದ ಎದೆಯವರೆಗೆ ಬೆಳೆದಿದ್ದ ಬಾಸೆ ; ಪುಷ್ಟವಾದ ಮೊಲೆಗಳು ; ಹೊಳೆಯುತ್ತಿದ್ದ ನಯವಾದ ಕೊರಲು ; ಕೋಮಲವಾದ ತೋಳುಗಳು ; ಪ್ರಕಾಶಮಾನವಾಗಿ ರಂಜಿಸುವ ತುಟಿಗಳು ; ಮೊಲ್ಲೆಯಮೊಗ್ಗಿನಂತಹ ಶುಭ್ರವಾದ ಹಲ್ಲುಗಳು ; ಸೊಗಸಾಗಿ ಹೊಳೆಯುತ್ತಿದ್ದ ಕಣ್ಣುಗಳು ; ಮೃದುವಾದ ಕೆನ್ನೆಗಳು ; ಸಂಪಿಗೆಯ ಹೂಗಳನ್ನೂ ಹಳಿಯುವಂತಿದ್ದ ಎಸಳಾದ ಮೂಗು ; ಕುಡಿಹುಬ್ಬುಗಳು; ಚೆಲುವಾದ ತುಂಬಿಗಳನ್ನು ಹೋಲುವ ಮುಂಗುರುಳುಗಳು; ಇವುಗಳಿಂದ ಸುಂದರವಾಗಿ

CC-0. Jangamwadi Math Collection. Digitized by eGangotri

ಕಿವಿಗಳಂ ಮಿಗುವಕ್ಷಿಗಳ್ ಕುಚದ್ವಯಮಧ್ಯ
ದವಿರಳವನಿರದೆ ಭೇದಿಸಿ ಮಿಗುವ ಬಡಬಾಸೆ
ತವೆ ಪಿಮ್ಮಡಂಗಳಂ ಮಿಗುವ ಘನವೇಣಿಲತೆ ಕಣ್ಗೆ ಮಂಗಳವೆನಿಸುವ
ನವಹೇಮಭೂಷಣರುಚಿಯ ಮಿಗುವ ತನುಕಾಂತಿ
ಪವಳದುಟಿರಾಗಮಂ ಮಿಗುವ ನಿರ್ಮಳ ರದ
ಚ್ಛವಿಗಳೊಪ್ಪಿರೆ ಮೆರೆದರವನಿಪಸಭಾಂಗಣದೊಳೋಲಗದ ಬಾಲಕಿಯರು ೧೩

ತನುಗಂಪಿಗೆಳಸಿ ಬಂದೆರಗುವಳಿತತಿಯ ಕರ
ವನಜದೊಳ್ಪಿಡಿದ ನೀಲಾಬ್ಜದಿಂ ಸೋವುತೊ
ಯ್ಯನೆ ನುಡಿಗಲಿಯಲೆಂದು ಬಂದ ಪುರುಳಿಗಳನಾಳಿಯರಿಂದೆ ತೊಲಗಿಸುತ್ತೆ
ಮನಸೋತು ನಡೆಯನಭ್ಯಾಸಿಸಲ್ ಬಂದ ಮೋ
ಹನರಾಜಹಂಸಿಗಳ ಪದನೇವುರದ ಕಳ
ಧ್ವನಿದೋರಿ ಬೆದರಿಸುತ್ತೋಲಗದ ವಾರನಾರಿಯರಿರ್ದರಾ ಸಭೆಯೊಳು ೧೪

ನಿರುತದಿಂ ಭಗದತ್ತನೆಣೆ ಸುರೇಂದ್ರಂ ಸಾಟಿ
ಕರಿಕಂಧರಾರೋಹಣಕ್ಕಾಹವಕ್ಕೆಂದು
ಬಿರುದುಪೆಂಡೆಯ ಕಾಲೊಳಿಟ್ಟು ಪೊಗಳಿಸಿಕೊಂಬ ಧುರಧೀರ ಮಾವತಿಗರು

ರಂಜಿಸುತ್ತಿದ್ದರು ಆ ಹೆಂಗಳೆಯರು. ೧೩. ಕಿವಿಗಳನ್ನು ಮೀರಿದ ಕಣ್ಣುಗಳು, ದಪ್ಪನಾಗಿದ್ದ ಮೊಲೆಗಳ ಮಧ್ಯೆ ಹೆಚ್ಚು ಜಾಗವಿರದಿದ್ದರೂ ಅದನ್ನು ಭೇದಿಸಿಕೊಂಡು ಬೆಳೆದಿದ್ದ ತೆಳ್ಳನೆಯ ಬಾಸೆ (ಹೊಕ್ಕಳ ಮೇಲಿನ ಕೂದಲು), ಪಾದಗಳ ಹಿಮ್ಮಡಿಯನ್ನೂ ಮೀರಿ ಬಳ್ಳಿಯಂತೆ ಬೆಳೆದಿದ್ದ ನೀಳವಾದ ತಲೆಗೂದಲು, ಹೊಸದಾದ ಚಿನ್ನದಾಭರಣದ ಕಾಂತಿಯನ್ನೂ ಮೀರಿಸುವ ಮನೋಹರವಾದ ಶರೀರಕಾಂತಿ, ಹವಳದಂತೆ ಕೆಂಪಾದ ತುಟಿಯ ಕಾಂತಿಯನ್ನು ಮೀರಿರುವ ನಿರ್ಮಲವಾದ ಹಲ್ಲುಗಳ ಧವಳಕಾಂತಿ, ಇವುಗಳನ್ನು ಹೊಂದಿದ್ದ ಬಾಲಕಿಯರು ರಾಜನ ಸಭೆಯಲ್ಲಿ ಶೋಭಿಸುತ್ತಿದ್ದರು. ೧೪. ದೇಹದ ಸುವಾಸನೆಯನ್ನು ಬಯಸಿ ಬಂದು ಮುತ್ತುವ ದುಂಬಿಗಳ ಸಮೂಹವನ್ನು ತಾವರೆಯಂತಿದ್ದ ಕೈಯಲ್ಲಿ ಹಿಡಿದಿದ್ದ ಕನ್ನೈದಿಲೆಯ ಹೂಗಳಿಂದ ತಕ್ಷಣ ಓಡಿಸುತ್ತ, ಮಾತು ಕಲಿಯಲೆಂದು ಬಂದ ಗಿಳಿಯ ಮರಿಗಳನ್ನು ದಾಸಿಯರಿಂದ ಓಡಿಸುತ್ತ, ತಮ್ಮ ನಡೆಗೆ ಮನಸೋತು ತಾವೂ ಅದನ್ನು ಕಲಿಯಲು ಬಂದ ಮೋಹಕವಾದ ರಾಜಹಂಸಗಳನ್ನು ತಮ್ಮ ಕಾಲ್ಗೆಜ್ಜೆಯ ಮಂಜುಳಧ್ವನಿಯಿಂದ ಹೆದರಿಸುತ್ತ ಇದ್ದ ವಾರಾಂಗನೆಯರು ಆ ಆಸ್ಥಾನದಲ್ಲಿದ್ದರು. ೧೫. ನಿಜವಾಗಿಯೂ ಇವರೊಡನೆ ಆನೆಯ ಹೆಗಲನ್ನು ಏರುವುದರಲ್ಲಿ ಭಗದತ್ತನೇ ಸಮಾನ, ಯುದ್ಧಕ್ಕೆ ದೇವೇಂದ್ರನೇ ಎಣೆ ಎಂಬ ಬಿರುದಿನ (ಬಳೆ) ಆಭರಣವನ್ನು ಕಾಲುಗಳಲ್ಲಿ ಧರಿಸಿಕೊಂಡು ಯುದ್ಧವೀರರಾದ ಮಾವುತರಿದ್ದರು. ಯೋಚಿಸಿ



CC-0. Jangamwadi Math Collection. Digitized by eGangotri

ಪರಿಕಿಪೊಡೆ ತಮಗೆ ರೈವಂತನೇ ಸರಿ ಧನೇ
ಶ್ವರನೆ ಪಾಸಟಿ ಹಯಾರೋಹಣಕೆ ಸಂಗರಕೆ
ದೊರೆಯೆ ಮಿಕ್ಕವರೆಂಬ ವೀರರಾವುತರಿರ್ದರವನೀಶನೋಲಗದೊಳು ೧೫

ಸಚಿವ ಸಾವಂತ ಸೇನಾನಾಥ ಬಾಂಧವ
ಪ್ರಚಯ ಹಯವಾಹ ಗಜವಾಹರಾ ಪ್ರತಿಹಾರ
ರುಚಿರ ಶಾಸ್ತ್ರಾರ್ಥಕೋವಿದ ಪುರೋಹಿತ ಸೂತ ಸಂಧಿವಿಗ್ರಹಿ ಮಾಗಧ
ಪ್ರಚುರಕವಿ ವಾಗ್ಮಿ ತಾರ್ಕಿಕ ಮಂತ್ರವಾದಿ ಛವ
ಶುಚಿ ಪುರಾಣಿಕ ವೈದ್ಯ ನಟಗಾನರೆಂಬವರ್
ವಿಚಲದವಯವರಾಗಿ ಬಿಜ್ಜಳಮಹೀಪಾಲನೋಲಗದೊಳೆಸೆದಿರ್ದರು ೧೬

ಚೋಳನಂ ಚಿತ್ತೈಸು ಚಿತ್ತೈಸು ಕೇರಳನ್ನ
ಪಾಳನಂ ಚಿತ್ತೈಸು ಸಗರನಂ ಚಿತ್ತೈಸು
ಲಾಳನಂ ಚಿತ್ತೈಸು ಮಗಧನಂ ಚಿತ್ತೈಸು ಗಾಂಧಾರದೇಶದವನ
ಗೌಳನಂ ಚಿತ್ತೈಸು ಚಿತ್ತೈಸು ವೀರನೇ
ಪಾಳನಂ ಚಿತ್ತೈಸು ಯವನನಂ ಕೊಂಗು ಮಲೆ
ಯಾಳ ಮಾಳವ ಮಲೆಯ ಮಾತುಳ ಮಹಾರಾಷ್ಟ್ರ ಕರ್ಣಾಟಕಾದಿಯಾದ ೧೭

ಪೊಡವಿಪರ ಚಿತ್ತೈಸು ಸಕಲ ಮಂತ್ರಿಗಳ ವಂ
ಗಡಮಿದಂ ಚಿತ್ತೈಸು ವೀರಸೇನಾನಿಗಳ
ಗಡಣಮಂ ಚಿತ್ತೈಸು ಕಾಲವರ ಚಿತ್ತೈಸು ಮೇಲವರ ಚಿತ್ತೈಸು ಹೋ

ನೋಡಿದರೆ ಕುದುರೆಯನ್ನು ಹತ್ತುವುದರಲ್ಲಿ ನಮಗೆ ರೈವಂತನೇ ಸರಿಯಾದವನು. ಯುದ್ಧ ಮಾಡಲು ಕುಬೇರನೇ ಸಮಾನ. ಮಿಕ್ಕವರು ಸಮಾನರಾಗುತ್ತಾರೆಯೆ ಎನ್ನುವ ವೀರರಾದ ಅಶ್ವಾರೋಹಿಗಳು ಆ ರಾಜಸಭೆಯಲ್ಲಿ ಇದ್ದರು. ೧೬. ಆ ಬಿಜ್ಜಳ ಮಹಾರಾಜನ ಆಸ್ಥಾನದಲ್ಲಿ ಮಂತ್ರಿಗಳು, ಸಾಮಂತರು, ಸೇನಾಪತಿಗಳು, ಬಂಧುಗಳ ಸಮೂಹ ಆನೆ–ಕುದುರೆ ಸವಾರರು, ದ್ವಾರಪಾಲಕರು ಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿದ ವಿದ್ವಾಂಸರು, ಪುರೋಹಿತರು, ವಂದಿಮಾಗಧರು. ಸಂಧಿವಿಗ್ರಹಿಗಳು, ಪ್ರಸಿದ್ಧರಾದ ಕವಿಗಳು, ವಾಕ್ಚತುರರು, ತರ್ಕಶಾಸ್ತ್ರ ಪಂಡಿತರು, ಮಂತ್ರವಾದಿಗಳು, ಮಹಾಶುಚಿವಂತರಾದ ಪುರಾಣಿಕರು, ವೈದ್ಯರು, ನಟರು, ನಾಯಕರು ಅಲುಗಾಡದೆ ಗಂಭೀರವಾಗಿ ಕುಳಿತಿದ್ದರು. ೧೭. ಇವನು ಚೋಳದೇಶದ ರಾಜ, ಈತನೇ ಕೇರಳದೇಶದ ರಾಜ. ನೋಡು ಈತನೇ ಸಗರ. ಕೇಳು ಇವನೇ ಲಾಳದೇಶದವನು, ಇವನು ಮಗಧದೇಶದವನು. ಈತನು ಗಾಂಧಾರದೇಶದವನು, ಇವನು ಗೌಳದೇಶದವನು. ಈ ವೀರನೇ ನೇಪಾಳದ ರಾಜ. ಇವನು ಯವನ, ಕೊಂಗುದೇಶ, ಮಲೆಯಾಳ, ಮಾಳವ, ಮಲಯಾದೇಶ, ಮಾತುಳದೇಶ, ಮಹಾರಾಷ್ಟ್ರ, ಕರ್ನಾಟಕವೇ ಮೊದಲಾದ ದೇಶಗಳ ೧೮. ರಾಜರನ್ನು ನೋಡು, ಇದು ಸಕಲ ಮಂತ್ರಿಗಳ ಸಮೂಹ. ಇದೋ ವೀರಸೇನಾನಿಗಳ ಸಮೂಹ. ಇವರು

CC-0. Jangamwadi Math Collection. Digitized by eGangotri

ಎಡಬಲ ಪರಾಕು ಜಯ ಚಿತ್ತಾವಧಾನ ಜಯ
ಕುಡು ಪರಾಕೆಚ್ಚರಿಕೆ ಬಹುಪರಾಕಯ್ಯಯೆಂ
ದೊಡನೊಡನೆ ನೆಲನನುಗ್ಘಡಿಪ ಕಂಚುಕಿಗಳಬ್ಬರ ಮಸಗಿತಾ ಸಭೆಯೊಳು ೧೮

ಬಂದನೋಲಗಕೆ ತತ್ಸಮಯದೊಳ್ ಸಕಲನೃಪ
ವೃಂದವೃಂದಾರಕಂಗೆತ್ತಿ ಕೈಗಳ ಮುಗಿದು
ಸಂದಣಿಯ ಕಡೆಗೆ ತೊಲಗಿಸಿ ರತ್ನಖಚಿತ ಮೃಗರಾಜಪೀಠದ ಕೆಲದೊಳು
ನಿಂದು ಕರದಿಂ ಬಾಯ ಮುಚ್ಚಿಕೊಂಡಾನನವ
ನೊಂದಿಸಿ ಕಿವಿಗೆ ಬಿನ್ನಪಂಗೈದನೆರ್ದೆಯೊಳಗೆ
ಸಂದೆಗಂ ಜನಿಪಂತೆ ಕೊಂಡೆಯರಕುಲತಿಲಕನೆಂದೆನಿಪ ಮಂಚಣ್ಣನು ೧೯

ದೇವ ಚಿತ್ತೈಸು ಕಲ್ಯಾಣಪಟ್ಟಣದೊಳಗೆ
ತೀವಿಕೊಂಡಿದೆ ನಿಖಿಳದೇಶದಿಂದೈತಂದ
ಶೈವಸಂಕುಲವೀಗ ನಿನ್ನ ರಾಜಾಲಯವು ಹೊರತಾಗಿ ಮಿಕ್ಕೆಡೆಯೊಳು
ಹಾವಳಿಯೆ ಘನವವರ ಪರಿದಾಟ ಪಿರಿದು ವೇ
ಶ್ಯಾವಾಟವಾದಿಯಾದಲ್ಲಿ ನಿಮ್ಮಂಘ್ರಿರಾ
ಜೀವದಾಣೆಂದು ಬಿನ್ನವಿಸಿದಂ ಕೊಂಡೆಯರ ಮುಂಡೆಮಣಿ ಮಂಚಣ್ಣನು ೨೦

ಕೆಳದರ್ಜೆಯವರು, ಇವರು ಮೇಲು ದರ್ಜೆಯವರು, ಹೋ ಎಡ ಬಲದವರು ಎಚ್ಚರಿಕೆ! ಜಯ ಏಕಚಿತ್ತರಾಗಿ ಗಮನಿಸಿ, ಪರಾಕೆಂದು ಕೂಗಿ ಎಚ್ಚರಿಕೆ ಬಹುಪರಾಕು ಎಂದು ಮತ್ತೆ ಮತ್ತೆ ನೆಲವನ್ನು ಕುಟ್ಟಿ ಎತ್ತರದ ಧ್ವನಿಯಲ್ಲಿ ಬಿರುದಾವಳಿಗಳನ್ನು ಹೊಗಳುವ ಸ್ತುತಿಪಾಠಕರ ಕೂಗು ಆ ಸಭೆಯಲ್ಲಿ ಮೊಳಗಿತು. ೧೯. (ಸಭೆಯು ಸಂಭ್ರಮದಿಂದಿದ್ದ) ಆ ಸಮಯದಲ್ಲಿ ಚಾಡಿಹೇಳುವವರ ಕುಲಕ್ಕೆ ತಿಲಕಪ್ರಾಯನಾದ ಮಂಚಣ್ಣನು ಆಸ್ಥಾನಕ್ಕೆ ಬಂದು ಎಲ್ಲ ರಾಜಸಮೂಹಕ್ಕೆ ದೇವತಾಸ್ವರೂಪನಂತಿದ್ದ ಬಿಜ್ಜಳನಿಗೆ ಕೈಗಳನ್ನು ಎತ್ತಿ ನಮಸ್ಕರಿಸಿದನು. ಜನಗಳ ಸಂದಣಿಯನ್ನು ದೂರ ಸರಿಯುವಂತೆ ಹೇಳಿ, ರತ್ನಖಚಿತವಾದ ಸಿಂಹಾಸನದ ಪಕ್ಕದಲ್ಲಿ ಬಂದುನಿಂತು, ಕೈಗಳಿಂದ ಬಾಯನ್ನು ಮುಚ್ಚಿಕೊಂಡು, ಮುಖವನ್ನು ಕಿವಿಯ ಬಳಿಗೆ ತಂದು, ಸಭಾಸದರ ಮನಸ್ಸಿನಲ್ಲಿ ಸಂದೇಹವು ಉಂಟಾಗುವಂತೆ ಹೇಳಿದನು. ೨೦. "ಪ್ರಭುವೆ ಕೇಳು, ಈಗ ಕಲ್ಯಾಣಪಟ್ಟಣದಲ್ಲಿ ಅನೇಕ ದೇಶಗಳಿಂದ ಬಂದ ಶಿವಶರಣರ ಸಮೂಹ ತುಂಬಿಕೊಂಡಿದೆ. ನಿಮ್ಮ ಅರಮನೆಯೊಂದನ್ನು ಬಿಟ್ಟು ಮಿಕ್ಕ ಎಲ್ಲ ಕಡೆಯೂ ಅವರ ಹಾವಳಿಯೇ ಹೆಚ್ಚಾಗಿದೆ. ವೇಶ್ಯಾವಾಟಿ ಮುಂತಾದ ಕಡೆ ಅವರ ಓಡಾಟ ಬಹಳ ಹೆಚ್ಚು, ನಿಮ್ಮ ಪಾದಕಮಲಗಳಾಣೆ, ಇದು ಸತ್ಯ" ಎಂದು ಚಾಡಿಕೋರರಲ್ಲಿ ಅಗ್ರಗಣ್ಯನಾದ ಮಂಚಣ್ಣನು ಬಿನ್ನವಿಸಿದನು.

CC-0. Jangamwadi Math Collection. Digitized by eGangotri

ನೋಡಿದಿರೆ ಚೆನ್ನಬಸವಂಗೆ ಪಟ್ಟವ ಕಟ್ಟಿ
ನಾಡೆಲ್ಲಮಂ ಬೇಗದಿಂ ತನ್ನ ಕೈವಶಂ
ಮಾಡಿಕೊಂಡೇನ ಮಾಡುವನೊ ನಿಮ್ಮಡಿಗೆಂಬ ಸಂದೆಗಂ ತೋರುತಿದಕೋ
ಬೇಡಬೇಕೆಂಬುವರ ಕಾಣೆ ಕರಿತುರಗಂಗ
ಳಾದಲೇನವರ ವಶವಿನ್ನು ಮೆಯ್ಮರೆದಿಹುದು
ಪಾಡಲ್ಲವೆಂದು ಭೂಪತಿಗೆ ಬಿನ್ನೈಸಿದಂ ಕೊಂಡೆಯರ ಮಂಚಣ್ಣನು ೨೧

ಪಿಂತೆ ವೃತ್ರಾಸುರಂ ಬಳೆಬಳೆದು ಮೂಲೋಕ
ಮಂ ತಿವಿವುತಿರೆ ಗರ್ವದಿಂದೆ ಮೆಯ್ಮರೆದಿರ್ದು
ತಾಂ ತರಹರಿಸಿ ಸಮರರಂಗದೊಳ್ ನಿಲಲಾರದಧಿಕಪ್ರಯಾಸದಿಂದೆ
ಚಿಂತಿಸಿ ಬಳಲ್ದನಮರಾಧೀಶನೆನೆ ಮನುಜ
ರಿಂತು ಮೆಯ್ಮರೆದು ತಾವಿರೆ ಮುಂತೆ ಕಾರ್ಯಗತಿ
ಯೆಂತಹುದೊ ಜೀಯ ಚಿತ್ತೈಸೆಂದು ಮಂಚಣ್ಣ ಬಿನ್ನವಿಸಿದಂ ನೃಪಂಗೆ ೨೨

ಕರೆದು ಶ್ರುತದೃಷ್ಟಾನುಮಾನಂಗಳಿಂದವರ
ಪರಿಯುಂ ವಿಚಾರಿಪುದೆ ನೀತಿಯಲ್ಲದೊಡೆ ತವ
ಚರಣಮಂ ಕೂಡಿದವರ್ಗೈಸೆ ನಾವೆಮಗೆ ಬೇರುಂಟೆ ಸುಖದುಃಖಂಗಳು

೨೧. "ನೋಡಿದಿರಾ ಪ್ರಭು, ಚೆನ್ನಬಸವಣ್ಣನಿಗೆ ಪಟ್ಟವನ್ನು ಕಟ್ಟಿ, ರಾಜ್ಯವೆಲ್ಲವನ್ನೂ ಬೇಗದಿಂದ ತನ್ನ ಕೈವಶ ಮಾಡಿಕೊಂಡು, ನಿಮಗೆ ಏನು ಮಾಡುವನೋ ಎಂಬ ಸಂದೇಹ ಕಾಣುತ್ತಿದೆ. ಇದು ಸರಿ, ಇದು ತಪ್ಪು ಎಂದು ಹೇಳುವವರು ಯಾರನ್ನೂ ಕಾಣೆ. ಇನ್ನೇನು ಹೇಳುವುದು ! ಆನೆ–ಕುದುರೆಗಳೆಲ್ಲ ಅವರ ವಶವಿದೆ. ಇನ್ನು ಮೈಮರೆತು ಇರುವುದು ಸರಿಯಲ್ಲ" ಎಂದು ರಾಜನಿಗೆ ಚಾಡಿಕೋರ ಮಂಚಣ್ಣನು ಹೇಳಿದನು. ೨೨. "ಹಿಂದೆ ವೃತ್ರಾಸುರ ಎಂಬ ರಾಕ್ಷಸನು ಬಲಶಾಲಿಯಾಗಿ ಬೆಳೆದು ಮೂರು ಲೋಕವನ್ನು ಹಿಂಸಿಸುತ್ತಿದ್ದನು. ಆಗ ಗರ್ವದಿಂದ ಮೈಮರೆತಿದ್ದ ಇಂದ್ರನು ತತ್ತರಿಸಿ ಯುದ್ಧರಂಗದಲ್ಲಿ ವೃತ್ರಾಸುರನನ್ನು ಎದುರಿಸಿ ನಿಲ್ಲಲಾರದೆ ಬಹಳ ಪ್ರಯಾಸದಿಂದ ಚಿಂತಿಸಿ ಬಳಲಿದ. ದೇವೇಂದ್ರನೇ ಈ ರೀತಿಯಾದನು ಎಂದ ಮೇಲೆ ಮನುಷ್ಯರು ಹೀಗೆ ಮೈಮರೆತು ಇದ್ದರೆ ಮುಂದೆ ಪರಿಣಾಮವೇನಾಗಬಹುದು. ಪ್ರಭುವೇ, ಲಕ್ಷ್ಯ ಕೊಟ್ಟು ಕೇಳು" ಎಂದು ಮಂಚಣ್ಣನು ರಾಜನಿಗೆ ವಿನಂತಿಸಿಕೊಂಡನು. ೨೩. "(ನನ್ನ ಮಾತುಗಳಲ್ಲಿ ಅನುಮಾನವಿದ್ದರೆ) ಅವರನ್ನು ಕರೆಸಿ ಕೇಳುವುದು, ಪರಿಶೀಲಿಸಿ ನೋಡು ವುದು ಮತ್ತು ಊಹಿಸುವುದು. ಈ ಮಾರ್ಗಗಳಿಂದ ಅವರ ಸ್ಥಿತಿಯನ್ನು ವಿಚಾರಿಸುವುದೇ ಸರಿಯಾದ ರಾಜನೀತಿಮಾರ್ಗ. ನಿಮ್ಮ ಪಾದಸೇವಕರು ನಾವಲ್ಲವೆ ? ನಮಗೆ ನಿಮ್ಮ

CC-0. Jangamwadi Math Collection. Digitized by eGangotri

ಸಿರಿವೆರಸಿ ಬಾಳ್ವರಂ ಕಂಡಿವಂ ನಾಡೆ ತರ
ಹರಿಸಲಾರದೆ ನುಡಿದನೆಂದೊಡೀ ಕಾರ್ಯಾರ್ಥ
ದಿರವ ಬಿನ್ನವಿಸಿದೆಂ ಚಿತ್ತಕ್ಕೆ ಪರಿತಂದುಕೊಳ್ಳಿಮೆನಲವನೀಶನು ೨೩.

ತೂಗುವ ಕಿರೀಟವಮಲುಗುವ ಚೌಕುಳಿಗಳ ನಸು
ಬಾಗಿದವಯವದ ಕದಪಿನೊಳಮರ್ದ ಕೈಯ ಸುಳಿ
ವಾಗುಳಿಕೆಗಳ ರಸಂದೆಗೆದ ಜಿಹ್ವೆಯ ಬೆಮರ್ವನಿಗಳುದಿಸಿದ ವದನದ
ರಾಗವಡಗಿದ ಮನದ ಬಿಸುಸುಯ್ಲ ಸೂಟಗಿಂ
ಬಾಗಿರ್ದ ನಾಸಿಕದ ಬಿಗಿದ ಬೆರಗಿನ ಚಿಂತೆ
ಗಾಗರಂ ತಾನಾಗಿ ನೃಪತಿಲಕನಿರ್ದನಾ ಸಮಯದೊಳದೇಂ ಪೇಳ್ವೆನು ೨೪

ಸುಮ್ಮನಿಹುದಿನ್ನುಚಿತವಲ್ಲೆಂದು ಚಿತ್ತಮಂ
ನೆಮ್ಮಿದಾತಂಕದಿಂ ಚರನೊರ್ವನಂ ಕರೆದು
ನೀಮ್ಮಹಾವೇಗದಿಂ ಚೆನ್ನಬಸವಂ ಬಸವನಂ ಕರೆದು ತಾರೆನಲವಂ
ಗಮ್ಮನವರಂ ಕರೆದುತರಲಾಗ ಬಿಜ್ಜಳಂ
ದುಮ್ಮಾನದಿಂ ಕುಳ್ಳಿರೆನಲವನ ಹೃದಯಮಂ
ತಮ್ಮೊಳರಿದಾಗಲಾ ನೃಪತಿಯರ್ಧಾಸನದೊಳಿರ್ವರುಂ ಮಂಡಿಸಿದರು ೨೫

ಮೆಲ್ಲಮೆಲ್ಲನೆ ಮಾತುದೆಗೆದನಂತಃಕರಣ
ದಲ್ಲಿರ್ದುದಂ ಬಹಿಷ್ಕರಿಸಬೇಕೆಂದೆನುತೆ
ಬಲ್ಲರಿಗೆ ಬಲ್ಲಹಂ ಚೆನ್ನಬಸವೇಶ್ವರಂ ವಿನಯಸಂಪ್ರೀತಿವೆರೆದ

ಸುಖ ದುಃಖಗಳಲ್ಲದೆ ಬೇರೆ ಇಲ್ಲ. ಐಶ್ವರ್ಯದಿಂದ ಕೂಡಿ ಬಾಳುತ್ತಿರುವವರನ್ನು ನೋಡಿ ಸಹಿಸಲಾರದೆ ಹೇಳಿದೆನೆಂದು ತಿಳಿಯಬೇಡಿ. ಇರುವ ವಿಷಯವನ್ನು ನಿಮ್ಮಲ್ಲಿ ಬಿನ್ನವಿಸಿದ್ದೇನೆ. ನಿಮ್ಮ ಮನಸ್ಸಿಗೆ ಸರಿತೋರಿದರೆ ಪರಾಂಬರಿಸಿ'' ಎನ್ನಲು ರಾಜನು ೨೪. ತೂಗಾಡುತ್ತಿರುವ ಕಿರೀಟ, ಅಲುಗಾಡುತ್ತಿರುವ ಕಿವಿಯ ಮುತ್ತಿನ ಆಭರಣ, ನಸುಬಾಗಿದ ಶರೀರ, ಕೆನ್ನೆಯ ಮೇಲೆ ಇಟ್ಟ ಕೈ,ಸುಳಿಯುತ್ತಿರುವ ಆಕಳಿಕೆಗಳು, ಒಣಗಿದ ನಾಲಗೆ, ಬೆವರಹನಿಗಳು ಕೂಡಿದ ಮುಖ, ಯಾವುದರಲ್ಲಿಯೂ ಆಸಕ್ತಿಯಿಲ್ಲದ ಮನಸ್ಸು, ವೇಗವಾಗಿ ನಿಟ್ಟುಸಿರನ್ನು ಬಿಡುತ್ತಿರುವ ಮೂಗು, ಆಶ್ಚರ್ಯವು ಆವರಿಸಿದ ಚಿಂತೆ, ಇವುಗಳಿಗೆ ಪಕ್ಕಾಗಿದ್ದನು. ೨೫. ಇನ್ನು ಸುಮ್ಮನಿರುವುದು ಸರಿಯಲ್ಲವೆಂದು, ಆತಂಕ ತುಂಬಿದ ಮನಸ್ಸುಳ್ಳವನಾಗಿ, ಒಬ್ಬ ಸೇವಕನನ್ನು ಕರೆದು ಬೇಗನೆ ಚೆನ್ನಬಸವಣ್ಣನನ್ನೂ ಬಸವಣ್ಣನನ್ನೂ ಕರೆದುಕೊಂಡುಬರುವಂತೆ ಹೇಳಿದನು. ಕೂಡಲೆ ಸೇವಕನು ಹೋಗಿ ಅವರನ್ನು ಕರೆದುತಂದನು. ಆಗ ಬಿಜ್ಜಳನು ಚಿಂತಾಭರಿತನಾಗಿ ಕುಳಿತುಕೊಳ್ಳುವಂತೆ ಅವರಿಗೆ ಹೇಳಿದನು. ಅವನ ಹೃದಯವನ್ನು ಅರ್ಥಮಾಡಿಕೊಂಡ ಚೆನ್ನಬಸವಣ್ಣ ಮತ್ತು ಬಸವಣ್ಣ ರಾಜನ ಅರ್ಧಾಸನದಲ್ಲಿ ಮಂಡಿಸಿದರು. ೨೬. ರಾಜನ ಅಂತರಂಗದಲ್ಲಿ ಇದ್ದುದನ್ನು ಹೊರ ಗೆಡಹಬೇಕೆಂದು ಮಹಾತಿಳಿವಳಿಕಸ್ಥನಾದ ಚೆನ್ನಬಸವಣ್ಣನು ವಿನಯ-ಪ್ರೀತಿಗಳಿಂದ ಕೂಡಿ

CC-0. Jangamwadi Math Collection. Digitized by eGangotri

ಸೊಲ್ಲಿನಿಂದರಸ ನಿನ್ನಯ ಭಾವಮೆಂದಿನಂ
ತಿಲ್ಲ ಮರೆಬೇಡವೆನ್ನೊಡನುಸಿರ್ ನಿನಗಾವ
ತಲ್ಲಣವದೇನಿಳೆಯೊಳೇನುಂಟಸಾಧ್ಯಮೆನಲವನೀಶನಿಂತೆಂದನು ೨೬

ಏವೇಳ್ವೆನೆಲೆ ಚೆನ್ನಬಸವೇಶ ಕೇಳ್ ನಿನ್ನ
ಮಾವನಾಟವನೀಗಲೆಮ್ಮ ಪುರದೊಳಗಿರದೆ
ಹಾವಳಿಯನೊದಗಿಸಿದನಖಿಳದೇಶದ ದುಷ್ಟರಂ ನೆರಪಿ ಭಕ್ತರೆಂದು
ತೀವಿರ್ದ ಪುರದ ಭಂಡಾರ ಬೊಕ್ಕಸ ಗಜ ಹ
ಯಾವಳಿಯನೆಲ್ಲವಂ ತನ್ನ ವಶವರ್ತಿಯಂ
ನಾವು ಮುಂದರಿಯದೇ ಮಾಡಲವನೆಲ್ಲವಂ ಜಂಗಮರಿಗೊಲಿದಿತ್ತನು ೨೭

ಎಲ್ಲೆಲ್ಲಿಯುಂ ನೋಡೆ ಜಂಗಮರ ಮಠಮನೆಗ
ಳೆಲ್ಲೆಲ್ಲಿಯುಂ ನೋಡೆ ಜಂಗಮರ ಲೂಟಿ ಮ
ತ್ತೆಲ್ಲೆಲ್ಲಿಯುಂ ನೋಡೆ ಜಂಗಮರ ಸೂಳೆಬಂಟಿಕೆ ನಮ್ಮ ನಗರದೊಳಗೆ
ಎಲ್ಲೆಲ್ಲಿಯುಂ ನೋಡೆ ಜಂಗಮರ ಹಾದರಮ
ದೆಲ್ಲೆಲ್ಲಿಯುಂ ನೋಡೆ ಜಂಗಮರ ಕಳವಲ್ಲ
ದಿಲ್ಲವಿನ್ನೇಗೆಯ್ವೆನೆನೆ ಚೆನ್ನಬಸವನಾ ಬಿಜ್ಜಳಂಗಿಂತೆಂದನು ೨೮

ಕಳವು ಹಾದರಮೆಂಬಿವೆಮ್ಮ ಶಿವಭಕ್ತಸಂ
ಕುಳದೊಳಗೆ ಪೊದ್ದಲರಿಯವು ಬಸವರಾಜನೀ
ನೆಲದೊಳಿರ್ಪನ್ನೆಗಂ ಕಲಿ ಬಂದು ಹೊದ್ದಲಮ್ಮದು ನಿಮ್ಮ ಧಾರುಣಿಯೊಳು

ಮೆಲುದನಿಯಿಂದ ಅವನನ್ನು ಕುರಿತು, "ರಾಜನೆ, ನಿನ್ನ ಮನಸ್ಸಿನ ಸ್ಥಿತಿ ಎಂದಿನಂತೆ ಇಲ್ಲ. ಮರೆಮಾಚದೆ ನಿನಗಾದ ತಳಮಳವನ್ನು ನನ್ನಲ್ಲಿ ಹೇಳು. ಈ ಭೂಮಿಯಲ್ಲಿ ಅಸಾಧ್ಯವಾದುದು ಯಾವುದಿದೆ ?" ಎನ್ನಲು ಬಿಜ್ಜಳರಾಯನು ಹೀಗೆ ಹೇಳಿದನು. ೨೭. "ಏನು ಹೇಳಲಿ, ಚೆನ್ನಬಸವಣ್ಣ ? ನಿನ್ನ ಮಾವನು ಮಾಡುತ್ತಿರುವ ಕೆಲಸವನ್ನು ಕೇಳು. ನಮ್ಮ ಪಟ್ಟಣದಲ್ಲಿ ಎಲ್ಲ ದೇಶದ ದುಷ್ಟರನ್ನೂ ಭಕ್ತರೆಂದು ಹೇಳಿ ಸೇರಿಸಿ ಹಾವಳಿಯನ್ನು ಉಂಟುಮಾಡಿರುತ್ತಾನೆ. ತುಂಬಿದ್ದ ರಾಜ್ಯದ ಬೊಕ್ಕಸ, ಆನೆ-ಕುದುರೆಗಳೆಲ್ಲವನ್ನೂ ಮುಂದಾಲೋಚನೆಯಿಲ್ಲದೆ ನಾನು ಅವನ ವಶಕ್ಕೆ ಕೊಟ್ಟೆ. ಆದರೆ ಅವೆಲ್ಲವನ್ನೂ ಅವನು ಜಂಗಮರಿಗೆ ಕೊಟ್ಟನು, ೨೮. ನಮ್ಮ ನಗರದಲ್ಲಿ ಎಲ್ಲೆಲ್ಲಿ ನೋಡಿದರೂ ಜಂಗಮರ ಮನೆಮಠಗಳು, ಎಲ್ಲೆಲ್ಲಿ ನೋಡಿದರೂ ಜಂಗಮರು ನಡೆಸುತ್ತಿರುವ ಲೂಟಿ, ಮತ್ತೆ ಎಲ್ಲೆಲ್ಲಿ ನೋಡಿದರೂ ಜಂಗಮರ ಜಾರತನ, ಎಲ್ಲೆಲ್ಲಿ ನೋಡಿದರೂ ಅವರ ಹಾದರ, ಮತ್ತೆಲ್ಲೆಲ್ಲಿ ನೋಡಿದರೂ ಜಂಗಮರು ಮಾಡುತ್ತಿರುವ ಕಳ್ಳತನವಲ್ಲದೆ ಬೇರೆ ಇಲ್ಲ. ಇನ್ನೇನು ಮಾಡಲಿ ?" ಎನ್ನಲು ಚೆನ್ನಬಸವಣ್ಣನು ಬಿಜ್ಜಳನಿಗೆ ಹೀಗೆ ಹೇಳಿದನು. ೨೯. "ಕಳ್ಳತನ, ಹಾದರ ಎಂಬುವುಗಳು ಶಿವಭಕ್ತರ ಸಮೂಹದ ಸಮೀಪದಲ್ಲಿ ಸುಳಿಯುವುದಿಲ್ಲ. ಬಸವರಾಜನು ಈ ಭೂಮಿಯಲ್ಲಿ ನಿನ್ನ ರಾಜ್ಯದಲ್ಲಿ ಇರುವವರೆಗೂ ಕಲಿ ಬಂದು

CC-0. Jangamwadi Math Collection. Digitized by eGangotri

ಪಲವು ಮಾತೇಂ ಕೊಂಡೆಯರ ನುಡಿಯು ಕೇಳ್ವುದಕೆ
ಫಲವಾಯ್ತು ಪಿಂತೆ ನೆರೆ ಕಂಡು ಕಂಡುಂ ಮತ್ತೆ
ತಿಳಿಯದಲ್ಲಾ ಕ್ಷಾತ್ರ ತಾಮಸಂ ಕ್ಷತ್ರಿಯರ ಕುಲಕೆ ಸಹಜಮಿದೆಂದನು ೨೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲ ಸುಖಮಂ ಸಕಲ ಭೋಗಮುನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೩೦

## ಏಳನೆಯ ಸಂಧಿ ಸಂಪೂರ್ಣ

ಪ್ರವೇಶಿಸುವುದಿಲ್ಲ. ಹೆಚ್ಚು ಮಾತಿನಿಂದೇನು ಪ್ರಯೋಜನ ? ಚಾಡಿಕೋರರ ಮಾತನ್ನು ಕೇಳಿದುದರ ಫಲ ಇದು. ಈ ಹಿಂದೆಯೇ ಎಲ್ಲವನ್ನೂ ಚೆನ್ನಾಗಿ ಅರಿತೂ ಈಗ ನೀನು ತಿಳಿಯದಂತಾದೆಯಲ್ಲಾ ? ಕ್ಷತ್ರಿಯರ ಕುಲಕ್ಕೆ ಈ ಕ್ಷಾತ್ರ ಮತ್ತು ತಮೋಗುಣಗಳಿರು ವುದು ಸಹಜ" ಎಂದನು. ೩೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣ ವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿಂದ ಕೊನೆಯುವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲಾ ಭೋಗಗಳನ್ನೂ ಅನಂತ ಸೌಖ್ಯವನ್ನೂ ಕೊಟ್ಟು ಕಾಪಾಡು ವನು.

## ಏಳನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಎಂಟನೆಯ ಸಂಧಿ

ಸೂಚನೆ : ರಾಜನೀತಿಯನೊಲ್ದು ಕಲ್ಯಾಣಪಟ್ಟಣದ
ರಾಜನೆನಿಸುವ ಬಿಜ್ಜಳಂಗಾಗಲಾ ಬಸವ
ರಾಜನಳಿಯಂ ಚೆನ್ನಬಸವರಾಜಂ ಪೇಳ್ದನಧಿಕತರ ವಿನಯದಿಂದೆ

ದಶಶಿರಂ ತಪದಿಂದಲೆದ್ದೀಶಪದಯುಗಕೆ
ಸಸಿನದಿಂ ನಮಿಸಲಿನ್ನೂರೊಂದು ಕಣ್ಣರಲ್
ಪೊಸತೆನುತೆ ಕೌತುಕಂಬಟ್ಟು ನಾರಾಯಣನ ನಯನವೊಂದಿರ್ಪುದೆಂದು
ಉಸಿರುವರೆನುತ್ತೀಕ್ಷಿಪನ ಮುಗ್ಧಭಾವಕ್ಕೆ
ಶಶಿಧರಂ ಮರುಳಿ ಮೆಚ್ಚಲ್ ಕಂಡು ಹರಿಯಜರ್
ಬಸವಳಿವುತಿರೆ ನೋಡಿ ನಸುನಗುವ ಪಂಪಾವಿರೂಪಾಕ್ಷ ಸಲಹೆಮ್ಮನು ೧

ತರಣಿಮಂಡಲವನಭ್ರಂ ಸುದರ್ಪಣವನಂ
ದಿರದೆ ಕಾಳಿಕೆ ನಿರ್ಮಲೋದಕವನಾ ಪಾಂಸೆ
ಪರಮಾತ್ಮನಂ ಜೀವಭಾವಮಿವು ಮುಸುಕಿಕೊಂಡಿರ್ಪಂತೆ ಜಗದೊಳುಳ್ಳ
ಅರಸುಗಳ ವೇಷ್ಟಿಸಿರ್ಪುದು ಕ್ಷಾತ್ರತಾಮಸಂ
ನಿರುತವದ ಪರಿಹರಿಸುವೊಡೆ ರಾಜನೀತಿ ಬೇ
ಕೊರೆವೆನಾಲಿಪುದೆಂದು ಚೆನ್ನಬಸವೇಶ್ವರಂ ಬಿಜ್ಜಳಂಗಿಂತೆಂದನು ೨

ಸೂಚನೆ : ಕಲ್ಯಾಣಪಟ್ಟಣದ ರಾಜನಾದ ಬಿಜ್ಜಳನಿಗೆ ಬಸವಣ್ಣರಾಜನ ಅಳಿಯನಾದ ಚೆನ್ನಬಸವರಾಜನು ಅತ್ಯಧಿಕ ವಿನಯದಿಂದ ರಾಜನೀತಿಯನ್ನು ತಿಳಿಯಹೇಳಿದನು. ೧. ರಾವಣನು ತಪಸ್ಸನ್ನು ಮಾಡಿ ಮೇಲೆದ್ದು ಈಶ್ವರನ ಪಾದಗಳಿಗೆ ಉಚಿತ ರೀತಿಯಲ್ಲಿ ನಮಸ್ಕರಿಸಿದನು. ಹೀಗೆ ನಮಸ್ಕರಿಸುತ್ತಿರುವಾಗ ಅವನಿಗೆ ಇನ್ನೂರೊಂದು ಕಣ್ಣುಗಳು ಕಂಡವು (ಆತನ ಹತ್ತು ತಲೆಗಳಲ್ಲಿದ್ದ ಇಪ್ಪತ್ತು ಕಣ್ಣುಗಳು ಶಿವನ ಪಾದಗಳ ಹತ್ತು ಬೆರಳಿನಲ್ಲಿ ಇನ್ನೂರಾಗಿ ಜೊತೆಗೆ ಒಂದು ಹೆಚ್ಚಾಗಿ ಕಾಣಿಸಿತು). ಅವನು ಇದು ಹೊಸದೆಂದು ವಿಸ್ಮಯಪಡುತ್ತಾ ವಿಷ್ಣುವಿನ ಒಂದು ಕಣ್ಣಿದೆ ಎಂದು ತಿಳಿದವರು ಹೇಳುತ್ತಾರೆ ಎಂದು ನೋಡುವವನ ಸರಳಸ್ವಭಾವಕ್ಕೆ ಈಶ್ವರನು ಮೆಚ್ಚಲು ಅದನ್ನು ನೋಡಿ ಹರಿ ಮತ್ತು ಬ್ರಹ್ಮರು ಪರವಶಗೊಳ್ಳುತ್ತಿರುವುದನ್ನು ನೋಡಿ ನಸುನಗುವ ಪಂಪಾ ವಿರೂಪಾಕ್ಷನು ನಮ್ಮನ್ನು ಕಾಪಾಡಲಿ ೨. ಸೂರ್ಯಮಂಡಲವನ್ನು ಮೋಡಗಳು ಮುಸುಕಿರುತ್ತವೆ. ಸ್ವಚ್ಛವಾದ ಕನ್ನಡಿಯನ್ನು ಕೊಳೆಯು ಆವರಿಸಿರುತ್ತದೆ. ನಿರ್ಮಲವಾದ ನೀರನ್ನು ಪಾಚಿಯು ಮರೆಮಾಡಿರುತ್ತದೆ. ಪರಮಾತ್ಮನನ್ನು ಜೀವಭಾವವು ಮುಸುಕಿರುತ್ತದೆ. ಹಾಗೆಯೇ ಈ ಪ್ರಪಂಚದಲ್ಲಿರುವ ರಾಜರುಗಳನ್ನು ಕ್ಷಾತ್ರ ಮತ್ತು ತಾಮಸ ಗುಣಗಳು ಮುಸುಕಿರುತ್ತವೆ. ಇದು ಸತ್ಯವಾದುದು. ಅದನ್ನು ಹೋಗಲಾಡಿಸಬೇಕಾದರೆ

CC-0. Jangamwadi Math Collection. Digitized by eGangotri

ಪರಿಕಿಪೊಡೆ ಸಂತತಂ ವಕ್ರಚರಿತಂ ನುಡಿವೊ
ಡೆರಡುನಾಲಗೆ ಧನವನೇ ಕಾಯ್ದುಕೊಂಡಿರ್ಪ
ಪರಮಲೋಭಂ ಭೋಗದೊಡನೆ ಕೂಡಿದ ಬಾಳ್ವೆ ಪರರಸುವನುಗಿವ ಕೋಪಂ
ಉರಗಂಗಮರಸಿಂಗಮನ್ಯೋನ್ಯಮಾದೊಡಂ
ನಿರುತದಿಂ ಕಣ್ಣೆ ಕಿವಿ ಕಿವಿಯೆ ಕಣ್ಣೆಂದೆಂಬ
ಪರಿಯಾಯಭೇದವಿದು ನಾಡಾಡಿಗಿದು ನೀತಿಯನುಚಿತಂ ಕೇಳೆಂದನು ೩

ಕೊಂಡೆಯರ ನುಡಿಗಳೇ ಕರ್ಣಕ್ಕೆ ಭೂಷಣಂ
ಕೊಂಡೆಯರ ಮಾರ್ಗವೆರ್ದೆದಾವರೆಗೆ ಭಾಸ್ಕರಂ
ಕೊಂಡೆಯರೆ ತನಗೆ ಕಡುಹಿತವರೆಂದೆರಡಿಲ್ಲದೇ ನಂಬುವವನೀಶನ
ಮಂಡಲಕೆ ಕೇಡಪ್ಪುದಾ ನೃಪನ ಸಿರಿ ನಭೋ
ಮಂಡಲದ ಕುಸುಮದೊಲ್ ಬಯಲಪ್ಪುದದರಿನಿಂ
ಮಂಡಲೇಶ್ವರರಾವಗಂ ಕೊಂಡೆಯಂಗೇಳ್ವುದನುಚಿತಂ ಕೇಳೆಂದನು ೪

ಕುಳಿರ್ವ ಮಂಜಿನ ಪನಿಗಳಿಂ ಕಮಲಸಂಕುಲಂ
ಜಲಬಿಂದುವಿಂದೆ ಮಧು ಲೋಭದಿಂ ಗುಣಗಣಂ
ಗಳಹತನದಿಂದೆ ಗೌರವಮನಾಚಾರಪ್ರವರ್ತನದೆ ಕುಲದ ಪೆಂಪು

ರಾಜನೀತಿಯನ್ನು ತಿಳಿಯಬೇಕು. ಅದನ್ನು ಹೇಳುತ್ತೇನೆ ಕೇಳು'' ಎಂದು ಚೆನ್ನ ಬಸವೇಶ್ವರನು ಬಿಜ್ಜಳನಿಗೆ ಈ ರೀತಿ ಹೇಳಿದನು. ೩. ''ಪರಿಶೀಲಿಸಿ ನೋಡುವುದಾದರೆ, ಯಾವಾಗಲು ವಕ್ರನಡತೆ, ಮಾತಿನಲ್ಲಿ ಎರಡು ನಾಲಗೆ, ಹಣವನ್ನು ಯಾವಾಗಲೂ ಕಾದುಕೊಂಡಿರುವ ಮಹಾ ಜಿಪುಣತನ, ಭೋಗಜೀವನ, ಬೇರೆಯವರ ಪ್ರಾಣವನ್ನು ತೆಗೆಯುವಷ್ಟು ಕೋಪ-ಈ ವಿಷಯಗಳಲ್ಲಿ ಹಾವಿಗೂ ಮತ್ತು ರಾಜನಿಗೂ ಅನ್ಯೋನ್ಯ ಸಮಾನತೆಯಿದೆ! ಆದರೂ ನಿಜವಾಗಿ ನೋಡಿದರೆ ಹಾವಿಗೆ ಕಣ್ಣೇ ಕಿವಿ, ರಾಜನಿಗಾದರೋ ಕಿವಿಯೇ ಕಣ್ಣು. ಇದೊಂದರಲ್ಲಿ ಮಾತ್ರ ಪರಸ್ಪರ ಭೇದ. ತಿಳಿಗೇಡಿಗಳಿಗೆ, ಸಾಮಾನ್ಯ ಜನಗಳಿಗೆ ಇದು ನೀತಿ. ಈ ನೀತಿಯು ರಾಜರಿಗೆ ಉಚಿತವಲ್ಲ, ಕೇಳು'' ಎಂದನು. ೪. ''ಚಾಡಿ ಹೇಳುವವರ ಮಾತುಗಳೇ ಕಿವಿಗಳಿಗೆ ಭೂಷಣ. ಚಾಡಿಕೋರರ ದಾರಿಯೇ ಎದೆಯೆಂಬ ತಾವರೆಯನ್ನು ಅರಳಿಸುವ ಸೂರ್ಯ. ಚಾಡಿಕೋರರೇ ತನಗೆ ಹಿತವಂತರು ಎಂದು ಭೇದವಿಲ್ಲದೆ ಒಂದೇ ಮನಸ್ಸಿನಿಂದ ನಂಬುವ ರಾಜನ ರಾಜ್ಯಕ್ಕೆ ಕೇಡುಂಟಾಗುತ್ತದೆ. ಆ ರಾಜನ ಐಶ್ವರ್ಯ ಗಗನಕುಸುಮದಂತೆ ವ್ಯರ್ಥವಾಗುತ್ತದೆ. ಆದ್ದರಿಂದ ರಾಜರು ಚಾಡಿ ಮಾತುಗಳನ್ನು ಕೇಳುವುದು ಎಂದಿಗೂ ಯೋಗ್ಯವಲ್ಲ, ಕೇಳು'' ಎಂದನು. ೫. ''ತಣ್ಣಗೆ ಕೊರೆಯುವ ಹಿಮದ ಹನಿಗಳಿಂದ ಕಮಲಗಳ ಸಮೂಹವು ಕಾಂತಿಹೀನವಾಗುತ್ತದೆ. ನೀರಿನ ಹನಿಯಿಂದ ಜೇನು ಕೆಡುತ್ತದೆ. ಜಿಪುಣತನದಿಂದ ಒಳ್ಳೆಯಗುಣಗಳು ಶೋಭಿಸವು. ಅತಿಯಾದ ಮಾತು ಮತ್ತು ಸುಳ್ಳು ಇವುಗಳಿಂದ ಗೌರವಕ್ಕೆ ಕೇಡು. ಅನಾಚಾರದ ನಡತೆ

CC-0. Jangamwadi Math Collection. Digitized by eGangotri

ಪುಳಿಯಿಂದೆ ಪಾಲ್ ಬಹುಳಕೋಪದೆ ತಪಃಫಲಮು
ಮಲೆದು ಬೀಸುವ ಗಾಳಿಯಿಂ ಮೇಘದೊಡ್ಡವಣೆ
ಸಲೆ ಕಿಡುವವೊಲ್ ಕಿಡುವುದರಸಾಳ್ವ ಧರೆ ಪಿಸುಣರಿಂ ನೃಪತಿ ಕೇಳೆಂದನು ೫

ಖಳರ ಮಾಯಾವಿಗಳ ದುರ್ವಿನೀತರ ಮದಾ
ಕುಳರ ದುರ್ಜನರ ಡಂಭರ ನೀತಿಮಾರ್ಗವಿ
ಹ್ವಲರ ನಿಷ್ಠುರವಚನಕೋವಿದರ ದುರ್ಬೋಧಕರ ದುರಾಚಾರಪರರ
ಕುಲವಿಹೀನರ ಕುಮಂತ್ರಾನ್ವಿತರ ಶ್ರುತಿಪಥವ
ನುಳಿದು ನುಡಿವವರ ಕಂಡೊಡೆ ನಿರಾಕರಿಸುವುದು
ನೆಲನನಾಳ್ವರಸುಮಕ್ಕಳ ನೀತಿ ಬಿಜ್ಜಳನೃಪಾಲ ನೀಂ ಕೇಳೆಂದನು ೬

ಪರರ್ಗೆ ತಾಂ ಮಾಡಿದುಪಕಾರಂಗಳಂ ತನಗೆ
ಪರರಿಂದಲೊದಗಿದಪಕಾರಂಗಳಂ ನಾಡೆ
ಪರರ ಕೂಡಾಡಿ ಕಿಡಿಸುವುದುತ್ತಮರಮತಕೆ ಸಲ್ಲದು ಮಹೀತಳದೊಳು
ಪರರ್ಗೆ ತಾಂ ಮಾಡಿದಪಕಾರಂಗಳಂ ತನಗೆ
ಪರರಿಂದಲೊದಗಿದುಪಕಾರಂಗಳಂ ನಾಡೆ
ಪರರ ಕೂಡಾಡಿ ತೋರುವುದುತ್ತಮರ ಮತಕೆ ಸಲ್ವುದೈ ಕೇಳೆಂದನು ೭

ಯಿಂದ ಕುಲದ ಕೀರ್ತಿಗೆ ಕಳಂಕ ತಟ್ಟುತ್ತದೆ. ಹುಳಿಯಿಂದ ಹಾಲು ಕೆಡುತ್ತದೆ. ಅತಿಯಾದ ಕೋಪದಿಂದ ತಪಶ್ಶಕ್ತಿ ನಾಶವಾಗುತ್ತದೆ. ಬಿರುಗಾಳಿಯಿಂದ ಮೋಡಗಳ ಗುಂಪು ಕೆಟ್ಟು ಹಾಳಾಗುತ್ತದೆ. ಅದರಂತೆಯೇ ರಾಜನು ಆಳುವ ರಾಜ್ಯ ಚಾಡಿಕೋರರಿಂದ ನಾಶ ವಾಗುತ್ತದೆ, ರಾಜನೇ ಕೇಳು" ಎಂದನು. ೬. "ದುಷ್ಟರನ್ನು, ಮೋಸಗಾರರನ್ನು, ದುರ್ವಿ ನೀತರನ್ನು, ಅಹಂಕಾರಿಗಳನ್ನು, ಕೆಟ್ಟವರನ್ನು, ಡಂಭಾಚಾರಿಗಳನ್ನು, ನೀತಿಮಾರ್ಗವನ್ನು ಬಿಟ್ಟವರನ್ನು, ನಿಷ್ಠುರವಾದ ಮಾತುಗಳನ್ನಾಡುವುದರಲ್ಲಿ ನಿಪುಣರಾದವರನ್ನು, ಕೆಟ್ಟ ದ್ದನ್ನು ಬೋಧಿಸುವವರನ್ನು, ದುರಾಚಾರಿಗಳನ್ನು, ಹೀನಕುಲದಲ್ಲಿ ಹುಟ್ಟಿದವರನ್ನು, ದುರಾಲೋಚಕರನ್ನು, ವೇದಮಾರ್ಗವನ್ನು ಬಿಟ್ಟು ಮಾತನಾಡುವವರನ್ನು ಕಂಡರೆ ಅವರನ್ನು ದೂರವಿರಿಸುವುದು ರಾಜ್ಯವನ್ನಾಳುವ ಅರಸುಮಕ್ಕಳ ನೀತಿ. ಅಯ್ಯಾ ಬಿಜ್ಜಳರಾಜನೆ, ಕೇಳು" ಎಂದನು. ೭. "ಬೇರೆಯವರಿಗೆ ತಾನು ಮಾಡಿದ ಉಪಕಾರ ಗಳನ್ನೂ, ತನಗೆ ಬೇರೆಯವರಿಂದ ಆದ ಅಪಕಾರಗಳನ್ನೂ ಬೇರೆಯವರೊಂದಿಗೆ ವಿಶೇಷ ಹೇಳಿಕೊಳ್ಳುವುದು ಲೋಕದಲ್ಲಿ ಒಳ್ಳೆಯವರಿಗೆ ಯೋಗ್ಯವಲ್ಲ. ಪರರಿಗೆ ತಾನು ಮಾಡಿದ ಅಪಕಾರಗಳನ್ನೂ ಪರರಿಂದ ತನಗೆ ಆದ ಉಪಕಾರಗಳನ್ನೂ ಬೇರೆಯವರೊಂದಿಗೆ ಹೆಚ್ಚಾಗಿ ಆಡಿ ತೋರಿಸುವುದು ಒಳ್ಳೆಯವರಿಗೆ ಯೋಗ್ಯವಾದುದು, ಕೇಳು" ಎಂದನು.

CC-0. Jangamwadi Math Collection. Digitized by eGangotri

ಧರ್ಮವುಂ ಬಿಡದೆ ಮಾಳ್ಪುದು ತನ್ನ ರಾಜ್ಯದೊಳ್
ಧರ್ಮಿಷ್ಠರುಳ್ಳೊಡವರಂ ಪಾಲಿಪುದು ವಿಮಲ
ಧರ್ಮಕ್ಕೆಡರ್ ಬಂದೊಡಾಲಸ್ಯವುಂ ಮಾಡದೊಡನೊಡನೆ ಪರಿಹರಿಪುದು
ಧರ್ಮಹೀನರನುದಾಸಿಪುದು ನಿರುಪಮ ಜಾತಿ
ಧರ್ಮಂಗಳಂ ತಪ್ಪದಂತೆ ನಡೆಸುವುದು ನೃಪ
ಧರ್ಮದ ರಹಸ್ಯವಿದು ತಪ್ಪದವನೀಪಾಲತಿಲಕ ನೀಂ ಕೇಳೆಂದನು ೮

ಧನವಧಿಕವಾಗಬೇಕೆಂಬಾಸೆಯಿಂದೆ ದು
ರ್ಜನರ ಚಹಡೆಯ ಮಾತುಗಳ ಕೇಳ್ದು ಸಕಲಸ
ಜ್ಜನರನಾಕರಿಸಿ ಪಾಪವನೆ ಸಂಗ್ರಹಿಪಂತೆ ಸಂಗ್ರಹಂ ಮಾಡಿದೊಡವೆ
ಘನವಾಗಿ ಕಾಲೋಚಿತಕೆ ತೋರಿ ಹೆಚ್ಚಿದಿಂ
ಧನ ವಹ್ನಿಯಿಂ ದಹನವಪ್ಪಂತೆ ಶತ್ರುನೃಪ
ಜನದಿಂದೆ ಕಡೆಗೆ ಬಯಲಹುದು ಪುಸಿಯಲ್ಲವನಿಪಾಲಕನೆ ಕೇಳೆಂದನು ೯

ಧನದಾಸೆಗಾಗಿ ದೇಶದ ಪ್ರಜೆಯ ನೋಯಿಸದೆ
ಧನಮುಳ್ಳವರ ಬದುಕುಗಳ ಕಂಡು ಕರುಬಿಸದೆ
ಧನವನೊದವಿಸುವುದೊಕ್ಕಲಿಗೈದುಪಾಲರಸಿಗೊಂದು ಪಾಲೀ ಕ್ರಮದೊಳು
ಧನವಧಿಕವಹುದೀ ಪರಿಯೊಳಾರ್ಜಿಸಿದೊಡೆ ತದ್
ಧನವನೊಲವಿಂ ಸುಪಾತ್ರದೆ ವೆಚ್ಚಿಸಲ್ ಪುಣ್ಯ
ಧನಪಾಲನಪ್ಪನಾ ನೃಪತಿ ಪರಲೋಕದೊಳಗರಸ ನೀಂ ಕೇಳೆಂದನು ೧೦

೮. "ಧರ್ಮವನ್ನು ತಪ್ಪದೆ ಆಚರಿಸುವುದು; ತನ್ನ ರಾಜ್ಯದಲ್ಲಿ ಧರ್ಮಿಷ್ಠರು ಇದ್ದರೆ ಅವರನ್ನು ಕಾಪಾಡುವುದು; ನಿರ್ಮಲವಾದ ಧರ್ಮಕ್ಕೆ ಚ್ಯುತಿ ಬಂದರೆ ಉದಾಸೀನ ಮಾಡದೆ ಕೂಡಲೇ ಪರಿಹರಿಸುವುದು; ಧರ್ಮಹೀನರನ್ನು ಲಕ್ಷ್ಯಮಾಡದಿರುವುದು; ಶ್ರೇಷ್ಠವಾದ ಜಾತಿ–ಧರ್ಮಗಳನ್ನು ತಪ್ಪದಂತೆ ಆಚರಿಸುವುದು; ಇವಿಷ್ಟೂ ರಾಜಧರ್ಮದ ರಹಸ್ಯ. ಎಲೈ ರಾಜನೇ ನೀನು ತಪ್ಪದೆ ಇದನ್ನು ಕೇಳು" ಎಂದನು. ೯, "ಐಶ್ವರ್ಯ ಹೆಚ್ಚಾಗಬೇಕೆಂಬ ದುರಾಶೆಯಿಂದ ಕೆಟ್ಟವರ ಚಾಡಿಮಾತುಗಳನ್ನು ಕೇಳಿ ಸಜ್ಜನರನ್ನು ನಿಗ್ರಹಿಸಿ ಪಾಪವನ್ನು ಸಂಗ್ರಹಿಸುವಂತೆ ಸಂಗ್ರಹ ಮಾಡಿದ ಒಡವೆ ಆ ಸಮಯಕ್ಕೆ ಹೆಚ್ಚಾಗಿ ತೋರುತ್ತದೆ. ಆದರೆ ಹೆಚ್ಚು ಪ್ರಮಾಣದ ಸೌದೆ ಕೊನೆಗೆ ಬೆಂಕಿಯಿಂದ ಸುಟ್ಟು ಹೋಗುವಂತೆ ಧನವೂ ಸಹ ಶತ್ರುರಾಜರಿಂದ ನಾಶವಾಗುತ್ತದೆ. ಇದು ಸುಳ್ಳಲ್ಲ ರಾಜನೇ ಕೇಳು" ಎಂದನು. ೧೦. ಹಣದ ಆಸೆಗಾಗಿ ದೇಶದಲ್ಲಿನ ಪ್ರಜೆಗಳನ್ನು ಹಿಂಸಿಸಬಾರದು. ಹಣವಂತರ ಬಾಳನ್ನು ಕಂಡು ಅಸೂಯೆಪಡಬಾರದು. ಹಣದಲ್ಲಿ ಐದು ಪಾಲು ರೈತನಿಗೂ, ಒಂದು ಪಾಲು ರಾಜನಿಗೂ ಒದಗಬೇಕು. ಈ ರೀತಿಯಿಂದ ಸಂಪಾದಿಸಿದ ಸಂಪತ್ತು ವೃದ್ಧಿಹೊಂದುತ್ತದೆ. ಈ ರೀತಿ ಸಂಪಾದಿಸಿದ ಧನವನ್ನು ಮನಸಾರೆ ಯೋಗ್ಯರಾದವರಿಗೋಸ್ಕರ ವೆಚ್ಚ ಮಾಡಿದರೆ ಅಂತಹ ರಾಜನು ಪರಲೋಕದಲ್ಲಿ ಪುಣ್ಯ

CC-0. Jangamwadi Math Collection. Digitized by eGangotri

ಆಣೆಯೀಗರಸುತನವೆಂದೆಂಬ ತನುವಿಂಗೆ
ಪ್ರಾಣಮುದಕಪಜಯುಂ ಬಂದು ಪೊರ್ದಿದೊಡೆ ತ
ತ್ಕ್ಷೋಣಿಪತಿ ಪರಣವಿರ್ದುಂ ಮೃತವನ್ನೈದಿದವನಿದಕೆ ಸಂದೇಹಮೇಕೆ
ತ್ರಾಣವಿಲ್ಲದೆ ಬರಿಯ ಭುಜಬಲದ ಗರ್ವದಿಂ
ಹೂಣೆಹೊಕ್ಕಿರಿಯಲಾರದೆ ಮುರಿದು ಬರ್ಪವಂ
ರಾಣಿಯರ ನಗೆಯ ಕೈಹೊಯ್ಲ ವಾದ್ಯದ ಗತಿಯ ನರ್ತಕಂ ಕೇಳೆಂದನು. ೧೧

ಮರೆಯ ಹೊಕ್ಕರ ಕಾಯ್ವು ಮಾರಾಂತ ಭೂಭುಜರ
ನಿರಿವ ಬೇಡಿದವರ್ಗೆ ಬೇಡಿದ ಸುವಸ್ತುವಂ
ನೆರೆ ಕೊಡುವುದೀಗ ಕ್ಷತ್ರಿಯರ ಸದ್ಧರ್ಮವರ್ತನವಾ ಸುವರ್ತನವನು
ತೊರೆದು ಚಾವಡಿಯೊಳಗೆ ಗಳಹಿ ಹುಯ್ಯಲ ಕಂಡು
ಬಿರುತೋಡಿ ಘಟ್ಟಬೆಟ್ಟಂಗಳಂ ಸಾರ್ದು ಬಾ
ಯ್ದೆರೆವವಂ ರಾಜನೇ ಹಗರಣದ ರಾಜನಲ್ಲದೆ ಮಹೀಮಂಡಲದೊಳು ೧೨

ಎನಿತೆನಿತು ಸನ್ಮಾರ್ಗದೊಳ್ ಬಿಡದೆ ನಡೆದೊಡೆಯು
ಮೆನಿತೆನಿತು ಸತ್ಕೀರ್ತಿವಡೆದೊಡೆಯುಮವನಿಯೊಳ
ಗೆನಿತೆನಿತು ಸದ್ಧರ್ಮಸಂಜನಿತವಸ್ತುವಂ ಪಿಡಿದೊಡೆಯುಮೆರ್ದೆನೆಲದೊಳು

ಮೆಂಬ ಧನಕ್ಕೆ ಒಡೆಯನಾಗುತ್ತಾನೆ, ರಾಜನೇ, ನೀನು ಕೇಳು" ಎಂದನು. ೧೧. "ರಾಜಾಜ್ಞೆ ಎಂಬುದು ರಾಜನ ಶರೀರಕ್ಕೆ ಪ್ರಾಣವಿದ್ದಂತೆ. ರಾಜಾಜ್ಞೆಗೆ ಸೋಲಾದರೆ ಆ ರಾಜನು ಪ್ರಾಣವಿದ್ದೂ ಸತ್ತವನ ಹಾಗೆ, ಇದರಲ್ಲಿ ಅನುಮಾನವಿಲ್ಲ, ಮೈಯಲ್ಲಿ ಶಕ್ತಿಯಿಲ್ಲದೆ ಕೇವಲ ತೋಳ ಬಲದ ಗರ್ವದಿಂದ ಪ್ರತಿಜ್ಞೆಮಾಡಿ ಹೋರಾಡಲಾರದೆ ಹಿಂದಕ್ಕೆ ಬರುವವನು ರಾಣಿಯರು ನಕ್ಕು ಕೈ ಚಪ್ಪಾಳೆಹಾಕುವ ವಾದ್ಯಗತಿಗೆ ನರ್ತಕನಾಗುವನು ಎಂದರೆ ರಾಣಿಯರ ಅಪಹಾಸ್ಯಕ್ಕೆ ಈಡಾಗುವನು" ಕೇಳೆಂದನು. ೧೨. "ಶರಣಾಗತರನ್ನು ಕಾಪಾಡುವುದು, ಪ್ರತಿಭಟಿಸುವ ಶತ್ರುರಾಜರನ್ನು ಕೊಲ್ಲುವುದು, ಬೇಡಿದವರಿಗೆ ಬೇಡಿದ ಎಲ್ಲ ಒಳ್ಳೆಯ ವಸ್ತುಗಳನ್ನೂ ಹೇರಳವಾಗಿ ಕೊಡುವುದು—ಇದು ಕ್ಷತ್ರಿಯರ ಪವಿತ್ರವಾದ ಕರ್ತವ್ಯ ಮತ್ತು ನಡತೆ.ಇದನ್ನು ಬಿಟ್ಟು ಆಸ್ಥಾನದಲ್ಲಿ ಪೌರುಷದ ವ್ಯರ್ಥಮಾತುಗಳನ್ನಾಡಿ, ಬೊಬ್ಬೆ, ಗದ್ದಲವನ್ನು ಕೇಳಿದ ಮಾತ್ರದಿಂದಲೇ ಹೆದರಿ ಓಡಿ ಬೆಟ್ಟಗುಡ್ಡಗಳನ್ನು ಸೇರಿ ಬಾಯಿಬಿಡುತ್ತ ಅಂಗಲಾಚುವವನು ಪ್ರಪಂಚದಲ್ಲಿ ಕೆಲಸಕ್ಕೆ ಬಾರದ ಹರಟೆ ಕೊಚ್ಚುವ ರಾಜನಲ್ಲದೆ ನಿಜವಾದ ರಾಜನೆನಿಸಿಕೊಳ್ಳುತ್ತಾನೆಯೇ ? ೧೩, ರಾಜನು ಎಷ್ಟೆಷ್ಟು ರೀತಿಯಲ್ಲಿ ಸನ್ಮಾರ್ಗವನ್ನು ಬಿಡದಂತೆ ನಡೆದರೂ, ಎಷ್ಟೆಷ್ಟು ಸತ್ಕೀರ್ತಿಯನ್ನು ಪಡೆದರೂ, ಯಾವ ಪ್ರಮಾಣದಲ್ಲಿ ಭೂಮಿಯಲ್ಲಿ ಧರ್ಮಮಾರ್ಗದಿಂದ ಉಂಟಾದ ವಸ್ತುಗಳನ್ನು ಹಿಡಿದು ಆಶ್ರಯಿಸಿದರೂ, ಅವನ ಹೃದಯಭೂಮಿ

CC-0. Jangamwadi Math Collection. Digitized by eGangotri

ಎನಿತೆನಿತು ಬಲ್ಲವಿಕೆ ಮೊಳೆತೊಡಂ ಬಾಹುಬಲ
ಮೆನಿತೆನಿತು ತನಗೆ ಪಿರಿದಾಗಿರ್ದೊಡಂ ಶತ್ರು
ಜನವ ಸಾಧಿಸುವಲ್ಲಿ ಕರುಣಮುಂ ಮಾಳ್ಪುದನುಚಿತವರಸ ಕೇಳೆಂದನು ೧೩

ಸಾಮವೇ ವೇದಂಗಳೊಳಧಿಕವಾದಂತೆ
ಸಾಮವೇ ವಿಗಿಲಾಯ್ತುಪಾಯಂಗಳಲ್ಲಿ ತತ್
ಸಾಮವೇ ಭೂಭುಜರ ಬಾಳ್ಕೆಗನುಸಾರಿ ಮಿಕ್ಕಿನ ಮೂರುಪಾಯಂಗಳು
ಸಾಮಾನ್ಯಮವರೊಳಗೆ ದಂಡವೊಂದೆಂಬುವದು
ಸಾಮಾನ್ಯದೊಳಗೆ ಸಾಮಾನ್ಯವಿದನರಿಯದರು
ಸಾಮಾನ್ಯರೆನಿಪರವನೀಪತಿಗಳೊಳ್ ನೃಪಲಲಾಮ ನೀಂ ಕೇಳೆಂದನು ೧೪

ಅರಿನೃಪರ ಸಂಧಾನಸಮಯಂಗಳಲ್ಲಿ ಕರಿ
ತುರಗಂಗಳೇರಾಟದಲ್ಲಿ ಸಂಗರದಲ್ಲಿ
ತರುಣಿಯರ ಕೇಳಮೇಳಂಗಳೆಡೆಯಲ್ಲಿ ಮಜ್ಜನದಲ್ಲಿ ಮಲಗುವಲ್ಲಿ
ಪರಿಪರಿಯ ಪರಿಕರದ ಭೋಜ್ಯಭೋಜನದಲ್ಲಿ
ವರವಿವಾಹಾದ್ಯನೇಕೋತ್ಸವಗಳಲ್ಲಿ ಭೂ
ವರನಿಕರಕೆಚ್ಚರಿಕೆ ಪಿರಿದಾಗಬೇಕು ಬಿಜ್ಜಳನೃಪತಿ ಕೇಳೆಂದನು ೧೫

ಯಲ್ಲಿ ಎಷ್ಟು ತಿಳುವಳಿಕೆಯು ಮೂಡಿದ್ದರೂ, ಅವನಲ್ಲಿ ಎಷ್ಟೇ ಬಾಹುಬಲವಿದ್ದರೂ, ಶತ್ರುಜನರನ್ನು ನಿಗ್ರಹಿಸುವುದರಲ್ಲಿ ಕರುಣೆಯನ್ನು ತೋರುವುದು ಉಚಿತವಲ್ಲ, ರಾಜನೇ ಕೇಳು" ಎಂದನು. ೧೪. "ವೇದಗಳಲ್ಲಿ ಸಾಮವೇದವೇ ಹೇಗೆ ಶ್ರೇಷ್ಠವಾದದ್ದೋ ಹಾಗೆಯೇ ಉಪಾಯಗಳಲ್ಲಿ ಸಾಮೋಪಾಯವೇ ಉತ್ತಮವಾದುದು. ಆ ಸಾಮೋಪಾಯವೇ ರಾಜರ ಜೀವನಕ್ಕೆ ಹೊಂದಿಕೊಂಡು ಬರತಕ್ಕದ್ದು. ಮಿಕ್ಕ ಮೂರು ಉಪಾಯಗಳೂ ಸಾಮಾನ್ಯವಾದುವು. ಅವುಗಳಲ್ಲಿ ಮತ್ತೂ ಸಾಮಾನ್ಯವಾದದ್ದು ದಂಡೋಪಾಯ. ಇದನ್ನು ಅರ್ಥಮಾಡಿಕೊಳ್ಳದವರು ರಾಜರುಗಳಲ್ಲಿ ಸಾಮಾನ್ಯ ದರ್ಜೆಯವರೆನಿಸಿಕೊಳ್ಳುವರು, ಎಲೈ ರಾಜರಿಗೆ ತಿಲಕಪ್ರಾಯನಾದವನೇ ಕೇಳು" ಎಂದನು. ೧೫. "ಬಿಜ್ಜಳ ರಾಯನೇ ಕೇಳು, ಶತ್ರುರಾಜರುಗಳೊಡನೆ ಸಂಧಾನ ಮಾಡಿಕೊಳ್ಳುವ ಸಂದರ್ಭಗಳಲ್ಲಿ, ಆನೆ–ಕುದುರೆಗಳನ್ನು ಹತ್ತಿ ಸವಾರಿಮಾಡುವಾಗ, ಯುದ್ಧದಲ್ಲಿ, ತರುಣಿಯರ ಜೊತೆಗೆ ಆಟ–ಕೂಟಗಳಲ್ಲಿ, ಸ್ನಾನಮಾಡುವಾಗ, ಮಲಗುವಾಗ, ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ಊಟ ಮಾಡುವಾಗ, ವಿವಾಹ ಮುಂತಾದ ಅನೇಕ ಉತ್ಸವಗಳಲ್ಲಿ, ರಾಜರುಗಳು

CC-0. Jangamwadi Math Collection. Digitized by eGangotri

ವ್ಯಸನಸಪ್ತಕದ ನೆತ್ತಿಗಳನಿರದೊಡೆಬಡಿದು
ಪುಸಿಯನವನೀತಳದೊಳಡಿಯೂರದಂತೆ ತೊಲ
ಗಿಸಿ ಜಾತಿಸಂಕರಂಗಳ ಮೂಗನರಿದು ಬೆಳುಗವತೆಯಂ ಸುಟ್ಟು ತೂರಿ
ಪೆಸರನಡಗಿಸಿ ಕಳವು ಪಾದರಂಗಳ ಹಿಂಸೆ
ಯಸುವ ತೊಲಗಿಸಿ ಧರಾತಳವನಾಜ್ಞೆಯೊಳೆ ಪಾ
ಲಿಸುವ ರಾಜಂಗಿಹಪರಂಗಳೊಳಗನುಮಾನವಿಲ್ಲರಸ ಕೇಳೆಂದನು ೧೬

ಹಿರಿಯರೊಳ್ ದೇವರೊಳ್ ಗುರುಗಳೊಳ್ ಘನಭಯಂ
ಪರಮಪುಣ್ಯಕ್ಷೇತ್ರತೀರ್ಥಂಗಳೊಳ್ ಭಕ್ತಿ
ಶರಣಾಗತರೊಳಗವಗುಣಗಳಂ ನೋಡದೀಡೇರಿಸುವ ದೃಢವೊಪ್ಪುವ
ಪರಿಜನಂಗಳೊಳಮಳದಯೆ ಸಾರಸಜ್ಜನರ
ನೆರವಿಂಗೊಳಗಾದರಣೆ ಹಿತವರೊಳ್ ವಿಶ್ವಾಸ
ವಿರಬೇಕು ನೀತಿಕೋವಿದನೆನಿಸುವರಸಂಗೆ ನೃಪತಿ ನೀಂ ಕೇಳೆಂದನು ೧೭

ಸಿರಿಯ ಮದದಿಂ ಸೊಕ್ಕಿ ಮಾನ್ಯರಂ ಧಿಕ್ಕರಿಸಿ
ಪರಿವಾರಕಾಗಾಗ ಸಂಬಳಂಗಳನಿತ್ತು
ಪೊರೆದುಕೊಂಡಿರದೆ ಸಪ್ತಾಂಗಸನ್ನಾಹದೊಳಗೆಚ್ಚರಿಕೆಯಿನಿತಿಲ್ಲದೆ

ಬಹು ಎಚ್ಚರಿಕೆಯಿಂದ ಇರಬೇಕು" ಎಂದನು. ೧೬. "ರಾಜನೇ ಕೇಳು, ಸಪ್ತವ್ಯಸನಗಳು *ತಲೆಯೆತ್ತದಂತೆ ಸದೆಬಡಿಯಬೇಕು. ಅಸತ್ಯವು ರಾಜ್ಯದಲ್ಲಿ ಅಡಿಯೂರದಂತೆ ತೊಲಗಿಸ ಬೇಕು. ಜಾತಿಸಂಕರಗಳ ಮೂಗನ್ನು ಕೊಯ್ದು ತೊಲಗಿಸಬೇಕು. ಹಗಲುದರೋಡೆ ಯನ್ನು ಸುಟ್ಟು ತೂರಬೇಕು. ಕಳ್ಳತನ ಮತ್ತು ಹಾದರಗಳ ಹೆಸರಿಲ್ಲದಂತೆ ಮಾಡಬೇಕು. ಹಿಂಸೆಯ ಪ್ರಾಣವನ್ನು ತೆಗೆಯಬೇಕು. ಹೀಗೆ ರಾಜ್ಯವನ್ನು ಕಟ್ಟಪ್ಪಣೆಯಿಂದ ಪಾಲಿಸುವ ರಾಜರಿಗೆ ಇಹಪರಗಳಲ್ಲಿ ಶ್ರೇಯಸ್ಸುಂಟಾಗುವುದರಲ್ಲಿ ಯಾವ ಅನುಮಾನಗಳೂ ಇರುವುದಿಲ್ಲ" ಎಂದನು. ೧೭. "ರಾಜನೇ ಕೇಳು, ಹಿರಿಯರಲ್ಲಿ, ದೇವರಲ್ಲಿ ಮತ್ತು ಗುರುಗಳಲ್ಲಿ ಭಯವಿರಬೇಕು. ಅತ್ಯಂತ ಶ್ರೇಷ್ಠವಾದ ಪುಣ್ಯಕ್ಷೇತ್ರಗಳಲ್ಲಿ, ಪರಮಪಾವನ ತೀರ್ಥಕ್ಷೇತ್ರದಲ್ಲಿ ಭಕ್ತಿಯಿರಬೇಕು. ಶರಣಾಗತರಾದವರಲ್ಲಿ ಅವರಲ್ಲಿರುವ ಕೆಟ್ಟ ಗುಣ ಗಳನ್ನು ನೋಡದೆ ಅವರ ಅಪೇಕ್ಷೆಯನ್ನು ಈಡೇರಿಸುವ ದೃಢವಾದ ಮನಸ್ಸು ಇರಬೇಕು. ಸೇವಕವರ್ಗದವರ ಬಗ್ಗೆ ನಿರ್ಮಲವಾದ ದಯೆ ಇಟ್ಟಿರಬೇಕು. ಒಳ್ಳೆಯ ಜನರ ಸಮೂಹದಲ್ಲಿ ಆದರದಿಂದ ಇರಬೇಕು. ನಮ್ಮ ಹಿತವನ್ನು ಬಯಸುವವರಲ್ಲಿ ವಿಶ್ವಾಸ ಇರಬೇಕು. ರಾಜ್ಯಾಡಳಿತಶಾಸ್ತ್ರವನ್ನು ಚೆನ್ನಾಗಿ ಬಲ್ಲ ಅರಸನಲ್ಲಿ ಈ ಎಲ್ಲ ಗುಣಗಳೂ ಇರಬೇಕು" ಎಂದನು. ೧೮. "ಐಶ್ವರ್ಯಗರ್ವದಿಂದ ಬೀಗಿ ಗೌರವಕ್ಕೆ ಯೋಗ್ಯ

---

*ಅಡಿಟಿ : ಸಪ್ತವ್ಯಸನಗಳು: ಸ್ತ್ರೀ, ಅಕ್ಷ, ಮೃಗಯೆ, ಪಾನ, ವಾಕ್ಪಾರುಷ್ಯ, ದಂಡಪಾರುಷ್ಯ ಮತ್ತು ಅರ್ಥದೂಷಣೆ.

CC-0. Jangamwadi Math Collection. Digitized by eGangotri

ಪರಮಬಾಂಧವರ ಲೆಕ್ಕಿಸದೆ ಕೈವಿಡಿದವಳ
ನರೆವರಿಸಿ ಸೂಳೆವೆಂಡಿರ ಸಂಗದೊಳಗಿರ್ಪ
ಧರಣಿಪತಿಯಂ ಹಿಂಗದಿರ್ಪಳೇ ಜಯಲಕ್ಷ್ಮಿ ನೃಪತಿ ನೀಂ ಕೇಳೆಂದನು ೧೮

ಆವಾಗಲುಂ ಸಚ್ಚರಿತ್ರವೊಂದೇ ಮಾತು
ತಾವರಿದು ಮಾಳ್ಪ ಬೀಯಂ ಸಕಲ ಪರಿಜನವ
ನೋವಿ ಕಾಲೋಚಿತವನರಿದು ಭೋಗಿಪ ಭೋಗಮಪರಾಧಕುಳ್ಳ ಕೋಪಂ
ಲಾವಕರ ನುಡಿಗೇಳದದ ಕೇಳ್ದೊಡಂ ಬಲ್ಲ
ಕೋವಿದರ ಮುಖದೆ ನಿರ್ಧರಿಸಿ ಮಾಳ್ಪುದು ಸನ್ಮ
ಹೀವಲ್ಲಭರ ಮಾರ್ಗವಿದ ಪಿಡಿವುದುತ್ತಮೋತ್ತಮವರಸ ಕೇಳೆಂದನು ೧೯

ಮಳೆಯಿಂದೆ ಸಕಲಸಸ್ಯಾದಿಗಳ್ ಕುಸುಮಪರಿ
ಮಳದಿಂದೆ ತುಂಬಿಗಳ್ ಜ್ಞಾನದಿಂ ತಪನಿಂದು
ಕಳೆಯಿಂ ಚಕೋರಿಗಳ್ ಧರ್ಮದಿಂದರಸಾಳ್ವ ಭೂಮಂಡಲಂ ಭಾವಿಸೆ

ರಾದವರನ್ನು ತಿರಸ್ಕಾರದಿಂದ ಕಾಣುತ್ತ, ಸೇವಕರಿಗೆ ಕಾಲಕಾಲಕ್ಕೆ ಸಂಬಳಗಳನ್ನು ಕೊಟ್ಟು ಕಾಪಾಡದೆ, ಸಪ್ತಾಂಗ*ಸಿದ್ಧತೆಗಳ ಬಗ್ಗೆ ಸ್ವಲ್ಪವೂ ಎಚ್ಚರಿಕೆಯಿಂದಿರದೆ, ಉತ್ತಮರಾದ ಬಂಧುಬಳಗವನ್ನು ಕಡೆಗಣಿಸುತ್ತ, ಕೈಹಿಡಿದ ಧರ್ಮಪತ್ನಿಯನ್ನು ದೂರಮಾಡಿ, ಸೂಳೆಯರ ಸಹವಾಸದಲ್ಲಿ ಇರುವ ರಾಜನನ್ನು ಜಯಲಕ್ಷ್ಮಿಯು ಕೈ ಬಿಡದೇ ಇರುತ್ತಾಳೆಯೆ ? ರಾಜನೇ ಕೇಳು" ಎಂದನು. ೧೯. "ಉತ್ತಮರಾದ ರಾಜರ ದಾರಿ ಯಾವುದೆಂದರೆ ಯಾವಾಗಲೂ ಉತ್ತಮ ನಡತೆಯನ್ನು ಹೊಂದಿರುವುದು. ಆಡಿದ ಮಾತಿನಂತೆ ನಡೆಯುವುದು. ಪರಿಸ್ಥಿತಿಯನ್ನು ತಿಳಿದು ಖರ್ಚುಮಾಡುವುದು. ಎಲ್ಲ ಸೇವಕ ಪರಿವಾರವನ್ನೂ ರಕ್ಷಿಸುತ್ತ ಸಂದರ್ಭವನ್ನು ತಿಳಿದುಕೊಂಡು ಭೋಗಗಳನ್ನು ಅನುಭವಿಸುವುದು. ಅಪರಾಧಕ್ಕೆ ತಕ್ಕಷ್ಟು ಮಾತ್ರ ಕೋಪ. ನೀಚರ ಮಾತನ್ನು ಕೇಳದಿರುವುದು. ಒಂದುವೇಳೆ ಕೇಳಿದರೂ ನಿಜಸ್ಥಿತಿಯನ್ನು ಬಲ್ಲವರಿಂದ ವಿಚಾರಿಸಿ ನಿರ್ಧಾರಕ್ಕೆ ಬಂದು ನಡೆಯುವುದು. ಈ ದಾರಿಯನ್ನು ಹಿಡಿಯುವುದು ಅತ್ಯಂತ ಉತ್ತಮ, ರಾಜನೇ ಕೇಳು" ಎಂದನು. ೨೦. "ಮಳೆ ಬಂದಾಗ ಸಕಲ ಸಸ್ಯಗಳೂ ಬೆಳೆಯುವಂತೆ, ಹೂವಿನ ವಾಸನೆಯಿಂದ ದುಂಬಿಗಳು ಸಂತೋಷಗೊಳ್ಳುವಂತೆ, ಜ್ಞಾನದಿಂದ ತಪಸ್ಸು ವೃದ್ಧಿಸುವಂತೆ, ಚಂದ್ರನ ಕಾಂತಿಯಿಂದ ಚಕೋರಗಳು ಆನಂದ ದಿಂದ ನಲಿದಾಡುವಂತೆ, ಧರ್ಮದಿಂದ ರಾಜ್ಯವಾಳುವ ಅರಸನ ರಾಜ್ಯವು ; ಭಾವಿಸಿ

* ಅಡಿಟಿ : ಸಪ್ತಾಂಗ-ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ಸೈನ್ಯ ಮತ್ತು ಮಿತ್ರ.

CC-0. Jangamwadi Math Collection. Digitized by eGangotri

ಕೆಳೆಯರಿಂ ಬೇಟಂ ಸುಪುತ್ರರಿಂದಿಹಪರಂ
ಗಳ ಸುಖಂ ಪೆರ್ಚುವಂದದೆ ಪೆರ್ಚುವುದು ಮಂತ್ರಿ
ತಿಲಕನಿಂದೈಶ್ವರ್ಯಮವನಿಪಂಗಿದು ರಾಜನೀತಿ ನೀಂ ಕೇಳೆಂದನು ೨೦

ಅದರಿನುತ್ತಮಸಚಿವನುಳ್ಳ ಭೂಪಾಲಕನ
ಪದವಿಗಪ್ಪುದು ಪೆರ್ಚು ದಿನದಿನಕೆ ಶುಕ್ಲಪ
ಕ್ಷದ ಚಂದ್ರನಂದದಿಂ ನಾಡಾಡಮಾತ್ಯನೇ ತವ ದಣಾಯಕ ಬಸವನು
ಒದವಿದೈಶ್ವರ್ಯದಿಂ ಬಾಳ್ವರಂ ಕಂಡು ಕಡು
ಗುದಿದು ಮತ್ಸರದೆ ಕೊಂಡೆಯುವನುಸಿರಿದೊಡೆ ಕೇ
ಳ್ವುದು ನೀತಿಮಾರ್ಗವೇ ರಾಯ ನೀಂ ಕೇಳೆಂದು ಚೆನ್ನಬಸವಂ ನುಡಿಯುಲು ೨೧

ಪರೆದುದಾಕ್ಷಣ ಮನದ ಸಂದೇಹಮೆಂದೆಂಬ
ಪರಮತಿಮಿರಂ ವಿವೇಕಮೆನಿಪ್ಪ ಪೊಂಬಿಸಿಲ್
ನಿರುತದಿಂ ಪಸರಿಸಿತು ವದನವೆಂದೆಂಬ ನೀರೇಜಮಿರದಲರ್ದುದೊಡನೆ
ವರ ಬಸವರಾಜನ ಮನಂ ತನ್ನ ಮನವೆಂಬ
ಗುರುಚಕ್ರವಾಕಮೆರಡೊಂದಾದುವಂದು ಭೂ
ವರನ ಸುಜ್ಞಾನಸೂರ್ಯೋದಯಂ ತಲೆದೋರಲೇನೆಂಬೆನಚ್ಚರಿಯನು ೨೨

ನೋಡಿದರೆ, ಸ್ನೇಹಿತರಿಂದ ಪ್ರೇಮ ವೃದ್ಧಿಯಾಗುವಂತೆ, ಸುಪುತ್ರರಿಂದ ಇಹಪರ ಸುಖಗಳು ವರ್ಧಿಸುವಂತೆ, ಶ್ರೇಷ್ಠನಾದ ಮಂತ್ರಿಯಿಂದ ರಾಜನ ಐಶ್ವರ್ಯವು ಹೆಚ್ಚುತ್ತದೆ. ಇದು ರಾಜನೀತಿ, ನೀನು ಕೇಳು" ಎಂದನು. ೨೧. "ಆದ್ದರಿಂದ ದಿನದಿನಕ್ಕೂ ವೃದ್ಧಿಹೊಂದುತ್ತ ಹೋಗುವ ಶುಕ್ಲಪಕ್ಷದ ಚಂದ್ರನ ರೀತಿಯಲ್ಲಿ ಶ್ರೇಷ್ಠನಾದ ಮಂತ್ರಿಯನ್ನುಳ್ಳ ರಾಜನ ಪದವಿ ವೃದ್ಧಿಯಾಗುತ್ತ ಹೋಗುತ್ತದೆ. ನಿನ್ನ ದಂಡನಾಯಕನಾದ ಬಸವನು ಸಾಮಾನ್ಯನಾದ ಮಂತ್ರಿಯೆ ? ಒದಗಿಬಂದ ಐಶ್ವರ್ಯ ದಿಂದ ಸುಖವಾಗಿ ಬಾಳುವವರನ್ನು ಕಂಡು ಹೆಚ್ಚಾದ ಅಸೂಯೆಯಿಂದ ಕುದಿದು ಹೇಳಿದ ಚಾಡಿಮಾತನ್ನು ಕೇಳಿದರೆ ಅದು ನೀತಿಮಾರ್ಗವೆ ? ರಾಜನೇ ನೀನು ಕೇಳು" ಎಂದು ಚೆನ್ನಬಸವಣ್ಣನು ಹೇಳಲು, ೨೨. ಆ ಕೂಡಲೇ ರಾಜನ ಮನಸ್ಸನ್ನು ಆವರಿಸಿದ್ದ ಸಂದೇಹವೆಂಬ ಗಾಢವಾದ ಕತ್ತಲೆಯು ಚೆದುರಿಹೋಗಿ ವಿವೇಕವೆಂಬ ಸೂರ್ಯೋದಯದ ಹೊಂಬಿಸಿಲು ಹರಡಿತು. ಒಡನೆಯೇ ರಾಜನ ಮುಖಕಮಲವು ಅರಳಿತು. ಸುಜ್ಞಾನವೆಂಬ ಸೂರ್ಯನು ಉದಯಿಸಲು ತಕ್ಷಣವೇ ಶ್ರೇಷ್ಠನಾದ ಬಸವರಾಜನ ಮನಸ್ಸು ಮತ್ತು ರಾಜನಾದ ಬಿಜ್ಜಳನ ಮನಸ್ಸು ಎಂಬ ಚಕ್ರವಾಕಪಕ್ಷಿಗಳು ಒಂದಾ

CC-0. Jangamwadi Math Collection. Digitized by eGangotri

ನೀವಲ್ಲದೆಮಗೆ ಹಿತರುಂಟೆ ಬೇರೆಮ್ಮ ಧರ
ಣೀವಲಯವೆಲ್ಲವುಂ ಬಸವರಾಜನ ವಶಂ
ಪಾವನಚರಿತ್ರರಲ್ಲಾ ನೀವೆನುತ್ತಲುಡುಗೊರೆಗಳಂ ತರಿಸಿಕೊಟ್ಟು
ಭಾವಿಸಿ ನಿಜಾಲಯಕ್ಕಳಿಯಮಾವಂದಿರಂ ಕಳುಪಿ
ತೀವಿದುತ್ಸವದೆ ಬೀಳ್ಕೊಟ್ಟುಳಿದರಂ ಕಳುಪಿ
ಭೂವರಂ ತನ್ನ ರಾಜಾಲಯಕ್ಕೈದಿದಂ ಪರಮಸಂತೋಷದಿಂದೆ ೨೩.

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೨೪

## ಎಂಟನೆಯ ಸಂಧಿ ಸಂಪೂರ್ಣ

ದುವು. ಅದರ ಆಶ್ಚರ್ಯವನ್ನು ಏನೆಂದು ಹೇಳಲಿ ! ೨೩, "ನೀವಲ್ಲದೆ ಹಿತರಾದವರು ನಮಗೆ ಬೇರೆ ಯಾರಿದ್ದಾರೆ ? ಈ ನಮ್ಮ ಸಕಲ ಸಾಮ್ರಾಜ್ಯವೂ ಬಸವರಾಜನ ಅಧೀನ. ನೀವು ಪುಣ್ಯಚರಿತ್ರರು" ಎಂದು ಹೇಳುತ್ತ ಅವರಿಗೆಲ್ಲ ಉಡುಗೊರೆಗಳನ್ನು ತರಿಸಿ ಕೊಟ್ಟು ಸನ್ಮಾನಿಸಿ ಮಾವ–ಅಳಿಯಂದಿರಿಬ್ಬರನ್ನೂ ಸಂತೋಷದಿಂದ ಅವರ ಅರಮನೆಗೆ ಕಳುಹಿಸಿಕೊಟ್ಟು, ಉಳಿದವರನ್ನೂ ಕಳುಹಿಸಿ, ಬಿಜ್ಜಳರಾಯನು ಪರಮ ಸಂತೋಷದಿಂದ ತನ್ನ ಅರಮನೆಗೆ ಬಂದನು. ೨೪. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ, ಅನಂತ ಸೌಖ್ಯವನ್ನೂ ಕೊಟ್ಟು ಕಾಪಾಡುವನು.

## ಎಂಟನೆಯ ಸಂಧಿ ಮುಗಿಯಿತು



CC-0. Jangamwadi Math Collection. Digitized by eGangotri

# ಒಂಬತ್ತನೆಯ ಸಂಧಿ

ಸೂಚನೆ : ಇನನಸ್ತಮಾನವರ್ಣನೆಯನಾ ತಮದೊಳಂ
ದನುವಿನಿಂದೈತಪ್ಪ ಜಾರೆಯರ ಜಾತಿಯುಂ
ಘನತರದ ಚಂದ್ರೋದಯದ ವರ್ಣನೆಯನೊಲಿದು ಪೇಳ್ವೆಂ ಸವಿಸ್ತರದೊಳು

ಮುಖವೈರಸುಳ್ಳ ಮಹಿಮನ ತೊಡೆಯಮೇಲೆ ಹಿಮ
ಶಿಖರಿಯಾತ್ಮಜೆ ಸುಖದೊಳಿರಲಲ್ಲಿಗಯ್ತಂದು
ಶಿಖಿವಾಹನಂ ಮುಂದೆ ನಿಂದು ತನ್ಮಾತೆಯುರವಂ ನಿರೀಕ್ಷಿಸಿದೊಡಲ್ಲಿ
ಮುಖಮದೈವತ್ತುನಾಲ್ಕಕ್ಷಿನೂರೆಂಟಿರಲ್
ಲಿಖಿಸಿರ್ದ ಪ್ರತಿಮೆಯುಂದದಿ ಬೆರಗುವಟ್ಟ ಷಣ್
ಮುಖನ ಮುಗ್ಧಸುಭಾವವಂ ಕಂಡು ನಗುವ ಪಂಪಾಧವಂ ಸಲಹೆಮ್ಮನು ೧

ಅನ್ನೆಗಂ ಪಶ್ಚಿಮಾಂಗನೆ ಲೀಲೆಯಿಂ ಪಿಡಿದ
ರನ್ನದಿಮ್ಮೈಗನ್ನಡಿಯೊ ವಾರುಣಿಯ ಮಸ್ತ
ಕೋನ್ನತನವೀನಮಾಣಿಕ್ಯವೋ ವಡಬಾಗ್ನಿಯಿಂ ಸಿಡಿದ ಪೆರ್ಗಿಡಿಯಿದೋ

ಸೂಚನೆ : ಮುಳುಗುತ್ತಿರುವ ಸೂರ್ಯನ ವರ್ಣನೆಯನ್ನೂ, ಆ ಕತ್ತಲೆಯಲ್ಲಿ ಅನುಕ್ರಮವಾಗಿ ಬರುತ್ತಿರುವ ಜಾರೆಯರ ಗುಂಪಿನ ಮತ್ತು ಶ್ರೇಷ್ಠ ಚಂದ್ರೋದಯದ ವರ್ಣನೆಯನ್ನೂ ವಿಸ್ತಾರವಾಗಿ ಮಾಡುತ್ತೇನೆ, ೧. ಪಂಚಮುಖನಾದ ಮಹೇಶ್ವರನ ತೊಡೆಯ ಮೇಲೆ ಪಾರ್ವತಿಯು ಸುಖದಿಂದ ಕುಳಿತಿದ್ದಳು. ಅಲ್ಲಿಗೆ ಷಣ್ಮುಖನು ಬಂದನು. ಮುಂದೆ ನಿಂತು ತನ್ನ ತಾಯಿಯ ವಕ್ಷಸ್ಥಲವನ್ನು ನೋಡಿದನು. ಅಲ್ಲಿ ಐವತ್ತು ನಾಲ್ಕು ಮುಖ ಮತ್ತು ನೂರೆಂಟು ಕಣ್ಣುಗಳಿರಲು ಚಿತ್ರಿಸಿದ ಬೊಂಬೆಯಂತೆ ಬೆರಗುವಟ್ಟು ನಿಂತ ಷಣ್ಮುಖನ ಮುಗ್ಧಸ್ವಭಾವವನ್ನು ನೋಡಿ ನಗುವ ಪಂಪಾಪತಿ ನಮ್ಮನ್ನು ಕಾಪಾಡಲಿ.[1] ೨. ಆ ವೇಳೆಗೆ, ಪಶ್ಚಿಮಾಂಗನೆಯು ಬೆಡಗಿನಿಂದ ಹಿಡಿದುಕೊಂಡಿರುವ ಎರಡು ಮುಖಗಳುಳ್ಳ ರತ್ನದ ಕನ್ನಡಿಯೊ, ಆಕೆಯ ತಲೆಯ ಮೇಲಿರುವ ಹೊಸ ಮಾಣಿಕ್ಯವೊ, ಬಡಬಾಗ್ನಿಯಿಂದ ಸಿಡಿದ ದೊಡ್ಡ ಕಿಡಿಯೋ, ಸಮುದ್ರರಾಜನ ಪತ್ನಿಯು ತನ್ನ ಪತಿಗೆ

---

[1] ದೇವಿಯ ಕೊರಳಲ್ಲಿ ನವರತ್ನಗಳ ಹಾರವಿತ್ತು. ಒಂದೊಂದು ರತ್ನದಲ್ಲಿ ಆರು ಮುಖಗಳಂತೆ $(6 \times 9 = 54)$ ಐವತ್ತು ನಾಲ್ಕು ಮುಖಗಳು ಷಣ್ಮುಖನಿಗೆ ಕಾಣಿಸಿದವು. ಅವುಗಳಲ್ಲಿ ನೂರೆಂಟು ಕಣ್ಣುಗಳಿದ್ದವು ಎಂದು ಅಭಿಪ್ರಾಯ (ರಂ).

CC-0. Jangamwadi Math Collection. Digitized by eGangotri

ಮುನ್ನೀರ ಸತಿ'ಪತಿಗೆಯಾರತಿಯನೆತ್ತಿ ಜವ
ದಿನ್ನೆಗಪಿ ಚೆಲ್ಲಲಾಕೆಯ ಕೈಯೊಳಿರ್ಪ ಪೊಸ
ಪೊನ್ನ ಪರಿಯಾಣಮೆನಲಸ್ತಗಿರಿಮಸ್ತಕದೊಳಿನಬಿಂಬಮೆಸೆದಿರ್ದುದು ೨

ಘನಹೇತಿಯಿಂದಂ ದ್ವಿಜೋಪಹತಿಗೆಯ್ದು ವೇ
ದನೆಗಳಂ ಕುಲಗೋತ್ರಶಿರಕೆ ಸಮನಿಸಿ ಬಿಡದೆ
ಮುನಿದು ರಾಜಿಸುವ ಸೈಂಧವವೃದ್ಧಿಯಂ ಕೆಡಿಸಿ ಕುವಲಯಮನುರಿಪಿ ನಿಚ್ಚಂ
ಜನದರಿಕೆಯಿಂದೆ ವಾರುಣಿಗೆ ಮೋಹಿಪ ಮಹಾ
ತ್ಮನ ತೇಜಮಿರ್ದಪುದೆ ಪೇಳೆನಲ್ ಸೂರ್ಯನು
ಳ್ಳನಿತು ಕಿರಣಮನುಳಿದು ತವೆ ದಿಗಂಬರನಾಗುತಸ್ತಗಿರಿಯಂ ಸಾರ್ದನು ೩

ಮಧುಪಪ್ರಸಂಗಿ ಪುಷ್ಪಿತೆ ಬಂಡಿನಿಂ ಮೆರೆವ
ಸುದತಿಯುನ್ಮುಖಿ ಪಗಲೆ ಬಯಲೊಳಗೆ ನೆರೆವ ಕುಲ
ವಧುವಂತೆ ದೋಷಮಬ್ಜಿನಿಯ ಸಂಗಂ ಸಾಕೆನುತ್ತೆ ಸಂಧ್ಯಾದೇವಿಯ

ಆರತಿಯೆತ್ತಿ ತ್ವರಿತದಿಂದ ಆರತಿಯ ನೀರನ್ನು ಎತ್ತಿ ಚೆಲ್ಲಿದ ನಂತರ ತನ್ನ ಕೈಯಲ್ಲಿ ಹಿಡಿದಿರುವ ಚಿನ್ನದ ಹರಿವಾಣವೋ ಎಂಬಂತೆ ಪಶ್ಚಿಮಾದ್ರಿಯ ಶಿಖರದಲ್ಲಿ ಅಸ್ತಮಾನ ನಾಗುತ್ತಿದ್ದ ಸೂರ್ಯಬಿಂಬವು ಕಂಗೊಳಿಸುತ್ತಿದ್ದಿತು. ೩. ಸೂರ್ಯನು ತನ್ನ ಉಗ್ರ ಕಿರಣಗಳಿಂದ ಪಕ್ಷಿಗಳನ್ನು ಪೀಡಿಸಿ, ಕುಲಪರ್ವತಗಳ ಶಿಖರಗಳಿಗೆ ವೇದನೆಯನ್ನುಂಟು ಮಾಡಿ, ವಿರಾಜಿಸುವ ಚಂದ್ರನ ವೃದ್ಧಿಯನ್ನು ಕೋಪಿಸಿ ಕೆಡಿಸಿ, ನೀಲೋತ್ಪಲಗಳನ್ನು ಸುಟ್ಟು, ಜನರಿಗೆ ಕಾಣುವಂತೆ ಪಶ್ಚಿಮದಿಕ್ಕಿಗೆ ಮೋಹಿಸಿದನು. (ಅರ್ಥಾಂತರ : ಸೂರ್ಯನು ತನ್ನ ಆಯುಧಗಳಿಂದ ಬ್ರಾಹ್ಮಣರಿಗೆ ಹಿಂಸೆಯನ್ನುಂಟುಮಾಡಿ, ಕುಲ ಗೋತ್ರಗಳ ಶಿರಸ್ಸಿಗೆ (ಉತ್ತಮವಂಶಜರ ಶಿರಸ್ಸಿಗೆ) ತಲೆನೋವನ್ನು ತಂದು, ಕುದುರೆಗಳ ಅಥವಾ ಉಪ್ಪಿನ ವೃದ್ಧಿಯನ್ನು ಕೆಡಿಸಿ, ಭೂಮಂಡಲವನ್ನು ಪೀಡಿಸಿ, ಹೆಂಡಕ್ಕೆ ಮೋಹಿಸಿದನು!) ಇಂಥವನು ಮಹಾತ್ಮನಾದರೂ ಅವನ ತೇಜಸ್ಸು ಉಳಿಯುವುದೆ, ಹೇಳು ಎಂಬಂತೆ ಸೂರ್ಯನು ತನ್ನ ಕಿರಣಗಳನ್ನು ಕಳೆದುಕೊಂಡು ದಿಗಂಬರನಾಗಿ–ಕಿರಣಶೂನ್ಯನಾಗಿ–ಬೆತ್ತಲೆಯಾಗಿ ಅಸ್ತಗಿರಿಯನ್ನು ಸೇರಿದನು. ೪. ಮೈನೆರೆದ ಹೆಂಗಸು ಹೆಂಡಕುಡುಕರ ಸಹವಾಸವುಳ್ಳವಳು, ಯೌವನಮದದಿಂದ ಮೆರೆಯುತ್ತ ನಾಚಿಕೆ ಬಿಟ್ಟವಳು ಮುಖ ವನ್ನು ಮೇಲೆತ್ತಿ ನಡೆಯುತ್ತಾಳೆ.ಹಗಲಿನಲ್ಲಿಯೇ ಅವಳು ಪುರುಷನ ಸಂಗವನ್ನು ಬಯಸು ವವಳು. ಇಂತಹವರು ಕುಲವಧುಗಳಲ್ಲ. ಇಂಥವರ ಸಹವಾಸ ದೋಷಕರವಾದುದು. ಇವರ ಸಹವಾಸ ಸಾಕು ಎನ್ನುತ್ತ ಸಂಧ್ಯಾದೇವಿಯ ಜೊತೆಯಲ್ಲಿ ಆದ ಮದುವೆಯಲ್ಲಿ

---

ಟಿಪ್ಪಣಿ : ದ್ವಿಜ = ಹಕ್ಕಿ ; ಬ್ರಾಹ್ಮಣ. ಕುಲಗೋತ್ರ = ಕುಲಪರ್ವತ, ಕುಲ ಮತ್ತು ಗೋತ್ರ. ಸೈಂಧವ = ಚಂದ್ರ ; ಕುದುರೆ ಅಥವಾ ಉಪ್ಪು. ಕುವಲಯ = ನೀಲೋತ್ಪಲ ; ಭೂಮಂಡಲ. ವಾರುಣಿ = ಪಶ್ಚಿಮದಿಕ್ಕು ; ಹೆಂಡ.

CC-0. Jangamwadi Math Collection. Digitized by eGangotri

ಮದುವೆಯಾದೊಸಗೆಯೋಕುಳಿಯಾಡಿದಂತೆ ಕೆಂ
ಪೊದವಲಂಬರಕೆ ನವಸತಿಯನಂದೇಕಾಂತ
ಸದನದೊಳ್ ಕೂಡಲೊಯ್ವಂತೆ ರವಿ ಸಂಜೆಸಹಿತಮಧಿಗೇಹಂಬೊಕ್ಕನು ೪

ಅಳಲಿದುವು ಭೂಚಕ್ರ ಚಕ್ರಮಂಬುಜಭುಜಂ
ಬಳಲಿದುವು ಕುಮುದಮುದಗಳ್ ಪೆರ್ಚಿದುವು ಧರಾ
ವಳಯವಳಯಿತಮಾದುದಂಧತಮ ಕುಲಕುಲಟೆಯರ್ ನಲಿದರಲ್ಲಿಗಲ್ಲಿ
ಮೊಳೆತುವೊಂದೊಂದು ನಕ್ಷತ್ರ ಕ್ಷತ್ರತ್ವದೊಂ
ದಳವು ದಳದುಳಮಾಯ್ತು ಕಾಮಿಜನಕಂಗಜಂ
ಗೆಲಿದನೀ ಜಗವು ಗಮನೋದ್ಯುಕ್ತನಾಗಿ ನೇಸರ್ ಬೀಳಲೇವೇಳ್ವೆನು ೫

ದಿನಪನಪರಾಂಗನಾಸಂಗಿಯಾದಂದವಂ
ನೆನೆದು ಪದ್ಮಿನಿಯುದರವುರಿದು ಕಪ್ಪಾಯ್ತೊ ಮೇಣ್
ಮನಸಿಜಂ ವಿಟರನಿಡೆ ಕಸ್ತುರಿಯ ಗುಂಡನಬ್ಜದ ಕೋವಿಯೊಳ್ ಜಡಿದನೋ
ದಿನಲಕ್ಷ್ಮಿ ವಿಧುಗಂಜಿಯಂಬುಜಕರಂಡದೊಳ್
ತನಗುಳ್ಳ ನೀಲಮಂ ಬೈತು ಪೋದಳೊಯೆನಲ್
ವನಜಮವು ಮುಗಿಯೆ ಗರ್ಭದೆ ಸಿಲ್ಕಿದಿಂದಿರಂ ಕರಂ ಚೆಲ್ವಾದುದು ೬

ಓಕುಳಿಯಾಡಿದಂತೆ ಸಂಜೆಗೆಂಪು ತೋರಿತು. ಹೊಸಹೆಂಡತಿಯನ್ನು ಅಂದೇ ಏಕಾಂತಸ್ಥಳದಲ್ಲಿ ಸೇರುವುದಕ್ಕಾಗಿ ಕರೆದುಕೊಂಡು ಹೋಗುವಂತೆ ಸೂರ್ಯನು ಸಂಜೆಯೊಂದಿಗೆ ಸಮುದ್ರ ಎಂಬ ಮನೆಯನ್ನು ಹೊಕ್ಕನು. [ವಿಶೇಷಾರ್ಥ : ಅರಳಿದ ಹೂ ದುಂಬಿಗಳ ಸಹವಾಸವುಳ್ಳದ್ದು. ಪರಾಗದಿಂದ ಕೂಡಿದ ಹೂ ಅರಳಿ ಮೇಲ್ಮುಖವಾಗಿ ಇರುತ್ತದೆ. ಅರಳಿದ ಹೂ ದುಂಬಿಗಳ ಸಂಗವನ್ನು ಬಯಸುತ್ತದೆ. ಇಂತಹುಗಳು ಕುಲವಧುಗಳಲ್ಲ. ಇವುಗಳ ಸಹವಾಸ ದೋಷಕರವಾದುದು] ೫. ಸೂರ್ಯನು ಮುಳುಗಲು ಭೂಮಂಡಲವೂ, ಚಕ್ರವಾಕಪಕ್ಷಿಗಳೂ ವ್ಯಥೆಗೊಂಡವು. ತಾವರೆಗಳು ಬಾಡಿದುವು. ನೈದಿಲೆಗಳು ಸಂತೋಷದಿಂದ ಅರಳಿದವು. ಭೂಲೋಕವನ್ನು ಮಹಾಂಧಕಾರವು ಆವರಿಸಿತು. ಜಾರಸ್ತ್ರೀಯರ ಕುಲ ನಲಿದಾಡಿತು. ಆಕಾಶದಲ್ಲಿ ಅಲ್ಲಲ್ಲಿ ಒಂದೊಂದು ನಕ್ಷತ್ರಗಳು ಕಾಣಿಸಿಕೊಂಡವು. ಕ್ಷತ್ರಿಯರ ವರ್ಚಸ್ಸು ಮತ್ತು ಸಾಮರ್ಥ್ಯಗಳು ಕ್ಷೋಭೆಗೊಂಡವು. ಕಾಮಿಗಳನ್ನು ಮನ್ಮಥನು ಜಯಿಸಿದನು. ೬. ಸೂರ್ಯನು ಸಂಧ್ಯಾಂಗನೆಯ ಜೊತೆಗೂಡಿದ ರೀತಿಯನ್ನು ನೆನೆದು ಪದ್ಮಿನಿಯ ಅಂದರೆ ಕಮಲದ ಹೊಟ್ಟೆ ಉರಿದು ಕಪ್ಪಾಯಿತೋ, ಮನ್ಮಥನು ಕಾಮುಕರನ್ನು ಹೊಡೆಯಲು ಕಸ್ತೂರಿಯ ಗೋಲಿಯನ್ನು ಕಮಲದ ಕೋವಿಯಲ್ಲಿ ತುಂಬಿದನೋ, ದಿನಲಕ್ಷ್ಮಿಯು ಚಂದ್ರನಿಗೆ ಹೆದರಿ ತನ್ನಲ್ಲಿ ಇರುವ ನೀಲ ರತ್ನವನ್ನು ಕಮಲವೆಂಬ ಸಂಪುಟದಲ್ಲಿ ಬಚ್ಚಿಟ್ಟುಹೋದಳೋ ಎನ್ನುವ ರೀತಿಯಲ್ಲಿ ತಾವರೆಯ ಹೂಗಳು ಮುಚ್ಚಿಕೊಳ್ಳಲು ಅವುಗಳ ಮಧ್ಯೆ ಸಿಲುಕಿಕೊಂಡ ದುಂಬಿಗಳು

CC-0. Jangamwadi Math Collection. Digitized by eGangotri

ಸುರಪಮುಖ್ಯಾಖಿಳ ದಿಶಾಧಿಪರ ಖೇಚರರ
ಪೊರೆಯೊಳೊಪ್ಪಿರ್ಪ ಕೈದೀವಿಗೆಗಳೋ ಪೇಳ್
ಸ್ಫುರಿಸುವಂಬರದ ರತ್ನಂ ಪೋಗಲಾಗಸಮುದಾದ್ಯಂತ ಭೂಮಿಯೊಳಗೆ
ಪರಿಕಿಸಲ್ ಲೆಕ್ಕವಿಲ್ಲದೆ ಲೋಚನಂಗಳಂ
ಧರಿಸಿದುದೊ ಮನಸಿಜಂ ತನ್ನ ಜಸಮಂ ನಭೋ
ಧರೆಯೊಳಗೆ ಪೊಯ್ದನೋ ಪೇಳೆನಲ್ ತಾರಾಳಿ ಗಗನದೊಳ್ ಕಣ್ಗೆಸೆದುವು ೭

ತರಣಿಯಂ ಬೆನ್ನಟ್ಟಲೊಡನೆ ಪಿಡಿಯಾಳಾದ
ಕಿರಣಂಗಳಂ ಸೆರೆಯೊಳಲ್ಲಿಟ್ಟುದೋ ತಮಂ
ನಿರುತಮಿದಿರ್ಗಂ ನಿಲ್ಲದೀ ತಮವಿದಂ ಮರೆಯೊಳಡಕದಿಂ ಪಿಡಿಯಲೆಂದು
ಸರಸಿಜಸಖಂ ತನ್ನ ಬಲವನಲ್ಲಲ್ಲಿ ಮೈ
ಗರೆದುಮಿರಲೆಂದು ನೇಮಿಸಿದನೋ ಪೇಳೆನಲ್
ಕರಮೊಪ್ಪಿದುವು ದೀಪಮವು ತಮಸ್ತಾಪಮವು ಮನೆಮನೆಗಳೊಳ್ ತಪ್ಪದೆ ೮

ಧರೆಯೊಳಗೆ ಕರಿದು ಕೃಷ್ಣಂ ಕೃಷ್ಣನಿಂ ಕಾಳಿ
ಕರಿದು ತತ್ಕೃಷ್ಣನಿಂ ಕಾಳಿಯಿಂ ನೀಲಗಿರಿ
ಕರಿದು ತತ್ಕೃಷ್ಣನಿಂ ಕಾಳಿಯಿಂ ನೀಲಗಿರಿಯಿಂ ಕರಿದು ಕಾಳಮೇಘಂ

ಬಹುಚೆಲುವಾಗಿ ಕಂಡುವು. ೭. ದೇವೇಂದ್ರನೇ ಮೊದಲಾದ ಅಷ್ಟದಿಕ್ಪಾಲಕರ ಮತ್ತು ಗಂಧರ್ವರ ಸಮೀಪದಲ್ಲಿ ಕಂಗೊಳಿಸುವ ಕೈದೀವಿಗೆಗಳೋ ಅಥವಾ ಪ್ರಕಾಶಮಾನವಾದ ಆಕಾಶದ ರತ್ನವು (ಸೂರ್ಯ) ಬಿದ್ದುಹೋಗಲು ಅದನ್ನು ಭೂಮಿಯಲ್ಲಿ ಎಲ್ಲ ಕಡೆಯಲ್ಲಿಯೂ ಹುಡುಕಲು ಆಕಾಶವು ಲೆಕ್ಕವಿಲ್ಲದಷ್ಟು ಕಣ್ಣುಗಳನ್ನು ಧರಿಸಿತೋ, ಮನ್ಮಥನು ತನ್ನ ಕೀರ್ತಿಯನ್ನು ಆಕಾಶಮಂಡಲದಲ್ಲಿ ಹರಡಿದನೋ ಎನ್ನುವಂತೆ ನಕ್ಷತ್ರಗಳ ಸಮೂಹವು ಗಗನದಲ್ಲಿ ಮನೋಹರವಾಗಿ ಶೋಭಿಸಿದುವು. ೮. ಸೂರ್ಯನನ್ನು ಕತ್ತಲೆಯು ಬೆನ್ನಟ್ಟಿಹೋಗಲು ಒಡನೆಯೇ ಸೆರೆಸಿಕ್ಕಿದ ಅವನ ಕಿರಣಗಳನ್ನು ಹಿಡಿದು ಬಂಧನದಲ್ಲಿಟ್ಟಿತೋ, ನಿಜಕ್ಕೂ ಎದುರುನಿಂತು ಧೈರ್ಯದಿಂದ ಹೋರಾಡಲಾರದೆ ಇದ್ದ ತಿಮಿರವನ್ನು ತಾನು ಮರೆಯಲ್ಲಿದ್ದು ಅಡಕವಾಗಿ ಹಿಡಿಯಬೇಕೆಂದು ಆಲೋಚಿಸಿ ಸೂರ್ಯನು ತನ್ನ ಸೇನಾಸಮೂಹವನ್ನು ಅಲ್ಲಲ್ಲಿ ಅಡಗಿಕೊಂಡಿರುವಂತೆ ನೇಮಿಸಿ ಆಜ್ಞಾಪಿಸಿರುವನೋ ಎನ್ನುವಂತೆ ಕತ್ತಲೆಗೆ ತಾಪವನ್ನುಂಟುಮಾಡುವಂತಹ ದೀಪಗಳು ಎಲ್ಲ ಮನೆ ಮನೆಗಳಲ್ಲಿಯೂ ಮಿನುಗುತ್ತ ಸೊಗಸಿದುವು. ೯. ಪ್ರಪಂಚದಲ್ಲಿ ಕೃಷ್ಣನೇ ಕಪ್ಪು. ಕಾಳಿಯು ಕೃಷ್ಣನಿಗಿಂತ ಕಪ್ಪು. ಆ ಕೃಷ್ಣ ಮತ್ತು ಕಾಳಿಗಿಂತಲೂ ನೀಲಗಿರಿಯೇ ಕಪ್ಪು. ಆ ಕೃಷ್ಣ, ಕಾಳಿ, ನೀಲಗಿರಿಗಳಿಗಿಂತ ಕಾಳಮೇಘವು ಮತ್ತೂ ಕಪ್ಪು. ಪರೀಕ್ಷೆ

CC-0. Jangamwadi Math Collection. Digitized by eGangotri

ಪರಿಕಿಸಲ್ ಕೃಷ್ಣನಿಂ ಕಾಳಿಯಿಂದಂ ನೀಲ
ಗಿರಿಯಿನಾ ಕಾಳಮೇಘದಿನಂಧಕಾರಮೇ
ಕರಿದೆನಿಸಿ ಪಿರಿದೆನಿಸಿ ಪಸರಿಸಿದುದೆಲ್ಲಿಯುಂ ತಿಮಿರಮತಿನಿಬಿಡಮಾಗೆ ೯

ಗಳಿಗೆಗಳಿಗೆಗೆ ಪೆರ್ಚಿ ಬಳೆವ ತಮಮಂ ಕಂಡು
ನಲಿದೆರಗಿದರ್ ತಮದ ರೂಪೆಂದು ಪರಸಿ ಜೋ
ಗುಳಪಾಡಿ ಮಕ್ಕಳಂ ತೂಗುವೀ ನೆವದಿಂದೆ ಕೃಷ್ಣನಂ ಕಾಳಿಂದಿಯು
ಅಳಿಗಳಂ ಕೋಗಿಲೆಯನೊಲಿದು ಪಾಡಿದರಂದು
ಸಲೆ ತಮ್ಮ ಮನದಿಚ್ಛೆಯಂ ಸಲಿಪರಂ ಕಂಡು
ಪಲವು ಪರಿಯಿಂ ಪೊಗಳದಿರ್ಪರೇಯೆಂತಪ್ಪರಾದೊಡಂ ಧಾರುಣಿಯೊಳು ೧೦

ಪಡುವಣಂಬುಧಿಯೊಳ್ ಮುಳುಂಗಿದಿನನಂ ನೆಗಳ್
ಪಿಡಿದು ನುಂಗುಗೆ ಮೂಡುವಿಂದುವಂ ರಾಹು ಬಂ
ದಡಸಿ ಮುಕ್ಕುಗೆ ಪತಿಗೆ ಕೇಡಕ್ಕೆ ಕತ್ತಲೆಗೆ ಕಡೆಗಾಲಮಾಗದಿರ್ಕೆ
ಕಡುನೇಹದುಪಪತಿಗೆ ಜಯಮಕ್ಕೆ ತನ್ನ ಸಂ
ಗಡತಿಯರ್ಗೊಲವಕ್ಕೆನುತ್ತೆ ಮಾರಿಗೆ ಪರಕೆ
ಪಿಡಿದೆತ್ತಿದಳ್ ಕುಲಟೆಯೊರ್ವಳತಿಕಾಮುಕರ್ ಕಾಲಭೇದವನೆಣಿಪರೇ ೧೧

ಧವಳಾಂಬರಮನಮಳ ಮೌಕ್ತಿಕಾಭರಣಮಂ
ನವಚಂದನಾನುಲೇಪಂಗಳಂ ಬಿಟ್ಟು ಸೊಗ
ಸುವ ನೀಲವಸನ ನೀಲಾಭರಣ ಮೃಗಮದಂಗಳನುಟ್ಟು ತೊಟ್ಟು ಪೂಸಿ

ಮಾಡಿ ನೋಡಿದರೆ ಆ ಕೃಷ್ಣ, ಕಾಳಿ, ನೀಲಗಿರಿ, ಕಾಳಮೇಘ ಇವೆಲ್ಲವುಗಳಿಗಿಂತ ಅಂಧಕಾರವೇ ಹೆಚ್ಚು ಕಪ್ಪು ಎನ್ನಿಸಿ, ಆ ಕತ್ತಲು ಎಲ್ಲೆಲ್ಲಿಯೂ ಒತ್ತೊತ್ತಾಗಿ ಪಸರಿಸಿತ್ತು. ೧೦. ಗಳಿಗೆ ಗಳಿಗೆಗೂ ಹೆಚ್ಚುತ್ತ ಬೆಳೆಯುತ್ತಿರುವ ಕತ್ತಲೆಯನ್ನು ನೋಡಿ ಸಂತೋಷದಿಂದ ನಮಸ್ಕರಿಸಿದರು. ಕತ್ತಲೆಯ ರೂಪವೆಂದು ಹರಸಿ ಜೋಗುಳ ಹಾಡಿ ಮಕ್ಕಳನ್ನು ತೂಗುವ ನೆವದಿಂದ ಕೃಷ್ಣನನ್ನು, ಕಾಳಿಂದಿಯನ್ನು, ದುಂಬಿಗಳನ್ನು, ಕೋಗಿಲೆಗಳನ್ನು ಕುರಿತು ಮನಸಾರ ಪ್ರೀತಿಯಿಂದ ಹಾಡಿದರು. ಪ್ರಪಂಚದಲ್ಲಿ ತಮ್ಮ ಮನದ ಆಸೆಯನ್ನು ಚೆನ್ನಾಗಿ ಪೂರೈಸುವವರನ್ನು ನೋಡಿ ಯಾರೇ ಆಗಲಿ ಎಲ್ಲ ರೀತಿಯಿಂದಲೂ ಹೊಗಳದೆ ಇರುತ್ತಾರೆಯೆ ? ೧೧. ಪಶ್ಚಿಮ ಸಮುದ್ರದಲ್ಲಿ ಮುಳುಗಿದ ಸೂರ್ಯನನ್ನು ಮೊಸಳೆ ಹಿಡಿದು ನುಂಗಲಿ. ಉದಯಿಸುವ ಚಂದ್ರನನ್ನು ರಾಹು ಮೇಲೆ ಬಿದ್ದು ಅನಾಮತ್ತಾಗಿ ನುಂಗಲಿ. ಗಂಡನಿಗೆ ಕೆಟ್ಟದ್ದಾಗಲಿ. ಕತ್ತಲೆಗೆ ಕೊನೆಗಾಲವೇ ಬಾರದಿರಲಿ.ಬಹಳ ಪ್ರೀತಿಯ ಮಿಂಡನಿಗೆ ಜಯವಾಗಲಿ. ತನ್ನ ಸಂಗಾತಿಯರಿಗೆ ಪ್ರೀತಿಯುಂಟಾಗಲಿ ಎಂದು ಒಬ್ಬಳು ಕುಲಟೆಯು ಮಾರಿಗೆ ಹರಕೆಯನ್ನು ಹೊತ್ತಳು. ಕಾಮಾಸಕ್ತರಾದವರು ಕಾಲಭೇದವನ್ನು ಎಣಿಸುತ್ತಾರೆಯೇ ? ೧೨. ಬಿಳಿಯ ಸೀರೆಯನ್ನು, ಅಮೂಲ್ಯವಾದ ಮುತ್ತಿನ ಆಭರಣಗಳನ್ನು, ಮೈಗೆ ಲೇಪಿಸಿಕೊಳ್ಳುವ ಚಂದನವೇ ಮೊದಲಾದ ವಸ್ತುಗಳನ್ನು ತೊರೆದು

CC-0. Jangamwadi Math Collection. Digitized by eGangotri

ತವೆ ತಮಂ ಬಹುರೂಪವಮಂ ಧರಿಸಿದಂತೆ ಪಾ
ಪವೆ ನಾಡೆ ಪೆಣ್ರೂರಿಜನಿಂ ಚರಿಸುವಂತಧಿಕ
ತವಕದಿಂದೆಯ್ದಿದರ್ ಸಂಕೇತಭವನದೊಳ್ ಕಾದಿರ್ವ ನಲ್ಲರೆಡೆಗೆ ೧೨

ಕೇಕರಿಸಿ ಕೆಮ್ಮಿ ಸೀತುಂ ಪೆರರ ಕರೆದು ಮೊದ
ಲಾಕೆಗೀ ಪರಿ ಸನ್ನೆದೋರಿದುಪಪತಿಗೆ ನಾ
ನಾ ಕುಶಲವುಪ್ಪ ಸಂಜ್ಞೆಗಳಿಂದವೆರ್ದೆಗೆ ತರಹರವಿತ್ತು ತನ್ನ ಪತಿಯು
ಬೇಕೆಂದು ಕೂಡಿದಂತೊದಗಿ ನಿದ್ರೆಗೆ ಸಲಿಸಿ
ಜೋಕೆಯಿಂ ಜಾರರೊಳ್ ನೆರೆದು ಮನೆಗಳ್ಗೆ ಬ
ರ್ಪಾ ಕಪಟಸತಿಯರೆಸೆದಿರ್ದರಲ್ಲಲ್ಲಿ ಬಹುಪಾಪಮೊಡೆಯಾಡುವಂತೆ ೧೩

ಸೊಕ್ಕುಗತ್ತಲೆಯೊಳಗೆ ಜಾರೆಯರ್ ತಮತಮಗೆ
ತಕ್ಕರೆಡೆಗೈದುವೆಡೆಯೊಳಗಿರ್ವರಸತಿಯರ್
ಗಕ್ಕು ಪಾಡಿಂ ಕಾಣುತನ್ಯೋನ್ಯಪ್ರಿಯರೆಂದು ಸನ್ನೆಗೈದೆಡೆಗೆ ಪೋಗಿ
ಉಕ್ಕುವತಿಕಾತರದೊಳಾಲಿಂಗನಂಗೆಯ್ಯೆ
ಸಕ್ಕಸಮನಾಗಲಿರ್ವರ ರೂಪುಗಳ ಬಳಿಕೆ
ನಕ್ಕು ಪಿಂಗಿದರಿಂತು ಕಾಮಿಗಳ ಕಣ್ಗಾಣರೆಂಬುದೇನಚ್ಚರಿಯಮೋ ೧೪

ತಮಗೆ ಸೊಗಸಾಗಿ ಕಾಣುವ ನೀಲಿಬಟ್ಟೆಯುಟ್ಟು, ನೀಲಿಯಾಭರಣಗಳನ್ನು ತೊಟ್ಟು, ಕಸ್ತೂರಿಯನ್ನು ಮೈಗೆ ಲೇಪಿಸಿಕೊಂಡು ಕತ್ತಲೆಯೇ ಅನೇಕ ರೂಪವನ್ನು ಧರಿಸಿದಂತೆ, ಪಾಪವೇ ಸ್ತ್ರೀರೂಪದಲ್ಲಿ ಚಲಿಸುವಂತೆ ಬಹುಕಾತರರಾಗಿ ಸಂಕೇತಸ್ಥಳಗಳಲ್ಲಿ ಕಾದಿದ್ದ ತಮ್ಮ ಪ್ರಿಯರ ಬಳಿಗೆ ಹೊರಟರು. ೧೩. ಕ್ಯಾಕರಿಸಿ ಕೆಮ್ಮಿ, ಸೀತು, ಬೇರೆಯವರನ್ನು ಕರೆದು ಮೊದಲಾಕೆಗೆ ಈ ರೀತಿ ಸಂಜ್ಞೆಗಳನ್ನು ತೋರಿಸಿದ ವಿಟರಿಗೆ ನಾನಾ ರೀತಿಯ ಚತುರ ಸಂಜ್ಞೆಗಳಿಂದ ಮನಸ್ಸನ್ನು ಸಮಾಧಾನಪಡಿಸಿ ತಮ್ಮ ತಮ್ಮ ಗಂಡಂದಿರ ಜೊತೆಯಲ್ಲಿ ಬೇಕುಬೇಕೆಂದೇ ಕೂಡಿ ಅವರನ್ನು ನಿದ್ದೆ ಹೋಗಿಸಿ ಅನಂತರ ಎಚ್ಚರಿಕೆಯಿಂದ ತಮ್ಮ ಜಾರರಲ್ಲಿ ಕೂಡಿ ಅನಂತರ ಮನೆಗಳಿಗೆ ಹಿಂದಿರುಗುವ ವಂಚಕರಿಂದ ಹೆಂಡಿರು ಪಾಪಗಳೇ ತಿರುಗಾಡುವಂತೆ ಅಲ್ಲಲ್ಲಿ ಕಾಣಿಸುತ್ತಿದ್ದರು. ೧೪. (ಅಮಲು) ಸೊಕ್ಕೇರುವಂತೆ ಮಾಡುವ ಆ ಕತ್ತಲೆಯಲ್ಲಿ ಜಾರೆಯರು ತಮತಮಗೆ ಪ್ರಿಯರಾದವರ ಬಳಿಗೆ ಹೋಗುತ್ತಿದ್ದ ಸಮಯದಲ್ಲಿ ಅಲ್ಲಿ ಇಬ್ಬರು ಜಾರೆಯರು ಇದ್ದಕ್ಕಿದ್ದಂತೆ ಕತ್ತೆತ್ತಿ ನೋಡಿ ಪರಸ್ಪರ ಪ್ರೇಮಿಗಳೆಂದು ತಿಳಿದು, ಸನ್ನೆ ಮಾಡಿದ ಸ್ಥಳಕ್ಕೆ ಹೋದರು. ಉಕ್ಕುವ ಅತಿಯಾದ ಆತುರದಿಂದ ಪರಸ್ಪರ ಆಲಿಂಗಿಸಿಕೊಂಡರು. ಅವರಿಬ್ಬರ ರೂಪಗಳೂ ಒಂದೇ ಎಂದರೆ ಇಬ್ಬರೂ ಜಾರೆಯರೇ ಎಂದು ಗೊತ್ತಾದ ಮೇಲೆ ನಕ್ಕು ಅಪ್ಪುಗೆ ಯನ್ನು ಬಿಟ್ಟರು. ಈ ರೀತಿ ಕಾಮುಕರು ಕಣ್ಣು ಕಾಣರು ಎಂಬುದೇನು ಆಶ್ಚರ್ಯವ

CC-0. Jangamwadi Math Collection. Digitized by eGangotri

ಬಾಯ್ಗಮರ್ದುದೇಯಧರಮಾಗಿ ನೇಮವೆ ತಮ್ಮ
ಕಯ್ಗಮರ್ದುದಾಗಿ ಮನಕಮರ್ದುದೇ ಮನೆಯಾಗಿ
ಮೆಯ್ಗಮರ್ದುದೇ ತಳ್ಪಮಾಗಿ ಕಡುತವಕಕಮರ್ದಿಂದಮೆ ಸುಬಂಧಮಾಗಿ
ಸುಯ್ಗೆಳುಣ್ಮದ ಭರಂ ತನುಬಂಧನಂ ಹದಿರು
ವಯ್ಗೆಳುಣ್ಮದಲ್ಲಲ್ಲೆ ನಡದುಗುರ್ ಕರಗದೆರ್ದೆ
ಪೊಯ್ಗೆಳುಣ್ಮದ ಸರಸಮರಿಕೆಗೂಡಿದ ಪರವಶಂ ಜಾರರೊಳ್ ಮೆರೆದುದು ೧೫

ಅಳಕಮಂ ನೇವರಿಸಿ ಮೆಯ್ಯ ರಜಮಂ ತೊಡೆದು
ಪೊಳೆವಧರ ಕುಚ ಬೆನ್ನು ತೋಳ್ ತೊಡೆಗಳಂ ತಡವು
ತಿಳಿವ ಮದನಾಂಬುವಂ ನಿರಿಯೊಳೊರಸುತೆ ಸಡಿಲ್ದುಡಿಗೆಯಂ ಸೈತುಮಾಡಿ
ಗಳಕರ್ಣಭೂಷಣಂಗಳ ತಿರ್ದುತುಸಿರ ಬಿಡ
ದೊಳಗೊಳಗೆ ನಲ್ಲನಂ ಪಲ್ಗುಗುರ್ಗಳ ಚುರುಕು
ಗಳನರಿದು ಬೈವುತಂ ಬರುತಿರ್ದರಾತ್ಮಮಂದಿರಕಂದು ಬಂಧಕಿಯರು ೧೬

ವರುಣಗಿರಿ ಪೂರ್ವಾದ್ರಿಗಳ ಹೆಚ್ಚುಕುಂದಮಂ
ಸರಸಿಜಭವಂ ನೋಳ್ಪೆನೆಂದು ತೂಗಲ್ ಸಮಂ
ಬರದಿರಲ್ ಪೂರ್ವಾದ್ರಿಗಿಟ್ಟ ಪಡಿಗುಂಜಿಯೋ ನಿರ್ಮೋಹಿ ಲೌಕಿಗರನು

ಸಂಗತಿಯೇ? ೧೫. ಬಾಯಿಗೆ ಸಿಕ್ಕಿದುದೇ ತುಟಿಗಳು, ಕೈಗೆ ಸಿಕ್ಕಿದುದೇ ಕಟ್ಟಳೆ (ನೇಮ), ಮನಸ್ಸಿಗೆ ಬಂದ ಜಾಗವೇ ಮನೆ, ಮೈಯಿಗೆ ಸಿಕ್ಕಿದ್ದೇ ಹಾಸಿಗೆ, ಬಹಳ ತವಕದಿಂದ ಅಪ್ಪಿ ಕೊಂಡ ರೀತಿಯೇ ಅವರ ಪ್ರೇಮಾಲಿಂಗನ, ಬಿಸಿಯುಸಿರು ಬರದ ರೀತಿಯಲ್ಲಿ ದೇಹವನ್ನು ಬಂಧಿಸುವ ರೀತಿ, ಚಮತ್ಕಾರದ ಹಾಸ್ಯದ ಮಾತುಗಳು ಬರದ ರೀತಿಯ ಮುದ್ದಾಟ,ನಟ್ಟು ಗಾಯ ಮಾಡದ ಉಗುರು, ಅವರ ರಭಸಕ್ಕೆ ಕರಗದ ಎದೆ, ಒಬ್ಬರಿಗೊಬ್ಬರು ಹೊಯ್ದಾಡದ ರೀತಿಯ ಸರಸ, ಪರವಶರಾಗಿದ್ದರೂ ಮೈಮರೆಯದ ಜಾಣ್ಮೆ ಆ ಜಾರರಲ್ಲಿ ಕಾಣಿಸಿ ಕೊಂಡಿತು. ೧೬. ಮುಂಗುರುಳನ್ನು ತಿದ್ದಿ ಸರಿಮಾಡಿಕೊಂಡು ಮೈಮೇಲೆ ಇದ್ದ ಧೂಳನ್ನು ಕೊಡವಿಕೊಂಡು ಹೊಳೆಯುವ ತುಟಿ, ಸ್ತನಗಳು, ಬೆನ್ನು, ತೋಳು, ತೊಡೆಗಳನ್ನು ಸವರುತ್ತ, ಬೆವರನ್ನು ಸೀರೆಯ ಸೆರಗಿನಿಂದ ಒರಸಿಕೊಳ್ಳುತ್ತ, ಸಡಿಲವಾಗಿದ್ದ ಉಡುಗೆಯನ್ನು ಸರಿಪಡಿಸಿಕೊಂಡು, ಕತ್ತು ಮತ್ತು ಕಿವಿಗಳ ಆಭರಣಗಳನ್ನು ನೇರ ಮಾಡಿಕೊಳ್ಳುತ್ತ, ಗಟ್ಟಿಯಾಗಿ ಉಸಿರನ್ನು ಬಿಡದೆ, ಮನಸ್ಸಿನಲ್ಲಿ ತನ್ನ ಪ್ರಿಯನು ಕಚ್ಚಿದ ಹಲ್ಲುಗಳ ಗೀರಿದ ಉಗುರುಗಳ ಕಾವನ್ನು ತಿಳಿದು, ಅವನನ್ನು ನಿಂದಿಸುತ್ತ ಆ ಜಾರಸ್ತ್ರೀಯರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಿದ್ದರು. ೧೭. ಅಷ್ಟರಲ್ಲಿ ಚಂದ್ರೋದಯವಾಯಿತು. ಪಶ್ಚಿಮ ಮತ್ತು ಪೂರ್ವಾದ್ರಿಗಳ ತೂಕವು ಹೆಚ್ಚು ಕಡಿಮೆ ಇದೆಯೇ. ಸಮತೂಕ ನೋಡುವೆನೆಂದು ಬ್ರಹ್ಮನು ತೂಗಿ ನೋಡಿದಾಗ ಸಮತೂಕವು ಬರದೇ ಪೂರ್ವಾದ್ರಿಯು ಸ್ವಲ್ಪ ಕಡಿಮೆ ಇದ್ದುದರಿಂದ ಸಮತೂಕ

CC-0. Jangamwadi Math Collection. Digitized by eGangotri

ಸ್ಮರನೆಂಬ ಕಾಲರುದ್ರಂ ಪ್ರಳಯಮೈದಿಸಲ್
ಗುರುತರಕ್ರೋಧದಿಂ ತೆರೆದ ಶಿಖಿನೇತ್ರದಂ
ತಿರಲೆಸೆದುದುದಯಾದ್ರಿಯೊಳ್ ಚಂದ್ರಮಂಡಲಂ ಸಂಪೂರ್ಣರಾಗಮಾಗಿ ೧೭

ಕಾಲನೆಂದೆಂಬ ತೌಳಿಗನೊಸೆದು ದೇವೇಂದ್ರ
ನೋಲಗದೊಳಾಡುವಲ್ಲಿಟ್ಟ ರನ್ನದ ಚೆಂಡು
ಮೇಲೆ ಪೊಂಜೆಂಡು ಮೌಕ್ತಿಕದ ಚೆಂಡಾದಂತನುಕ್ರಮದೊಳಿಂದುಬಿಂಬಂ
ಸಾಲಾಗಿಯರುಣಂ ಪಿಶಂಗಮಾ ಸಿತರುಚಿಗ
ಳೋಲೈಸಿ ಪೂರ್ವಾದ್ರಿಯೆಂಬ ದೇವಗೃಹದ
ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು ೧೮

ತವೆ ಸಂಜೆಯೆಂಬ ತೆರೆದೊಲಗೆ ಮರಿದುಂಬಿಗಳ
ರವದ ಮಂಗಳಗಾನಮೆಸೆಯೆ ತಾರೆಗಳೆಂಬ
ನವಮೌಕ್ತಿಕದ ಸೇಸೆಯೊಪ್ಪೆ ಸ್ಮರಜೋಯಿಸಂ ಚಂದ್ರಂಗೆ ರಾತ್ರಿಯೆಂಬ
ಯುವತಿಯಂ ಕೈಗೂಡಿಸಲ್ ಪುರುಷದರ್ಶನೋ
ತ್ಸವದೊಳಾ ಚಂದ್ರಾಶ್ಮಮೆಂಬ ಜಘನಂ ದ್ರವಿಸ
ಲವಯವಂ ಸಾತ್ವಿಕದೆ ವೈವರ್ಣಮಾದುದೆನೆ ದಿಗ್ಧರೆ ನಭಂ ಬೆಳರ್ತುದು ೧೯

ಮಾಡಲು ಅವರ ಮೇಲೆ ಇಟ್ಟ ಒಂದು ಗುಲಗಂಜಿಯೋ, ಮೋಹಕ್ಕೆ ಒಳಗಾಗದ ಲೋಕದ ಜನರನ್ನು ಸುಡಲು ಮನ್ಮಥನೆಂಬ ಪ್ರಳಯಕಾಲರುದ್ರನು ಹೆಚ್ಚಾದ ಕೋಪದಿಂದ ತೆರೆದ ಹಣೆಗಣ್ಣೋ ಎನ್ನುವಂತೆ ಪೂರ್ವಾದ್ರಿಯ ಮೇಲೆ ಚಂದ್ರಮಂಡಲವು ಪೂರ್ಣಕೆಂಪಾಗಿ ಬೆಳಗುತ್ತಿದ್ದಿತು. ೧೮. ದೇವೇಂದ್ರನ ಆಸ್ಥಾನದಲ್ಲಿ ಕಾಲ ಎಂಬುವ ಯಕ್ಷಿಣಿಗಾರನು ತನ್ನ ಆಟವನ್ನು ತೋರಿಸುವಾಗ ಇಟ್ಟ ರತ್ನದ ಚೆಂಡು ಕ್ರಮವಾಗಿ ಚಿನ್ನದ ಚೆಂಡು ಮತ್ತು ಮುತ್ತಿನ ಚೆಂಡು ಆಗುವಂತೆ, ಅನುಕ್ರಮವಾಗಿ ಆ ಚಂದ್ರಮಂಡಲವು ಮೊದಲು ಕೆಂಪಾಗಿದ್ದು ಬಳಿಕ ಕಂದುಬಣ್ಣಕ್ಕೂ, ಅನಂತರ ಬಿಳಿಯ ಬಣ್ಣಕ್ಕೂ ತಿರುಗಿತು. ಅದು ಪೂರ್ವಾದ್ರಿಯೆಂಬ ಮೇಲಿನ ದೇವಾಲಯದ ಮೇಲೆ ಇಟ್ಟ ಮಣಿಕಳಶ, ಹೊಂಗಳಶ ಮತ್ತು ರಜತಕಳಶದಂತೆ ಮನೋಹರವಾಗಿ ಕಾಣುತ್ತಿದ್ದಿತು. ೧೯. ಸಂಜೆಯೆಂಬ ತೆರೆ ಸರಿಯಿತು. ಮರಿದುಂಬಿಗಳು ತಮ್ಮ ಝೇಂಕಾರದ ಮಂಗಳ ಗಾನವನ್ನು ಮಾಡಿದವು. ನಕ್ಷತ್ರಗಳೆಂಬ ಹೊಸ ಮುತ್ತಿನ ಮಂತ್ರಾಕ್ಷತೆಗಳು ಬೆಳಗುತ್ತಿದ್ದವು. ಮನ್ಮಥನೆಂಬ ಜೋಯಿಸನು ಚಂದ್ರನಿಗೂ, ರಾತ್ರಿಯೆಂಬ ಯುವತಿಗೂ ಪಾಣಿಗ್ರಹಣ ಮಾಡಿಸಿದನು. ತನ್ನ ಪುರುಷನ ದರ್ಶನದಿಂದಾದ ಆನಂದದಿಂದ ಆ ಯುವತಿಯ ಸೊಂಟದ ಕೆಳಭಾಗ ಬೆವರಿತು. ಆಗ ಆಕೆಯ ಅವಯವವೆಲ್ಲವೂ ಸಾತ್ವಿಕ ಗುಣದಿಂದ ವರ್ಣಗಳನ್ನು ಕಳೆದುಕೊಂಡಂತೆ ದಿಕ್ಕುಗಳು, ಭೂಮಿ, ಆಕಾಶಗಳು ಬಿಳಿಯ

CC-0. Jangamwadi Math Collection. Digitized by eGangotri

ಸುರರಿಗಲ್ಲದೆ ಸುಧೆಯನಾರ್ಗೆಯುಂ ಕೊಡದವೊಲ್
ವರದಿಂದೆ ಕಂದುಕುಂದುಗಳಾದುವೆಂದು ಶಶಿ
ಧರೆಗಮರ್ದುವಳೆಗರೆವನೋ ಸುತಸ್ನೇಹದಿಂ ಪಾಲ್ಗಡಲೆ ಪರಿತಂದುದೋ
ತರಣಿ ನಿಶಿಸಂಗಮಂ ಬಯಸಿ ವಿಧುವೇಷಮಂ
ಧರಿಸಿ ಬರಲೊಗೆದ ತಣ್ಬಸಿಲೊ ಪೇಳೆಂಬಿನಂ
ಕರಮೆಸೆದುದ್ಯೈದೆ ಚಂದ್ರಾತಪಂ ಕಾವ್ಯಕರ್ತೃವಿನ ಸತ್ಕೀರ್ತಿಯಂತೆ ೨೦

ಹಿಮಕಿರಣಶಾರದಾಹಾಸಮೋ ವಿಧುಸುರ
ದ್ರುಮಸುಪ್ರಸೂನೋಚ್ಚಲಿತಸಾಂದ್ರತರಜಮೊ
ಕುಮುದೇಶಶಿವಜಟಾಗಂಗಾಪ್ರವಾಹಮೋ ತಾರೇಶಶಾರದಾಭ್ರಂ
ಸಮನೆನಿಸಿ ಭೂತಳಕೆ ಸುರಿವ ಬೆಳ್ಸರಿಗಳೋ
ವಿಮಲೇಂದುಪೀಯೂಷವಾರ್ಧಿಫೇನಪ್ರತಾ
ನಮೊ ಪೇಳೆನಲ್ಕೆ ಚಂದ್ರಾತಪಂ ಪಸರಿಸಿದುದಾಗಳೆಲ್ಲಾ ದೆಸೆಂಗೊಳು ೨೧

ನಗನಿಕಾಯಂ ರಜತಗಿರಿಯಂತೆ ಕಂಗೊಳಿಸೆ
ಖಗಸಂಕುಲಂ ವಿಮಲಹಂಸಾಕೃತಿಯಿನೊಪ್ಪೆ
ಬಗೆಬಗೆಯ ಪುಷ್ಪರಾಜಿಗಳಮಳವಿಚಕಿಲಪ್ರಸೂನಂಗಳೆಂಬಂತಿರೆ

ಬಣ್ಣದಿಂದ ಶೋಭಿಸಿದುವು. ೨೦. ದೇವತೆಗಳಿಗಲ್ಲದೆ ಅಮೃತವನ್ನು ಬೇರೆಯವರಿಗೆ ಕೊಡದೆ ಪಕ್ಷಪಾತಮಾಡಿದ ಕಾರಣ ತನಗೆ ಕಂದು ಕುಂದುಗಳಾದುವೆಂದು ತಿಳಿದು ಚಂದ್ರನು ಭೂಮಿಗೆ ಅಮೃತದ ಮಳೆಗರೆವನೋ, ತನ್ನ ಮಗನ ಮೇಲಿನ ಪ್ರೀತಿಯಿಂದ ಕ್ಷೀರಸಾಗರವೇ ಉಕ್ಕಿ ಹರಿದುಬಂದಿತೋ ಅಥವಾ ಸೂರ್ಯನು ರಾತ್ರಿಯೆಂಬ ಯುವತಿಯ ಸಹವಾಸವನ್ನು ಬಯಸಿ ಚಂದ್ರನ ವೇಷವನ್ನು ಧರಿಸಿ ಬರಲು ಆಗ ಉಂಟಾದ ತಪಾದ ಬಿಸಿಲೋ ಹೇಳು ಎನ್ನುವಂತೆ, ಕವಿಯ ಧವಳಕೀರ್ತಿಯಂತೆ ಬೆಳುದಿಂಗಳು ಆಹ್ಲಾದಕರವಾಗಿ ಬೆಳಗುತ್ತಿದ್ದಿತು. ೨೧. ಚಂದ್ರನೆಂಬ ಸರಸ್ವತಿಯ ಮಂದಹಾಸವೋ, ಶಶಿಯೆಂಬ ಕಲ್ಪವೃಕ್ಷದಿಂದ ಚಿಮ್ಮಿದ ಕುಸುಮಗಳ ಒತ್ತಾಗಿ ಹರಡಿರುವ ಪರಾಗವೋ, ಚಂದ್ರಶೇಖರನ ಜಟೆಯಿಂದ ಹರಿವ ಗಂಗಾಪ್ರವಾಹವೋ, ನಕ್ಷತ್ರಗಳ ರಾಜನಾದ ಚಂದ್ರನೆಂಬ ಬಿಳಿಯ ಮೋಡಕ್ಕೆ ಸರಿಯೆನಿಸಿ ಭೂಮಿಯ ಮೇಲೆ ಸುರಿಯುತ್ತಿರುವ ಸ್ಫಟಿಕದಂತೆ ಶುಭ್ರವಾದ ಜಲವೃಷ್ಟಿಯೋ, ನಿಷ್ಕಳಂಕವಾದ ಚಂದ್ರನೆಂಬ ಅಮೃತದ ಕಡಲಿನಲ್ಲಿ ಕಂಡುಬರುವ ಬೆಳ್ನೊರೆಯ ರಾಶಿಯೋ ಎಂಬಂತೆ ನಿರ್ಮಲವಾದ ಬೆಳುದಿಂಗಳು ಎಲ್ಲ ಕಡೆಯೂ ಹರಡಿತು. ೨೨. ಆ ಬೆಳುದಿಂಗಳಿನ ಕಾಂತಿಯ ಪ್ರಭಾವವು ಯಾವ ಕವಿಯೂ ಹೊಗಳಲಾರದಷ್ಟು ಹಿರಿಮೆಯಿಂದ ಕೂಡಿ ರಂಜಿಸುತ್ತಿದ್ದಿತು. ಹೇಗೆಂದರೆ ಅದರ ಕಾಂತಿಗೆ ಪರ್ವತಗಳೆಲ್ಲವೂ ರಜತಗಿರಿಯಂತೆ ಕಂಗೊಳಿಸುತ್ತಿದ್ದುವು ; ಪಕ್ಷಿಗಳ ಸಮೂಹವು ಬೆಳ್ಳಗೆ ಹಂಸಗಳಂತೆ ತೋರುತ್ತಿದ್ದುವು ; ವಿವಿಧ ಪುಷ್ಪರಾಜಿಗಳು ಶ್ರೇಷ್ಠ

CC-0. Jangamwadi Math Collection. Digitized by eGangotri

ಜಗತೀದ್ವಿಪೌಘಮೈರಾವತಪ್ರಭೆಯೊಳಿರೆ
ನಗಜಾತೆ ವಾಣಿಯಂತಿರೆ ಯಮುನೆ ದೇವನಿ
ಮ್ನಗೆಯಂತೆ ರಂಜಿಸಲ್ ಪೊಗಳ್ವ ಕವಿಯಾವನಾ ಜ್ಯೋತ್ಸ್ನಾಪ್ರಭಾವತೆಯನು ೨೨

ಸರಸಿಜಭವಂ ಸಕಲಭೂಮಿಯಂ ತದ್ಗೃಹಾಂ
ತರಹರ್ಮ್ಯ ದೇವಾಲಯಂಗಳಂ ಬೆಳ್ಳಿಯಿಂ
ವಿರಚಿಸಿದನೆನೆ ಧರೆಯ ವರ್ಣಂಗಳವುಳಧವಳಾದ್ವೈತವಾದುವೆನಲು
ಪರಿಕಿಸಲ್ ಮುತ್ತು ತೀವಿರ್ದ ಪಳಿಕಿನ ದೊಡ್ಡ
ಭರಣಿಯಂತೊಪ್ಪೆ ಬ್ರಹ್ಮಾಂಡವಾ ಬಾಯ್ಗೆ ಮು
ಚ್ಚಿರಿಸಿರ್ದ ಕರ್ಪೂರದ ಹಲ್ಲೆಯಂತೆಸೆಯೆ ಶಶಿ ಚೆಲ್ವಾಯ್ತು ಚಂದ್ರಾತಪಂ ೨೩

ಹರಿಪದಾಶ್ರಯನಮೃತರಂಜಿತಂ ಕೃಷ್ಣಾಂಕ
ಸುರುಕುಮುದವರ್ಧನಂ ವಿಾಸ್ಗಳರಸಂ ನಿರಂ
ತರಮೆಯ್ದೆ ಕುವಲಯಹಿತಂ ಗೋಸಮೂಹಾವಲಂಬಿತಂ ಸುರಪೋಷಕಂ
ಒರೆಯಲೇನೆನ್ನ ಸುತನೆನ್ನಂತೆ ಪೆರ್ಮೆಯಿಂ
ಪರಿವರ್ಧಿಪಂ ಗಡಂ ನೋಳ್ಪೆನೆನುತಲಿ ಪಾಲ
ಶರಧಿ ಮೇರೆಯಮಿಾರಿ ಪರ್ಬಿತೆನೆ ಸರ್ವೋರ್ವಿಯಂ ಜ್ಯೋತ್ಸ್ನೆ ಪಸರಿಸಿದುದು ೨೪

ವಾದ ಮಲ್ಲಿಗೆಹೂವುಗಳೆಂಬಂತಿದ್ದುವು ; ಈ ಜಗದ ಆನೆಗಳು ಐರಾವತದ ಪ್ರಭೆಯಿಂದ ಬೆಳಗುತ್ತಿದ್ದುವು ; ಪಾರ್ವತೀದೇವಿಯು ಸರಸ್ವತಿಯಂತೆ ಶಾರದವರ್ಣದಿಂದ ಶೋಭಿಸಿದಳು ; ಯಮುನೆಯು ದೇವಗಂಗಾನದಿಯಂತೆ ರಂಜಿಸಿದಳು. ೨೩. ಬ್ರಹ್ಮನು ಸಕಲ ಭೂಮಂಡಲವನ್ನೂ ಅದರೊಳಗಿನ ದೇವಾಲಯಗಳು ಮತ್ತು ಸುಂದರ ಸೌಧಗಳನ್ನೂ ಬೆಳ್ಳಿಯಿಂದ ನಿರ್ಮಿಸಿದನೆನ್ನುವಂತೆ ಜಗತ್ತಿನ ವಿವಿಧ ವರ್ಣಗಳೆಲ್ಲವೂ ತಮ್ಮ ಪ್ರತ್ಯೇಕತೆಯನ್ನು ಕಳೆದುಕೊಂಡು ಒಂದೇ ಮತಗಳು ಅದ್ವೈತಮತದಲ್ಲಿ ಐಕ್ಯವಾಗುವಂತೆ ಧವಳವರ್ಣವಾದುವು ಎನ್ನುವಂತೆ, ಮತ್ತು ಬ್ರಹ್ಮಾಂಡವೇ ಒಂದು ಮುತ್ತು ತುಂಬಿದ್ದ ಸ್ಫಟಿಕದ ದೊಡ್ಡ ಭರಣಿಯಂತೆಯೂ, ಚಂದ್ರನೇ ಆ ಭರಣಿಯ ಬಾಯಿಗೆ ಮುಚ್ಚಿದ್ದ ಕರ್ಪೂರದ ಮುಚ್ಚಳದಂತೆಯೂ ಸೊಬಗನ್ನು ಹೊಂದಿ ಬೆಳುದಿಂಗಳು ಕಂಗೊಳಿಸುತ್ತಿದ್ದಿತು. ೨೪. ವಿಷ್ಣುವಿನ ಪಾದದಲ್ಲಿ ಆಶ್ರಯವುಳ್ಳವನು, ಅಮೃತಕಾಂತಿಯಿಂದ ಕೂಡಿದವನು, ಕಪ್ಪುಕಲೆಯನ್ನು ಉಳ್ಳವನು, ಶ್ರೇಷ್ಠವಾದ ಕನ್ನೈದಿಲೆಯನ್ನು ಅರಳಿಸುವವನು, ನಕ್ಷತ್ರಗಳ ರಾಜನು, ಯಾವಾಗಲೂ ಕನ್ನೈದಿಲೆಗಳ ಹಿತವನ್ನೇ ಬಯಸುವವನು, ಕಿರಣಗಳ ಸಮೂಹದಿಂದ ಕೂಡಿದವನು, ದೇವತೆಗಳನ್ನು ಕಾಪಾಡುವವನು, ಹೆಚ್ಚು ಹೇಳುವುದೇನಿದೆ ? ನನ್ನ ಮಗನು ನನ್ನಂತೆಯೇ ಹಿರಿಮೆಯಿಂದ ವೃದ್ಧಿ ಹೊಂದುತ್ತಾನಲ್ಲವೆ ! ಅದನ್ನು ನಾನು ನೋಡುತ್ತೇನೆ ಎಂದು ಹೇಳುತ್ತಾ ಕ್ಷೀರಸಾಗರವು ಮೇರೆಯನ್ನು ಮೀರಿ ವ್ಯಾಪಿಸಿತೋ ಎನ್ನುವಂತೆ ಭೂಮಿಯಲ್ಲೆಲ್ಲ ಬೆಳುದಿಂಗಳು

CC-0. Jangamwadi Math Collection. Digitized by eGangotri

ಸಸಿಬಟ್ಟುಗಾಗಜದೊಳತನು ಕತ್ತುರಿಮಸಿಯೊ
ಳೊಸೆದು ಬರೆದಿರ್ದ ಮೋಹಾಗಮೋಂಕಾರವೋ
ದೆಸೆಗೆಟ್ಟು ತಮವೋಡಿ ಭೀತಿಯಿಂ ಸಸಿವಸುರ ಬಹೆನೆಂದು ಪೊಡೆವೊಕ್ಕುದೋ
ಎಸೆವಿಂದುವೆಂಬಮೃತಕುಂಭಮಂ ವಜ್ರ ಲೋ
ಭಿಸಿ ಕುರುಪಿಗಿಟ್ಟರಗಿನೊಂದುಮುದ್ರೆಯೊಯೆನಲ್
ಪೊಸತಾಯ್ತು ವಿಧುಬಿಂಬ ಮಧ್ಯದಂಕಂ ಪಳಿಕುವಸೆಯಿರ್ದ ಕಾಳಿಯುಂತೆ ೨೫

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದ ೨೬

## ಒಂಬತ್ತನೆಯ ಸಂಧಿ ಸಂಪೂರ್ಣ

ಹರಡಿತು. ೨೫, ಚಂದ್ರನೆಂಬ ಗುಂಡಾದ ಕಾಗದದ ಮೇಲೆ ಮನ್ಮಥ ಕಸ್ತೂರಿಯ ಮಸಿಯಿಂದ ಬರೆದಿದ್ದ ಮೋಹಾಗಮದ ಓಂಕಾರವೋ, ಚಂದ್ರನಿಗೆ ಹೆದರಿ ಕತ್ತಲೆಯು ದಿಕ್ಕುಗೆಟ್ಟು ಓಡುತ್ತ ಚಂದ್ರನ ಹೊಟ್ಟೆಯಲ್ಲಿಯೇ ಹುಟ್ಟುವುದಾಗಿ ಯೋಚಿಸಿ ಅವನ ಗರ್ಭವನ್ನು ಪ್ರವೇಶಿಸಿತೋ, ಹೊಳೆಯುತ್ತಿರುವ ಚಂದ್ರನೆಂಬ ಅಮೃತಕಲಶಕ್ಕೆ ಆಸೆ ಪಟ್ಟು ಇಂದ್ರನು ಅದರ ಗುರುತು ಹಚ್ಚಲು ಆ ಕಲಶದ ಬಾಯಿಗೆ ಇಟ್ಟ ಅರಗಿನ ಮುದ್ರೆಯೋ ಎಂಬ ರೀತಿಯಲ್ಲಿ ಚಂದ್ರಬಿಂಬದ ಮಧ್ಯದ ಕಪ್ಪುಕಲೆಯು ಸ್ಫಟಿಕದ ಹಸೆಯ ಮೇಲಿದ್ದ ಕಾಳಿಯಂತೆ ಹೊಸರೀತಿಯಲ್ಲಿ ಶೋಭಿಸಿತು. ೨೬. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖವನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಖ್ಯವನ್ನೂ ಕೊಟ್ಟು ಕಾಪಾಡುವನು.

## ಒಂಬತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹತ್ತನೆಯ ಸಂಧಿ

ಸೂಚನೆ : ಲೀಲೆಯಿಂ ಚಂದ್ರೋದಯಂಗಂಡು ಬಿಜ್ಜಳನೃ
ಪಾಳಕಂ ಸಖರಸಮ್ಮೇಳದಿಂದೈತರುತೆ
ಸೂಳೆಗೇರಿಯೊಳೆಸೆವ ಚಿತ್ರಂಗಳಂ ನೋಡಿ ತಿರುಗಿದಂ ನಿಜನಿಳಯಕೆ

ಭೂತಪತಿನತಪಾರಿಜಾತಪರಿವೃತಗಣ
ವ್ರಾತವಂದಿತಕಮಲಜಾತ ನಿಗಮವ್ರಜಾ
ತೀತ ಗುಹಕರಿವದನತಾತ ದುರಿತಾಭ್ರಘವಾತ ಲೀಲಾಸಮೇತ
ಶೀತಕರಖರಕಿರಣಜಾತ ವೇದಾಕ್ಷಾಂಗ
ಜಾತಮದನಮರ್ದನ ವಿನೀತನಿಜಭಕ್ತಸಂ
ಘಾತಮಂ ರಕ್ಷಿಪುದಜಾತರಿಪುಸಂಪ್ರೀತ ಪಂಪಾಪುರೀವಲ್ಲಭ ೧

ಇಂತು ಕಣ್ಗೆಸೆವ ಚಂದ್ರೋದಯವ ಕಂಡು ಭೂ
ಕಾಂತ ಬಿಜ್ಜಳನೃಪಾಲಂ ಪುರವಿಹಾರಚಿ
ತ್ತಂ ತನಗೆ ಪುಟ್ಟಲರಮನೆಯನೊಲವಿಂ ಪೊರಡೆ ನಾಗರಿಕವಿಟರಿರ್ವರು
ಚಿಂತೆಯ್ದೆ ಪೀಠವರ್ಧನವಿದೂಷಕರೊಡನೆ
ಸಂತೋಷದಿಂ ಪಣ್ಯವೀಥಿಗೈತರಲಾಗ
ಮಿಂತೆ ಪೂವಿನ·ಸಂತೆ ಕಾಣಿಸಿದುದಪ್ರತಿಮಕಂತುಶರಜಾಲದಂತೆ ೨

ಸೂಚನೆ : ಬಿಜ್ಜಳರಾಜನು ಸಂತೋಷದಿಂದ ಚಂದ್ರೋದಯವನ್ನು ನೋಡಿ, ಸ್ನೇಹಿತರ ಕೂಡೆ ಬರುತ್ತ ಸೂಳೆಗೇರಿಯಲ್ಲಿ ನಡೆಯುವ ಚಿತ್ರವಿಚಿತ್ರಗಳನ್ನು ನೋಡಿ ತನ್ನ ಅರಮನೆಗೆ ಹಿಂದಿರುಗಿದನು. ೧. ಭೂತಗಳ ಒಡೆಯ, ಪಾರಿಜಾತಪುಷ್ಪಗಳಿಂದ ಪೂಜಿಸಿಕೊಳ್ಳುವವನು, ಶಿವಗಣಗಳಿಂದ ಸುತ್ತುವರಿಯಲ್ಪಟ್ಟವನು, ಬ್ರಹ್ಮನಿಂದ ನಮಸ್ಕಾರ ಮಾಡಿಸಿಕೊಳ್ಳುವವನು, ವೇದಗಳಿಗೆ ಅತೀತನಾದವನು, ಷಣ್ಮುಖ ಮತ್ತು ವಿಘ್ನೇಶ್ವರರ ತಂದೆ, ಪಾಪಗಳೆಂಬ ಮೋಡಗಳಿಗೆ ಬಿರುಗಾಳಿಯಂಥವನು. ಲೀಲೆಯಿಂದ ಕೂಡಿದವನು. ಚಂದ್ರಸೂರ್ಯಾಗ್ನಿಗಳನ್ನು ನೇತ್ರವಾಗುಳ್ಳವನು—ತ್ರಿನೇತ್ರ, ಮನ್ಮಥನ ಗರ್ವಭಂಗ ಮಾಡಿದವನು. ವೈರಿಗಳೇ ಇಲ್ಲದವನು ಮತ್ತು ಅತಿಶಯವಾದ ಪ್ರೀತಿಯಿಂದ ಕೂಡಿದ ಪಂಪಾಪುರದ ಒಡೆಯನೇ ವಿನೀತರಾದ ನಿನ್ನ ಭಕ್ತಸಮೂಹವನ್ನು ಕಾಪಾಡು. ೨. ಈ ರೀತಿಯಾಗಿ ಸೊಗಸುವ ಚಂದ್ರೋದಯವನ್ನು ನೋಡಿ ಬಿಜ್ಜಳರಾಜನು ಆ ಸಮಯದಲ್ಲಿ ತನಗೆ ಪಟ್ಟಣದಲ್ಲಿ ವಿಹರಿಸಬೇಕೆಂಬ ಮನಸ್ಸುಂಟಾಗಲು, ಅರಮನೆಯನ್ನು ಬಿಟ್ಟು ಸಂತೋಷದಿಂದ ಹೊರಟನು. ಅವನೊಡನೆ ನಾಗರಿಕ, ವಿಟ, ನರ್ಮಸಚಿವ, ವಿದೂಷಕರೂ ಹೊರಟರು. ಅವರೆಲ್ಲರೂ ಸಂತೋಷದಿಂದ ಸೂಳೆಗೇರಿಗೆ

CC-0. Jangamwadi Math Collection. Digitized by eGangotri

ಕೇತಕಿಯ ವಾಸನೆಯಿದಿದಱ ಮಲ್ಲಿಗೆಗಂಪು
ಜಾತಿಗಳ ಗಂಧವಿದು ಸಂಪಗೆಯ ಸೌರಭವಿದು
ಈ ತೆಱಂ ಪಾದರಿಯ ಪರಿಮಳಮಿದಿಂಗಡಲಿಯ ಕಂಪೆನಲಾದಲೆಯದಿದು
ಪ್ರೀತಿಯಿಂ ಮಾಲೆಗಾರ್ತಿಯರುಸುರುತಿರ್ಪ ಸವಿ
ಮಾತೆನಲ್ ಮಧುಪರವಮೊಡಗೂಡಿ ಕಂಪುಗಳ
ಜಾತಿಯಂ ಬೇರೆಬೇರ್ಪಡಿಸುತೆ ಸುಳಿಗಾಳಿ ಪೂವನಗಳೊಳ್ ಸುಳಿದುದು ೩

ಕುಮುದವಕ್ಷಿಗಳೊಳಾ ಚಂಪಕಂ ನಾಸದೊಳ್
ಹಿಮಘೃಣಿ ಹಾಸದೊಳ್ ಬಂಧೂಕವಧರದೊಳ್
ಕಮಲವಾಸ್ಯಂಗಳೊಳ್ ಕುಂದಮಾದಂತದೊಳ್ ಕೇತಕಿಯುಗುರ್ಗಳೊಳಗೆ
ಕ್ರಮದಿಂದೆ ಮುಚ್ಚಿರಿಸಲಿನಿತುಮಂ ಗೆಲ್ದು ಸಾ
ಲಮರೆ ಪೊಡೆಗುಡಿಗಟ್ಟಿ ಮೆಱೆದಪರೆಂಬಿನಂ
ತಮತಮಗೆ ಮಾಲೆಹೂಗಳನೆತ್ತಿದಬಲೆಯರ್ ಕಣ್ಗೆಸೆದರೇವೇಳ್ವೆನು ೪

ಇನಿತು ಸೊಬಗಂ ಪಡೆದ ಪೂಸಂತೆಯಿಂ ಮುಂದೆ
ನೆನೆವವರ ಚಿತ್ತಮೆಲ್ಲಂ ಪರಿಮಳಂ ಸುಟೋ
ಜನದ ನೋಟದ ಪೊಳೆಪದೆಲ್ಲಮುಂ ಪರಿಮಳಂ ಸವಿಮಾತು ಸಲೆ ಪರಿಮಳಂ

ಬಂದರು. ಆಗ ಅವರ ಮುಂದೆ ಅಲ್ಲಿ ಸೇರಿದ್ದ ಹೂವಿನ ಸಂದಣಿಯು ಅಸಮಾನವಾದ ಮನ್ಮಥನ ಬಾಣಗಳ ಸಮೂಹದಂತೆ ಕಾಣುತ್ತಿತ್ತು. ೩. ಇದು ಕೇದಗೆಯ ಕಂಪು. ಇದು ಮಲ್ಲಿಗೆಯ ಪರಿಮಳ. ಇದು ಜಾಜಿಹೂಗಳ ಸುವಾಸನೆ. ಇದು ಸಂಪಿಗೆಯ ಸುಗಂಧ. ಪಾದರೀಹೂವಿನ ಪರಿಮಳ ಈ ರೀತಿಯದು. ಇದು ಮೊಲ್ಲೆಯ ಸೌರಭ ಎಂದು ಅಲ್ಲಿನ ಹೂವಾಡಗಿತ್ತಿಯರು ಹೇಳುತ್ತಿರುವ ಸವಿಮಾತುಗಳೋ ಎಂಬಂತೆ ದುಂಬಿ ಮಧುರವಾದ ಧ್ವನಿಯೊಡನೆ ಸುಳಿಗಾಳಿಯು ಆ ಹೂವಿನಸರಗಳ ಮೇಲೆ ಬೀಸುತ್ತ ಒಂದೊಂದು ಜಾತಿಯ ಹೂವಿನ ಕಂಪನ್ನೂ ಬೇರೆಬೇರೆಯಾಗಿ ತಿಳಿಯುವಂತೆ ಮಾಡುತ್ತಿದ್ದಿತು. ೪. ಅವರ ಕಣ್ಣುಗಳು ನೈದಿಲೆಯಂತೆ ಕಾಣುತ್ತಿತ್ತು. ಮೂಗು ಸಂಪಿಗೆಯಂತೆ ಕಾಣುತ್ತಿತ್ತು. ಅವರ ನಗು ಬೆಳುದಿಂಗಳಿನಂತೆ ಇತ್ತು. ಅವರ ತುಟಿಗಳು ಕೆಂಪು ದಾಸವಾಳದಂತೆ ಇತ್ತು. ಮುಖಗಳು ಕಮಲದಂತೆ ಇದ್ದುವು. ಕುಂದಮಲ್ಲಿಗೆಯಂತೆ ಹಲ್ಲುಗಳಿದ್ದುವು. ಕೇದಿಗೆಯಂತೆ ಉಗುರುಗಳು ಇದ್ದುವು. ಅನುಕ್ರಮವಾಗಿ ಈ ಹೂಗಳೆಲ್ಲವು ಇವರನ್ನು ನೋಡಿ ಅಸೂಯೆಪಡುತ್ತವೆಯೆಂದು ಅವನ್ನು ಸೋಲಿಸಿ ಮೆರೆಯುತ್ತಾರೋ ಎಂಬಂತೆ ಸಾಲುಸಾಲಾಗಿ ಒತ್ತೊತ್ತಾಗಿ ಹೂಗಳ ಮಾಲೆಯನ್ನು ಎತ್ತಿಹಿಡಿದು ಮಾರುತ್ತಿದ್ದ ಹೆಂಗಸರು ಕಣ್ಣಿಗೆ ಕಂಡರು. ಅದನ್ನು ಏನೆಂದು ಹೇಳಲಿ. ೫. ಈ ರೀತಿಯ ಸೊಬಗನ್ನು ಪಡೆದ ಹೂವಿನ ಸಂತೆಯಿಂದ ಅಲ್ಲಿ ನೆನಪುಮಾಡಿಕೊಳ್ಳುವವರ ಮನಸ್ಸೆಲ್ಲ ಪರಿಮಳದಿಂದ ಕೂಡಿತ್ತು. ಅವರ ಅಂದವಾದ ಕಣ್ಣಿನ ನೋಟದ ಹೊಳಪೆಲ್ಲ

CC-0. Jangamwadi Math Collection. Digitized by eGangotri

ತನುಗಳೆಲ್ಲಂ ಪರಿಮಳಂ ನಭಂ ಪರಿಮಳಂ
ತನತನಗೆ ದಿಗ್ಧರೆಗಳೆಲ್ಲಮುಂ ಪರಿಮಳದ
ಪೊನಲೆನಿಪ ಪರಿಮಳದ ಪಸರಮಾ ಘಟ್ಟಿವಳ್ತಿಯರ ಚೆಲ್ವಿಂ ಮೆರೆದುದು ೫

ಪಿಡಿದ ಕತ್ತುರಿಯೊಪ್ಪೆ ಕುಂಕುಮದೊಲಿರೆ ನಕ್ಕ
ರೊಡನೆ ಕಪ್ಪುರವಾಗೆ ಕಾಯಸನ್ನಿಧಿಯಿಂದ
ಲಡಿಗಡಿಗೆ ಹರಿಚಂದನಾಕೃತಿವೊಲಿರೆ ನೋಡಲೊಡನೆ ಮಲಯಜದಂತಿರೆ
ಕೊಡುವೊಂದು ವಸ್ತುವಂ ನಾನಾಪ್ರಕಾರದಿಂ
ನುಡಿದು ಮಾರುವ ಕಂಪುಗಾರ್ತಿಯರು ತಾವೆ ತ
ಮ್ಮೊಳಲೊಳಿರ್ಪನ್ನತಮಂ ಕನ್ನಡಿಸುವಂತೆಸೆದರೇನೆಂಬೆನಚ್ಚರಿಯನು ೬

ತರುಣಿಯರ ಪೂಮುಡಿಯ ಕಂಪಿಂದೆ ಸೌರಭ್ಯ
ಧರನಾಗಿ ಕುಚದ ಕುಂಕುಮದ ಕೆಸರೊಳ್ ಬಿದ್ದು
ಮರಳಿ ಬರಲಾರದತಿಮಾಂದ್ಯಯುತನಾಗಿ ಸುರತಸೌಖ್ಯದೊಳೆ ತಣಿವ
ವರಮತ್ತಕಾಶಿನಿಯರುಸಿರ ತಂಪಂ ಧರಿಸಿ
ಪರಮಶೀತಳಯುಕ್ತನಾಗಿ ವೇಶ್ಯಾಲಯಾಂ
ತರದ ಸೌಭಾಗ್ಯಮಂ ತೋರುತಂ ಮಾರುತಂ ಸುಳಿದನತಿರಮ್ಯಮಾಗಿ ೭

ಪರಿಮಳ. ಅವರಾಡುವ ಸವಿಮಾತುಗಳು ವಿಶೇಷವಾಗಿ ಪರಿಮಳವಾಗಿತ್ತು. ಅವರ ದೇಹಗಳು ಸುಗಂಧಯುಕ್ತ. ಆಕಾಶ ದಿಗಂತಗಳು ಭೂಮಿಗಳೆಲ್ಲ ಸುವಾಸನೆಯ ಹೊನಲು ಎನ್ನಿಸುವ ಈ ರೀತಿಯಾಗಿ ಪರಿಮಳದ ಪ್ರಸಾರವು ಅಲ್ಲಿದ್ದ ಸುಗಂಧದ್ರವ್ಯವನ್ನು ಅಣಿಮಾಡುವ ಸ್ತ್ರೀಯರ ಸೌಂದರ್ಯದಿಂದ ಮೆರೆಯುತ್ತಿದ್ದಿತು. ೬. ಅವರ ಕೈಯಲ್ಲಿದ್ದ ಕಸ್ತೂರಿ ಒಪ್ಪೆ ಕುಂಕುಮದಂತೆ ಕಾಣುತ್ತಿತ್ತು. ಅವರು ನಕ್ಕ ಕೂಡಲೆ ಅದು ಕರ್ಪೂರದಂತೆ ಬೆಳ್ಳಗೆ ಕಾಣುತ್ತಿತ್ತು, ಅದನ್ನು ಅವರು ತಮ್ಮ ದೇಹದ ಬಳಿ ಇಟ್ಟುಕೊಂಡಾಗ ದೇಹದ ಕಾಂತಿಯಿಂದ ಅದು ಕೂಡಲೇ ಹರಿಚಂದನದಂತೆ ಕಾಣುತ್ತಿತ್ತು. ಹಾಗೆ ನೋಡುತ್ತಿರುವಂತೆಯೇ ಅದು ಅವರ ಕಣ್ನೋಟದ ಪ್ರಭೆಯಿಂದ ಶ್ರೀಗಂಧದಂತೆ ಕಾಣುತ್ತಿತ್ತು. ಈ ರೀತಿಯಾಗಿ ಅವರು ದೂರುವ ವಸ್ತುವು ಒಂದೇ ಆಗಿದ್ದರೂ ಅದನ್ನು ನಾನಾರೀತಿಯಾಗಿ ವರ್ಣಿಸಿ ದೂರುತ್ತಿದ್ದ ಘಟ್ಟಿವಳ್ತಿಯರು ತಾವೇ ತಮ್ಮಲ್ಲಿರುವ ಸುಳ್ಳನ್ನೇ ಪ್ರತಿಬಿಂಬಿಸುವಂತೆ ಕಾಣುತ್ತಿದ್ದರು. ೭. ಆ ಬೀದಿಯಲ್ಲಿದ್ದ ತರುಣಿಯರು ಮುಡಿದ ಹೂವಿನ ವಾಸನೆಯ ಕಂಪನ್ನು ಹೊತ್ತುಕೊಂಡು,ಆ ತರುಣಿಯರ ಕುಚಗಳ ಕುಂಕುಮದ ಕೆಸರಿನಲ್ಲಿ ಬಿದ್ದು ಹಿಂದಕ್ಕೆ ಬರಲಾರದೆ ನಿಧಾನವಾಗಿ, ಸಂಭೋಗ ಸುಖದಿಂದ ತೃಪ್ತರಾದ ಹೆಂಗಸರ ಉಸಿರಿನ ತಂಪನ್ನು ಪಡೆದುಕೊಂಡು, ಅತಿಶೀತದಿಂದ ಕೂಡಿ, ಮಂದಮಾರುತ ಸೂಳೆಯರ ಕೇರಿಯ ನಡುವಣ ಸೌಭಾಗ್ಯವನ್ನು ತೋರಿಸುತ್ತ

CC-0. Jangamwadi Math Collection. Digitized by eGangotri

ಮನಸಿಜನ ಶಸ್ತ್ರಾಸ್ತ್ರಶಾಲೆಯೋ ಕಾವದೇ
ವನ ಪಟ್ಟದಾನೆಗಳ ಸೆಜ್ಜರವೊ ಕಂತುವಿನ
ಮನವಮೆಚ್ಚಿನಮಳ ನವನಿಧಿಯ ಭಂಡಾರವೋ ಸ್ಮರಸುಕೃತಫಲಿತವನವೋ
ಘನಮೋಹನದ ಜನ್ಮಭೂಮಿಯೋ ಜಾಣ್ಮೆಗಳ
ಮನೆಯೊ ಸುಖದಾಗರವೊ ಸೊಬಗಿನಾಡುಂಬೊಲವೊ
ಯೆನಲೆಸೆದುದಾ ಸೂಳೆಗೇರಿಯತಿಶೃಂಗಾರಿ ಸ್ಮರರಾಜಧಾನಿಯಂತೆ ೮

ಹುಸಿಯ ಹಸರಂ ಹುರುಡಿನಾಲಯಂ ಮಾಯೆಗಳ
ವಸತಿಯಾಸೆಯ ತಾಣಮಳುಪಿನಂಗಡಿ ಪಂಥ
ಮೆಸೆವ ಗೇಹಂ ತೋಟಿಯಾಟದೆಡೆ ನೆವದ ನೆಲೆವೀಡು ಕುಹಕದ ಕೊಟಾರಂ
ಪೊಸಬಗೆಯ ಚದುರ ಚಾವಡಿ ಮೋಸದಾವಾಸ
ಮುಸದಳದ ಬಲ್ಮೆಯರಮನೆ ತಪ್ಪುಗಳ ತವ
ರ್ಗೆಸೆಯೆನಿಪ ವೇಶ್ಯಾಶ್ರಯಂ ಮನೋವಿಸ್ಮಯಂ ಸ್ಮರಪ್ರಿಯಂ ಚೆಲ್ವಾದುದು ೯

ಸುರಪನೀಲಂಗಳಿಂ ಸವೆದ ನೆಲಗಟ್ಟುಗಳ್
ತರತರದೊಳೆಸೆವ ಪಳಿಕಿನ ಗೋಡೆ ಪಚ್ಚೆಯಿಂ
ವಿರಚಿಸಿದ ತೊಲೆ ಮಹಾವೈಡೂರ್ಯದಮಳರತ್ನಗಳ ಕಂಭಗಳ ಪವಳ

ರಮ್ಯವಾಗಿ ಬೀಸಿತು. ೮. ಅತಿಚೆಲುವಾಗಿ ಸಿಂಗರಿಸಿದ್ದ ಆ ಸೂಳೆಗೇರಿಯು ಮನ್ಮಥನ ಶಸ್ತ್ರಾಸ್ತ್ರಗಳ ಶಾಲೆಯಂತೆ, ಶಯ್ಯಾಗೃಹದಂತೆ, ಮದನನ ಮನಮೆಚ್ಚಿದ ಶ್ರೇಷ್ಠ ನವ ನಿಧಿಗಳನ್ನು ತುಂಬಿದ ಬೊಕ್ಕಸದಂತೆ, ಸ್ಮರನ ಪುಣ್ಯವೆಂಬ ಪಕ್ವವಾದ ಫಲಬಿಟ್ಟ ಉಪವನದಂತೆ, ಮೋಹನದ ಜನ್ಮಸ್ಥಳದಂತೆ, ಚಾತುರ್ಯದ ಮನೆಯಂತೆ, ಸುಖದ ಆವಾಸದಂತೆ, ಸೊಬಗಿನ ವಿಹಾರಸ್ಥಳದಂತೆ, ಮನ್ಮಥರಾಜನ ರಾಜಧಾನಿಯಂತೆ ಮನೋಹರವಾಗಿತ್ತು. ೯. ಆ ವೇಶ್ಯಾವಾಟಿಯು ಸುಳ್ಳಿನಂಗಡಿ, ಮತ್ಸರದ ಮನೆ, ಮೋಸ, ಕಪಟಗಳ ವಾಸಸ್ಥಾನ, ಆಸೆಯ ಆಶ್ರಯ, ಅತಿಯಾಸೆಯ ಅಂಗಡಿ, ಸ್ಪರ್ಧೆಗಳು ನಡೆಯುವ ಮಂದಿರ, ಜಗಳದ ಕೇಂದ್ರಸ್ಥಳ, ನೆಪಗಳ ನೆಲೆ, ಕುಹಕದ ಕಣಜ, ಹೊಸ ರೀತಿಯ ಚತುರತೆಯ ಚಾವಡಿ, ಮೋಸಗಳ ಮೂಲಸ್ಥಾನ, ಅಸಾಧ್ಯವಾದ ಸಾಮರ್ಥ್ಯಗಳ ಅರಮನೆಯಾಗಿದ್ದಿತು. ತಪ್ಪುಗಳ ಸರಮಾಲೆಯ ತವರುಮನೆ. ಇಂಥ ವಿಸ್ಮಯಕರವೂ, ಮನ್ಮಥಪ್ರಿಯವೂ ಆದ ಸೂಳೆಗೇರಿಯು ಮನೋಹರವಾಗಿತ್ತು. ೧೦. ಆ ಗಣಿಕೆಯರ ಮನೆಗಳಲ್ಲಿ ಇಂದ್ರನೀಲಮಣಿಗಳಿಂದ ಸಮಗೊಳಿಸಿದ ನೆಲ, ನಾನಾ ರೀತಿಯ ಸ್ಫಟಿಕದ ಗೋಡೆ, ಪಚ್ಚೆಯ ತೊಲೆಗಳು, ಮಹಾ ವೈಡೂರ್ಯದ ಅಮೂಲ್ಯ

---

ಅಡಿಟಿ : ನವನಿಧಿ = ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ನಂದ, ನೀಲ ಮತ್ತು ಖರ್ವಗಳೆಂಬ ಕುಬೇರನ ಒಂಬತ್ತು ಐಶ್ವರ್ಯಗಳು.

CC-0. Jangamwadi Math Collection. Digitized by eGangotri

ಪರಿವಿಡಿಯ ಜಂತೆ ಗೋಮೇದಕದ ಬೋದುಗೆಗ
ಳುರುವಜ್ರಮಯವಾದ ಬಲ್ಲದಂ ಚೆನ್ನದು
ಪ್ಪರಿಗೆಗಳೊಳೆಸೆವ ಮನೆಮನೆಗಳಿಂ ಗಣಿಕಾಂಗನಾವೀಥಿ ಕಣ್ಗೆಸೆದುದು ೧೦

ಚರಿಪ ಚೇಟಿಯ ಚರಣನೂಪುರಧ್ವನಿ ಕುಸುಮ
ಶರಶಾಸ್ತ್ರಪಠಿತಶುಕವಾಚಾಸ್ವರಂ ಗೃಹಾಂ
ತರಹರ್ಮ್ಯಬದ್ಧಸೌಭಾಗ್ಯಘಂಟಾರುತಂ ಪಾಲಿತಕಪೋತಂಗಳ
ಸುರುಚಿರಸ್ವನಮೊತ್ತೆಗೊಳ್ವ ಸರಿವಿುಂಡಿಯರ
ಕರದ ಕಂಕಣರವಂ ಬಗೆಗೊಳಿಸಲಿದು ಸ್ಮರೋ
ದ್ಧರಶಿಬಿರಘೋಷಮೆನಲೆಸೆದು ವೇಶ್ಯಾಶ್ರಯಂ ಕಣ್ಗೆ ಕಾಣಿಸುತಿರ್ದುದು ೧೧

ಮನಸಿಜನೃಪಂಗೆ ಬೀಸುವ ಚಾಮರಂಗಳೆನೆ
ವನಜಾಸ್ತ್ರಭೂಪಗೆತ್ತಿದ ಹೊನ್ನಸತ್ತಿಗೆಗ
ಳೆನೆ ಕಾಮರಾಯನೀಕ್ಷಿಸೆ ಪಿಡಿದ ಮುಕುರಮೆನೆ ಥಳಥಳಿಪ ನಗೆಗಣ್ಗಳ
ಘನಕುಚಂಗಳ ಸಸಿಮೊಗಂಗಳಿಂ ದೇಸಿವಡೆ
ದನುಪಮಿತ ವೇಶ್ಯಾಜನಂ ಕಾಮನಿಧಿಗಿಟ್ಟ
ವಿನುತಾಂಜನಂ ಮೋಹಿಜನರಂಜನಂ ಗತನಿರಂಜನಂ ಚೆಲ್ವಾದುದು ೧೨

ರತ್ನಗಳಿಂದ ಕೆತ್ತಿದ ಕಂಭಗಳು, ಕ್ರಮವಾಗಿ ಹವಳದಿಂದ ಮಾಡಿದ ಜಂತೆ, ಗೋಮೇದಕ ಬೋದಿಗೆಗಳು, ಶ್ರೇಷ್ಠವಾದ ವಜ್ರಗಳಿಂದ ಕೂಡಿದ ಸೂಳೆಗೇರಿ ಮನೋಹರವಾಗಿ ತೋರುತ್ತಿತ್ತು. ೧೧. ಆ ವೇಶ್ಯೆಯರ ಮನೆಗಳಲ್ಲಿ ಓಡಾಡುತ್ತಿರುವ ಚೇಟಿಯರ ಕಾಲಂದುಗೆಗಳ ಧ್ವನಿ, ಶಾಸ್ತ್ರವನ್ನು ಪಠಿಸುತ್ತಿರುವ ಗಿಳಿಗಳ ಮಾತನಾಡುವ ಸ್ವರ ಕೇಳಿಸುತ್ತಿತ್ತು. ಮನೆಗಳೊಳಗಿನ ಉಪ್ಪರಿಗೆಗಳ ಮೇಲೆ ಕಟ್ಟಿದ ಗಂಟೆಗಳ ಮಂಗಳನಾದ ಕೇಳುತ್ತಿತ್ತು. ಸಾಕಿದ ಪಾರಿವಾಳಗಳ ಇಂಪಾದ ಧ್ವನಿ ಕೇಳಿಬರುತ್ತಿದ್ದಿತು. ಸೂಳೆಯರಿಗೆ ತೆರುವ ಹಣವನ್ನು ತೆಗೆದುಕೊಳ್ಳುವ ಸೂಳೆಯರ ಕೈಯಿನ ಕಡಗ ಶಬ್ದಮಾಡುತ್ತಿತ್ತು. ಈ ಎಲ್ಲ ಶಬ್ದಗಳಿಂದ ಕೂಡಿದ ಸೂಳೆಯರ ಮನೆಗಳು ಮನ್ಮಥನು ಹೂಡಿರುವ ಯುದ್ಧದ ಶಿಬಿರದ ಘೋಷದಂತೆ ತೋರುತ್ತಿದ್ದಿತು. ೧೨. ಮನ್ಮಥರಾಜನಿಗೆ ಬೀಸುವ ಚಾಮರಗಳಂತೆ ಥಳಥಳ ಹೊಳೆಯುವ ಅವರ ನಗೆಗಣ್ಣುಗಳು ಪುಷ್ಪಬಾಣನಿಗೆ ಎತ್ತಿದ ಬಂಗಾರದ ಕೊಡೆಗಳಂತೆ, ಅವರ ತೋರಮೊಲೆಗಳು ಕಾಮರಾಜನು ನೋಡಿಕೊಳ್ಳಲು ಹಿಡಿದ ಕನ್ನಡಿಯಂತೆ, ಅವರ ಚಂದ್ರನಂತೆ ಕಾಂತಿಯಿಂದಿದ್ದ ಮುಖಗಳು. ಈ ರೀತಿ ಹೋಲಿಕೆಗೆ ಮಿಗಿಲಾದ ಸೊಬಗನ್ನು ಪಡೆದ ಸೂಳೆಯರು ಮನ್ಮಥನ ಭಂಡಾರಕ್ಕಿಟ್ಟ ಅಂಜನದಂತೆ ಇದ್ದರು; ಮೋಹಿಸುವ ಜನಗಳಿಗೆ ರಂಜನೆಯನ್ನು ಉಂಟುಮಾಡುತ್ತಿದ್ದರು, ಕಪಟ

10

CC-0. Jangamwadi Math Collection. Digitized by eGangotri

ಅರಳಂಬುಗಳ್ ಕಬ್ಬುವಿಲ್ಲುಮಿವು ನಾಡೆ ನಿ
ಬ್ಬರಮುಮರರಂ ಜಯಿಸಲೆಂದವಂ ಬಿಟ್ಟು ಶಂ
ಬರಮಥನನಾಂದೋಳಚಾಪದಿಂ ಸುವತಿಯೆಂಬೊಂದು ಬಾಣವನೆ ಪೂಡಿ
ಸುರಪಲೋಕಕ್ಕೆ ಪಾರಿಸುವನೋ ಪೇಳೆನಲ್
ತರುಣಿಯೊರ್ವಳನುಯ್ಯಲೇರಿಸಿ ವಿಟಂ ಮನೋ
ಹರುಷದಿಂ ತೂಗುತಿರ್ದಂ ಕನಕಲತೆಯನಾ ಮರುತನುರೆ ತೂಗುವಂತೆ ೧೩

ಚರಣಂಗಳುರೆ ಸೋಂಕೆ ಮುಗಿಲಸುಗೆಗಂ ತಳಿರ್
ಕರಮೇರೆ ಪಾಡುವತಿಜಾಣ್ಮೆಗೇಳ್ದಲರ್ಗಳಂ
ಸುರಪಪುನ್ನಾಗವೃಕ್ಷಂ ಪೇರೆ ಶಶಿತಿಲಕಮವಳ ನೇತ್ರಾಂಶುವಿಂದೆ
ಪೊರೆಯೇರೆಯಾ ಸುಛಾಯಾಲಿಂಗನಂ ನಭೋಂ
ತರ ಕುರವಕಕೆ ಸೊಂಪು ಬೀರೆ ವನಕೇಳಿಯುಂ
ತಿರಲುಯ್ಯಲಾಟವಾಡಿದಳೊರ್ವ ಬಾಲೆಯುಂಬರದ ಮಿಂಚಾಡುವಂತೆ ೧೪

ಪೊಳೆವ ನಖದುಡುಗಳಿಂ ಮುಡಿಯೆಂಬ ಮೇಘದಿಂ
ತೊಳಗುವ ಮುಖೇಂದುವಿಂ ನಯನತಟಿದಂಶುವಿಂ
ಕಳಗೀತಮೆಂಬ ಮೊಳಗಿಂ ಮಧ್ಯಗಗನದಿಂದೀ ನಭೋಮಂಡಲವನು

ಗಳಾದ ಆ ವೇಶ್ಯಾಜನ ಚೆಲುವಾಗಿ ಕಾಣುತ್ತಿದ್ದರು. ೧೩. ಹೂವಿನ ಬಾಣಗಳು, ಕಬ್ಬಿನ ಬಿಲ್ಲು ವಿಶೇಷ ರಭಸದಿಂದ ಚಲಿಸತಕ್ಕವು ಎಂದು ಅವನ್ನು ಬಿಟ್ಟು ದೇವತೆಗಳನ್ನು ಜಯಿಸಲು ಮನ್ಮಥನು ಉಯ್ಯಾಲೆಯೆಂಬ ಬಿಲ್ಲಿಗೆ ಸುಂದರ ಯುವತಿ ಎಂಬ ಒಂದು ಬಾಣವನ್ನು ಹೂಡಿ ದೇವಲೋಕಕ್ಕೆ ಹಾರಿಸುತ್ತಾನೋ ಎಂಬಂತೆ ಯುವತಿಯೊಬ್ಬಳನ್ನು ಉಯ್ಯಾಲೆಗೇರಿಸಿ ವಿಟನೊಬ್ಬನು ಬಹುಸಂತೋಷಗೊಂಡ ಮನವುಳ್ಳವನಾಗಿ ಬಂಗಾರದ ಬಳ್ಳಿಯನ್ನು ಗಾಳಿಯು ವಿಶೇಷವಾಗಿ ತೂಗುವಂತೆ ತೂಗುತ್ತಿದ್ದನು. ೧೪. ಒಬ್ಬ ಬಾಲೆ ಆಕಾಶದಲ್ಲಿ ಮಿಂಚುಗಳು ಆಡುವಂತೆ ಉಯ್ಯಾಲೆಯಾಟವನ್ನು ಆಡಿದಳು. ಆಗ ಅವಳ ಪಾದಗಳು ಆಕಾಶದ ಅಶೋಕವೃಕ್ಷಕ್ಕೆ ಸೋಕಲು ಆ ಮರ ಚೆನ್ನಾಗಿ ಚಿಗುರಿತು. ಅವಳು ಹಾಡುವ ಅತಿಯಾದ ಜಾಣತನವನ್ನು ಕೇಳಿ ದೇವಲೋಕದ ಪುನ್ನಾಗವೃಕ್ಷವು ಹೆಚ್ಚಾಗಿ ಹೂವನ್ನು ಬಿಟ್ಟಿತು. ಅವಳ ಕಣ್ಣ ನೋಟದಿಂದ ಚಂದ್ರತಿಲಕ ಹೆಚ್ಚು ಕಾಂತಿಯುಕ್ತವಾಯಿತು. ಅವಳ ನೆರಳಿನ ಆಲಿಂಗನದಿಂದ ಆಕಾಶ ಗೋರಂಟಿಗಿಡ ಸಂತೋಷದಿಂದ ಹಿಗ್ಗಿತು. ೧೫. ಮತ್ತೊಬ್ಬ ಕಾಂತೆಯು ಉಗುರುಗಳೆಂಬ ನಕ್ಷತ್ರಗಳಿಂದ ತುರುಬೆಂಬ ಕಾರ್ಮೋಡದಿಂದ ಹೊಳೆಯುತ್ತಿದ್ದ ಮುಖಚಂದ್ರನಿಂದ ಕಣ್ಣಿನ ಹೊಳಪೆಂಬ ಮಿಂಚಿನಿಂದ ವಿಜಯಗೀತೆಯೆಂಬ ಗುಡುಗಿನಿಂದ ಆಕಾಶದ ಮಧ್ಯದಿಂದ ಆ ಆಕಾಶ

CC-0. Jangamwadi Math Collection. Digitized by eGangotri

ಗೆಲಿವೇಳ್ಪುದೊಂದರಿಂದೊಂದನೆಂದಾಗ ಭೂ
ಲಲನೆಯಾಗಸಕೆ ನೆಗೆದಪಳೊ ಪೇಳೆಂಬಿನಂ
ನಲಿದುಯ್ಯಲಾಡಿದಳ್ ಕಾಂತೆಯೊರ್ವಳ್ ವಿಟರ ಜೀವಮುಡೆಯಾಡುವಂತೆ ೧೫

ತಿಳಿಯಲ್ ಕಳಂಕಿ ನೀಂ ಕ್ಷಯರೋಗಿ ದಿವಿಜರೆಂ
ಜಲಿಗನತಿದೋಷಾಕರಂ ನಿನ್ನನೆನ್ನ ಮಂ
ಗಳಮುಖಕೆ ಸರಿಯೆಂದು ಪೋಲಿಸುವರುಪದೆಗಳನೀಗ ಮಾಣಿಸುವೆನೆಂದು
ನಳಿನಾಕ್ಷಿಯೊರ್ವಳೀಕ್ಷಣ ರಜ್ಜುವಿಂ ವಿಧುವ
ನೆಳೆತರಿಸಿ ಕುಣಿಸಿದಪಳೋಯೆನಲ್ ಚಚ್ಚರಂ
ದಳಿದೊಳಗೆ ಮೌಕ್ತಿಕದ ಚೆಂಡನೊರ್ವಳ್ ಪೊಯ್ವುತಿರ್ದಳ್ ವಿಲಾಸದಿಂದೆ ೧೬

ಇಂದು ನಿನ್ನೆರಳೆಯೆನ್ನಕ್ಷಿಗಳ ಗಾಡಿಯಂ
ತಂದ ಕಳವಿಂಗೊಂದು ನಿನ್ನಾಲವೆನ್ನಧರ
ದಂದಮಂ ಕೊಂಡೊಯ್ದ ತಸ್ಕರಕ್ಕೆರಡಿರದೆ ನೀನೆನ್ನ ಮುಖರಸವನು
ಬಂದೊಯ್ದ ಚೋರತ್ವಕೀಗಳಿದೆ ಮೂರು ಗು
ದ್ದೆಂದು ಶಶಿಯಂ ಪಚಾರಿಸಿ ಪೊಯ್ವಳೋಯೆನ
ಲ್ಕಂದು ಲೆಕ್ಕಿಸುತೆ ಮುತ್ತಿನ ಚೆಂಡನಳ್ತಿಯಿಂ ಪೊಯ್ದಳೊರ್ವಳ್ ಮೃಗಾಕ್ಷಿ ೧೭

ಮಂಡಲವನ್ನು ಈ ಒಂದೊಂದರಿಂದಲೂ ಒಂದೊಂದನ್ನು ಗೆಲ್ಲಬೇಕೆಂದು ಭೂದೇವಿ ಆಕಾಶಕ್ಕೆ ನೆಗೆಯುತ್ತಿರುವಳೋ ಎನ್ನುವಂತೆ ಒಬ್ಬ ತರುಣಿ ನಲಿಯುತ್ತ ಉಯ್ಯಾಲೆಯಾಡಿದಳು. ಅದು ವಿಟರ ಜೀವವೇ ತೂಗಾಡುವಂತೆ ಕಾಣುತ್ತಿತ್ತು, ೧೬ 'ಯೋಚಿಸಿದರೆ ನೀನು ಕಳಂಕ ಉಳ್ಳವನು, ಕ್ಷಯರೋಗಿ, ದೇವತೆಗಳ ಎಂಜಲು, ಅತಿಯಾದ ದೋಷಗಳನ್ನುಳ್ಳವನು. ನಿನ್ನನ್ನು ನನ್ನ ಮಂಗಳಕರವಾದ ಮುಖಕ್ಕೆ ಸರಿಯೆಂದು ಹೋಲಿಸುವವರ ಉಪದೇಶಗಳನ್ನು ಈಗ ನಿಲ್ಲಿಸುತ್ತೇನೆ' ಎಂದು ಕಮಲನಯನೆಯಾದ ಚೆಲುವೆಯೊಬ್ಬಳು ತನ್ನ ಕಣ್ನೋಟವೆಂಬ ಹಗ್ಗದಿಂದ ಚಂದ್ರನನ್ನು ಎಳೆತರಿಸಿ ಕುಣಿಸುವಳೋ ಎನ್ನುವಂತೆ ತ್ವರಿತಗತಿಯಿಂದ ತನ್ನ ಮನೆಯೊಳಗೆ ಮುತ್ತಿನ ಚೆಂಡನ್ನು ವಿಲಾಸದಿಂದ ಹೊಡೆಯುತ್ತಿದ್ದಳು. ೧೭. ಚಂದ್ರನೆ, ನಿನ್ನ ಜಿಂಕೆಯು ನನ್ನ ಕಣ್ಣಿನ ಚೆಲುವನ್ನು ಕದ್ದುಕೊಂಡು ಹೋಗಿದೆ. ಇದಕ್ಕೆ ಒಂದು ಗುದ್ದು. ಆಲದಮರದಂತೆ ಕಾಣುವ (ಕಳಂಕ)ಆಲದ ಹಣ್ಣು ನನ್ನ ತುಟಿಗಳ ಅಂದವನ್ನು ಕೊಂಡುಹೋಗಿದೆ. ಈ ಎರಡನೆಯ ಕಳ್ಳತನ ಮಾಡಿದುದಕ್ಕೆ ಎರಡು ಗುದ್ದು. ನೀನು ನನ್ನ ಮುಖದ ಕಾಂತಿಯನ್ನು ಕದ್ದುಕೊಂಡು ಹೋದದ್ದು ಮೂರನೆ ಕಳ್ಳತನ, ಇದಕ್ಕೆ ಮೂರು ಗುದ್ದುಗಳು ಎಂದು ಚಂದ್ರನನ್ನು ಮೂದಲಿಸುತ್ತ ಹೊಡೆಯುತ್ತಿದ್ದಾಳೆಯೋ ಎನ್ನುವ ರೀತಿಯಲ್ಲಿ ಜಿಗರೆಯಂತೆ ಚೆಲುವಾದ ಕಣ್ಣುಳ್ಳವಳೊಬ್ಬಳು ಮುತ್ತಿನ ಚೆಂಡನ್ನು ಪ್ರೀತಿಯಿಂದ ಒಂದು, ಎರಡು,

CC-0. Jangamwadi Math Collection. Digitized by eGangotri

ಬಟ್ಟಜವ್ವನದೆಡೆಗಳೊಳ್ ವಿಟರ ದಿಟ್ಟಿಗಳ್
ನಟ್ಟಂತೆ ನಿಲೆ ದೇಹಗಂಧಕಳಿಗಳ್ ಸುತ್ತು
ಗಟ್ಟಿ ನಿಲೆ ಪಿಂದುಮುಂದೆಡಬಲದೊಳವರ್ದ ಸೇವಾಳೀಜನಂಗಳ್ ನಿಲೆ
ತೊಟ್ಟು ಪೂಗಣೆಗಳಂ ಮನಸಿಜಂ ಹೊಂಚಿ ನಿಲೆ
ಮುಟ್ಟಿ ತಮ್ಮೊಳ್ ವಿಟರ್ ಸೂಳೆಬಂಟಿಕೆಗೆ ನಿಲೆ
ಯುಟ್ಟು ತೊಟ್ಟೊರ್ವಳೊತ್ತಿಗೆ ನಿಂದಳಂಗಜನ ಪಟ್ಟದಾನೆಯು ತೆರದೊಳು ೧೮

ಸಣ್ಣ ಮುಗುಳ್ಮೊಲೆಯು ಪರಳ್ಮೊಲೆಯು ಪುಟ್ಟವ ವೊಲೆಯು
ನುಣ್ಣಿತಹ ಬದರೀಫಲದ ವೊಲೆಯು ದಿನದಿನಕೆ
ಬಣ್ಣವೇರುವ ಮೊಗದ ಸುಲಿಪಲ್ಲ ಕೆಂಪುವಾಯ್ದೆರೆಯ ಸವಿನುಡಿಯ ಬೆದರ್ದ
ಕಣ್ಣನೋಟದ ಬಾಲೆಯರ್ ವಿಟರ್ ನೋಡೆ ನಾಣ್
ದಿಣ್ಣದಿಂ ತಲೆವಾಗಿ ನುಡಿಸೆ ನುಡಿಯದೆ ಕೂಡೆ
ಚೆಣ್ಣೆವೊಲ್ ಬೆಮರಿ ಸಾರ್‌ಸಾರೆಂದು ಸಖಿಯ ಮರೆಗೊಂಬ ಬಾಲೆಯರೆಸೆದರು ೧೯

ಮೂರು ಎಂದು ಲೆಕ್ಕ ಮಾಡಿ ಹೊಡೆಯುತ್ತಿದ್ದಳು. ೧೮. ಅವಳ ತುಂಬು ಯೌವನವನ್ನು ತೋರಿಸುವ ಕುಚಸ್ಥಳಗಳಲ್ಲಿ ವಿಟರ ನೋಟಗಳು ಕೀಲಿಸಿದ್ದುವು. ಅವಳ ದೇಹದ ಸುವಾಸನೆಗೆ ದುಂಬಿಗಳು ಅವಳನ್ನು ಸುತ್ತುವರಿದಿದ್ದುವು. ಅವಳ ಹಿಂದೆ ಮುಂದೆ, ಎಡ ಬಲಗಳಲ್ಲಿ ಅನೇಕ ಸೇವಕಜನಸೇವೆಗೆ ಸಿದ್ಧವಾಗಿ ನಿಂತಿದ್ದರು. ಮನ್ಮಥನು ಹೂವಿನ ಬಾಣಗಳನ್ನು ತೊಟ್ಟು ಹೊಂಚುಹಾಕುತ್ತ ನಿಂತಿದ್ದನು, ವಿಟಪುರುಷರು ಸಮೀಪದಲ್ಲಿ ಸುತ್ತ ನಿಂತು ತಮ್ಮ ಜಾರತನವನ್ನು ವ್ಯಕ್ತಪಡಿಸುತ್ತಿದ್ದರು. ಹೀಗೆ ವಸ್ತ್ರವನ್ನು ಉಟ್ಟು ಆಭರಣಗಳನ್ನು ತೊಟ್ಟು ಒಬ್ಬಳು ಮನ್ಮಥನ ಪಟ್ಟದಾನೆಯಂತೆ ಒಂದು ಕಡೆ ನಿಂತಿದ್ದಳು. ಹೋಲಿಕೆ : ಆನೆಯ ಕುಂಭಸ್ಥಳಕ್ಕೆ ಸ್ತ್ರೀಯ ಸ್ತನವನ್ನು ಹೋಲಿಸದೆ. ಮದಿಸಿದ ಆನೆಯ ಕುಂಭಸ್ಥಳದಿಂದ ಸೋರುವ ಮದಜಲದ ಸುವಾಸನೆಗೆ ದುಂಬಿಗಳು ಮುತ್ತುತ್ತವೆ. ಅದೇ ರೀತಿ ಯುವ್ವನೆಯ ದೇಹದ ಸುವಾಸನೆಗೆ ದುಂಬಿಗಳು ಮುತ್ತಿದ್ದುವು. ಆನೆಯ ಹಿಂದೆಮುಂದೆ ಸೇವಕರಿದ್ದಂತೆ ಇಲ್ಲಿಯೂ ಇದ್ದರು. ೧೯. ಸಣ್ಣ ಮೊಗ್ಗಿನಂತೆ ಇರುವ ಮೊಲೆ, ಹರಳಿನಂತಹ ಮೊಲೆ, ಆಗತಾನೆ ಮೂಡುತ್ತಿರುವ ಮೊಲೆ, ನುಣ್ಣಗಿರುವ ಎಲಚಿಯ (ಬೋರೆ)ಹಣ್ಣಿನಂತಹ ಮೊಲೆ, ದಿನದಿನಕ್ಕೂ ಕಳೆಗೂಡುವ ಮುಖ, ನಿರ್ಮಲವಾದ ಹಲ್ಲುಗಳು, ಕೆಂಪೇರಿದ ತುಟಿಗಳು, ಸವಿನುಡಿಗಳು, ಬೆದರಿದ ನೋಟ ಇವುಗಳುಳ್ಳ ಬಾಲೆಯರು ವಿಟರು ತಮ್ಮನ್ನು ನೋಡಿದಾಗ ನಾಚಿಕೆಯ ಭಾರದಿಂದ ತಲೆಬಾಗಿ, ಮಾತನಾಡಿಸಿದರೂ ಮಾತನಾಡದೆ ಒಮ್ಮೆಲೇ ಬೆಣ್ಣೆಯಂತೆ ಬೆವರಿ ದೂರ ಸರಿ ಎಂದು ಹೇಳುತ್ತ ತಮ್ಮ ಗೆಳತಿಯರ ಮರೆಗೆ ಹೋಗಿ ನಿಲ್ಲುತ್ತಿದ್ದರು.

CC-0. Jangamwadi Math Collection. Digitized by eGangotri

ಪೊಂಗುತಿಪ ಕ್ರಮುಕಾಮಳಕ ಬಿಲ್ವ ಜಂಭ ನಾ
ರಂಗಫಲ ಕಮಲ ನವಕುಟ್ಮಳಕುಚಂಗಳ ಬೆ
ಡಂಗಿನೊಳ್ನಡೆಯ ನಿಡುಜಡೆಯ ಥಳಥಳಿಪ ಕದಪಿನ ತಳಿರ್ದುಟಿಯ ವಿಟರ
ಪಿಂಗದೀಕ್ಷಿಪ ದಿಟ್ಟಿಗಳ ಸೊಗಸುತಿಹ ನಗೆಮೊ
ಗಂಗಳ ನಯಂ ಬಿರುಸಿನೊಳ್ ಬೆರೆದ ನುಡಿಗಳ ಮ
ನಂಗೊಳಿಪ ಸಿಂಗರದ ಬೆಚ್ಚಬೇಟದ ಬಗೆಯ ಜವ್ವನೆಯರೆಸೆದಿರ್ದರು ೨೦

ಬಿಣ್ಮೊಲೆಯ ಮಿಗೆ ಬಟ್ಟಮೊಲೆಯ ತೆಂಗಾಯ್ಮೊಲೆಯ
ನುಣ್ಮೊಲೆಯ ನೆಲೆಮೊಲೆಯ ಬಲ್ಮೊಲೆಯ ಹೊಳೆಹೊಳೆವ
ಕಣ್ಮಲರ ಸನ್ನೆಗಳ ಬೆಳ್ನಗೆಯ ಬೇಟದೊಳ್ ಬೆರೆದು ತರಹರಿಪ ಮನದ
ಜಾಣ್ಮೆಗಳ ಸವಿನುಡಿಯ ಮಚ್ಚಿಮೆಚ್ಚಿಪ ಬಗೆಯ
ಪೊಣ್ಮೆ ಪೊಡಕರಿವ ಧನದಾತುರದ ವ್ಯಸಿಕದೊ
ಳುಣ್ಮುವ ಗುಣಂಗಳ ಮಹಾಪ್ರೌಢವನಿತೆಯರ್ ಕಣ್ಗೆಸೆದರಲ್ಲಿಗಲ್ಲಿ ೨೧

ಜಲಜಾಸ್ಯೆ ಪದ್ಮಗಂಧಿನಿ ಕುರಂಗಾಕ್ಷಿ ಕೋ
ಕಿಲಗಾನೆ ನೀಲಕುಂತಳೆ ಹಂಸಯಾನೆ ನವ
ತಿಲಪುಷ್ಪನಾಸಿಕೆ ಸುವೃತ್ತಕುಚೆ ಲಜ್ಜಿತೆ ಸುಗಂಭೀರಬಿಂಬಾಧರೆ

ಇಂಥ ಬಾಲಕಿಯರು ಅಲ್ಲಿದ್ದರು. ೨೦. ವಿಕಸಿಸುತ್ತಿರುವ ಅಡಕೆ, ನೆಲ್ಲಿಕಾಯಿ, ಬಿಲ್ವಪತ್ರೆ ಕಾಯಿ, ನಿಂಬೆ, ಕಿತ್ತಳೆಹಣ್ಣುಗಳಂತೆ ಅರೆಬಿರಿದ ತಾವರೆಯ ಮೊಲೆಗಳಿದ್ದುವು, ಒಯ್ಯಾರದಿಂದ ನಡೆಯುತ್ತಿದ್ದರು, ಉದ್ದವಾದ ಜಡೆಗಳಿದ್ದವು, ಅವರ ಕೆನ್ನೆಗಳು ಹೊಳೆಯುತ್ತಿದ್ದುವು, ತುಟಿಗಳು ಚಿಗುರಿನಂತಿದ್ದುವು, ಹಿಂಜರಿಯದೆ ವಿಟರನ್ನು ನೋಡುವ ನೋಟ, ನಗುವ ಮುಖಗಳ ಸೊಗಸು, ನಯ ಮತ್ತು ಒರಟುತನದಿಂದ ಕೂಡಿದ ಮಾತುಗಳು, ಮನಸ್ಸಿಗೆ ಆನಂದವನ್ನುಂಟುಮಾಡುವಂತೆ ಅಲಂಕರಿಸಿಕೊಂಡ ರೀತಿ, ಹಾಯಾದ ಸಂಭೋಗದ ಇಚ್ಛೆಯಿಂದ ಕೂಡಿದ ಮನವುಳ್ಳ ಯೌವನೆಯರು ಅಲ್ಲಿದ್ದರು. ೨೧. ದೊಡ್ಡ ಭಾರವಾದ ಮೊಲೆಯವರಿದ್ದರು. ದುಂಡನೆಯ ಮೊಲೆಯವರಿದ್ದರು. ತೆಂಗಿನಕಾಯಿ ಗಾತ್ರದ ಮೊಲೆಯವರಿದ್ದರು. ಮೃದುವಾದ ಮೊಲೆಯವರಿದ್ದರು. ಸ್ಥಿರವಾದ ಮೊಲೆಯವರಿದ್ದರು. ಗಟ್ಟಿಯಾದ ಮೊಲೆಯವರಿದ್ದರು. ಹೊಳೆಯುವ ಹೂವಿನಂತೆ ಅರಳಿದ ಕಣ್ಣೋಟದ ಸನ್ನೆಗಳನ್ನು ಮಾಡುವ ಹೆಂಗಸರಿದ್ದರು. ನಸುನಗೆ ಯಿಂದ ಸಂಭೋಗದಲ್ಲಿ ಕೂಡಿ ನೆಮ್ಮದಿಯನ್ನು ಹೊಂದುವ ಮನಸ್ಸಿನವರಿದ್ದರು. ಬಹಳ ಬುದ್ಧಿವಂತಿಕೆಯಿಂದ ಸವಿಮಾತನ್ನಾಡುವವರಿದ್ದರು. ಮೆಚ್ಚುವ ರೀತಿನೀತಿಗಳನ್ನುಳ್ಳ ವರಿದ್ದರು. ದುಡ್ಡಿನ ಆತುರದವರೆಂದು ಹೆಚ್ಚಾಗಿ ಹೊರನೋಟಕ್ಕೆ ಕಾಣುವವರಿದ್ದರು. ಮೋಸದಿಂದ ಕೂಡಿದ ಗುಣಗಳುಳ್ಳವರಿದ್ದರು. ಇಂಥ ಪ್ರೌಢಸ್ತ್ರೀಯರು ಅಲ್ಲಲ್ಲಿ ಕಣ್ಣಿಗೆ ಕಾಣಿಸಿದರು. ೨೨. ಕಮಲಮುಖಿ, ಕಮಲದ ಸುವಾಸನೆಯುಳ್ಳವಳು, ಜಿಂಕೆ ಯಂತೆ ಕಣ್ಣುಳ್ಳವಳು, ಕೋಗಿಲೆಯಂತೆ ಹಾಡುವವಳು, ಕಪ್ಪುಕೂದಲಿನವಳು,

CC-0. Jangamwadi Math Collection. Digitized by eGangotri

ಲಲಿತಾಂಗಿ ಧವಳಾಂಬರವನೊರ್ವಳುಟ್ಟು ತ
ನ್ನೊಳವಾಗಿಲೊಳಗಿರಲ್ ಕಂಡು ನಾಗರಿಕಕುಲ
ತಿಲಕನಿವಳೀಗ ಪದ್ಮಿನಿಯೆಂದು ಸೂಚಿಸಲ್ ನೋಡುತಡಿಯಿಟ್ಟರಂದು ೨೨

ಬಿಸಜಾಕ್ಷಿ ಚಂದ್ರಮುಖಿ ಮಧುಗಂಧಿ ಕೊಬ್ಬುಗ
ಕ್ಕಸಜವ್ವನದ ಚೆಲ್ವೆ ಘನನಿತಂಬಿನಿ ಕಾಮು
ರಸಪೂರೆ ಸಚ್ಚಕೋರೀನಿನದೆ ಗಜಗಮನೆ ಕಂಬುಕಂಧರೆ ಕಾಮುಕಿ
ರಸಗಾನಲೋಲೆ ಹರಿಮಧ್ಯೆಯೊರ್ವಳ್ ಚಿತ್ರ
ವಸನರಮ್ಯಾಂಗಿ ಕೊಂಕಿದಕುರುಳೆ ಬಂದೊತ್ತೆ
ಗೆಸೆದಿರಲ್ ಪೀಠವರ್ಧನನಿವಳೆ ಚಿತ್ರಿನಿಯೆನುತ್ತುಸಿರ್ದನವಳಿರವನು ೨೩

ಜಲಜಮುಕುಳಸ್ತನೆ ಸುದೀರ್ಘಾಂಗಿ ನಿಡಿದುಗಂ
ಗಳ ಚಪಳೆ ನೀಳ್ದಕಚಭರೆ ಮಿಳದ್ಭ್ರೂಲತಿಕೆ
ತೆಳುವಸುರಿನಬಲೆ ಶಂಖಸ್ವನೆ ಸುಪಲ್ಲವಾಧರೆ ಕುಟಿಲೆ ಚೂರ್ಣಗಂಧಿ

ಹಂಸದಂತೆ ನಡೆಯುವವಳು. ಹೊಸದಾದ ಎಳ್ಳುಹೂವಿನಂತಹ ಮೂಗುಳ್ಳವಳು, ದುಂಡಾಗಿ ಆಕರ್ಷಕವಾದ ಮೊಲೆಯುಳ್ಳವಳು, ಲಜ್ಜಾಭಾವದಿಂದ ಕೂಡಿದವಳು, ಗಂಭೀರವಾದ ತೊಂಡೆಹಣ್ಣಿನಂತಹ ಕೆಂಪಾದ ತುಟಿಯುಳ್ಳವಳು, ಕೋಮಲವಾದ ದೇಹವುಳ್ಳವಳು – ಇಂತಹವಳೊಬ್ಬಳು ಬಿಳಿಯ ಸೀರೆಯನ್ನುಟ್ಟು ತನ್ನ ಮನೆಯ ಒಳ ಬಾಗಿಲಿನಲ್ಲಿ ನಿಂತಿದ್ದಳು. ಇವಳನ್ನು ನೋಡಿ ನಾಗರಿಕಶ್ರೇಷ್ಠನು ಇವಳೀಗ ಪದ್ಮಿನಿ ಜಾತಿ ಸ್ತ್ರೀಯೆಂದು ಸೂಚಿಸಲು ನೋಡುತ್ತ ಮುಂದೆ ನಡೆದರು. ೨೩. ಕಮಲನಯನೆ, ಚಂದ್ರಮುಖಿ, ಮಧುವಿನಂತೆ ಸುವಾಸನೆಯುಳ್ಳವಳು, ಅತಿಶಯವಾಗಿ ಉಕ್ಕುತ್ತಿರುವ ಪ್ರಾಯವನ್ನು ಹೊಂದಿರುವ ಚೆಲುವೆ, ಮೋಹನರಸದ ಮಾನಿನಿ, ದೊಡ್ಡ ಪಿರ್ರೆಯುಳ್ಳ ವಳು, ಚಕೋರಿಯಂತಹ ಧ್ವನಿಉಳ್ಳವಳು, ಆನೆಯಂತೆ ಮಂದವಾದ ನಡಿಗೆಯುಳ್ಳ ವಳು, ಶಂಖದಂತಹ ಕುತ್ತಿಗೆಯುಳ್ಳವಳು, ಕಾಮಾಸಕ್ತಳು, ನಾದರಸದಲ್ಲಿ ತಲ್ಲೀನಳು, ಸಿಂಹದಂತೆ ಬಳುಕುವ ಸೊಂಟವುಳ್ಳವಳು ಇಂತಹ ಅತಿಶಯ ಗುಣಗಳನ್ನುಳ್ಳ ಚಿತ್ರ ವಿಚಿತ್ರವಾದ ಬಟ್ಟೆಯನ್ನುಟ್ಟು ರಮ್ಯವಾಗಿ ಕಾಣುವ ಸುಳಿಗುರುಳುಳ್ಳ ಒಬ್ಬ ಸುಂದರಿಯು ಪಕ್ಕದಲ್ಲಿ ಕಂಗೊಳಿಸುತ್ತಿರಲು ಬಿಜ್ಜಳನ ನರ್ಮಸಚಿವನು ಇವಳೇ ಚಿತ್ರಿನಿ ಜಾತಿಯ ಸ್ತ್ರೀ ಎಂದನು. ೨೪. ಕಮಲದಮೊಗ್ಗಿನಂತಹ ಮೊಲೆಯುಳ್ಳವಳು. ಎತ್ತರವಾದರೂ ಚೆಲುವಾದ ದೇಹವುಳ್ಳವಳು, ದೊಡ್ಡ ಕಣ್ಣುಗಳುಳ್ಳವಳು, ಚಂಚಲ ಮತ್ತು ತೀವ್ರ ಬಯಕೆಯ ಸ್ವಭಾವದವಳು, ಉದ್ದನೆಯ ಒತ್ತಾದ ತಲೆಗೂದಲುಳ್ಳ ವಳು, ಒತ್ತಾಗಿ ಸೇರಿದ ಲತೆಯಂತಹ ಹುಬ್ಬುಳ್ಳವಳು, ತೆಳ್ಳನೆಯ ಹೊಟ್ಟೆಯುಳ್ಳ ಅಬಲೆ, ಶಂಖದಂತಹ ಧ್ವನಿಯುಳ್ಳವಳು, ಚಿಗುರಿನಂತಹ, ಕೆಂಪಾದ ಮೃದುವಾದ ತುಟಿ ಯುಳ್ಳವಳು, ಪಂಚಕಿ, ಗಂಧ, ಕರ್ಪೂರ ಮುಂತಾದ ಸುಗಂಧದ್ರವ್ಯಗಳ ಸುವಾಸನೆಯನ್ನು

CC-0. Jangamwadi Math Collection. Digitized by eGangotri

ತಳಿರಡಿಯ ತರಳೆ ಕಿಂಚಿತ್ಕಾಮಿ ಕೋಪಿ ಜಂ
ಗುಳಿವೋಹಿ ಶೀಘ್ರಗಾಮಿನಿ ರಕ್ತವಸನೆ ಬಾ
ಗಿಲದಾಂಟಿ ನಿಂದಿರ್ಪಳಿವಳೆ ಶಂಖಿನಿಯೆಂದು ವಿಟನುಸಿರ್ದನವಳಿರವನು ೨೪

ಕೊರ್ಬಿದ ಶರೀರೆ ಸೂಕ್ಷ್ಮಾಪಾಂಗೆ ಕೆಂಗೂಡ
ಲುರ್ಬುಜವ್ವನೆ ಕಂಪನಸ್ವನೆ ರಹಿತಗಾನೆ
ನಿರ್ಬುದ್ಧಿವಂತೆ ಬಾಯ್ಬಡಿಕೆ ದುಶ್ಚೇಷ್ಟೆ ನಿಷ್ಠುರಸುರತೆ ಮದಗಂಧಿನಿ
ಪರ್ಬಿದ ನಿತಂಬೆಯುನ್ನತಮಧ್ಯೆ ಮಧುಗೋಷ್ಠಿ
ಗೊರ್ಬಳೆದೆಯಾಡುತಿರೆ ಕಂಡಾ ವಿದೂಷಕಂ
ಸರ್ಬವದೊಳೆಲ್ಲರಂ ನಗಿಸುತಿವಳೀಗ ಹಸ್ತಿನಿಯೆಂದುಸಿರ್ದನಂದು ೨೫

ಮುನಿಸೆಂಬುದರಿಯನೆಂದುಂ ರೂಪಿನೆಡೆಯೊಳಂ
ಮನಸಿಜಂ ಕೊಡುವಲ್ಲಿ ರವಿನಂದನಂ ಭೋಗ
ದನುವಿನೊಳಗಿಂದಿರಂ ಬಲ್ಲವಂ ನಾನಲ್ಲದೊಮ್ಮೆಯುಂ ಪೆರವೆಣ್ಗಳ
ಕನಸಿನೊಳ್ ನೋಡಿಯುರಿಯನಿನಿತು ಸುಗುಣಗಳು
ಳ್ಳನಿಯನೆನ್ನೀ ಜನ್ಮಜನ್ಮಾಂತಮೆನ್ನ ತೋ
ಳ್ತೊನೆಯೊಳಿರಲೆಂದೊರ್ವ ಕಾಂತೆಯನುಕೂಲಿಗನನಂದು ಸಖಿಯೊಳ್ ಪೊಗಳ್ದಳು ೨೬

ಬೀರುವವಳು, ಚಿಗುರಿನಂತಹ ಕೆಂಪಾದ ಮೃದುವಾದ ಪಾದವುಳ್ಳ ತರುಣಿ, ಕಾಮುಕ ಸ್ವಭಾವವುಳ್ಳವಳು, ಅಲ್ಪಕಾಮಿ, ಕೋಪಿಷ್ಠೆ, ಜನರಗುಂಪಿನಲ್ಲಿರಬಯಸುವವಳು, ವೇಗವಾಗಿ ಚಲಿಸುವವಳು, ಕೆಂಪುವಸ್ತ್ರ ಧರಿಸಿದವಳು. ಇಂತಹವಳು ಬಾಗಿಲುದಾಟಿ ನಿಂತಿದ್ದಾಳೆ. ಇವಳನ್ನು ನೋಡಿದ ವಿಟನು ಇವಳನ್ನು ಶಂಖಿನಿಬಗೆಯ ಸ್ತ್ರೀಜಾತಿ ಎಂದು ವರ್ಣಿಸಿದನು. ೨೫. ಕೊಬ್ಬಿದ ಶರೀರವುಳ್ಳವಳು, ಕಿರಿದಾದ ಕಣ್ಣುಳ್ಳವಳು, ಕೆಂಪಾದ ಕೂದಲಿನಿಂದ ಕೂಡಿದವಳು, ಏರುತ್ತಿರುವ ಯೌವನಸ್ಥೆ, ನಡುಗುವ ಧ್ವನಿಯುಳ್ಳವಳು, ಹಾಡಲು ತಿಳಿಯದವಳು, ತಿಳಿವಳಿಕೆ ಇಲ್ಲದವಳು, ಬಾಯ್ಬಡುಕಿ, ಕೆಟ್ಟ ಚೇಷ್ಟೆ ಉಳ್ಳವಳು, ನಿಷ್ಠೂರದಿಂದ ಸಂಭೋಗಸುಖವನ್ನು ಪಡೆಯುವವಳು, ಮದಗಂಧಿ, ವಿಶಾಲವಾದ ನಿತಂಬವುಳ್ಳವಳು. ದಪ್ಪವಾದ ಸೊಂಟವುಳ್ಳವಳು, ಮದ್ಯಪಾನಾಸಕ್ತರ ಸಹವಾಸವನ್ನು ಹೊಂದಿದವಳು, ಇಂಥವಳೊಬ್ಬಳು ಓಡಾಡುತ್ತಿರುವುದನ್ನು ನೋಡಿ ವಿದೂಷಕನು ವಿನೋದದಿಂದ ಎಲ್ಲರನ್ನೂ ನಗಿಸುತ್ತ ಇವಳೇ ಹಸ್ತಿನಿಜಾತಿಯ ಹೆಂಗಸು ಎಂದು ಹೇಳಿದನು. ೨೬. ಮುನಿಸೆಂಬುದೇ ಗೊತ್ತಿಲ್ಲದವನು, ರೂಪನ್ನು ನೋಡಿದರೆ ಮನ್ಮಥನಂಥವನು, ದಾನಮಾಡುವುದರಲ್ಲಿ ಕರ್ಣನಂಥವನು, ಭೋಗದಲ್ಲಿ ಇಂದ್ರನಂಥವನು, ತಿಳಿದವನು, ನನ್ನನ್ನಲ್ಲದೆ ಬೇರೆ ಹೆಣ್ಣುಗಳನ್ನು ಕನಸಿನಲ್ಲಿಯೂ ನೋಡಿ ಗೊತ್ತಿಲ್ಲ. ಇಂಥ ಒಳ್ಳೆಯ ಗುಣಗಳನ್ನುಳ್ಳ ನನ್ನ ಪ್ರಿಯನು ಜನ್ಮಜನ್ಮಾಂತರಗಳಲ್ಲಿಯೂ ನನ್ನ ತೋಳಿನ ತೆಕ್ಕೆಯಲ್ಲಿಯೇ ಇರಲಿ ಎಂದು ಒಬ್ಬ ಪ್ರಿಯೆ ತನಗೆ ಅನುಕೂಲನಾದೊಬ್ಬ

CC-0. Jangamwadi Math Collection. Digitized by eGangotri

ಸುದತಿ ನೋಡೀ ಚಂದ್ರಬಿಂಬಮುಂ ನಿನ್ನ ಮೊಗ
ಕಿದಿರೆನ್ನಬಹುದೆ ಸರ್ವಾಂಗಮುಂ ಬೆಳ್ಪು ಮ
ತ್ತಿದು ನೋಡು ಮಧ್ಯದ ಕಳಂಕೆಂದು ಮುಗ್ಧೆ ಶಶಿಯುಂ ನೋಳ್ಪವೊಲ್ ಪೇಳುತೆ
ಚದುರ ದಕ್ಷಿಣನಾಯಕಂ ಪೊರೆಯೊಳಿರ್ದ ಸಖಿ
ಯಧರವಮ ಚುಂಬಿಸುತೆ ಸೀತ್ಕೃತಂಗೇಳದಂ
ದದೊಳವಳ ವಲಯುರವಮಂ ನೆಗಳ್ಚಿಸಿದನೆತ್ತಿದ ಚಂದ್ರಶಾಲೆಯೊಳಗೆ ೨೭

ಇಂದಿನಿತು ಪೊಳ್ತೇಕೆ ತಡೆದೆ ಪೊಸತಿದು ಮೆಯ್ಗೆ
ಗಂಧಲೇಪಂ ನಿನ್ನ ಬಾಯೇಕೆ ಮುದ್ರಿಸಿತು
ಬಂದ ಭರವೇನು ಚೆನ್ನಾಗೆಲ್ಲ ಪುಸಿಯದುಸಿರಿನ್ನು ನಿನ್ನಂ ಕೊಲ್ಲೆನು
ಇಂದುವರೆಗಾಂ ತಾಳಿದೆಂ ನಿನ್ನ ದೂಸರಿಂ
ನೊಂದೆ ನಿನ್ನಿನ್ನುವಂ ಕರೆದರೆನ್ನಂ ನಗುವ
ರೆಂದೊರ್ವ ಕಾಂತೆ ಶಠನಂ ಬರಿಯ ಬಾಯಮಾತಿಂದೆ ಕೋಪಿಸುತಿರ್ದಳು ೨೮

ಜಡಿದು ನಾಣ್ಗೆಡನುಡಿಯಲುಬ್ಬುವಂ ಬಿರಿಸಿನಿಂ
ಪೊಡೆಯೆ ಪೊಂಗುವನೊದೆಯಲೊಂದು ಪೊರೆಯೇರುವಂ
ದೊಡನೊಡನೆ ಕೂಡಲೆಳಸುವನೆನ್ನ ತಪ್ಪುಗಳನೆಣಿಸನೆಂದುಂ ಮುನಿದೊಡೆ

ವಿಟನನ್ನು ತನ್ನ ಗೆಳತಿಯೊಡನೆ ಹೊಗಳಿದಳು. ೨೭. ಚಂದ್ರಶಾಲೆಯೊಂದರಲ್ಲಿ ತನ್ನ ಪ್ರಿಯೆಯನ್ನು ಕುರಿತು, "ಪ್ರಿಯೆ, ನೋಡು ಈ ಚಂದ್ರಬಿಂಬವನ್ನು ನಿನ್ನ ಮುಖಕ್ಕೆ ಸಮನೆನ್ನಬಹುದೆ ? ಚಂದ್ರನ ದೇಹದ ಸರ್ವಾಂಗವೂ ಬಿಳಿದು. ಆದರೆ ಮಧ್ಯದಲ್ಲಿ ಕಪ್ಪುಕಲೆಯಿದೆ ಎಂದು ಆ ಮುಗ್ಧೆಗೆ ಚಂದ್ರನನ್ನು ನೋಡುವಂತೆ ಹೇಳುತ್ತ ಚತುರನೂ ನಿಷ್ಕಪಟಿಯೂ ಆದ ಆ ನಾಯಕನು ಸಮೀಪದಲ್ಲಿದ್ದ ತನ್ನ ಪ್ರಿಯೆಯ ತುಟಿಗಳನ್ನು ಚುಂಬಿಸಿದನು. ಆದರೆ ಚುಂಬಿಸಿದ ಶಬ್ದ ಕೇಳದಂತೆ ಅವಳ ಬಳೆಗಳ ಶಬ್ದವನ್ನು ಮಾಡಿದನು. ೨೮. "ಈ ದಿನ ಏಕೆ ಇಷ್ಟು ಹೊತ್ತುಮಾಡಿದೆ ? ಸೋಜಿಗವೆಂದರೆ ನಿನ್ನ ಮೈಗೆ ಸುಗಂಧವನ್ನು ಬೇರೆ ಹಚ್ಚಿಕೊಂಡಿರುವೆ. ಏಕೆ ಮಾತನಾಡದೆ ಸುಮ್ಮನಿದ್ದೀಯೆ ? ನೀನು ಬಂದ ಉದ್ದೇಶವೇನು ? ಎಲ್ಲವನ್ನೂ ವಿವರವಾಗಿ ಹೇಳು. ಸುಳ್ಳು ಹೇಳಬೇಡ. ನಾನೇನೂ ನಿನ್ನನ್ನು ಕೊಲ್ಲುವುದಿಲ್ಲ. ನಿನಗಾಗಿ ನಾನು ಇದುವರೆಗೂ ಕಾಯುತ್ತಿದ್ದೆ. ನಿನ್ನ ಕಾರಣದಿಂದ ನಾನು ಬಹಳ ವ್ಯಥೆಪಟ್ಟೆನು. ಹೀಗಿದ್ದೂ ನಾನು ನಿನ್ನನ್ನು ಕರೆದರೆ ಜನ ನನ್ನನ್ನು ನೋಡಿ ನಗುತ್ತಾರೆ" ಎಂದು ಕಾಂತೆಯೊಬ್ಬಳು ಹೆಡ್ಡನಾದ ತನ್ನ ಪ್ರಿಯನ ಮೇಲೆ ಬರಿಯ ಬಾಯಿಮಾತಿನಿಂದಲೇ ಕೋಪಿಸುತ್ತಿದ್ದಳು. ೨೯. ಒಬ್ಬ ಹೆಂಗಸು ತನ್ನ ಪ್ರಿಯನನ್ನು ಕುರಿತು ತನ್ನ ಸ್ನೇಹಿತೆಗೆ ಈ ರೀತಿ ಹೇಳಿದಳು : "ಬೆದರಿಸಿ ಹೀನೈಸುವಂತೆ ಮಾತನ್ನಾಡಿದರೆ ಸಂತೋಷದಿಂದ ಉಬ್ಬುವನು. ಜೋರಾಗಿ ಹೊಡೆದರೆ ಹಿಗ್ಗುವನು. ಒದ್ದರೆ ಉತ್ಸಾಹಗೊಂಡು ತಕ್ಷಣವೇ ಸಂಭೋಗಕ್ಕೆ ಆಸೆ ಪಡುತ್ತಾನೆ. ನನ್ನ ತಪ್ಪುಗಳನ್ನು ಎಂದೂ ಲೆಕ್ಕಿಸುವುದಿಲ್ಲ. ನಾನು ಕೋಪಿಸಿಕೊಂಡರೆ

CC-0. Jangamwadi Math Collection. Digitized by eGangotri

ಕಡುತವಕದಿಂ ತಿಳಿಪುವಂ ಸೇವೆಗೈವನಿವ
ನೊಡವೆಗೊಡದಿರ್ದೊಡಂದಪರಾಧಿಯಾದೊಡಂ
ಬಿಡದೀ ಮನಂ ದುಷ್ಟನಾಯಕನನೆಂದೊರ್ವ ಮಡದಿ ಕೆಳದಿಗೆ ನುಡಿದಳು ೨೯

ಬರಲೊಂದು ತಾಣದೊಳ್ ಸುರತದಿಂದು ಬಳಲಿ
ತರುಣಿಯೊರ್ವಳ್ ನಲ್ಲನಂ ತನ್ನ ಕುರುಳ್ಗಳಂ
ಸರಿಸು ಸ್ವೇದಮನೊರಸು ಹಾರಮಂ ಸೈತಿರಿಸು ಬಿಜ್ಜಣಿಗೆಯುಲರ ಬಿಸು
ಸರಸತಾಂಬೂಲಮಂ ಸವಿದಿರಿಸು ಬಾಯ್ಗುಪರಿ
ಸುರತದಲಸಂ ಪರಿಹರಿಸು ಪಾದಕೆಂಬ ಸೌಂ
ದರಿಯ ನುಡಿಯಿಂದಿವಳ್ ಸ್ವಾಧೀನಪತಿಕೆಯೆಂದರಿದು ಮುಂದಕೆ ನಡೆದರು ೩೦

ಬಳಿಕೊಂದು ತಾಣದೊಳಗಪರಾಧನಾಯಕಂ
ಮುಳಿದಿನಿಯಳಂ ತಿಳಿಪುತೆಲೆ ರಮಣಿಯೆನ್ನ ನಿ
ನ್ನೊಳಗೆ ಭೇದವೆ ದೇಹವೆರಡಕೊಂದೇ ಜೀವಮೆನೆ ಕೇಳ್ದು ನಸುನಗುತ್ತೆ
ಸುಲಭ ನೀನೆಂದ ನುಡಿ ದಿಟವಲ್ಲದೊಡೆ ನಿನ್ನ
ತಳಿರ್ದುಟಿಯ ಗಾಯಕ್ಕೆನ್ನೀ ಮನಂ ನೋಯದೆಂ
ದಳಲಿ ನುಡಿದಳನಿವಳ್ ಖಂಡಿತೆಯೆನುತ್ತರಿದು ತಳರ್ದರಲ್ಲಿಂ ಮುಂದಕೆ ೩೧

ಕಾತುರದಿಂದ ಸಮಾಧಾನ ಮಾಡುತ್ತಾನೆ. ನನ್ನ ಸೇವೆ ಮಾಡುತ್ತಾನೆ. ಅವನು ನನಗೆ ಯಾವ ಒಡವೆಯನ್ನು ಕೊಡದಿದ್ದರೂ ಅನೇಕ ಬಾರಿ ತಪ್ಪು ಮಾಡಿದರೂ ನನ್ನ ಮನಸ್ಸು ಆ ದುಷ್ಟ ನಾಯಕನನ್ನೇ ಬಯಸುತ್ತದೆ.'' ೩೦. ಹೀಗೆ ಬರುತ್ತಿರುವಾಗ ಒಂದು ಕಡೆ ಒಬ್ಬ ತರುಣಿ ಸಂಭೋಗಸುಖದಿಂದ ಬಳಲಿ ತನ್ನ ನಲ್ಲನನ್ನು ಕುರಿತು—ನನ್ನ ಕೂದಲನ್ನು ಸರಿಮಾಡು, ಬೆವರನ್ನು ಒರೆಸು. ನನ್ನ ಹಾರವನ್ನು ಸರಿಯಾಗಿಡು. ಬೀಸಣಿಗೆ ಯಿಂದ ಬೀಸು. ಎಲೆಅಡಿಕೆಯನ್ನು ನೀನು ಅಗಿದು ನನ್ನ ಬಾಯಿಗಿಡು. ಅನಂತರ ಸಂಭೋಗದ ಆಲಸ್ಯವನ್ನು ಪರಿಹಾರ ಮಾಡು. ಕಾಲನ್ನು ಒತ್ತು ಎಂದು ಆ ಸುಂದರಿಯು ಹೇಳುತ್ತಿದ್ದುದನ್ನು ಕೇಳಿ ಅವಳು ಸ್ವಾಧೀನಪತಿಕೆ ಎಂದು ತಿಳಿದು ಮುಂದೆ ನಡೆದರು. ೩೧. ಮತ್ತೊಂದು ಸ್ಥಳದಲ್ಲಿ ಒಬ್ಬ ಅಪರಾಧನಾಯಕನು ಕೋಪಿಸಿ ಕೊಂಡಿದ್ದ ತನ್ನ ಪ್ರಿಯಳನ್ನು ಸಮಾಧಾನಪಡಿಸುತ್ತಿದ್ದ: ಎಲೆ ರಮಣಿಯೆ, ನನ್ನ ನಿನ್ನೊಳಗೆ ಭೇದ ಇದೆಯೇ ? ದೇಹ ಎರಡಾದರೂ ಜೀವ ಒಂದೇ ಎನ್ನಲು ಅದನ್ನು ಕೇಳಿ ಅವಳು ನಸುನಕ್ಕು ನೀನು ಹೇಳಿದ ಮಾತು ಸುಲಭ, ಸತ್ಯ. ಇಲ್ಲದಿದ್ದರೆ ನಿನ್ನ ಚಿಗುರಿನಂತಹ ಮೃದುವಾದ ತುಟಿಯಗಾಯಕ್ಕೆ ನನ್ನ ಮನಸ್ಸು ನೋಯುತ್ತಿರಲಿಲ್ಲ ಎಂದು ವ್ಯಥೆಯಿಂದ ನುಡಿದಳು. ಅವಳನ್ನು ನೋಡಿ ಇವಳು ಖಂಡಿತೆ ಎಂದು ಅರ್ಥಮಾಡಿಕೊಂಡು ಅಲ್ಲಿಂದ

CC-0. Jangamwadi Math Collection. Digitized by eGangotri

ಮನದನ್ನನಿಂದು ಬಂದಪನೆಂದು ಮಿಂದು ಚಂ
ದನಲೇಪನಂಗೆಯ್ದು ಕುಸುಮಮಂ ಮುಡಿದು ಮಂ
ಡನದಿಂದಲಂಕರಿಸಿ ಸೆಜ್ಜೆಯಂ ಸಿಂಗರಿಸಿ ಹಾಸುವಂ ಹಚ್ಚವಡಿಸಿ
ವಿನುತಪರಿಮಳಪುಷ್ಪ ತಾಂಬೂಲವಂ ತರಿಸಿ
ಮನಮೊಸೆದು ಕಾದಿರ್ದೆನಿನಿತುವರೆಗಂ ಬಾರ
ನೆನುತೆ ಸಖಿಗುಸಿರ್ವುದಂ ಕೇಳ್ದು ವಾಸವಸಜ್ಜಿಕಾಖ್ಯೆಯಿವಳೆಂದರಿವರು ೩೨

ನಲ್ಲನಿಂದಿನಿತು ಪೊಳ್ತೇಕೆ ತಡೆದನೊಯೆನ್ನ
ನೊಲ್ಲನೋ ಮಚ್ಚಿದಬಲೆಯರಡ್ಡಗಟ್ಟಿ ಬ
ಲ್ಪಿನ್ದಲೆಳೆದೊಯ್ದರೋ ಪುಸಿಗೆ ಮುನಿದನೊ ಧೈರ್ಯದಿಂದಮೆನ್ನ
ಮೆಲ್ಲೆರ್ದೆಯನರಿವೆನೆಂದುಳಿದನೋಯೆನ್ನ ತ
ನ್ನಲ್ಲಿಗೈದಿಸುವೆನಾನೆಂದು ನಿಂದನೊಯೆಂದು
ತಲ್ಲಣಿಸಿ ಪಂಬಲಿಪ ನುಡಿಗೇಳುತಿವಳುತ್ಕೆಯೆಂದರಿದು ನಡೆದರಂನು ೩೩

ಬಳಿಕೊರ್ವ ನಾರಿ ನೆವದೊಳ್ ಮುಳಿದು ನಲ್ಲನಿಂ
ತಿಳಿಯಲೊಲ್ಲದೆ ಜಡಿದು ನುಡಿದು ಪೊರಮಡಿಸಿ ತ
ನ್ನೊಳು ತಾನೆ ತಿಳಿದೇಕೆ ಮುನಿದೆನೋ ವಲ್ಲಭಂ ತಿಳಿಪಲೇತಕೆ ಜರಿದೆನೊ

ಮುಂದೆ ಹೊರಟರು. ೩೨. ತನ್ನ ಪ್ರಿಯನು ಈ ದಿನ ಬರುವನೆಂದು ಸ್ನಾನ ಮಾಡಿ ಶ್ರೀಗಂಧವನ್ನು ಹಚ್ಚಿಕೊಂಡು, ಹೂಗಳನ್ನ ಮುಡಿದು, ಆಭರಣದಿಂದ ಅಲಂಕರಿಸಿಕೊಂಡು, ಮಲಗುವ ಮನೆಯನ್ನು ಸಿಂಗರಿಸಿ, ಹಾಸಿಗೆಯನ್ನು ಹಾಸಿ ಸಿದ್ಧಮಾಡಿ,ಒಳ್ಳೆಯ ಸುಗಂಧದ್ರವ್ಯಗಳು, ಹೂಗಳು, ತಾಂಬೂಲಗಳನ್ನು ತರಿಸಿ ಇಷ್ಟೆಲ್ಲವನ್ನೂ ಅಣಿಮಾಡಿ ಮನದಲ್ಲಿಯೇ ಹಿಗ್ಗುತ್ತ ಪ್ರೀತಿಯಿಂದ ಅವನಿಗಾಗಿ ಕಾದಿದ್ದೆ. ಆತ ಈವರೆಗೂ ಬರಲಿಲ್ಲ ಎಂದು ಸಖಿಗೆ ಹೇಳುವುದನ್ನು ಕೇಳಿ ಇವಳು ವಾಸವಸಜ್ಜಿ ಎಂದು ಪ್ರಖ್ಯಾತಳಾದವಳು ಎಂದು ತಿಳಿದರು. ೩೩. ಈದಿನ ನನ್ನ ಪ್ರಿಯನು ಏಕೆ ಇಷ್ಟುಹೊತ್ತು ತಡ ಮಾಡಿದನೋ ? ನನ್ನನ್ನು ಬಲ್ಲನೊ ? ಅವನನ್ನು ಮೆಚ್ಚಿದ ತರುಣಿಯರು ಅವನು ಬರುವಾಗ ಅಡ್ಡಗಟ್ಟಿ ಬಲವಂತವಾಗಿ ಎಳೆದುಕೊಂಡುಹೋದರೋ ? ಸುಮ್ಮ ಸುಮ್ಮನೆ ಸಿಟ್ಟು ಮಾಡಿಕೊಂಡನೊ ? ಧೈರ್ಯದಿಂದ ನನ್ನ ಮೃದುವಾದ ಮನಸ್ಸನ್ನು ತಿಳಿದುಕೊಳ್ಳುತ್ತೇನೆಂದು ಬರದೇ ಉಳಿದನೋ ? ನನ್ನನ್ನೇ ತನ್ನಲ್ಲಿಗೆ ಬರುವಂತೆ ಮಾಡುತ್ತೇನೆ ಎಂದು ನಿಂತನೋ ? ಎಂದು ತಲ್ಲಣಿಸಿ ಹಂಬಲಿಸುವ ಮಾತುಗಳನ್ನು ಕೇಳಿ ಇವಳು ಉತ್ಕೆ (ಉತ್ಕಟವಾದ ಬಯಕೆಯುಳ್ಳವಳು) ಎಂದು ತಿಳಿದು ಮುಂದೆ ನಡೆದರು. ೩೪. ಮುಂದೆ ಹೋಗುತ್ತಿರುವಾಗ, ಅಲ್ಲೊಬ್ಬ ಹೆಂಗಸು ಅಕಾರಣವಾಗಿ ಸಿಟ್ಟು ಮಾಡಿಕೊಂಡು, ಪ್ರಿಯನನ್ನು ಅರ್ಥ ಮಾಡಿಕೊಳ್ಳದೆ ಗದರಿಸಿ ಮಾತನಾಡಿ ಮನೆಯಿಂದ ಹೊರಡಿಸಿದಳು. ಅನಂತರ ತನ್ನಲ್ಲಿತಾನೇ ಆಲೋಚಿಸಿ ನಾನೇಕೆ ಸಿಟ್ಟು ಮಾಡಿದೆನೊ ? ನನ್ನ ಪ್ರಿಯನು

CC-0. Jangamwadi Math Collection. Digitized by eGangotri

ತಿಳಿದಪೆನೆನುತ್ತಿನಿಯನಂಗಟ್ಟುವೆನೊ ಸಖಿಯರಂ
ಪಳಿವು ಸುಡುವುವು ಮ್ಮಳಿವುದೇ ಕಷ್ಟಮಾಕ್ಷಣಂ
ತಿಳಿಯದುದೆ ಮೂಢತ್ವವೆಂಬ ನುಡಿಗೇಳುತಭಿಸಂಧಿಕೆಯೆನುತ್ತರಿದರು ೩೪

ತನುಗೆ ಚಂದನದಣ್ಪುವಂ ಕೊಟ್ಟು ಮಲ್ಲಿಗೆಯ
ನನೆಗಳಂ ಮುಡಿಗಿಟ್ಟು ಧವಳಾಂಬರವನುಟ್ಟು
ವಿನುತ ಮುತ್ತಿನ ತೊಡಗಳಂ ತೊಟ್ಟು ಸುಲಿಪಲ್ಲ ಮಿಂಚು ದೆಸೆಯಂ ಬೆಳಗಲು
ಮನೆಯುಮಂ ಪೊರಮಟ್ಟುಯಚ್ಚಮುತ್ತಿನ ಬೊಂಬೆ
ಯೆನಲಿನಿಯನೆಡೆಗೆ ಪೋಪೊರ್ವಳಂ ಕಾಣುತುಂ
ಮನದೊಳಭಿಸಾರಿಕೆಯ ತೆರನಲಾಯೆಂದರಿದು ನಗುತೆ ಮುಂದಕೆ ನಡೆದರು ೩೫

ಚಪಳೆ ಕೇಳಿಂದೆನ್ನ ನಲ್ಲನೀಯೆಡೆಗೆ ಬಂ
ದಪನೆಂದು ಸೂಚಿಸಿದೊಡಾಂ ಬಂದೆನಕಟ ನಿ
ಷ್ಕೃಪೆಯೊಳಿನ್ನುಂ ಬಾರನೇಗುವೆನಿದೇಕುಳಿದನೋ ಮನಸಿಜಂಗೆನ್ನನು
ಉಪಲಕ್ಷ್ಯಮಂ ಮಾಡಿದನೊ ಶಶಿಗೆ ಮಾರಿದನೊ
ವಿಪರೀತಮಿಂದಿನಿರುಳಂ ಕಳೆವೆನೆಂತೊಯೆಂ
ದಪವಿಪ್ರಲಂಬೆಯ ಪ್ರಳಾಪಂಗಳಂ ಕೇಳುತಡಿಯಿಟ್ಟರೇನೆಂಬೆನು ೩೬

ನನಗೆ ತಿಳಿಸಿದ ತಕ್ಷಣ ಏಕೆ ಹೀಯ್ಯಾಳಿಸಿದನೊ ? ಸಂಗತಿಯನ್ನು ತಿಳಿಯುತ್ತೇನೆ ಎಂದು ಇನಿಯನ ಬಳಿಗೆ ಸಖಿಯರನ್ನು ಕಳಿಸಲೊ ? ನಾನು ಮಾಡಿದ ನಿಂದೆ ನನ್ನನ್ನು ಸುಡುತ್ತಿದೆ. ತಳಮಳವನ್ನು ಸಹಿಸುವುದು ಬಹಳ ಕಷ್ಟ. ಪ್ರಿಯನು ಹೇಳಿದ ತಕ್ಷಣ ಅರ್ಥ ಮಾಡಿಕೊಳ್ಳದುದೇ ಮೂರ್ಖತನ ಎಂಬ ಮಾತುಗಳನ್ನು ಕೇಳುತ್ತ ಇವಳೊಬ್ಬಳು ಅಭಿಸಂಧಿಕೆ ಎಂದು ತಿಳಿದುಕೊಂಡರು. ೩೫. ಒಬ್ಬಳು ತನ್ನ ದೇಹಕ್ಕೆಲ್ಲ ಗಂಧವನ್ನು ಲೇಪಿಸಿಕೊಂಡು, ಮಲ್ಲಿಗೆಯ ಮೊಗ್ಗುಗಳನ್ನು ತನ್ನ ತುರುಬಿಗಿಟ್ಟುಕೊಂಡು, ಬಿಳಿಯ ಸೀರೆಯನ್ನುಟ್ಟು, ಶ್ರೇಷ್ಠವಾದ ಮುತ್ತಿನ ಆಭರಣಗಳನ್ನು ತೊಟ್ಟು, ಅವಳ ಸ್ವಚ್ಛವಾದ ಹಲ್ಲುಗಳ ಬೆಳಕು ದಿಕ್ಕುಗಳನ್ನು ಬೆಳಗಲು ಮನೆಯಿಂದ ಹೊರಹೊರಟಳು. ಅಚ್ಚ ಮುತ್ತಿನ ಬೊಂಬೆಯಂತೆ ತನ್ನ ಪ್ರಿಯನಿರುವಲ್ಲಿಗೆ ಹೋಗುತ್ತಿರುವ ಆಕೆಯನ್ನು ನೋಡಿ ಮನಸ್ಸಿನಲ್ಲಿಯೆ ಇದು ಅಭಿಸಾರಿಕೆಯ ರೀತಿಯಲ್ಲವೆ ಎಂದುಕೊಂಡು ನಗುತ್ತ ಮುಂದೆ ನಡೆದರು. ೩೬. ಚಪಲಸ್ವಭಾವದವಳೆ ಕೇಳು, ಈ ದಿನ ನನ್ನ ಪ್ರಿಯಕರನು ಈ ಸ್ಥಳಕ್ಕೆ ಬರುತ್ತಾನೆ ಎಂದು ಸೂಚಿಸಿದುದರಿಂದ ನಾನು ಇಲ್ಲಿಗೆ ಬಂದೆನು. ಅಯ್ಯೋ ! ನಿರ್ದಯನಾಗಿ ಅವನು ಇನ್ನೂ ಬರಲೇ ಇಲ್ಲ. ಏನು ಮಾಡಲಿ ? ಏಕೆ ಬರಲಿಲ್ಲವೊ ? ನನ್ನನ್ನು ಮನ್ಮಥಬಾಣಗಳಿಗೆ ಗುರಿಮಾಡಿದನೋ ? ಚಂದ್ರನಿಗೆ ಮಾರಿದನೋ ? ನನಗೆ ವಿರೋಧವಾದ ಇಂದಿನ ರಾತ್ರಿಯನ್ನು ಹೇಗೆ ಕಳೆಯುತ್ತೇನೆಯೊ ಎಂದು ಹೇಳಿಕೊಳ್ಳು

CC-0. Jangamwadi Math Collection. Digitized by eGangotri

ಆಲಿಂಗನಂ ಮಾಡಿ ಚುಂಬನಂಗೆಯ್ದು ಸರ
ಸಾಲಾಪಮಂ ನುಡಿದು ಕಾತರಿಸುತುಂ ರತಿಗೆ
ಮೇಲಿಕ್ಕಿ ಕೂಡುತುಂ ಮರೆವುತೆಚ್ಚರುತೆ ನಿನ್ನಿರುಳೆನ್ನ ನಲ್ಲನೊಡನೆ
ಲೀಲೆಯಿಂದಿರ್ದೆನಿಂದಿನ ದಿನಂ ನಿಷ್ಫಲಂ
ಹಾಳಾದ ಮನೆಯುಮಂ ಕಾದೆನೆಂತೆಂದೊರ್ವ
ಸೂಳೆ ಗತಭರ್ತಾರಿಕಾಖ್ಯೆ ಮರುಗುತ್ತಿರ್ದಳೇನೆಂಬೆನಚ್ಚರಿಯನು ೩೭

ಮುನಿಸೇಕೆ ಪೇಳ ಕಾರಣಮನೆಲೆ ಕಾಂತೆ ಕೇಳ್
ಮನಸಿನೊಳಗಾದೊಡಂ ತನ್ನಲ್ಲಿ ದೋಷಮೆ
ಳ್ಳನಿತುಂಟೆಯೆಂದೆರಗಿ ಕಣ್ಣೀರ್ಗಳಿಂ ಕಾಲ್ಗಳಂ ತೊಳೆದ ವಲ್ಲಭನನು
ಮನವೊಡನೆ ಕರಗಲೇಳೆಂದೆತ್ತುತಶ್ರುವಿಂ
ನನೆದ ಕುಚಕುಂಭದೊಳ್ ಬಿಗಿಯಪ್ಪುತಿರ್ದ ತ
ದ್ವನಿತೆಯಿವಳುತ್ತಮಸ್ತ್ರೀಯೆಂದು ಕೊಂಡಾಡುತಂ ಮುಂದೆ ನಡೆಗೊಂಡರು ೩೮

ಬಳಿಕೊರ್ವಳಪರಾಧರಮಣನಂ ಕಂಡು ನೆಲೆ
ವೊಲೆ ನಡುಗೆ ಪುರ್ಬುಗಂಟಿಕ್ಕಿ ಕುಮುದಾಕ್ಷಿಗಳ್
ತಳೆಯೆ ಕೆಂಪಂ ಮಾತುಗಳ್ ತಡಂಬಡಿಸೆ ಕಾಲ್ ದಡವಡಿಸಿ ಕೋಪಿಸುವಳ

ತ್ತಿರುವ ವಿಪ್ರಲಂಭೆಯ ಗೋಳಾಟವನ್ನು ಕೇಳುತ್ತ ಮುಂದೆ ನಡೆದರು. ೩೭. ನಿನ್ನೆ ಅಪ್ಪಿಕೊಂಡೆ, ಮುತ್ತುಕೊಟ್ಟೆ, ಸರಸಸಲ್ಲಾಪಮಾಡಿದೆ, ಸಂಭೋಗಕ್ಕೆ ಬಹು ಬಯಸಿ ಕೂಡಿದೆ, ಮರೆತೆ, ಎಚ್ಚರಗೊಂಡೆ. ಹೀಗೆ ನಿನ್ನಿನ ರಾತ್ರಿ ನನ್ನ ಪ್ರಿಯ ನೊಡನೆ ವಿನೋದದಿಂದ ಕಾಲ ಕಳೆದೆ. ಈ ದಿನ ಏನೂ ಇಲ್ಲ. ಹಾಳಾದ ಈ ಮನೆ ಯನ್ನು ವೃಥಾ ಕಾದೆ—ಎಂದು ಒಬ್ಬ ಸೂಳೆ, ಗತಭರ್ತಾರಿಕೆ ಎಂಬ ಹೆಸರಿನವಳು ಮರುಗುತ್ತಿದ್ದಳು. ೩೮. ಕೋಪವೇಕೆ ? ಇದರ ಕಾರಣವೇನು ಹೇಳು. ಎಲೈ ಪ್ರಿಯಳೆ ಕೇಳು, ಮನಸ್ಸಿನಲ್ಲಿಯಾದರೂ ನನ್ನಲ್ಲಿ ಎಳ್ಳಷ್ಟಾದರೂ ದೋಷವಿದೆಯೇ ? ಎಂದು ಅವಳಿಗೆ ನಮಸ್ಕರಿಸಿ ತನ್ನ ಸಖಿಯ ಕಾಲುಗಳನ್ನು ಕಣ್ಣೀರಿನಿಂದ ತೊಳೆದನು. ಒಡನೆಯೇ ಆಕೆ ಮನಕರಗಿ ಏಳೆಂದು ಆತನನ್ನು ಮೇಲೆತ್ತುತ್ತ ಕಣ್ಣೀರಿನಿಂದ ನೆನೆದು ಹೋಗಿದ್ದ ತನ್ನ ಕುಂಭದಂತಿದ್ದ ಸ್ತನಗಳಲ್ಲಿ ಅವನನ್ನು ಅಪ್ಪಿಕೊಳ್ಳುತ್ತಿದ್ದ ಆ ವನಿತೆಯು ಉತ್ತಮಸ್ತ್ರೀ ಎಂದು ಕೊಂಡಾಡುತ್ತ ಮುಂದೆ ನಡೆದರು. ೩೯. ಅನಂತರ ಇನ್ನೊಬ್ಬಳು ತಪ್ಪುಮಾಡಿದ್ದ ತನ್ನ ಪ್ರಿಯಕರನನ್ನು ನೋಡಿದಳು. ಆಗ ಅವಳ ಸ್ಥಿರವಾದ ಮೊಲೆಗಳು ನಡುಗಿದುವು, ಹುಬ್ಬುಗಳು ಗಂಟಿಕ್ಕಿದುವು, ಬಿಳಿಯನ್ನೈದಿಲೆ ಯಂತಿದ್ದ ಅವಳ ಕಣ್ಣುಗಳು ಕೆಂಪಾದುವು, ಮಾತುಗಳು ತಡವರಿಸಿದುವು, ಕಾಲುಗಳು ದಡವಡಿಸಿದುವು. ಹೀಗೆ ಕೋಪಗೊಂಡವಳನ್ನು ಸಮಾಧಾನ ಮಾಡಲು ಕಾಲಿಗೆ ಬಿದ್ದ

CC-0. Jangamwadi Math Collection. Digitized by eGangotri

ತಿಳಿಪಲೆಂದೆರಗಿದಿನಿಯನನೊದೆಯೆ ನೂಪುರಂ
ಗಳ ಕೀಲ್ಗೆ ಸಿಲ್ಕಿದ ಕುರುಳ್ಗಳಂ ಬಿಡಿಸುತುಂ
ತಲೆವಿಡಿದಪ್ಪುತಪ್ಪಿದಳನಿವಳೆ ನಾಯಕಿಮಧ್ಯೆಯೆಂದು ಪೋಗುತ್ತಿರ್ದರು ೩೯

ತರುಣಿ ಕೇಳವನೆಡೆಗೆ ಪೋಗೆನೆನಲೀ ಮನಂ
ತರಹರಿಸದೊಯ್ವುದಾಂ ಪೋದೊಡಂ ನೋಡೆನೆಂ
ದಿರೆ ಕಣ್ಗಳಿರವು ನೋಳ್ಪಲ್ಲಿ ನಗೆನೆಂದೊಡೀ ನಗೆ ಬಿಡದು ನಕ್ಕೊಡಿನ್ನು
ಕರೆದು ಮಾತಾಡೆನೆನೆ ಜಿಹ್ವೆ ಕೇಳದು ಮಾತ
ನೊರೆದೊಡಂ ಸೋಂಕೆನೆನೆ ತನು ತಾಳದೇಕೆನು
ತ್ತಿರಲೊರ್ವಳವಳಂ ಜಘನ್ಯೆಗಿದು ಸಹಜಮೆಂದರಿಪುತಂ ನಡೆತಂದರು ೪೦

ನುತವಿಭವಯುತನೀವಕರಮುಳ್ಳವಂಗದೇಂ
ಪ್ರತಿಯೆ ಮನ್ಮಥ ಚಿತ್ರಭಾನು ನಳ ಕೂಬರರ್
ಸತತಮಿಾತಂ ಸೌಮ್ಯ ಶ್ರೀಮುಖಂ ಪ್ರಭವ ಶುಕ್ಲಾನಂದನಿವನಿರಲ್ಕೆ
ಕೃತಕಂ ಪ್ಲವಂಗ ದುರ್ಮುಖಿಯುಂ ವಿಕಾರಿಯುಂ
ಪ್ರತಿದಿನಂ ಕರೆಯೆಂಬೆಯೆಂದು ಸಂವತ್ಸರಮ
ನತಿಶಯಂ ಪೇಳ್ವಂತೆ ರೌದ್ರಿ ರಕ್ತಾಕ್ಷಿ ತಾಯುಂ ಮಗಳ್ ಕೋಪಿಸಿದಳು ೪೧

ಇನಿಯನನ್ನು ಆಕೆಯು ಒದೆಯಲು ಆಗ ಪ್ರಿಯನ ತಲೆಕೂದಲು ಅವಳ ಕಾಲ ಕಡಗದ ಕೀಲುಗಳಿಗೆ ಸಿಕ್ಕಿಕೊಂಡುವು. ಹೀಗೆ ಸಿಕ್ಕಿದ ಕೂದಲುಗಳನ್ನು ಬಿಡಿಸುತ್ತ ಅವನ ತಲೆಯನ್ನು ನೇವರಿಸುತ್ತ ಅಪ್ಪಿಕೊಂಡಳು. ಇವಳೇ ನಾಯಕಿಮಧ್ಯೆ ಎಂದು ಹೇಳಿ ಬಿಜ್ಜಳನೂ ಅವನ ಪರಿವಾರದವರೂ ಮುಂದೆ ಹೋಗುತ್ತಿದ್ದರು.

೪೦. ಸಖಿ ಕೇಳು, ಅವನ ಹತ್ತಿರಕ್ಕೆ ಹೋಗೆನು ಎಂದ ತಕ್ಷಣ ಮನಸ್ಸು ನಿಲ್ಲದೆ ಅವನ ಬಳಿಗೆ ಕರೆದುಕೊಂಡು ಹೋಗುತ್ತದೆ. ಹಾಗೆ ಹೋದರೂ ಅವನನ್ನು ನೋಡುವುದಿಲ್ಲ ವೆಂದರೆ ನನ್ನ ಕಣ್ಣುಗಳು ನೋಡುತ್ತವೆ. ನಗುವುದಿಲ್ಲವೆಂದಿದ್ದರೂ ನಗು ಬಿಡದೆ ಬರುತ್ತದೆ. ನಕ್ಕ ತಕ್ಷಣ ಇನ್ನು ಅವನನ್ನು ಕರೆದು ಮಾತನಾಡಿಸುವುದಿಲ್ಲವೆಂದಿದ್ದರೂ ನಾಲಗೆ ನನ್ನ ಮಾತನ್ನು ಕೇಳುವುದಿಲ್ಲ. ಮಾತನಾಡಿದರೂ ಅವನನ್ನು ಮುಟ್ಟುವುದಿಲ್ಲ ವೆಂದರೆ ನನ್ನ ದೇಹ ತಾಳಲಾರದು. ಇದೆಲ್ಲವೂ ಹೀಗೆ ಏಕೆ ಆಗುತ್ತದೆ ಎಂದು ಒಬ್ಬಳು ಹೇಳುತ್ತಿರಲು ಜಘನ್ಯೆಗೆ ಇವೆಲ್ಲ ಸಹಜವಾದುದು ಎಂದು ತಿಳಿಸುತ್ತ ಮುಂದೆ ನಡೆದರು.

೪೧. ಯಾವಾಗಲೂ ಸೌಮ್ಯನಾದ, ಶ್ರೀಮುಖ ಎಂಬ ಕಾಂತಿ, ಸೌಂದರ್ಯಗಳಿಂದ ಕೂಡಿದ ಮುಖನಾದ ಪರಾಕ್ರಮಿಯೂ ಶುಕ್ಲಪಕ್ಷದ ಚಂದ್ರನೂ ಏರುತ್ತಿರುವ ವರ್ಚಸ್ಸನ್ನು ಹೊಂದಿದ ಧವಳಾಂಗದನಾದ ಇವನಿಗೆ, ಮನ್ಮಥ, ಚಿತ್ರಭಾನು ಎಂದರೆ ಸೂರ್ಯಾಗ್ನಿಗಳು, ನಳಕೂಬರರು ಸಾಟಿಯಾಗಬಲ್ಲರೆ. ಇಂತಹವನಿರುವಾಗ ಕಪಟಿ, ಕೋತಿ, ಕೆಟ್ಟ ಮುಖವುಳ್ಳವನೂ, ವಿಕಾರಿಯೂ ಆದವನನ್ನು ಪ್ರತಿದಿನ ಕರೆ ಎಂದು ಹೇಳುತ್ತೀಯಲ್ಲ ಎಂದು ಸಂವತ್ಸರಗಳ ಅತಿಶಯವನ್ನು ಹೇಳುವಂತೆ ಭಯಂಕರಳಾದ

CC-0. Jangamwadi Math Collection. Digitized by eGangotri

ವರಚೈತ್ರಸಖನ ಮದದಾನೆ ವೈಶಾಖಶಿಖಿ
ಗುರುಕಚರಿ ಸದ್ಗುಣೋಜ್ಜೇಷ್ಠೆ ಶುಚಿ ನವರತ್ನ
ಭರಿತರುಚಿರಶ್ರಾವಣಾಭರಣೆ ಪಂಕೇಜಭಾದ್ರಪದೆ ಸುನಿಮಿಷಯುತೆ
ಪರಮಕಾರ್ತಿಕಪಿತೃಭೂಷಣಸುವೇಣಿ ಸುಮ
ಶರಮಾರ್ಗಯುತೆ ವಪುಶ್ಯಾಮೆ ಭೀಮಾಘಭಯೆ
ನಿರುತಪಾಲ್ಗುಣಮಿತ್ರಸುತನುತೆಯೆ ಬಾರೆಂದು ಸಖಿಯೊರ್ವಳಂ ಪೊಗಳ್ದಳು ೪೨

ಒಸರ್ವ ಮೃದುಚಿತ್ತೆಯಾಗದಿರೊರ್ಮೆಯುಂ ಪುನ
ರ್ವಸುವಿಲ್ಲದೊರ್ವರಂ ಕರೆಯದಿರ್ ಭೂಷಣಮ.
ನೆಸೆವ ನಿನ್ನೀ ಹಸ್ತದಿಂ ಭರಣಿಯೊಳ್ ತುಂಬಿ ನೀ ಪೋಗು ವಿಟರಲ್ಲಿಗೆ
ರಸಿಕರೊಳ್ ಮಾತುಮಂ ಶ್ರವಣದಿಂ ಕೇಳ್ದು ಭಾ
ವಿಸು ಮುಗ್ಧನಾಶ್ಲೇಷೆಯಿಂ ಪಿಂಗದಿರ್ ಮಗಳೆ
ಪುಸಿಯೆ ಮೂಲಂ ಸೂಳೆಗೆಂದು ನೆವದೊಳ್ ಮುದುಕಿಯುಸಿರ್ದಳಾ ತಾರೆಗಳನು ೪೩

ಅನಿಮೇಷಕನ್ನೆಯರ್ ನಿನಗೆ ತುಲೆಯೇ ಮದನ
ಧನು ನಿನ್ನ ಪುರ್ಬಿಗೆಣೆಯೇ ಕೋಕಮಿಥುನಮಿಾ
ಘನಕುಂಭಕುಚಕೆ ಪಾಸಟಿಯೆ ನೇತ್ರಕೆ ಮಿಾನ ಪೊಳಪು ಸಮನೇ ನಡುವಿಗೆ

ಕೆಂಪಾದ ಕಣ್ಣುಳ್ಳ ಮಗಳು ತಾಯಿಯ ಮೇಲೆ ಕೋಪಗೊಂಡಳು [ಟಿಪ್ಪಣಿ : ಸಂವತ್ಸರಗಳ ಹೆಸರನ್ನೂ ಚಮತ್ಕಾರವಾಗಿ ಬಳಸಲಾಗಿದೆ.] ೪೨. ಶ್ರೇಷ್ಠವಾದ ಮನ್ಮಥನ ಮದದಾನೆಯಂಥವಳು, ವೈಶಾಖದ ನವಿಲು, ದೊಡ್ಡ ತುರುಬುಳ್ಳವಳು, ಎಲ್ಲ ಉತ್ತಮ ಗುಣಗಳಿಗೂ ಮೊದಲನೆಯವಳು, ಶುಚಿಯಾದವಳು, ನವರತ್ನಗಳ ಕಾಂತಿಯಿಂದ ಕೂಡಿದ ಆಭರಣಗಳನ್ನು ಕಿವಿಯಲ್ಲಿ ಉಳ್ಳವಳು, ಕಮಲದಂತಹ ಮೃದುವಾದ ಕೆಂಪಾದ ಪಾದವುಳ್ಳವಳು, ಸುಂದರವಾದ ರೆಪ್ಪೆಗಳನ್ನುಳ್ಳವಳು ಪನ್ನಗವೇಣಿ, ಮನ್ಮಥಮಾರ್ಗದಲ್ಲಿ ನಡೆಯುವವಳು, ಶ್ಯಾಮಲಶರೀರೆ, ಭಯಂಕರವಾದ ಪಾಪಕ್ಕೆ ಹೆದರುವವಳು, ಮನ್ಮಥಸ್ತುತೆ-ಬಾ ಎಂದು ಸಖಿಯೊಬ್ಬಳು ಹೊಗಳಿದಳು [ಟಿಪ್ಪಣಿ : ಚಮತ್ಕಾರವಾಗಿ ಚೈತ್ರಾದಿ ಮಾಸಗಳ ಹೆಸರು ಪದ್ಯದಲ್ಲಿ ಬಂದಿದೆ] ೪೩. ಒಂದು ಬಾರಿಯೂ ಮೃದುವಾದ ಮನಸ್ಸುಳ್ಳವಳಾಗಬೇಡ. ಹಣವಿಲ್ಲದ ಒಬ್ಬನನ್ನೂ ಕರೆಯಬೇಡ. ನಿನ್ನ ಕೈಯಿಂದ ಒಡವೆಗಳನ್ನು ಭರಣಿಯಲ್ಲಿ ತುಂಬಿಟ್ಟು ವಿಟರ ಬಳಿಗೆ ಹೋಗು. ರಸಿಕರ ಮಾತುಗಳನ್ನು ಕಿವಿಯಿಂದ ಕೇಳಿ ಆಲೋಚಿಸು. ಮುಗ್ಧತನದಿಂದ ಅಪ್ಪಿಕೊಂಡು ಹಾಳಾಗಬೇಡ. ಮಗಳೆ, ಸೂಳೆಗೆ ಸುಳ್ಳೆ ಬಂಡವಾಳ ಎಂದು ಬುದ್ಧಿ ಹೇಳುವ ನೆವದಲ್ಲಿ ನಕ್ಷತ್ರಗಳ ಹೆಸರನ್ನು ಹೇಳಿದಳು. (ಚಿತ್ತೆ, ಪುನರ್ವಸು, ಹಸ್ತ, ಭರಣಿ, ಶ್ರವಣ, ಅಶ್ಲೇಷೆ, ಮೂಲ–ನಕ್ಷತ್ರಗಳು). ೪೪. ನಿನಗೆ ದೇವತಾಸ್ತ್ರೀಯರು ಸರಿತೂಗಬಲ್ಲರೇ ? ಕಾಮನಬಿಲ್ಲು ನಿನ್ನ ಹುಬ್ಬಿಗೆ ಸಮನೆ ? ಈ ನಿನ್ನ ದೊಡ್ಡದಾದ ಕುಂಭಕುಚಗಳಿಗೆ ಚಕ್ರವಾಕಪಕ್ಷಿಗಳ

CC-0. Jangamwadi Math Collection. Digitized by eGangotri

ವನಸಿಂಹಮಧ್ಯಮುಸಿದೇ ನಿನ್ನ ಗಂಭೀರ
ತನಕೆ ವೃಶ್ಚಿಕ ಮಕರ ಕರ್ಕಟಕಯುತವಾರ್ಧಿ
ಘನಮೆಯೆಂದೊರ್ವಳಂ ವಿಟವೃಷಭನನಿತು ರಾಶಿಗಳನೆಣಿಪ್ರೋಲ್ ಪೊಗಳ್ದನು ೪೪

ತೊಳಗುವರುಣಾಧರೆ ಸುರತಕಲಾನಿಧಿಯೆ ಮಂ
ಗಳಕಾಯೆ ಸೌಮ್ಯಭಾಷಿತೆ ಗುರುನಿತಂಬೆ ಕವಿ
ಕುಲಪಾರಿಜಾತೆ ಸನ್ಮಂದಗಾಮಿನಿ ಸಿಂಹಿಕೇಯರೋಮಾಳಿಸದೃಶೆ
ಸಲೆ ಮಿಾನಕೇತುವಧಿದೇವಿ ಕೇಳ್ ನಿನ್ನದೊಂ
ದೊಲವಾದುದಾ ನವಗ್ರಹಗಳೇಕಾದಶ
ಸ್ಥಳರೆಂದು ಪೊಗಳ್ದನೊರ್ವಂ ತನ್ನ ನಲ್ಲಳಂ ಮನಮಚ್ಚಿನೊಲವಿನಿಂದೆ ೪೫

ಉಕ್ಕುವಾ ತುರುಗಮನೆಯಿಂದಾಳುಮಂ ನೂಂಕೆ
ದಕ್ಕಿತರಸಿನ ಹಿಂದೆ ಬಂದಾನೆ ನಿನಗೆ ಕೈ
ಸಿಕ್ಕಿದೀ ಮಂತ್ರಿಯಿಂ ಕವಡು ಬೀಳ್ವುದು ಮನೋರಥವೊದಗಿ ನಡೆಯದೆಂದು
ನಿಕ್ಕುವಂ ಚದುರಂಗವಾಡುವಂತೊರ್ವಳತಿ
ಠಕ್ಕಿನಿಂ ಮೊದಲೊತ್ತೆಗೊಟ್ಟನಂ ನೂಂಕಿ ಬಹು
ರೊಕ್ಕಮಂ ತೆತ್ತೊರ್ವ ದೊರೆಭುಜಂಗಂ ಬರಲ್ ಕಂಡು ಕೂಡುತುಮಿರ್ದಳು ೪೬

ಜೋಡಿಯು ಸಮವೆ ? ನಿನ್ನ ಕಣ್ಣಿಗೆ ಮೀನಿನ ಹೊಳಪು ಸಾಟಿಯೆ ? ನಿನ್ನ ತೆಳುವಾದ ನಡುವಿಗೆ ವನಸಿಂಹದ ನಡು ಸಮನೆ ? ನಿನ್ನ ಗಾಂಭೀರ್ಯಕ್ಕೆ ಚೇಳು, ಮೊಸಳೆ, ಏಡಿಗಳಿಂದ ತುಂಬಿದ ಸಮುದ್ರದ ಗಾಂಭೀರ್ಯವು ಎಣೆಯೆ ? ಎಂದು ವಿಟಶ್ರೇಷ್ಠನೋರ್ವನು ಒಬ್ಬ ಪ್ರೇಯಸಿಯನ್ನು ರಾಶಿಗಳನ್ನು ಎಣಿಸುವ ರೀತಿಯಲ್ಲಿ ಹೊಗಳಿದನು. (ತುಲಾ, ಧನುಸ್, ಮಿಥುನ, ಕುಂಭ, ಮೀನ, ಸಿಂಹ, ವೃಶ್ಚಿಕ, ಮಕರ, ಕರ್ಕಾಟಕ, ವೃಷಭ, ಮೇಷ, ಕನ್ಯ ರಾಶಿಗಳು) ೪೫. ಹೊಳೆಯುವ ಕೆಂಪಾದ ತುಟಿಯುಳ್ಳವಳು, ಕಾಮಕಲೆಗೆ ಆಶ್ರಯ ಳಾದವಳು, ಮಂಗಳವಾದ ದೇಹವುಳ್ಳವಳು, ಮೃದುಹಿತಭಾಷಿಣಿ, ದೊಡ್ಡದಾದ ಪೃಷ್ಠ ವುಳ್ಳವಳು, ಕವಿಕುಲಕ್ಕೆ ಪಾರಿಜಾತದ ಹೂವಿನಂತಿರುವವಳು, ನಿಧಾನವಾದ ನಡಿಗೆ ಉಳ್ಳ ವಳು, ರಾಹುವಿನಂತೆ ಕೂದಲುಳ್ಳವಳು, ರತಿಯಂಥವಳು ಆದ ಪ್ರಿಯೆಯೇ ಕೇಳು, ನಿನ್ನ ಅನುಗ್ರಹದಿಂದ ಆ ನವಗ್ರಹಗಳೇ ಹನ್ನೊಂದು ಗ್ರಹಗಳಾಗುತ್ತವೆ ಎಂದು ಒಬ್ಬನು ತನ್ನ ನಲ್ಲಳನ್ನು ಮನದುಂಬಿದ ಒಲವಿನಿಂದ ಹೊಗಳಿದನು. ೪೬. ಸೊಕ್ಕಿದ ಕುದುರೆಯ ಮನೆಯಿಂದ ಕಾಲಾಳನ್ನು ಹೊರದೂಡಲಾಗಿ ಅರಸನ ಹಿಂದೆ ಬಂದ ಆನೆ ನಿನಗೆ ದಕ್ಕಿತು. ಕೈಗೆ ಸಿಕ್ಕಿದ ಈ ಮಂತ್ರಿಯಿಂದ ಮೋಸವಾಗುವುದು ನಿನ್ನ ಮನದ ಆಸೆ ನಡೆಯದು ಎಂದು ನಿಜವಾಗಿಯೂ ಚದುರಂಗವಾಡುವಂತೆ ಒಬ್ಬಳು ಅತಿಠಕ್ಕಿನಿಂದ ಮೊದಲೇ ಮುಂಗಡ ಹಣವನ್ನು ಕೊಟ್ಟ ವಿಟನನ್ನು ನೂಕಿ ಅವನಿಗಿಂತ ಹೆಚ್ಚಾಗಿ ಹಣವನ್ನು ಕೊಟ್ಟ ಒಬ್ಬ

CC-0. Jangamwadi Math Collection. Digitized by eGangotri

ಕಪ್ಪುಕೆಂಪಿನ ಹಣ್ಣು ಮೇಲಿದೇಂ ಕಾಣಿಸದೊ
ಡೊಪ್ಪುವರೆ ಬಲ್ಲವರ್ ಬಾಯು ನೀಂ ಮುಚ್ಚು ನಿನ
ಗಿಪ್ಪ ಹಳದಿಯು ಕಾಯಿ ಹಣ್ಣಾದ ಬಳಿಕ ಪವಣರಿದಿನ್ನು ಪಚ್ಚೆಯಾಡು
ತಪ್ಪಿದುದು ಪಂಚಬಾಣಂ ನಿನಗೆ ಬಳಿಕಲೆಂ
ಟಿಪ್ಪಗಡೆಯೇಂ ಫಲಂ ಸೋಲುವೇ ನಿನಗಿನ್ನು
ತಪ್ಪದೆನುತೊರ್ವ ಜಾಣಂ ಪಗಡೆಯಾಟ ನೆವಮಿಟ್ಟು ಲೋಲೆಯ ಜರಿದನು ೪೭

ಕೆಂಪುವಣ್ಣಿನ ಮೇಲೆ ಕರಿದು ಕಾಣಿಸಿಕೊಂಬು
ದೇಂ ಪಂಥವೇ ಬಾಯುಮಂ ಮುಚ್ಚು ಪಚ್ಚೆಯಂ
ನೀಂ ಪವಣಲಿತ್ತಾಡು ನಿನ್ನ ಹಳದಿಯು ಕಾಯ್ಗಳವು ಮೊದಲೆ ಹಣ್ಣಾದುವು
ಇಂಪಂಚಬಾಣ ನಿನಗಿಲ್ಲವೆಂಟಿಪ್ಪಗಡೆ
ಯೇಂ ಫಲಂ ಸೋಲು ತಪ್ಪದು ಮುಂದೆನುತ್ತೆ ಜಾ
ಣಂ ಪಗಡೆಯಾಟದೊಳು ನೆವನಿಟ್ಟು ಲೋಲೆಯಂ ಹದಿರುವಾತಿಂ ಜರೆದನು ೪೮

ಹರಿಸು ದೂತಿಯನಾತನೆಡೆಗಿವನ ಸಂಗಮಂ
ತರುಣಿ ಶಮಿಸು ಮಾಡು ಮಾಡು ಚೆಂದುಟಿಯನೆಸೆ
ವರುಣಮಂ ಹರೆಯದೊಳ್ ಹಣವನಾರ್ಜಿಸುವದೆ ಮನುಷ್ಯಧರ್ಮಂ ತಿಳಿಯಲು

ವಿಟನಾಯಕನು ಬರಲು ಕಂಡು ಅವನೊಂದಿಗೆ ಕೂಡುತ್ತಿದ್ದಳು. ೪೭. ಕಪ್ಪು ಮತ್ತು ಕೆಂಪು ಬಣ್ಣದ ಕಾಯಿಗಳು ಹಣ್ಣಾಗಿರುವುದು ಮೇಲೆ ಕಾಣಿಸುವುದಿಲ್ಲವೆ ? ಇಲ್ಲದಿದ್ದರೆ ಪಗಡೆಯಾಟ ಬಲ್ಲವರು ಇದನ್ನು ಒಪ್ಪುತ್ತಾರೆಯೆ ? ನೀನು ಬಾಯಿಮುಚ್ಚು. ನಿನ್ನಲ್ಲಿರುವ ಹಳದಿಕಾಯಿ ಹಣ್ಣಾದ ಬಳಿಕ ಕ್ರಮ ತಿಳಿದು ಹಸಿರುಕಾಯಿಯನ್ನು ನಡೆಸು. ನಿನಗೆ ಮನ್ಮಥನ ದೃಷ್ಟಿ ತಪ್ಪಿತು. ಬಳಿಕ ಸೊಕ್ಕಿನಿಂದ ಆಡುವ ಪಗಡೆಯಾಟದ ಫಲ ಸೋಲು. ಅದು ನಿನಗೆ ಇನ್ನೂ ತಪ್ಪದು—ಎನ್ನುತ್ತ ಒಬ್ಬ ಬುದ್ಧಿವಂತನು ಪಗಡೆಯಾಟವನ್ನು ನೆಪವಾಗಿಟ್ಟುಕೊಂಡು ಲೋಲುಪಳಾದ ತನ್ನ ಪ್ರೇಯಸಿಯನ್ನು ಜರಿದನು. ೪೮. ಕೆಂಪುಹಣ್ಣಿನ ಮೇಲೆ ಕರಿಯಹಣ್ಣು ಕಾಣಿಸಿಕೊಳ್ಳುವುದು ಪಗಡೆಯಾಟದ ರೀತಿಯೆ ? ಬಾಯಿ ಮುಚ್ಚು. ಹಸಿರು ಕಾಯಿಯನ್ನು ನೀನು ಹವಣರಿತು ಆಡು. ನಿನ್ನ ಹಳದಿಯ ಕಾಯಿಗಳು ಮೊದಲೇ ಹಣ್ಣಾಗಿವೆ. ಇನ್ನು ಮನ್ಮಥನ ಕೃಪಾದೃಷ್ಟಿ ನಿನಗಿಲ್ಲ. ಏನು ಫಲ? ಮುಂದೆ ಸೋಲು ತಪ್ಪುವುದಿಲ್ಲ ಎನ್ನುತ್ತ ಜಾಣನೊಬ್ಬ ಪಗಡೆಯಾಟದ ನೆವದಿಂದ ಪ್ರೇಯಸಿಯನ್ನು ಚದುರಮಾತಿನಿಂದ ಹೀಯಾಳಿಸಿದನು. [ಟಿಪ್ಪಣಿ : ನಿನ್ನ ವೈಯಾರದಿಂದ ನನ್ನನ್ನು ವಂಚಿಸಲು ಸಾಧ್ಯವಿಲ್ಲ. ಹಾಗೆ ನೀನು ನನ್ನನ್ನು ಸೋಲಿಸಲು ಹಟ ತೊಟ್ಟರೆ ನಿನಗೇ ಸೋಲು ಎಂದು ಖಂಡಿತಜಾಣನ ಮಾತಿನ ಅರ್ಥ] ೪೯. ಆತನ ಬಳಿಗೆ ದೂತಿಯನ್ನು ಕಳಿಸು. ಇವನನ್ನು ನಿನ್ನ ಸಂಗದಿಂದ ಸಮಾಧಾನಪಡಿಸು. ನಿನ್ನ ಚೆಲುವಾದ ತುಟಿಗಳನ್ನು ಹೊಳೆಯುವ ಕೆಂಪುಬಣ್ಣಕ್ಕೆ ತಿರುಗಿಸು. ಪ್ರಾಯದಲ್ಲಿ ಹಣವನ್ನು ಗಳಿಸುವುದೇ ಮನುಷ್ಯಧರ್ಮ. ವಿಟರು ಕೂಡಿಟ್ಟಿರುವ ಹಣವನ್ನು ತರಿಸು.

CC-0. Jangamwadi Math Collection. Digitized by eGangotri

ತರಿಸು ಪೂರ್ವದ್ರವ್ಯಮಂ ವಿಟರ್ಗೆ ದಕ್ಷಿಣನೊ
ಳಿರದೆ ವಂಚಿಸು ವಾರುಣಿಯ ಕೊಳ್ಳಲುತ್ತರೋ
ತ್ತರಮೆಂದು ಸುತೆಗೊರ್ವಳುಸಿರ್ದಳು ಚತುರ್ದಿಶಾಪರರ ನಾಲ್ದೆಸೆವೇಳ್ವೊಲು ೪೯

ಕರತಳಮುಮಧರಮುಂ ಪಲ್ಲವಂ ಪಲ್ಲವಂ
ತರಳಾಕ್ಷಿಯುಂ ಮುಖಂ ಕುಮುದಮುಂ ಕುಮುದಮುಂ
ಗುರುಕುಚಂ ಸಮತೆಯುಂ ಗೋತ್ರಮುಂ ಗೋತ್ರಮುಂ ವಾಣಿಯುಂ ವರವೇಣಿಯುಂ
ಪರಿರಂಜಿಸುತ್ತಿರ್ದ ಶಿವಮುಮಂ ಶಿವಮುಮುಂ
ಚರಣಮುಂ ಬಾಸೆಯುಂ ಪದ್ಮಮಂ ಪದ್ಮಮುಮ
ನಿರದೆ ಪೋಲ್ತಿರಲಲ್ಲಿ ಬಾಲೆಯರ್ ನಿಖಿಳಗುಣಶೀಲೆಯರ್ ಕಣ್ಗೆಸೆದರು ೫೦

ಕುರುಳ್ಗಳೊಳ್ ನಾರಿಯುಂ ಪುರ್ಬಿನೊಳ್ ಚಾಪಮುಂ
ಕರತಳದೊಳಸ್ತ್ರಮುಂ ನಯನದೊಳ್ ಶಸ್ತ್ರಮುಂ
ಗುರುಕುಚದೊಳೊಪ್ಪುವ ರಥಾಂಗಮುಂ ನುಡಿಗಳೊಳ್ ಗಿಳಿಗಳಂ ನುಣ್ದನಿಯೊಳು
ಪರಭೃತಂಗಳನೆಸೆವ ಯಾನದೊಳ್ ಹಂಸೆಯುಂ
ತರಳಾಕ್ಷಿ ನಿನ್ನಂಗದೊಳಗಿಟ್ಟು ತಾನೆತ್ತ
ಸರಿದನೋ ಕುಸುಮಶರನೆಂದೊರ್ವ ಮುಗ್ಧೆ ಪ್ರಿಯಸಖಿಯ ಕೂಡಿಂತೆಂದಳು ೫೧

ಉದಾರಿಯಾದವನನ್ನು ಹೆಂಡ ಕುಡಿಸಿ ವಂಚಿಸು. ಇದೇ ನಿನಗೆ ಪ್ರಗತಿಯಾದ ಮಾರ್ಗ ಎಂದು ಒಬ್ಬಾಕೆ ತನ್ನ ಮಗಳಿಗೆ ನಾಲ್ಕು ದಿಕ್ಕುಗಳನ್ನು ಹೇಳುವಂತೆ (ಹದಿನಾಲ್ಕು) ದಿಕ್ ದೇವತೆಗಳನ್ನು ಹೇಳಿದಳು. ೫೦. ಅಂಗೈ ಚಿಗುರಿನಂತೆ, ತುಟಿಗಳು ಹವಳದಂತೆ ಇದ್ದುವು ; ಕಣ್ಣುಗಳು ಕನ್ನೈದಿಲೆಯನ್ನು ಮುಖ ಚಂದ್ರನನ್ನು ಹೋಲುತ್ತಿದ್ದುವು. ಮೊಲೆಗಳು ಪರ್ವತದಂತೆ ಗಾತ್ರವಾಗಿದ್ದುವು. ಭೂಮಿಯಂತೆ ಶಾಂತಸ್ವಭಾವ. ಅವರ ಮಾತು ಶುಭ ವಚನಕ್ಕೆ ಹೋಲುತ್ತಿತ್ತು. ಅವರು ನಾಗವೇಣಿಯರು. ಅವರ ಪಾದಗಳು ಕಮಲ ದಂತಿದ್ದುವು. ಹೊಕ್ಕುಳ ಮೇಲಿನಿಂದ ಎದೆಯವರೆಗಿನ ಕೂದಲು ಸರ್ಪದ ಹೆಡೆಯಲ್ಲಿರುವ ಚಿಹ್ನೆಯಂತೆ(?) ಇತ್ತು. ಇವುಗಳಿಗೆ ಹೋಲಿಕೆಯಾಗುವಂತಹ ಸಕಲ ಗುಣ ಶೀಲಗಳಿಂದ ಕೂಡಿದ್ದ ತರುಣಿಯರು ಅಲ್ಲಲ್ಲಿ ಕಂಗೊಳಿಸುತ್ತಿದ್ದರು. ೫೧. ಎಲೈ ಚಂಚಲನೇತ್ರೆಯೆ ನಿನ್ನ ಮುಂಗುರುಳಿನಲ್ಲಿ ಬಿಲ್ಲಿನ ಎದೆಯನ್ನೂ, ಹುಬ್ಬಿನಲ್ಲಿ ಬಿಲ್ಲನ್ನೂ, ಅಂಗೈಯಲ್ಲಿ ಬಾಣವನ್ನೂ, ಕಣ್ಣಿನಲ್ಲಿ ಶಸ್ತ್ರವನ್ನೂ, ಘನಕುಚಗಳಲ್ಲಿ ಚಕ್ರವಾಕಪಕ್ಷಿಗಳನ್ನೂ, ಮಾತಿನಲ್ಲಿ ಗಿಳಿಗಳನ್ನೂ, ಇಂಪಾದ ಧ್ವನಿಯಲ್ಲಿ ಕೋಗಿಲೆಗಳನ್ನೂ, ನಡಿಗೆಯಲ್ಲಿ ಹಂಸೆಯನ್ನೂ—ಈ ರೀತಿ ನಿನ್ನ ಅಂಗಾಂಗಗಳಲ್ಲಿಟ್ಟು ಸುಮಬಾಣನಾದ ಮನ್ಮಥನು ಎಲ್ಲಿಹೋದನೋ ಎಂದು ಒಬ್ಬ ಮುಗ್ಧೆ ತನ್ನ ಪ್ರಿಯಸಖಿಯನ್ನು ಕುರಿತು



CC-0. Jangamwadi Math Collection. Digitized by eGangotri

ನಿನಗರಸನೀತನಿವನಂ ಕಾಯದಿರು ತರಳೆ
ತನು ಸೋಂಕೆ ಸೋಂಕೆ ಸುಖಿಸುವ ಸೊಬಗನಿವ ನಿನ್ನ
ಮನಕೆ ಸರಿಪೋಗದಾತಂ ಮಹಾಕೀರ್ತಿಯನ್ನನುದಿನಂ ವಿನಯಪರನು
ಮನಸಿಜಕಲಾನಿಪುಣನೀತನಿರೊರ್ವ ನ
ಲ್ಲನನಪೇಕ್ಷಿಸಬಾರದೆಂದು ವಿಟನಂ ಜರಿದು
ಮನವೊಲ್ದು ಕೊಂಡಾಡುವಂತೆ ನಾಯಕಿಗೆ ಸಖಿ ಬೋಧಿಸಿದಳಕ್ಕರಿಂದೆ ೫೨

ಒಲಿದ ಬಳಿಕರ್ಥವೀವನೆ ವಿಟಂ ನಿನಗೆ ಹೇ
ರಳವಾಗಿ ಮುನಿಸ ತಿಳಿಪುವನೆ ಜಾಣಂ ಮನೆಗ
ಳೊಳಗಿರ್ದೊಡಂ ಬರ್ಪುದೇವೊತ್ತೆ ಕಳವಿನೊಳ್ ನಡೆವುದೇ ಸುಖದಸುಗ್ಗಿ
ತಲೆದೋರುತಿರ್ಪುದೇ ಮಚ್ಚು ನಿನಗೆಲಗೆಯೆ
ನ್ನೊಳಗೆ ವಂಚನೆಯೆಯೆಂದೊರ್ವ ಸೂಳೆಗೆಯವಳ
ಕೆಳದಿ ಚದುರಿಕೆ ಬೆಡಗಿನಿಂ ಹಿತವ ಬಂಧ್ದಿಯಂ ಪೇಳಿದವಳದೇನೆಂಬೆನು ೫೩

ಅಧರವರುಣಮನಕ್ಷಿಗಂ ಬಿದಿರ್ಪುದಿಲ್ಲ ಕೇ
ಶದ ಪಾಳಿಯಂ ಕೆದರ್ಪುದಿಲ್ಲ ಕುಚಕುಂಭವಂ
ಪುದಿದ ಕುಂಕುಮಮುದಿರ್ಪುದಿಲ್ಲ ನಿನ್ನೀ ತೊಡೆಗಳೊಮ್ಮೆಯುಮುದಿರ್ಪುದಿಲ್ಲ

ಹೇಳಿದಳು. ೫೨. ಇವನು ನಿನಗೆ ಒಡೆಯನು. ತರಳೆ, ಇವನನ್ನು ಕಾಯಬೇಡ. ಇವನು ತರುಣಿಯಾದವಳ ದೇಹ ಸೋಕಿದರೆ ಅಷ್ಟರಲ್ಲಿಯೇ ಸುಖಪಡುವ ಸೊಗಸುಗಾರ. ಇವನು ನಿನ್ನ ಮನಸ್ಸಿಗೆ ಸರಿಹೋಗದವನು. ಇವನು ಮಹಾಕೀರ್ತಿಶಾಲಿ, ಯಾವಾಗಲೂ ವಿನಯವಂತ, ಕಾಮಕಲಾನಿಪುಣ, ರಸಿಕ. ಇವನಿದ್ದರೂ ಬೇರೊಬ್ಬನನ್ನು ಅಪೇಕ್ಷಿಸ ಬಾರದು ಎಂದು ಆ ವಿಟನನ್ನು ಜರೆಯುತ್ತಲೂ ಮತ್ತೊಂದು ಬಾರಿ ಕೊಂಡಾಡುತ್ತಲೂ ಇರುವಂತೆ ಒಬ್ಬ ಸಖಿಯು ತನ್ನ ನಾಯಕಿಗೆ ಬೋಧಿಸಿದಳು. ೫೩. ಪ್ರೀತಿಸಿ ಅನಂತರ ಹಣ ಕೊಡುವವನೆ ವಿಟ. ನೀನು ಕೋಪಗೊಂಡಾಗ ಸಮಾಧಾನಪಡಿಸುವವನೇ ಬುದ್ಧಿವಂತ. ನೀನು ಸುಮ್ಮನೇ ಮನೆಯಲ್ಲಿದ್ದರೆ ಹಣ ದೊರೆಯುತ್ತದೆಯೇ ? ಕಳ್ಳ ತನದಲ್ಲಿ ಸುಖಪಡುವುದೇ ಸುಗ್ಗಿ. ಮೆಚ್ಚಿಕೊಳ್ಳುವುದೇ ಮೆಚ್ಚುಗೆ ನಿನಗೆ. ಎಲೆ, ನನ್ನನ್ನೇ ನೀನು ವಂಚಿಸುತ್ತೀಯ ? ಎಂದು ಒಬ್ಬ ಸೂಳೆಗೆ ಅವಳ ಚತುರಳಾದ ಸ್ನೇಹಿತೆ ವೈಯಾರದಿಂದ ಹಿತವಾದ ಬುದ್ಧಿಯನ್ನು ಹೇಳಿದಳು. ೫೪. ತುಟಿಯ ಕೆಂಪು ಕಣ್ಣಿಗೆ ಹರಡುವುದಿಲ್ಲ. ಕೂದಲಿನ ಸಾಲು ಚೆದುರುವುದಿಲ್ಲ. ನಿನ್ನ ಕುಚಕುಂಭಗಳ ಮೇಲೆ ಹಚ್ಚಿ ಕೊಂಡ ಕುಂಕುಮವು ಉದುರುವುದಿಲ್ಲ. ನಿನ್ನ ಈ ತೊಡೆಗಳು ಒಮ್ಮೆಯಾದರೂ ನಡು

CC-0. Jangamwadi Math Collection. Digitized by eGangotri

ಇದು ಗುಣವೆ ಸೂಳೆತನಕಕಟ ನೀನಾರ್ಗೆ ಮೆ
ಚ್ಚಿದೆಯೊ ಪೇಳ್ ಕೊಟ್ಟವರನಿಂತು ಕರೆದೊಡೆ ಮುಂದೆ
ಬದುಕಿಲ್ಲವೆಂದೊರ್ವ ಮುದಿಕಿ ಮಗಳಂ ಪುರ್ವಿನಿಂ ಜರ್ವಿ ಕೋಪಿಸಿದಳು ೫೪

ಮುಗುದೆ ಕೇಳ್ ಬಯಕೆ ಚಿಂತಾವೃದ್ಧಿ ಸುಯಿಗಳೊಗು
ಮಿಗೆ ಪ್ರಿಯಸ್ತುತಿ ತಾಪಮಶನತ್ಯಜಾ ಮಾನ
ವಿಗತಿ ಕಾಂತಾನ್ವೇಷಣಾಗವಂ ಕಂಠಗತಪ್ರಾಣಮಾ ಮೃತಿಯೆಂಬಿವು
ಮಿಗೆ ದಶಾವಸ್ಥೆಯಿವನೊಂದುಮಂ ನೀಂ ಮನಂ
ಬುಗಿಸದಿರ್ ಬಾಹಿರಂಗದೊಳಂಟೆನಿಸಿ ತೋರಿ
ತೆಗೆಸು ವಸ್ತುಗಳನೆಂದೊರ್ವ ಮುದಿಸೂಳೆಯಾ ಮಗಳನುರೆ ಬೋಧಿಸಿದಳು ೫೫

ಸರಸಿಜಾನನೆ ಪೇಳ್ ಸುಧಾಂಶುಯಶ ಕೇಳ್ ಕುಮುದ
ವರನೇತ್ರೆ ಪೇಳ್ ಬಾಲಸೂರ್ಯಪ್ರಕಾಶ ಕೇಳ್
ಕರಿಕುಂಭಕುಚೆ ಪೇಳ್ ಮಹಾಪುರುಷಸಿಂಹ ಕೇಳ್ ತುಂಬಿಗುರುಳಬಲೆ ಪೇಳು
ವರಚಂಪಕಾಮೋದ ಕೇಳ್ ಹಂಸಗಮನೆ ಪೇಳ್
ಪರಮಘನಗಂಭೀರನಿನದ ಕೇಳೆಂದೊರ್ವ
ತರುಣಿಗೊತ್ತೆಯನೀಯದಾ ವಿಟಂ ಬೇಗದಿಂ ತಿರುಗಿದನವೇಂ ಚಿತ್ರವೋ ೫೬

ಗುವುದಿಲ್ಲ. ಇದು ಸೂಳೆಯತನಕ್ಕೆ ಯೋಗ್ಯವೇ? ಅಯ್ಯೋ! ನೀನು ಯಾರನ್ನು ಮೆಚ್ಚಿದ್ದೀಯೆ ಹೇಳು. ಹಣ ಕೊಟ್ಟವರನ್ನು ಈ ರೀತಿ ನಡೆಸಿಕೊಂಡರೆ ಮುಂದೆ ಜೀವಿಸುವುದು ಕಷ್ಟ ಎಂದು ಮುದುಕಿಯೊಬ್ಬಳು ತನ್ನ ಮಗಳನ್ನು ತನ್ನ ಹುಬ್ಬಿನಿಂದ ಜಂಕಿಸಿ ಅವಳ ಮೇಲೆ ಕೋಪ ಮಾಡಿದಳು. ೫೫. ಮುಗ್ಧೆಯೇ ಕೇಳು,ಬಯಕೆ, ಅತಿಯಾದ ಚಿಂತೆ, ಅಧಿಕವಾಗಿ ನಿಟ್ಟುಸಿರು ಬಿಡುವುದು, ಪ್ರಿಯನನ್ನು ಹೊಗಳುವುದು,'ಪರಿತಾಪ, ಊಟ ಬಿಡುವುದು, ಮಾನ ಬಿಡುವುದು, ಪ್ರಿಯನನ್ನು ಹುಡುಕಿಕೊಂಡು ಹೋಗುವುದು, ಸಾಯುವಂತೆ ಮಾಡುವುದು, ಸಾವು, ಇವು ಹತ್ತು ಅವಸ್ಥೆಗಳು. ಇವುಗಳಲ್ಲಿ ಒಂದಕ್ಕೂ ನೀನು ಅವಕಾಶ ಕೊಡಬೇಡ. ಕೇವಲ ಹೊರನೋಟಕ್ಕೆ ಇವೆಲ್ಲವೂ ನಿನ್ನಲ್ಲಿ ಇವೆಯೆಂದು ತೋರಿಸಿ ಅವರಿಂದ ವಸ್ತುಗಳನ್ನು ತೆಗೆದುಕೋ ಎಂದು ಮುದಿಸೂಳೆಯೊಬ್ಬಳು ಮಗಳಿಗೆ ಚೆನ್ನಾಗಿ ಬೋಧಿಸಿದಳು. ೫೬. ಒಬ್ಬ ವಿಟನು ತರುಣಿಯೊಬ್ಬಳ ಬಳಿಗೆ ಬಂದು ಅವಳಿಗೆ ಒತ್ತೆಯ ಹಣವನ್ನು ಎಷ್ಟು ಕೊಡಬೇಕೆಂದು ಕೇಳಿದನು. ಆಕೆಯೂ ಅವನಿಗೆ ಉತ್ತರವನ್ನಿತ್ತಳು. ಆದರೆ ಎಲ್ಲವೂ ಅಪೂರ್ಣ. ಸಂಭಾಷಣೆ ಚಮತ್ಕಾರ—ಎಲೈ ಸರಸಿಜಾನನೇ, ಹೇಳು. ಚಂದ್ರನಂತೆ ಕೀರ್ತಿಶಾಲಿಯಾದವನೇ, ಕೇಳು. ಕುಮುದಪುಷ್ಪದಂತೆ ಸುಂದರವಾದ ಕಣ್ಣುಗಳುಳ್ಳವಳೇ, ಹೇಳು. ಬಾಲಸೂರ್ಯನಂತೆ ಪ್ರಕಾಶಿಸುವವನೇ, ಕೇಳು. ಆನೆಯ ಕುಂಭಸ್ಥಳಗಳಂತೆ ಕುಚಗಳುಳ್ಳವಳೇ, ಹೇಳು. ಮಹಾಪುರುಷಸಿಂಹನೇ ಕೇಳು. ತುಂಬಿಗಳಂತೆ ಮುಂಗುರುಳುಳ್ಳ ಅಬಲೆಯೇ, ಕೇಳು. ಶ್ರೇಷ್ಠವಾದ ಚಂಪಕದಂತೆ ಪರಿಮಳಭರಿತನಾದವನೇ ಕೇಳು. ಹಂಸೆಯಂತೆ ನಡಿಗೆಯುಳ್ಳವಳೇ ಹೇಳು. ಮೇಘಗಳಂತೆ

CC-0. Jangamwadi Math Collection. Digitized by eGangotri

ಹರನಂತೆ ಧನದಸಖಿ ನವರತ್ನದಂತೆ ಗುಣ
ವಿರಹಿತೆ ಸುರಾಚಾರ್ಯನಂತೆ ಗತಸೌಮ್ಯ ಸ
ದ್ವರುಷಋತುನಿಮ್ನಗಾರಯದಂತೆ ರಹಿತಾನುಕೂಲೆ ಘನವಜ್ರದಂತೆ
ನಿರಸೆ ರವಿಯಂತೆಯಾಶಾಪ್ರದರ್ಶಿತೆ ಕಲಾ
ಧರನಂತೆ ವಿಶ್ರುತಕಳಂಕಿಯವಳೆಂದೊರ್ವ
ತರುಣಿಯಂ ತನ್ನಾಪ್ತಸಖನೊಡನೆ ಕೊಂಡಾಡುವಂತೆ ದೂರಿದನೊರ್ವನು ೫೭

ಕುಡಿವುರ್ಬುಗಳ್ ಸುರಪಧನುವನಾ ಪೊಳೆವ ಕಣ್
ಗಡೆ ಮಿಂಚಿನೇಳ್ಗೆಯುಂ ತೆರೆಗಳುಂ
ಕಡುತೋರಮುಡಿ ಮುಗಿಲಸಧರಮತಿಸಂಚಯುಂ ತನುಮಧ್ಯಮದು ಪುಸಿಯುನು
ಬಿಡದೆ ಮಿಕ್ಕುಂ ಮಹಾಚಂಚಲಮ ರೂಪಾದ
ಮಡದಿಯರ ಮನ ವಚನ ಕಾಯ ನಿಜಮುಂ ಮಹಾ
ದೃಢಮೆಂದು ನಂಬುವಂ ಮೂಢನೆಂದೊರ್ವ ಜಾಣಂ ಕೆಳೆಯನೊಳ್ ನುಡಿದನು ೫೮

ಗಂಭೀರವಾದ ಧ್ವನಿಯುಳ್ಳವನೇ, ಕೇಳು — ಎಂಬುದಾಗಿ ಆ ತರುಣಿಗೆ ಒತ್ತೆಯ ಹಣವನ್ನೇ ಕೊಡದೆ ಒಬ್ಬ ವಿಟನು ತ್ವರಿತದಿಂದ ಹಿಂದಿರುಗಿದನು. ೫೭. ಒಬ್ಬ ಇಲ್ಲಿ ತನ್ನ ಆಪ್ತಸ್ನೇಹಿತನೊಂದಿಗೆ ಓರ್ವ ತರುಣಿಯ ಗುಣಗಳ ವರ್ಣನೆಯನ್ನು ಮಾಡುತ್ತ ಅವಳನ್ನು ಶ್ರೇಷ್ಠರಾದ ದೇವ-ದೇವತೆಗಳಿಗೆ ಮತ್ತು ವಸ್ತುಗಳಿಗೆ ಹೋಲಿಸಿ ಅವಳ ಗುಣವನ್ನು ಎತ್ತಿಹಿಡಿಯುವಂತೆ ತೋರುತ್ತಾನೆ. ಆದರೆ ಅವನು ನಿಜವಾಗಿಯೂ ಅವಳಲ್ಲಿರುವ ಅವಗುಣಗಳನ್ನು ಎತ್ತಿತೋರಿಸಿ ದೂರುತ್ತಿದ್ದಾನೆ. ಪರಮಾತ್ಮ ಶಿವನು ಕುಬೇರನ ಸ್ನೇಹಿತನಾಗಿದ್ದರೂ ಸಹ ಹಣವಿಲ್ಲದ ಭಿಕಾರಿ. ಅದರಂತೆಯೇ ಈಕೆಯೂ ಸಹ. ಈಕೆ ನವರತ್ನಕ್ಕೆ ಸಮನಾದರೂ ಯಾವ ಗುಣವೂ ಇಲ್ಲದವಳು, ಬೃಹಸ್ಪತಿಯಲ್ಲಿ ಎಷ್ಟು ಕೋಪವಿದೆಯೋ ಅಷ್ಟೇ ಇವಳೂ ಕೋಪಿಷ್ಠಳು, ಒಳ್ಳೆಯ ವರ್ಷಋತುವಿನಲ್ಲಿ ನದಿಯು ತುಂಬಿ ಹರಿಯುತ್ತಿದ್ದರೂ ಹೇಗೆ ಪ್ರಯಾಣ ಮೊದಲಾದುವಕ್ಕೆ ಅನುಕೂಲವಿಲ್ಲದೆ ಇರುತ್ತದೆಯೋ ಆ ರೀತಿ ಈಕೆಯೂ ಅನನುಕೂಲೆ. ವಜ್ರಸಮಾನಳಾದರೂ ನೀರಸಳಾದವಳು. ಸೂರ್ಯನು ಎಲ್ಲ ದಿಕ್ಕುಗಳನ್ನೂ ಪ್ರದರ್ಶಿಸುವಂತೆ ಇವಳು ತನ್ನೆಲ್ಲ ಆಸೆಯನ್ನೂ ಪ್ರದರ್ಶಿಸುತ್ತಾಳೆ. ಚಂದ್ರನಲ್ಲಿ ಪ್ರಸಿದ್ಧವಾದ ಕಳಂಕವಿರುವಂತೆ ಇವಳೂ ಪ್ರಖ್ಯಾತಿಹೊಂದಿದ ಕಳಂಕಿನಿ. ೫೮. ಕುಡಿಹುಬ್ಬುಗಳು ಕಾಮನಬಿಲ್ಲು, ಹೊಳೆಯುವ ಕಣ್ಣುಗಳು ಪ್ರಕಾಶವಾದ ಮಿಂಚು, ಹೊಟ್ಟೆಯ ಮೇಲಿನ ಮಡಿಕೆಗಳೇ ತೆರೆಗಳು, ದೊಡ್ಡದಾದ ತುರುಬು ಕಪ್ಪಾದ ಮೋಡ, ತುಟಿ ರಸಭರಿತವಾದುದು, ಅತಿ ಸಣ್ಣದಾದ ನಡು, ಇವುಗಳೊಂದಿಗೆ ಅತಿಯಾದ ಚಂಚಲಸ್ವಭಾವವೇ ರೂಪಾದಂತೆ ಇರುವ ಸ್ತ್ರೀಯರ ಮನಸ್ಸು ಮಾತು ದೇಹ ನಿಜಸ್ವಭಾವ ಶಾಶ್ವತವಾದುದು ಎಂದು ನಂಬುವವನು

CC-0. Jangamwadi Math Collection. Digitized by eGangotri

ಗಳರವಂ ವಕ್ಷತಾಡಿತನಿಸ್ವನಂ ಮಂಚ
ದುಲಿವು ಕರಕಂಕಣಧ್ವನಿಯುಮುರ್ವ ಸದ್ವಶಪವ
ತಳನಿನಾದಂ ಚುಂಬನಸ್ವನಮುರೋರ್ವರೊಳು ಲಲ್ಲೆಗಳ ಸುಣ್ಣನಿ
ನಿಲದುಣ್ಮುವುಸಿರು ತವಕಂ ಹೂಂಕೃತಾರವಂ
ಗಳೊಳ್ಳೆದೆ ಕಾಮವೇದವನೋದುತಿರ್ಪವ
ರ್ಗಳ ಮಠಂಗಳವೊಲಲ್ಲಲ್ಲಿಗೆ ಪ್ರಕಾಶಸಂಭೋಗಿಗಳ್, ಕರಮೆಸೆದರು ೫೯

ತಣ್ಣೆಲರ ಸೋಂಕೆನಲ್ ಸೋಂಕಿಯುನಿಮಿಷರಂತ
ಕಣ್ಣೊಳಂ ಕಣ್ಣನಿಟ್ಟಳಿಯಂತಿರಪ್ಪಿ ಮಾ
ವಣ್ಣನರಗಿಳಿ ಸವಿವೊಲಧರಮಂ ಸವಿದು ಜಾರುವ ನಿರಿಗಳಂ ತೊಲಗಿಸಿ
ಗಿಣ್ಣಲಂತಪ್ಪ ಮೊಲೆಯಂ ಮುಟ್ಟಿ ಲಜ್ಜೆಸುವ
ತಿಣ್ಣಮಂ ಬಿಡಿಸಿ ನಾಣ್ಗಾಣಮಂ ತಡವಿ ಮೆಯ್
ಬಣ್ಣಗೆಡದಂತೊಂದುತಿರ್ಪ ಪ್ರಚ್ಛನ್ನಸಂಭೋಗಿಗಳ್ ಕಣ್ಗೆಸೆದರು ೬೦

ಬರಸೆಳೆದೊಡಮುರ್ದಪ್ಪಿ ಚುಂಬಿಸಲ್ ಕರಗಿ ಕಾ
ತರಿಸಲೊಡನೊಡನೆ ಮೇಲ್ವಾಯ್ದು ಕೂಡಲ್ ಜುಮ್ಮ
ನಿರದೊಸರಿ ತೆಗೆದತ್ತಲೊದಗಿ ತಳಮೇಲಿದಿರ್ಗಳೊಳ್ ಪಿಂಚುಮುಂಚೆನಿಸದೆ

ಮಹಾಮೂರ್ಖನೆಂದು ಒಬ್ಬ ಜಾಣ ತನ್ನ ಸ್ನೇಹಿತನಿಗೆ ಹೇಳಿದನು. ೫೯. ಕುತ್ತಿಗೆಯಿಂದ ಹೊರಡುವ ವಿಚಿತ್ರ ಧ್ವನಿ. ಎದೆಗೆ ಎದೆತಾಗಿ ಅದರ ಬಡಿತ ದಿಂದ ಉಂಟಾದ ಶಬ್ದ, ಮಂಚದ ಕಿರಿಕಿರಿಧ್ವನಿ, ಕೈಕಡಗದ ಕಿಣಿಕಿಣಿ ಶಬ್ದ, ಅಪ್ಪಿಕೊಂಡಾಗ ಅಂಗಾಲುಗಳನ್ನು ಜಾಡಿಸುವ ಧ್ವನಿ, ಪರಸ್ಪರ ಮುತ್ತು ಕೊಡುವ ಧ್ವನಿ, ಒಬ್ಬೊಬ್ಬರಲ್ಲಿಯೂ ಲಲ್ಲೆಮಾತಿನ ಮೃದುಧ್ವನಿ, ತಡೆಯದೇ ಬರುವ ಉಸಿರು, ತವಕ, ಹೂಂಕಾರಧ್ವನಿ, ಇವೆಲ್ಲವುಗಳಿಂದ ಕೂಡಿ ಕಾಮ ವೇದವನೋದುತ್ತಿರುವವರ ಮಠಗಳಂತೆ, ಅಲ್ಲಲ್ಲಿ ಸಂಭೋಗಸುಖವನ್ನು ಅನುಭವಿಸು ತ್ತಿದ್ದ ಪ್ರಕಾಶ ಸಂಭೋಗಿಗಳು ವಿಶೇಷವಾಗಿ ಕಾಣುತ್ತಿದ್ದರು. ೬೦. ತಂಪಾದ ಗಾಳಿಯ ಸೋಂಕೊ ಎನ್ನುವಂತೆ ಸೋಕುತ್ತ, ದೇವತೆಗಳಂತೆ ದೃಷ್ಟಿಯಲ್ಲಿ ದೃಷ್ಟಿಯನ್ನು ನೆಟ್ಟು, ದುಂಬಿಗಳು ಹೂವನ್ನಪ್ಪುವಂತೆ ಅಪ್ಪಿಕೊಂಡು, ಮಾವಿನ ಹಣ್ಣುಗಳನ್ನು ಅರ ಗಿಳಿಗಳು ರುಚಿ ನೋಡುವಂತೆ ತುಟಿಗಳನ್ನು ಮುತ್ತಿಟ್ಟು ಸವಿಯುತ್ತ, ಜಾರುತ್ತಿರುವ ಸೆರಗನ್ನು ಸರಿಮಾಡಿಕೊಳ್ಳದೆ ಹಾಗೆಯೇ ಜಾರಲು ಬಿಟ್ಟು,ಗಿಂಡಿಯಂತಹ ಮೊಲೆಗಳನ್ನು ಮುಟ್ಟುತ್ತ, ಅತಿಯಾದ ನಾಚಿಕೆಯನ್ನು ದೂರ ಮಾಡುತ್ತ, ಗುಪ್ತಾಂಗವನ್ನು ನೇವರಿಸುತ್ತ, ಮೈಯ ಅಂದವು ಕೆಡದಂತೆ ಒಂದುಗೂಡುತ್ತಿದ್ದ ಪ್ರಚ್ಛನ್ನ ಸಂಭೋಗಿ ಗಳು ಕಣ್ಣಿಗೆ ಕಂಡರು. ೬೧. ಸಮೀಪಕ್ಕೆ ಎಳೆದು ಅಪ್ಪಿಕೊಂಡು ಮುತ್ತಿಡಲು ಹೆಂಗಸರು ಕರಗಿ ( ಸಂಭೋಗಕ್ಕಾಗಿ ) ಕಾತರಿಸಲು, ಆ ಕೂಡಲೇ ಮೇಲೆರಗಿ ಸಂಭೋಗಿ ಸಲು ಕ್ಷಣವೂ ತಡೆಯದೆ ದ್ರವಿಸುತ್ತಿದ್ದರು. ಎತ್ತ ತೆಗೆದರೆ ಅತ್ತ ನಲ್ಲರ ವಶವಾಗಿ

CC-0. Jangamwadi Math Collection. Digitized by eGangotri

ಸರಿಯೆನಿಸಿ ಕೂಡಿ ಮೂರ್ಛೆಗೆ ಸಂದ ಸಮಸುಖದ
ನೆರವಿಯಿದು ಕಾವಜಾತ್ರೆಗೆ ಬಂದು ಮೆಯ್ಯಿಕ್ಕಿ
ಸುರತಸಿದ್ಧಾಂಜನವ ಬಯಸಿ ಭಜನೆಗೆ ಬೀಳ್ವರೋಯೆನಲ್ ಕಣ್ಗೆಸೆದರು ೬೧

ಸರಿದ ತೆರೆಯೆನೆ ಲಜ್ಜೆ ತೊಲಗೆ ಪುಷ್ಪಾಂಜಲಿಯು
ದೊರೆಯೆನಲ್ ಮುಡಿಯಲರ್ ಸೂಸೆ ತಲೆ ಬಾಜಿಸುವ
ಮುರಜವೆನೆ ತಾಟಿತಕಟಸ್ವನಂ ಪೊಣ್ಮೆಯೊತ್ತುವ ತಾಳಮೆನಲವರ್ದಾ
ಕರಘಾತಮೊಪ್ಪೆ ಪಾಡುವ ಗೀತಮೆನೆ ಗಳ
ಸ್ವರಮೆಸೆಯೆ ಕಾಂತಾಂಗರಂಗದೊಳ್ ಮತ್ತೊರ್ವ
ತರುಣಿ ರತಿಲಾಸ್ಯಮಂ ಕಾವಂಗೆ ತೋರ್ಪಳೆನೆ ಪುರುಷಾಯಿತದೊಳೆಸೆದಳು ೬೨

ವಲ್ಲಭಧ್ವಜಮೆಂಬ ಲಾಕುಳದ ಕೋಲ ತುದಿ
ಯಲ್ಲಿ ನೆರೆ ಕಾಮಯೋಗಾಭ್ಯಾಸಮಂ ಮಾಳ್ಪ
ಸಲ್ಲಲಿತ ಜೋಗಿಣಿಯೊ ಪ್ರಿಯದಂಡಮೆಂಬ ಗಳೆದುದಿಯು ಮೇಲಾಡುತಿರ್ಪ
ಕೊಲ್ಲಟಿಗವೆಣ್ಣೊ ಸ್ಮರಕೇತನದ ತುದಿಯು ಪಟ
ದಲ್ಲಿ ಪೊನ್ನೀರೊಳುರ ಚಿತ್ರಿಸಿದ ಬೊಂಬೆಯೆನ
ಲಲ್ಲಿಯುಪರತಿಯಾದಿ ಮಧ್ಯಾಂತದಬಲೆಯೊರ್ವಳ್ ಕಣ್ಗೆ ಸೊಗಯಿಸಿದಳು ೬೩

ಕೆಳಗೆ ಮೇಲೆ, ಎದುರು ಬದುರು, ಹಿಂದು ಮುಂದೆ ಎನಿಸದೆ ಸರಿಯಾಗಿ ಕೂಡಿ ಮೂರ್ಛೆಯನ್ನು ಹೊಂದಿ ಸಮಸುಖವನ್ನು ಪಡೆದ ನಲ್ಲ ನಲ್ಲೆಯರ ಈ ರೀತಿಯ ಗುಂಪು ಕಾಮನಜಾತ್ರೆಗೆ ಬಂದು ನಮಸ್ಕರಿಸಿ ಸಂಭೋಗಸಿದ್ಧಾಂಜನವನ್ನು ಅಪೇಕ್ಷಿಸಿ ಭಜನೆಯ ಆವೇಶಕ್ಕೆ ಒಳಗಾಗಿರುವರೋ ಎಂಬಂತೆ ತೋರಿದರು. ೬೨. ತೆರೆಯನ್ನು ಸರಿಸಿದಂತೆ ನಾಚಿಕೆ ಹೊರಟುಹೋಯಿತು. ಬೊಗಸೆಯಿಂದ ಹೂ ಚೆಲ್ಲಿದಂತೆ ತುರುಬಿನಲ್ಲಿದ್ದ ಹೂ ಕೆದರಿತು. ವಿಶೇಷವಾಗಿ ಬಾರಿಸುವ ಮದ್ದಲೆ ಎನ್ನುವಂತೆ ಸೊಂಟಗಳು ಒಂದಕ್ಕೊಂದು ತಾಟಿಸಿದ ಶಬ್ದ ಹುಟ್ಟುತ್ತಿತ್ತು. ಒತ್ತುವ ತಾಳದ ಶಬ್ದದಂತೆ ಸೇರಿದ ಕೈಗಳ ಶಬ್ದ ತೋರುತ್ತಿತ್ತು. ಹಾಡುವ ಗೀತೆಯಂತೆ ಕುತ್ತಿಗೆಯಲ್ಲಿ ಹೊರಡುತ್ತಿದ್ದ ಧ್ವನಿ ಕೇಳುತ್ತಿತ್ತು. ಈ ರೀತಿಯಾಗಿ ಒಬ್ಬ ತರುಣಿಯು ತನ್ನ ಪ್ರಿಯನ ದೇಹವೆಂಬ ರಂಗಸ್ಥಳದಲ್ಲಿ ಕಾಮನಿಗೆ ರತಿಶೃಂಗಾರ ನರ್ತನವನ್ನು ನಟಿಸುವಂತೆ ಪುರುಷನ ಆಸರೆಯಲ್ಲಿ ಸಿಕ್ಕಿಕೊಂಡು ಕಂಗೊಳಿಸಿದಳು. ೬೩. ಪ್ರಿಯನ ಜನನೇಂದ್ರಿಯವೆಂಬ ಯೋಗದಂಡದ ತುದಿಯಲ್ಲಿ ವಿಶೇಷವಾಗಿ ಕಾಮಯೋಗಾಭ್ಯಾಸವನ್ನು ಮಾಡುವ ಚೆಲುವಾದ ಜೋಗಿಣಿಯೋ, ತನ್ನ ಪ್ರಿಯನ ಜನನೇಂದ್ರಿಯ ಎಂಬ ಕೋಲಿನ ತುದಿಯ ಮೇಲೆ ಆಡುತ್ತಿರುವ ದೊಂಬರ ಹೆಣ್ಣೋ, ಮನ್ಮಥನ ಬಾವುಟದ ತುದಿಯ ಬಟ್ಟೆಯಲ್ಲಿ ಬಂಗಾರದ ನೀರಿನಲ್ಲಿ ಚೆಲುವಾಗಿ ಚಿತ್ರಿಸಿದ ಬೊಂಬೆಯೋ ಎನ್ನುವಂತೆ ಉಪರತಿಯ ಪ್ರಾರಂಭ, ನಡುವೆ ಮತ್ತು ಕೊನೆಯಲ್ಲಿದ್ದ ತರುಣಿ ಒಬ್ಬಳು ಕಣ್ಣಿಗೆ ಮನೋಹರವಾಗಿ

CC-0. Jangamwadi Math Collection. Digitized by eGangotri

ಕೆದರ್ದ ತಲೆನವಿರರವೆ ಮುಗಿದ ಕಣ್ಗಳ್ ಜೋಲ್ದ
ವದನದಿಂ ಭುಜದೊಳೊರಗಿದ ಕೊರಲ್ ತೆಳ್ದುಟಿಯು
ತುದಿ ಮಿಡುಕದಂಗಂ ವರಾಂಗಚುಂಬನದ ತಂಬುಲರಸಂವೆರಸಿ ಸೋರ್ವ
ಮದನಾಂಬುವೇ ರಕ್ತಮೆನೆ ಸ್ಮರಂ ತನ್ನ ಮಿಾ
ರಿದಳೊರ್ವಳಂ ತಂದು ಪುನ್ನಾಗಮಧ್ಯದಂ
ಡದ ಶೂಲದೊಳ್ ಬಸಿದನೆನಲುಪರಿಸುರತಮೂರ್ಛಿತೆ ಕಣ್ಗೆದೆಂ ಪಂದಳೋ ೭೪

ಆಲವಣ್ಣೆಂದಧರವಂ ಗಿಳಿ ಕರ್ದುಂಕಿದುದು
ಸೀಳಿದುದು ತೋಳ್ಗಳಂ ಕಳಹಂಸ ಸಾರಸಮ್ರ
ಣಾಳಮೆಂದುಂ ಚಂಚುವಿಂ ನಿನ್ನ ವಿರಹದಿಂ ಪೊರಳುತಿರೆ ನಿರಿಗುರುಳ್ಗಳ
ಸಾಲು ಕೆದರ್ದುದು ಹಾರವೋಸರಿಸಿತೆಂದೊರ್ವ
ಬಾಲೆ ಪ್ರಾಣೇಶನಂ ನೆರೆದಂತೆ ಕಳುಪಿ ತತ್
ಕಾಲರತಿಚಿಹ್ನಮಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತೆಂದಳು ೭೫

ತಂಗಾಳಿ ತೀಡೆ ತಿಂಗಳ್ ಮೂಡೆ ಮನಸಿಜಂ
ಸಿಂಗಾಡಿವಿಡಿಯೆ ಕೋಕಿಲೆ ನುಡಿಯೆ ವಿರಹದಿಂ
ದಂಗನೆ ಬಳಲ್ದಹಿಗಳಂ ದಿವಿಜರಂ ರುದ್ರನಂ ಕೂಡೆ ಕರಟಂಗಳ

ಕಂಡಳು. ೭೪. ಕೆದರಿದ ತಲೆಯ ಕೂದಲು, ಅರೆಮುಚ್ಚಿದ ಕಣ್ಣುಗಳು, ಜೋತುಬಿದ್ದ ಮುಖ, ಭುಜದ ಮೇಲೆ ಒರಗಿಕೊಂಡ ಕೊರಳು, ತೆಳುವಾದ ತುಟಿಯು ಕೂಡ ಅಲುಗದ ದೇಹ, ಗುಪ್ತಾಂಗವನ್ನು ಚುಂಬಿಸಿದಾಗ ತಾಂಬೂಲರಸದೊಡನೆ ಬೆರೆತು ಸೋರುವ ಸಂಭೋಗರಸವೇ ರಕ್ತವೆನ್ನುವಂತೆ ಮನ್ಮಥನು ತನ್ನನ್ನು ಅತಿಕ್ರಮಿಸಿದ ಒಬ್ಬಳನ್ನು ಕರೆ ತಂದು ಸುರಗಿಯ ಮರದ ಮಧ್ಯದಂಡದ ಶೂಲಕ್ಕೆ ಏರಿಸಿದನೋ ಎನ್ನುವಂತೆ ಎರಡನೇ ಬಾರಿ ಸಂಭೋಗಸುಖವನ್ನು ಅನುಭವಿಸಿ ಮೂರ್ಛೆಗೊಂಡ ಹೆಣ್ಣು ಕಣ್ಣಿಗೆ ಕಾಣಿಸಿದಳು. ೭೫. "ಆಲದ ಹಣ್ಣೆಂದು ತಿಳಿದು ಗಿಳಿಯು ನನ್ನ ತುಟಿಯನ್ನು ಕಚ್ಚಿತು. ಕಮಲದ ದಂಟೆಂದು ತಿಳಿದು ರಾಜಹಂಸವು ತನ್ನ ಕೊಕ್ಕಿನಿಂದ ನನ್ನ ತೋಳುಗಳನ್ನು ಸೀಳಿತು. ನಿನ್ನ ವಿರಹದಿಂದ ಹೊರಳಾಡುತ್ತಿರುವಾಗ ನನ್ನ ಬಾಚಿದ ತಲೆಗೂದಲಿನ ಸಾಲು ಕೆದರಿ ಹೋಯಿತು. ಹಾರವು ಪಕ್ಕಕ್ಕೆ ಸರಿಯಿತು" ಎಂದು ಓರ್ವ ತರುಣಿ ತನ್ನ ಪ್ರಿಯನನ್ನು ಕೂಡಿ, ಅವನನ್ನು ಕಳುಹಿಸಿದನಂತರ ಬಂದ ಮತ್ತೊಬ್ಬ ವಿಟನಿಗೆ, ಈ ಮೊದಲೇ ತನ್ನಲ್ಲಿ ಉಂಟಾಗಿದ್ದ ಸಂಭೋಗದ ಚಿಹ್ನೆಗಳನ್ನು ಕುರಿತು ಥಳಕುಬೀರುತ್ತ ಸುಳ್ಳು ಹೇಳಿದಳು. ೭೬. ತಂಗಾಳಿ ತೀಡಿತು. ತಿಂಗಳು ಮೂಡಿತು. ಮನ್ಮಥನು ತನ್ನ ಬಿಲ್ಲನ್ನು ಹಿಡಿದನು. ಕೋಗಿಲೆ ಕೂಗಿತು. ಆಗ ಹೆಂಗಸೊಬ್ಬಳು ವಿರಹದಿಂದ ಬಳಲಿದಳು. ಗಾಳಿಯನ್ನು ನುಂಗಿದ ಹಾವುಗಳನ್ನು, ಬೆಳದಿಂಗಳನ್ನು (ಅಮೃತಕಿರಣ) ಅರ್ಧ ಸೇವಿಸಿದ ದೇವತೆ

CC-0. Jangamwadi Math Collection. Digitized by eGangotri

ನುಂಗಿಯುರೆವೆಲ್ಲು ಸುಟ್ಟುಳಿಪಿ ರಕ್ಷಿಸಿದರೀ
ಪೆಂಗೊಲೆಯುರಿವರೆಂದು ಶಪಿಸಿಯುಂ ತಣಿಯದೆ ವಿ
ಹಂಗಪತಿಯಬ್ಬಿ ಪರಶಿವ ಬ್ರುಹ್ಮರುಂ ಬೈದಳೇನೆಂಬೆನೆಚ್ಚರಿಯಾಸು ೬೬

ವರಪುಷ್ಪತಲ್ಪಮಾ ಸರ್ಪದರ್ಪಂ ಸುಕ
ಸ್ತೂರಿಯ ಲೇಪಮದುರಿಯುರೂಪಮಾ ಚಂದನಂ
ನಿರುತಮತಿಬಂಧನಂ ಸಸಿಯ ಜೊನ್ನಂ ಬಿಸಿಯ ಬನ್ನಮಂತಾ ಮಾರುತಂ
ಸ್ಮರಧನುಜ್ಯಾರುತಂ ಸಖಿಯುರಾಳಾಪಂಗ
ಳುರುತರ ಪ್ರಳಾಪಮಾದುವು ವಿರಹತಾಪದಿಂ
ಹರಹರಾ ತಾಳ್ವಳೇ ತರಳೆಯೆನುತಂ ಸಖಿಯರರಸಿ ಚಿಂತಿಸುತಿರ್ದರು ೬೭

ಗಂಧಮಂ ಮುಡಿಸು ಪೂಮಂ ಪೂಸು ಮಂಚಮಂ
ತಂದು ತಳಿ ಪನ್ನೀರ್ಗಳಂ ಪಾಸು ವೀಣೆಯಂ
ನಿಂದು ಕತ್ತರಿಸಡಕೆಯಂ ನುಡಿಸು ಬೆಕ್ಕನೋದಿಸು ಗಿಳಿಯನತ್ತ ಪೊಡಿಸು
ಅಂದುಗೆಯ ಕೊರಳೊಳಿಡು ಕಾಲ್ಗಂಜನಮನೆಚ್ಚು
ಪಿಂದೆ ಮುಡಿಯಂ ಬೆಳಗು ದೀಪಮಂ ಕಟ್ಟು ನೀ
ನೆಂದೊರ್ವ ನಾರಿ ನಲ್ಲನಸಗಲ್ದು ವಿರಹವಿಕಳದೆಂಳು ನುಡಿದಳ್ ಸಖಿಯೊಳು ೬೮

ಗಳನ್ನು, ಮನ್ಮಥನನ್ನು ಸುಟ್ಟು ಮತ್ತೆ ಉಳಿಸಿದ ಶಿವನನ್ನು, ಕೋಗಿಲೆಗಳ ರಕ್ಷಕರಾದ ಕಾಗೆಗಳನ್ನು--ಇವರೆಲ್ಲ ಹೆಂಗಸರನ್ನು ಸಾಯಿಸುವ ಕೊಲೆಗಾರರೆಂದು ಶಪಿಸಿ. ಅಲ್ಲಿಗೂ ತೃಪ್ತಿಯಾಗದೆ ವಿಷ್ಣುವನ್ನೂ, ಸಮುದ್ರವನ್ನೂ, ಪರಶಿವನನ್ನೂ, ಬ್ರಹ್ಮನನ್ನೂ ನಿಂದಿಸಿ ದಳು! ೬೭. ವಿರಹತಾಪದಿಂದ ಶ್ರೇಷ್ಠವಾದ ಹೂವಿನ ಹಾಸಿಗೆ ಹಾವಿನ ಮೇಲೆ ಮಲಗಿದಂತೆ ನೋವನ್ನುಂಟುಮಾಡುತ್ತಿದೆ. ಒಳ್ಳೆಯ ಕಸ್ತೂರಿಯ ಲೇಪವು ಉರಿಯಹಾಗೆ ಕಾಣುತ್ತಿದೆ. ಮೈಗೆ ಹಚ್ಚಿಕೊಂಡ ಗಂಧವು ಒಣಗಿಬಿಗಿಯುತ್ತ ಬಂಧನವಾಗಿ ತೋರುತ್ತಿದೆ. ಚಂದ್ರನ ಬೆಳದಿಂಗಳು ಬೆಂಕಿಯಂತೆ ಸುಡುತ್ತಿದೆ. ತಂಗಾಳಿ ಮನ್ಮಥನ ಬಿಲ್ಲಿನ ಹೆದೆಯ ಝೇಂಕಾರದಂತಿದೆ. ಸಖಿಯರ ಪ್ರೇಮದ ಮಾತುಗಳು ಗೋಳಾಟದಂತಿವೆ. ಶಿವಶಿವಾ. ಇಂತಹ ವಿರಹತಾಪವನ್ನು ನಮ್ಮ ಈ ಬಾಲೆಯು ಸಹಿಸುತ್ತಾಳೆಯೋ ಎಂದು ಸ್ನೇಹಿತೆ ಯರು ಅವಳನ್ನು ಹುಡುಕುತ್ತ ಚಿಂತಿಸುತ್ತಿದ್ದರು. ೬೮. "ನೀನು ಗಂಧವನ್ನು ಮುಡಿಸು, ಹೂವನ್ನು ಲೇಪಿಸು, ಮಂಚವನ್ನು ತಂದು ಚಿಮುಕಿಸು, ಪನ್ನೀರುಗಳನ್ನು ಹಾಸು, ವೀಣೆಯನ್ನು ಈಗ ಕತ್ತರಿಸು, ಅಡಿಕೆಯನ್ನು ನುಡಿಸು, ಬೆಕ್ಕಿಗೆ ಮಾತನ್ನು ಕಲಿಸು, ಗಿಳಿಯನ್ನು ಹೊಡೆದೋಡಿಸು, ಕಾಲಂದುಗೆಯನ್ನು ಕುತ್ತಿಗೆಗೆ ಹಾಕು, ಕಾಲಿಗೆ ಕಾಡಿಗೆ ಯನ್ನು ಹಚ್ಚು, ಹಿಂದೆ ತುರುಬನ್ನು ಬೆಳಗಿಸು, ದೀಪವನ್ನು ಕಟ್ಟು"! ಎಂದು ಪ್ರಿಯನನ್ನು ಅಗಲಿದ ಒಬ್ಬ ಹೆಂಗಸು ವಿರಹವಿಕಳಾವಸ್ಥೆಯಲ್ಲಿ ಸಖಿಗೆ ಹೇಳಿದಳು.

CC-0. Jangamwadi Math Collection. Digitized by eGangotri

ಲಾವಣ್ಯವಾರಾಸಿಯೊಳ್ ಮುಳುಗಿಯುಂ ಮರಳಿ
ಜೀವಿಸಿದರುಂಟೆ ಗಿರಿನೈತಂಬಸಿಂಹಮಂ
ಹಾವನಾಲಂಗಿಸಿದರುಂಟೆ ಸುರರಮೃತಕಲಶಮನೊಲ್ದು ಸವಿದರುಂಟೇ
ಭಾವಿಸೆ ಪಯೋಧರಮನೌಂಕಿದವರುಂಟೆಯಾ
ಕಾವಗಲಹದ ಭಟರ ಭಾವಮಿದು ಚೋದ್ಯಮೆಂ
ದಾ ವಿನೋದದೊಳೊರ್ವ ಜಾಣೆಯೊಳ್ ಮುಂಗಯ್ಯ ಗಿಳಿ ನುಡಿದುದೇನೆಂಬೆನು ೧೯

ಕೇಳಬಲೆ ನೀಂ ಪೆಣ್ಣ ಜವ್ವನಂ ನೋಡೆ ಬಿರು
ಗಾಳಿಗೊಡ್ಡಿದ ಸೊಡರ್ ಸುರರ ಚಾಪಂ ಕುಸುಮ
ದೇಳಿಗೆ ತಟಿಜ್ಯೋತಿಯೆಂದರಿದುಮೆಳವರೆಯದೊಳಗೆ ಧನಮಂ ಗಳಿಸದ
ಸೂಳೆತನದಂಗದಿಂದೇಂ ಫಲಂ ಮನೆಯೊಳಗೆ
ಹಾಲುಳ್ಳ ಕಾಲದೊಳ್ ಹಬ್ಬಮಂ ಮಾಡೆಂದು
ಪೇಳುವೀ ಗಾದೆ ಪುಸಿಯಲ್ಲಮೆಂದೊರ್ವಳತಿಬಾಲೆಯುಂ ಬೋಧಿಸಿದಳು ೨೦

ಬಲುರಾಯರೊಲ್ಮೆ ಗಡಯುಂಬುದೆಲ್ಲಂ ನವಣೆ
ಯೊಳು ಗಂಜಿ ಗಡ ಪರುಷಸೋಂಕು ಗಡ ವರುಷಮಂ
ಸಲೆ ಕಡಂ ಗಡಮೆಂಬ ನಾಣ್ನುಡಿಗೆ ಸಲ್ವರೇ ನೀಂ ಜಾಣ ಮೆಲ್ಲೆರ್ದೆಗನು

೧೯. "ಸೊಬಗೆಂಬ ಸಮುದ್ರದಲ್ಲಿ ಮುಳುಗಿಯೂ ಮತ್ತೆ ಬದುಕಿದವರುಂಟೆ ? ಪರ್ವತ ಮಧ್ಯದಲ್ಲಿ ವಾಸಿಸುವ ಸಿಂಹ ಮತ್ತು ಹಾವನ್ನು ಆಲಿಂಗಿಸಿದವರಿದ್ದಾರೆಯೆ ? ದೇವತೆಗಳ ಅಮೃತಕಳಶವನ್ನು ಆಶಿಸಿ ಅದರ ರುಚಿ ನೋಡಿದವರಿದ್ದಾರೆಯೆ ? ಆಲೋಚಿಸಿದರೆ ಮೋಡವನ್ನು ಹಿಡಿದು ಅಮುಕಿದವರಿದ್ದಾರೆಯೆ ? ಈ ಕಾಮುಕಲಹದ ಭಟರ ಮನಸ್ಥಿತಿ ಸೋಜಿಗವಾದುದು" ಎಂದು ವಿನೋದದಿಂದ ಜಾಣೆಯೊಬ್ಬಳಿಗೆ ಅವಳ ಮುಂಗೈಯ ಮೇಲಿದ್ದ ಗಿಣಿಯು ಹೇಳಿತು. [ಟಿಪ್ಪಣಿ : ರತಿಕ್ರೀಡೆಯಲ್ಲಿ ತೊಡಗಿದ್ದವರು ಸ್ತ್ರೀಯರ ಸೊಬಗಿನ ಸಾಗರದಲ್ಲಿ ಮುಳುಗಿದ್ದರು. ಬಳುಕುವ ಸ್ತ್ರೀಯರ ನಡುವನ್ನು ಆಲಂಗಿ ಸಿದ್ದರು. ಮೊಲೆಗಳನ್ನು ಆಶಿಸಿ ಅಮುಮುತ್ತಿದ್ದರು. ತುಟಿಯನ್ನು ಒತ್ತಿ ಅಧರರಸವನ್ನು ಹೀರುತ್ತಿದ್ದರು]. ೨೦. ಎಲೆ ಅಬಲೆ, ಕೇಳು ಹೆಣ್ಣಿನ ಯೌವನವು ಭಾವಿಸಿದರೆ ಬಿರು ಗಾಳಿಗೊಡ್ಡಿದ ದೀಪದಂತೆ, ಕಾಮನ ಬಿಲ್ಲಿನಂತೆ, ಹೂವಿನ ಸೌಂದರ್ಯವಿದ್ದಂತೆ, ಮಿಂಚಿನ ಪ್ರಕಾಶವಿದ್ದಂತೆ ಎಂದು ತಿಳಿದುಕೊಡ ಎಳೆಯ ಪ್ರಾಯದಲ್ಲಿ ಹಣವನ್ನು ಗಳಿಸದೆ ಇದ್ದ ಸೂಳೆತನದ ಶರೀರದಿಂದ ಏನು ಲಾಭ ? ಮನೆಯಲ್ಲಿ ಹಾಲಿದ್ದ ಕಾಲದಲ್ಲಿ ಹಬ್ಬವನ್ನು ಮಾಡಬೇಕೆಂದು ಹೇಳುವ ಗಾದೆ ಸುಳ್ಳಲ್ಲ ಎಂದು ಒಬ್ಬಳು ಎಳೆಹರೆಯದ ಹುಡುಗಿಗೆ ಉಪದೇಶಿಸಿದಳು. ೨೧. ದೊಡ್ಡರಾಯರ ಪ್ರೀತಿಯಂತೆ ! ಆದರೆ ಉಣ್ಣುವುದೆಲ್ಲ ನವಣೆಯ ಗಂಜಿಯಲ್ಲವೆ ? ಪರುಷಶಿಲೆಯ ಸೋಂಕು ! ಆದರೂ ವರ್ಷವೆಲ್ಲ ಸಾಲವಂತೆ ಎಂಬ ಗಾದೆಮಾತಿಗೆ ಪಕ್ಕಾಗುತ್ತಾರೆಯೆ ? ನೀನು ಬುದ್ಧಿವಂತ ಮೃದುಹೃದಯಿ. ನಿನಗೆ ಒಲಿದ ಬಾಲೆಯ ಮೇಲೆ ಈ ರೀತಿ ಕೋಪಿಸಿಕೊಳ್ಳುತ್ತಾರೆಯೆ ? ಮೋಹದಲ್ಲಿ

CC-0. Jangamwadi Math Collection. Digitized by eGangotri

ಒಲಿದ ತರಳೆಯೊಳಿಂತು ಮುನಿವರೇ ಮೋಹಕ್ಕೆ
ಫಲವೆ ಬಾಳೆಯಹಣ್ಣಿಗುಂಟೆ ಗರಗಸವೆಂದು
ತಿಳಿಪಿ ತಂದೊರ್ವನಂ ಕೆಳದಿ ತನ್ನಯ ಸಖಿಯೊಳೊಲವನ್ನೈದಿಸುತಿರ್ದಳು ೭೧

ಮಧುಪೂರ್ಣಶಶಿಕಾಂತಚಷಕಮಂ ಮತ್ತೊರ್ವ
ಸುದತಿ ಹಸ್ತಾಗ್ರದೊಳ್ ಪಿಡಿದು ನೋಡುವ ಪದದೊ
ಳದರೊಳತಿಕಂಪಿಪ ಮುಖೇಂದುಪ್ರತಿಬಿಂಬಮಂ ಕಂಡು ತಾಂ ನಸುನಗುತ್ತೆ
ಇದೆ ಸಿಕ್ಕಿದಂ ಕಳ್ಳನಿಂದೆನ್ನ ಮೊಗದ ಸಂ
ಪದಮಂ ಕಳಲ್ ಬಂದನೆಂದು ರಕ್ತಾಕ್ಷಿ ಕೋ
ಪದೊಳೆ ನುಂಗುವಳೆನಲ್ ಮಧುಪಾನಮಂ ಮಾಡುತಿರ್ಪವಳ್ ಕಣ್ಗೆಸೆದಳು ೭೨

ಬಟ್ಟಲೊಳ್‌ವಿಡಿದ ಮಧುರಸವನಾಪೇಕ್ಷೆಯಿಂ
ನಟ್ಟಾಲಿಯಿಂದೀಕ್ಷಿಸಲ್ ಕಣ್ಣ ಕಪ್ಪು ರೂ
ಪಿಟ್ಟು ಕತ್ತುರಿಯ ರಸದಂತೆಸೆಯೆ ಚಿತ್ರಮೆಂದಾ ಮುಗ್ಧೆಗಂ ಮುಗುಳ್ನಗೆ
ಪುಟ್ಟಲಮೃತೋಪಮಾನಮಿದೆಂದು ವಿಸ್ಮಯಂ
ಬಟ್ಟು ಸವಿದಳ್ ತನಗೆ ಬೇಕಾದ ವಸ್ತುವೊಳ್
ಪುಟ್ಟಿದವಗುಣಮುಮಂ ನೋಡರೆಂದೆಂಬ ನಾಣ್ನುಡಿಗಿದೇ ತಥ್ಯಮೆನಲು ೭೩

ಮೊಂಡಾಟವು ಸರಿಯೆ ? ಬಾಳೆಯಹಣ್ಣನ್ನು ಕತ್ತರಿಸಲು ಗರಗಸ ಬೇಕೆ ? ಎಂದು ಮುಂತಾಗಿ ಬುದ್ಧಿ ಹೇಳಿ ಗೆಳತಿಯೊಬ್ಬಳು ಒಬ್ಬನನ್ನು ಕರೆದುಕೊಂಡು ಬಂದು, ತನ್ನ ಸಖಿಯಲ್ಲಿ ಪ್ರೇಮವನ್ನು ಉಂಟುಮಾಡುತ್ತಿದ್ದಳು. ೭೨. ಹೆಂಡದಿಂದ ತುಂಬಿದ ಚಂದ್ರಕಾಂತಶಿಲೆಯ ಪಾನಪಾತ್ರೆಯನ್ನು ಮತ್ತೊಬ್ಬ ಸ್ತ್ರೀ ಕೈಯಲ್ಲಿ ಹಿಡಿದುಕೊಂಡು ಅದರಲ್ಲಿ ನೋಡುತ್ತಿದ್ದಾಗ ಅದರಲ್ಲಿ ಅತಿಯಾಗಿ ಕಂಪಿಸುತ್ತಿದ್ದ ತನ್ನ ಚಂದ್ರಬಿಂಬದಂತಿದ್ದ ಮುಖದ ಪ್ರತಿಬಿಂಬವನ್ನು ನೋಡಿ ನಸುನಗುತ್ತಾ–''ನನ್ನ ಮುಖದ ಸೌಂದರ್ಯದ ಸಂಪತ್ತನ್ನು ಕದಿಯಲು ಬಂದ ಕಳ್ಳ ಸಿಕ್ಕಿದ'' ಎಂದು ಕಣ್ಣು ಕೆಂಪಗೆ ಮಾಡಿ ಕೋಪಿಸಿಕೊಂಡು ಅವನನ್ನು ನುಂಗುವಳೋ ಎನ್ನುವಂತೆ ಮಧುವನ್ನು ಕುಡಿಯುತ್ತಿದ್ದ ಆ ಸುದತಿಯು ಕಣ್ಣಿಗೆ ಕಂಡಳು. ೭೩. ಬಟ್ಟಲಲ್ಲಿ ಹಿಡಿದ ಮದ್ಯವನ್ನು ಕುಡಿಯುವ ಆಸೆಯಿಂದ ಅದನ್ನು ಎವೆಯಿಕ್ಕದೆ ನೋಡಲು ಅವಳ ಕಣ್ಣ ಕಪ್ಪು ರೂಪಿಟ್ಟು ಕಸ್ತೂರಿಯ ರಸದಂತೆ ಕಾಣಿಸಲು, ಇದು ವಿಚಿತ್ರವೆಂದು ಆ ಮುಗ್ಧೆ ಮುಗುಳ್ನಗಲು, ಇದು ಅಮೃತಕ್ಕೆ ಸಮಾನವೆಂದು ವಿಸ್ಮಯಹೊಂದಿ, ತನಗೆ ಬೇಕಾದ ವಸ್ತುವಿನಲ್ಲಿ ಕೆಟ್ಟ ಗುಣ ಹುಟ್ಟಿದರೂ ಅದನ್ನು ಎಣಿಸುವುದಿಲ್ಲ ಎಂಬ ಗಾದೆಮಾತಿಗೆ ಇದೇ ಸಾಕ್ಷಿ ಎನ್ನುವಂತೆ ಅದನ್ನು ಕುಡಿದಳು.

CC-0. Jangamwadi Math Collection. Digitized by eGangotri

ಮತ್ತೊರ್ವ ಸುದತಿ ಬೆಳ್ಳಿಯಬಟ್ಟಲೊಳ್ ತುಂಬಿ
ದುತ್ತಮಮಧ್ಯವಮನೀಂಟುತಿರೆ ಕಣ್ಗೆವಂ
ದತ್ತು ಬೆನ್ನಂ ಮುಸುಕಿ ಪೊರವಾರಿಗಿಳಿದ ನಿಡುಜಡೆ ಚಂದ್ರಮಂಡಲವನು
ಅತ್ತಿತ್ತ ಮಿಸುಕಲೀಯದೆ ಕಚ್ಚಿ ಧರೆಗೆ ತಂ
ದತ್ತೊ ಸ್ವರ್ಭಾನುವೆಂಬಂತ್ತೈದೆ ಸಂಶಯಮ
ನಿತ್ತುದೀ ಮಧುವಾಶ್ರಯಂ ಮೇಲೆನಿಪ್ಪರುಂ ಕೀಳ್ಮಾಡದೇಂ ಬಿಡುವುದೇ ೭೪

ತೇಗಿದೊಡೆ ಮದ್ಯಪಾನದ ಗಂಧಮೆಲ್ಲರ್ಗೆ
ಮೂಗುಬ್ಬಸಂ ಮಾಡೆ ಕುಡಿದ ಮಧುರಸಮುಕ್ಕಿ
ಮೇಗೆ ಸುರಿಯಲ್ ತತ್ತದಿದ್ದಿಮಿತ್ತೊಂಗುಥೋಂಯೆಂದು ಜೋಗುಳವಾಡುತೆ
ತೂಗುತೇಳುತ್ತೆ ಬೀಳುತ್ತಳುತೆ ನಗುತಲಿಲಿ
ಮೇಗೆ ಬಿದ್ದುದು ಕಪ್ಪೆಯೆಂದು ನಾಯ್ಗೆರಗಿ ಪೋ
ಜೋಗಮ್ಮ ಬಾಳು ಬಾಳೆನುತದೊರ್ವಳ್ ಕುಡಿಚಿ ಸೂಳೆಯಾಡುತ್ತಿದ್ದಳು ೭೫

ಮುಸುಕಿ ರವಿಕೆಯೊಳಡಸಿ ಜೋಲ್ವ ಪೆರ್ಮೊಲೆಗಳಂ
ಬಸುರ ಸಾರಿದ ಮೊಲೆಗಳಂ ನೇಲ್ವ ಮೊಲೆಗಳಂ
ಪಸರಿಸುತೆ ಬಯಲ ಬೇಟಂಗಳಂ ತನ್ನ ಹರಯದ ನಲ್ಲರೊಡನೆ ನಕ್ಕು

೭೪. ಮತ್ತೊಬ್ಬ ಸುಂದರಸ್ತ್ರೀಯು ಬೆಳ್ಳಿಯ ಬಟ್ಟಲಲ್ಲಿ ತುಂಬಿದ್ದ ಉತ್ತಮವಾದ ಮದ್ಯವನ್ನು ಕುಡಿಯುತ್ತಿರಲು ಆಗ ಬೆನ್ನನ್ನು ಮುಚ್ಚಿ ಅಂಡಿನವರೆಗೆ ಇಳಿದಿದ್ದ ಉದ್ದವಾದ ಜಡೆ ಕಣ್ಣಿಗೆ ಕಾಣಿಸಿತು. ಆಕಾಶದಲ್ಲಿದ್ದ ಚಂದ್ರನನ್ನು ಅತ್ತಿತ್ತ ಅಲ್ಲಾಡಲು ಬಿಡದೆ ಹಿಡಿದು ಭೂಮಿಗೆ ಎಳೆದುತಂದ ರಾಹುವೋ ಎಂಬ ಸಂಶಯವನ್ನು ಜನರಿಗೆ ಉಂಟುಮಾಡಿತು. ಮದ್ಯಪಾನದಲ್ಲಿನಾಸಕ್ತಿಯು ಉತ್ತಮರೆನಿಸಿಕೊಂಡವರನ್ನೂ ಕೀಳು ಮಾಡದೆ ಬಿಡುತ್ತದೆಯೇ ? ೭೫. ಕುಡಿದ ಸೂಳೆಯೊಬ್ಬಳು ತೇಗಿದಾಗ ಹೆಂಡದ ವಾಸನೆ ಎಲ್ಲರಿಗೂ ಉಸಿರಾಡದಷ್ಟು ಹಿಂಸೆಯನ್ನುಂಟುಮಾಡುತ್ತಿತ್ತು. ಅವಳು ಕುಡಿದಿದ್ದ ಮದ್ಯವು ವಾಂತಿಯಾಗಿ ಮೈಮೇಲೆ ಸುರಿದಾಗ ತತ್ತದಿದ್ದಿಮಿತ್ತೊಂಗು ಥೋಯೆಂದು ಜೋಗುಳ ಹಾಡುತ್ತಾ, ತೂರಾಡುತ್ತಾ, ಏಳುತ್ತ, ಬೀಳುತ್ತ, ಅಳುತ್ತ, ನಗುತ್ತ, ಇಲಿ ಮೇಲೆ ಬಿದ್ದರೆ ಕಪ್ಪೆ ಬಿದ್ದಿತೆಂದು ನಾಯಿಗೆ ನಮಸ್ಕಾರ ಮಾಡಿ, ಹೋಗು ಜೋಗಮ್ಮ ಚೆನ್ನಾಗಿ ಬದುಕು ಎನ್ನುತ್ತ ಮೈಮೇಲೆ ಎಚ್ಚರ ತಪ್ಪಿ ಆಡುತ್ತಿದ್ದಳು. ೭೬. ಜೋತಾಡುತ್ತಿರುವ ದೊಡ್ಡ ಮೊಲೆಗಳನ್ನು,ಹೊಟ್ಟೆಯವರೆಗೆ ಇಳಿಬಿದ್ದಿದ್ದ ಮೊಲೆಗಳನ್ನು, ನೇತಾಡುವ ಮೊಲೆಗಳನ್ನು ರವಿಕೆಯ ಮರೆಯಲ್ಲಿ ಮುಚ್ಚಿಟ್ಟು, ವ್ಯರ್ಥವಾದ ಪ್ರೀತಿಯನ್ನು ತೋರಿಸುತ್ತ, ತನ್ನ ಪ್ರಾಯದ ಪ್ರಿಯರೊಡನೆ ನಗುತ್ತ, ಕಾಮಚೇಷ್ಟೆಯನ್ನು

CC-0. Jangamwadi Math Collection. Digitized by eGangotri

ನಸೆಮಾಡುತಂ ಸಿಂಗರಕ್ಕೆ ಮನಮೊಳಸಿ ಸು
ಣ್ಣಿಸುತೆ ರಸಮರತ ಮೊಗಮಂ ಬೀತ ಕಾಮಮಂ
ಹಸಗೆಯ್ವೆನೆಂಬ ಮನದುಜ್ಜುಗದ ಲೋಲೆಯರ್ ಮೆರೆದರದನೇವೆಳ್ವೆನು ೭೬

ಬತ್ತಿರ್ದ ಮೊಲೆಯು ಕುಪ್ಪುಸದೊಳರುವೆಯು ಚೆಂಡ
ನೊತ್ತಿ ಬಿಗಿದುಂ ಬಾಡಿ ಬಿಸುಟೆಲೆಯು ಗಳಿಗೆಯುಂ
ಸುತ್ತಿ ಸುಕ್ಕಿರ್ದಣಲೊಳಡಸಿ ನೆರೆದಲೆಗೆ ಮಸಿದೊಡೆದು ತೆರೆಗೊಂಡೊಡಲನು
ಕತ್ತಲೆಯು ಮರೆಗೆಯ್ದು ಬೊಗಡುಬಾಯಿಂದಲೂ
ಳುತ್ತೆ ತನ್ನಿಚ್ಚೆಬಂದಂತೆ ನಾಯ್ ಸರಕೆಂದೊ
ಡಿತ್ತ ಬಾ ಜಾಣನೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು ೭೭

ಹಂಜಿಗುಕ್ಕಿಯೊಳೆಸೆವ ಮೊಗದೊಳಾ ಬೊಗಡುಬಾ
ಯಿಂ ಜೊಲ್ಲು ಸುರಿಯೆ ತಲೆ ನಡುಗೆ ಸುಕ್ಕಿದ ಮೆಯ್ಯಿ
ಳಂ ಜಗುಳ್ದುಡುಪನೆತ್ತುತೆ ಮುರುಡುಗೋಲ್ವಿಡಿದು ತಡಪರಿಸಿ ನಡೆವ ಮುದುಪಂ
ಕಂಜಮುಖಿಯೊರ್ವಳಂ ಕಂಡು ಭ್ರಮೆಗೊಂಡು ತಾ
ನುಂ ಜಗಲಿಯೆಡೆಗೆ ನಡೆದೊತ್ತೆಯಂ ಕೇಳುತಿ
ರ್ದಂ ಜಗದೊಳೆಂತಪ್ಪರಂ ಮನಸಿಜಂ ಮರುಳ್ಮಾಡದಲ್ಲದೆ ಮಾಣ್ಬನೆ ೭೮

ಮಾಡುತ್ತಾ, ಶೃಂಗಾರಕ್ಕೆ ಆಸೆಪಟ್ಟು, ಪ್ರಮುಗೊಳಿಸಿ ರಸಹೀನವಾದ ಮುಖವನ್ನು ಕಳೆದುಹೋದ ಕಾಮವನ್ನು ಮತ್ತೆ ಬಡಿದೆಬ್ಬಿಸುವೆನೆಂದು ಮನಸ್ಸಿನಲ್ಲಿ ಆಲೋಚಿಸು ತ್ತಿರುವ ಲಂಪಟೆಯರು ಅಲ್ಲಿ ಮೆರೆದರು. ೭೭. ಬತ್ತಿಹೋಗಿದ್ದ ಮೊಲೆಯು ಕುಪ್ಪಸ ದೊಳಗೆ ಬಟ್ಟೆಯ ಚೆಂಡನ್ನು ಒತ್ತಿ ಬಿಗಿದಿದ್ದರೂ, ಬಾಡಿಹೋಗಿ ಎಸೆದಿದ್ದ ಎಲೆಯನ್ನು ಮಡಿಚಿ ಸುತ್ತಿ ಸುಕ್ಕಾಗಿದ್ದ ದವಡೆಯಲ್ಲಿ ಇಟ್ಟುಕೊಂಡಿದ್ದರು. ನರೆತಿದ್ದ ತಲೆಗೂದ ಲಿಗೆ ಕಪ್ಪನ್ನು ಬಳೆದಿದ್ದರು. ಸುಕ್ಕಾಗಿದ್ದ ದೇಹವನ್ನು ಕತ್ತಲೆಗೆ ಮರೆಮಾಡಿದ್ದರು. ಬಾಯಿಂದ ತಮಗಿಷ್ಟಬಂದಂತೆ ಕೂಗುತ್ತಿದ್ದರು. ನಾಯಿಯು ಸರಕ್ ಎಂದು ಶಬ್ದ ಮಾಡಿದರೂ ಇಲ್ಲಿ ಬಾ ಜಾಣನೇ ಎನ್ನುವ ಇಂತಹ ಹಣ್ಣು ಹಣ್ಣು ಮುದಿಸೂಳೆಯರು ಅಲ್ಲಿ ಕಾಣಿಸಿದರು. ೭೮. ಹಿಂಜಿ ಹತ್ತಿಯ ಗೂಡೆಯಾಗಿದ್ದ ಮುಖದಲ್ಲಿನ ಬೋಳು ಬಾಯಿಂದ ಜೊಲ್ಲು ಸುರಿಯುತ್ತಿರಲು, ತಲೆ ನಡುಗುತ್ತಿರಲು, ಸುಕ್ಕುಗಟ್ಟಿದ ಮೈಯಿಂದ ಜಾರುತ್ತಿದ್ದ ಬಟ್ಟೆಯನ್ನು ಎತ್ತುತ್ತ, ಒರಟಾದ ಊರುಗೋಲನ್ನು ಹಿಡಿದು ತಡವರಿಸಿ ಕೊಂಡು ನಡೆಯುತ್ತಿದ್ದ ಮುದುಕನೊಬ್ಬ ಕಮಲಮುಖಿಯೊಬ್ಬಳನ್ನು ಕಂಡು ಭ್ರಮೆ ಗೊಂಡು ತಾನೂ ಜಗುಲಿಯ ಬಳಿಗೆ ಹೋಗಿ ಸಂಭೋಗಕ್ಕೆ ಮುಂಗಡ ಹಣವನ್ನು ಎಷ್ಟು ಕೊಡಬೇಕೆಂದು ಕೇಳುತ್ತಿದ್ದನು. ಜಗತ್ತಿನಲ್ಲಿ ಎಂತಹವರನ್ನೂ ಮನ್ಮಥನು ಮರುಳು

CC-0. Jangamwadi Math Collection. Digitized by eGangotri

ಮುಂತೆ ಬರಲಾಗಳಾ ಶಿವಭಕ್ತಸೂಳೆಯರ
ಸಂತತಿಗಳೈತಂದ ವಿಟಜಂಗಮರೊಡನೆ
ನಂತಸೌಖ್ಯಂಗಳಿಂದಿರುತಿರ್ದು ಬಳಿಕ ಶಿವಪೂಜೆಯಂ ಮಾಡುತಿರಲು
ಅಂತಾಗಲಾ ಶಂಖ ಜಯಘಂಟೆ ಮೊದಲಾದ
ನಂತವಾದ್ಯಂಗಳ ನಿನಾದಮಂ ಕೇಳುತತಿ
ಸಂತೋಷದಿಂದಾಗ ಸಖರ ಸಮ್ಮೇಳದಿಂದೈದಿದಂ ಸಂಭ್ರಮದೊಳು ೭೯

ಈ ತೆರದೊಳಾ ವಿಟವಿಟೀಜನದೊಳುಳ್ಳನಿತು
ಜಾತಿಲಕ್ಷಣಂಗಳಂ ನೋಡುತ್ತೈತರೆ ದಿನಪ
ಭೀತಿಯಿಂದೋಡುವ ನಿಶಾಂಗನೆಯ ಚರಣನೂಪುರದ ರವವೆಂಬಂತಿರೆ
ಓತಪ್ಪಿದರನಗಲ್ಚುವ ಸೂಳೆಯರ ದುಷ್ಟ
ಮಾತಾಕಠೋರವಚದಂತಲ್ಲಿಗಲ್ಲಿ ಪ್ರ
ಭಾತಸಮಯದ ಕೋಳಿಗಳ್ ಕುಕ್ಕುಕೂಯೆಂದು ಕೂಗುತಿರ್ದುವು ಕ್ರಮದೊಳು ೮೦

ತುಂಬಿಗಳಿಗೌತಣಮನೆಚ್ಚರಿಸಿ ಚಕ್ರದ ಕು
ಟುಂಬಕ್ಕೆ ರತಿಯೊಸಗೆಯಂ ಪೇಳ್ದು ವಾತಾಯ
ನಂಬೊಕ್ಕು ಸುರತಮೂರ್ಛಿತರನೆಬ್ಬಿಸಿ ತಾಮ್ರಚೂಡ ಜಿಹ್ವೆಯನಲುಗಿಸಿ

ಮಾಡದೆ ಬಿಡುತ್ತಾನೆಯೇ ! ೭೯. ಹೀಗೆ ಮುಂದೆ ಬರುತ್ತಿರಲು ಆ ಶಿವಭಕ್ತ ಸೂಳೆಯರ ಗುಂಪು ಅಲ್ಲಿಗೆ ಬಂದ ವಿಟಜಂಗಮರೊಡನೆ ಕೂಡಿ ಅನಂತಸೌಖ್ಯವನ್ನು ಪಡೆಯುತ್ತಿದ್ದು ಅನಂತರ ಅವರು ಶಿವಪೂಜೆಯನ್ನು ಮಾಡುತ್ತಿದ್ದರು. ಆಗ ಶಂಖ, ಜಯಘಂಟೆಯೇ ಅಸಂಖ್ಯಾತ ವಾದ್ಯಗಳ ಧ್ವನಿ ಕೇಳಿಸಿತು. ಅದನ್ನು ಕೇಳಿ ಅವನು (ಬಿಜ್ಜಳನು) ಬಹಳ ಸಂತೋಷದಿಂದ ಸ್ನೇಹಿತರ ಜೊತೆಯಲ್ಲಿ ಬಹಳ ಸಂಭ್ರಮದಿಂದ ಮುಂದೆ ನಡೆದನು. ೮೦. ಈ ರೀತಿಯಲ್ಲಿ ಜಾರ ಮತ್ತು ಜಾರೆಯರಲ್ಲಿ ಇರುವ ಅನೇಕ ಬಗೆ ಮತ್ತು ಲಕ್ಷ್ಯಗಳನ್ನು ನೋಡುತ್ತ ಬರುತ್ತಿರಲು ಇತ್ತ ಸೂರ್ಯನ ಹೆದರಿಕೆಯಿಂದ ಓಡುವ ರಾತ್ರಿ ಎಂಬ ಹೆಣ್ಣಿನ ಕಾಲಂದುಗೆಯ ಶಬ್ದವೇ ಎನ್ನುವಂತೆ ಆಲಿಂಗಿಸಿದವರನ್ನು ಅಗಲಿಸುವ ಸೂಳೆಯರ ಕೆಟ್ಟ ಮಾತುಗಳು ಕಠೋರವಚನದಂತೆ ಅಲ್ಲಲ್ಲಿ ಬೆಳಗಿನ ಝಾವದ ಕೋಳಿಗಳು ಕ್ರಮವಾಗಿ ಕುಕ್ಕುಕ್ಕೂಯೆಂದು ಕೂಗುತ್ತಿದ್ದವು, ೮೧. ಸೂರ್ಯೋದಯದ ಕಾರಣದಿಂದಾಗಿ ಬೀಸಿದ ತಂಗಾಳಿಯು ಕುಟುಂಬಕ್ಕೆ ದುಂಬಿಗಳಿಗೆ ಔತಣದ ಎಚ್ಚರಿಕೆಯನ್ನು ನೀಡಿತು. ಚಕ್ರವಾಕಪಕ್ಷಿಗಳ ರತಿಯುತ್ಸವದ ಸಂತಸದ ಸುದ್ದಿಯನ್ನು ಹೇಳಿತು, ಕಿಟಕಿಯಿಂದ ಪ್ರವೇಶಮಾಡಿ ಸಂಭೋಗಸುಖದಿಂದ ಮೂರ್ಛೆಗೊಂಡವರನ್ನು ಎಬ್ಬಿಸಿತು. ಕೋಳಿಯ ನಾಲಗೆಯನ್ನು ಅಲುಗಿಸಿ ಅದು ಕೂಗುವಂತೆ ಮಾಡಿತು;

CC-0. Jangamwadi Math Collection. Digitized by eGangotri

ಅಂಬುಜಕೆ ಮಿತ್ರಾಗಮವನುಸಿರ್ದು ಕೈರವಕ
ದಂಬಕಳಲುರಿಯನೆಬ್ಬಿಸಿ ನಾಡೆ ಶೈತ್ಯರೂ
ಪಂ ಬಂದು ತೀಡಿದುದು ರವಿಯುದಯಕಾರಣಸಮಿರಾರಣಂ ತತ್ ಕ್ಷಣದೊಳು ೮೧

ಅನಿತರೊಳಗನಿಲಹತಿಯಿಂದಂಬರಕೆ ನೆಗೆದ
ವನಧಿಮಧ್ಯದ ಬಟ್ಟಿತಪ್ಪ ಮುತ್ತಿನ ಚಿಪ್ಪೊ
ಲನಿಮಿಷಾಪಗೆಯೊಳಿರುಳಿನ ಮಂಜು ಸೋಂಕೆ ಬಾಡಿದ ಪುಂಡರೀಕದಲರೋ
ತನಿಜೊನ್ನವಾಲನೀಂಟುವ ಪದದೊಳದು ಬತ್ತೆ
ಮನದೊಳಂ ಕಂದಿ ತೋರುವ ಹಂಸಮರಿಯೊ ಪೇ
ಳೆನಲೆಸೆದುದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸರಾಗಮದೊಳು ೮೨

ಆ ಸಮಯದೊಳ್ ಬಿಜ್ಜಳಂ ಸಖರ ಸಹಿತ ಸುವಿ
ಲಾಸದಿಂದಲ್ಲಿರದೆ ತಿರುಗಿ ತನ್ನಯ ನಿಜನಿ
ವಾಸಕ್ಕೆ ಬಂದು ಸಖರಂ ಕಳುಪಲಾಕ್ಷಣದೊಳಿನನುದಯವಾಗಲಿತ್ತ
ಲೇಸಾಗಿ ಮೆರೆವ ಲಕ್ಕದ ಮೇಲೆ ತೊಂಬತಾರ್
ಸಾಸಿರ ಮಹಾಜಂಗಮಕ್ಕೆ ಮೃಷ್ಟಾನ್ನಮಂ
ದಾಸೋಹಮಂ ಮಾಡುತುಂ ಬಸವನುಂ ಚೆನ್ನಬಸವನುಂ ಸುಖಮಿರ್ದರು ೮೩

ಕಮಲಪುಷ್ಪಗಳಿಗೆ ಸೂರ್ಯನ ಆಗಮನದ ಸಂಗತಿಯನ್ನು ತಿಳಿಸಿತು, ಮತ್ತು ನೈದಿಲೆಯ ಸಮೂಹಕ್ಕೆ ದುಃಖದ ಬೇಗೆಯನ್ನೆಬ್ಬಿಸಿತು. ಹೀಗೆ ಸೂರ್ಯೋದಯದ ಕಾಲದಲ್ಲಿ ತಂಗಾಳಿ ಬೀಸಿತು. ೮೨. ಅಷ್ಟ ರಲ್ಲಿಯೇ ಗಾಳಿಯ ಹೊಡೆತದಿಂದ ಆಕಾಶಕ್ಕೆ ಹಾರಿದ, ಸಮುದ್ರಮಧ್ಯದಲ್ಲಿದ್ದ ದುಂಡಾದ ಮುತ್ತಿನ ಚಿಪ್ಪೊ ! ದೇವಗಂಗಾನದಿಯಲ್ಲಿ ಅರಳಿ ರಾತ್ರಿಯ ಮಂಜಿನ ಸೋಂಕಿನಿಂದ ಕಾಂತಿಗುಂದಿದ ಬಿಳಿಯ ತಾವರೆಯ ಹೂವೋ ! ದಟ್ಟವಾದ ಬೆಳದಿಂಗಳೆಂಬ ಹಾಲನ್ನು ಕುಡಿಯುವ ಸಮಯದಲ್ಲಿ ಅದು ಬತ್ತಿಹೋಗಲು ಮನಸ್ಸಿನಲ್ಲಿ ಕಳೆಗುಂದಿದಂತೆ ಕಾಣುವ ಮರಿಯೋ ಹೇಳು ಎಂಬಂತೆ ಆ ಅರುಣೋದಯದ ಮುನ್ನ ಪಶ್ಚಿಮಾದ್ರಿಯಲ್ಲಿ ಚಂದ್ರಮಂಡಲವು ಕಳೆಗುಂದಿ ಬೆಳಗುತ್ತಿದ್ದಿತು. ಆ ಸಮಯದಲ್ಲಿ ೮೩. ಬಿಜ್ಜಳರಾಜನು ತನ್ನ ಸ್ನೇಹಿತರನ್ನೆಲ್ಲ ಕೂಡಿಕೊಂಡು ಉಲ್ಲಾಸದಿಂದ ತನ್ನ ಅರಮನೆಗೆ ಬಂದು ಪರಿವಾರವನ್ನೆಲ್ಲ ಕಳುಹಿಸಿದನು. ಅದೇ ಸಮಯಕ್ಕೆ ಸೂರ್ಯೋದಯವಾಯಿತು. ಇತ್ತಲಾಗಿ ಬಸವ ಮತ್ತು ಚೆನ್ನಬಸವರು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಮಹಾಜಂಗಮರಿಗೆ ಮೃಷ್ಟಾನ್ನದಿಂದ ದಾಸೋಹವನ್ನು

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೮೪

## ಹತ್ತನೆಯ ಸಂಧಿ ಸಂಪೂರ್ಣ

ಮಾಡುತ್ತ ಸುಖದಿಂದಿದ್ದರು. ೮೪. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ಪಾಚನ ಮಾಡಿದವರಿಗೆ, ಭಕ್ತಿಯಿಂದ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತಸೌಖ್ಯವನ್ನೂ ಕೊಟ್ಟು ಕಾಪಾಡು ವನು.

## ಹತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹನ್ನೊಂದನೆಯ ಸಂಧಿ

ಸೂಚನೆ : ಎಸೆವ ಕಲ್ಯಾಣಪುರವಳಯದೈಶ್ವರ್ಯಮಂ
ಪೊಸೆದು ನಿಟ್ಟಿಸುತೆ ಪ್ರಭು ಸಿದ್ಧರಾಮನು ಕೂಡೆ
ಬಸವನ ಮಹಾಗೃಹಕೆ ಬಂದು ಪೂಜೆಯ ಕೊಂಡು ಶಿವಗೋಷ್ಠಿಯಿಂದಿರ್ದರು

ಪಾವಕೇಂದ್ವರ್ಕನೇತ್ರಾವಳೀರಮ್ಯ ರಾ
ಜೀವಭವಹರಿಮುಖ್ಯದೇವಸಂತಾನಸಂ
ಭಾವನಾಪೂರ್ವಕಕೃಪಾವಲೋಕನ ಲಸತ್ಪಾವನಚರಿತ್ರ ಜಯತು
ದೇವೀಮುಖಾಂಭೋಜಲಾವಣ್ಯರುಚಿಮುದಿತ
ಭಾವ ಸತರಕ್ಷಪ್ರಭಾವ ಸಲಹೊಲ್ದು ಪಂ
ಪಾವರ ವಿರೂಪಾಕ್ಷದೇವ ಸುರನಿಕರಸಂಜೀವ ಭಕ್ತವ್ರಜವನು ೧

ಅತ್ತಲಾ ಪ್ರಭು ಸಿದ್ಧರಾಮಂಗೆ ಲಿಂಗದ ಮ
ಹತ್ವನರುಹಿಸಿಕೊಡುವೆನೆಂದು ಕಲ್ಯಾಣದೊಳ
ಗುತ್ತಮಶಿವಾಚಾರಿ ಚೆನ್ನಬಸವಂ ಬಸವನಿರಲವರ ಬಳಿಗಾತನ
ಚಿತ್ತಹರುಷವೊಳೆ ಕರೆತರುತಿರಲ್ ಮುಂದೆ ತೋ
ರಿತ್ತು ಸುಕೃತದ ಬೀಡು ಸಿಂಗರದ ಜೋಡು ಸ
ದ್ಭಕ್ತಿಯಿಹ ಗೂಡು ಸೊಗಸುವ ನಾಡು ನೋಡುತವರಡಿಯಿಟ್ಟು ಬರುತಿರ್ದರು ೨

ಸೂಚನೆ : ಶೋಭಿಸುವ ಕಲ್ಯಾಣಪಟ್ಟಣದ ಪ್ರದೇಶದ ಐಶ್ವರ್ಯವನ್ನು ಒಂದೇ ಸಮನೆ ನೋಡುತ್ತ ಅಲ್ಲಮಪ್ರಭು ಸಿದ್ಧರಾಮನೊಡಗೂಡಿ ಬಸವಣ್ಣನ ಮನೆಗೆ ಬಂದು ಪೂಜೆಯನ್ನು ಕೈಗೊಂಡು ಶಿವಗೋಷ್ಠಿಯಲ್ಲಿದ್ದನು. ೧. ಅಗ್ನಿ, ಚಂದ್ರ ಮತ್ತು ಸೂರ್ಯರೇ ಕಣ್ಣಾಗಿ ಮನೋಹರವಾಗಿರುವವನೂ ಬ್ರಹ್ಮ, ವಿಷ್ಣುಗಳೇ ಮುಂತಾದ ದೇವಸಮೂಹಗಳನ್ನು ಅನುಗ್ರಹ ಮತ್ತು ಕೃಪೆಯಿಂದ ಕಾಣುವವನೂ ಶುಭ್ರವಾದ ಪಾವನವಾದ ಚರಿತ್ರೆಯುಳ್ಳವನೂ ಆದ ಶಿವನೇ, ನಿನಗೆ ಜಯವಾಗಲಿ. ಪಾರ್ವತಿಯ ಮುಖಕಮಲದ ಲಾವಣ್ಯಪ್ರಭೆಯಿಂದ ಉಂಟಾದ ಮನೋಹರಭಾವವುಳ್ಳವನೂ ಶರಣಾಗತರನ್ನು ಕಾಪಾಡುವ ಪ್ರಭಾವವುಳ್ಳವನೂ ದೇವಸಮೂಹಕ್ಕೆ ಸಂಜೀವಿನಿಯಂತಹವನೂ ಆದ ಪಂಪಾಪತಿ ವಿರೂಪಾಕ್ಷದೇವನೇ ಭಕ್ತಸಮೂಹವನ್ನು ಪ್ರೀತಿಯಿಂದ ರಕ್ಷಿಸು. ೨. ಅತ್ತಕಡೆಯಲ್ಲಿ ಅಲ್ಲಮಪ್ರಭು ಸಿದ್ಧರಾಮನಿಗೆ ಲಿಂಗದ ಮಹತ್ವವನ್ನು ತಿಳಿಸಿಕೊಡುತ್ತೇನೆಂದು (ಕರೆದುಕೊಂಡು ಬಂದನು) ಕಲ್ಯಾಣಪಟ್ಟಣದಲ್ಲಿ ಉತ್ತಮ ಶಿವಾಚಾರಿಗಳಾದ ಚೆನ್ನಬಸವಣ್ಣ, ಬಸವಣ್ಣನವರು ಇರಲು ಅವರ ಹತ್ತಿರಕ್ಕೆ ಅವನನ್ನು ಸಂತೋಷ ತುಂಬಿದ ಮನದಿಂದ ಕರೆದುಕೊಂಡು ಬರುತ್ತಿರಲು, ಅವರೆದುರಿಗೆ

CC-0. Jangamwadi Math Collection. Digitized by eGangotri

ಎತ್ತ ನೋಡಿದೊಡೆ ನಿಗಮಂಗಳಿಂ ಪೊಂಗಳಿಂ
ದೆತ್ತ ನೋಡಿದೊಡೆ ಗ್ರಾಮಂಗಳಿಂ ಪೆಂಗಳಿಂ
ದೆತ್ತ ನೋಡಿದೊಡೆ ನಗರಾಳಿಯಿಂ ಶಾಳಿಯಿಂ ದ್ರೋಣಾಮುಖಾಳಿಯಿಂದೆ
ಎತ್ತಲುಂ ಪತ್ತನ ಸಮಾಜದಿಂ ಭೂಜದಿಂ
ದೆತ್ತಲುಂ ಖರ್ವಡನಿಕಾಯದಿಂ ಗೇಯದಿಂ
ದೆತ್ತಲ್ ಕದಂಬದ ಸಘಾಡದಿಂ ಖೇಡದಿಂದಾ ನಾಡ ಸಿರಿ ಮೆರೆದುದು ೩

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂ
ದಲ್ಲಿಗಲ್ಲಿಗೆ ವನಸ್ಥಳಗಳಿಂ ಕೊಳಗಳಿಂ
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆರೆಗಳಿಂ ಪರಿವ ಪಂಕಾಲ್ಗಳಿಕಂದೆ
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾದೇಶವೊಪ್ಪಿರ್ದುದು ೪

ಕಂಜಕುಮುದಂಗಳಿಲ್ಲದ ಸರಂ ಸರದಿಂದೆ
ರಂಜಿಸದ ಶುಕಪಿಕಂ ಶುಕಪಿಕಂಗಳ್ಗೆ ಫಲ
ಮಂಜರಿಯನೀಯದಿಪ ಮಾವು ಮಾವುಗಳನಪ್ಪದ ಬಳ್ಳಿ ಬಳ್ಳಿಗಳೊಳು

ಪುಣ್ಯದ ತವರುಮನೆಯಾದ, ಶೃಂಗಾರದ ಆಗರವಾದ ಸದ್ಭಕ್ತಿಯ ನೆಲೆಯಾದ ಸೌಂದರ್ಯದಿಂದ ಕಂಗೊಳಿಸುತ್ತಿದ್ದ ನಾಡು ಮೆರೆಯುತ್ತಿದ್ದಿತು. ಅದನ್ನು ನೋಡುತ್ತ ಅವರು ನಡೆದು ಬರುತ್ತಿದ್ದರು. ೩. ಎಲ್ಲೆಲ್ಲಿ ನೋಡಿದರೂ ಪಟ್ಟಣಗಳಿಂದ-ಹೊನ್ನುಗಳಿಂದ ಹೊಳೆಯುತ್ತಿದ್ದವು. ಎಲ್ಲಿ ನೋಡಿದರೂ ಗ್ರಾಮಗಳಿಂದ-ಹೆಣ್ಣುಗಳಿಂದ ತುಂಬಿದ್ದವು. ಎಲ್ಲಿ ನೋಡಿದರೂ ನಗರಪ್ರದೇಶಗಳಿಂದ-ಬತ್ತದ ಗದ್ದೆಗಳಿಂದ ನೀರ್ಗಾಲುವೆಗಳಿಂದ ತುಂಬಿದ್ದಿತು. ಎಲ್ಲಿ ನೋಡಿದರೂ ನಾಗರಿಕ ಸಮಾಜದಿಂದಲೂ, ಮರಗಳಿಂದಲೂ ಕೂಡಿತ್ತು. ಬೆಟ್ಟಗಳಿಂದ ಸುತ್ತುವರಿದ ಹಾಡಿನ ಧ್ವನಿಯಿಂದ ತುಂಬಿದ ಊರುಗಳಿಂದ, ಒತ್ತಾಗಿ ಬೆಳೆದಿದ್ದ ಕದಂಬವೃಕ್ಷಗಳಿಂದ ತಪ್ಪಲುಪ್ರದೇಶದ ಮನೆಗಳಿಂದ ಕೂಡಿ ಆ ನಾಡು ವೈಭವದಿಂದ ಮೆರೆಯುತ್ತಿದ್ದಿತು. ೪. ಅಲ್ಲಲ್ಲಿ ಬೆಳೆದುನಿಂತಿದ್ದ ಬೆಳೆಗಳು ಮತ್ತು ಪೊದೆಗಳು ಅಲ್ಲಲ್ಲಿ ವನಗಳು, ಕೊಳಗಳು, ಅಲ್ಲಲ್ಲಿ ಚಿನ್ನದ ಬಂಡೆಗಳು, ಕೆರೆಗಳು, ತುಂಬಿ ಹರಿಯುವ ಕಾಲುವೆಗಳು, ಅಲ್ಲಲ್ಲಿ ಗೋಚರಿಸುವ ಬೆಟ್ಟಗಳು, ಆನೆಗಳು, ಅಲ್ಲಲ್ಲಿ ಗಿಳಿ-ಕೋಗಿಲೆಗಳ ಸಮೂಹಗಳು, ಅಲ್ಲಲ್ಲಿ ಹುಲ್ಲುಗಾವಲುಗಳು ಮತ್ತು ನದಿಗಳು-ಇವುಗಳಿಂದ ಕೂಡಿ ಸೌಂದರ್ಯದಿಂದ ಮೆರೆಯುತ್ತಿದ್ದಿತು, ಆ ದೇಶ. ೫. ಆ ನಾಡಿನಲ್ಲಿ ತಾವರೆ ಮತ್ತು ನೈದಿಲೆಗಳಿಲ್ಲದ ಸರೋವರಗಳಿಲ್ಲ. ತಮ್ಮ ಸುಸ್ವರದಿಂದ ಆನಂದಗೊಳಿಸದ ಗಿಳಿ-ಕೋಗಿಲೆಗಳು ಇಲ್ಲ. ಆ ಗಿಳಿ, ಕೋಗಿಲೆಗಳಿಗೆ ಸಿಹಿಯಾದ ಹಣ್ಣಿನ ಗೊಂಚಲುಗಳನ್ನು ಕೊಡದ ಮಾವಿನ ಮರಗಳಿಲ್ಲ. ಮಾವಿನ ಮರಗಳನ್ನು ಅಪ್ಪಿಕೊಳ್ಳದ ಬಳ್ಳಿಗಳಿಲ್ಲ. ಆ ಬಳ್ಳಿಗಳಲ್ಲಿ



CC-0. Jangamwadi Math Collection. Digitized by eGangotri

ಮಂಜುಳಧ್ವನಿಗುಡದ ಪರಮೆ ಪರಮೆಗೆ ಸಂತ
ಸಂ ಜನಿಸದರಲರಲ ನವಪರಿಮಳಂಗಳಿಂ
ದಂ ಜಡಿಯದೆಳಗಾಳಿಂಪೊಳಗಾಳಿಯಿಲ್ಲದಿಹ ಬನವಿಲ್ಲವಾ ನಾಡೊಳು ೫

ಪೊರೆಯುದ ಸರಂಗಳಂ ಚಂದ್ರಕಾಂತಂಗಳಿಂ
ಮೆರೆಯುದ ಧರಂಗಳಂ ಕಿವಿಗಮೃತಸಾರಮಂ
ಕರೆಯುದ ಸ್ವರಂಗಳಂ ದುರ್ನೀತಿ ದುರ್ಮಾರ್ಗ ದುಷ್ಕೀರ್ತಿಸಂತತಿಯನು
ತೊರೆಯುದ ಜನಂಗಳಂ ಸುರಪುರೋದ್ಯಾನಮಂ
ಜರೆಯುದ ಬನಂಗಳಂ ಜಾತಿವೈರಂಗಳಂ
ಮರೆಯುದ ಮೃಗಂಗಳಂ ಕಾಣೆನಾದೇಶದೊಳಗೇನೆಂಬೆನಚ್ಚರಿಯನು ೬

ಸುರಸಭೆಯವೊಲ್ ಸುಧರ್ಮಾಧಿಷ್ಠಿತಂ ನಾಡೆ
ತರಣಿಮಂಡಲದಂತೆ ಗೋಮಂಡಲಾನ್ವಿತಂ
ತರುಣೀಸ್ತನದ್ವಂದ್ವದಂತಗ್ರಹಾರಮಾಲಾಲಂಕೃತಂ ನೋಳ್ಪೊಡೆ
ಸರಸಿವೊಲ್ ಪದ್ಮಾಲಯಂ ವತ್ಸರಂಗಳಂ
ತಿರೆ ಯುಕ್ತಬಹುಧಾನ್ಯಮೆಸೆವ ಗಂಧರ್ವರಂ
ತುರುತರೋದ್ಯಾನ ಶೋಭಾಮೋಹದಿಂದಮಾ ನಾಡ ಸಿರಿ ಕರಮೆಸೆದುದು ೭

ಮಂಜುಳನಾದವನ್ನು ಉಂಟುಮಾಡದ ದುಂಬಿಗಳಿಲ್ಲ. ದುಂಬಿಗಳಿಗೆ ಸಂತೋಷವನ್ನು ಉಂಟುಮಾಡದಿರುವ ಹೂಗಳಿಲ್ಲ. ಹೂವಿನ ಸುವಾಸನೆಯಿಂದ ಕೂಡಿ ಬೀಸದಿರುವ ಎಳ ಗಾಳಿಯಿಲ್ಲ. ಎಳಗಾಳಿ ಬೀಸದ ವನಗಳಿಲ್ಲ. ೬. ಉಕ್ಕಿ ಹರಿಯುದ ಸರೋವರಗಳನ್ನು ಚಂದ್ರಕಾಂತಶಿಲೆಗಳಿಂದ ಮೆರೆಯುದ ಪರ್ವತಗಳನ್ನು ಕಿವಿಗಳಿಗೆ ಅಮೃತರಸದಂತೆ ಆನಂದವನ್ನುಂಟುಮಾಡದ ಧ್ವನಿಗಳನ್ನು ಕೆಟ್ಟ ನೀತಿ–ಕೆಟ್ಟ ಮಾರ್ಗ ಅಪಕೀರ್ತಿಗಳ ಸಮೂಹವನ್ನು ಬಿಡದೆ ಇರುವ ಜನರನ್ನೂ ದೇವಲೋಕದ ನಂದನವನ್ನು ತಿರಸ್ಕರಿಸ ದಿರುವ ವನಗಳನ್ನೂ ತಮ್ಮ ಜಾತಿಗೆ ಸಹಜವಾದ ದ್ವೇಷವನ್ನು ಮರೆಯದೆ ಇರುವ ಮೃಗಗಳನ್ನೂ ಆ ದೇಶದಲ್ಲಿ ಕಾಣಲು ಸಾಧ್ಯವಿಲ್ಲ. ಆ ಅಚ್ಚರಿಯನ್ನು ಏನೆಂದು ಹೇಳಲಿ ? ೭. ದೇವತೆಗಳ ಸಭೆಯಂತೆ ಆ ನಾಡಿನಲ್ಲಿ ಸದ್ಧರ್ಮವು ನೆಲಸಿದ್ದಿತು. ಸೂರ್ಯಮಂಡಲದಂತೆ ದನ ಕರುಗಳ ಮಂದೆಯಿಂದ ಕೂಡಿದ್ದಿತು. ಹೆಂಗಸರ ಎರಡು ಮೊಲೆಗಳಂತೆ ಅಗ್ರಹಾರಗಳು ಹೂಮಾಲೆಗಳಿಂದ ಅಲಂಕೃತವಾಗಿದ್ದವು. ಸರೋವರ ಗಳು ಕಮಲದಿಂದ ಶೋಭಿಸುತ್ತಿದ್ದುವು, ಸಂವತ್ಸರದಲ್ಲಿ ಬಹುಧಾನ್ಯ ಹೇಗೋ ಹಾಗೆ ಧಾನ್ಯಸಂಪತ್ತಿನಿಂದ ತುಂಬಿದ್ದಿತು. ಗಂಧರ್ವರ ಉದ್ಯಾನದಂತೆ ಶ್ರೇಷ್ಠವಾದ ಉದ್ಯಾನಗಳು ಆಕರ್ಷಿಸುವ ಶೋಭೆಯಿಂದ ಕೂಡಿದ್ದುವು. ಹೀಗೆ ಆ ನಾಡು ಸಂಪ

CC-0. Jangamwadi Math Collection. Digitized by eGangotri

ದೇವಮಾತೃಕ ನದೀಮಾತೃಕದೊಳಂ ಬೆಳೆವು
ದಾವ ಚೋದ್ಯಂ ಗಿಳಿ ಕರ್ದುಂಕಿದೊಡೆ ಬೀಳ್ವಿನಿದು
ಮಾವಣ್ಣ ತನಿರಸದ ಕಾಲ್ಗಳಿಂ ಬೆಳೆವುವಾ ಗಾಳಿಗಲೆದೋಸರಿಸುವ
ತೀವಿದೆಳನೀರ ಕಬ್ಬಿನ ಸಾರದಿಂ ಬೆಳೆವು
ವಾವಗಂ ಪಾಮರೀಮುಖಶಶಿಗೊಸರ್ವಿಂದು
ಗ್ರಾವನಿರ್ಮಳಜಲದ ಪೂರದಿಂ ಬೆಳೆವುತಿಪ ಶಾಳಿಗಳ್ ಕಣ್ಗೆಸೆದುವು ೮

ಶಾಳಿಗೆರಗಿದ ಗಿಳಿಗಳಂ ಸೋವ ಪಾಮರೀ
ಜಾಳದೊಂದುಲಿಪುಮಂ ಕೋಕಿಲನಿನಾದಮಂ
ದೇಳಿದಂಗೆಯ್ದು ತೊಲಗದೆ ನಿಂದ ಕೀರಾಳಿ ಸಲೆ ಕಂಗೊಳಿಸಿತೆಂದೆನೆ
ಭೂಲಲನೆಗಾ ಕಳಮೆ ಪ್ರಸವೋತ್ಸವಕ್ಕೆ ಸಂ
ಮೇಳಿಸಿದ ಕೆಂಪುಗೂಡಿದ ಪಸುರುಪಟ್ಟೆಯು ವಿ
ಶಾಲವಸನದ ಮುಸುಕಿದೆಂಬಿಸುಂ ಕಣ್ಗೆಸೆದುದೇನೆಂಬೆನಚ್ಚರಿಯುಮಂ ೯

ಪಲವುಕಾಲಂ ಬೆಳೆದಿದೇಂ ಫಲಂ ಕಡೆಯಲ್ಲಿ
ತಲೆಗೊಯ್ಸಿಕೊಂಬುದೆಂದುಂ ಬಿಡದೆನುತೆ ನಾಣ್ಚಿ
ತಲೆವಾಗಿದುವೊ ಪುತ್ರಮೋಹದಿಂ ಪ್ರತಿದಿನಂ ತನ್ನ ನೋವಂ ನೋಡದೆ

ದ್ಯುಕ್ತವಾಗಿ ಮನೋಹರವಾಗಿತ್ತು. ೮. ಮಳೆನೀರು ಮತ್ತು ನದೀ ನೀರಿನಿಂದ ಭತ್ತವನ್ನು ಬೆಳೆಯುವುದು ಆಶ್ಚರ್ಯವಾದುದೇನೂ ಅಲ್ಲ. ಗಿಳಿ ಕುಕ್ಕಿದರೆ ಕೆಳಗೆ ಬೀಳುವ ಸಿಹಿಯಾದ ಮಾವಿನ ಹಣ್ಣಿನ ಸವಿರಸದ ಕಾಲುವೆಗಳಿಂದ ಗಾಳಿಗೆ ಅತ್ತಿತ್ತ ತೂಗಾಡುವ ಒಳ್ಳೆಯ ತುಂಬಿದ ಎಳನೀರಿನಿಂದ ಮತ್ತು ಕಬ್ಬಿನ ರಸದಿಂದ ಯಾವಾಗಲೂ ಬೆಳೆಯುವ ; ಗ್ರಾಮಾಂತರಗಳ ಹೆಂಗಸರ ಮುಖಚಂದ್ರನಿಗೆ ದ್ರವಿಸುವ ಚಂದ್ರಶಿಲೆಯ ನಿರ್ಮಲವಾದ ನೀರಿನ ಪ್ರವಾಹದಿಂದ ಬೆಳೆಯುವ ಭತ್ತದ ಗದ್ದೆಗಳು ಕಂಗೊಳಿಸಿದುವು. ೯. ಭತ್ತದ ತೆನೆಗಳಿಗೆ ಎರಗಿದ ಗಿಳಿಗಳನ್ನು ಓಡಿಸಲು ಕೂಗುತ್ತಿರುವ ಒಕ್ಕಲಸ್ತ್ರೀಯರ (ಬೇಡತಿಯರ) ಗುಂಪಿನ ಕೂಗನ್ನು ಕೋಗಿಲೆಯ ಕೂಗೆಂದು ಅದನ್ನು ತಿರಸ್ಕರಿಸಿ ಓಡಿಹೋಗದೆ ನಿಂತ ಗಿಳಿಗಳ ಸಮೂಹವು ನೋಡಲು ಆಕರ್ಷಕವಾಗಿದ್ದಿತು. ಎಂದರೆ ಮತ್ತೊಂದು ರೀತಿಯಲ್ಲಿ ಆ ಭತ್ತಕ್ಕೆ ಮುತ್ತಿದ್ದ ಗಿಳಿಗಳು ಭೂವನಿತೆಗೆ ಆ ಭತ್ತವು ಅವಳ ಪ್ರಸವೋತ್ಸವಕ್ಕೆ ಹೊಂದಿಕೊಳ್ಳುವಂತೆ ಕಟ್ಟಿದ್ದ ಕೆಂಪು ಕೂಡಿದ ಹಸಿರುಪಟ್ಟೆಗಳ ವಿಶಾಲವಾದ ಬಟ್ಟೆಯ ಮುಸುಕು ಎನ್ನುವಂತೆ ಮನೋಹರವಾಗಿ ಕಾಣುತ್ತಿದ್ದಿತು. ೧೦. ಹಲವುಕಾಲ ಬೆಳೆದುದಕ್ಕೆ ಏನು ಫಲ ? ಕೊನೆಗೆ ತಲೆಯನ್ನು ಕೊಯ್ಸಿಕೊಳ್ಳುವುದು ಎಂದಿಗೂ ತಪ್ಪುವುದಿಲ್ಲ, ಎಂದು ಅವಮಾನಗೊಂಡು ತಲೆಬಾಗಿದುವೋ ? ಪುತ್ರ ಮೋಹದಿಂದ ಪ್ರತಿದಿನವೂ ತನ್ನ ನೋವನ್ನೂ ಎಣಿಸದೆ ಕಾಪಾಡಿದ ತಾಯಿಯಾದ

CC-0. Jangamwadi Math Collection. Digitized by eGangotri

ಸಲಹಿದೀ ಭೂದೇವಿಗಂ ನಮಿಸಿ ಭಕ್ತಿಯಿಂ
ನಲಿದು ಬಾಗಿದುವೊ ಪೇಳೆಂಬಿನಂ ಕಿಕ್ಕಿರಿದ
ಫಲಭಾರದಿಂ ಕೊರಲ್ವಾಗಿ ಕಣ್ಗೊಳಿಸಿರ್ದ ಶಾಲಿಗಳ್ ಕರಮೆಸೆದುವು ೧೦

ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು
ಹಿಂಡಿ ರಸಮಂ ತೆಗೆದು ಕಾಸಿ ಕಾಲ್ದುಳಿಯಲುಂ
ಖಂಡಶರ್ಕರೆಯಾದೆವೇಗೈದೊಡಂ ಸುಗುಣಮಂ ಬಿಡದ ಸುಜನರಂತೆ
ದಿಂಡುರುಳ್ಚಿದೆವಾಳ್ದನಿದಿರಾದರಂ ಸುಕೋ
ದಂಡರೂಪಿಂ ಸ್ವಾಮಿಹಿತಕಿನ್ನು ತಮ್ಮೊಳು
ದ್ದಂಡತೆಯ ಬಿರುದೆತ್ತಿತೆನೆ ಸೋಗೆವಸುರ ಕಬ್ಬಿನ ಕೊರ್ಬು ಕಣ್ಗೆಸೆದುದು ೧೧

ಬೆಳೆದ ನಾನಾ ಶಾಳಿ ಗರ್ದೆಗಳ ಪಾಳಿಗಳೊ
ಳುಲಿವ ಕೀರಾಳಿ ಸುಳಿಗಾಳಿಯಿಂ ಕೆದರ್ದ ಪೂ
ಗಳ ಧೂಳಿ ಪಾಡುವ ಮದಾಳಿ ಸತತಂ ಪಾಮರಿಯರೋಳಿ ಸಲೆ ಬಳಸಿದ
ತೊಳಗುವ ವನಾಳಿಯೊಳ್ ವಿಟಕೇಳಿ ಮತ್ತಕೋ
ಕಿಳಕೇಕಿ ಹಂಸಾಳಿಯುಂ ಕಾಣುತಿದು ಸ್ಮರನ
ಬಲುದಾಳಿಯೆಂದು ಪಾಂಥರ್ ಕಾಲುಗೆಟ್ಟು ನಿಂದಿರೆ ನೋಡುತೆಯ್ತಂದರು ೧೨

ಭೂದೇವಿಗೆ ಭಕ್ತಿಯಿಂದ ನಮಸ್ಕರಿಸಿ ಸಂತೋಷದಿಂದ ತಲೆಬಾಗಿದುವೋ ? ಎನ್ನುವಂತೆ ಒತ್ತಾಗಿ ಬೆಳೆದಿದ್ದ ತೆನೆಗಳ ಭಾರದಿಂದ ಕತ್ತನ್ನು ಕೊಂಕಿಸಿ ಪ್ರಕಾಶಿಸುತ್ತಿದ್ದ ಭತ್ತದ ತೆನೆಗಳು ಶೋಭಿಸುತ್ತಿದ್ದುವು. ೧೧. ತುಂಡುತುಂಡಾಗಿ ಕತ್ತರಿಸಿ ಗಾಣದಲ್ಲಿಟ್ಟು ಅರೆದು ಹಿಂಡಿ ರಸವನ್ನು ತೆಗೆದು ಕಾಯಿಸಿ ಕಾಲಿನಿಂದ ತುಳಿದರೂ, ಎಂತಹ ಕಷ್ಟಕ್ಕೆ ಗುರಿ ಮಾಡಿದರೂ ಒಳ್ಳೆಯ ಗುಣವನ್ನು ಬಿಡದ ಸಜ್ಜನರಂತೆ ನಾವು ಕಲ್ಲುಸಕ್ಕರೆ ಯಾಗುತ್ತೇವೆ. ನಮ್ಮ ಒಡೆಯನಿಗೆ ಎದುರಾದವರನ್ನು ಬಿಲ್ಲಿನ ರೂಪದಿಂದ ಕೊರಡಿ ನಂತೆ ಉರುಳಿಸಿದೆವು. ಸ್ವಾಮಿಯ ಹಿತಕ್ಕೆ ದುಡಿಯುವವರು ಎಂದು ನಮ್ಮಲ್ಲಿ ಇನ್ನೂ ಪ್ರಚಂಡವಾದ ಕೀರ್ತಿಯುಂಟು ಎನ್ನುವಂತೆ ಹಸಿರುಗರಿಗಳಿಂದ ಕೂಡಿ ಕೊಬ್ಬಿ ಬೆಳೆದಿದ್ದ ಕಬ್ಬಿನ ಜಲ್ಲೆಗಳು ಕಣ್ಣಿಗೆ ಮನೋಹರವಾಗಿ ಕಾಣಿಸಿದುವು. ೧೨. ಬೆಳೆದು ನಿಂತಿರುವ ಭತ್ತದ ಗದ್ದೆಗಳ ಬದುವಿನಲ್ಲಿ ಧ್ವನಿಮಾಡುತ್ತಿರುವ ಗಿಳಿಗಳ ಸಮೂಹ, ಮಂದಮಾರುತದ ಸುಳಿವಿನಿಂದ ಚೆಲ್ಲಾಪಿಲ್ಲಿಯಾಗಿ ಚೆದುರಿದ ಹೂವಿನ ಧೂಳಿ, ಹಾಡುತ್ತಿರುವ ಮದಿಸಿದ ದುಂಬಿಗಳು, ಮುಗ್ಧ ಹೆಂಗಳೆಯರ ಗುಂಪು, ಸುತ್ತುವರಿದು ಕಂಗೊಳಿಸುತ್ತಿದ್ದ ವನಗಳಲ್ಲಿ ಸಲ್ಲಾಪಮಾಡುವ ವಿಟರ ಸಮೂಹ, ಮದಿಸಿದ ಕೋಗಿಲೆಗಳು, ನವಿಲು ಮತ್ತು ಹಂಸಗಳು, ಇವುಗಳನ್ನು ಕಾಣುತ್ತ ಇದು ಮನ್ಮಥನ ದೊಡ್ಡ ದಾಳಿಯೆಂದು ಪ್ರಯಾಣಿಕರು ನಿಂತು ನೋಡುತ್ತಿದ್ದರು. ಇವುಗಳನ್ನೆಲ್ಲ ನೋಡುತ್ತ ಅವರು (ಪ್ರಭು—ಸಿದ್ಧರಾಮ) ಮುಂದೆ

CC-0. Jangamwadi Math Collection. Digitized by eGangotri

ಸುರಿದ ಶಾಲ್ಯನ್ನರಾಸಿಗಳ ಘೃತಪೂರಿತದ
ಹರವಿಗಳ ಸೂಪಾದಿ ಶಾಕಸಂತತಿಯ ಪರಿ
ಪರಿಯ ಪಚ್ಚಡಿಯುಪ್ಪುಗಾಯ್ ಭಕ್ಷ್ಯಪರಮಾನ್ನ ಬಹುವಿಧದ ಶೀಕರಣೆಯ
ತರತರದ ದಧಿ ದುಗ್ಧ ತಕ್ರದಿಂ ಪುದಿದ ಕೊ
ಪ್ಪರಿಗೆಗಳನುಂಡುಂಡು ಪೋಪ ನಡೆತರ್ಪ ಪಥಿ
ಕರ ನೆರವಿಗಳ ಸತ್ರದಾಲಯಂ ರಂಜಿಸಿದುದಾ ಪಥದೊಳೇನೆಂಬೆನು ೧೩

ಕಲಶಂಗಳೆತ್ತಿ ನೀರೆರೆವ ಕಾಂತೆಯರ ಪೊಂ
ಗಳಸಸ್ತನಂಗಳಂ ಮಂಗಳಮುಖಂಗಳಂ
ತಳಿರ್ದುಟಿಗಳಂ ಮುದ್ದುನಗೆಗಳಂ ಕಂಡು ನಡೆಯಲ್ ಮುಂದೆ ಕಾಲೇಳದೆ
ಬಳಲಿಕೆಯನಾರಿಸುವ ನೆವದೊಳಲ್ಲಲ್ಲಿ ಸಮೆ
ದಿಳಿಪಿರ್ದ ಗಂಡುಬೊಂಬೆಗಳಂತೆ ಪಥಿಕಸಂ
ಕುಳಮಿರ್ದುದರವಟ್ಟಿಗೆಯ ನೆಳಲ ಸಾರಿ ಸುಖಸಂತಸದೊಳೇನೆಂಬೆನು ೧೪

ನೀರನೀಂಟುವ ನೆವದೊಳಬಲೆಯರ ಲಲಿತ ಶೃಂ
ಗಾರರಸಸುಧೆಯನಾ ಕಣ್ಗಳಿಂದೀಂಟಿ ಸವಿ
ಸೋರುತಿಪ ವಾಗಮೃತಮಂ ಕರ್ಣದಿಂದೀಂಟಿ ತಣಿಯದುರೆ ಕಣ್ಣ ಮುಚ್ಚಿ

ಹೋಗುತ್ತಿದ್ದರು. ೧೩. ಅವರು ಬರುವ ದಾರಿಯಲ್ಲಿ ಒಂದು ಛತ್ರವಿದ್ದಿತು. ಅಲ್ಲಿ ಸುರಿದ ಅಕ್ಕಿಯ ಅನ್ನದ ರಾಶಿಗಳಿದ್ದವು, ತುಪ್ಪದಿಂದ ತುಂಬಿದ ಮಡಕೆಗಳಿದ್ದವು. ವಿವಿಧ ತರಕಾರಿಯಿಂದ ಮಾಡಿದ ತೊವ್ವೆ, ಬಗೆ ಬಗೆಯ ಪಚ್ಚಡಿಗಳಿದ್ದವು; ಉಪ್ಪಿನ ಕಾಯಿಗಳಿದ್ದವು, ಭಕ್ಷ್ಯ–ಪರಮಾನ್ನಗಳಿದ್ದವು, ಅನೇಕ ರೀತಿಯ ಸೀಕರಣೆಗಳಿದ್ದವು. ಕೊಪ್ಪರಿಗೆಗಳಲ್ಲಿ ಬಗೆ ಬಗೆಯ ಮೊಸರು, ಹಾಲು, ನೀರು ಮಜ್ಜಿಗೆಗಳು ತುಂಬಿದ್ದುವು. ಇವನ್ನೆಲ್ಲ ಚೆನ್ನಾಗಿ ಊಟ ಮಾಡಿ ಹೋಗುವ ಬರುವ ದಾರಿಗರ ಸಮೂಹವು ಕಣ್ಣಿಗೆ ಚೆನ್ನಾಗಿ ತೋರುತ್ತಿದ್ದಿತು. ೧೪. ಕೊಡಗಳನ್ನು ಎತ್ತಿ ನೀರೆರೆಯುತ್ತಿರುವ ಸ್ತ್ರೀಯರ ಹೊನ್ನಿನ ಕಳಶಗಳಂತೆ ಕಾಣುವ ಮೊಲೆಗಳನ್ನೂ, ಸುಂದರವಾಗಿ ಕಾಣುವ ಅವರ ಮುಖ ಗಳನ್ನೂ, ಚಿಗುರಿನಂತಿರುವ ಕೋಮಲವಾದ ತುಟಿಗಳನ್ನೂ, ಮುದ್ದು ಮುದ್ದಾದ ನಗೆಯನ್ನೂ ನೋಡಿ ದಾರಿಗರು ಮುಂದೆ ನಡೆಯಲು ಕಾಲೇ ಬರದೆ, ಆಯಾಸವನ್ನು ಪರಿಹರಿಸಿಕೊಳ್ಳುವ ನೆವದಿಂದ ಅಲ್ಲಲ್ಲಿದ್ದ ಅರವಟ್ಟಿಗೆಗಳ ನೆರಳಿನಲ್ಲಿ ಕಡೆದು ನಿಲ್ಲಿಸಿದ್ದ ಬೊಂಬೆಗಳಂತೆ ಚಲಿಸದಿದ್ದರು. ೧೫. ನೀರನ್ನು ಕುಡಿಯುವ ನೆವದಲ್ಲಿ ಆ ಪಥಿಕರು ಆ ಕೋಮಲಾಂಗಿಯರ ಮನೋಹರವಾದ ಶೃಂಗಾರರಸಾಮೃತವನ್ನು ಕಣ್ಣುಗಳಿಂದ ಕುಡಿಯುತ್ತ, ಸವಿಯು ಸೋರುತ್ತಿರುವ ಅವರ ಮಾತು ಎಂಬ ಅಮೃತವನ್ನು ಕಿವಿ ಗಳಿಂದ ಹೀರುತ್ತಿದ್ದರು. ಆದರೂ ಅವರಿಗೆ ತೃಪ್ತಿಯಾಗದೆ ಕಣ್ಣನ್ನು ಮುಚ್ಚಿ ಒಂದೇ

CC-0. Jangamwadi Math Collection. Digitized by eGangotri

ಸಲೆಹಿಡಿದೀ ಭೂದೇವಿಗಂ ನಮಿಸಿ ಭಕ್ತಿಯಿಂ
ನಲಿದು ಬಾಗಿದುವೊ ಪೇಳೆಂಬಿನಂ ಕಿಕ್ಕಿರಿದ
ಫಲಭಾರದಿಂ ಕೊರಲ್ವಾಗಿ ಕಣ್ಗೊಳಿಸಿರ್ದ ಶಾಲಿಗಳ್ ಕರಮೆಸೆದುವು ೧೦

ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು
ಹಿಂಡಿ ರಸಮಂ ತೆಗೆದು ಕಾಸಿ ಕಾಲ್ದುಳಿಯುಲುಂ
ಖಂಡಶರ್ಕರೆಯಾದೆವೇಗೈದೊಡಂ ಸುಗುಣಮಂ ಬಿಡದ ಸುಜನರಂತೆ
ದಿಂಡುರುಳ್ಚಿದೆವಾಳ್ದಗಿದಿರಾದರಂ ಸುಕೋ
ದಂಡರೂಪಿಂ ಸ್ವಾಮಿಹಿತಕಿನ್ನು ತಮ್ಮೊಳು
ದ್ದಂಡತೆಯ ಬಿರುದೆತ್ತಿತೆನೆ ಸೋಗೆವಸುರ ಕಬ್ಬಿನ ಕೊರ್ಬು ಕಣ್ಗೆಸೆದುದು ೧೧

ಬೆಳೆದ ನಾನಾ ಶಾಳಿ ಗರ್ದೆಗಳ ಪಾಳಿಗಳೊ
ಳುಲಿವ ಕೀರಾಳಿ ಸುಳಿಗಾಳಿಯಿಂ ಕೆದರ್ದ ಪೂ
ಗಳ ಧೂಳಿ ಪಾಡುವ ಮದಾಳಿ ಸತತಂ ಪಾಮರಿಯರೋಳಿ ಸಲೆ ಬಳಸಿದ
ತೊಳಗುವ ವನಾಳಿಯೊಳ್ ವಿಟಕೇಳಿ ಮತ್ತಕೋ
ಕಿಳಕೇಕಿ ಹಂಸಾಳಿಯುಂ ಕಾಣುತಿದು ಸ್ಮರನ
ಬಲುದಾಳಿಯೆಂದು ಪಾಂಥರ್ ಕಾಲುಗೆಟ್ಟು ನಿಂದಿರೆ ನೋಡುತಯ್ತಂದರು ೧೨

ಭೂದೇವಿಗೆ ಭಕ್ತಿಯಿಂದ ನಮಸ್ಕರಿಸಿ ಸಂತೋಷದಿಂದ ತಲೆಬಾಗಿದುವೋ ? ಎನ್ನುವಂತೆ ಒತ್ತಾಗಿ ಬೆಳೆದಿದ್ದ ತೆನೆಗಳ ಭಾರದಿಂದ ಕತ್ತನ್ನು ಕೊಂಕಿಸಿ ಪ್ರಕಾಶಿಸುತ್ತಿದ್ದ ಭತ್ತದ ತೆನೆಗಳು ಶೋಭಿಸುತ್ತಿದ್ದುವು. ೧೧. ತುಂಡುತುಂಡಾಗಿ ಕತ್ತರಿಸಿ ಗಾಣದಲ್ಲಿಟ್ಟು ಅರೆದು ಹಿಂಡಿ ರಸವನ್ನು ತೆಗೆದು ಕಾಯಿಸಿ ಕಾಲಿನಿಂದ ತುಳಿದರೂ, ಎಂತಹ ಕಷ್ಟಕ್ಕೆ ಗುರಿ ಮಾಡಿದರೂ ಒಳ್ಳೆಯ ಗುಣವನ್ನು ಬಿಡದ ಸಜ್ಜನರಂತೆ ನಾವು ಕಲ್ಲುಸಕ್ಕರೆಯಾಗುತ್ತೇವೆ. ನಮ್ಮ ಒಡೆಯನಿಗೆ ಎದುರಾದವರನ್ನು ಬಿಲ್ಲಿನ ರೂಪದಿಂದ ಕೊರಡಿನಂತೆ ಉರುಳಿಸಿದೆವು. ಸ್ವಾಮಿಯ ಹಿತಕ್ಕೆ ದುಡಿಯುವವರು ಎಂದು ನಮ್ಮಲ್ಲಿ ಇನ್ನೂ ಪ್ರಚಂಡವಾದ ಕೀರ್ತಿಯುಂಟು ಎನ್ನುವಂತೆ ಹಸಿರುಗರಿಗಳಿಂದ ಕೂಡಿ ಕೊಬ್ಬಿ ಬೆಳೆದಿದ್ದ ಕಬ್ಬಿನ ಜಲ್ಲೆಗಳು ಕಣ್ಣಿಗೆ ಮನೋಹರವಾಗಿ ಕಾಣಿಸಿದುವು. ೧೨. ಬೆಳೆದು ನಿಂತಿರುವ ಭತ್ತದ ಗದ್ದೆಗಳ ಬದುವಿನಲ್ಲಿ ಧ್ವನಿಮಾಡುತ್ತಿರುವ ಗಿಳಿಗಳ ಸಮೂಹ, ಮಂದಮಾರುತದ ಸುಳಿವಿನಿಂದ ಚೆಲ್ಲಾಪಿಲ್ಲಿಯಾಗಿ ಚೆದುರಿದ ಹೂವಿನ ಧೂಳಿ, ಹಾಡುತ್ತಿರುವ ಮದಿಸಿದ ದುಂಬಿಗಳು, ಮುಗ್ಧ ಹೆಂಗಳೆಯರ ಗುಂಪು, ಸುತ್ತುವರಿದು ಕಂಗೊಳಿಸುತ್ತಿದ್ದ ವನಗಳಲ್ಲಿ ಸಲ್ಲಾಪಮಾಡುವ ವಿಟರ ಸಮೂಹ, ಮದಿಸಿದ ಕೋಗಿಲೆಗಳು, ನವಿಲು ಮತ್ತು ಹಂಸಗಳು, ಇವುಗಳನ್ನು ಕಾಣುತ್ತ ಇದು ಮನ್ಮಥನ ದೊಡ್ಡ ದಾಳಿಯೆಂದು ಪ್ರಯಾಣಿಕರು ನಿಂತು ನೋಡುತ್ತಿದ್ದರು. ಇವುಗಳನ್ನೆಲ್ಲ ನೋಡುತ್ತ ಅವರು (ಪ್ರಭು–ಸಿದ್ಧರಾಮ) ಮುಂದೆ

CC-0. Jangamwadi Math Collection. Digitized by eGangotri

ಸುರಿದ ಶಾಲ್ಯನ್ನರಾಸಿಗಳ ಘೃತಪೂರಿತದ
ಹರವಿಗಳ ಸೂಪಾದಿ ಶಾಕಸಂತತಿಯ ಪರಿ
ಪರಿಯ ಪಚ್ಚಡಿಯುಪ್ಪುಗಾಯ್ ಭಕ್ಷ್ಯಪರಮಾನ್ನ ಬಹುವಿಧದ ಶೀಕರಣೆಯು
ತರತರದ ದಧಿ ದುಗ್ಧ ತಕ್ರದಿಂ ಪುದಿದ ಕೊ
ಪ್ಪರಿಗೆಗಳನುಂಡುಂಡು ಪೋಪ ನದೆತರ್ಪ ಪಥಿ
ಕರ ನೆರವಿಗಳ ಸತ್ರದಾಲಯಂ ರಂಜಿಸಿದುದಾ ಪಥದೊಳೇನೆಂಬೆನು ೧೩

ಕಲಶಂಗಳೆತ್ತಿ ನೀರೆರೆವ ಕಾಂತೆಯರ ಪೊಂ
ಗಳಸಸ್ತನಂಗಳಂ ಮಂಗಳಮುಖಂಗಳಂ
ತಳಿರ್ದುಟಿಗಳಂ ಮುದ್ದುನಗೆಗಳಂ ಕಂಡು ನಡೆಯಲ್ ಮುಂದೆ ಕಾಲೇಳದೆ
ಬಳಲಿಕೆಯನಾರಿಸುವ ನೆವದೊಳಲ್ಲಲ್ಲಿ ಸಮೆ
ದಿಳಿಪಿರ್ದ ಗಂಡುಬೊಂಬೆಗಳಂತೆ ಪಥಿಕಸಂ
ಕುಳಮಿರ್ದುದರವಟ್ಟಿಗೆಯ ನೆಳಲ ಸಾರಿ ಸುಖಸಂತಸದೊಳೇನೆಂಬೆನು ೧೪

ನೀರನೀಂಟುವ ನೆವದೊಳಬಲೆಯರ ಲಲಿತ ಶೃಂ
ಗಾರರಸಸುಧೆಯನಾ ಕಣ್ಗಳಿಂದೀಂಟಿ ಸವಿ
ಸೋರುತಿಹ ವಾಗಮೃತಮಂ ಕರ್ಣದಿಂದೀಂಟಿ ತಣಿಯದುದುರೆ ಕಣ್ಣ ಮುಚ್ಚಿ

ಹೋಗುತ್ತಿದ್ದರು. ೧೩. ಅವರು ಬರುವ ದಾರಿಯಲ್ಲಿ ಒಂದು ಛತ್ರವಿದ್ದಿತು. ಅಲ್ಲಿ ಸುರಿದ ಅಕ್ಕಿಯ ಅನ್ನದ ರಾಶಿಗಳಿದ್ದವು, ತುಪ್ಪದಿಂದ ತುಂಬಿದ ಮಡಕೆಗಳಿದ್ದವು. ವಿವಿಧ ತರಕಾರಿಯಿಂದ ಮಾಡಿದ ತೊವ್ವೆ, ಬಗೆ ಬಗೆಯ ಪಚ್ಚಡಿಗಳಿದ್ದವು, ಉಪ್ಪಿನ ಕಾಯಿಗಳಿದ್ದವು, ಭಕ್ಷ್ಯ—ಪರಮಾನ್ನಗಳಿದ್ದವು, ಅನೇಕ ರೀತಿಯ ಸೀಕರಣೆಗಳಿದ್ದವು. ಕೊಪ್ಪರಿಗೆಗಳಲ್ಲಿ ಬಗೆ ಬಗೆಯ ಮೊಸರು, ಹಾಲು, ನೀರು ಮಜ್ಜಿಗೆಗಳು ತುಂಬಿದ್ದುವು. ಇವನ್ನೆಲ್ಲ ಚೆನ್ನಾಗಿ ಊಟ ಮಾಡಿ ಹೋಗುವ ಬರುವ ದಾರಿಗರ ಸಮೂಹವು ಕಣ್ಣಿಗೆ ಚೆನ್ನಾಗಿ ತೋರುತ್ತಿದ್ದಿತು. ೧೪. ಕೊಡಗಳನ್ನು ಎತ್ತಿ ನೀರೆರೆಯುತ್ತಿರುವ ಸ್ತ್ರೀಯರ ಹೊನ್ನಿನ ಕಳಶಗಳಂತೆ ಕಾಣುವ ಮೊಲೆಗಳನ್ನೂ, ಸುಂದರವಾಗಿ ಕಾಣುವ ಅವರ ಮುಖ ಗಳನ್ನೂ, ಚಿಗುರಿನಂತಿರುವ ಕೋಮಲವಾದ ತುಟಿಗಳನ್ನೂ, ಮುದ್ದು ಮುದ್ದಾದ ನಗೆಯನ್ನೂ ನೋಡಿ ದಾರಿಗರು ಮುಂದೆ ನಡೆಯಲು ಕಾಲೇ ಬರದೆ, ಆಯಾಸವನ್ನು ಪರಿಹರಿಸಿಕೊಳ್ಳುವ ನೆವದಿಂದ ಅಲ್ಲಲ್ಲಿದ್ದ ಅರವಟ್ಟಿಗೆಗಳ ನೆರಳಿನಲ್ಲಿ ಕಡೆದು ನಿಲ್ಲಿಸಿದ್ದ ಬೊಂಬೆಗಳಂತೆ ಚಲಿಸದಿದ್ದರು. ೧೫. ನೀರನ್ನು ಕುಡಿಯುವ ನೆವದಲ್ಲಿ ಆ ಪಥಿಕರು ಆ ಕೋಮಲಾಂಗಿಯರ ಮನೋಹರವಾದ ಶೃಂಗಾರರಸಾಮೃತವನ್ನು ಕಣ್ಣುಗಳಿಂದ ಕುಡಿಯುತ್ತ, ಸವಿಯು ಸೋರುತ್ತಿರುವ ಅವರ ಮಾತು ಎಂಬ ಅಮೃತವನ್ನು ಕಿವಿ ಗಳಿಂದ ಹೀರುತ್ತಿದ್ದರು. ಆದರೂ ಅವರಿಗೆ ತೃಪ್ತಿಯಾಗದೆ ಕಣ್ಣನ್ನು ಮುಚ್ಚಿ ಒಂದೇ

CC-0. Jangamwadi Math Collection. Digitized by eGangotri

ಓರಂತೆ ಭಾವರತಿಸೌಖ್ಯಪೀಯೂಷರಸ
ಧಾರೆಯಂ ಚಿತ್ತದಿಂದೀಂಟಿ ನೆರೆ ತಣಿದು ಬಾ
ಯಾರೆ ಸಾಕೆನದೆ ತಲೆದೂಗಿದು ನೀರಂ ನಿಲಿಸುತಿರ್ದರಾ ಪಥಿಕರ್ಕಳು ೧೫

ಕರಕಮಳ ಶಶಿಕಾಂತಕಳಶಮಾಸ್ಯೇಂದುವಿಂ
ಕರಗದಿಪ್ಪುದೆ ಚೋದ್ಯವೆಂದು ದುಶ್ಚಿಂತೆಯಿಂ
ಕರಗುತಿದೆ ಸಿಂಹಮಧ್ಯಂಗಳಬುಜಾಕ್ಷಿಯರ ನೋಟದೊಳ್ ಪರೆದವೆಂದು
ಕರಿಕುಂಭಕುಚಯುಗಂ ಪೆಚ್ಚಿ ತಾವಿದ ಕಂಡು
ಪರಿಹಾಸಮಂ ಮಾಳ್ಪ ತೆರದೊಳರವಟ್ಟಿಗೆಯು
ತರುಣೀಜನಂಗಳಿರುತಿರೆ ಮುಂದೆ ಗೋಕುಲಂ ಕಣ್ಗೆ ಕಡುಚೆಲ್ವಾದುದು ೧೬

ತೋರಹೋರಿಗಳ ಡುರುಕಾರವಂ ಗಳದ ಘಂ
ಟಾರವಂ ಪಶುಗಳಂಬಾರವಂ ಕರುಗಳಂ
ಭೇರವಂ ಕರೆವ ಭೋರ್ಭೋರೀರವಂ ಮಂಥನದಾ ರವಂ ಗೊಲ್ಲತಿಯರ
ಭೂರಿಭೂಷಾರವಂ ಕರುಗಳಂ ಕರೆವ ಗೋ
ಪಾರವಂ ಮಾರ್ಮಲೆತು ಪೋರ್ವ ಘನವೃಷಭ ಶೃಂ
ಗಾರವಂಗೂಡಿ ನಾನಾರವಂ ಕಿವಿಗಳಂ ಪೂರೈಸಿತೇವೇಳ್ವೆನು ೧೭

ಸಮನೆ ಭಾವರತಿಸುಖವೆಂಬ ಅಮೃತರಸಧಾರೆಯನ್ನು ಮನಸ್ಸಿನಿಂದಲೇ ಕುಡಿದು ಸಂತೃಪ್ತರಾಗಿ ಬಾಯಾರಿಕೆ ತೀರಿದಾಗ ಸಾಕು ಎಂದು ಬಾಯಲ್ಲಿ ಹೇಳದೆ ತಲೆಯನ್ನು ಅಲ್ಲಾಡಿಸಿ ನೀರು ಕುಡಿಯುವುದನ್ನು ನಿಲ್ಲಿಸುತ್ತಿದ್ದರು. ೧೬. ಕರಕಮಲದಲ್ಲಿರುವ ಚಂದ್ರಕಾಂತಶಿಲೆಯ ಕಳಶವು ಮುಖಚಂದ್ರನಿಂದ ಕರಗದೇ ಇರುವುದೇ ಆಶ್ಚರ್ಯ ಎಂಬ ದುಷ್ಟ ಯೋಚನೆಯಿಂದ ಅವರ ನಡು ಸಣ್ಣದಾಗುತ್ತಿದೆ. ಕಮಲಾಕ್ಷಿಯರ ಕಣ್ಣ ನೋಟದಲ್ಲಿ ಹರಡಿದವೆಂದು ಆನೆಯ ಕುಂಭಸ್ಥಳದಂತಹ ಮೊಲೆಗಳು ಉಬ್ಬಿದುವು. ಅದನ್ನು ನೋಡಿ ಪರಿಹಾಸ್ಯ ಮಾಡುವ ರೀತಿಯಲ್ಲಿ ಅರವಟ್ಟಿಗೆಯ ತರುಣಿಯರು ಇರಲು ಅಲ್ಲಿಂದ ಮುಂದೆ ದನಗಳ ಮಂದೆಯು ಕಣ್ಣಿಗೆ ಹೆಚ್ಚು ಮನೋಹರವಾಗಿ ಕಂಡಿತು. ೧೭. ಪುಷ್ಟವಾಗಿ ಬೆಳೆದಿದ್ದ ಹೋರಿಗಳ ಡುರುಕ್ ಎಂಬ ಶಬ್ದ, ಅವುಗಳ ಕುತ್ತಿಗೆಯಲ್ಲಿ ಕಟ್ಟಿದ್ದ ಗಂಟೆಗಳ ಧ್ವನಿ, ಹಸುಗಳ ಅಂಬಾ ಎಂಬ ಕೂಗು,ಕರುಗಳ ಅಂಬೇ ಎಂಬ ಉಲಿವು, ಹಾಲು ಕರೆಯುವಾಗ ಉಂಟಾದ ಭೋರ್ ಎಂಬ ಶಬ್ದ, ಮೊಸರು ಕಡೆಯುವ ಶಬ್ದ, ಗೊಲ್ಲತಿಯರ ಆಭರಣಗಳ ಶಬ್ದ, ಕರುಗಳನ್ನು ಕೂಗುತ್ತಿದ್ದ ಗೋಪಾಲಕರ ಕೂಗು, ಒಂದನ್ನೊಂದು ತಾಗಿ ಹೋರಾಡುತ್ತಿರುವ ಭಾರಿ ಗೂಳಿಗಳ ಕೊಂಬಿನ ಶಬ್ದವೂ ಸೇರಿ ಅನೇಕ ರೀತಿಯ ಶಬ್ದಗಳು ಕಿವಿಗಳನ್ನು ತುಂಬಿದುವು.

CC-0. Jangamwadi Math Collection. Digitized by eGangotri

ಮುನಿಯಂತೆ ಕರಿಯಂತೆ ಶಶಿಯಂತೆ ಭಟನಂತೆ
ವನಕುಸುಮದಂತೆಯಿಶಾನ್ಯವೈಭವದಂತೆ
ಘನತರವ್ರತವಶಾರೋಹಿಣೀಧೇನು ಸಂಸುರಭಿ ವೃಷಯುಕ್ತವಾಗಿ
ಅನಿಮಿಷಾಲಯದಂತೆ ರವಿಯಂತೆ ಬಾಣಸದ
ಮನೆಯಂತೆ ಮಾಸಂಗಳಂತತುಳಪೀಯೂಷ
ಘನತೆ ಗೋಮಯಪಲ್ಲವಾಸ್ಪದಂ ವೈಶಾಖಶಬ್ದದೊಳ್ ವ್ರಜವೆಸೆದುದು ೧೮

ಮುಂತೆಸೆದುದಾಗಳಾ ಘನವಿಭವದಿಂ ಮುಕ್ತಿ
ಕಾಂತೆಯರಮನೆಯಂತೆ ಪುಣ್ಯದಾಲಯದಂತೆ
ಸಂತತಂ ಶೈವನೇಮದ ಕೋಶಗೃಹದಂತೆ ಧರೆಯ ಮುಖಕಮಲದಂತೆ
ತಿಂತಿಣಿಯೊಳೆಸೆವ ಸೌಧಂಗಳ ಮರೀಚಿ ಗಗ
ನಾಂತಮಂ ಚುಂಬಿಸಲ್ ಸಕಲಸೌಭಾಗ್ಯಮಂ
ತಾಂ ತಳೆದ ಪಟ್ಟಣಂ ಕಲ್ಯಾಣಮೆಸೆವ ಜಾಣರ ತಾಣವೊಪ್ಪಿರ್ದುದು ೧೯

ಇಂತೆಸೆವ ಪಟ್ಟಣದ ಪೊರವಳಯದೊಳ್ ಲತಾ
ಸಂತತಿಗಳಿಂ ಕುಸುಮಶೋಭೆಯಿಂ ತರುಕುಲದ
ತಿಂತಿಣಿಗಳಿಂ ಫಲಾನೀಕದಿಂ ತಳಿರ್ವನೆಗಳಿಂ ಸುಳಿವ ತಂಗಾಳಿಯಿಂ

೧೮. ಮುನಿಯಂತೆ ತಪಸ್ಸಿನಲ್ಲಿದ್ದು, ಆನೆಯಂತೆ ಬೊಜ್ಜನ್ನು ಹೊಂದಿದ್ದು, ಚಂದ್ರನಂತೆ ರೋಹಿಣಿಯೊಡಗೂಡಿ, ಸೈನಿಕನಂತೆ ಕತ್ತಿಯನ್ನು ಹೊಂದಿದ್ದು, ಈಶ್ವರನಂತೆ ವೃಷಭ ಯುಕ್ತನಾಗಿ, ದೇವಲೋಕದಂತೆ ಅಮೃತವನ್ನು ಹೊಂದಿದ್ದು, ಸೂರ್ಯನಂತೆ ಕಿರಣ ಗಳಿಂದ ಕೂಡಿ, ಅಡಿಗೆಮನೆಯಂತೆ ಚಿಗುರುತರಕಾರಿಯಿಂದ ತುಂಬಿ, ತಿಂಗಳಿನಂತೆ ಕಡೆಗೋಲನ್ನು ಹೊಂದಿದ ಆ ಸಮೂಹ ಕಣ್ಣಿಗೆ ಕಾಣಿಸಿತು. [ಶ್ಲೇಷೆ ; —ಅಲ್ಲಿರುವ ರೋಹಿಣಿ, ಧೇನು, ಸುರಭಿ, ವೃಷಭ ಮೊದಲಾದ ದನಗಳು ದೃಢವಾಗಿದ್ದವು. ಅಲ್ಲಿ ಹಾಲು ಸಮೃದ್ಧವಾಗಿತ್ತು. ಗೋವುಗಳಿಂದ ತುಂಬಿತ್ತು. ಚಿಗುರಿನಿಂದ ಸಮೃದ್ಧವಾಗಿತ್ತು. ಹಸುಗಳ ಬಾಲಗಳ ಮತ್ತು ಮೊಸರನ್ನು ಕಡೆಯುವ ಕಡೆಗೋಲಿನ ಶಬ್ದದಿಂದ ಆ ಸಮೂಹ ಕಣ್ಣಿಗೆ ಕಾಣಿಸಿತು.] ೧೯. ಮುಂದೆ ವೈಭವಯುತವಾದ ಕಲ್ಯಾಣಪಟ್ಟಣವು ಕಾಣಿಸಿತು. ಅದು ಮೋಕ್ಷಾಂಗನೆಯರ ತೌರುಮನೆಯಂತೆ ಇತ್ತು, ಪುಣ್ಯದ ಮನೆಯಂತಿತ್ತು, ವೀರಶೈವಾಚಾರದ ಭಂಡಾರದಂತೆ ಇತ್ತು, ಭೂವನಿತೆಯ ಮುಖಕಮಲದಂತಿತ್ತು. ಒಟ್ಟಾಗಿ ಸೇರಿ ಪ್ರಕಾಶಿಸುತ್ತಿದ್ದ ಸೌಧಗಳ ಪ್ರಭೆಯು ಆಕಾಶದವರೆಗೂ ವ್ಯಾಪಿಸಿದ್ದಿತು. ಈ ರೀತಿಯಲ್ಲಿ ಎಲ್ಲ ಸೌಭಾಗ್ಯದಿಂದ ಕೂಡಿದ ಕಲ್ಯಾಣಪಟ್ಟಣವು ಬುದ್ಧಿವಂತರ ತೌರುಮನೆಯಾಗಿತ್ತು. ೨೦. ಈ ರೀತಿ ಕಂಗೊಳಿಸುವ ಪಟ್ಟಣದ ಹೊರಭಾಗದಲ್ಲಿ ಬಳ್ಳಿಗಳ ಬಳಗಗಳು, ಹೂಗಳ ಕಾಂತಿ, ವೃಕ್ಷಗಳ ಸಮೂಹ, ಅವುಗಳಲ್ಲಿದ್ದ ಫಲಗಳು, ಎಲೆವನೆಗಳಿಂದ ಮೆಲ್ಲನೆ ಬೀಸುತ್ತಿದ್ದ ತಂಗಾಳಿಯಿಂದ, ಕಂಗೊಳಿಸುವ ಗಿಳಿ, ಕೋಗಿಲೆ, ದುಂಬಿಗಳ ಸಮೂಹದಿಂದ,

CC-0. Jangamwadi Math Collection. Digitized by eGangotri

ಮುಂತೆಸೆವ ಶುಕಪಿಕಸಮೂಹದಿಂ ತುಂಬಿವಿಂ
ಡಿಂ ತಳರ್ವ ಹಂಸಾಳಿಯಿಂ ನಗರದುಪವನಂ
ಕಂತುಸಂಜೀವನಂ ಪಾವನಂ ಪೆಂಪನಾಂತಾ ವನಂ ಕಣ್ಗೆಸೆದುದು ೨೦

ಪೊಸತೆಂಗು ಕೌಂಗು ಹೇರೀಳೆ ಕಿತ್ತೀಳೆ ಶೋ
ಭಿಸುವಂಚೆ ಕೊಂಚೆ ಪೂವಂಡು ಗಿಳಿವಿಂಡು ರಂ
ಜಿಸುವ ಕಾದಲರೆಲರ್ ಸವಿಮಾವು ಪೂವು ಬಕುಳಂ ಮುಕುಳವೊಪ್ಪುವ ಕೊಳಂ
ಮಿಸುಪ ನಳಿನಂ ಪುಳಿನಮುಂ ತುಂಬಿ ತುಂಬಿ ರಾ
ಜಿಸುವಶೋಕಂ ಕೋಕಮಾ ದಾಡಿಮಂ ಹಿಮಂ
ದೆಸೆಗಂಪು ಸೊಂಪು ಪೆಂಪಿಂದೀ ಪುರೋಪವನವೆಸೆದಿರ್ದುದೇನೆಂಬೆನು ೨೧

ಸೋರ್ವ ರಸವಣ್ಗಳಂ ತಾಳ್ದ ಚೂತಂ ತುದಿಗೆ
ಪರ್ವಿದೆಳೆವಳ್ಳಿಯಿಂದೆಸೆವ ಪೂಗಂ ನಾಡೆ
ಕೊರ್ವಿ ತಿಂತಿಣಿವಣ್ಗಳಾಂತ ಕದಳಂ ಬೀಡೆವಣ್ ವರಿವ ದಾಡಿಮಚಯಂ
ಬೇರ್ವೆರಸಿ ತುದಿವರಂ ಕಾಯ್ತ ಪನಸಂಗಳೆಳ
ನೀರ್ವೊನಲುಮಂ ಕರೆವ ತೆಂಗು ಕಿಸುವಣ್ ಮುಸುಕಿ
ತೋರ್ವ ನಾರಂಗ ಜಂಬೀರಮಿನಿತುಂ ನಾಡೆ ಸಾರ್ವಕಾಲಂ ಕುಂದವು ೨೨

ಚಲಿಸುವ ಹಂಸಗಳಿಂದ ಕೂಡಿದ ಉದ್ಯಾನವನವು ನೋಡಲು ಮನ್ಮಥನಂತೆ ಚೈತನ್ಯ ದಾಯಕವಾಗಿ, ಪುಣ್ಯಪ್ರದವಾಗಿ, ಹಿರಿಮೆಯನ್ನು ಪಡೆದು ಮನೋಹರವಾಗಿದ್ದಿತು. ೨೧. ಆ ಉದ್ಯಾನದಲ್ಲಿ ಹೊಸ ತೆಂಗು, ಅಡಿಕೆ, ಹೇರಿಳೆ ಮತ್ತು ಕಿತ್ತಳೆಯ ಮರಗಳು ನೋಡಲು ಚೆನ್ನಾಗಿ ಬೆಳೆದಿದ್ದುವು. ಹಂಸ, ಕ್ರೌಂಚ, ಹೂವಿನ ಮಕರಂದ, ಗಿಳಿಗಳ ಸಮೂಹಗಳಿದ್ದವು. ಮನೋಹರವಾದ ಪ್ರೇಮವನ್ನುಂಟುಮಾಡುವ ಗಾಳಿ ಬೀಸು ತ್ತಿತ್ತು. ಸವಿಯಾದ ಮಾವಿನಮರಗಳಿದ್ದವು. ಮಾವಿನ ಹೂವು, ಬಕುಳ ಪುಷ್ಪ, ಮೊಗ್ಗು ಗಳಿಂದ ಕಂಗೊಳಿಸುವ ಕೊಳಗಳಿದ್ದುವು. ಹೊಳೆಯುವ ಕೆಂದಾವರೆಗಳಿದ್ದುವು. ಮರಳಿನಿಂದ ತುಂಬಿ ಅಶೋಕಪುಷ್ಪಗಳನ್ನು ಪ್ರೀತಿಸುವ ದುಂಬಿಗಳಿದ್ದುವು. ಖರ್ಜೂರದ ಮರ ಮತ್ತು ದಾಳಿಂಬೆ ಮರಗಳಿದ್ದುವು. ಹಿಮದಂಥ ತಂಪು ಅಲ್ಲಿತ್ತು, ದಿಕ್ಕುದಿಕ್ಕಿಗೆ ಸುವಾಸನೆ ಹರಡಿತ್ತು, ಸೊಂಪಾಗಿ, ಮನೋಹರವಾಗಿ ಆ ಉದ್ಯಾನವನ ಪ್ರಕಾಶಿಸುತ್ತಿತ್ತು. ೨೨. ರಸವೊಸರುತ್ತಿರುವ ಹಣ್ಣುಗಳನ್ನು ಹೊಂದಿರುವ ಮಾವಿನ ಮರಗಳು, ತುದಿಯವರೆಗೂ ಹಬ್ಬಿದ್ದ ಕೋಮಲವಾದ ಎಳೆಯ ಬಳ್ಳಿಗಳಿಂದ ಚೆಲುವಾಗಿ ಕಾಣುವ ಅಡಿಕೆಯ ಮರಗಳು, ಚೆನ್ನಾಗಿ ಬಲಿತಿರುವ ಹಣ್ಣಿನಗೊಂಚಲುಗಳನ್ನು ಹೊಂದಿರುವ ಬಾಳೆ ಗಿಡಗಳು, ಬಿರುಕುಬಿಟ್ಟಿರುವ ಹಣ್ಣುಗಳಿಂದ ರಸವೊಸರುತ್ತಿರುವ ದಾಳಿಂಬದ ಮರ ಗಳ ಸಮೂಹ, ಬೇರಿನಿಂದ ಹಿಡಿದು ತುದಿಯವರೆಗೂ ಫಲಬಿಟ್ಟಿರುವ ಹಲಸಿನ ಮರಗಳು, ಎಳನೀರಿನ ಕಾಲುವೆಯನ್ನೇ ಹರಿಸುತ್ತಿರುವ ತೆಂಗಿನ ಮರಗಳು, ಹಳದಿ ಮತ್ತು ಕೆಂಪು

CC-0. Jangamwadi Math Collection. Digitized by eGangotri

ನಾಗಲತೆಯಂ ಪೂಗವೃಕ್ಷಮಾಲಂಗಿಸಿದು
ದೀಗಳೀ ಚೂತಮಾ ಮಲ್ಲಿಗೆಯನಪ್ಪಿದುದು
ಬೇಗದೊಳ್ ಕುರುವಕಂ ಮಾಧವಿಯ ತಕ್ಕೆಗೊಳಗಾದುದಂತಾ ತಮಾಲಂ
ಪೋಗಿ ತಳಿತಸುಗೆಯಂ ವೇಷ್ಟಿಸಿದುದಂ ಕಂಡು
ಭೋಗಿಸಂಕುಲಮಗಲ್ದಿರಬೇಡ ಬೇಡೆಂದು
ಕೂಗಿ ಸಾರುವ ಮದನಕಹಳೆಯೆನೆ ಸೊರಗೆಯ್ದು ಕೋಗಿಲೆಗಳೆಸೆದಿರ್ದುವು ೨೩

ಪೆಣ್ಗಳಾಡುವ ತಳಿರ್ವನೆಗಳಿಂ ನನೆಗಳಿಂ
ಕಣ್ಗೊಳಿಪ ಕುಸುಮಿತತಾಳಿಯಿಂ ಕೇಳಿಯಿಂ
ಜಾಣ್ಗಾಡಿವಡೆದ ದಂಪತಿಗಳಿಂ ರತಿಗಳಿಂ ನಲಿವ ಚಕ್ರಂಗಳಿಂದೆ
ಪಣ್ಗಳಂ ಸವಿವ ಗಿಳಿವಿಂಡಿನಿಂ ಬಂಡಿನಿಂ
ತಣ್ಗಾಳಿಯಿಂ ಪೊರೆವ ಕಮಲದಿಂ ವಿಮಲದಿಂ
ದೆಣ್ಗಡೆಗೆ ರಂಜಿಪ ಕೊಳಂಗಳಿಂ ಕಂಗಳಿಂ ನೋಡೆ ಬನಮೆಸೆದಿರ್ದುದು ೨೪

ಪ್ರತಿದಿನಂ ಪಾದರಿಯರೊಳ್ ಸ್ನೇಹಿ ಮಧುಪಪು
ಷ್ಪಿತೆಯರೊಳ್ ಸಂಗಿಯಾವನಮಿದಂ ಸೋಂಕೆ ಸ
ದ್ಗತಿಯಿಲ್ಲಮೆಂದು ರವಿ ತೊಲಗಿ ಕಿರಣಂಗಳಂ ಮುದುಡಿ ಪೋಪನೊ ಪೇಳೆನೆ

ಬಣ್ಣದ ಹಣ್ಣುಗಳಿಂದ ಮುಸುಕಿ ಸೊಗಸಾಗಿ ಕಾಣುತ್ತಿರುವ ನಿಂಬೆ ಮತ್ತು ಕಿತ್ತಳೆಹಣ್ಣಿನ ಮರಗಳು–ಇವೆಲ್ಲವೂ ಆ ಉದ್ಯಾನವನದಲ್ಲಿ ಯಾವ ಋತುವಿನಲ್ಲಿಯೂ ಕುಂದದೆ ಚೆನ್ನಾಗಿ ಬೆಳೆಯುತ್ತಿದ್ದುವು. ೨೩. ವೀಳೆಯದೆಲೆಯ ಬಳ್ಳಿಯನ್ನು ಅಡಿಕೆ ಮರವು ಆಲಿಂಗಿಸಿತು. ಈಗ ಮಾವಿನಮರವು ಮಲ್ಲಿಗೆಬಳ್ಳಿಯನ್ನು ಅಪ್ಪಿತು. ಬೇಗನೆ ಕೆಂಪು ಗೋರಂಟಿ ಮರವು ಮಾಧವೀಲತೆಯ ಆಲಿಂಗನಕ್ಕೆ ಒಳಗಾಯಿತು. ಹೊಂಗೆಮರವು ಹೋಗಿ ಚಿಗುರಿದ ಅಶೋಕವನ್ನು ಬಳಸಿಕೊಂಡಿತು. ಇದನ್ನು ಕಂಡು ಭೋಗಿಗಳ ಸಮೂಹವು ಅಗಲಿರಬಾರದು (ಎಂದರೆ ಅಪ್ಪುಗೆಯಲ್ಲಿರಬೇಕು) ಸಾರಿ ಹೇಳುವ ಮನ್ಮಥನ ಕಹಳೆಯೋ ಎನ್ನುವಂತೆ ಶಬ್ದಮಾಡುವ ಕೋಗಿಲೆಗಳು ಕಂಗೊಳಿಸಿದುವು. ೨೪. ಹೆಣ್ಣುಗಳು ಆಡುವ ಚಿಗುರೆಲೆಯ ಮನೆಗಳಿಂದ, ಮೊಗ್ಗುಗಳಿಂದ ಕಂಗೊಳಿಸುವ ಅರಳಿದ ಬಳ್ಳಿಗಳಿಂದ-ಆಟಗಳಿಂದ ; ಚಾತುರ್ಯದ ಸೌಂದರ್ಯದಿಂದ ಕೂಡಿದ ದಂಪತಿಗಳಿಂದ ; ರತಿಕೇಳಿಯಾಡುವ ಚಕ್ರವಾಕಪಕ್ಷಿಗಳಿಂದ ; ಹಣ್ಣುಗಳ ರುಚಿನೋಡುವ ಗಿಳಿಗಳಿಂದ ; ಮಧುವಿನಿಂದ ಕೂಡಿ ತಂಗಾಳಿಯಿಂದ ಸೂಸುವ ಕಮಲದಿಂದ, ಎಂಟು ದಿಕ್ಕುಗಳಲ್ಲಿಯೂ ಸೊಗಯಿಸುವ ನಿರ್ಮಲ ಜಲದಿಂದ ತುಂಬಿದ ಕೊಳಗಳಿಂದ ಆ ವನವು ನೋಡಲು ರಮ್ಯವಾಗಿದ್ದಿತು. ೨೫. ಈ ವನವು ಪ್ರತಿದಿನವೂ ಪಾದರಿಯರಲ್ಲಿ (ಪಾಟಲ ವೃಕ್ಷ, ಜಾರಿಣಿ) ಸ್ನೇಹವುಳ್ಳದ್ದು, ಮಧುಪ (ದುಂಬಿ, ಕುಡಕ)ರಲ್ಲಿಯೂ ಪುಷ್ಪಿತೆಯರಲ್ಲಿಯೂ (ರಜಸ್ವಲೆಯರು, ಅರಳಿದ ಹೂ) ಸಂಗವುಳ್ಳದ್ದು. ಇದನ್ನು ಸೋಕಿದರೆ ತನಗೆ ಸದ್ಗತಿಯಿಲ್ಲವೆಂದು ಸೂರ್ಯನು ತನ್ನ ಕಿರಣಗಳನ್ನು (ಅದರಲ್ಲಿ ಹೋಗಗೊಡದೆ) ಮುದುರಿ

CC-0. Jangamwadi Math Collection. Digitized by eGangotri

ಮಿತಿಯಿಲ್ಲದಾಗಸಕೆ ಬೆಳೆದ ತರುಪತ್ರಸಂ
ತತಿಯ ಸಾಂದ್ರತ್ವದಿಂ ಕತ್ತಲಿಸುತಿದೆ ಕುಸುಮ
ವಿತತಿಗಳ ಬೆಳಗಿಲ್ಲದಿರಲೊಳಗುಗಾಣ್ಬುದಚ್ಚರಿಯೆನುತೆ ನಡೆತಂದರು ೨೫

ಸುರವನದೊಲಾಂ ಸುಡಿಸಿಕೊಂಡೆನೇ ನಾಡೆ ದಶ
ಶಿರನ ವನದಂತೆ ಕಪಿಯಿಂ ಭಂಗವಡೆದೆನೇ
ನಿರುತಮಾ ಧನದವನದಂತೆ ರಾಕ್ಷಸರ ಕಾಲ್ದುಳಿತಕ್ಕೆ ಪಕ್ಕಾದೆನೇ
ಸರಿಯೆ ಲೋಕದ ವನಂ ತನಗೆಂಬ ಪೆರ್ಮೆಯಿಂ
ಮೊರೆವ ತುಂಬಿಗಳಿಂದೆ ಪರಪುಟ್ಟನಿಂದೆ ಬಿ
ತ್ತರಿಸಿ ಪಾಡಿಸಿ ಪೊಗಳಿಪಂತೆ ಪುರವಂ ಬಳಸಿದುಪವನಂ ಕಣ್ಗೆಸೆದುದು ೨೬

ನವಿಲ ನಟನೆಯೆ ನರ್ತನಂ ಮೊರೆವ ತುಂಬಿಗಳ
ರವಮೆ ಗೀತಂ ಕೋಕಿಲಧ್ವನಿಯೆ ವಾದ್ಯಮೊ
ಪ್ಪುವ ಮರುತನಿಂ ಕೆದರ್ವ ಕುಸುಮಂಗಳೆಸೆವ ಪುಷ್ಪಾಂಜಲಿಗಳಂದವಾಗೆ
ನವಪಾತ್ರಮಂ ವಸಂತಂ ತಿರ್ದಿ ತಂದಂಗ
ಭವನ ಮುಂದಾಡಿಸಲ್ ಸಮೆದಿರ್ದ ಸಲ್ಲಾಸ್ಯ
ಭವನದಂತೊಪ್ಪಿರ್ದುದುಪವನಂ ಪವನಪದಚರರಿಗಚ್ಚರಿಯಿಪ್ಪುತೆ ೨೭

ಕೊಂಡುಹೋಗುವನೋ ಎಂಬಂತೆ ಎಲ್ಲೆಯಿಲ್ಲದೆ ಆಕಾಶದವರೆಗೆ ಎತ್ತರವಾಗಿ ದಟ್ಟವಾಗಿ ಬೆಳೆದ ಮರಗಿಡಗಳ ಸಮೂಹದಿಂದ ಕತ್ತಲೆ ಕವಿದಿದ್ದಿತು. ಅರಳಿದ ಹೂವುಗಳ ಬೆಳಕಿಲ್ಲ ದಿದ್ದರೆ ಒಳಭಾಗ ಕಾಣಿಸುವುದು ಆಶ್ಚರ್ಯ ಎನ್ನುತ್ತ ಮುಂದೆ ನಡೆಯುತ್ತಿದ್ದರು. ೨೬. ಇಂದ್ರನ ವನದಂತೆ ನಾನೇನು ಸುಡಿಸಿಕೊಂಡೆನೆ ? ರಾವಣನ ವನವನ್ನು ಕಪಿಯು ಹಾಳು ಗೆಡವಿದಂತೆ ನಾನು ಹಾಳುಗೆಡವಿಸಿಕೊಂಡೆನೆ ? ಕುಬೇರನ ವನದಂತೆ ರಾಕ್ಷಸರ ಕಾಲಿನ ತುಳಿತಕ್ಕೆ ಒಳಗಾದೆನೆ ? ನನಗೆ ಈ ಲೋಕದ ವನಗಳು ಸಮಾನವೆ ? ಎಂಬ ಹೆಮ್ಮೆ ಯಿಂದ ಕೂಡಿ ಝೇಂಕರಿಸುವ ದುಂಬಿಗಳಿಂದ, ಕೋಗಿಲೆಗಳಿಂದ ಹಾಡಿಸಿ ಹೊಗಳಿಸಿ ಕೊಳ್ಳುವಂತೆ ಆ ಪಟ್ಟಣವನ್ನು ಬಳಸಿದ್ದ ಉದ್ಯಾನವನವು ಮನೋಹರವಾಗಿ ಕಾಣು ತ್ತಿತ್ತು. ೨೭. ನವಿಲಿನ ನಡಗೆಯೇ ನರ್ತನ. ಶಬ್ದಮಾಡುವ ದುಂಬಿಗಳ ಧ್ವನಿಯೇ ಸಂಗೀತ. ಕೋಗಿಲೆಗಳ ಧ್ವನಿಯೇ ವಾದ್ಯ. ಗಾಳಿಯಿಂದ ಎಲ್ಲೆಡೆಗೂ ಎರಚಲ್ಪಡುವ ಹೂಗಳೇ ಪುಷ್ಪಾಂಜಲಿಗಳು ಎಂಬಂತೆ ತೋರಲು, ವಸಂತನು ಹೊಸ ಪಾತ್ರಗಳನ್ನು ತಯಾರಿಸಿ ತಂದು ಮನ್ಮಥನ ಮುಂದೆ ಆಡಿಸಲು ಸಿದ್ಧಪಡಿಸಿದ್ದ ನಾಟ್ಯಮಂದಿರದಂತೆ ಆ ಉಪವನವು ಗಾಳಿಯಲ್ಲಿ ನಡೆದುಹೋಗುವವರಿಗೆ ಆಶ್ಚರ್ಯವನ್ನುಂಟುಮಾಡುತ್ತ

CC-0. Jangamwadi Math Collection. Digitized by eGangotri

ಪುರದ ಕೋಂಟೆಯು ತೆನೆಯೊಳಲ್ಲಲ್ಲಿ ಕೀಲಿಸಿದ
ವರಪದ್ಮರಾಗ ನೀಲದಕಾಂತಿ ರಂಜಿಸುವ
ಮರಕತದ ಕಾಂತಿ ಮುತ್ತಿನ ಕಾಂತಿಯಿನಿತುಮಿಾ ವನದೊಳಗೆ ಪ್ರತಿಬಿಂಬಿಸಿ
ಸರಸಕಿಸಲಯಚಯಂ ತುಂಬಿಗಳ್ ಶೋಭಿಸುವ
ತರುಪತ್ರತತಿ ಪುಷ್ಪಸಂದೋಹವುಪ್ಪುವೆಂ
ಬುರುಶಂಕೆಯುಂ ಪುಟ್ಟೆ ನಗರವಂ ಬಳಸಿದುಪವನಚಯಂ ಚೆಲ್ವಾದುದು ೨೮

ಇನಿತಲ್ಲದಿಮ್ಮುಂದೆ ರಂಜಿಸುವುದೀ ನಗರ
ದನುಪಮ ಶಿವಾರ್ಚನಾಪರರ್ಗಳ ಸುಶೀಲಕ
ತ್ಯನುಕೂಲಮಾದ ಕೆರೆ ಬಾವಿ ಹೊಕ್ಕರಣಿ ದೀರ್ಘಿಕೆ ಕೊಳಂ ಪಳ್ಳಂಗಳು
ತನತನಗೆ ನೇಮಿಸಿರ್ಪುವು ಲೆಕ್ಕಮಿಲ್ಲ ಪೂ
ಬನಗಳಿಗೆ ಗಣನೆ ಮೊದಲಿಲ್ಲವಾ ನಗರದ ಸು
ಜನರದೇಂ ಧನ್ಯರೋ ಶಿವಶಿವಾಯೆನುತಾಗ ನೋಡುತ್ತೈತರುತಿರ್ದರು ೨೯

ಆನೆಗಳನೇರಿ ದೆಸೆದೆಸೆಗೆ ನೂಂಕುವ ರಾಜ
ಸೂನುಗಳನುತ್ತಮಾಶ್ವಂಗಳಂ ತಿರ್ದುವ ನ
ವೀನಕುಶಲದ ಸಹಣಿಗಳನಂಕದೊಳಗೊಬ್ಬರೊಬ್ಬರಂ ಮೂದಲಿಸುತೆ

ಪ್ರಕಾಶಿಸುತ್ತಿತ್ತು. ೨೮. ಪಟ್ಟಣದ ಕೋಟೆಯ ಮೇಲ್ಭಾಗದಲ್ಲಿ ಅಲ್ಲಲ್ಲಿ ನೆಟ್ಟಿದ್ದ ಶ್ರೇಷ್ಠವಾದ ಮಾಣಿಕ್ಯಗಳ ಕಾಂತಿ, ನೀಲಮಣಿಯ ಪ್ರಕಾಶ, ಪಚ್ಚೆಮಣಿಯ ಪ್ರಭೆ, ಮುತ್ತಿನಕಾಂತಿ ಇವಿಷ್ಟೂ ಈ ಉಪವನದಲ್ಲಿ ಪ್ರತಿಬಿಂಬಿಸಿ ರಸಭರಿತವಾದ ಚಿಗುರುಗಳ ಸಮೂಹ, ದುಂಬಿಗಳು, ಶೋಭೆಯನ್ನುಂಟುಮಾಡುವ ಮರ–ಎಲೆಗಳ ಸಮೂಹ, ಹೂಗಳ ಗುಂಪುಗಳು ಆಗಿವೆಯೋ ಎಂಬ ಅತಿಯಾದ ಸಂದೇಹವುಂಟಾಗುವಂತೆ ಆ ನಗರವನ್ನು ಬಳಸಿದ್ದ ಉಪವನಗಳ ಸಮೂಹವು ಸೊಗಸಿನಿಂದ ಕೂಡಿದ್ದಿತು. ೨೯. ಇಷ್ಟೇ ಅಲ್ಲದೆ ಇನ್ನೂ ಮುಂದೆ ಈ ಕಲ್ಯಾಣನಗರಿಯ ಅನುಪಮ ಶಿವಪೂಜಾಧುರಂಧರರ ಸದ್ಗುಣ-ಸದಾಚಾರಗಳಿಗೆ ಅನುಕೂಲವಾದ ಕೆರೆ. ಭಾವಿ, ಪುಷ್ಕರಣಿ, ಸರೋವರ, ಕೊಳ, ಪಳ್ಳಗಳು ಲೆಕ್ಕವಿಲ್ಲದಂತೆ ತಮಗೆ ತಾವೇ ಉಂಟಾಗಿವೆ. ಅಲ್ಲಿರುವ ಹೂವಿನ ವನಗಳಿಗೆ ಗಣನೆಯಿಲ್ಲ. ಆ ನಗರದಲ್ಲಿರುವ ಸಜ್ಜನರು ಏನು ಧನ್ಯರೋ ಶಿವಶಿವಾ ಎನ್ನುತ್ತ ಅವರಿಬ್ಬರೂ ಎಲ್ಲವನ್ನೂ ನೋಡುತ್ತಾ ಬರುತ್ತಿದ್ದರು. ೩೦. ಆನೆಗಳನ್ನು ಏರಿಕೊಂಡು ದಿಕ್ಕುದಿಕ್ಕಿಗೆ ಹೋಗುತ್ತಿದ್ದ ರಾಜಕುಮಾರರು ಉತ್ತಮ ಜಾತಿಯ ಕುದುರೆಗಳನ್ನು ಪಳಗಿಸುವ ಹೊಸದಾದ ಚಾತುರ್ಯದಿಂದ ಕೂಡಿದ ಕಾಸ್ತಾರರು,ಯುದ್ಧದಲ್ಲಿ ಒಬ್ಬರನ್ನೊಬ್ಬರು ಮೂದಲಿ

CC-0. Jangamwadi Math Collection. Digitized by eGangotri

ನಾನಾಯುಧಂಗಳಿಂದಂ ಪ್ರಹರಿಸುವ ಸುಭ
ಟಾನೀಕದಬ್ಬರದ ವಾದ್ಯರವದುಬ್ಬರದ
ನೂನಸಂಭ್ರಮದಿಂದೆ ಕಲ್ಯಾಣಪಟ್ಟಣದ ಪೊರವೊಳಲ್ ನೆರೆ ಮೆರೆದುದು ೩೦

ಪೊಳಲ ಪೊರಗಣ ಸಿರಿಯನೀಕ್ಷಿಸುತೆ ಬರೆ ಮುಂದೆ
ಜಳಧಿ ಜಂಬೂದ್ವೀಪಮಂ ಬಳಸಿದಂತೆ ಕರ್ಣ್
ಗೊಳಿಸಿ ಪರಿವೇಷಮಾ ರವಿಬಿಂಬಮಂ ಬಳಸಿ ತೋರ್ಪಂತೆ ಪೊಂಗೋಂಟೆಯ
ಬಳಸಿಯುಗಳೊಪ್ಪುತಿರ್ಪುದು ತನ್ನ ಘಾತಮಂ
ತಿಳಿವರಾರೆಂದು ಮೂದಲಿಸಿ ಕರೆವಂತೆಸೆವ
ಜಲಪಕ್ಷಿಗಳ ಕಳಧ್ವಾನದಿಂದಾ ಪುರದಗಳ್ ಮೆರೆದುದೇನೆಂಬೆನು ೩೧

ನೀಲಂಗಳಿಂ ಸವೆದ ತೆನೆ ತೆನೆಯ ನಡುವಣ ವಿ
ಶಾಲಂಗಳಂ ಕಂಡು ಬಾಯ್ದೆರೆದ ಬಹುಮುಖದ
ಕಾಳರಾಹುವಿದೆಂಬ ಶಂಕೆಯಿಂ ಕೋಂಟೆಯಂ ಸೋಂಕದೆಡಬಲಕೆ ಪೋಗೆ
ಮೇಲೆ ದಿನಪಂ ದಕ್ಷಿಣೋತ್ತರಾಯಣನೆಂದು
ಪೇಳುವರ್ ಮನುಜರಂತಲ್ಲದೊಡಕಾರಣಂ
ಬಾಲರ್ಕಳಾದೊಡೆಯುಮೂರಮೇಲಣ ದಾರಿಯಂ ಬಿಡುವರೇ ಧರೆಯೊಳು ೩೨

ಸುತ್ತ ನಾನಾ ವಿಧವಾದ ಆಯುಧಗಳಿಂದ ಹೊಡೆದಾಡುವ ನುರಿತ ಸೈನಿಕರ ಸಮೂಹದ ಆರ್ಭಟ ಮತ್ತು ರಣವಾದ್ಯಗಳ ಅಬ್ಬರ ಇವುಗಳ ತುಂಬುಸಂಭ್ರಮದಿಂದ ಕಲ್ಯಾಣ ಪಟ್ಟಣದ ಹೊರಭಾಗವು ವಿಶೇಷವಾಗಿ ಮೆರೆಯಿತು. ೩೧. ಹೀಗೆ ನಗರದ ಹೊರಭಾಗದ ಸಿರಿಯನ್ನು ನೋಡುತ್ತ ಬರಲು ಮುಂದೆ ಸಮುದ್ರವು ಜಂಬೂದ್ವೀಪವನ್ನು ಬಳಸಿದ ಹಾಗೆ, ಸೂರ್ಯಬಿಂಬವನ್ನು ಪ್ರಭಾವಲಯವು ಬಳಸಿ ಹೊಳೆಯುವಂತೆ, ಹೊನ್ನಿನಕೋಟೆಯನ್ನು ಕಂದಕವು ಬಳಸಿದ್ದಿತು. ನನ್ನ ಹೊಡೆತವನ್ನು ಯಾರು ತಿಳಿಯಬಲ್ಲರು ಎಂದು ಹೀಯಾಳಿಸಿ ಕರೆಯುವಂತೆ ಕಾಣುವ ನೀರುಹಕ್ಕಿಗಳ ಕಲಕಲ ಶಬ್ದದಿಂದ ಆ ನಗರದ ಕಂದಕವು ಮೆರೆಯುತ್ತಿದ್ದಿತು. ೩೨. ನೀಲಮಣಿಯನ್ನು ಹುದುಗಿಸಿದ್ದ ಕೋಟೆಯ ಕೊತ್ತಳಗಳ ಮಧ್ಯೆ ವಿಶಾಲವಾಗಿದ್ದ ಜಾಗವನ್ನು ನೋಡಿ ಬಾಯನ್ನು ಅಗಲಿಸಿದ ಅನೇಕ ಮುಖವುಳ್ಳ ಕಾಳರಾಹು ಇದು ಎಂಬ ಶಂಕೆಯಿಂದ ಕೋಟೆಯನ್ನು ಸಮೀಪಿಸದೆ ಮೇಲಿದ್ದ ಸೂರ್ಯನು ಎಡಕ್ಕೆ ಬಲಕ್ಕೆ ಹೋಗಲು ದಕ್ಷಿಣೋತ್ತರಾಯಣ ಎಂದು ಮನುಷ್ಯರು ಹೇಳುತ್ತಾರೆ. ಹಾಗಲ್ಲದಿದ್ದರೆ ಅಕಾರಣವಾಗಿ ಹುಡುಗರಾದರೂ ಕೂಡ ಊರಿನ ಮೇಲೆ ಹಾಯ್ದುಹೋಗುವ ದಾರಿಯನ್ನು ಬಿಟ್ಟು ಅಡ್ಡಹೋಗುತ್ತಾರೆಯೆ ?

CC-0. Jangamwadi Math Collection. Digitized by eGangotri

ಕನಕಾಚಲದ ಮೇಲೆ ತರತರಂ ಬಿಡದೊಪ್ಪ
ವನಿಮಿಷವಿಮಾನಂಗಳುನ್ನತಪ್ರಭೆಗಳೆಂ
ದೆನೆ ಪಳಿಕಿನಿಂ ಸಮೆದ ಮುಗಿಲಟ್ಟಳೆಯ ಸಾಲ್ಗಳೊಪ್ಪಿದುವು ಪೊಂಗೋಂಟೆಯು
ತೆನೆಯ ಪಸುರ್ವಳವಿಗೆಯ ಕಾಂತಿ ಸುರನಿಮ್ನಗಾ
ತನುಯೋಗದಿಂ ಯಮುನೆ ಗಂಗೆಯರ ಸಂಗಮಂ
ಜನಿಸಿತಾಗಸದೊಳೇನಾಶ್ಚರ್ಯಮೆಂಬಂತೆ ಕಾಣಿಸಿದುದೇವೊಗಳ್ವೆನು ೩೩

ಇನಿತುನ್ನತಂಬಡೆದ ಕೋಂಟೆ ನಾಲ್ವಂತ್ತೆಂಟು
ಘನಯೋಜನದ ಸುವಿಸ್ತೀರ್ಣಮಾ ಪಟ್ಟಣ
ಕ್ಕನುಪಮಿತ ನವರತ್ನಮಯದ ಮುನ್ನೂರರುವತೆಸೆವ ಪೆರ್ಬಾಗಿಲ್ಗಳು
ಮಿನುಪ ಶಶಿಸೂರ್ಯವೀಥಿಗಳೆ ನೂರಿಪ್ಪತ್ತು
ವಿನುತವಮಾದಖಿಳಸೌಭಾಗ್ಯಸಂಪದದಿಂದೆ
ಜನಪದದೆ ರಂಜಿಸುವ ಕಲ್ಯಾಣಪಟ್ಟಣವನೊಳಪೊಕ್ಕು ಬರುತಿರ್ದರು ೩೪

ಹೊಳೆವ ನವರತ್ನದಾಳ್ವೇರಿಗಳ ಕೇರಿಗಳ
ಚಲಿಪ ಕನಕಧ್ವಜಪಟಾಳಿಗಳ ಕೇಳಿಗಳ
ಬಳಿದ ಸೊದೆಗಳ ಸೌಧರಾಜಿಗಳ ತರತರದ ನಿಳಯಂಗಳ

೩೩. ಕನಕಾಚಲದ ಮೇಲೆ ಸಾಲುಸಾಲಾಗಿ ಇರುವ ದೇವತೆಗಳ ಅರಮನೆಗಳ ಶ್ರೇಷ್ಠವಾದ ಕಾಂತಿಯೊ ಎನ್ನುವಂತೆ ಸ್ಫಟಿಕಶಿಲೆಯಿಂದ ನಿರ್ಮಿಸಿದ ಎತ್ತರವಾದ ಗೋಪುರದ ಸಾಲುಗಳು ಕಾಣಿಸುತ್ತಿದ್ದುವು. ಹೊನ್ನಿನ ಕೋಟೆಯ ಕೊತ್ತಳಗಳ ಮೇಲಿನ ಹಸಿರು ಬಾವುಟದ ಕಾಂತಿಯು ದೇವನದಿಯ ಕೂಡೆ ಸೇರಿದುದರಿಂದ ಆಕಾಶದಲ್ಲಿ ಗಂಗೆ-ಯಮುನೆಯರ ಸಂಗಮುವಾಯಿತು. ಇದೇನು ಆಶ್ಚರ್ಯ ಎನ್ನುವಂತೆ ಕಾಣಿಸಿತು. ೩೪. ಈ ರೀತಿ ಔನ್ನತ್ಯವನ್ನು ಪಡೆದ ಕೋಟೆಯು ನಲವತ್ತೆಂಟು ಘನಯೋಜನದಷ್ಟು ವಿಸ್ತಾರವಾಗಿತ್ತು. ಆ ಪಟ್ಟಣಕ್ಕೆ ನವರತ್ನಖಚಿತವಾದ ಉಪಮಾತೀತವಾದ ಮುನ್ನೂರರವತ್ತು ಹೆಬ್ಬಾಗಿಲುಗಳಿದ್ದುವು. ಹೊಳೆಯುವ ಚಂದ್ರ, ಸೂರ್ಯವೀಥಿಗಳೇ ನೂರಿಪ್ಪತ್ತು ಇದ್ದುವು. ಪ್ರಸಿದ್ಧವಾದ ಎಲ್ಲ ಸೌಭಾಗ್ಯ, ಸಂಪತ್ತುಗಳಿಂದ, ಪ್ರಜೆಗಳಿಂದ ಕಂಗೊಳಿಸುತ್ತಿದ್ದ ಕಲ್ಯಾಣಪಟ್ಟಣವನ್ನು ಪ್ರವೇಶಿಸಿ ಬರುತ್ತಿದ್ದರು. ೩೫. ಹೊಳೆಯುವ ನವರತ್ನದಿಂದ ನಿರ್ಮಿಸಿದ ಕೋಟೆಯ ಗೋಡೆಗಳು ಮತ್ತು ಕೇರಿಗಳಿದ್ದುವು. ಅಲುಗಾಡುವ ಕನಕಧ್ವಜ ಸಮೂಹಗಳು ಮತ್ತು ತೆಂಗುಗಳು ಸಾಲುಸಾಲಾಗಿದ್ದುವು. ಭವನ ಸಮೂಹಕ್ಕೆ ಸುಣ್ಣ ಬಳಿದಿದ್ದ ಸೌಧಗಳು ಮತ್ತು ಬಿಳಿಯಬಣ್ಣದ ಕುದುರೆಗಳಿದ್ದುವು,

CC-0. Jangamwadi Math Collection. Digitized by eGangotri

ಸಲೆ ಪೋಪ ಬರ್ಪ ಬಲ್ಮನ್ನೆಯರ ಕನ್ನೆಯರ
ಸುಳಿಸುಳಿದು ಕಣ್ಗೊಪ್ಪುವಂದಣದ ಗೊಂದಣದ
ಕಳಕಳದ ವಾದ್ಯರವದಬ್ಬರದ ನಿಬ್ಬರದಲಾ ಪುರಂ ರಂಜಿಸಿದುದು ೩೩

ಏಸು ವೈಭವಮುಳ್ಳೊಡೇಂ ಫಲಂ ಸಲೆ ಜಾರ
ವಾಸಮುಮರೇಂದ್ರನಗರಂ ಮಹಾನವನಿಧಿಗ
ಳೇಸುಳ್ಳೊಡೇಂ ಫಲಮನೇಕಪಿಂಗಳಸದನಮಳಕಾಪುರಂ ಭಾವಿಸೆ
ಏಸು ಭೋಗಿಗಳುಳ್ಳೊಡೇಂ ಫಲಂ ವಿಷಧರನಿ
ವಾಸಮಾ ಭೋಗಾವತೀಪುರಮದೆಂದಟ್ಟ
ಹಾಸದಿಂ ಪುರವನಿತೆ ಜರೆವಳೆನೆ ಸೌಧಂಗಳೊಳ್ಪೆಳಗು ರಂಜಿಸಿದುದು ೩೬

ಇಕ್ಕೆಲದ ಬೀದಿಬೀದಿಯೊಳಲ್ಲಿಗಲ್ಲಿಗಿರ
ದಿಕ್ಕೆಕ್ಕೆಯಿಂ ಸಕಲವಿಭವದ ಶಿವಾಲಯಂ
ಲಕ್ಕಮುಂ ಮೇಲೆ ತೊಂಬತ್ತಾರುಸಾವಿರಮವಿಂತವಕೆ ಮುಖ್ಯಮಾಗಿ
ಮುಕ್ಕಣ್ಣನಲ್ಲಿ ತ್ರಿಪುರಾಂತಕಾಖ್ಯದೊಳಿಹಂ
ಸೊಕ್ಕುಜವ್ವನೆಯರಾಡುವ ಹದಿರ್ ಚದುರುಗಳ
ಹಕ್ಕೆ ಮೋಹನದಿಕ್ಕೆಯೆನಿಪ ವೇಶ್ಯಾಶ್ರಯಂ ಮುಂದೆ ಕಡುಚೆಲ್ವಾದುದು ೩೭

ಚಿತ್ರವಿಚಿತ್ರವಾದ ಮನೆಗಳಿದ್ದುವು. ಹೋಗುತ್ತಿರುವ, ಬರುತ್ತಿರುವ ಗೌರವಕ್ಕೆ ಯೋಗ್ಯ ರಾದ ಜನರೂ ಕನ್ನೆಯರೂ ಇದ್ದರು. ಕಣ್ಣಿಗೆ ಮನೋಹರವಾಗಿ ಕಾಣುತ್ತ ಸಾಗು ತ್ತಿರುವ ಪಲ್ಲಕ್ಕಿಗಳ ಸಮೂಹ, ಕಲಕಲ ಶಬ್ದಮಾಡುವ ವಾದ್ಯಗಳ ಅಬ್ಬರಗಳು-ಇವು ಗಳಿಂದ ಆ ಪಟ್ಟಣವು ಅತಿಶಯ ವೈಭವದಿಂದ ಪ್ರಕಾಶಿಸುತ್ತಿದ್ದಿತು. ೩೬. ಎಷ್ಟು ವೈಭವ ಯುತವಾಗಿದ್ದರೇನು? ದೇವೇಂದ್ರನ ಪಟ್ಟಣ ಅದು ಜಾರರ ನಿವಾಸಸ್ಥಾನ. ಒಂದೇ ಒಂದು ಅಲಕಾವತಿಪುರ ನವನಿಧಿಗಳಿಂದ ಕೂಡಿದ್ದರೆ ತಾನೇ ಏನುಫಲ ? ಅದು ಒಂದು ಕಣ್ಣಿನಲ್ಲಿ ಹಳದಿಬಣ್ಣದ ಕಲೆಯುಳ್ಳ ಕುಬೇರನ ಸದನ. ಭೋಗಾವತೀಪುರದಲ್ಲಿ ಎಷ್ಟು ಭೋಗಿ ಗಳಿದ್ದರೇನು ? ಅದು ವಿಷಧರಸರ್ಪಗಳ ನಿವಾಸ ಎಂದು ಅಟ್ಟಹಾಸಮಾಡುತ್ತ ಆ ಕಲ್ಯಾಣಪುರವೆಂಬ ವನಿತೆಯು ಹೀಯಾಳಿಸುತ್ತಾಳೆಯೋ ಎನ್ನುವಂತೆ ಆ ಪಟ್ಟಣದ ಭವನಗಳ ಒಳಗಿನ ಉತ್ತಮವಾದ ಕಾಂತಿಯು ರಂಜಿಸುತ್ತಿದ್ದಿತು. ೩೭. ಬೀದಿಯ ಎರಡು ಕಡೆಗಳಲ್ಲಿಯೂ ಅಲ್ಲಲ್ಲಿ ಒತ್ತೊತ್ತಾಗಿ ಸಕಲ ವೈಭವದಿಂದ ಕೂಡಿದ ಒಂದು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶಿವಾಲಯಗಳಿದ್ದುವು. ಅವುಗಳಲ್ಲೆಲ್ಲ ಮುಖ್ಯವಾಗಿ ತ್ರಿಪುರಾಂತಕನೆಂದು ಪ್ರಸಿದ್ಧವಾದ ಮುಕ್ಕಣ್ಣನ ದೇವಾಲಯವಿತ್ತು. ಅಲ್ಲಿಂದ ಮುಂದೆ ತುಂಬುಯವ್ವನದಿಂದ ಸೊಕ್ಕಿದ ಹೆಂಗಸರ ಹಾಸ್ಯ ಮತ್ತು ಚಮತ್ಕಾರದ ಮಾತುಗಳ ನೆಲೆ,

CC-0. Jangamwadi Math Collection. Digitized by eGangotri

ವರಮೇನಕೆಯ ಸೊಬಗು ರಂಭೆಯ ವಿಲಾಸಮಾ
ಸುರಸೆಯ ಸುರೂಪುಮುರ್ವಸಿಯ ಚಾತುರ್ಯಂಗ
ಳುರುಮಂಜುಘೋಷೆಯ ಸುಗಾನಂ ಸುಕೇಶಿಯುನ್ನತಕೇಶಮಾ ನಗರದ
ತರುಣಿಯರ ಚರಣಸೇವೆಯ ಮಾಳ್ಪ ಕೆಳದಿಯರ
ಪೊರೆಯೊಳೋಲೈಸಿರ್ಪುವಿನ್ನಿವರ ಗಾಡಿಯಂ
ವಿರಚಿಸುವೊಡಳವಲ್ಲವೆಂದೆನಲ್ ಪುರದ ವೇಶ್ಯಾಜನಂ ಕಣ್ಗೆಸೆದುದು ೩೮

ಮೆಲ್ಲಮೆಲ್ಲನೆ ಬೀದಿಬೀದಿಯೊಳ್ ನಡೆದು ಬರ
ಲಲ್ಲಿಗಲ್ಲಿಗೆ ನೋಳ್ಪರೆರ್ದೆಗಳಂ ಮೋಹನದೆ
ಝಲ್ಲುಝಲ್ಲೆಂದೆನಿಪ ಬಟ್ಟಮೊಲೆಗಳ ಕಣ್ಗೆ ಕಾಣಿಸದ ಬಡನಡುವಿನ
ನಿಲ್ಲನಿಲ್ಲದ ನೋಟದಬಲೆಯರ್ ತಂತಮ್ಮ
ಸೊಲ್ಲುಸೊಲ್ಲುಗಳೊಳಿನಿದೊಸರೆ ನಾನಾ ಕಲೆಯ
ಬಲ್ಲಬಲ್ಲಿನಿಯರಂ ಗೆಲ್ವ ಚಾತುರ್ಯಂಗಳಬಲೆಯರ್ ಕಣ್ಗೆಸೆದರು ೩೯

ಗಿಳಿಗಿನಿದು ನುಡಿಗಳಂ ಬರಿಸುತಂ ಗಂಡುಗೋ
ಗಿಲೆಗಳ ಸರಂಗಳಂ ತಿರ್ದುತಂ ಹಂಸೆಗಳಿ
ಗಲಸಗಮನಂಗಳಂ ತೋರುತಂ ಚಾಳಾಂಕಿಗಳಿಗೆ ನೀತಿಯನುಸಿರುತೆ

ಮೋಹನದ ಆವಾಸಸ್ಥಾನವೆನಿಸುವ ಸೂಳೆಗೇರಿಯು ಕಡುಚೆಲುವಾಗಿ ಕಂಡಿತು. ೩೮. ಅಪ್ಸರೆಯರಲ್ಲಿ ಪ್ರಸಿದ್ಧಳಾದ ಮೇನಕೆಯ ಸೌಂದರ್ಯ, ರಂಭೆಯ ವಿಲಾಸ, ಸುರಸೆಯ ಸೌಂದರ್ಯ, ಊರ್ವಸಿಯ ಚಾತುರ್ಯ, ಮಂಜುಘೋಷೆಯ ಸೊಗಸಾದ ಸಂಗೀತ, ಸುಕೇಶಿಯ ನೀಳವಾದ ಕೂದಲು ಮುಂತಾದುವು ಆ ನಗರದ ತರುಣಿಯರ ಪಾದಸೇವೆ ಮಾಡುವ ಸಖಿಯರಲ್ಲಿತ್ತು. ಇನ್ನು ಇವರ ಸೌಂದರ್ಯವನ್ನು ವಿವರಿಸಲಿಕ್ಕೆ ಸಾಧ್ಯವಿಲ್ಲ ಎನ್ನುವಂತೆ ಆ ಪಟ್ಟಣದ ವೇಶ್ಯಾಂಗನೆಯರು ಕಂಗೊಳಿಸಿದರು. ೩೯. ಮೆಲ್ಲಮೆಲ್ಲನೆ ಬೀದಿ ಬೀದಿಗಳಲ್ಲಿ ಅವರು (ಪ್ರಭು–ಸಿದ್ಧರಾಮರು) ನಡೆದುಬರಲು ಅಲ್ಲಲ್ಲಿ ನೋಡುವವರ ಹೃದಯಗಳನ್ನು ತಮ್ಮ ಮೋಹದಿಂದ ಝಲ್ ಝಲ್ ಎನ್ನಿಸುವ ದೊಡ್ಡ ಮತ್ತು ಬಟ್ಟ ಮೊಲೆಗಳ ಮತ್ತು ಕಣ್ಣಿಗೆ ಕಾಣಿಸದಷ್ಟು ಸಣ್ಣದಾಗಿ ಬಳಕುತ್ತಿದ್ದ ನಡುವಿನ ಚಂಚಲಾಕ್ಷಿಯರು ತಮ್ಮ ಜೇನಿನಂತಹ ಇಂಪಾದ ಮಾತುಗಳಿಂದ, ಅನೇಕ ಕಲೆಗಳನ್ನು ತಿಳಿದಿದ್ದ ಬಲ್ಲಿದರಾದ ಪ್ರೇಮಿಗಳನ್ನು ಗೆಲ್ಲುವ ಚತುರತೆಯಿಂದ ಕೂಡಿ ರಂಜಿಸುತ್ತಿದ್ದರು. ೪೦. ಗಿಣಿಗಳಿಗೆ ಇಂಪಾದ ಮಾತುಗಳನ್ನು ಕಲಿಸುತ್ತ, ಗಂಡು ಕೋಗಿಲೆಗಳ ಸ್ವರಗಳನ್ನು ತಿದ್ದುತ್ತ, ಹಂಸಗಳಿಗೆ ನಿಧಾನವಾಗಿ ನಡೆಯುವುದನ್ನು ತೋರಿಸುತ್ತ, ಸಾರಸಪಕ್ಷಿಗಳಿಗೆ ನೀತಿಯನ್ನು ಬೋಧಿಸುತ್ತ, ಪಾರಿವಾಳಗಳಿಗೆ ಮಧುರ

CC-0. Jangamwadi Math Collection. Digitized by eGangotri

ಗಳರವಂಗಳ ಕಪೋತಂಗಳ್ಗೆ ಕಲಿಸುತಂ
ತಳಿರುಯ್ಯಲಾಡುತಂ ಪಾಡುತಂ ನೋಡುತಂ
ಬೆಲೆವೆಣ್ಗಳೆಸೆದಿರ್ದರಾ ಪಣ್ಯವೀಥಿಯೊಳವೇನೆಂದು ಬಣ್ಣಿಸುವೆನು ೪೦

ಸುಯ್ಗಮರ್ದ ಕಂಪು ಕಂಪಂ ಪೆಚ್ಚಿಸಲ್ವರಿದು
ಮೆಯ್ಗಮರ್ದ ನುಣ್ಪು ನುಣ್ಪೇರಿಸಲ್ ನಸುನಗೆಯು
ಬಾಯ್ಗಮರ್ದ ಸೊಂಪು ಸೊಂಪಂ ಕೊರ್ವಿಸಲ್ ಕುಸುಮಮಾಲೆಯುಂ ಪಿಡಿದೆತ್ತಿದ
ಕಯ್ಗಮರ್ದ ಕೆಂಪು ಕೆಂಪೊದವಿಸಲ್ ನಿಂದಿರ್ದ
ರಯ್ಗಣೆಯನಿಂದು ಪೂಜಿಸಲೊಲಿದ ಜಯರಮೆಯು
ತಾಯ್ಗರುವೆ ಬಹುರೂಪನಾಂತು ದಿಗ್ವಿಜಯಕ್ಕೈದುವಳೊ ಪೇಳೆನೆ ಸತಿಯರು ೪೧

ತಳೆವ ನೀರ್ವನೆಗಳೇ ಮಳೆಯಪನಿ ಕಂಪಿಂಗೆ
ಬಳಸುವಳಿಮಾಲೆ ಜಲದಾಳಿ ಕಣ್ಗದಿರ್ಗಳೇ
ತೊಳಪ ಮಿಂಚು ವರಕರಕಂಕಣಧ್ವನಿ ಮೊಳಗು ಮುಡಿಗಳಿಂದುದಿರ್ವಲರ್ಗಳೇ
ಪೊಳೆವಾಲಿವರಲೆಸೆವ ಕುಂಕುಮಂ ಕಪ್ಪುರಂ
ಮಳಯಜಂ ಕಸ್ತೂರಿಮಿಶ್ರವರ್ಣಂ ಸಮು
ಜ್ವಳ ಸುರಪಧನುವೆನಲ್ ಮಳೆಗಾಲದಂತಲ್ಲಿ ಘಟ್ಟಿವಳ್ತಿಯರೆಸೆದರು ೪೨

ಮೊಗದೊಳಂ ಮಚ್ಚರಿಪ ಶಶಿಕಲೆಗಳಂ ಕಟ್ಟಿ
ಬಿಗಿದು ಮಾರುವರೆನಲ್ ತಾಂಬೂಲದೆಲೆಗಳಂ
ಮಿಗೆ ಮಾರುವಬಲೆಯರ್ ಕಣ್ಗೆಸೆದರಲ್ಲಲ್ಲಿ ಧರೆಯ ಕಮಳಂಗಳೆಲ್ಲಾ

ಧ್ವನಿಯನ್ನು ಕಲಿಸುತ್ತ, ಚಿಗುರಿನ ಉಯ್ಯಾಲೆಯ ಮೇಲೆ ಆಡುತ್ತ, ಹಾಡುತ್ತ, ನೋಡುತ್ತ—ಇದ್ದ ವೇಶ್ಯೆಯರು ಸೂಳೆಗೇರಿಯಲ್ಲಿ ಕಾಣಿಸುತ್ತಿದ್ದರು. ೪೧. ಕಂಪಿನಿಂದ ಕೂಡಿದ ಉಸಿರು, ಆ ಕಂಪನ್ನು ಹೆಚ್ಚಿಸಲು ಮೈಗೆ ಸೇರಿದ ಮೃದುತ್ವ, ಆ ಮೃದುತ್ವವನ್ನು ಅಧಿಕಗೊಳಿಸಲು ನಸುನಗುತ್ತಿರುವ ಬಾಯಿಗೆ ಉಂಟಾದ ಸಂತೋಷ, ಆ ಸಂತೋಷವನ್ನು ಹೆಚ್ಚಿಸಲು ಹೂವಿನಹಾರವನ್ನು ಹಿಡಿದು ಎತ್ತಿದ ಕೈಗಳಲ್ಲಿ ಕಂಡುಬಂದ ಕೆಂಪು, ಕೆಂಪನ್ನು ಅಧಿಕಗೊಳಿಸಲು ಆ ಸತಿಯರು—ಮನ್ಮಥನನ್ನು ಪೂಜಿಸಲು ವಿಜಯಲಕ್ಷ್ಮಿಯು ತಾನೇ ಬಹುರೂಪವನ್ನು ಹೊಂದಿ ದಿಗ್ವಿಜಯಕ್ಕೆ ಹೊರಡುವಳೊ ಎಂಬಂತೆ ನಿಂತಿದ್ದರು. ೪೨. ಚಿಮುಕಿಸುವ ಪನ್ನೀರಿನ ಹನಿಗಳೇ ಮಳೆಯ ಹನಿ. ಪನ್ನೀರಿನ ಸುವಾಸನೆಗೆ ಮುತ್ತುವ ದುಂಬಿಗಳ ಸಮೂಹವೇ ಮೋಡಗಳ ಸಮೂಹ. ಕಣ್ಣಿನ ಹೊಳಪೇ ಹೊಳೆಯುವ ಮಿಂಚು. ಕೈಯ ಕಂಕಣದ ಶಬ್ದವೇ ಗುಡುಗು. ಅವರ ಮುಡಿಗಳಿಂದ ಕೆಳಕ್ಕುದುರುವ ಹೂಗಳೇ ಆಲಿಕಲ್ಲುಗಳು. ಕುಂಕುಮ, ಕರ್ಪೂರ, ಚಂದನ, ಕಸ್ತೂರಿ ಇವುಗಳ ಮಿಶ್ರಣದಿಂದಾದ ಬಣ್ಣವೇ ಮನೋಹರವಾದ ಕಾಮನಬಿಲ್ಲು ಎನ್ನಲು ಮಳೆಗಾಲದಂತೆ ಗಂಧ ತೇಯುವ ಸ್ತ್ರೀಯರು ಶೋಭಿಸುತ್ತಿದ್ದರು. ೪೩. ಮುಖದಲ್ಲಿ ಅಸೂಯೆಪಡುವ ಚಂದ್ರಕಲೆಗಳನ್ನು ಕಟ್ಟಿ ಬಿಗಿದು ಮಾರುತ್ತಾರೆಯೋ ಎನ್ನುವಂತೆ

CC-0. Jangamwadi Math Collection. Digitized by eGangotri

ನಗರವಧುಗಳ ಪದತಳಂಗಳಂ ಸೇವಿಸಿರ
ಲಗಲಲಾರವೆ ಬಂದು ಕೆಳೆಯೊಳಿಹುವೆಂದು ತರ
ಣಿಗಳ ಬಿಂಬಂಗಳಿಹವೆನೆ ಕಂಚುಗಾರಪಸರದ ಭಾಂಡನೊಪ್ಪಿರ್ದುವು ೪೩

ಅರುಜಾಂಗರಲ್ಲದಾ ರಾಜ್ಯದೊಳಗೆಲ್ಲಿಯುಗ್ಗ್ಗ
ಪರುಜಾಂಗರಿಲ್ಲಾದೊಡೆಯುಮಖಿಳವಸ್ತುಗಳ
ನೆರೆದಿರ್ಪುವೇತಕೆಂದೆನಲಶ್ವದಂತಿಗಳ ಕವಳಕಪ್ಪುಗಂಧಕೆ
ಪರಿಪರಿಯ ಚಿತ್ರಕುಶಲಂಗಳ್ಗೆ ಭೋಗಿಗಳ
ಪರಮಭೋಗದ್ರವ್ಯಕೆಂದಜಂ ಪಡೆದನೆನೆ
ಪರಿಶೋಭಿಸಿದುವು ತತ್ಪುರದ ವೀಥಿಗಳಲ್ಲಿ ಗಂಧಿಗರ ಪಸರಂಗಳು ೪೪

ಪರಿಕಿಪ್ಪೊಡೆ ದೇವದಾನವಮಾನವರ್ಗೆಯುಂ
ನಿರುತದಿನಲಂಕಾರವಸ್ತುಗಳಿಗಾದಿಯಾ
ಗಿರುತಿರ್ಪವನುಪಮಗುಣಂಗಳೆಮ್ಮೊಡಲನಾಶ್ರಯಿಸಿರ್ಪುವಂತಲ್ಲದೆ
ಪರಿಹರಿಸುವೆವು ಹಿಮುವನಾರ್ಗೆಯುಂ ನಮ್ಮಂತೆ
ಧರೆಯೊಳಗೆ ಪೆಣ್ಗಂಡುಗಳ ಲಜ್ಜೆಯಂ ಕಾಯ್ವ
ಪಿರಿಯತನಮೆಲ್ಲಿಯದೆನಿಪ್ಪ ಪೆರ್ಮೆಯೊಳಲ್ಲಿ ಜವಳಿವಸರಗಳೆಸೆದುವು ೪೫

ವೀಳೆಯದೆಲೆಗಳನ್ನು ಮಾರುತ್ತಿದ್ದ ಹೆಂಗಸರು ಅಲ್ಲಲ್ಲಿ ಕಾಣುತ್ತಿದ್ದರು. ಭೂಮಿಯ ಮೇಲಿದ್ದ ಕಮಲಗಳ ಆ ಪಟ್ಟಣದ ಹೆಂಗಸರ ಪಾದಗಳನ್ನು ಸೇವಿಸುತ್ತಿರಲು ಅವು ಗಳನ್ನು ಬಿಟ್ಟು ಹೋಗಲಾರದೆ ಸೂರ್ಯಬಿಂಬಗಳು ಬಂದು ಸ್ನೇಹದಿಂದ ಇವೆಯೆನ್ನು ವಂತೆ ಕಂಚುಗಾರರ ಅಂಗಡಿಗಳ ಪಾತ್ರೆಗಳು ಪ್ರಕಾಶಿಸಿದುವು. ೪೪. ಆ ರಾಜ್ಯದಲ್ಲಿ ಎಲ್ಲಿಯೂ ಆರೋಗ್ಯವಂತರು ಇದ್ದರೇ ಹೊರತು ರೋಗಿಗಳಿರಲಿಲ್ಲ. ಆದರೂ ಅಲ್ಲಿ ಎಲ್ಲ ವಸ್ತುಗಳೂ ಇದ್ದುವು. ಏಕೆಂದರೆ ಕುದುರೆ-ಆನೆಗಳ ಬಾಯಿ ಶುದ್ಧಿಮಾಡಲು ಉಪಯೋಗಿಸುವ ಗಂಡೂಷಕ್ಕೆ, ಬಗೆಬಗೆಯ ಚಿತ್ರಕುಶಲಕಲೆಗಳಿಗೆ, ಭೋಗಿಗಳ ಶ್ರೇಷ್ಠವಾದ ತಾಂಬೂಲದ್ರವ್ಯಗಳಿಗೆ ಆಗತ್ಯವೆಂದು ಬ್ರಹ್ಮನು ಈ ವಸ್ತುಗಳನ್ನು ಪಡೆದನೋ ಎನ್ನುವಂತೆ ಪರಿಮಳದ್ರವ್ಯಗಳು ಮತ್ತು ಔಷಧಿವಸ್ತುಗಳನ್ನು ಮಾರು ವವರ ಅಂಗಡಿಗಳು ಆ ನಗರದ ಬೀದಿಗಳಲ್ಲಿ ಕಂಡುಬರುತ್ತಿದ್ದುವು. ೪೫. ಪರೀಕ್ಷೆ ಮಾಡುವುದಾದರೆ ದೇವ, ರಾಕ್ಷಸ, ಮಾನವರಿಗೂ ಯಾವಾಗಲೂ ಅಲಂಕಾರವಸ್ತುಗಳಿಗೆ ಮೂಲವಾಗಿರುವ ಶ್ರೇಷ್ಠವಾದ ಸದ್ಗುಣ (ದಾರ) ಗಳು ನಮ್ಮ ದೇಹವನ್ನು ಆಶ್ರಯಿಸಿವೆ. ಅಲ್ಲದೆ ಯಾರಿಗಾದರೂ ಚಳಿಯನ್ನು ಪರಿಹರಿಸುತ್ತೇವೆ. ಭೂಮಿಯಲ್ಲಿರುವ ಹೆಣ್ಣು ಗಂಡುಗಳ ಮಾನವನ್ನು ನಮ್ಮಂತೆ ಕಾಪಾಡುವ ಹಿರಿಯತನ ಬೇರೆ ಎಲ್ಲಿದೆ ಎಂದು ಹೇಳುವಂತೆ ಹೆಮ್ಮೆಯಿಂದ ಜವಳಿ ಅಂಗಡಿಗಳು ಸೊಗಸಿನಿಂದ ವ್ಯವಸ್ಥೆಗೊಂಡಿದ್ದುವು.



CC-0. Jangamwadi Math Collection. Digitized by eGangotri

ಪರಸಖನ ಪುರದ ಧನವಿಾ ಪುರದ ಚಿನ್ನವರ
ದರೊಳೊರ್ವನೊರೆವ ಚಿನ್ನಕ್ಕೆ ಸರಿಬಾರದೆಂ
ಬರ ಮಾತು ಸಲ್ವಂತೆ ರಾಸಿಗೈದಿರ್ಪ ಪೊಂಗಳ್ ಕಂಗೆ ಶೋಭಿಸುತಿರೆ
ವರಮುನಿಪನಬ್ಧಿ ಜಲಮೆಲ್ಲಮಂ ಪೀರೆ ತ
ಚ್ಛರಧಿಪಾತ್ರಂಪೊಳಿರ್ಪ ರತ್ನಸಂಚಯದಂತೆ
ಕರಮೊಪ್ಪಿ ತೋರ್ಪ ರತ್ನಂಗಳೊಟ್ಟಿಲ್ಗಳುರೆ ಚೆಲ್ವಾದುದೇನೆಂಬೆನು ೪೮

ಇಂತೆಸೆವ ಸಕಲ ವ್ಯವಹಾರದಂಗಡಿಗಳಂ
ಸಂತಸದೆ ನೋಡುತ್ತೈತರೆ ಮುಂದೆ ಕಾಣಿಸಿತ
ನಂತ ಗಜಶಾಲೆ ಹಯಶಾಲೆಯಾಯುಧಶಾಲೆಯುಂ ಸಕಲ ಭಂಡಾರದೆ
ಸಂತತಂ ಪೊಗುವ ಪೊರಮಡುವ ಸಂದಣಿಪರ ಸು
ತಿಂತಿಣಿಗಳಿಂ ಭಟಾಗ್ರಣಿಗಳಿಂ ಕವಿಗಮಕಿ
ಸಂತತಿಗಳಿಂದೆ ರಾಜಾಲಯಂ ಪುರವಸ್ತ್ರೆಯುಮುಳಮುಖಬಿಂಬದಂತೆ ೪೭

ಅದರೊಳಿರ್ಪಂ ರೂಪವುದನನುಂ ಧನದಸಮ
ಸುಧನನುಂ ವಿಭವಸುರಸದನನುಂ ನವಪದ್ಮ
ವದನನುಂ ಸಿತಕುಂದರದನನುಂ ಜಿತಶತ್ರುಕದನನೆಂದೆನಿಸಿ ಮೆರೆವ

೪೮. ಕುಬೇರನ ಪಟ್ಟಣವಾದ ಅಲಕಾಪುರದಲ್ಲಿದ್ದ ಐಶ್ವರ್ಯವೆಲ್ಲ ಈ ಕಲ್ಯಾಣನಗರದ ಅಕ್ಕಸಾಲಿಗ ಒಬ್ಬರಲ್ಲಿ ಒಬ್ಬನು ಒರೆಗಲ್ಲಿಗೆ ತಿಕ್ಕುವ ಚಿನ್ನದ ಪ್ರಮಾಣಕ್ಕೆ ಸಮನಾಗಲಾರದು ಎನ್ನುವವರ ಮಾತು ಸತ್ಯವಾದುದು ಎನ್ನಿಸುವಂತೆ ರಾಶಿಹಾಕಿರುವ ಚಿನ್ನದ ಒಡವೆಗಳು ಶೋಭಿಸುತ್ತಿದ್ದುವು. ಅಗಸ್ತ್ಯಮುನಿಯು ಸಮುದ್ರದ ನೀರನ್ನೆಲ್ಲ ಕುಡಿಯಲು ಆ ಸಮುದ್ರದ ತಳದಲ್ಲಿದ್ದ ರತ್ನಗಳ ಸಮೂಹದಂತೆ ಹೆಚ್ಚಾಗಿ ಕಾಣುವ ರತ್ನಗಳ ರಾಶಿಯು ನೋಡಲು ಚೆನ್ನಾಗಿ ಪ್ರಕಾಶಿಸುತ್ತಿದ್ದಿತು. ೪೭. ಈ ರೀತಿ ಶೋಭಿಸುವ ಎಲ್ಲ ರೀತಿಯ ವ್ಯವಹಾರದ ಅಂಗಡಿಗಳನ್ನು ಸಂತೋಷದಿಂದ ನೋಡುತ್ತ ಬರಲು, ಆಗ ಅವರ ಮುಂದೆ ವಿಶಾಲವಾದ ಆನೆಕರೋಟಿ, ಕುದುರೆಶಾಲೆ, ಆಯುಧಾಗಾರ ಮುಂತಾದ ಸಕಲ ಭಂಡಾರಗಳೂ ಕಂಡವು. ಅಲ್ಲಿ ಯಾವಾಗಲೂ ಒಳಹೋಗುವ, ಹೊರಬರುವ, ಗುಂಪಾಗಿ ಸೇರುವವರ ಸಮೂಹಗಳಿಂದ, ಶ್ರೇಷ್ಠರಾದ ಯೋಧರ, ಕವಿಗಳ ಮತ್ತು ಗಮಕಿಗಳ ಸಮೂಹದಿಂದ ಆ ಅರಮನೆಯು ಪುರಸ್ತ್ರೀಯ ಶುಭ್ರವಾಗಿ ಬೆಳಗುವ ಮುಖಬಿಂಬದಂತೆ ಕಾಣಿಸಿತು. ೪೮. ಆ ಅರಮನೆಯಲ್ಲಿ ರೂಪದಲ್ಲಿ ಮನ್ಮಥನೂ, ಐಶ್ವರ್ಯದಲ್ಲಿ ಕುಬೇರನಿಗೆ ಸಮನೂ, ವೈಭವದಲ್ಲಿ ದೇವೇಂದ್ರಸದನಕ್ಕೆ ಸಾಟಿ, ಆಗ ತಾನೆ ಅರಳಿದ ಕಮಲದಂತೆ ಮುಖವುಳ್ಳವನು, ಬಿಳಿಯ ಮಲ್ಲಿಗೆಯಂತೆ ಬೆಳಗುವ ಹಲ್ಲನ್ನು ಉಳ್ಳವನು, ಯುದ್ಧದಲ್ಲಿ ಶತ್ರುಗಳನ್ನು ಗೆದ್ದವನು ಎಂದೆನಿಸಿ

CC-0. Jangamwadi Math Collection. Digitized by eGangotri

ಉದಧಿಗಂಭೀರನುಂ ಶರಣಾಗತೋದ್ಧಾರನುಂ
ಸದಮಳ ಶರೀರನುಂ ಸರಸಗುಣಸಾರನುಂ
ಸುದತಿದೃಕ್ಕಜ್ಜಳಂ ಬಿಜ್ಜಳಂ ಸಕಲಸೌಭಾಗ್ಯದಿಂದಿರುತಿರ್ದನು ೪೮

ಇಂತೆಸೆವ ಕಲ್ಯಾಣಪಟ್ಟಣದೊಳೊಪ್ಪುವಾ
ದ್ಯಂತ ಸೌಭಾಗ್ಯಮಂ ನೋಡುತಡಿಯಿಟ್ಟು ಬರೆ
ಮುಂತೆಸೆದುದಮಳಭಕ್ತಿಯ ತವರ್ಮನೆಯಂತೆ ಮುಕ್ತಿಯಿಹ ಸದನವಂತೆ
ಅಂತರಂತರದ ಸೌಧಾವಳಿಯ ಬಾಗಿಲ್ಗ
ಳಿಂ ತೊಳಪ ಬಸವನರಮನೆಯದಂ ಕಾಣುತ
ತ್ಯಂತ ಹರುಷದೊಳಲ್ಲಮಪ್ರಭುವರಂ ಸಿದ್ಧರಾಮನುಂ ನಡೆತಂದರು ೪೯

ಬಂದು ಬಸವನ ಮನೆಯ ಬಾಗಿಲೊಳ್ ನೀತಿ ಭಕ್ತಿ
ಯಿಂದಾಗ ಹಡಪದಪ್ಪಣ್ಣ ತಾಂ ಕಾಣುತ್ತೈ
ತಂದಖಿಳಗಣನಿಕರದೊಡನೆ ಶಿವಪೂಜೆಯಂ ಮಾಳ್ಪ ಬಸವನ ಪೊರೆಯೊಳು
ನಿಂದು ಬಿನ್ನಯಿಸಿದನಪೂರ್ವಜಂಗಮಯುಗಂ
ಬಂದಿರ್ಪರದಕೊ ಬಾಗಿಲೊಳೆನಲ್ ಕರೆತರ್ಪು
ದೆಂದು ನೇಮಿಸೆ ಬಸವನಾಜ್ಞೆಯಿಂ ಮರಳಿ ಬಂದಲ್ಲಮನೊಳಿಂತೆಂದನು ೫೦

ಮೆರೆಯುತ್ತಿರುವ. ಸಮುದ್ರದಂತೆ ಗಂಭೀರನೂ, ಶರಣಾಗತರನ್ನು ಉದ್ಧಾರ ಮಾಡು ವವನೂ, ನಿರ್ಮಲವಾದ ದೇಹವುಳ್ಳವನೂ, ಸರಸಿಯೂ, ಸುದತಿಯರ ಕಣ್ಣಿಗೆ ತಂಪನ್ನು ಕೊಡುವ ಆನಂದದಾಯಕನೂ, ಕಾಡಿಗೆಯಂತೆ ಆದ ಬಿಜ್ಜಳನು ಸಕಲಸೌಭಾಗ್ಯದಿಂದೊಡ ಗೂಡಿ ಇರುತ್ತಿದ್ದನು. ೪೯. ಈ ರೀತಿಯಲ್ಲಿ ಕಂಗೊಳಿಸುವ ಕಲ್ಯಾಣಪಟ್ಟಣದಲ್ಲಿರುವ ಎಲ್ಲ ಸೌಭಾಗ್ಯವನ್ನು ನೋಡುತ್ತ ನಡೆದುಬರುತ್ತಿರುವಾಗ ಅವರ ಮುಂದೆ ಪರಿಶುದ್ಧ ವಾದ ಭಕ್ತಿಯ ತವರುಮನೆಯಂತೆ, ಮುಕ್ತಿಯ ಆವಾಸಸ್ಥಾನದಂತೆ, ನಡುನಡುವೆ ಇದ್ದ ಸೌಧಗಳ ಬಾಗಿಲುಗಳಿಂದ ಬೆಳಗುತ್ತಿರುವ ಬಸವಣ್ಣನ ಅರಮನೆ ಕಂಡಿತು. ಅದನ್ನು ನೋಡುತ್ತ ಅತ್ಯಂತ ಹರುಷದಿಂದ ಅಲ್ಲಮಪ್ರಭುದೇವ ಮತ್ತು ಸಿದ್ಧರಾಮರು ಮುಂದು ವರಿದರು. ೫೦. ಹೀಗೆ ಅವರು ಬಂದು ಬಸವಣ್ಣನ ಅರಮನೆಯ ಬಾಗಿಲಲ್ಲಿ ನಿಂತರು. ಆಗ ಹಡಪದಪ್ಪಣ್ಣನು ವಿಶೇಷವಾದ ಭಕ್ತಿಯಿಂದ ಅವರನ್ನು ಕಂಡು, ಎಲ್ಲ ಶಿವಗಣ ಗಳೊಡನೆ ಶಿವಪೂಜೆಯನ್ನು ಮಾಡುತ್ತಿದ್ದ ಬಸವಣ್ಣನ ಬಳಿ ಬಂದು ನಿಂತು "ಇಬ್ಬರು ವಿಶೇಷ ರೀತಿಯ ಜಂಗಮರು ಬಂದಿದ್ದಾರೆ. ಅಲ್ಲಿ ನೋಡಿ, ಬಾಗಿಲಲ್ಲಿ ನಿಂತಿದ್ದಾರೆ," ಎಂದು ಬಿನ್ನವಿಸಿದನು. "ಅವರನ್ನು ಕರೆದುಕೊಂಡು ಬಾ" ಎಂದು ಬಸವಣ್ಣನು ಆಜ್ಞೆ ಮಾಡಲು, ಅವನ ಅಪ್ಪಣೆಯಂತೆ ಹಡಪದ ಅಪ್ಪಣ್ಣನು ಹಿಂದಿರುಗಿ ಅಲ್ಲಮನನ್ನು

CC-0. Jangamwadi Math Collection. Digitized by eGangotri

ಸ್ವಾಮಿ ಚಿತ್ತೈಸಿ ನಿಮ್ಮಯ ಮಗಂ ಬಸವನತಿ
ಪ್ರೇಮದಿಂ ನಿಮ್ಮ ಪಾದವನರ್ಚಿಸುತ್ತಿರ್ಪ
ನಾ ಮಗನ ರಕ್ಷಿಸೆನೆ ರಾಜಾಲಯಕ್ಕಾವು ಬಾರೆವೆನೆ ಮರಳಿ ಬಂದು
ಈ ಮಾತನೆಲ್ಲವಂ ಪೇಳ್ವನಿತರೊಳ್ ಹೃದಯ
ತಾಮರಸದೊಳ್ ತಿಳಿದು ಚೆನ್ನಬಸವೇಶ್ವರಂ
ತಾ ಮಹಾಬೇಗದಿಂ ಬಂದು ನಿಂದಾ ಬಸವರಾಜನೊಡನಿಂತೆಂದನು ೫೧

ಎಲೆ ಮರುಳೆ ಬಸವದಂಡಾಧೀಶ ನಿನ್ನ ಬಾ
ಗಿಲೊಳೈದಿ ಪ್ರಭು ಸಿದ್ಧರಾಮರೈತಂದಿರಲ್
ತಿಳಿಯದಿಂತೊಳಗೆ ಮೆಯ್ಮರೆದಹಂಕಾರದಿಂದಿರ್ಪರೇ ನೀನೆನಲ್ಕೆ
ಬಳಿಕದಂ ಕೇಳ್ದು ಧೃತಿಗುಂದಿ ಕರಿಕರಿಗೆಂದಿ
ಕಳವಳಸಿ ಕಂಗೆಟ್ಟು ಮಮ್ಮಲಂಮರುಗುತ್ತೆ
ತಿಳಿದೆನಗೆ ಗತಿಯಾವುದೆಂದು ಬಸವಂ ಚೆನ್ನಬಸವಗಾನತನಾದನು ೫೨

ಮಾನನಿಧಿ ಬಸವ ನಿನ್ನಯ ಭಕ್ತಿಗೊಲ್ದು ಪ್ರಭು
ತಾನೈದಿ ಬಂದು ಬಾರದೆ ಪೋಗಲರಿಯನಿದ
ಕಾನಿರ್ಪೆನಂಜಬೇಡೆನುತೆ ಸಂಬುಗೆಯಿತ್ತು ಬಸವನಂ ತಿಳಿಪಿ ಬಳಿಕ

ಕುರಿತು ಈ ರೀತಿ ಹೇಳಿದನು. ೫೧. "ಸ್ವಾಮಿ, ದಯಮಾಡಿಸಿ. ನಿಮ್ಮ ಮಗನಾದ ಬಸವಣ್ಣನು ಬಹಳ ಭಕ್ತಿಯಿಂದ ನಿಮ್ಮ ಪಾದಗಳನ್ನೇ ಪೂಜಿಸುತ್ತಿದ್ದಾನೆ. ಆ ನಿಮ್ಮ ಮಗನನ್ನು ಕಾಪಾಡಿ" ಎನ್ನಲು, ಅವರು "ನಾವು ಅರಮನೆಗೆ ಬರುವುದಿಲ್ಲ" ಎಂದರು. ಹಡಪದ ಅಪ್ಪಣ್ಣನು ಹಿಂದಿರುಗಿ ಬಂದು ಬಸವಣ್ಣನಿಗೆ ಈ ಮಾತುಗಳೆಲ್ಲವನ್ನೂ ಹೇಳು ವಷ್ಟರಲ್ಲಿ ಚೆನ್ನಬಸವಣ್ಣನು ತನ್ನ ಹೃದಯಕಮಲದಲ್ಲಿ ಇದೆಲ್ಲವನ್ನೂ ತಿಳಿದು ಬೇಗನೆ ಬಂದು ನಿಂತು ಆ ಬಸವರಾಜನೊಡನೆ ಈ ರೀತಿ ಹೇಳಿದನು. ೫೨. "ಎಲೈ ತಿಳಿಗೇಡಿ ಯಾದ ಬಸವದಂಡಾಧೀಶನೇ, ನಿನ್ನ ಅರಮನೆಯ ಬಾಗಿಲಿಗೆ ಪ್ರಭುದೇವರು ಹಾಗೂ ಸಿದ್ಧರಾಮಣ್ಣ ಬಂದಿದ್ದಾರೆ. ಇದನ್ನು ತಿಳಿದುಕೊಳ್ಳದೆ ನೀನು ಈ ರೀತಿ ಮನೆಯೊಳಗೆ ಮೈಮರೆತು ಅಹಂಕಾರದಿಂದ ಇರುವುದು ಸರಿಯೆ ?" ಎನ್ನಲು, ಅದನ್ನು ಕೇಳಿ ಬಸವಣ್ಣನು ಧೈರ್ಯ ಕುಂದಿ, ಕಾಂತಿಯನ್ನು ಕಳೆದುಕೊಂಡು, ಕಳವಳಗೊಂಡು, ಕಂಗೆಟ್ಟು ಮಮ್ಮಲಮರುಗುತ್ತ ಸತ್ಯಸಂಗತಿಯನ್ನು ತಿಳಿದು ಮುಂದೇನು ಗತಿಯೆಂದು ಹೇಳುತ್ತ ಚೆನ್ನಬಸವಣ್ಣನಿಗೆ ನಮಸ್ಕರಿಸಿದನು. ೫೩. ಚೆನ್ನಬಸವಣ್ಣನು ಬಸವಣ್ಣನನ್ನು ಕುರಿತು, "ಎಲೈ, ಮಾನವನ್ನೇ ಸಂಪತ್ತನ್ನಾಗಿ ಉಳ್ಳ ಬಸವಣ್ಣನೆ, ನಿನ್ನ ಭಕ್ತಿಗೆ ಮೆಚ್ಚಿ ಪ್ರಭು ದೇವರು ತಾವೇ ಇಲ್ಲಿಗೆ ಬಂದು, ಮನೆಯ ಒಳಕ್ಕೆ ಬರದೆ ಹಾಗೆಯೇ ಹೋಗಲಾರರು. ಇದಕ್ಕೆ ನಾನಿದ್ದೇನೆ, ಅಂಜಬೇಡ" ಎನ್ನುತ್ತ ಬಸವಣ್ಣನಿಗೆ ಧೈರ್ಯ ಹೇಳಿ, ಅನಂತರ

CC-0. Jangamwadi Math Collection. Digitized by eGangotri

ನಾನಾ ಗಣಂಗಳೊಡನೈತಂದು ಭಕ್ತಿಸಂ
ಧಾನದಿಂದಲ್ಲಮಪ್ರಭು ನಲಿವಿಂದೊಲಿಸಿ
ಸಾನುರಾಗದೊಳೆ ಬಸವನ ಮಹಾಮಂದಿರಕೆ ಕರೆತಂದರುತ್ಸವದೊಳು ೫೩

ಇಂತು ಕರೆತಂದವುಳಪೀಠದೊಳಗಿರಿಸಿ ಸಮ
ನಂತರದೊಳರ್ಘ್ಯಪಾದ್ಯಾದಿ ಸತ್ಕ್ರಿಯೆಗಳಿಂ
ಸಂತೋಷದಿಂದಲರ್ಚಿಸಿ ಬಳಿಕ ಬಸವನತಿಭಕ್ತಿಯಿಂ ನುತಿಸುತಿರಲು
ಮುಂತಿರ್ಪ ಸಕಲಗಣಕುಲಮನೀಕ್ಷಿಸಿ ಮನದ
ಚಿಂತೆಯಂ ಬಿಡಿಸಿ ಶಿವತತ್ತ್ವಾನುಭಾವಸುಖ
ಸಂತೋಷಸಾಗರದೊಳೋಲಾಡಿಸಿದನಖಿಳಭಕ್ತರಂ ಪ್ರಭುರಾಯನು ೫೪

ಇದು ಸಕಲ ವೀರಮಾಹೇಶ್ವರರ ಸದ್ವಿಮಲ
ಹೃದಯಾಬ್ಜಮಿತ್ರನುರುಷಟ್ಸ್ಥಲಬ್ರಹ್ಮಮೆಂ
ಬುದಧಿವರ್ಧನಸೋಮನೆನಿಪ ಗುರುಸಿದ್ಧವೀರೇಶ್ವರನ ಕರಜಾತನು
ಸದಮಲಜ್ಞಾನಿ ಸಕಲಾಗಮಪುರಾಣಕೋ
ವಿದನೆನಿಪ ವಿರೂಪಾಕ್ಷ ಪಂಡಿತಾರಾಧ್ಯರತಿ
ಮುದದೆ ಪೇಳ್ದೀ ಚೆನ್ನಬಸವಪೌರಾಣಸತ್ಕಥೆಯೊಳೊಂದನೆಯ ಕಾಂಡಂ ೫೫

ಅನೇಕ ಭಕ್ತರ ಸಮೂಹದೊಡನೆ ಬಂದು ಭಕ್ತಿಯನ್ನು ತೋರ್ಪಡಿಸುವುದರ ಮೂಲಕ ಅಲ್ಲಮಪ್ರಭುವನ್ನುಸಂತೋಷದಿಂದ ಮನವೊಲಿಸಿ, ಸಂಭ್ರಮದಿಂದ ಅವನನ್ನು ಬಸವಣ್ಣನ ಮಹಾಮನೆಗೆ ಕರೆದುಕೊಂಡು ಬಂದರು. ೫೪. ಈ ರೀತಿಯಲ್ಲಿ ಕರೆದುಕೊಂಡು ಬಂದು ನಿರ್ಮಲವಾದ ಉನ್ನತಾಸನದ ಮೇಲೆ ಕೂರಿಸಿ, ಅನಂತರ ಅರ್ಘ್ಯಪಾದ್ಯಾದಿಗಳಿಂದ ಸಂತೋಷದಿಂದ ಸತ್ಕರಿಸಿ ಪೂಜಿಸಿದರು. ಬಳಿಕ ಬಸವಣ್ಣನು ಬಹು ಭಕ್ತಿಯಿಂದ ಪ್ರಭು ದೇವರನ್ನು ಹೊಗಳುತ್ತಿರಲು, ಪ್ರಭುವು ತನ್ನ ಮುಂದೆ ಕುಳಿತಿದ್ದ ಎಲ್ಲ ಭಕ್ತ ಸಮೂಹ ವನ್ನು ನೋಡಿ ಅವರ ಮನಸ್ಸಿನ ಚಿಂತೆಯನ್ನು ನಿವಾರಿಸಿದನು ಮತ್ತು ಅವರನ್ನು ಶಿವ ತತ್ತ್ವಾನುಭವ ಸುಖಸಾಗರದಲ್ಲಿ ಓಲಾಡಿಸಿದನು. ೫೫. ಎಲ್ಲ ವೀರಮಾಹೇಶ್ವರರ ನಿರ್ಮಲ ಹೃದಯಕಮಲಗಳಿಗೆ ಸ್ನೇಹಿತನೂ, ಶ್ರೇಷ್ಠವಾದ ಷಟ್ಸ್ಥಲಬ್ರಹ್ಮವೆಂಬ ಸಮುದ್ರವನ್ನು ಹೆಚ್ಚಿಸುವ ಚಂದ್ರನೆನಿಸಿಕೊಂಡವನೂ ಆದ ಗುರು ಸಿದ್ಧವೀರೇಶ್ವರರ ಶಿಷ್ಯನೂ, ನಿರ್ಮಲಜ್ಞಾನಿಯೂ, ಎಲ್ಲ ಆಗಮ ಪುರಾಣಗಳಲ್ಲಿ ಪಂಡಿತನೂ ಎನಿಸಿದ ವಿರೂಪಾಕ್ಷ ಪಂಡಿತನು ಅತಿ ಆನಂದದಿಂದ ಹೇಳಿದ ಚೆನ್ನಬಸವ ಪುರಾಣವೆಂಬ ಸತ್ಕಥೆಯಲ್ಲಿ

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೫೬

ಹನ್ನೊಂದನೆಯ ಸಂಧಿ ಸಂಪೂರ್ಣ

ಪ್ರಥಮ ಕಾಂಡ ಸಮಾಪ್ತ

ಇದು ಒಂದನೆಯ ಕಾಂಡವು. ೫೬. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು, ಕಾಪಾಡುವನು.

ಹನ್ನೊಂದನೆಯ ಸಂಧಿ ಮುಗಿಯಿತು

ಒಂದನೆಯ ಕಾಂಡ ಸಮಾಪ್ತ

CC-0. Jangamwadi Math Collection. Digitized by eGangotri

ದ್ವಿತೀಯ ಕಾಂಡ

# ಹನ್ನೆರಡನೆಯ ಸಂಧಿ

ಸೂಚನೆ ಸಿದ್ಧರಾಮೇಶಂಗೆ ಚೆನ್ನಬಸವಂ ಶೈವ
ಸಿದ್ಧಾಂತಸೃಷ್ಟಿಯಂ ಪೇಳ್ದು ಬಳಿಕಾ ಸುಪ್ರ
ಸಿದ್ಧ ಶಿವನೇಕಪಾದದೆ ನಿಂದು ನಟಿಸಿದುರುಲೀಲೆಯಂ ಪೇಳ್ವೆನೊಲಿದು

ಪಾಕಶಾಸನ ವಿಷ್ಣುಲೋಕೇಶಮುಖವರದಿ
ವೌಕಸಪ್ರತತಿಮುಕುಟಾಕಲಿತರತ್ನಪ್ರ
ಭಾಕೀರ್ಣಪಾದ ಮಹಿಮಾಕರ ಶಿರೋಧೃತನಿಶಾಕರ ವರಶ್ರೀಕರ
ಸೂಕರಾಸುರ ನಯನಭೀಕರ ಕೃಪಾಸುರ
ತ್ನಾಕರ ಧನಂಜಯ ದಿವಾಕರೇಂದ್ವಕ್ಷಿತ್ರ
ಯಾ ಕರುಣದಿಂ ಜನಾನೀಕಮಂ ಸಲೆ ಸಕಲಲೋಕಮಂ ಶಿವ ಪೊರೆವುದು ೧

ನಸುನಗುತಲಲ್ಲಮಂ ಬಸವನೊಡನೀ ಚೆನ್ನ
ಬಸವಣ್ಣನಾಲಯಕೆ ಪೋಪೆವೇಳೆಂದು ಗಣ
ವಿಸರಮಂ ಕೂಡಿಕೊಂಡೈತಂದು ತನ್ಮಹಾಮಂದಿರದ ಚೆಲ್ವಿಕೆಯನು
ಒಸೆದು ನಿಟ್ಟಿಸುತಿರಲ್ಕಾಕ್ಷಣಂ ಕಣ್ಗೆ ರಾ
ಜಿಸುತಿರ್ಪ ವರಸಭಾಮಂಟಪದೊಳೆಂದು ಸಂ
ತಸದಿನೆಲ್ಲರ್ಸಹಿತ ಕುಳ್ಳಿರ್ದು ಪ್ರಭು ಚೆನ್ನಬಸವನೊಡನಿಂತೆಂದನು ೨

ಸೂಚನೆ : ಸಿದ್ಧರಾಮಣ್ಣನಿಗೆ ಚೆನ್ನಬಸವಣ್ಣನು ಶೈವಸಿದ್ಧಾಂತಸೃಷ್ಟಿಯನ್ನು ಹೇಳಿದನು. ಆನಂತರ ಜಗತ್ಪ್ರಸಿದ್ಧನಾದ ಶಿವನು ಒಂದೇ ಕಾಲಿನಲ್ಲಿ ನಿಂತು ನಟಿಸಿದ ಶ್ರೇಷ್ಠವಾದ ಲೀಲೆಯನ್ನು ಸಂತೋಷದಿಂದ ಹೇಳುತ್ತೇನೆ. ೧. ಇಂದ್ರ, ವಿಷ್ಣು ಬ್ರಹ್ಮ ಮುಂತಾದ ದೇವತೆಗಳ ಸಮೂಹವು ಧರಿಸಿದ್ದ ರತ್ನಖಚಿತವಾದ ಕಿರೀಟಗಳ ಪ್ರಭೆಯಿಂದ ಬೆಳಗುತ್ತಿರುವ ಪಾದಗಳುಳ್ಳ, ಮಹಿಮಾಶಾಲಿಯಾದ, ತಲೆಯಲ್ಲಿ ಚಂದ್ರನನ್ನು ಧರಿಸಿರುವ, ಶ್ರೇಷ್ಠವಾದ ಸಂಪತ್ತನ್ನು ಕೊಡುವವನಾದ ಸೂಕರಾಸುರನ ಕಣ್ಣುಗಳಿಗೆ ಭಯಂಕರಸ್ವರೂಪನಾದ ಕೃಪಾಸಾಗರನಾದ ಅಗ್ನಿ, ಸೂರ್ಯ ಮತ್ತು ಚಂದ್ರರನ್ನು ಮೂರು ಕಣ್ಣುಗಳನ್ನಾಗಿ ಉಳ್ಳ ಜನರ ಸಮೂಹವನ್ನೂ ಸಕಲ ಲೋಕಗಳನ್ನೂ ಕರುಣದಿಂದ ಚೆನ್ನಾಗಿ ಕಾಪಾಡು. ೨. ಅಲ್ಲಮನು ನಸುನಗುತ್ತಾ ಬಸವಣ್ಣನಿಗೆ, ಚೆನ್ನಬಸವಣ್ಣನ ಮನೆಗೆ ಹೋಗೋಣ ಏಳು ಎಂದು ಹೇಳಿ ಭಕ್ತಗಣಗಳ ಗುಂಪನ್ನು ಕೂಡಿಕೊಂಡು ಬಂದನು. ಆ ಮಹಾಮಂದಿರದ ಸೊಗಸನ್ನು ನಿಟ್ಟಿಸಿ ನೋಡುತ್ತಿರಲು ಆ ತಕ್ಷಣ ಮನೋಹರವಾಗಿ ಶ್ರೇಷ್ಠವಾಗಿ ಕಂಗೊಳಿಸುತ್ತಿದ್ದ ಸಭಾಮಂಟಪದಲ್ಲಿ ಎಲ್ಲರ ಜೊತೆಯಲ್ಲಿ ಸಂತಸದಿಂದ ಕುಳಿತುಕೊಂಡು ಪ್ರಭುವು ಚೆನ್ನಬಸವಣ್ಣನಿಗೆ ಹೀಗೆ

CC-0. Jangamwadi Math Collection. Digitized by eGangotri

ಇಂತಿದೇನೈ ನಮ್ಮನೆಲ್ಲರಂ ಕರೆದುತಂ
ದಂತಃಪುರಕ್ಕೊಯ್ಯದಿಲ್ಲಿಯೇ ಕುಳ್ಳಿರಿಸಿ
ದಂತಸ್ಥವೇನೆನಲ್ ನಸುನಗುತೆ ಚೆನ್ನಬಸವಣ್ಣನಾ ಪ್ರಭುವಿನೊಡನೆ
ಅಂತರಹಿತನೆ ಜಗತ್ಪಾವನನೆಯಿಲ್ಲಿಂದ
ಮುಂತೆ ಷಟ್‌ಸ್ಥಲಮಾರ್ಗಮಂ ತಿಳಿಪಿದಲ್ಲದೆ ಗೃ
ಹಾಂತರಕ್ಕೊರ್ವರಂ ಬಿಡರೆಂದು ಚೆನ್ನಬಸವೇಶ ಮಗುಳಿಂತೆಂದನು ೩

ಅಂಗದೊಳ್ ನೋಡಲೀ ಸಿದ್ಧರಾಮಂಗಿಷ್ಟ
ಲಿಂಗವೇ ಮುನ್ನಮಿಲ್ಲಿಂತಪ್ಪರಂ ಮಹಾ
ಲಿಂಗಾಂಗಿಗಳ್ ಪೋಗಲೀಯರದುಕಾರಣದೊಳಿಲ್ಲಿಯೇ ಕುಳಿತೆವೆನಲು
ಪಿಂಗದಾ ನುಡಿಗೇಳ್ದು ಸಿದ್ಧರಾಮಂ ಪ್ರಾಣ
ಲಿಂಗಿಯಾಂ ಚೆನ್ನಬಸವಣ್ಣ ಕೇಳೆನಗಿಷ್ಟ
ಲಿಂಗಮಿನ್ನೇಕೆನಲ್ ನಸುನಗುತಲಾ ಚೆನ್ನಬಸವಣ್ಣನಿಂತೆಂದನು ೪

ಎಂತಾದುದೈ ನಿನಗೆ ಪ್ರಾಣಲಿಂಗಂ ಮನದ
ಭ್ರಾಂತಿಯಲ್ಲವೆ ತನುತ್ರಯಮಿಡಿದ ಬಳಿಕಿಲ್ಲಿ
ಸಂತತಂ ತ್ರಿವಿಧಲಿಂಗವ ಧರಿಸಬೇಕಿಷ್ಟಲಿಂಗವೇ ನಿನಗಿಲ್ಲದೆ

ಹೇಳಿದನು. ೩. ಇದೇನಯ್ಯಾ, ನಮ್ಮೆಲ್ಲರನ್ನೂ ಮಹಾಮನೆಯ ಒಳಭಾಗಕ್ಕೆ ಕರೆದುಕೊಂಡು ಹೋಗದೆ ಇಲ್ಲಿಯೇ ಕುಳ್ಳಿರಿಸಿದೆ. ಇದರ ಅಂತರಾರ್ಥವೇನು ? ಎಂದನು. ಆಗ ಚೆನ್ನಬಸವಣ್ಣನು ನಸುನಗುತ್ತ, ಅಲ್ಲಮಪ್ರಭುವನ್ನು ಕುರಿತು ಅಂತರಹಿತನೆ, ಜಗತ್ಪಾವನನೆ, ಇಲ್ಲಿಂದ ಮುಂದಕ್ಕೆ ಷಟ್ಸ್ಥಲಮಾರ್ಗವನ್ನು ತಿಳಿಸಿದಲ್ಲದೆ ಮನೆಯ ಒಳಗೆ ಒಬ್ಬರನ್ನೂ ಬಿಡುವುದಿಲ್ಲ ಎಂದು ಪುನಃ ಹೀಗೆ ಹೇಳಿದನು. ೪. "ಈ ಸಿದ್ಧರಾಮನಿಗೆ ದೇಹದ ಮೇಲೆ ಇಷ್ಟಲಿಂಗವಿಲ್ಲ. ಇಂತಹ ಲಿಂಗವಿಲ್ಲದವರನ್ನು ಮಹಾ ಲಿಂಗಾಂಗಿಗಳು ಒಳಗೆ ಪ್ರವೇಶಿಸಲು ಬಿಡುವುದಿಲ್ಲ. ಆ ಕಾರಣದಿಂದ ಇಲ್ಲಿಯೇ ಕುಳಿತೆವು" ಎಂದನು. ಆ ಮಾತುಗಳನ್ನು ಕೇಳಿ ಸಿದ್ಧರಾಮನು, "ಎಲೈ ಚೆನ್ನಬಸವಣ್ಣ, ಕೇಳು, ನಾನು ಪ್ರಾಣಲಿಂಗಿ, ನನಗೆ ಇಷ್ಟಲಿಂಗ ಇನ್ನೇಕೆ ?" ಎನ್ನಲು, ಚೆನ್ನಬಸವಣ್ಣನು ನಸುನಗುತ್ತಾ ಹೀಗೆ ಹೇಳಿದನು. ೫. "ನಿನಗೆ ಪ್ರಾಣಲಿಂಗ ಹೇಗೆ ಉಂಟಾಯಿತು ? ಇದು ಕೇವಲ ನಿನ್ನ ಮನಸ್ಸಿನ ಭ್ರಾಂತಿ ಅಲ್ಲವೆ ? ತನುತ್ರಯವನ್ನು (ಸ್ಥೂಲ, ಸೂಕ್ಷ್ಮ, ಕಾರಣ) ಹಿಡಿದ ಬಳಿಕ ಇಲ್ಲಿ ಯಾವಾಗಲೂ ತ್ರಿವಿಧ ಲಿಂಗಗಳನ್ನು ಧರಿಸಬೇಕು. ಆದರೆ ನಿನಗೆ ಇಷ್ಟಲಿಂಗವೇ ಇಲ್ಲದೆ ಉಳಿದ ಎರಡು ಲಿಂಗಗಳು ಉಂಟಾದ ರೀತಿಯನ್ನು

CC-0. Jangamwadi Math Collection. Digitized by eGangotri

ಮುಂತೆರಡು ಲಿಂಗಂಗಳಳವಟ್ಟ ಭೇದಮಂ
ನೀಂ ತಿಳಿಯೆ ಪೇಳೆನಲ್ ಸಿದ್ಧರಾಮೇಶ್ವರಂ
ಸಂತಸದೊಳಾ ಚೆನ್ನಬಸವದಂಡಾಧೀಶನೊಡನಾಗಳಿಂತೆಂದನು ೫

ಅಂಗಮೂರುಳ್ಳವರಿಗಾಗಬೇಕಾ ಮೂರು
ಲಿಂಗಂಗಳೆನಗೆಲ್ಲರಂದದಿಂ ಬೇರೆ ಮೂ
ರಂಗಂಗಳಿಲ್ಲೆನ್ನ ಕಾಯವೇ ಪೀಠವಿಾ ಪ್ರಾಣವೇ ಲಿಂಗಮೆನಲು
ಪಿಂಗದಾ ನುಡಿಗೇಳ್ದು ಚೆನ್ನಬಸವನದಿಷ್ಟ
ಲಿಂಗವಿಲ್ಲದ ಬಳಿಕ್ಕಾತನೇ ಭವಿ ಶೈವ
ಸಂಗವಲ್ಲದೆ ವೀರಶೈವನಲ್ಲೆನೆ ಸಿದ್ಧರಾಮೇಶನಿಂತೆಂದನು ೬

ಶೈವವೇ ಸಕಲ ಶೈವಕ್ಕಾದಿಯಾ ಮಹಾ
ಶೈವದಿಂದಾದುದೀ ವೀರಶೈವಂ ಮುಖ್ಯ
ಶೈವಂಗಳೆಂದೆನಲ್ ಕೇಳ್ದು ನಸುನಗುತಲಾ ಚೆನ್ನಬಸವಣ್ಣನೆಂದು
ಶೈವದಾದಿಯ ಸೃಷ್ಟಿ ಬೇರೆ ಕೇಳಾ ವೀರ
ಶೈವವೇ ಬೇರೆನಲ್ ಸಿದ್ಧರಾಮಯ್ಯನಾ
ಶೈವರಾದಿಯನೆನಗೆ ವಿಸ್ತರಿಸಿ ಪೇಳೆನಲ್ ಚೆನ್ನಬಸವಂ ಪೇಳ್ದನು ೭

ಆದೊಡಿನ್ನಾಲಿಸೈ ಸಿದ್ಧರಾಮೇಶ ನೀ
ನಾದಿಶೈವದ ಸೃಷ್ಟಿಮಾರ್ಗಮಂ ಪೇಳ್ವಪೆಂ
ಭೇದಿಸಲ್ಕತ್ಯತಿಷ್ಠದ್ದಶಾಂಗುಲನೆನಿಪ ಪರಶಿವಂ ಗೋಪ್ಯದಿಂದೆ

ತಿಳಿಯುವಂತೆ (ನೀನು) ಹೇಳು" ಎನ್ನಲು, ಆಗ ಸಿದ್ಧರಾಮನು ಚೆನ್ನಬಸವದಂಡಾಧೀಶನಿಗೆ ಸಂತೋಷದಿಂದ ಹೀಗೆ ಹೇಳಿದನು. ೬. "ಮೂರು ದೇಹವುಳ್ಳವನಿಗೆ ಮೂರು ಲಿಂಗಗಳಿರಬೇಕು. ಎಲ್ಲರಿಗೂ ಇರುವಂತೆ ನನಗೆ ಮೂರು ದೇಹಗಳಿಲ್ಲ. ನನ್ನ ದೇಹವೇ ಪೀಠ. ನನ್ನ ಪ್ರಾಣವೇ ಲಿಂಗ" ಎಂದನು, ಆ ಮಾತನ್ನು ಚೆನ್ನಾಗಿ ಕೇಳಿ ಚೆನ್ನಬಸವಣ್ಣನು, "ಇಷ್ಟಲಿಂಗವಿಲ್ಲದ ಬಳಿಕ ಅವನೇ ಭವಿ. ಶೈವನ ಅಂಗವಲ್ಲದೆ ಅವನು ವೀರಶೈವನಲ್ಲ" ಎನ್ನಲು ಸಿದ್ಧರಾಮೇಶನು ಈ ರೀತಿ ಹೇಳಿದನು., ೭. "ಎಲ್ಲ ಶೈವಗಳಿಗೂ ಶೈವವೇ ಮೂಲ. ಆ ಮಹಾಶೈವದಿಂದಲೇ ಈ ವೀರಶೈವವೇ ಮುಂತಾದ ಮುಖ್ಯ ಶೈವಗಳು ಉಂಟಾದುವು" ಎಂದನು. ಅದನ್ನು ಕೇಳಿ ಚೆನ್ನಬಸವಣ್ಣನು ನಸುನಗುತ್ತಾ, "ಶೈವದ ಆದಿಯ ಸೃಷ್ಟಿಯೇ ಬೇರೆ. ಆ ವೀರಶೈವವೇ ಬೇರೆ, ಕೇಳು" ಎನ್ನಲು ಅದಕ್ಕೆ ಸಿದ್ಧರಾಮನು "ಆ ಶೈವದಾದಿಯನ್ನು ನನಗೆ ವಿಸ್ತರಿಸಿ ಹೇಳು" ಎನ್ನಲು ಚೆನ್ನಬಸವಣ್ಣನು ಹೇಳಿದನು. ೮. "ಹಾಗಾದರೆ ಸಿದ್ಧರಾಮೇಶನೇ ಕೇಳು. ಇನ್ನು ಈ ಆದಿಶೈವದ ಸೃಷ್ಟಿಮಾರ್ಗವನ್ನು ಹೇಳುತ್ತೇನೆ. ಪರಶಿವನು ಅತ್ಯತಿಷ್ಠದ್ದಶಾಂಗುಲನು, ಭೇದಿಸಲು ಅಸಾಧ್ಯನು ಎನಿಸಿದ ಪರಶಿವನು ಗೋಪ್ಯನಾಗಿ ವೇದ

CC-0. Jangamwadi Math Collection. Digitized by eGangotri

ವೇದ ವೇದಾಂತ ಸಿದ್ಧಾಂತಶಾಸ್ತ್ರಂಗಳ್ ಸು
ನಾದಬಿಂದುಕಳಾದಿಗತಿದೂರನೆನಿಸುತಲ
ನಾದಿಕಾಲದೆ ಸರ್ವಶೂನ್ಯನಾಗಿರುತಿರ್ದನೇನೆಂದು ಬಣ್ಣಿಸುವೆನು ೮

ಪರವೆಂದು ಪರಕೆ ಪರವೆಂದು ಪರತತ್ತ್ವವೆಂ
ದುರುತರ ಪರಂಜ್ಯೋತಿಯೆಂದು ಪರಸುಖವೆಂದು
ಪರಮಕಾರಣನೆಂದು ಪರಮೇಶನೆಂದು ಪರತರಪರಬ್ರಹ್ಮವೆಂದು
ನಿರವಯುವನೆಂದು ನಿತ್ಯನದೆಂದು ನಿಃಶೂನ್ಯ
ನಿರುಪಮ ನಿರಾಕಾರನೆನಿಪ ನಾಮಂಗಳಿಂ
ಪರಶಿವಂ ತನ್ನ ನಿಜಸುಖಸಮಾಧಿಯೊಳಿರ್ದು ತಿಳಿದು ಬಳಿಕಾಕ್ಷಣದೊಳು ೯

ಪರಶಿವಂ ಚಿತ್ತದಿ ಪ್ರವೃತ್ತಿಯಂ ನೆನೆಯಲಂ
ದುರುತರದ ಚಿತ್ತೆ ಚಿಚ್ಛಕ್ತಿಯಾಯ್ತದರಿಂದೆ
ಪರಮಹಾಲಿಂಗವಾಯ್ತದರಿಂದೆ ಪರಶಕ್ತಿಯಾದುದವರಿರ್ವರಿಂದೆ
ಉರುಸದಾಶಿವನಾದನಾ ಸದಾಶಿವನಿಗಂ
ದಿರದಾದಿಶಕ್ತಿಯಾದಳ್ ಬಳಿಕ್ಕಿವರೊಳೀ
ಶ್ವರನಾದನಾತಗಿಚ್ಛಾಶಕ್ತಿಯಾದಳಿವರಿರ್ವರಿದೇನೆಂಬೆನು ೧೦

ವರಮಹೇಶ್ವರನಾದನಾತಂಗೆ ರಂಜಿಸುವ
ಪರಮಸುಜ್ಞಾನವೆನಿಸುವ ಶಕ್ತಿಯಾದಳಂ
ದಿರದಾ ಮಹೇಶನಿಂದಧಿಕತರಸೃಷ್ಟಿಯಾಯ್ತೆಂದಾಗೆ ತಿಳಿಯೆ ಪೇಳೆ

ವೇದಾಂತ ಸಿದ್ಧಾಂತಶಾಸ್ತ್ರಗಳಿಗೆ ಮತ್ತು ನಾದ ಬಿಂದು ಕಲಾತೀತ ಎನ್ನಿಸಿಕೊಳ್ಳುತ್ತ ಅನಾದಿಕಾಲದಿಂದ ಸರ್ವಶೂನ್ಯನಾಗಿ ಇರುತ್ತಿದ್ದನು. ಇದನ್ನು ವರ್ಣಿಸುವುದು ಅಸಾಧ್ಯ. ೯. ಪರಶಿವನು ಪರ, ಪರಕ್ಕೆ ಪರ, ಪರತತ್ತ್ವ, ಶ್ರೇಷ್ಠವಾದ ಪರಂಜ್ಯೋತಿ, ಪರಮಸುಖಿ, ಪರಮಕಾರಣ, ಪರಮೇಶ, ಪರತರ, ಪರಬ್ರಹ್ಮ, ನಿರವಯವ, ನಿತ್ಯ, ನಿಶ್ಶೂನ್ಯ, ಉಪಮಾರಹಿತ, ನಿರಾಕಾರ ಮುಂತಾದ ಹೆಸರುಗಳಿಂದ ಆತ್ಮಸುಖಸಮಾಧಿಯಲ್ಲಿ ಇದ್ದು ಅದರಿಂದ ಎಚ್ಚೆತ್ತ ಕೂಡಲೆ ೧೦. ಪರಶಿವನು ಮನಸ್ಸಿನಲ್ಲಿಯೇ ತನ್ನ ಪ್ರವೃತ್ತಿಯನ್ನು ನೆನೆಯಲು ಆಗ ಶ್ರೇಷ್ಠವಾದ ಚಿತ್‌ಸ್ವರೂಪವೇ ಚಿಚ್ಛಕ್ತಿಯಾಯಿತು. ಆ ಚಿಚ್ಛಕ್ತಿಯಿಂದ ಅತ್ಯಂತ ಶ್ರೇಷ್ಠವಾದ ಮಹಾಲಿಂಗವಾಯಿತು. ಆ ಮಹಾಲಿಂಗದಿಂದ ಪರಶಕ್ತಿಯಾಯಿತು. ಅವರಿಬ್ಬರಿಂದ ಶ್ರೇಷ್ಠನಾದ ಸದಾಶಿವನಾದನು. ಆ ಸದಾಶಿವನಿಗೆ ಅನಂತರ ಆದಿಶಕ್ತಿಯಾದಳು. ಇವರಿಬ್ಬರಲ್ಲಿ ಬಳಿಕ ಈಶ್ವರನಾದನು. ಆ ಈಶ್ವರನಿಗೆ ಇಚ್ಛಾಶಕ್ತಿ ಉಂಟಾದಳು. ಇವರಿಬ್ಬರಿಂದ ೧೧. (ಈಶ್ವರ ಮತ್ತು ಇಚ್ಛಾಶಕ್ತಿಗಳಿಂದ) ಶ್ರೇಷ್ಠನಾದ ಮಹೇಶ್ವರನಾದನು. ಆತನಿಗೆ ಪ್ರಕಾಶಿಸುವ ಪರಮಸುಜ್ಞಾನವೆನಿಸುವ ಶಕ್ತಿಯಾದಳು. ಆಗ ಆ ಮಹೇಶನಿಂದ ಉತ್ತಮೋತ್ತಮವಾದ ಸೃಷ್ಟಿಯುಂಟಾಯಿತು" ಎಂದು ಚೆನ್ನಬಸವಣ್ಣನು (ಸಿದ್ಧ

CC-0. Jangamwadi Math Collection. Digitized by eGangotri

ವಿರಚಿಸೆಲೆ ಚೆನ್ನಬಸವೇಶ ಮುಂದಪ್ಪ ಘನ
ತರದಖಿಳಸೃಷ್ಟಿಯುಂ ನೀನೆಂದು ಕೇಳಲತಿ
ಕರುಣದಿಂ ಸಿದ್ಧರಾಮೇಶನೊಡನಾ ಚೆನ್ನಬಸವಣ್ಣನಿಂತೆಂದನು ೧೧

ಲೀಲೆಯಿಂದಾ ಮಹೇಶಂ ವಿರಾಡ್ರೂಪಮಂ
ತಾಳಲಾತನ ಪಾದಗುಲ್ಫಜಂಘಾ ಜಾನು
ವಾ ಲಲಿತವೆನಿಪೂರುಕಟಿಮಧ್ಯನಿಚಯದಿಂ ಪಾತಾಳಮುಖ್ಯಮಾದ
ಸಾಲೆನಿಪಧೋಭುವನಸಪ್ತಮುಂ ಘನತರವಿ
ಶಾಲದಿಂದುದಯಿಸಿದುವೆಲೆ ಸಿದ್ಧರಾಮ ನೀಂ
ಕೇಳಿನ್ನುಪರಿಲೋಕದುದ್ಭವಂಗಳನೆಂದು ಚೆನ್ನಬಸವಂ ಪೇಳ್ದನು ೧೨

ಪರಿಕಿಸಲ್ ಭೂರ್ಭುವಸ್ಸ್ವರ್ಮಹಾಲೋಕಾದ್ಯು
ಪರಿಲೋಕತತಿ ನಾಭಿಯುದರಂ ಭುಜಂ ಹೃದಯ
ಮುರುಕಂಧರಂ ಮುಖಂ ಶಿರವೆಂಬ ತಾಣದೊಳ್ ಸಂಭವಿಸಿದುವು ಭರದೊಳು
ಶರಧಿಯೇಳುಂ ನಿಜಶರೀರಕಾಂತಿಯೊಳಾದ
ವಿರದೆ ದಶದಿಕ್ಕುಗಳ್ ಕರ್ಣಂಗಳೊಳ್ ಸಕಲ
ಗಿರಿಸಮೂಹಂ ಪರಡು ಮಡಗಳೊಳ್ಜನಿಸಿದುವು ಪೇಳಲೇನಚ್ಚರಿಯುಸು ೧೩

ರಾಮನಿಗೆ) ವಿವರವಾಗಿ ತಿಳಿಸಿದನು. ಸಿದ್ಧರಾಮನು ಚೆನ್ನಬಸವೇಶನನ್ನು ಕುರಿತು, ಮುಂದೆ ಆದ ಶ್ರೇಷ್ಠತರವಾದ ಸೃಷ್ಟಿಯೆಲ್ಲವನ್ನೂ ವಿವರಿಸು ಎಂದು ಕೇಳಲು, ಬಹು ಕರುಣೆಯಿಂದ ಚೆನ್ನಬಸವಣ್ಣನು ಸಿದ್ಧರಾಮನೊಡನೆ ಈ ರೀತಿ ಹೇಳಿದನು. ೧೨. "ಲೀಲೆಯಿಂದ ಆ ಮಹೇಶನು ವಿರಾಡ್ರೂಪವನ್ನು ಧರಿಸಲು ಅವನ ಪಾದ, ಹೆಜ್ಜೆ, ಕಿರುದೊಡೆ, ಮೊಳಕಾಲು, ಚೆಲುವಾದ ತೊಡೆ, ಸೊಂಟದ ಮಧ್ಯಭಾಗಗಳಿಂದ ಪಾತಾಳವೇ ಮೊದಲಾದ ಕ್ರಮವಾಗಿ ಕೆಳಗಿನ ಏಳು ಲೋಕಗಳು ದೊಡ್ಡದಾಗಿ ವಿಸ್ತಾರವಾಗಿ ಉದಿಸಿದುವು. ಎಲೈ ಸಿದ್ಧರಾಮನೇ ಅನಂತರ ಆ ಮೇಲಿನ ಲೋಕಗಳು ಉದ್ಭವವಾದುದನ್ನು ಹೇಳುತ್ತೇನೆ, ಕೇಳು," ಎಂದು ಚೆನ್ನಬಸವಣ್ಣನು ಮುಂದುವರಿಸಿದನು. ೧೩. "ಪರೀಕ್ಷಿಸಿದರೆ (ಆ ಮಹೇಶನ) ಹೊಕ್ಕಳು, ಹೊಟ್ಟೆ, ಭುಜ, ಹೃದಯ, ಕುತ್ತಿಗೆ, ಮುಖ, ತಲೆ ಮೊದಲಾದ ಸ್ಥಳಗಳಲ್ಲಿ ತ್ವರಿತದಿಂದ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ ಮೊದಲಾದ ಮೇಲಿನ ಏಳು ಲೋಕಗಳು ಸೃಷ್ಟಿಯಾದುವು. ಅವನ ದೇಹದ ಕಾಂತಿಯಿಂದ ಸಪ್ತಸಾಗರಗಳು ಹುಟ್ಟಿದುವು.ಹತ್ತು ದಿಕ್ಕುಗಳು ಕಿವಿಗಳಲ್ಲಿ ಹುಟ್ಟಿದುವು. ಎಲ್ಲ ಪರ್ವತಸಮೂಹಗಳು ಪಾದದಗಂಟು ಮತ್ತು ಹಿಮ್ಮಡಿಗಳಲ್ಲಿ

CC-0. Jangamwadi Math Collection. Digitized by eGangotri

ಪೊಳೆವಾಸ್ಯದೊಳ್ ರುದ್ರನೆಡದ ಭುಜದೊಳ್ ವಿಷ್ಣು
ಬಲದ ತೊಡೆಯೊಳ್ ಬ್ರಹ್ಮನಂಘ್ರಿಯೊಳ್ ದೇವೇಂದ್ರ
ನೊಲವಿನಿಂ ಮಾನಸದೊಳಿಂದು ರವಿ ನಯನದೊಳು ಜನಿಸಿದರು ಲೀಲೆಯಿಂದೆ
ತಿಳಿಯುಲಾ ದ್ವಾದಶಾದಿತ್ಯರ್ ನಖಂಗಳೊಳ್
ಗಳಮೂಲದೊಳ್ ಸಪ್ತಋಷಿಗಳುರದೊಳ್ ಭಗಣ
ಕುಲವೆಸೆವ ಪಣೆಯೊಳೊಪ್ಪುವ ಮಹಾರುದ್ರರುದ್ಭವಿಸಿದರ್ ಸಂತಸದೊಳು ೧೪

ವರನವಬ್ರಹ್ಮರಂಗುಲಿಯೊಳ್ ಚತುರ್ದಶೇಂ
ದ್ರರುಮುಭಯ ಪಾರ್ಶ್ವದೊಳ್ ಬಹುವಿಧದ ಶಕ್ತಿಗಳ್
ಬೆರಲ ಸಂಧಿಗಳೊಳ್ ಚತುರ್ದಶ ಮನುಗಳಾತನಂಗೈಯೊಳುದಿಯಿಸಿದರು
ಪರಮವೇದಾಗಮಪುರಾಣೋಪನಿಷದತುಳ
ತರಶಾಸ್ತ್ರಸಂಕುಲಂ ವಾಣಿಯೊಳಖಿಲನದೀ
ತರುಣಿಯರ್ ತಿಳಿಯಲಾನಂದಾಶ್ರುವಾರಿಯಿಂ ಜನಿಸಿದರ್ ಸಂಭ್ರಮದೊಳು ೧೫

ಗರುಡ ಗಂಧರ್ವ ಕಿನ್ನರ ಸಿದ್ಧ ಸಾಧ್ಯ ಕಿಂ
ಪುರುಷ ಸುರರೆಂಬ ತೆತ್ತೀಸಕೋಟಿಗಳೆಸೆವ
ಶಿರದೊಳುದ್ಭವಿಸಿದರ್ ಮೂಣದರುವತ್ತಾರುಕೋಟಿ ರಕ್ಕಸವೀರರು

ಹುಟ್ಟಿದುವು. ಆಶ್ಚರ್ಯವನ್ನು ಏನೆಂದು ಹೇಳಲಿ ? ೧೪. ಹೊಳೆಯುವ ಮುಖದಲ್ಲಿ ರುದ್ರ, ಎಡಭುಜದಲ್ಲಿ ವಿಷ್ಣು, ಬಲದ ತೊಡೆಯಲ್ಲಿ ಬ್ರಹ್ಮ, ಪಾದಗಳಲ್ಲಿ ದೇವೇಂದ್ರ, ಮನದಲ್ಲಿ ಚಂದ್ರ, ಕಣ್ಣುಗಳಲ್ಲಿ ಸೂರ್ಯ ಲೀಲೆಯಿಂದ ಹುಟ್ಟಿದರು. ದ್ವಾದಶಾದಿತ್ಯರು ಉಗುರುಗಳಲ್ಲಿ, ಕುತ್ತಿಗೆಯ ಮೂಲಭಾಗದಲ್ಲಿ ಸಪ್ತಋಷಿಗಳು, ಎದೆಯ ಭಾಗದಲ್ಲಿ ನಕ್ಷತ್ರಸಮೂಹ, ಹಣೆಯಲ್ಲಿ ತೇಜಸ್ವಿಗಳಾದ ಮಹಾರುದ್ರರು ಉದ್ಭವಿಸಿದರು. ೧೫. "ಅವನ ಬೆರಳಿನಲ್ಲಿ ಶ್ರೇಷ್ಠರಾದ ಒಂಬತ್ತು ಜನ ಬ್ರಹ್ಮರುಗಳು, ಎರಡು ಪಕ್ಕಗಳಲ್ಲಿ ಹದಿನಾಲ್ಕು ಮಂದಿ ಇಂದ್ರರು ಜನಿಸಿದರು. ಬೆರಳುಗಳ ಸಂಧಿಯಲ್ಲಿ ನಾನಾ ರೀತಿಯ ಶಕ್ತಿಗಳು, ಅವನ ಅಂಗೈನಲ್ಲಿ ಹದಿನಾಲ್ಕು ಮಂದಿ ಮನುಗಳು ಉದಿಸಿದರು. (ಆಮಹೇಶನ) ನುಡಿಯಲ್ಲಿ ಪರಮ ಪವಿತ್ರವಾದ ವೇದ, ಆಗಮ, ಪುರಾಣ, ಉಪನಿಷತ್ತು ಮೊದಲಾದ ಉತ್ತಮವಾದ ಶಾಸ್ತ್ರಸಮೂಹಗಳೂ ಅವನ ಆನಂದಬಾಷ್ಪದಿಂದ ಪುಣ್ಯ ನದಿಗಳೂ ಸಂಭ್ರಮದಿಂದ ಜನಿಸಿದುವು. ೧೬. ಅವನ ಹೊಳೆಯುವ ತಲೆಯಲ್ಲಿ ಗರುಡ, ಗಂಧರ್ವ, ಕಿನ್ನರ, ಸಿದ್ಧ-ಸಾಧ್ಯ, ಕಿಂಪುರುಷ ಮೊದಲಾದ ಮೂವತ್ತುಮೂರು ಕೋಟಿ ದೇವತೆಗಳು ಜನಿಸಿದರು. ಮತ್ತು ಅರವತ್ತಾರುಕೋಟಿ

CC-0. Jangamwadi Math Collection. Digitized by eGangotri

ತರತರದ ರೋಮಕೂಪಂಗಳೊಳಗುದಯಿಸಿದ
ಉರಗ ನರ ಮುಖ್ಯ ನಾನಾ ಜನಮಹಾ ಮಹೇ
ಶ್ವರನವಯವಂಗಳೊಳ್ ಸಂಜನಿಸಿದುದು ಸಿದ್ಧರಾಮ ನೀಂ ಕೇಳೆಂದನು ೧೬

ಮಿಗೆ ನವಗ್ರಹಮಷ್ಟದಿಕ್ಪಾಲಕರ್ ತಿಳಿಯ
ಲೊಗುಮಿಗೆಯೊಳಷ್ಟ ವಸುಗಳ್ ಕಪೋಲಂಗಳೊಳ್
ಮೃಗ ಪಕ್ಷಿ ಜಲಚರಾದಿಗಳೆ ಪಾದಾಂಗುಳಿಯೊಳುದ್ಭವಿಸಿದುವು ಮುದದೊಳು
ನಗ ಲತಾ ಗುಲ್ಮ ತೃಣ ಕಾಷ್ಠಂಗಳಾತನಂ
ಘ್ರಿಗಳ ಬೆರಲಡಿಯೊಳಾದುವು ಸಕಲ ಪಶುನಿಕರ
ಮೊಗೆದುದಾತನ ಕಕ್ಷಯುಗ್ಮದೊಳ್ ಪೇಳಲೇನಾತನ ಮಹಾಲೀಲೆಯ ೧೭

ರಾಮ ಕೇಳಾ ಮಹೇಶ್ವರನ ಸರ್ವಾಂಗದೊಳ
ಗೀ ಮಹಾಸಚರಾಚರಂಗಳುದ್ಭವಿಸಿ ಪ್ರೋ
ದ್ಧಾಮಲೋಕದ ಸೃಷ್ಟಿ ತನ್ನ ದೆಸೆಯಿಂದಾದ ಬಳಿಕಲಾ ಕಲ್ಪಾಂತಕೆ
ಆ ಮಹೇಶ್ವರನತುಳ ಲೀಲೆಯಿಂದಖಿಳನಿ
ಸ್ಸೀಮಗಣಸಂಕುಳದ ಮಧ್ಯದೊಳ್ ಪಟುತರನಿ
ಕಾಮಲೋಕಪ್ರಳಯತಾಂಡವಾಡಂಬರಮನನುಕರಿಸಿದಂ ಮುದದೊಳು ೧೮

ಪೇಳಲೇನೆಲೆ ರಾಮ ಪೊಸತಂ ಮಹೇಶ್ವರನ
ಲೀಲಾವಿನೋದಮಂ ತನ್ನಿಂದೆ ಜನಿಸಿದ ವಿ
ಶಾಲಸೃಷ್ಟಿಗಳೆಸೆವ ಪಾದಚಾರಿಗಳ ವಿನ್ಯಾಸದಿಂ ನಿಮಿಷದೊಳಗೆ

ರಾಕ್ಷಸವೀರರು ನಾನಾರೀತಿಯ ರೋಮಕೂಪಗಳಲ್ಲಿ ಉದಯಿಸಿದರು. ಆ ಮಹೇಶ್ವರನ ಅವಯವಗಳಲ್ಲಿ ನಾಗ ಮತ್ತು ಮನುಷ್ಯ ಮುಂತಾದ ನಾನಾ ಜನರು ಹುಟ್ಟಿದರು, ಸಿದ್ಧರಾಮನೇ, ಕೇಳು'' ಎಂದನು. ೧೭. ಆ ಮಹೇಶ್ವರನ ಕಪೋಲಗಳಲ್ಲಿ ನವಗ್ರಹಗಳು, ಅಷ್ಟದಿಕ್ಪಾಲಕರು, ಅಷ್ಟವಸುಗಳು ಹುಟ್ಟಿದರು. ಅವನ ಪಾದದ ಬೆರಳಿನಲ್ಲಿ ಮೃಗ, ಪಕ್ಷಿ, ಜಲಚರಗಳೇ ಮುಂತಾದವುಗಳು ಹುಟ್ಟಿದವು. ಆತನ ಪಾದಗಳ ಬೆರಳ ಕೆಳಭಾಗದಲ್ಲಿ ಪರ್ವತ, ಬಳ್ಳಿ, ಪೊದೆ, ಹುಲ್ಲು, ಮರಗಳು ಹುಟ್ಟಿದುವು. ಅವನ ಎರಡು ಕಂಕುಳುಗಳಲ್ಲಿಯೂ ಎಲ್ಲ ರೀತಿಯ ಪ್ರಾಣಿಗಳೂ ಜನಿಸಿದುವು. ಆತನ ಮಹಾಲೀಲೆಯನ್ನು ಏನು ಹೇಳಲಿ ? ೧೮. ಸಿದ್ಧರಾಮನೇ, ಕೇಳು, ಆ ಮಹೇಶ್ವರನ ಸರ್ವಾಂಗದೊಳಗೆ ಈ ಮಹಾ ಸಚರಾಚರಗಳು ಉದ್ಭವಿಸಿ ಆತನಿಂದ ಈ ಅಪರಿಮಿತವಾದ ಮಹಾಲೋಕದ ಸೃಷ್ಟಿ ಉಂಟಾಯಿತು. ಅನಂತರದಲ್ಲಿ ಪ್ರಳಯಕಾಲದಲ್ಲಿ ಆ ಪರಮೇಶ್ವರನು ಲೀಲೆಯಿಂದ ಎಲ್ಲ ಅಸಮಾನವಾದ ಗಣಸಮೂಹದ ಮಧ್ಯದಲ್ಲಿ ಇದ್ದನು. ಕಡೆಗೆ ಅತ್ಯಂತ ಉಗ್ರವಾದ ಮತ್ತು ತನ್ನ ಇಚ್ಛೆಯಾದ ಸೃಷ್ಟಿಯಿಂದ ಲೋಕದ ಪ್ರಳಯಕಾಲದ ತಾಂಡವನೃತ್ಯವನ್ನು ಸಂತೋಷದಿಂದ ಅಭಿನಯಿಸಿದನು. ೧೯. ''ಆ ಮಹೇಶ್ವರನ ಲೀಲಾವಿನೋದವನ್ನು ಹೊಸದಾಗಿ ಏನು ಹೇಳಲಿ, ಸಿದ್ಧರಾಮ ? ತನ್ನಿಂದ ಜನಿಸಿದ

CC-0. Jangamwadi Math Collection. Digitized by eGangotri

ಧೂಳಿಪಟವಾದುವಾ ಹರಿವಿರಿಂಚ್ಯಾದಿ ಜನ
ಮಾಲೋಕವಾ ಶರಧಿಯಾ ದ್ವೀಪವಾ ಗಿರಿಗ
ಳೋಲೈಸಿಮುವು ನಿರಾಕಾರವಮಂ ಶಿವನ ತಾಂಡವಮನದನೇನೆಂಬೆನು ೧೯

ಸಾಗರದ ಮಸಕದಿಂದುದಯಿಸಿದ ಬೊಬ್ಬುಳಿಗ
ಳಾಗಳೇ ಘನತರಂಗದ ಪೊಯ್ಲಿನಿಂದೆ ಹತ
ವಾಗುವಂತಾ ಮಹೇಶ್ವರನ ತಿರುಪಿನೊಳುರುಭುಜೋದ್ಧೂತ ವಾಯುವಿಂದೆ
ಚೇಗೆಯಾದುವು ಚರಾಚರವೀಶನಂಗದೊಳ್
ಪೋಗಿ ಕೂಡಿದುವೇಕಪಾದದಿಂದಂದು ಸೊಗ
ಸಾಗಿ ಲೋಕಪ್ರಳಯತಾಂಡವಾಡಂಬರವನಳ್ತಿಯಿಂ ನಟಿಯಿಸಿದನು ೨೦

ಇಂತು ಸಚರಾಚರಂಗಳ್ ವಿಲಯವಾದ ಸಮ
ನಂತರದೊಳೆಸೆವಾ ಸ್ಮಶಾನರುದ್ರತ್ವಮಂ
ತಾಂ ತಳೆದು ತನ್ಮಹೇಶಂ ಮುದದೊಳೇಕಪಾದಾಹ್ವಯದ ಲೀಲೆಯಿಂದೆ
ಸಂತೋಷದಿಂ ಮೆರೆದನೆನೆ ಸಿದ್ಧರಾಮಸ
ತ್ಯಂತ ಹರುಷದೆ ಕೇಳ್ದು ಚೆನ್ನಬಸವೇಶ ನೀಂ
ಮುಂತೀ ಜಗತ್ಸೃಷ್ಟಿಯೆಂತಾದುದುಸಿರೆನಲ್ ಪೇಳ್ದಂ ಸವಿಸ್ತರದೊಳು ೨೧

ವಿಶಾಲಸೃಷ್ಟಿಯೆಲ್ಲ ಆತನ ಪಾದಗಳ ಚಲನೆಯ ವಿನ್ಯಾಸದಿಂದ ಒಂದು ಕ್ಷಣದಲ್ಲಿ ಧೂಳೀಪಟವಾಯಿತು. ಆ ವಿಷ್ಣು, ಬ್ರಹ್ಮಾದಿಗಳು, ಜನಗಳು, ಆ ಲೋಕಗಳು, ಆ ಸಮುದ್ರಗಳು, ದ್ವೀಪಗಳು, ಪರ್ವತಗಳು ತಮ್ಮ ಸ್ಥಿತಿಯನ್ನು ಕಳೆದುಕೊಂಡು ನಾಶ ಹೊಂದಿದುವು. ಶಿವನ ತಾಂಡವವನ್ನು ಏನೆಂದು ಹೇಳಲಿ ? ೨೦. ಸಾಗರದ (ಅಲೆಗಳ) ಮಸೆತದಿಂದ ಹುಟ್ಟಿದ ನೊರೆಗುಳ್ಳೆಗಳು ತಕ್ಷಣವೇ ದೊಡ್ಡ ಅಲೆಯ ಹೊಡೆತದಿಂದ ನಾಶವಾಗುವಂತೆ ಆ ಪರಮೇಶ್ವರನು ತಾಂಡವನೃತ್ಯವನ್ನು ನಟಿಸುವ ಕಾಲದಲ್ಲಿ ತಿರ್ರನೆ ತಿರುಗಿದಾಗ ಅವನ ವಿಸ್ತಾರವಾದ ಭುಜಗಳ ಚಲನೆಯಿಂದ ಹುಟ್ಟಿದ ಭಯಂಕರವಾದ ಗಾಳಿಯಿಂದ ಅವನಿಂದ ಸೃಷ್ಟಿಯಾದ ಸಚರಾಚರಗಳೆಲ್ಲವೂ ನಾಶ ಮಾಡಲ್ಪಟ್ಟು ಮಹೇಶನ ಅಂಗದಲ್ಲಿಯೇ ಹೋಗಿ ಸೇರಿಕೊಂಡುವು. ಈ ರೀತಿ ಆ ಸಂದರ್ಭದಲ್ಲಿ ಮಹೇಶ್ವರನು ಒಂದೇ ಪಾದದಿಂದ ಲೋಕಪ್ರಳಯವನ್ನುಂಟುಮಾಡುವ ತಾಂಡವನೃತ್ಯವನ್ನು ಸಂತೋಷ ಸಂಭ್ರಮಗಳಿಂದ ನಟಿಸಿದನು. ೨೧. ಹೀಗೆ ಸಚರಾಚರಗಳೂ ನಾಶಹೊಂದಿದ ನಂತರ ಈಶ್ವರನು ಸ್ಮಶಾನರುದ್ರತ್ವವನ್ನು ಪಡೆದು ತೊಳಗುತ್ತ ಸಂತೋಷದಿಂದ ಏಕಪಾದ ಎಂಬ ಹೆಸರಿನ ಲೀಲೆಯಿಂದ ಮೆರೆದನು'' ಎಂದು ಚೆನ್ನಬಸವಣ್ಣನು ಹೇಳಿದನು. ಅದನ್ನು ಸಿದ್ಧರಾಮನು ಬಹಳ ಸಂತೋಷದಿಂದ ಕೇಳಿ, ''ಚೆನ್ನಬಸವೇಶ, ಮುಂದೆ ಜಗತ್ತಿನ ಸೃಷ್ಟಿ

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೨೨

## ಹನ್ನೆರಡನೆಯ ಸಂಧಿ ಸಂಪೂರ್ಣ

ಹೇಗಾಯಿತು. ಎಂಬುದನ್ನು ಹೇಳು" ಎನ್ನಲು, ಅದನ್ನು ಸವಿಸ್ತಾರವಾಗಿ ಹೇಳಿದನು. ೨೨. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನುಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ಪಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಹನ್ನೆರಡನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿಮೂರನೆಯ ಸಂಧಿ

ಸೂಚನೆ : ಮರಳಿ ಮಾಹೇಶ್ವರಂ ತನ್ಮಹಾಸೃಷ್ಟಿಯಂ
ವಿರಚಿಸಿಯುಮಾಮಹೇಶ್ವರ ಲೀಲೆಯಂ ವೃಷಭ
ವರವಾಹನದ ಲೀಲೆಯಂ ಮೆರೆದ ಕಥನಮಂ ಚೆನ್ನಬಸವಂ ಪೇಳ್ದನು

ಚಂದ್ರಾರ್ಧಚೂಡ. ವೃಷಭೇಂದ್ರವಾಹನ ದಾನ
ವೇಂದ್ರಮದಕುಂಜರಮೃಗೇಂದ್ರ ಸನ್ನುತಸುಗುಣ
ಸಾಂದ್ರ ಕಮಲಾಸನೋಪೇಂದ್ರವಿನಮಿತಪಾದ ಚಂದ್ರಕಾಂತೋಪಮಾಂಗ
ಇಂದ್ರಾಭಿನುತ ವರಫಣೀಂದ್ರಭೂಷಣ ಹಿಮಗಿ
ರೀಂದ್ರವರತನುಜಾಸ್ಯಚಂದ್ರಸುಚಕೋರ ಪ್ರಮ
ಥೇಂದ್ರಪರಿವಾರ ಪಂಪಾವಿರೂಪಾಕ್ಷ ನತವೃಂದಮಂ ಪಾಲಿಸೊಲಿದು ೧

ಆ ಮಹೇಶ್ವರನಾಜ್ಞೆಯಿಂ ಪ್ರಕೃತಿ ವಿಕರಿಸಿ
ತ್ತಾ ಮಹಾಪ್ರಕೃತಿಯಿಂದಂ ಮಹತ್ತುದಿಸಿತಂ
ದಾ ಮಹತ್ತಿನೊಳಹಂಕಾರಮುದ್ಭವಿಸಿದುದು ಮೇಣಹಂಕಾರದಿಂದೆ
ತಾಮಸಂ ಸಾತ್ವಿಕಂ ತೈಜಸಂಗಳ್ ಬಳಿ
ಕ್ಕಾ ಮಹಾವೈಕಾರಿಕಂಗೂಡಿ ಜನಿಸಿದುವು
ರಾಮ ಕೇಳೀ ಗುಣಂಗಳಿಗೊಡೆಯರಾಗಿರ್ಪ ದೇವತೆಗಳಂ ಪೇಳ್ವೆನು ೨

ಸೂಚನೆ : ಪುನಃ ಮಹೇಶ್ವರನು ಆ ಮಹಾಸೃಷ್ಟಿಯನ್ನು ಮಾಡಿ ಉಮಾ ಮಹೇಶ್ವರಲೀಲೆಯನ್ನೂ ವೃಷಭ-ವಾಹನಲೀಲೆಯನ್ನು ಮೆರೆದ ಕಥೆಯನ್ನೂ ಚೆನ್ನಬಸವಣ್ಣನು ಹೇಳಿದನು. ೧. ಅರ್ಧಚಂದ್ರನನ್ನು ಜಡೆಯಲ್ಲಿ ಧರಿಸಿದವನು, ವೃಷಭೇಂದ್ರವಾಹನ, ರಾಕ್ಷಸರು ಎಂಬ ಮದಿಸಿದ ಆನೆಗಳಿಗೆ ಸಿಂಹದಂತಹವನು, ಹೊಗಳಿಸಿಕೊಳ್ಳುವಂತಹ ಒಳ್ಳೆಯ ಗುಣಗಳನ್ನುಳ್ಳವನು, ಬ್ರಹ್ಮ, ವಿಷ್ಣುಗಳಿಂದ ನಮಸ್ಕರಿಸಿಕೊಳ್ಳುವ ಪಾದಗಳುಳ್ಳವನು, ಚಂದ್ರಕಾಂತಶಿಲೆಯಂತಹ ದೇಹವುಳ್ಳವನು, ಇಂದ್ರನಿಂದ ಹೊಗಳಿಸಿಕೊಳ್ಳುವವನು, ನಾಗಭೂಷಣ ಹಿಮಗಿರೀಂದ್ರನ ವರಪುತ್ರಿಯಾದ ಪಾರ್ವತಿಯ ಮುಖಚಂದ್ರಕ್ಕೆ ಚಕೋರನಂಥವನು, ಪ್ರಮಥಗಣಗಳ ಪರಿವಾರವುಳ್ಳವನೂ ಆದ ಪಂಪಾವಿರೂಪಾಕ್ಷನೆ, ನಮಸ್ಕರಿಸಿದ ಭಕ್ತಸಮೂಹವನ್ನು ಪ್ರೀತಿಯಿಂದ ಕಾಪಾಡು. ೨. ಆ ಮಹೇಶ್ವರನ, ಆಜ್ಞೆಯಿಂದ ಮೂಲಪ್ರಕೃತಿಯು ರೂಪಾಂತರವನ್ನು ಹೊಂದಿತು. ಆ ಮಹಾಪ್ರಕೃತಿಯಿಂದ ಮಹತ್ತು ಉದಯಿಸಿತು. ಆ ಮಹತ್ತಿನಿಂದ ಅಹಂಕಾರ ಹುಟ್ಟಿತು. ಆ ಅಹಂಕಾರದಿಂದ ಸತ್ವ, ರಜಸ್ಸು, ತಮಸ್ಸುಗಳು ಆ ಮಹಾ ವಿಕೃತಿಗಳಿಂದ ಹುಟ್ಟಿದುವು. ಸಿದ್ಧರಾಮನೇ, ಈ ಗುಣಗಳಿಗೆ ಒಡೆಯರಾಗಿರುವ ದೇವತೆ

CC-0. Jangamwadi Math Collection. Digitized by eGangotri

ವರಮಹೇಶ್ವರನ ಪಣೆಯಿಂದೆ ತಾಮಸವನನು
ಕರಿಸಿ ಸಂಜನಿಸಿದಂ ರುದ್ರನಾ ಶಿವನ ಘನ
ತರವಾಮಭುಜದಿಂದೆ ಸಾತ್ವಿಕವನನುಕರಿಸಿ ಜನಿಸಿದಂ ವಿಷ್ಣು ಬಳಿಕೆ
ಇರದಾ ಶಿವನ ಬಲದ ಭುಜದ ತೈಜಸವನನು
ಕರಿಸಿ ಜನಿಸಿದನಜಂ ವೈಕಾರಿಕೆಯೊಳಿನ್ನು
ಪರಮಶಬ್ದ ಸ್ಪರ್ಶ ರೂಪು ರಸ ಗಂಧಂಗಳಾದುವವರಿಂದೆ ಬಳಿಕೆ ೩

ಖ್ಯಾತಿಯಿಂ ಗಗನಾನಿಲಾಗ್ನಿ ಜಲ ಭೂ ಪಂಚ
ಭೂತಮುದಿಸಿದುವು ಪರಶಿವನಾಜ್ಞೆಯಿಂದಿರದೆ
ವಾತಮುರೆ ಪ್ರಕಟಿಸಲ್ ತೆರಪಾದುದಾಗಸಂ ತದ್ವಾತಸಂಗದಿಂದೆ
ವಾತಸಖನುದಕಮಂ ಕೂಡಲ್ಕೆ ಕುದಿಕುದಿದು
ಭೂತಳದ ಕೂಟದೆ ಹಿರಣ್ಮಯದ ತೇಜದಿಂ
ದಾ ತಪ್ತಭೂಜಲದ ಬೊಬ್ಬುಳಿಯೊಳೊಂದಂಡವಾದುದದನೇವೇಳ್ವೆನು ೪

ಪರಿಕಿಸೆ ತದಂಡಮಯ್ವತ್ತು ಕೋಟಿಯ ಸವಿ
ಸ್ತರಮದುಂ ಮೇಣಂಡದೀರಯ್ದುಮಡಿ ಜಲಂ
ಪರಿವೇಷ್ಟಿಸಿಹುದು ಜಲದೀರಯ್ದುಮಡಿಯಗ್ನಿ ಬಳಸಿಹುದು ನಿಬಿಡವಾಗಿ

ಗಳನ್ನು ಹೇಳುತ್ತೇನೆ ಕೇಳು. ೩. "ಶ್ರೇಷ್ಠನಾದ ಆ ಮಹೇಶ್ವರನ ಹಣೆಯಿಂದ ತಾಮಸವನ್ನು ಅನುಕರಿಸಿ ರುದ್ರನು ಹುಟ್ಟಿದನು. ಶಿವನ ಶ್ರೇಷ್ಠವಾದ ಎಡಭುಜದಿಂದ ಸಾತ್ವಿಕವನ್ನು ಅನುಕರಿಸಿ ವಿಷ್ಣು ಜನಿಸಿದನು. ಅನಂತರ ಆ ಶಿವನ ಬಲಭುಜದಿಂದ ತೇಜಸ್ಸನ್ನು ಅನುಕರಿಸಿ ಬ್ರಹ್ಮನು ಹುಟ್ಟಿದನು. ಅನಂತರ ವೈಕಾರಿಕೆಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಆದುವು. ಅನಂತರ ೪. ಪ್ರಖ್ಯಾತಿಯಿಂದ ಆಕಾಶ, ಅಗ್ನಿ, ವಾಯು, ನೀರು, ಪೃಥ್ವಿ ಮೊದಲಾದ ಪಂಚಭೂತಗಳು ಉದಿಸಿದುವು. ಪರಶಿವನ ಆಜ್ಞೆಯಿಂದ ಗಾಳಿಯು ಬೀಸಿದಾಗ ಅದರ ಸಂಯೋಗದಿಂದ ಆಕಾಶ ತೆರವಾಯಿತು. ವಾಯುವಿನ ಸ್ನೇಹಿತನಾದ ಅಗ್ನಿಯು ಜಲವನ್ನು ಸೇರಿದಾಗ ಆ ನೀರು ಕುದಿಕುದಿದು ಭೂಮಿಯಲ್ಲಿ ಸೇರಿ ತಪ್ತವಾಗಿ ಆ ನೀರು ಮತ್ತು ಭೂಮಿಯ ಕೂಟದಿಂದ ಬಂಗಾರದ ಪ್ರಭೆಯಿಂದ ಕೂಡಿದ ಆ ಕುದಿಯುತ್ತಿದ್ದ ಭೂಜಲಗಳ ಗುಳ್ಳೆಯಿಂದ ಒಂದು ಮೊಟ್ಟೆಯಾಕಾರದ ವಸ್ತುವಾಯಿತು. ೫. ಪರೀಕ್ಷಿಸಲು ಆ ಅಂಡವು ಐವತ್ತುಕೋಟಿ ವಿಸ್ತಾರವಾಗಿದೆ. ಆ ಅಂಡವನ್ನು ಅದರ ಹತ್ತರಷ್ಟು ನೀರು ಆವರಿಸಿದೆ. ಜಲದ ಹತ್ತರಷ್ಟು ಅಗ್ನಿ ಒತ್ತೊತ್ತಾಗಿ ಬಳಸಿದೆ. ಅಗ್ನಿಯ ಹತ್ತರಷ್ಟು ಗಾಳಿ ಆವರಿಸಿರಲು ಆ ವಾಯು



CC-0. Jangamwadi Math Collection. Digitized by eGangotri

ಮರುತಸಖನೀರಯ್ದುಮಡಿ ವಾಯುವವಗಾಹಿ
ಸಿರಲದಂ ಮರುತನೀರಯ್ದುಮಡಿಯಾಗಸಂ
ಪರಹಿನೊಳ್ ಸುತ್ತಿರಲ್ಕಾಗಸಮನೊಡನಹಂಕಾರಮದು ಬಳಸಿರ್ಪುದು ೫

ಮತ್ತಹಂಕಾರಮಂ ಬಳಸಿಕೊಂಡಿರ್ಪುದು ಮ
ಹತ್ತಾ ಮಹತ್ತನವ್ಯಕ್ತಂ ಪ್ರವೇಷ್ಟಿಸಿ
ರ್ದತ್ತು ಸಪ್ತಾವರಣಮಿಂತು ಪರನಾಜ್ಞೆಯಿಂ ಮಧ್ಯದಂಡಮನೆ ಪೊಕ್ಕು
ಒತ್ತಿ ಕಮಲಜನೊಡೆಯೆ ಬ್ರಹ್ಮಾಂಡವೆಂಬುದಾ
ಯಿತ್ತು ಪೆಸರದಕಾ ಮಹೇಶ್ವರಂ ಮಿಗೆ ಯೋಚಿ
ಸುತ್ತಿರ್ದನೆನ್ನ ಪಣೆಯಿಂದಾದ ರುದ್ರನೇ ತನ್ನಯ ಸ್ವರೂಪವೆಂದು ೬

ಸೃಷ್ಟಿ ಸ್ಥಿತಿ ಪ್ರಲಯಮಂ ಮಾಳ್ಪ ಸಾಮರ್ಥ್ಯ
ಮಷ್ಟುಮುಂಟೀತಂಗೆನುತ್ತಾ ಮಹೇಶ್ವರಂ
ಹೃಷ್ಟಮಾನಸನಾಗಿ ಹರಿಯಜರೊಳೀತನೇ ನಿಮಗೊಡೆಯನೆಂದು ಪೇಳಿ
ನಷ್ಟಮಿಲ್ಲದ ಪಟ್ಟಮಂ ಕಟ್ಟಿ ರುದ್ರಂಗ
ದಿಷ್ಟಮೆನಿಸುವ ಕ್ರಿಯಾಶಕ್ತಿಯಾಗಲ್ ಕೂಡಿ
ದೃಷ್ಟದಿಂ ಪರಶಿವ ಸದಾಶಿವಾದಿಗಳ ನಾಮಂಗಳಂ ತಾಂ ತಳೆದನು ೭

ಪರಶಿವಂ ಶಿವನೆಂದುಮೆರಡು ನಿಷ್ಕಲತತ್ತ್ವ
ಮುರುಸದಾಶಿವನೀಶ್ವರಂ ಸಕಲನಿಷ್ಕಲಂ
ವರಮಹೇಶ್ವರನಾದಿರುದ್ರರೆಂದೆನಿಪರೇ ಕೇವಲಂ ಸಕಲತತ್ತ್ವಂ

ವಿನ ಹತ್ತರಷ್ಟು ವಿಸ್ತಾರವಾಗಿ ಆವರಿಸಿದ್ದರೆ ಆ ಆಕಾಶವನ್ನೆಲ್ಲ ಅಹಂಕಾರವು ಬಳಸಿರುತ್ತದೆ. ೬. ಅಹಂಕಾರವನ್ನು ಮಹತ್ತು ಬಳಸಿಕೊಂಡಿದೆ. ಆ ಮಹತ್ತನ್ನು ಅವ್ಯಕ್ತವು ಸುತ್ತುವರಿದಿರುತ್ತದೆ. ಈಶ್ವರನ ಅಪ್ಪಣೆಯಂತೆ ಆ ಅಂಡದ ಮಧ್ಯದಲ್ಲಿ ಸಪ್ತಾವರಣವು ಹೊಕ್ಕಿತು. ಅದನ್ನು ಬ್ರಹ್ಮನು ಅದುಮಿ ಒಡೆಯಲು ಅದಕ್ಕೆ ಬ್ರಹ್ಮಾಂಡವೆಂದು ಹೆಸರಾಯಿತು. ಆ ಮಹೇಶ್ವರನು ತನ್ನ ಹಣೆಯಿಂದ ಹುಟ್ಟಿದ ರುದ್ರನೇ ತನ್ನ ಸ್ವರೂಪವೆಂದು ಯೋಚಿಸುತ್ತಿದ್ದನು. ೭. ಈತನಿಗೆ ಸೃಷ್ಟಿ-ಸ್ಥಿತಿ-ಪ್ರಳಯ ಮಾಡುವ ಸಾಮರ್ಥ್ಯ ಉಂಟು ಎಂದು ಮಹೇಶ್ವರನು ಸಂತೋಷ ಹೊಂದಿದ ಮನಸುಳ್ಳವನಾಗಿ ಬ್ರಹ್ಮ ವಿಷ್ಣುಗಳನ್ನು ಕುರಿತು ಈತನೇ ನಿಮ್ಮ ಪ್ರಭು ಎಂದು ಹೇಳಿ ರುದ್ರನಿಗೆ ಅಚ್ಯುತವಾದ ಪಟ್ಟವನ್ನು ಕಟ್ಟಿದನು. ಮತ್ತು ತಾನು ರುದ್ರನಿಗೆ ಇಷ್ಟವೆನಿಸುವ ಶಕ್ತಿಯಾಗಲು ಕೂಡಿ ಪರಿಶೀಲಿಸುವುದಾದರೆ ಪರಶಿವ, ಸದಾಶಿವಾದಿ ಹೆಸರುಗಳನ್ನು ಪಡೆದನು. ೮. ಆ ಪರಶಿವ-ಶಿವರೀರ್ವರೂ ನಿಷ್ಕಲ ತತ್ತ್ವರು ಸದಾಶಿವ-ಈಶ್ವರರು ಸಕಲ ನಿಷ್ಕಲರು. ಮಹೇಶ್ವರ ಮತ್ತು ಆದಿರುದ್ರ ಎನ್ನುವವರೇ ಕೇವಲ ಸಕಲತತ್ತ್ವರು. ಪರೀಕ್ಷಿಸಿ ನೋಡಿದರೆ ಸದಾಶಿವನೆ

CC-0. Jangamwadi Math Collection. Digitized by eGangotri

ಪರಿಕಿಸೆ ಸದಾಶಿವಂ ಪಂಚಸಾದಾಖ್ಯಮಂ
ಧರಿಸಲೀಶ್ವರನಾಗಳಷ್ಟತನುವಂ ತಾಳ್ದ
ನಿರದಾ ಮಹೇಶ್ವರಂ ಪಂಚವಿಂಶತಿಲೀಲೆಗಳನಾಂತನೇನೆಂಬೆನು ೮

ಆ ಮಹಾರುದ್ರಂ ಕ್ರಿಯಾಶಕ್ತಿಯೊಳ್ ಕೂಡಿ
ಪ್ರೇಮದಿಂ ವರಮಹೇಶ್ವರನಾಮದಿಂದೊಲ್ದು
ಸೋಮಾದಿ ಪಂಚವಿಂಶತಿಲೀಲೆಯುಂ ತಳೆದನೆನೆ ಸಿದ್ಧರಾಮನಂದು
ಈ ಮಹಾಲೀಲೆಗಳನೆನಗೆ ವಿಸ್ತರಿಸೆನಲ್
ರಾಮ ಕೇಳ್ಕೈ ರುದ್ರನಜನೊಲವಿನಿಂ ಕರೆದು
ನೀಂ ಮಾಡು ಸೃಷ್ಟಿಯನೆನಲ್ಕಾಗದಬುಜಜಂ ತಪಿಸಿದಂ ಶಿವನ ಕುರ್ತು ೯

ದೇವನೀತನ ತಪಕೆ ಮೆಚ್ಚಿ ಬೇಡೆನೆ ಸುರಾ
ಜೀವಶೀತಂ ಸೃಷ್ಟಿಯಾಗದೆನ್ನಿಂ ಸುತರ
ನೀವುದೆನೆ ಸನಕಂ ಸನಂದನಂ ಸನತ್ಸುಜಾತಂ ಸನಾತನರೊಪ್ಪುವ
ಕೋವಿದ ಸನತ್ಕುಮಾರಾದಿ ಮಾನಸಸುತರ
ನಾ ವಿಭುವೆ ತಾನೊಲಿದು ಕೊಟ್ಟು ನಿರವಯನಾಗ
ಲಾ ವೇಳೆಯೊಳ್ ಮಕ್ಕಳಂ ಕರೆದು ಕಮಲಜಂ ಸೃಷ್ಟಿಯುಂ ಮಾಡೆಂದನು ೧೦

ಪಂಚ ಸಾದಾಖ್ಯಗಳನ್ನು ಧರಿಸಿದನು. ಆಗ ಈಶ್ವರನು ಅಷ್ಟ ದೇಹಗಳನ್ನು ತಾಳಿದನು. ಆ ಮಹೇಶ್ವರನು ಇಪ್ಪತ್ತೈದು ಲೀಲೆಗಳನ್ನು ತಾಳಿದನು. [ಪಂಚಸಾದಾಖ್ಯಗಳು : ಕರ್ತೃ, ಕರ್ಮ, ಮೂರ್ತಿ, ಅಮೂರ್ತಿ, ಶಿವ] ೯. ಆ ಮಹಾರುದ್ರನು ಕ್ರಿಯಾಶಕ್ತಿಯಲ್ಲಿ ಕೂಡಿ ಪ್ರೇಮದಿಂದ ಮಹೇಶ್ವರನೆಂಬ ಹೆಸರನ್ನು ಪಡೆದನು ಮತ್ತು ಸೋಮಾದಿ ಇಪ್ಪತ್ತೈದು ಲೀಲೆಗಳನ್ನು ಮೆರೆದನು" ಎಂದು ಹೇಳಲು ಸಿದ್ಧರಾಮನು "ಆ ಮಹಾ ಲೀಲೆಗಳನ್ನು ನನಗೆ ವಿಸ್ತರಿಸಿ ಹೇಳು" ಎಂದನು. ಆಗ ಚೆನ್ನಬಸವಣ್ಣನು, "ಸಿದ್ಧರಾಮ, ಕೇಳು. ರುದ್ರನು ಬ್ರಹ್ಮನನ್ನು ಪ್ರೀತಿಯಿಂದ ಕರೆದು ಸೃಷ್ಟಿಯನ್ನು ಮಾಡುವಂತೆ ಹೇಳಲು ಆಗ ಅದು ಸಾಧ್ಯವಾಗದೆ ಬ್ರಹ್ಮನು ಶಿವನನ್ನು ಕುರಿತು ತಪಸ್ಸುಮಾಡಿದನು. ೧೦. ಶಿವನು ಇವನ ತಪಸ್ಸಿಗೆ ಮೆಚ್ಚಿ ವರವನ್ನು ಬೇಡು ಎನ್ನಲು ಬ್ರಹ್ಮನು ನನ್ನಿಂದ ಸೃಷ್ಟಿಮಾಡಲು ಆಗುವುದಿಲ್ಲ, ಮಕ್ಕಳನ್ನು ಕರುಣಿಸು ಎಂದನು. ಆಗ ಶಿವನು ಸನಕ, ಸನಂದನ, ಸನತ್ಸುಜಾತ ಮತ್ತು ಪುರಾತನರು ಮೆಚ್ಚುವ ಮಹಾ ವಿದ್ವಾಂಸರಾದ ಸನತ್ಕುಮಾರನೇ ಮೊದಲಾದ ಮಾನಸಪುತ್ರರನ್ನು ಪ್ರೀತಿಯಿಂದ ಕೊಟ್ಟು ಮಾಯವಾದನು. ಆಗ ಬ್ರಹ್ಮನು ಆ ತನ್ನ ಮಕ್ಕಳನ್ನು ಕರೆದು ಸೃಷ್ಟಿಯನ್ನು ಮಾಡಿ ಎಂದನು.

CC-0. Jangamwadi Math Collection. Digitized by eGangotri

ಒಲ್ಲೆವಾವ್ ಸೃಷ್ಟಿಯಂ ಮಾಡಲ್ಕೆ ಬುದ್ಧಿಯುಂ
ಒಲ್ಲೆವೇ ಹರನ ವರದಿಂ ನಿನಗೆ ಸುತರಾಗಿ
ಯೆಲ್ಲಾ ರಹಸ್ಯಮಂ ನಿನ್ನಿಂದಲೇ ತಿಳಿದು ಸಂಸಾರಬಂಧದೊಳಗೆ
ಖುಲ್ಲರಾದಪೆವೆಂದೆನುತ್ತುಂ ತಪೋವನಕೆ
ಮೆಲ್ಲನಡಿಯಿಟ್ಟರವರಿತ್ತಲೀ ಕಮಲಜಂ
ನಿಲ್ಲದೆ ತಪಸ್ಸಿನಿಂ ದಿವ್ಯ ಸಾಸಿರ್ವರುಷಕಭವನಂ ಮೆಚ್ಚಿಸಿದನು ೧೧

ಪರಶಿಮ ಪ್ರತ್ಯಕ್ಷನಾಗಿ ವರವೇನೆನಲ್
ಸರಸಿಜಭವಂ ಕಾಣುತಲೆ ದೇವ ನೀವಿತ್ತ
ವರಮಾನಸಾತ್ಮಜರ್ ತಪಕ್ಕೈದಿದರ್ ಸೃಷ್ಟಿಯಾಗದೆನ್ನಿಂದಲೆನಲು
ಕರುಣದಿಂದೀಶನಜನೊಡನೆಂದ ನಿನ್ನೀ ಶ
ರೀರದಿಂ ಮಕ್ಕಳಂ ಪಡೆದು ಸೃಜಿಯಿಸುವುದೆಂ
ದೊರೆದು ನಿರವಯನಾಗಲಜನಳ್ತಿಯಿಂ ಮಕ್ಕಳಂ ಪಡೆಯಲನುವಾದನು ೧೨

ಮನದೊಳ್ ಮರೀಚಿ ನಯನದೊಳತ್ರಿಯಾಸ್ಯದೊಳ್
ಜನನುತಾಂಗೀರಸಂ ಪುಲಸ್ತ್ಯನೆ ಕಿವಿಯೊಳಾ
ತನ ನಾಭಿಯಿಂ ಪುಲಹನುರು ಹಸ್ತದೆ ಕ್ರತು ಚರ್ಮದೊಳು ಭೃಗು ಪ್ರಾಣದಿಂದೆ
ಅನಘನೆನಿಸುವ ವಸಿಷ್ಠಂ ದಕ್ಷನುಂಗುಟದೆ
ಜನಿಸಿದರ್ ಪೇಳಿದೀಯೊಂಬತ್ತುಮಂದಿ ಮ
ತ್ತಿನಿತು ಸಾಲದೆ ತನುಜರಂ ಪಡೆಯಲುದ್ಯೋಗಿಸಿದನಜಂ ತತ್ಕ್ಷಣದೊಳು ೧೩

೧೧. ನಮಗೆ ಬೇಡ. ಸೃಷ್ಟಿಯನ್ನು ಮಾಡುವ ಬುದ್ಧಿಯನ್ನು ನಾವು ತಿಳಿದಿದ್ದೇವೆಯೇ? ಈಶ್ವರನ ವರದಿಂದ ನಿನಗೆ ಮಕ್ಕಳಾಗಿ ಹುಟ್ಟಿ ಎಲ್ಲ ರಹಸ್ಯವನ್ನೂ ನಿನ್ನಿಂದಲೇ ತಿಳಿದು ಕೊಂಡು ಸಂಸಾರಬಂಧನಕ್ಕೆ ಸಿಲುಕಿದರೆ ನೀಚರಾಗುತ್ತೇವೆ. ಎನ್ನುತ್ತ ಅವರು ತಪೋವನಕ್ಕೆ ಮೆಲ್ಲನೆ ನಡೆದರು. ಇತ್ತಲಾಗಿ ಬ್ರಹ್ಮನು ಸಾವಿರ ವರುಷ ಉಗ್ರವಾದ ತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿದನು. ೧೨. ಇವನ ತಪಸ್ಸಿಗೆ ಪರಶಿವನು ಪ್ರತ್ಯಕ್ಷನಾಗಿ ಏನು ವರ ಬೇಕು ಎಂದು ಕೇಳಿದನು. ಬ್ರಹ್ಮನು ಪರಶಿವನನ್ನು ಕಾಣುತ್ತಲೇ 'ದೇವ, ನೀನು ಕರುಣಿಸಿದ ಮಾನಸಪುತ್ರರು ತಪಸ್ಸಿಗೆ ಹೋದರು. ನನ್ನಿಂದ ಸೃಷ್ಟಿ ಕಾರ್ಯವಾಗು ವುದಿಲ್ಲ' ಎಂದನು. ಈಶ್ವರನು ಕನಿಕರದಿಂದ ಬ್ರಹ್ಮನೊಡನೆ 'ನಿನ್ನ ಈ ಶರೀರದಿಂದಲೇ ಮಕ್ಕಳನ್ನು ಪಡೆದು ಸೃಷ್ಟಿಸಬೇಕು' ಎಂದು ಹೇಳಿ ಅಂತರ್ಧಾನನಾದನು. ಆಗ ಬ್ರಹ್ಮನು ಆಸಕ್ತನಾಗಿ ಮಕ್ಕಳನ್ನು ಪಡೆಯಲು ಸಿದ್ಧನಾದನು. ೧೩. ಬ್ರಹ್ಮನ ಮಾನಸಗರ್ಭ ದಿಂದ ಮರೀಚಿ ಹುಟ್ಟಿದನು. ಕಣ್ಣಿನಲ್ಲಿ ಅತ್ರಿ, ಮುಖದಲ್ಲಿ ಪ್ರಖ್ಯಾತನಾದ ಅಂಗೀರಸ, ಕಿವಿಯಲ್ಲಿ ಪುಲಸ್ತ್ಯ, ಹೊಕ್ಕಳಲ್ಲಿ ಪುಲಹ, ಕೈಯಲ್ಲಿ ಕ್ರತು, ಚರ್ಮದಿಂದ ಭೃಗು, ಪ್ರಾಣ ದಿಂದ ಪಾಪಲೇಪವಿಲ್ಲದ ವಸಿಷ್ಠ, ಉಂಗುಷ್ಟದಿಂದ ದಕ್ಷ ಜನಿಸಿದರು. ಈ ಒಂಬತ್ತು ಮಂದಿ ಮಕ್ಕಳು ಸಾಲದೆ ಮತ್ತಷ್ಟು ಜನ ಮಕ್ಕಳನ್ನು ಪಡೆಯಲು ಬ್ರಹ್ಮನು

CC-0. Jangamwadi Math Collection. Digitized by eGangotri

ತೊಡೆಯಿಂದೆ ನಾರದಂ ಧರ್ಮನಾ ವಿಧಿಯ ಬಲ
ಗಡೆಯ ಮೊಲೆಯಿಂದೆ ನೆಳಲಿಂದೆ ಕರ್ದಮನಾತ
ನೊಡಲಿಂ ದಿವಾರಾತ್ರಿಗಳ್ ಮೆರೆವ ಗಾಯತ್ರಿ ಮುಂತಾದ ಛಂದಂಗಳು
ನುಡಿಯಲಗಣಿತಮಾದ ವೇದಶಾಸ್ತ್ರಂ ಜನಿಸೆ
ಪಡೆದ ಮಕ್ಕಳನಜಂ ಕರೆದು ಸೃಷ್ಟಿಯನಿನಿಬ
ರೊಡರಿಚಿಮೆನಲ್ಕೆ ಯೋಚಿಸಿಯವರ್ ತಮ್ಮ ಕೈಯಿಂದಾಗದೆಂದರಂದು ೧೪

ಎನೆ ಕೇಳ್ದು ಕಮಲಜಂ ಚಿಂತಿಸುತ್ತಾಕ್ಷಣಂ
ನೆನೆದು ಹೃದಯದೊಳಾ ಕ್ರಿಯಾಶಕ್ತಿಯಂ ಕೂರ್ತು
ಘನತರತಪಸ್ಸಿನಿಂ ಮೆಚ್ಚಿಸಲ್ಕಾ ಕ್ರಿಯಾಶಕ್ತಿ ಪ್ರತ್ಯಕ್ಷಮಾಗಿ
ವನಜಸಂಭವ ನಿನಗೆ ವರವದೇಂ ಬೇಡೆನಲ್
ಮನದೊಳಗೆ ಗುಡಿಗಟ್ಟಿ ತತ್ಕ್ರಿಯಾಶಕ್ತಿಯಂ
ವಿನಯದಿಂ ಕೊಂಡಾಡಿದಂ ಸರೋಜಾಸನಂ ಭಯಭರಿತ ಭಕ್ತಿಯಿಂದೆ ೧೫

ಚಿತ್ತಯಿಸು ತಾಯೆ ನೀಂ ಪರಶಿವನೊಳೊಂದಿರಲ್
ಬಿತ್ತರಿಸಲಘಟಿತಂ ಸೃಷ್ಟಿ ನೀನೆನಗೆ ವರ
ವಿತ್ತು ರಕ್ಷಿಪುದನ್ನ ಸುತದಕ್ಷನುದರದೊಳ್ ನೀಂ ಜನಿಸಿ ಲೀಲೆಯಿಂದೆ
ಮತ್ತಾದಿರುದ್ರಂಗೆ ವಧುವಾಗಲೆಮ್ಮೊಳಗಿ
ರುತ್ತಿರ್ಪ ಶಕ್ತಿಗಳ್ ಸ್ತ್ರೀಯರಪ್ಪರ್ ತನ್ನಿ
ಮಿತ್ತಮಾಕೆಗಳ ದೆಸೆಯಿಂದಲೀ ಸೃಷ್ಟಿಯಂ ಮಾಡುವೆಂ ತಾನೆಂದನು ೧೬

ಉದ್ಯುಕ್ತನಾದನು. ೧೪. ಬ್ರಹ್ಮನ ತೊಡೆಯಿಂದ ನಾರದ, ಬಲಗಡೆಯ ಮೊಲೆಯಿಂದ ಯಮಧರ್ಮ, ನೆರಳಿನಿಂದ ಪಾಪಪುರುಷ, ಹೊಟ್ಟೆಯಿಂದ ಹಗಲು-ರಾತ್ರಿಗಳು, ಗಾಯಿತ್ರಿ ಮುಂತಾದ ಶ್ರೇಷ್ಠ ಛಂದಸ್ಸುಗಳು ಹುಟ್ಟಿದುವು. ಅವನ ವಾಕ್ಕಿನಿಂದ ಅಗಣಿತವಾದ ವೇದಶಾಸ್ತ್ರಗಳು ಹುಟ್ಟಿದುವು. ಹೀಗೆ ಪಡೆದ ಮಕ್ಕಳನ್ನು ಬ್ರಹ್ಮನು ಕರೆದು ನೀವೆಲ್ಲರೂ ಸೃಷ್ಟಿಯನ್ನು ಮಾಡಿ ಎನ್ನಲು ಅವರೆಲ್ಲ ಆಲೋಚಿಸಿ ತಮ್ಮ ಕೈಯಲ್ಲಿ ಸಾಧ್ಯವಿಲ್ಲ ಎಂದರು. ೧೫. ಈ ಮಾತನ್ನು ಕೇಳಿ ಬ್ರಹ್ಮನು ಯೋಜನೆ ಮಾಡುತ್ತ, ಕೂಡಲೇ ತನ್ನ ಮನಸ್ಸಿನಲ್ಲಿ ಕ್ರಿಯಾಶಕ್ತಿಯನ್ನು ನೆನಪು ಮಾಡಿಕೊಂಡು ಆ ಶಕ್ತಿಯನ್ನು ಕುರಿತು ಘೋರ ತಪಸ್ಸನ್ನು ಮಾಡಿ ಮೆಚ್ಚಿಸಿದನು. ಆ ಕ್ರಿಯಾಶಕ್ತಿ ಪ್ರತ್ಯಕ್ಷವಾಗಿ ಬ್ರಹ್ಮನೇ, ನಿನಗೇನು ವರಬೇಕು ಕೇಳು ಎಂದಿತು. ಬ್ರಹ್ಮನು ಏಕಾಗ್ರಚಿತ್ತನಾಗಿ ಆ ಕ್ರಿಯಾಶಕ್ತಿಯನ್ನು ವಿನಯದಿಂದಲೂ ಭಯಭರಿತ ಭಕ್ತಿಯಿಂದಲೂ ಕೊಂಡಾಡಿದನು. ೧೬. ತಾಯೆ, ಕೇಳು. ನೀನು ಪರಶಿವನ ಕೂಡೆ ಇರುವವರೆಗೆ ನನ್ನಿಂದ ಸೃಷ್ಟಿಕಾರ್ಯವು ಸಾಧ್ಯವಾಗದು. ನೀನು ವರವನ್ನು ಕೊಟ್ಟು ನನ್ನನ್ನು ಕಾಪಾಡಬೇಕು. ನನ್ನ ಮಗನಾದ ದಕ್ಷನ ಹೊಟ್ಟೆಯಲ್ಲಿ ನೀನು ಲೀಲೆಯಿಂದ ಜನಿಸಿ, ಆದಿರುದ್ರನಿಗೆ ಮಡದಿಯಾದರೆ, ಆಗ ನಮ್ಮಲ್ಲಿರುವ ಶಕ್ತಿಗಳೆಲ್ಲ ಸ್ತ್ರೀಯರಾಗುತ್ತಾರೆ. ಆ ಸ್ತ್ರೀಯರ ಕಾರಣದಿಂದ ನಾನು

CC-0. Jangamwadi Math Collection. Digitized by eGangotri

ಲೀಸಾದುದೈ ಬ್ರಹ್ಮ ದಕ್ಷಂಗೆ ಬಂದಾಂ ವಿ
ಲಾಸದಿಂ ಮಗಳಪ್ಪೆ ನೀಂ ನಿನ್ನೊಳೊಂದಿರ್ಪ
ಭಾಸುರದ ವರಶಕ್ತಿಯುಂ ಬಹಿಷ್ಕರಿಸಲ್ಕೆ ವಾಗ್ದೇವಿಯೆಂದೆನಿಪಳು
ಆ ಸತಿಯೊಳೊಂದಿ ನೀನೀ ಜಗತ್ಸೃಷ್ಟಿಯುಂ
ಬೇಸರದೆ ಮಾಡೆಂದು ನೇಮವಿತ್ತಂಭೋರು
ಹಾಸನನನಳ್ಕರಿಂ ಬೀಳ್ಕೊಟ್ಟು ಶಕ್ತಿಯಂತರ್ಧಾನದಿಂ ಪೋದಳು ೧೭

ಇಂತೆಂದು ಶಕ್ತಿ ಬಯಲಾಗೆ ಕಮಲಾಸನಂ
ತಾಂ ತನ್ನ ಭಾರತಿಯೊಳೊಲವಿನಿಂ ಕೂಡಿರುತೆ
ಸಂತಸದೆ ಶತರೂಪೆ ಸ್ವಾಯಂಭುವಂ ಪಡೆದು ದಂಪತಿಗಳಂ ಮಾಡಲು
ಅಂತವರ್ಗುತ್ತಾನಪಾದಂ ಪ್ರಿಯವ್ರತಂ
ಪಿಂತೆಯಾಕೂತಿಯುಂ ದೇವಹೂತಿಯುಮೆಸೆವ
ಕಾಂತೆ ಪ್ರಸೂತಿಯೆಂಬಯ್ವರುದಿಸಿದರೊಲ್ದು ಸ್ವಾಯಂಭು ಮನುಗಾಗಲು ೧೮

ಇರುತಾ ಪ್ರಸೂತಿ ದಕ್ಷಂಗೆ ಸತಿಯಾಗಲಂ
ಬುರುಕ್ರಿಯಾಶಕ್ತಿಯಾಕೆಯ ಗರ್ಭದೊಳ್ ಜನಿಸೆ
ಪರಮೇಶ್ವರಂಗೆ ದಾಕ್ಷಾಯಣಿಯನೀಯಬೇಕೆಂದಜಂ ತಪಿಸುತಿರಲು
ಪರಶಿವಂ ಪ್ರತ್ಯಕ್ಷವಾಗಿ ವರವೇನೆನಲು
ಕರುಣನಿಧಿ ನೀನೆನ್ನ ನಂದನನ ನಂದನೆಗೆ
ವರನಾಗಿ ದಿನದಿನದೊಳೊಡ್ಡೋಲಗಂಗೊಟ್ಟು ಪೊರೆಯೆನಲು ಕೈಕೊಂಡನು ೧೯

ಈ ಸೃಷ್ಟಿಯನ್ನು ಮಾಡುತ್ತೇನೆ ಎಂದನು. ೧೭. ಒಳ್ಳೆಯದಯ್ಯಾ ಬ್ರಹ್ಮ ನಾನು ಲೀಲೆಯಿಂದ ದಕ್ಷನಿಗೆ ಮಗಳಾಗುತ್ತೇನೆ. ನೀನು ನಿನ್ನಲ್ಲಿರುವ ಪ್ರಕಾಶಮಾನವಾದ, ಶ್ರೇಷ್ಠವಾದ ಶಕ್ತಿಯನ್ನು ಪ್ರಕಟಗೊಳಿಸು. ಅವಳೇ ಸರಸ್ವತಿ ಎನಿಸುತ್ತಾಳೆ. ಆ ವಾಗ್ದೇವಿಯನ್ನು ಕೂಡಿ ನೀನು ಈ ಜಗತ್‌ಸೃಷ್ಟಿಯನ್ನು ಬೇಸರವಿಲ್ಲದೆ ಮಾಡು ಎಂದು ನಿಯಮಿಸಿ ಬ್ರಹ್ಮನನ್ನು ಪ್ರೀತಿಯಿಂದ ಕಳುಹಿಸಿಕೊಟ್ಟು ಶಕ್ತಿಯು ಅಂತರ್ಧಾನ ಳಾದಳು. ೧೮. ಹೀಗೆ ಹೇಳಿ ಶಕ್ತಿಯು ಮಾಯವಾಗಲು ಬ್ರಹ್ಮನು ತನ್ನ ಸರಸ್ವತಿ ಯಲ್ಲಿ ಒಲವಿನಿಂದ ಕೂಡಿದ್ದನು. ಅವಳಲ್ಲಿ ಸಂತೋಷದಿಂದ ಶತರೂಪೆ ಸ್ವಾಯಂಭು ವನ್ನು ಪಡೆದು ಅವರಿಗೆ ಮದುವೆ ಮಾಡಿದನು. ಕಾಲಾನಂತರದಲ್ಲಿ ಸ್ವಾಯಂಭುಮನುವಿಗೆ ಉತ್ತಾನಪಾದ, ಪ್ರಿಯವ್ರತ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಐದು ಜನ ಮಕ್ಕಳಾದರು. ೧೯, ಹೀಗಿರುವಾಗ ಪ್ರಸೂತಿಯು ದಕ್ಷನಿಗೆ ಸತಿಯಾದಳು. ಆಕೆಯ ಗರ್ಭದಲ್ಲಿ ಕ್ರಿಯಾಶಕ್ತಿಯು ದಾಕ್ಷಾಯಿಣಿ ಎಂಬ ಹೆಸರಿನಿಂದ ಹುಟ್ಟಿದಳು. ಬ್ರಹ್ಮನು ಈಶ್ವರನಿಗೆ ದಾಕ್ಷಾಯಿಣಿಯನ್ನು ಕೊಡಬೇಕೆಂದು ತಪಸ್ಸು ಮಾಡುತ್ತಿರಲು, ಪರಶಿವನು ಪ್ರತ್ಯಕ್ಷನಾಗಿ ವರವೇನು ಬೇಕು ಎಂದು ಕೇಳಲು ಬ್ರಹ್ಮನು, 'ಕರುಣಾನಿಧಿ, ನೀನು ನನ್ನ ಮೊಮ್ಮಗಳಿಗೆ ಪತಿಯಾಗಿ ಪ್ರತಿದಿವಸ ಒಡ್ಡೋಲಗ ಕೊಟ್ಟು ನಮ್ಮನ್ನು ಕಾಪಾಡು'

CC-0. Jangamwadi Math Collection. Digitized by eGangotri

ಇರದೆ ದಾಕ್ಷಾಯಣಿಯ ನೋಡಿ ಸರ್ವೇಶ್ವರಂ
ಹರುಷದಿಂ ಮದುವೆಯಾದಂ ಮಹಾವಿಭವದಿಂ
ದಿರುತೆ ಬ್ರಹ್ಮಾಂಡದಿಂ ಪೊರಗೆ ಶಿವಲೋಕಮಂ ನೆನೆದ ಮಾತ್ರದೊಳಾಗಿಸೆ
ಒರೆಯಲಸದಳಮಾ ಮಹೇಶ್ವರನ ರಂಜಿಸುವ
ಗುರುತರಸಭಾಮಂಟಪವನವರೊಳೊಂದಿ ಸುಖ
ವಿರುತಿರ್ದನಳ್ತಿಯೊಳುಮಾಮಹೇಶ್ವರಲೀಲೆಯಿಂದೆ ಬಳಿಕೇನೆಂಪೆನು ೨೦

ಪರಶಿವಂ ಸಕಲ ಬ್ರಹ್ಮಾಂಡಭರಭಾರಮಂ
ಧರಿಸಿರ್ಪೆನೆನ್ನ ಧರಿಸುವರಾರೆನುತ್ತೆ ನಿ
ರ್ಧರಿಸಿ ತನ್ನಯ ಹೃದಯದೊಳಗಿರ್ದ ಧರ್ಮಂ ನೆನೆಯಲಾ ಸದ್ಧರ್ಮವೆ
ಪರಮತೇಜೋಮೂರ್ತಿಯಾಗಿ ನಿಂದಡಿಗೆರಗೆ
ಕರುಣದಿಂದೆತ್ತುತೆಲೆ ಧರ್ಮವೇ ನಿನ್ನನಾಂ
ಧರಿಸಿರ್ಪೆನೆನ್ನ ನೀಂ ಧರಿಸೆನಗೆ ನಿನಗಾವಗಂ ಭಿನ್ನವಿಲ್ಲೆಂದನು ೨೧

ಪುಂಗವಾಕಾರದಿಂದೆಮ್ಮ ನೀಂ ಧರಿಸೆನೆ ಪ
ದಂಗಳೇ ವೇದ ನಾಲ್ಕಾಯ್ತು ಶಾಸ್ತ್ರಂಗಳೆ ಷ
ಡಂಗಂ ತನುತ್ರಯಂ ನಾದಬಿಂದುಕಳಾಳಿಯಾದಿಯುಮನಾದಿಯೆರಡು

ಎಂದನು. ಈಶ್ವರನು ಹಾಗೆಯೇ ಆಗಲಿ ಎಂದನು. ೨೦. ದಾಕ್ಷಾಯಿಣಿಯನ್ನು ನೋಡಿ ಪರಮೇಶ್ವರನು ಸಂತೋಷದಿಂದ ಮದುವೆಯಾದನು. ಮಹಾವೈಭವದಿಂದ ಇರುವಾಗ. ಬ್ರಹ್ಮಾಂಡದಿಂದ ಹೊರಗೆ ನೆನೆದ ಮಾತ್ರದಿಂದಲೇ ಒಂದು ಶಿವಲೋಕವನ್ನು ಸೃಷ್ಟಿ ಮಾಡಿದನು. ಆ ಮಹೇಶ್ವರನಿಂದ ಶೋಭಿಸುತ್ತಿದ್ದ ಆ ಸಭಾಮಂಟಪವನ್ನು ವರ್ಣಿಸಲು ಅಸಾಧ್ಯ. ಆ ಮಂಟಪದಲ್ಲಿ ಮಹೇಶ್ವರನು ಪ್ರೀತಿಯಿಂದ, ವಿನೋದದಿಂದ ಉಮಾಮಹೇಶ್ವರಲೀಲೆಯನ್ನು ಮೆರೆಯುತ್ತ ಸುಖವಾಗಿದ್ದನು. ೨೧. ಸಕಲ ಬ್ರಹ್ಮಾಂಡದ ಎಲ್ಲ ಭಾರವನ್ನೂ ನಾನು ಹೊತ್ತಿದ್ದೇನೆ. ನನ್ನನ್ನು ಹೊರುವವರು ಯಾರು ಎಂದು ಆಲೋಚಿಸಿ ಮನದಲ್ಲಿಯೇ ನಿರ್ಧರಿಸಿ, ಪರಶಿವನು ತನ್ನ ಹೃದಯದಲ್ಲಿದ್ದ ಧರ್ಮವನ್ನು ನೆನಪು ಮಾಡಿಕೊಂಡನು. ಆ ಸದ್ಧರ್ಮವೇ ಪರಮ ತೇಜೋಮೂರ್ತಿಯಾಗಿ ಎದುರಿಗೆ ನಿಂತು ಅವನ ಪಾದಗಳಿಗೆ ನಮಸ್ಕರಿಸಿತು. ಅದನ್ನು ಪ್ರೀತಿಯಿಂದ ಮೇಲಕ್ಕೆತ್ತುತ್ತ ಎಲೈ ಧರ್ಮವೇ, ನಿನ್ನನ್ನು ನಾನು ಧರಿಸಿದ್ದೇನೆ. ನನ್ನನ್ನು ನೀನು ಧರಿಸು. ನನಗೂ ನಿನಗೂ ಪರಸ್ಪರ ಯಾವ ಕಾಲಕ್ಕೂ ಭೇದ ಯಾವುದೂ ಇರುವುದಿಲ್ಲ ಎಂದನು. ೨೨. ಶ್ರೇಷ್ಠವಾದ ವೃಷಭಾಕಾರದಿಂದ ನೀನು ನನ್ನನ್ನು ಹೊರು ಎನ್ನಲು ನಾಲ್ಕು ವೇದಗಳೇ ನಂದಿಯ ನಾಲ್ಕು ಪಾದಗಳಾದುವು, ಶಾಸ್ತ್ರಗಳೇ ಆರು ಅಂಗಗಳಾದುವು, ತನುತ್ರಯಗಳು ನಾದಬಿಂದುಕಳೆಗಳು, ಆದಿ-ಅನಾದಿಗಳೇ ಅದರ ಎರಡು ಕೊಂಬುಗಳು, ಓಂಕಾರವೇ ಶಿರಸ್ಸು, ಪಂಚಾಕ್ಷರೀಮಂತ್ರವೇ

CC-0. Jangamwadi Math Collection. Digitized by eGangotri

ಶೃಂಗಂ ಶಿರಂ ಪ್ರಣಮಮಾಸ್ಯ ಪಂಚಾಕ್ಷರಿ ವೃ
ಷಂಗೆ ವೇದಾಂತಂ ಪಿಣಿಲ್ ತೀರ್ಥ ಸ್ಮೃತಿ ಸುಮಂ
ತ್ರಂಗಳೇ ರೋಮಂ ಶಿವಾಗಮವೆ ಪ್ರಾಣವಿಂತಾದಿವೃಷಭಂ ಮೆರೆದನು ೨೨

ಈ ತೆರದೆ ಪ್ರಣವಸ್ವರೂಪಾದ ವೃಷಭನಂ
ಪ್ರೀತಿಯಿಂದೇರಲ್ಕೆ ವೃಷಭವಾಹನಲೀಲೆ
ಭೂತನಾಥಂಗಾದುದುಮೆಸಹಿತ ಶಿವಲೋಕದರಮನೆಯೊಳೊಲಿದಿರುತ್ತೆ
ಆ ತರಣಿಶತಕೋಟಿತೇಜನಾಗಳ್ ಪ್ರಮಥ
ಜಾತಮಂ ತನ್ನಿಂದೆ ಪಡೆದವರ್ಗಳೊಡನೆ ವಿ
ಖ್ಯಾತಸುಖಸಂಕಥಾಕೇಳಿಯಿಂದೊಪ್ಪಿದಂ ನಾನಾ ವಿಲಾಸದಿಂದೆ ೨೩

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೨೪

## ಹದಿಮೂರನೆಯ ಸಂಧಿ ಸಂಪೂರ್ಣ

ಮುಖ, ವೇದಾಂತಗಳೇ ಬೆನ್ನ ಮೇಲಿನ ಡುಬ್ಬವಾಯಿತು, ತೀರ್ಥ, ಸ್ಮೃತಿಗಳು—ಸುಮಂತ್ರಗಳೇ ರೋಮಗಳು, ಶಿವಾಗಮವೇ ಅವನ ಪ್ರಾಣ. ಹೀಗೆ ಆದಿವೃಷಭನು ಖ್ಯಾತಿ ಹೊಂದಿ ಪ್ರಕಾಶಿಸುತ್ತಿದ್ದನು. ೨೩. ಈ ರೀತಿಯಲ್ಲಿ ಪ್ರಣವಸ್ವರೂಪನಾದ ವೃಷಭನನ್ನು ಪರಮೇಶ್ವರನು ಪ್ರೀತಿಯಿಂದ ಏರಲು ಅದು ಭೂತನಾಥನ ವೃಷಭ ವಾಹನಲೀಲೆಯೆಂದು ಪ್ರಸಿದ್ಧವಾಯಿತು. ಶಿವಲೋಕದ ಅರಮನೆಯಲ್ಲಿ ಉಮೆಯೊಡನೆ ವೃಷಭವಾಹನನು ಪ್ರೀತಿಯಿಂದ ಇರುತ್ತಲಿದ್ದನು. ಆ ನೂರು ಕೋಟಿ ಸೂರ್ಯರ ತೇಜಸ್ಸನ್ನುಳ್ಳ ಈಶ್ವರನು ಪ್ರಮಥಗಣವನ್ನು ತನ್ನಿಂದಲೇ ಪಡೆದು ಅವರುಗಳ ಜೊತೆಯಲ್ಲಿ ಪ್ರಸಿದ್ಧವಾದ ಸುಖ-ಸಂಕಥಾವಿನೋದದಿಂದ, ನಾನಾ ವಿಲಾಸಗಳಿಂದ ವಿರಾಜಿಸುತ್ತಿದ್ದನು.'' ೨೪. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಹದಿಮೂರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿನಾಲ್ಕನೆಯ ಸಂಧಿ

ಸೂಚನೆ: ವರಮಹೇಶಂಗುಮೆಯನಿತ್ತ ಬಳಿಕಾ ದಕ್ಷ
ನಿರದೆ ಪೆಣ್ಣರುವತ್ತುಮಂ ಪಡೆಯಲವರವರ
ಪುರುಷಸಂಯೋಗದಿಂದಖಿಳಸಚರಾಚರಂ ಸಂಜನಿಸಿತೇನೆಂಬೆನು

ಪಾಪಹರ ವಿಪುಳಪ್ರತಾಪ ಘನತರಮೇರು
ಚಾಪ ವಿಲಯಪ್ರಬಲಕೋಪ ಸನ್ನುತದಿವ್ಯ
ರೂಪ ಮೋಹನಪುಷ್ಪಚಾಪವಿಗ್ರಹಭಸಿತಲೇಪಗಿರಿಜಾಕಲಾಪ
ಗೋಪವಾಹನಕೃತಾಲಾಪ ಸುರವಂ ದ್ಯನಿ
ರ್ಲೇಪ ವರಪುಣ್ಯಸ್ವರೂಪ ಜಯ ಪಂಪಾವಿ
ರೂಪಾಕ್ಷ ಭಕ್ತರಕ್ಷಾಪೇಕ್ಷ ನತರಂ ಸದಾ ಪಾಲಿಸಳ್ತಿಯಿಂದೆ ೧

ಇನ್ನಾಲಿಸೈ ಸಿದ್ಧರಾಮ ಪಂಕಜಭವಂ
ತನ್ನ ಸುತ ದಕ್ಷನಂ ಕರೆದು ನೀಂ ಸೃಷ್ಟಿಯಂ
ಚೆನ್ನಾಗಿ ಮಾಡೆನಲ್ ಪಂಕಜಜನಾತ್ಮಜೆಯಸಿಕ್ನಿಯೊಳ್ ದಕ್ಷನಂದು
ನನ್ನಿಯಿಂ ಪತ್ತುಸಾವಿರ ಮಂದಿ ಹರಿಯಶ್ವ
ರಂ ನಲಿದು ಪಡೆದು ಸೃಷ್ಟಿಯನೆಸಗಿಸಲ್ ನಾರ
ದಂ ನೋಡಿ ಸಂಸಾರಬಂಧಕೊಳಗಾಗಬೇಡೆಂದು ತಪಕ್ಕೈದಿಸಿದನು ೨

ಸೂಚನೆ : ದಕ್ಷನು ಮಹೇಶನಿಗೆ ಉಮೆಯನ್ನು ಕೊಟ್ಟನು. ಆ ಬಳಿಕ ಅರವತ್ತು ಮಂದಿ ಹೆಣ್ಣುಮಕ್ಕಳನ್ನು ಪಡೆದನು. ಅವರಿಗೆ ಅವರವರ ಪುರುಷರ ಸಂಯೋಗದಿಂದ ಈ ಎಲ್ಲ ಸಚರಾಚರವೂ ಹುಟ್ಟಿತು. ೧. ಪಾಪಗಳನ್ನು ಪರಿಹರಿಸುವ, ಹೆಚ್ಚಾದ ಪ್ರತಾಪವನ್ನುಳ್ಳ, ಶ್ರೇಷ್ಠವಾದ ಮೇರುಪರ್ವತವನ್ನೇ ಬಿಲ್ಲಾಗಿ ಉಳ್ಳ, ಪ್ರಳಯಕಾಲದ ಪ್ರಬಲಕೋಪಿಯಾದ, ಹೊಗಳಿಸಿಕೊಳ್ಳುವ ಮನೋಹರವಾದ ರೂಪವುಳ್ಳ, ಮೋಹಕನಾದ ಮನ್ಮಥನನ್ನು ಸುಟ್ಟು ಬೂದಿಯನ್ನು ಹಚ್ಚಿಕೊಂಡ, ಗಿರಿಜೆಯ ಜೊತೆಗೆ ಸಂತೋಷವಾಗಿ ಇರುವ, ಬ್ರಹ್ಮ, ವಿಷ್ಣು, ಇಂದ್ರರಿಂದ ಸ್ತುತಿಸಿಕೊಳ್ಳುವ, ದೇವತೆಗಳಿಂದ ನಮಸ್ಕರಿಸಿಕೊಳ್ಳುವ, ಯಾವುದಕ್ಕೂ ಅಂಟಿಕೊಳ್ಳದವನಾದ, ಶ್ರೇಷ್ಠ ಮತ್ತು ಪುಣ್ಯಸ್ವರೂಪನಾದ, ಭಕ್ತರನ್ನು ಕಾಪಾಡುವ ಅಪೇಕ್ಷೆಯುಳ್ಳ ಪಂಪಾವಿರೂಪಾಕ್ಷನೇ ನಿನಗೆ ಜಯವಾಗಲಿ, ನಮಸ್ಕರಿಸಿದ ಭಕ್ತರನ್ನು ಯಾವಾಗಲೂ ಪ್ರೀತಿಯಿಂದ ಕಾಪಾಡು, ೨. ''ಮುಂದಾದುದನ್ನು ಕೇಳಯ್ಯ, ಸಿದ್ಧರಾಮ. ಬ್ರಹ್ಮನು ತನ್ನ ಮಗನಾದ ದಕ್ಷನನ್ನು ಕರೆದು ನೀನು ಸೃಷ್ಟಿಯನ್ನು ಚೆನ್ನಾಗಿ ಮಾಡು ಎನ್ನಲು, ಆಗ ದಕ್ಷನು ಬ್ರಹ್ಮನ ಮಗಳಾದ ಅಸಿಕ್ನಿಯಲ್ಲಿ ಪ್ರೀತಿಯಿಂದ ಹತ್ತುಸಾವಿರ ಮಂದಿ ಹರ್ಯಶ್ವರೆಂಬುವರನ್ನು ನಲವಿನಿಂದ ಪಡೆದು, ಅವರಿಂದ ಸೃಷ್ಟಿಯನ್ನು ಮಾಡಿಸಿದನು. ಅದನ್ನು ನೋಡಿದ

CC-0. Jangamwadi Math Collection. Digitized by eGangotri

ತಕ್ಕಿನಿಂ ನಾರದಂ ಬೋಧಿಸೆ ತಪೋವನಂ
ಬೊಕ್ಕರವರಾಕ್ಷಣಂ ದಕ್ಷನಿದನರಿದು ತಾಂ
ಮಕ್ಕಳ ವಿಯೋಗದಿಂದೆರ್ದೆಗೆಡದೆ ಮತ್ತೆ ಚಪಲಾಶ್ವರಂ ಪಡೆದವರನು
ಮಕ್ಕಳಿರ ಸೃಜಿಸಿ ನೀವೆನಲವರ್ ಸೃಷ್ಟಿಸುವ
ದಕ್ಕುಜ್ಜುಗಿಸೆ ನಾರದಂ ಬಂದವರ್ಗಳಂ
ಸಿಕ್ಕದಿರಿ ದಕ್ಷನಿಕ್ಕುವ ಬಲೆಗೆ ನೀವೆಂದು ತಪಕ್ಕೈದಿಸಿದನವರನು ೩

ನಾರದನ ಕೌಳಿಯಿಂದಿತ್ತಂಡದಾತ್ಮಜರ್
ದೂರವಾಗಲ್ ಕೆರಳಿ ದಕ್ಷನೆಲವೋ ಖೂಳ
ನಾರದ ಮದೀಯನಂದನರನಿರಗೊಡೆ ಮೂರುಮುಕ್ಕಾಲ್‌ಗಳಿಗೆಯೊಮ್ಮೆಯುಂ
ಧಾರುಣಿಯೊಳೆಲ್ಲಿಯುಂ ಸ್ಥಿರನಾಗದೊಡನೊದನ
ಕಾರಣಂ ತಿರುಗಿ ಜಗಳಂಗಳನೆ ಗಂಟಿಕ್ಕು
ಕ್ರೂರ ಹೋಗೆಂದು ಶಾಪವನಿತ್ತು ಪೆಣ್ಮಕ್ಕಳಂ ಪಡೆಯಲನುಗೆಯ್ದನು ೪

ಒರೆವೆನಾಲಿಸು ಸಿದ್ಧರಾಮ ದಕ್ಷಬ್ರಹ್ಮ
ನಿರದಸಿಕ್ನಿಯೊಳೈದೆ ಪಡೆದು ಮತ್ತರುವತ್ತು
ತರುಣಿಯರನಿತ್ತನಾ ಧರ್ಮಂಗೆ ಹತ್ತನಿಪ್ಪತ್ತೇಳ ಚಂದ್ರಮಂಗೆ

ನಾರದನು ಸಂಸಾರಬಂಧನಕ್ಕೆ ಒಳಗಾಗಬೇಡಿರಿ ಎಂದು ಅವರನ್ನು ತಪಸ್ಸಿಗೆ ಕಳುಹಿಸಿದನು. ೩. ನಾರದನು ಮೋಸದಿಂದ ಬೋಧೆ ಮಾಡಲು ಅವರು ತಪೋವನವನ್ನು ಪ್ರವೇಶಿಸಿದರು. ಅವರು ತಪಸ್ಸಿಗೆ ಹೋದುದನ್ನು ಆ ಕ್ಷಣ ದಕ್ಷನು ತಿಳಿದುಕೊಂಡು, ತನ್ನ ಮಕ್ಕಳ ಅಗಲಿಕೆಯಿಂದ ಧೈರ್ಯಗೆಡದೆ ಪುನಃ ಚಪಲಾಶ್ವರನ್ನು ಪಡೆದು, ಅವರನ್ನು ಕುರಿತು ಮಕ್ಕಳೇ, ನೀವು ಸೃಷ್ಟಿಯನ್ನು ಮಾಡಿ ಎಂದನು. ಅದರಂತೆ ಅವರು ಸೃಷ್ಟಿ ಮಾಡಲು ತೊಡಗಿದರು. ಅದನ್ನು ನೋಡಿದ ನಾರದನು ಬಂದು 'ದಕ್ಷನು ಬೀಸುವ ಮೋಸದ ಬಲೆಗೆ ನೀವು ಬಲಿಯಾಗಬೇಡಿ' ಎಂದು ಹೇಳಿ, ಅವರನ್ನೂ ತಪಸ್ಸಿಗೆ ಕಳುಹಿಸಿದನು. ೪. ನಾರದನ ಮೋಸದಿಂದ ತನ್ನ ಎರಡು ಗುಂಪಿನ ಮಕ್ಕಳೂ ಎಂದರೆ ಹರ್ಯಶ್ವ ಮತ್ತು ಚಪಲಾಶ್ವರೂ ದೂರವಾಗಲು, ದಕ್ಷನಿಗೆ ಕೋಪವುಂಟಾಗಿ, ಅವನು 'ಎಲವೊ ಖೂಳ ನಾರದನೇ, ನನ್ನ ಮಕ್ಕಳನ್ನು ನೀನು ಇರಲು ಬಿಡುವುದಿಲ್ಲ. ನೀನು ಮೂರುಮುಕ್ಕಾಲು ಗಳಿಗೆಯಲ್ಲಿ ಒಂದು ಸಾರಿಯೂ ಈ ಭೂಮಿಯಲ್ಲಿ ಎಲ್ಲಿಯೂ ಸ್ಥಿರವಾಗಿ ನಿಲ್ಲದೆ ಅಕಾರಣವಾಗಿ ತಿರುಗುತ್ತ ಜಗಳಗಳನ್ನು ತಂದಿಡು. ಕ್ರೂರಿಯೇ, ಹೋಗು' ಎಂದು ಶಾಪವನ್ನು ಕೊಟ್ಟು ಮುಂದೆ ಹೆಣ್ಣುಮಕ್ಕಳನ್ನು ಪಡೆಯಲು ಉದ್ಯುಕ್ತನಾದನು. ೫. ಹೇಳುತ್ತೇನೆ ಕೇಳಯ್ಯ, ಸಿದ್ಧರಾಮ, ದಕ್ಷಬ್ರಹ್ಮನು ಅಸಿಕ್ನಿಯಲ್ಲಿ ಮತ್ತೆ ಅರವತ್ತು ಜನ ಹೆಣ್ಣುಮಕ್ಕಳನ್ನು ಪಡೆದನು. ಅವರಲ್ಲಿ ಧರ್ಮನಿಗೆ ಹತ್ತು ಮಂದಿಯನ್ನೂ,ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನೂ, ಶ್ರೇಷ್ಠನಾದ ಕಶ್ಯಪನಿಗೆ

CC-0. Jangamwadi Math Collection. Digitized by eGangotri

ಗರುವ ಕಶ್ಯಪಗೆ ಹದಿಮೂರತ್ರಿ ಮರಿಚಿಯುಂ
ಗಿರಸಂ ಪುಲಸ್ತ್ಯಂ ಪುಲಹ ಕ್ರತುವು ಭೃಗು ವಸಿ
ಷ್ಠರಿಗೊರ್ವರೊರ್ವರಂ ತವೆ ಕೃಶಾಶ್ವಂಗಿರ್ವರಂ ಕೊಟ್ಟನಳ್ತಿಯಿಂದೆ ೫

ಧರ್ಮನ ಸತಿಯರರುಂಧತಿ ಯಾಮೆ ಲಂಬೆಯರ್
ನಿರ್ಮಳ ಮರುತ್ವತಿ ಸುಭಾನು ಸಂಕಲ್ಪೆಯರ್
ಪೆರ್ಮೆಯ ಮುಹೂರ್ತೆ ಸಾಧ್ಯೆಯುಂ ವಿಶ್ವೆ ವಸುವೆನಿಪ ನಾಮಂಗಳವರ ಸುತರು
ಕೂರ್ಮೆಯೊಳರುಂಧತಿಗೆ ಕಿನ್ನರರ್ ಯಾಮೆಗಂ
ಕರ್ಮರಹಿತಂ ನಂದಿ ಲಂಬೆಗೆ ಸಿಡಿಲ್ ಮಿಂಚು
ಮರ್ಮಜ್ಞೆಗಾ ಮರುತ್ವತಿಗಂ ಮರುತ್ತುಗಳ್ ಭಾನುವಿಗೆ ಸಿದ್ಧರ್ಕಳು ೬

ಎಸೆವ ಸಂಕಲ್ಪೆಗಂ ಸಂಕಲ್ಪರಾದರಾ
ಬಿಸಜಲೋಚನೆ ಮುಹೂರ್ತೆಗೆ ಮುಹೂರ್ತರ್ ಸಾಧ್ಯೆ
ಗಸಮಸಾಧ್ಯರ್ ವಿಶ್ವೆಗಂದು ವಿಶ್ವೇದೇವರಾ ವಸುವಿಗೆಂಟುಮಂದಿ
ವಸುಗಳಾದರ್ ವಸುಗಳಾಪಧ್ರುವ ಸೋಮಧರ
ಶ್ವಸನಶಿಖಿ ಪ್ರತ್ಯೂಷರುಂ ಪ್ರಭಾಸನುಮೆನಿಪ
ಜಸವಡೆದರಷ್ಟವಸುಗಳ್ ಮೇಣ್ ಪ್ರಭಾಸಂಗೆ ವಿಶ್ವಕರ್ಮಂ ತನುಜನು ೭

ಮರಿಚಿಸಂಭೂತಿಯರ್ಗಾದ ಕಶ್ಯಪಗೆಸೆವ
ತರುಣಿಯರ್ ಪದಿಮೂವರದಿತಿ ದಿತಿದನುತಾಮ್ರೆ
ವರವಿನತೆ ಸುರಸೆ ಧರೆ ಕದ್ರುನುತೆ ಸುರಭಿ ಸ್ವಸೆಯಿಳೆ ಮತ್ತೆ ಮುನಿಯರಿಷ್ಟೇ

ಹದಿಮೂರು ಮಕ್ಕಳನ್ನೂ ಕೊಟ್ಟನು. ಅತ್ರಿ, ಮರೀಚಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ ಇವರಿಗೆ ತಲಾ ಒಬ್ಬೊಬ್ಬರನ್ನೂ ಮತ್ತು ಕೃಶಾಶ್ವನಿಗೆ ಇಬ್ಬರನ್ನೂ ಪ್ರೀತಿಯಿಂದ ಕೊಟ್ಟನು. ೬. ಅರುಂಧತಿ, ಯಾಮೆ, ಲಂಬೆ, ನಿರ್ಮಲಳಾದ ಮರುತ್ವತಿ, ಸುಭಾನು, ಸಂಕಲ್ಪೆಯರು, ಹೆಮ್ಮೆಯ ಮುಹೂರ್ತೆ, ಸಾಧ್ಯೆ, ವಿಶ್ವೆ, ವಸು ಎಂದು ಹೆಸರುಳ್ಳವರು ಧರ್ಮನ ಪತ್ನಿಯರು. ಪ್ರೀತಿಯಿಂದ ಅರುಂಧತಿಗೆ ಕಿನ್ನರರು ಮಕ್ಕಳಾದರು. ಯಾಮೆಗೆ ಕರ್ಮರಹಿತನಾದ ನಂದಿ, ಲಂಬೆಗೆ ಸಿಡಿಲು-ಮಿಂಚುಗಳು ಮಕ್ಕಳು; ಮರ್ಮಜ್ಞಳಾದ ಮರುತ್ವತಿಗೆ ಮರುತ್ತುಗಳು, ಭಾನುವಿಗೆ ಸಿದ್ಧರುಗಳು ಹುಟ್ಟಿದರು. ೭. ಪ್ರಸಿದ್ಧಳಾದ ಸಂಕಲ್ಪೆಗೆ ಸಂಕಲ್ಪರು, ಕಮಲಮುಖಿಯಾದ ಮುಹೂರ್ತೆಗೆ ಮುಹೂರ್ತರು, ಸಾಧ್ಯೆಗೆ ಅಪ್ರತಿಮ ಸಾಧ್ಯರು, ವಿಶ್ವೆಗೆ ವಿಶ್ವೇದೇವರು; ಆ ವಸುವಿಗೆ ಎಂಟು ಮಂದಿ ವಸುಗಳು ಮಕ್ಕಳಾದರು. ಆಪ, ಧ್ರುವ, ಸೋಮ, ಧರ, ವಾಯು, ಅಗ್ನಿ, ಪ್ರತ್ಯೂಷ, ಪ್ರಭಾಸ ಎಂದು ಪ್ರಖ್ಯಾತರಾದ ಇವರೇ ಅಷ್ಟವಸುಗಳು. ಮತ್ತು ಪ್ರಭಾಸನಿಗೆ ವಿಶ್ವಕರ್ಮನು ಮಗನಾದನು. ೮. ಮರೀಚಿ ಮತ್ತು ಸಂಭೂತಿಯರ ಮಗನಾದ ಕಶ್ಯಪನಿಗೆ ಹದಿಮೂರುಮಂದಿ ಪತ್ನಿಯರು. ಅವರೇ ಅದಿತಿ, ದಿತಿ, ದನು, ತಾಮ್ರೆ, ಶ್ರೇಷ್ಠಳಾದ ವಿನತೆ, ಸುರಸೆ, ಧರೆ, ಕದ್ರು, ಪ್ರಸಿದ್ಧಳಾದ ಸುರಭಿ, ಸ್ವಸೆ, ಇಳೆ,

CC-0. Jangamwadi Math Collection. Digitized by eGangotri

ಪರಿವಿಡಿಯುಲವರವರ ಸುತರ ನಾಮಂಗಳಾ
ತರಳೆಯರ ಪೆಸರ್ಗಳಂ ಕ್ರಮದಿಂದೆ ಕೇಳೆಂದು
ಕರುಣದಿಂ ಚೆನ್ನಬಸವೇಶ್ವರಂ ಸಿದ್ಧರಾಮಂಗೆ ಮಗುಳಿಂತೆಂದನು ೮

ಧಾತನರ್ಯಮನಂಶುಮಾನ್ ವರುಣನಿಂದ್ರಂ ಮ
ಹಾತಿಬಲಮಿತ್ರಂ ರವಿ ತ್ವಷ್ಟ್ರ ವಿಷ್ಣುಸಂ
ಜಾತಗುಣನಿಧಿ ವಿವಸ್ವತನೆಸೆವ ಪೂಷನಾ ಪರ್ಜನ್ಯನೆಂಬನಿಬರು
ಖ್ಯಾತರಾ ದ್ವಾದಶಾದಿತ್ಯರವರೊಳಗೆ ಪುರು
ಹೂತಶಚಿಯರ್ಗೆ ಮಿಾಷಡು ಜಯಂತಂ ರಿಷಭ
ರೋತು ಸಂಭವಿಸಿದರ್ ವರುಣಂಗೆ ವಾಲ್ಮೀಕಿಮುನಿವರಂ ಸುತನಾದನು ೯

ಆ ವಿವಸ್ವಂ ಸಂಜ್ಞೆಗಳ್ಗೆ ಸಂಭವಿಸಿದರ್
ವೈವಸ್ವತಂ ಯಮಂ ಯಮುನೆಯುಂ ಛಾಯೆಯೊಳ್
ಸಾವರ್ಣ ಶನಿತಪತಿಗಳ್ ಜನಿಸಿದರ್ ಸಂಜ್ಞೆಗಾಗ ವಡಬಾಕೃತಿಯೊಳು
ತಾವಾದರಶ್ವಿನೀದೇವತೆಗಳಿರ್ವರುಂ
ಭಾವಿಸಲ್ ನಿಮಿಯ ಶಾಪದೆ ಮಿತ್ರವರುಣರ್ಗೆ
ದೇವಾಂಗನಾಸಂಗದಿಂ ವಸಿಷ್ಠಾಗಸ್ತ್ಯರುದಿಸಿದರ್ ಕುಂಭದಿಂದೆ ೧೦

ದಿತಿಯಾತ್ಮಜರ್ ಹಿರಣ್ಯಕಶಿಪು ಹಿರಣ್ಯಾಕ್ಷ
ರತಿಭಯಂಕರರೂಪೆ ಸಿಂಹಿಕೆಯೆನಿಪ್ಪೊರ್ವ
ಸುತೆಯಾದಳಾ ಹಿರಣ್ಯಕಶಿಪುವಿನುದರದೊಳ್ ವರಪ್ರಹಲ್ಲಾದ ಮುಖ್ಯ

ಮುನಿ. ಅನುಕ್ರಮವಾಗಿ ಅವರ ಗಂಡುಮಕ್ಕಳ, ಹೆಣ್ಣುಮಕ್ಕಳ ಹೆಸರನ್ನು ಹೇಳುತ್ತೇನೆ ಕೇಳು" ಎಂದು ಕರುಣೆಯಿಂದ ಚೆನ್ನಬಸವಣ್ಣನು ಸಿದ್ಧರಾಮನಿಗೆ ಮತ್ತೆ ಈ ರೀತಿ ಹೇಳಿದನು. ೯. "ಧಾತ, ಅರ್ಯಮ, ಅಂಶುಮಾನ್, ವರುಣ, ಇಂದ್ರ, ಮಹಾ ಅತಿ ಬಲನಾದ ಮಿತ್ರ, ರವಿ, ತ್ವಷ್ಟ್ರ, ವಿಷ್ಣು, ಗುಣನಿಧಿಯಾದ ವಿವಸ್ವತ, ಪ್ರಖ್ಯಾತನಾದ ಪೂಷ, ಪರ್ಜನ್ಯ ಎಂಬ ಇವರೆಲ್ಲ ಖ್ಯಾತರಾದ ದ್ವಾದಶಾದಿತ್ಯರು. ಅವರಲ್ಲಿ ಇಂದ್ರ ಮತ್ತು ಶಚಿಯರಿಗೆ ಮಿಾಷಡು (ವಿದುಷ), ಜಯಂತ, ಋಷಭ ಎಂಬ ಮಕ್ಕಳಾದರು. ವರುಣನಿಗೆ ಋಷಿಶ್ರೇಷ್ಠನಾದ ವಾಲ್ಮೀಕಿ ಮಗನಾದನು. ೧೦. ಆ ಸೂರ್ಯ ಮತ್ತು ಸಂಜ್ಞೆಯರಿಗೆ ವೈವಸ್ವತಮನು, ಯಮ, ಯಮುನೆಯರು ಹುಟ್ಟಿದರು. ಛಾಯಾದೇವಿ ಯಲ್ಲಿ ಸಾವರ್ಣ, ಶನಿ, ತಪತಿಗಳು ಜನಿಸಿದರು. ಸಂಜ್ಞೆಗೆ ಹೆಣ್ಣುಕುದುರೆಯ ರೂಪ ದಲ್ಲಿದ್ದಾಗ ಅಶ್ವಿನೀದೇವತೆಗಳು ಹುಟ್ಟಿದರು. ನಿಮಿಯ ಶಾಪದಿಂದ ಮಿತ್ರ–ವರುಣರಿಗೆ ದೇವಾಂಗನೆಯಾದ ಊರ್ವಶಿಯಲ್ಲಿ ವಸಿಷ್ಠ ಮತ್ತು ಅಗಸ್ತ್ಯರು ಮಡಕೆಯಲ್ಲಿ ಹುಟ್ಟಿದರು. ೧೧. ದಿತಿಯ ಮಕ್ಕಳು ಹಿರಣ್ಯಕಶಿಪು, ಹಿರಣ್ಯಾಕ್ಷ, ಅತಿಭಯಂಕರ ರೂಪಿನವಳಾದ ಸಿಂಹಿಕೆ ಎಂಬ ಒಬ್ಬ ಮಗಳೂ ಆದಳು. ಆ ಹಿರಣ್ಯಕಶಿಪುವಿನ ಹೊಟ್ಟೆ

CC-0. Jangamwadi Math Collection. Digitized by eGangotri

ಸುತಸಹಸ್ರಂ ಪ್ರಹಲ್ಲಾದಶಿಷ್ಕಾಲೆಯು
ಗ್ಗತಿಶಯು ವಿಲೋಚನ ನಿಕುಂಭಕುಂಭರ್ ಜನಿಪ
ಲತುಳಸಾಹಸಿ ವಿಲೋಚನಗೆ ಬಲಿಯಾ ಬಲಿಗೆ ಬಾಣಾಸುರಂ ಜನಿಸಿದಂ ೧೧

ಪರಿಕಿಸಲ್ ಬಾಣಂಗೆ ಧನದೆಗಂ ನಮುಚಿ ಸಂ
ವರುಣನುಂ ವಿಪ್ರಜಿತುವುಂ ಪುಲೋಮಾದಿ ಖಳ
ರಿರದೆ ಸಂಜನಿಸಿದರ್ ನಾಲ್ವತ್ತುಮಂದಿಯಾ ಸಿಂಹಿಕೆಗೆ ವಿಪ್ರಜಿತುಗೆ
ನರಕ ಸ್ವರ್ಭಾನು ವಾತಾಪಿಲ್ವಲಾದಿಗಳ್
ಧರೆಯೊಳುದಿಸಿದರೀಶವರದಿಂದಲಂಧಕಾ
ಸುರನಾ ಹಿರಣ್ಯಾಕ್ಷದೈತ್ಯಂಗೆ ಮಗನಾದನೆಲೆ ರಾಮ ಕೇಳೆಂದನು ೧೨

ಇಂತೆಸೆವ ಕನಕಾಂಬಕಂಗೆಯುಪದಾನವಿಗೆ
ಸಂತಾಪನುಂ ಶಕುನಿ ಜರ್ಝರ ಮಹಾನಾಭ
ಮುಂತಾದವರ್ ದನುವಿಗುದಿಸಿದರ್ ತಾರಕ ವಿಧಾತಮಯ ಶಂಖಶಿರರು
ಅಂತಕೋಪಮ ಗಗನಮೂರ್ಧ್ನಿ ಶಕುನಿ ವಿಪಾದ
ಮುಂತೆ ಶತಮಾಯ ವೃಷಪರ್ವ ವಿದ್ರಾವಣ ಸು
ರಾಂತಕ ಮರಿಚಿ ಮದಿರ ದುಂದುಭಿ ವಿರೂಪಾಕ್ಷ ಸರ್ಜನಾಭಾಟಖಳರು ೧೩

ಶರಭ ಗಜಶಿರ ನಮುಚಿ ವಿಪ್ರಜಿತು ಕಪಿಲ ಶಂ
ಬರ ಹಯಗ್ರೀವ ವೈಶ್ವಾನರರ್ ಶಬಲನುಂ
ದುರುಳ ವಾಮನಕೇತು ವಿಕ್ಷೋಭಣಾದಿಗಳ್ ಸೂರ್ವರಾದರ್ ತಾಮ್ರೆಗೆ

ಯಲ್ಲಿ ಶ್ರೇಷ್ಠನಾದ ಪ್ರಹ್ಲಾದನೇ ಮುಂತಾದ ಸಾವಿರ ಮಂದಿ ಮಕ್ಕಳು ಹುಟ್ಟಿದರು, ಪ್ರಹ್ಲಾದ–ಶಿಷ್ಕಾಲೆಯರಿಗೆ ಅತಿಶಯರಾದ ವಿಲೋಚನ, ನಿಕುಂಭ, ಕುಂಭರು ಹುಟ್ಟಿದರು. ಬಹು ಪರಾಕ್ರಮಿಯಾದ ವಿಲೋಚನನಿಗೆ ಬಲಿಯು ಹುಟ್ಟಿದ. ಆ ಬಲಿಗೆ ಬಾಣಾಸುರ ಜನಿಸಿದನು. ೧೨. ಎಲೈ ಸಿದ್ಧರಾಮನೇ, ಕೇಳು, ಬಾಣಾಸುರನಿಗೂ-ಧನದೆಗೂ ನಮುಚಿ, ಸಂವರುಣ, ವಿಪ್ರಜಿತು, ಪುಲೋಮ ಮುಂತಾದ ನಲವತ್ತು ಮಂದಿ ರಾಕ್ಷಸರು ಹುಟ್ಟಿದರು. ಆ ಸಿಂಹಿಕೆ ಮತ್ತು ವಿಪ್ರಜಿತುವಿಗೆ ನರಕ, ಸ್ವರ್ಭಾನು, ವಾತಾಪಿ, ಇಲ್ವಲ ಮುಂತಾದವರು ಹುಟ್ಟಿದರು. ಈಶ್ವರನ ವರದಿಂದ ಆ ಹಿರಣ್ಯಾಕ್ಷ ರಾಕ್ಷಸನಿಗೆ ಅಂಧ ಕಾಸುರನು ಮಗನಾದನು'' ಎಂದನು. ೧೩. "ಇಂತಹ ಪ್ರಸಿದ್ಧನಾದ ಹಿರಣ್ಯಾಕ್ಷನಿಗೆ ಉಪದಾನವಿಯಲ್ಲಿ ಸಂತಾಪ, ಶಕುನಿ, ಜರ್ಝರ, ಮಹಾನಾಭ ಮುಂತಾದವರು ಹುಟ್ಟಿದರು. ಧನುವಿಗೆ ತಾರಕ, ವಿಧಾತ, ಮಯ, ಶಂಖಶಿರರು, ಅಂತಕೋಪಮ, ಗಗನ ಮೂರ್ಧ್ನಿ, ಶಕುನಿ, ವಿಪಾದ ಮುಂತಾದವರಲ್ಲದೆ ಶತಮಾಯ, ವೃಷಪರ್ವ, ವಿದ್ರಾವಣ, ಪುರಾಂತಕ, ಮರಿಚಿ, ಮದಿರ, ದುಂದುಭಿ, ವಿರೂಪಾಕ್ಷ, ಸರ್ಜನ, ಆಭಾಟ ಮುಂತಾದ ದುಷ್ಟರು ಹುಟ್ಟಿದರು. ೧೪. ಶರಭ, ಗಜಶಿರ, ನಮುಚಿ, ವಿಪ್ರಜಿತು, ಕಪಿಲ, ಶಂಬರ, ಹಯಗ್ರೀವ, ವೈಶ್ವಾನರ, ಶಬಲ, ದುರುಳನಾದ ವಾಮನಕೇತು, ವಿಕ್ಷೋಭಣ ಮೊದಲಾದ

CC-0. Jangamwadi Math Collection. Digitized by eGangotri

ಇರವೊಂದನುಳ್ಳ ಖರತುರಗಾದಿಗಳ್ ಪಕ್ಷಿ
ಪರಿಯಾಯ ವಿನತೆಗರುಣಂ ಗರುಡನುಂ ತನುಜ
ರರುಣಶೋಣಿಕೆಯರ್ಗೆ ಸಂಪಾತಿಯುಂ ಜಟಾಯುವುಮೆಂಬರುಬಯಿಸಿದರು ೧೪

ಸುರಸೆಗಂ ಪಲವು ಪಕ್ಕಂ ಪಲವು ಶಿರಮನು
ಳ್ಳುರಗಂಗಳೊಂದುಸಾವಿರಮುದಿಸಿದುವು ಕದ್ರುವಿ
ಗುರಗಪತಿಶೇಷ ವಾಸುಗಿ ಕಂಬಳಾಶ್ವತರರೆಸೆವ ಕರ್ಕೋಟಕಾಳಿ
ನಿರುಪಮವಿಷದ ಶಂಖಪಾಲ ತಕ್ಷಕ ಸನಿ
ಷ್ಕುರ ಮಹಾಕರ್ಕೋಟ ಮಣಿಯಾದಿಯಾದ ಸಾ
ಸಿರ ಫಣೀಂದ್ರರ್ ಜನಿಸಿದರ್ ಧರೆಗೆ ಸಿದ್ಧಸಾಧ್ಯರ್ ಕುಮಾರಕರಾದರು ೧೫

ಸುರಭಿಗಮೃತಂ ಕಾಮಧೇನುವುಂ ಪಶುಗಳುಂ
ನಿರುತಂ ಮಹಿಷನಿಕರಮಪ್ಸರಸ್ತ್ರೀಯರುಂ
ತರತರದೊಳಾದರಿರೆಯೆಂಬಳ್ಗೆ ಗಿರಿ ತರು ಲತಾನಿಕರಮುದ್ಭವಿಸಿತು
ತರುಣಿ ಸ್ವಸೆಗಂ ಯಕ್ಷರಾಕ್ಷಸರ್ ಜನಿಸಿದರ್
ಪರಮಮುನಿಗೈರಾವತಾದಿ ಕರಿಜಾತಿಯುಂ
ಹರಿಮುಖ್ಯಮೃಗಕುಲಂ ಕ್ರಿಮಿಕೀಟಕಾದಿಗಳ್ ಜಲಚರಗಳುದಯಿಸಿದುವು ೧೬

ದಿತಿಯೊಳ್ ಮರುದ್ಗಣಮರಿಷ್ಟೆಗಂ ಗಂಧರ್ವ
ತತಿಯಾಯ್ತು ರಾಮ ಕೇಳ್ ಕಶ್ಯಪನ ವೆಸೆಯಿಂದ
ಮತುಲತರಸೃಷ್ಟಿಯಾದುದು ಮುಂದೆ ಕೇಳತ್ರಿಯನಸೂಯೆಗೊಗೆದರಂದು

ನೂರುಜನ ಹುಟ್ಟಿದರು. ತಾಮ್ರೆಗೆ ಒಂದೇ ಗೊರಸನ್ನುಳ್ಳ ಕತ್ತೆ, ಕುದುರೆ, ಪಕ್ಷಿಸಮೂಹಗಳು ಹುಟ್ಟಿದುವು. ವಿನತೆಗೆ ಅರುಣ, ಗರುಡರು ಮಕ್ಕಳಾಗಿ ಹುಟ್ಟಿದರು. ಅರುಣ-ಶೋಣಿಕೆಯರಿಗೆ ಸಂಪಾತಿ ಮತ್ತು ಜಟಾಯು ಎಂಬುವರು ಹುಟ್ಟಿದರು. ೧೫. ಸುರಸೆಗೆ ಅನೇಕ ರೆಕ್ಕೆಗಳೂ ಮತ್ತು ತಲೆಗಳೂ ಉಳ್ಳ ಒಂದುಸಾವಿರ ಹಾವುಗಳು ಹುಟ್ಟಿದುವು. ಕದ್ರುವಿಗೆ ಉರಗಪತಿಯಾದ ಆದಿಶೇಷ, ವಾಸುಕಿ, ಕಂಬಳ, ಅಶ್ವತರರೂ ಪ್ರಸಿದ್ಧರಾದ ಕಾರ್ಕೋಟಕ ಸಮೂಹ, ಭಾರಿ ವಿಷದ ಶಂಖಪಾಲ, ತಕ್ಷಕ, ಸನಿಷ್ಕುರ, ಮಹಾಕರ್ಕೋಟ, ಮಣಿ ಮುಂತಾದ ಒಂದುಸಾವಿರ ಮಹಾಸರ್ಪಗಳೂ ಹುಟ್ಟಿದುವು. ಧರೆಗೆ ಸಿದ್ಧ-ಸಾಧ್ಯರು ಮಕ್ಕಳಾದರು. ೧೬. ಸುರಭಿಗೆ ಅಮೃತವೂ, ಕಾಮಧೇನುವೂ, ಪಶುಗಳೂ, ಕೋಣಗಳ ಸಮೂಹ, ಅಪ್ಸರಸ್ತ್ರೀಯರೂ ಹುಟ್ಟಿದರು. ಇಳೆಯೆಂಬುವಳಿಗೆ ಪರ್ವತ, ಮರಗಿಡ, ಬಳ್ಳಿಗಳ ಸಮೂಹ ಹುಟ್ಟಿದುವು. ಸ್ವಸೆಯೆಂಬ ಪತ್ನಿಯಲ್ಲಿ ಯಕ್ಷ-ರಾಕ್ಷಸರು ಹುಟ್ಟಿದರು. ಶ್ರೇಷ್ಠಳಾದ ಮುನಿಗೆ ಐರಾವತವೇ ಮುಂತಾದ ಆನೆಗಳೂ, ಸಿಂಹ ಮುಂತಾದ ಮೃಗಜಾತಿಗಳೂ, ಕ್ರಿಮಿಕೀಟಾದಿಗಳೂ, ಜಲಚರಗಳೂ ಹುಟ್ಟಿದುವು. ೧೭. ದಿತಿಗೆ ಮರುದ್ಗಣಗಳೂ, ಅರಿಷ್ಟೆಗೆ ಗಂಧರ್ವರ ಸಮೂಹವೂ ಜನಿಸಿದುವು. ಸಿದ್ಧರಾಮ ಕೇಳು, ಕಶ್ಯಪನ ಕಾರಣದಿಂದ ಅನೇಕ ರೀತಿಯ ಸೃಷ್ಟಿಯಾಯಿತು. ಮುಂದೆ ಅತ್ರಿ ಮತ್ತು

CC-0. Jangamwadi Math Collection. Digitized by eGangotri

ಸುತಚಂದ್ರದತ್ತ ದೂರ್ವಾಸನಂಗೀರಸಂ
ಶ್ರುತಿಗೆ ಗುರುಸಂವರ್ತಯೋಗಸಿದ್ಧಿಗಳೆಂಬ
ಸುತರಾದರಾ ಪುಲಸ್ತ್ಯಪ್ರೀತಿಗಳ್ಗುದಿಸಿದಂ ವಿಶ್ವವಸುವಾಗಳು ೧೭

ದೇವವರ್ಣಿಗೆ ಧನೇಶಂ ಸುತಂ ಕೈಕಸೆಗೆ
ರಾವಣಂ ಕುಂಭಕರ್ಣಂ ವಿಭೀಷಣರೆಂಬ
ಮೂವರುಂ ಶೂರ್ಪನಖಿಯುಂ ರಾವಣನ ಮಾತೃಪಿತೃವಂಶವೆಂತುಟೆನಲು
ಭಾವಿಸಲ್ಕಜನೊಂದು ಕೊಣನ ನಿರ್ಮಿಸಲದರೊ
ಳೀ ವಿಗಡಹೇತಿಪ್ರಹೇತಿಯೆಂಬವರಾದ
ರೇವೇಳ್ವಿನಾ ಪ್ರಹೇತಿಗೆಯಮುನೆಗಂದು ವಿದ್ಯುತ್ಕೇತು ಮಗನಾದನು ೧೮

ಆತನರ್ಧಾಂಗಿ ಸಂಧ್ಯಾದೇವಿಗುದಿಸಿದಂ
ಪಾತಕರಹಿತನೀಶಭಕ್ತಂ ಸುಕೇಶಿ ಮ
ತ್ತಾತಂಗೆ ದೇವವತಿಗಾದರ್ ಸುಮಾಲಿಯುಂ ಮಾಲಿಯುಂ ಮಾಲ್ಯವಂತಂ
ಈ ತೆರದೆ ಮಾಲಿಯನಿಲಾಖ್ಯರ್ಗೆ ಕೈಕಸೆಯು
ಮಾ ತಳೋದರೆ ವಿಶ್ವವಸುಕಾಂತೆ ರಾವಣನ
ಮಾತೆಯೊಪ್ಪುವ ವಂಶವಿದು ಪುಲಹಗುದಿಸಿದರ್ ಕಿನ್ನರರ್ ಕಿಂಪುರುಷರು ೧೯

ಕ್ರತುಗೆ ಸನ್ಮುತೆಗೆ ಸಹಚರಿ ಪತಂಗರ್ ಸುತರ್
ಸತಿ ಪುಲೋಮೆಗೆ ಭೃಗುವಿಗುಷನ ಕವಿ ಚವನರ್ಕ
ಳತುಳಕವಿಗಂ ಶುಕ್ರನಾದನಾ ಚವನಕರ್ಣಿಕೆಯೊಳೊರ್ವಂ ಜನಿಸಿದಂ

ಅನಸೂಯೆಯರಿಗೆ ಖ್ಯಾತರಾದ ಚಂದ್ರ, ದತ್ತಾತ್ರೇಯ, ದೂರ್ವಾಸರು ಹುಟ್ಟಿದರು. ಅಂಗೀರಸ ಮತ್ತು ಶೃತಿಯರಲ್ಲಿ ಗುರು, ಸಂವರ್ತ, ಯೋಗ, ಸಿದ್ಧಿಗಳು ಹುಟ್ಟಿದರು. ಆ ಪುಲಸ್ತ್ಯ ಮತ್ತು ಪ್ರೀತಿಯರಿಗೆ ವಿಶ್ವವಸು ಹುಟ್ಟಿದನು. ೧೮. ದೇವವರ್ಣಿಯಲ್ಲಿ ಕುಬೇರನು ಹುಟ್ಟಿದನು. ಕೈಕಸೆಯಲ್ಲಿ ರಾವಣ, ಕುಂಭಕರ್ಣ, ವಿಭೀಷಣ ಎಂಬ ಮೂವರು ಮಕ್ಕಳೂ, ಶೂರ್ಪಣಖಿಯೆಂಬ ಮಗಳೂ ಹುಟ್ಟಿದರು. ರಾವಣನ ತಂದೆ-ತಾಯಿಯರ ವಂಶ ಹೇಗಿದೆಯೆಂದರೆ ಬ್ರಹ್ಮನು ಒಂದು ಸಾರಿ ಕೊಳವೊಂದನ್ನು ನಿರ್ಮಿಸಿದನು. ಅದರಲ್ಲಿಯೇ ಪ್ರಚಂಡರಾದ ಹೇತಿ, ಪ್ರಹೇತಿ ಎಂಬುವರು ಆದರು. ಆ ಪ್ರಹೇತಿಗೆ ಯಮುನೆಯ ಹೊಟ್ಟೆಯಲ್ಲಿ ವಿದ್ಯುತ್ಕೇತು ಮಗನಾಗಿ ಹುಟ್ಟಿದನು. ೧೯. ಅವನ (ವಿದ್ಯುತ್ಕೇತುವಿನ) ಅರ್ಧಾಂಗಿ ಸಂಧ್ಯಾದೇವಿ, ಅವಳಿಗೆ ಪಾಪರಹಿತನಾದ, ಈಶ್ವರ ಭಕ್ತನಾದ ಸುಕೇಶಿ ಜನಿಸಿದನು. ಅವನಿಗೂ ಮತ್ತು ದೇವವತಿಗೂ ಸುಮಾಲಿ, ಮಾಲಿ, ಮಾಲ್ಯವಂತರು ಹುಟ್ಟಿದರು. ಈ ರೀತಿಯಲ್ಲಿ ಮಾಲಿ ಮತ್ತು ಅನಿಲಾಖ್ಯರಿಗೆ ಕೈಕಸೆಯು ಮಗಳಾಗಿ ಹುಟ್ಟಿದಳು. ಆಕೆ ವಿಶ್ವವಸುವಿನ ಹೆಂಡತಿ. ಇದು ರಾವಣನ ತಾಯಿಯ ವಂಶ. ಪುಲಹನಿಗೆ ಕಿನ್ನರರೂ, ಕಿಂಪುರುಷರೂ ಹುಟ್ಟಿದರು. ೨೦. ಕ್ರತುವಿಗೆ ಸನ್ಮುತೆಯಲ್ಲಿ ಸಹಚರಿ, ಪತಂಗರು ಮಕ್ಕಳಾದರು. ಭೃಗು ಮತ್ತು ಪತಿವ್ರತೆಯಾದ ಪುಲೋಮೆಗೆ

CC-0. Jangamwadi Math Collection. Digitized by eGangotri

ಸುತನಾದನಾತಂಗೆ ರುಚಿಕನಾ ರುಚಿಕಂಗೆ
ಸುತನಾದನೊಲ್ದು ಜಮದಗ್ನಿಯಾತಂಗೆ ವಿ
ಶ್ರುತ ಪರಶುರಾಮನಾತಂಗಳಿಯನೆಸೆವ ವಿಶ್ವಾಮಿತ್ರಮುನಿನಾಥನು ೨೦

ವರವಸಿಷ್ಠನ ಸತಿಯರುಂಧತಿಯ ಗರ್ಭದಿಂ
ದಿರದುದಿಸಿದಂ ಶಕ್ತಿಯಾತಂಗೆ ಮುನಿ ಪರಾ
ಶರನವಂಗುದಿಸಿದಂ ವ್ಯಾಸನಾತಂಗೆ ಶುಕಯೋಗಿಸಂಭವನಾದನು
ಹರುಷದಿಂ ಕರ್ದಮಂ ದೇವಹೂತಿಯೆನಿಪ್ಪ
ತರುಣಿಯೊಳ್ ಕಪಿಲಕರ್ಣಿಕೆಯರಂ ಪಡೆದು ತ
ತ್ತರಳೆಯಂ ಕೊಟ್ಟಂ ಪ್ರಿಯವ್ರತಂಗಾತಂಗೆ ದಶತನುಜರುದಯಿಸಿದರು ೨೧

ಅವರಗ್ನಿಬಾಹುವುಂ ಮೇದನುಂ ಪುತ್ರನುಂ
ಸವನ ಜ್ಯೋತಿಷ್ಮಾನು ವರವಪುಷ್ಮಾನುಗಳ್
ವಿವರಿಸಲ್ ಮೇಧಾತಿಯಗ್ನೀಂದ್ರ ಹವ್ಯ ದ್ಯುತಿಮಾನುವೆಂಬವರವರೊಳು
ತವೆ ಮೊದಲ ಮೂವರುಂ ಯತಿಗಳಾದರ್ ಮುಂದೆ
ಧ್ರುವನಾದನುತ್ತಾನಪಾದಭೂಪಂಗೆ ಸಂ
ಭವಿಸಿದುವು ಧೂಮಕೇತ್ವಾದಿಗಳ್ ತತ್ಕೃಶಾಶ್ವಂಗರ್ಚಿಯೆಂಬವಳೊಳು ೨೨

ಉಷನ, ಕವಿ, ಚವನರು ಮಕ್ಕಳಾದರು. ಅವರಲ್ಲಿ ಅಸಮಾನನಾದ ಕವಿಗೆ ಶುಕ್ರನು ಮಗನಾಗಿ ಹುಟ್ಟಿದ. ಚ್ಯವನನಿಗೆ ಕರ್ಣಿಕೆಯೆಂಬ ಅಪ್ಸರಸ್ತ್ರೀಯಲ್ಲಿ ಒಬ್ಬ ಮಗನಾದ. ಆ ಮಗನಿಗೆ ರುಚಿಕ ಎಂಬುವನು ಹುಟ್ಟಿದನು. ಆ ರುಚಿಕನಿಗೆ ಜಮದಗ್ನಿಯು ಹುಟ್ಟಿದ. ಅವನಿಗೆ ಲೋಕವಿಖ್ಯಾತನಾದ ಪರುಶುರಾಮನು ಮಗನು. ಆತನ ಅಳಿಯನೇ ಪ್ರಖ್ಯಾತನಾದ ಮಹರ್ಷಿ ವಿಶ್ವಾಮಿತ್ರನು. ೨೧. ಶ್ರೇಷ್ಠನಾದ ಋಷಿ ವಸಿಷ್ಠನ ಹೆಂಡತಿ ಅರುಂಧತಿ. ಆಕೆಯ ಗರ್ಭದಲ್ಲಿ ಶಕ್ತಿಯು ಹುಟ್ಟಿದನು. ಆತನಿಗೆ ಪರಾಶರಮುನಿಯು ಹುಟ್ಟಿದ. ಆ ಪರಾಶರನಿಗೆ ವ್ಯಾಸನು ಮಗನಾದನು. ಆತನಿಗೆ ಶುಕಯೋಗಿ ಹುಟ್ಟಿದನು. ಕರ್ದಮನು ದೇವಹೂತಿ ಎಂಬ ಸ್ತ್ರೀಯಲ್ಲಿ ಕಪಿಲ,ಕರ್ಣಿಕೆಯರೆಂಬ ಮಕ್ಕಳನ್ನು ಪಡೆದನು. ಮಗಳಾದ ಕರ್ಣಿಕೆಯನ್ನು ಪ್ರಿಯವ್ರತನಿಗೆ ಮದುವೆ ಮಾಡಿಕೊಟ್ಟನು. ಆತನಿಗೆ ಹತ್ತು ಮಂದಿ ಮಕ್ಕಳಾದರು. ೨೨. ಅವರು ಅಗ್ನಿಬಾಹು, ಮೇದ, ಪುತ್ರ, ಸವನ, ಜ್ಯೋತಿಷ್ಮಾನ್ ಶ್ರೇಷ್ಠನಾದ ವಪುಷ್ಮಾನ್ ಮುಂತಾದವರು, ವಿವರಿಸಲು ಮೇಧಾತಿ, ಅಗ್ನೀಂದ್ರ, ಹವ್ಯ, ದ್ಯುತಿಮಾನ್ ಎಂಬುವವರು ಅವರಲ್ಲಿ ಮೊದಲ ಮೂರು ಮಂದಿ ಸಂನ್ಯಾಸಿಗಳಾದರು. ಮುಂದೆ ಉತ್ತಾನಪಾದರಾಜನಿಗೆ ಧ್ರುವನು ಹುಟ್ಟಿದನು. ಆ ಕೃಶಾಶ್ವನಿಗೆ ಅರ್ಚಿಯೆಂಬು

CC-0. Jangamwadi Math Collection. Digitized by eGangotri

ರಾಮ ಕೇಳಿನ್ನು ಧರ್ಮನ ಸೃಷ್ಟಿಯುಮನವನ
ಭಾಮೆ ಮೃಷೆಯೊಳು ದಂಬನುಂ ಮಾಯೆಯುಂ ಬಂದ
ರಾ ಮಾಯೆಗಂ ನಿರುತಿಗಂ ಲೋಭವಿಕೃತಿಗಳ್ ಪುಟ್ಟಿದುವು ತಲ್ಲೋಭಕೆ
ಭೂಮಿಯೊಳ್ ಕ್ರೋಧಮುದಿಸಿತು ವಿಕೃತಿಗಂ ಹಿಂಸೆ
ಯಾ ಮಹಾಕ್ರೋಧಕ್ಕೆ ಹಿಂಸೆಗೆ ದುರುಕ್ತಿ ಮ
ತ್ತಾ ಮಹಿಳೆಯಾ ಕಲಿದುರುಕ್ತಿಗಳ್ಗಂ ಭಯಂ ಮೃತ್ಯುವೆಂಬವರಾದರು ೨೩

ಜಗದೊಳಾ ಭಯಮೃತ್ಯುಗಳ್ಗೆ ನಿರಯಂ ಯಾತ
ನೆಗಳುದಿಸಿದುವು ನಿರಯಯಾತನೆಗಳಿಂದೆ ಮೋ
ಸೊಗುಮಿಗೆಯು ದುರ್ನೀತಿ ದುರ್ಮಾರ್ಗ ಕಪಟ ಕುತ್ಸಿತ ಮಹಾದ್ರೋಹಂಗಳು
ಮಿಗೆ ಠಕ್ಕು ಠವುಳಿ ವಂಚನೆ ದುರ್ಜನತ್ವ ಸಂ
ಯುಗ ವಿಕೃತಿ ರೋಗ ಸಂತಾಪ ಬಲ್ಮುನಿಸು ಹಾ
ನಿಗಳುದಿಸಿದುವು ರಾಮ ಕೇಳ್ ಧರ್ಮಬ್ರಹ್ಮನುರುಸೃಷ್ಟಿಯಾಯ್ತಿನಿತೆಂದನು ೨೪

ಪರಶಿವಂಗುರೆ ವೀರಭದ್ರ ಶಂಭು ಗಿರೀಶ
ಪರಮ ಚೈತಾಂಘ್ರಿ ಪಶುಪತಿಯಹಿರ್ಬುಧ್ನ್ಯನುಂ
ವರದಿಶಾಪತಿ ಪಿನಾಕಿ ಸ್ಥಾಣು ಭವರೊಪ್ಪುತಿರ್ಪ ಭುವನಾಧೀಶರು
ಪರಿಕಿಸಲ್ಕೇಕಾದಶರುದ್ರರಾದರಾ
ಮರಿಚಿ ಕಶ್ಯಪ ಗೌತಮಾತ್ರಿ ವಿಶ್ವಾಮಿತ್ರ
ಪರಮಮುನಿ ಜಮದಗ್ನಿ ನುತವಸಿಷ್ಠರ್ ಸಪ್ತಋಷಿವರರ್ ಕೇಳೆಂದನು ೨೫

ವಳಲ್ಲಿ ಧೂಮಕೇತು ಮುಂತಾದವರು ಹುಟ್ಟಿದರು. ೨೩. ಸಿದ್ಧರಾಮನೇ, ಇನ್ನು ಧರ್ಮನಿಂದಾದ ಸೃಷ್ಟಿಯನ್ನು ಕೇಳು. ಅವನ ಹೆಂಡತಿಯಾದ ಮೃಷೆಯಲ್ಲಿ ಡಂಬನೂ, ಮಾಯೆಯೂ ಹುಟ್ಟಿದರು. ಆ ಮಾಯೆ ಮತ್ತು ನಿರುತಿಯರಿಗೆ ಲೋಭ, ವಿಕೃತಿಗಳು ಹುಟ್ಟಿದುವು. ಆ ಲೋಭಕ್ಕೆ ಭೂಮಿಯಲ್ಲಿ ಕ್ರೋಧ ಉದಿಸಿತು. ವಿಕೃತಿಗೆ ಹಿಂಸೆ ಹುಟ್ಟಿತು. ಆ ಹಿಂಸೆ ಮತ್ತು ಮಹಾಕ್ರೋಧಕ್ಕೆ ದುರುಕ್ತಿಯಾಯಿತು. ಮತ್ತೆ ಆ ಮಹಿಳೆ ಆ ದುರುಕ್ತಿ-ಕಲಿಗಳಿಗೆ ಭಯ, ಮೃತ್ಯು ಎಂಬುವರು ಜನಿಸಿದರು. ೨೪. ಜಗತ್ತಿನಲ್ಲಿ ಆ ಭಯ ಮೃತ್ಯುಗಳಿಗೆ ನಿರಯ ಎಂಬ ಮಗನೂ,ಯಾತನೆಯೆಂಬ ಮಗಳೂ ಹುಟ್ಟಿದರು. ಇವರಲ್ಲಿ ದುರ್ನೀತಿ, ದುರ್ಮಾರ್ಗ, ಕಪಟ, ಕುತ್ಸಿತ, ಮಹಾದ್ರೋಹಗಳು, ಅಲ್ಲದೆ ಠಕ್ಕು, ಮೋಸ, ವಂಚನೆ, ದೌರ್ಜನ್ಯ,ಯುದ್ಧ, ವಿಕೃತಿ, ರೋಗ, ದುಃಖ, ಮಹಾಕೋಪ, ಹಾನಿಗಳು ಉದಿಸಿದುವು. ಸಿದ್ಧರಾಮನೇ ಕೇಳು, ಧರ್ಮಬ್ರಹ್ಮನಿಂದ ಈ ರೀತಿ ಸೃಷ್ಟಿಗಳಾದುವು ಎಂದನು. ೨೫. ಪರಶಿವನಿಗೆ ವೀರಭದ್ರ, ಶಂಭು, ಗಿರೀಶ, ಚೈತಾಂಘ್ರಿ, ಪಶುಪತಿ, ಅಹಿರ್ಬುಧ್ನ್ಯ ಮತ್ತು ದಿಶಾಪತಿ, ಪಿನಾಕಿ, ಸ್ಥಾಣು, ಭವ, ಭುವನಾಧೀಶರು ಹುಟ್ಟಿದರು. ಪರೀಕ್ಷಿಸುವುದಾದರೆ ಇವರೇ ಏಕಾದಶರುದ್ರರು. ಆ ಮರೀಚಿ, ಕಶ್ಯಪ, ಗೌತಮ, ಅತ್ರಿ, ವಿಶ್ವಾಮಿತ್ರ, ಮುನಿಶ್ರೇಷ್ಠ ಜಮದಗ್ನಿ, ಪ್ರಖ್ಯಾತ ವಸಿಷ್ಠ ಮುಂತಾ



CC-0. Jangamwadi Math Collection. Digitized by eGangotri

ಪಾವನಚರಿತ್ರ ಸ್ವಾಯಂಭು ಸಾರೋಚಿ ಮಿಗೆ
ವೈವಸ್ವತೋರುತರಸಂವೃತ್ತಮಾಖ್ಯ ತವೆ
ರೈವತಾಮಸ ಚಾಕ್ಷುಸಾಜ್ಯ ರೌಚ್ಯ ಬ್ರಹ್ಮಸಾವರ್ಣಿ ಸುಗುಣರೆನಿಪ
ಆ ವಿಮಲ ರುದ್ರಸಾವರ್ಣಿ ಮತ್ತಂ ದಕ್ಷ
ಸಾವರ್ಣಿಯಗ್ನಿಸಾವರ್ಣಿ ಪೇಳ್ವೆಂ ಸೂರ್ಯ
ಸಾವರ್ಣಿಯಿಂತೆಸೆವರೀರೇಳುಮಂದಿ ಮನುಗಳ್ ರಾಮ ಕೇಳೆಂದನು ೨೬

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಂ
ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೨೭

## ಹದಿನಾಲ್ಕನೆಯ ಸಂಧಿ ಸಂಪೂರ್ಣ

ದವರೇ ಸಪ್ತ ಮಹಾಋಷಿಗಳು, ಕೇಳು'' ಎಂದನು. ೨೬. ಪುಣ್ಯಚರಿತ್ರನಾದ ಸ್ವಾಯಂಭು, ಸಾರೋಚಿ ಮತ್ತು ವೈವಸ್ವತ, ಶ್ರೇಷ್ಠನಾದ ಸಂವೃತ್ತ ಮೊದಲಾದವರು, ಅಲ್ಲದೆ ರೈವತ, ತಾಮಸ, ಚಾಕ್ಷುಸ, ಆಜ್ಯ, ರೌಚ್ಯ, ಬ್ರಹ್ಮಸಾವರ್ಣಿ, ಸುಗುಣಶಾಲಿಗಳೆನಿಸಿದ ಆ ವಿಮಲ ರುದ್ರಸಾವರ್ಣಿ ಮತ್ತು ದಕ್ಷಸಾವರ್ಣಿ, ಅಗ್ನಿಸಾವರ್ಣಿ, ಸೂರ್ಯಸಾವರ್ಣಿ, ಈ ರೀತಿ ಹದಿನಾಲ್ಕು ಮಂದಿ ಮನುಗಳು. ಸಿದ್ಧರಾಮ, ಕೇಳು'' ಎಂದನು. ೨೭. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ಪಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಹದಿನಾಲ್ಕನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿನೈದನೆಯ ಸಂಧಿ

ಸೂಚನೆ : ಶಿವನಾಜ್ಞೆಯಿಂದಂ ಸಚರಾಚರವನಂಬುರುಹ
ಭವನೈದೆ ಸೃಜಿಸಿ ನೆಲೆಯಂ ಚತುರ್ದಶಭುವನ
ಭವನದೊಳ್ ಕೈಗೈದು ತಚ್ಚರಾಚರವನಿವರೆಡೆಯೆಡೆಯೊಳಿಂಬಿಟ್ಟನು

ಪರಮಗುಣನಿಲಯ ಪಾವನತರ ಮಹಾಮಹಿಮ
ಚಿರಿದುಂ ನಿಗಮದೂರ ಪೀತಪಟ ನುತಚರಿತ
ಪುರಮಥನಕಥನ ಪೂಸರನ ಭಸಿತಾಪೇಕ್ಷ ಪ್ರೈತ್ಯಪತಿ ವಿಧ್ವಂಸನ
ಸುರನಿಕರಪೋಷಣ ಮಹಾಪೌರುಷಪ್ರಯುತ
ಕರುಣಿ ಪಂಪಾವಿರೂಪಾಕ್ಷ ಸುತಪಃಪ್ರಭಾ
ಪರಿಪೂರ್ಣಗಾತ್ರ ತ್ರಿಣೇತ್ರ ದಾನವಜೈತ್ರ ಸುಪವಿತ್ರಚಾರಿತ್ರನೆ ೧

ಆಲಿಸೈ ಸಿದ್ಧರಾಮೇಶ ಪಂಕಜಭವಂ
ಭಾಳಾಕ್ಷನಾಜ್ಞೆಯಿಂ ಬ್ರಹ್ಮಾಂಡದೊಳಗೆ ಸ
ಲ್ಲೀಲೆಯಿಂ ಸಚರಾಚರಂಗಳಂ ಸೃಷ್ಟಿಸಿದ ಬಳಿಕವಕೆ ನೆಲೆವನೆಗಳ
ಮೇಲೆ ಕೈಗೈದ ವೃತ್ತಾಂತಮಂ ಪೇಳ್ದಪೆಂ
ಕೇಳಬ್ಜಜಾಂಡಖರ್ಪರದಧೋಭಾಗದೊಳ್
ಮೇಳದಿಂದಿರ್ಪುದಿಪ್ಪತ್ತೆಯ್ದು ಕೋಟಿಯೋಜನದ ಜಲಮೇನೆಂಬೆನು ೨

ಸೂಚನೆ : ಶಿವನ ಅಪ್ಪಣೆಯಂತೆ ಬ್ರಹ್ಮನು ಈ ಸಚರಾಚರವನ್ನು ಸೃಷ್ಟಿಸಿದನು. ಹದಿನಾಲ್ಕು ಲೋಕವನ್ನು ಸೃಷ್ಟಿಸಿ ಸಚರಾಚರಗಳನ್ನು ಆಯಾ ಸ್ಥಳದಲ್ಲಿ ನೆಲೆಗೊಳಿಸಿದನು. ೧. ಒಳ್ಳೆಯ ಗುಣಗಳಿಗೆ ಆಗರನಾದವನೆ, ಶ್ರೇಷ್ಠವಾದ ಮಹಿಮೆಯನ್ನು ಉಳ್ಳವನೆ, ವೇದಾತೀತನೆ, ವಿಷ್ಣುವಿನಿಂದ ಹೊಗಳಿಸಿಕೊಳ್ಳುವ ಆಚಾರಶೀಲನೆ, ತ್ರಿಪುರಾಸುರನನ್ನು ವಧಿಸಿದ ಕಥೆಯುಳ್ಳವನೆ, ಮನ್ಮಥನನ್ನು ಸುಟ್ಟ ಭಸ್ಮಲೇಪನದಲ್ಲಿ ಅಪೇಕ್ಷೆಯುಳ್ಳವನೇ, ಮೃತ್ಯುಂಜಯ, ದೇವತೆಗಳ ರಕ್ಷಕನೂ,ಮಹಾಪೌರುಷವುಳ್ಳವನೂ, ಕರುಣಾಶಾಲಿಯೂ, ಒಳ್ಳೆಯ ತಪಸ್ಸಿನ ಪ್ರಭೆಯಿಂದ ತುಂಬಿದ ಶರೀರವುಳ್ಳವನೂ, ಮುಕ್ಕಣ್ಣ, ರಾಕ್ಷಸರನ್ನು ಜಯಿಸಿದವನೂ ಪವಿತ್ರವಾದ ಚಾರಿತ್ರ್ಯವುಳ್ಳವನೂ ಆದ ಪಂಪಾವಿರೂಪಾಕ್ಷಾ. ೨. "ಸಿದ್ಧರಾಮೇಶನೇ ಕೇಳು, ಬ್ರಹ್ಮನು ಶಿವನ ಆಜ್ಞೆಯಂತೆ ಬ್ರಹ್ಮಾಂಡವನ್ನು ಸೃಷ್ಟಿಸಿ ಅದರಲ್ಲಿ ಲೀಲೆಯಿಂದ ಸಚರಾಚರಗಳನ್ನು ಸೃಷ್ಟಿಸಿದ ಬಳಿಕ, ಅವಕ್ಕೆ ಆಶ್ರಯಗಳನ್ನು ರಚಿಸಿದ ಸಂಗತಿಯನ್ನು ಹೇಳುತ್ತೇನೆ ಕೇಳು, ಬ್ರಹ್ಮಾಂಡವನ್ನು ಹೊತ್ತಿರುವ ಆಮೆಯ ಕೆಳಭಾಗದಲ್ಲಿ ಇಪ್ಪತ್ತೈದುಕೋಟಿ ಯೋಜನ ವಿಸ್ತಾರದ ಜಲ

CC-0. Jangamwadi Math Collection. Digitized by eGangotri

ಇಂತೆಸೆವ ಜಲದ ಮೇಲಾದಿಕೂರ್ಮಂ ಮೆರೆವ
ನಂತವನ ಮೇಲೆ ಶೇಷಂ ಸುತ್ತಲಿಹುವು ದಿ
ಗ್ದಂತಿಗಳವರ ಮೇಲೆಯೀಳೆಯೊಂದುಕೋಟಿ ದಳವಯ್ವತ್ತು ಕೋಟಿಪರಹಿಂ
ಅಂತರದ ಭರಣಿಯಂತೇಳುಲೋಕಂಗಳವ
ರಂತರಂತರದೊಳಿಹವವರಗಲದುನ್ನತಗ
ಳಂ ತಿಳಿಯೆ ಹತ್ತುಕೋಟಿಗಳ ಹರಹೀರಯ್ದು ಸಾಸಿರಗಳುನ್ನತಗಳು ೨.

ಇನ್ನು ಮೂಲೋಕಂಗಳಡಿಯೆಡೆಯು ಭೂಮಿಗಳ್
ಪನ್ನೆರಡು ಲಕ್ಷಮುಂ ನಾಲ್ವತಾರ್ ಸಾಸಿರದ
ಯಿನ್ನೂರದಯ್ವತ್ತುಯೋಜನದಗಲದಿಂದಲಿರ್ಪುವಾ ಲೋಕಂಗಳ
ಮುನ್ನಮೇ ಬಳಸಿದಿಳೆಯಿಪ್ಪತ್ತುಕೋಟಿ ಹರ
ಹಿನ್ನೋಡೆ ಬ್ರಹ್ಮಾಂಡದೋಂಟೆಯುಂ ಕರ್ಚಿರ್ಪು
ದಿನ್ನದರ ಮೇಲಣ ವಿಶಾಲಮೇ ಭೂಲೋಕಮೆಲೆ ರಾಮ ಕೇಳೆಂದನು ೪

ಭೂತಳದ ಕೆಳಗೆ ತಳ ವಿತಳ ಸುತಳಂಗಳ್ ತ
ಳಾತಳ ಮಹಾತಳ ರಸಾತಳಂಗಳ ನೆಗಳ್ದ
ಪಾತಾಳಮೆಂಬಿವೇಳ್ ಲೋಕಮನಡಕಿಲ್ಗಳಾಗಿ ನಿರ್ಮಿಸುತಲವಕೆ
ಶಾತಕುಂಭಚ್ಛಾಯೆಯುಂ ಮಾಡಿಯೊಡೆತನಕೆ
ಪ್ರೀತಿಯಿಂ ಶೇಷ ಬಲಿ ಮುಚುಕುಂದರಂ ನಿಲಿಸೆ
ಭೂತನಾಥನನಲ್ಲಿ ಶಿವನೆಂದು ಪೂಜಿಸುವರಾ ಲೋಕದಖಿಳಜನರು ೫

ಭಾಗವು ವ್ಯವಸ್ಥಿತವಾಗಿದೆ. ೩. ಈ ರೀತಿ ಪ್ರಕಾಶಿಸುವ ಜಲದ ಮೇಲೆ ಆದಿಕೂರ್ಮನು ಇದ್ದಾನೆ. ಅವನ ಮೇಲೆ ಆದಿಶೇಷನು ಇದ್ದಾನೆ. ಸುತ್ತ ದಿಗ್ಗಜಗಳಿವೆ. ಅದರ ಮೇಲೆ ಒಂದು ಕೋಟಿ ಎತ್ತರವುಳ್ಳದ್ದಾಗಿ, ಅಯ್ವತ್ತು ಕೋಟಿ ಯೋಜನ ವಿಸ್ತಾರವುಳ್ಳ ಭೂಮಂಡಲವು ಇದೆ. ಆ ಭೂಮಂಡಲದೊಳಗೆ ಒಂದರೊಳಗೊಂದು ಭರಣಿಗಳಿರು ವಂತೆ ಏಳು ಲೋಕಗಳಿವೆ. ಅವುಗಳ ಆಕಾರ ಹತ್ತುಕೋಟಿ ಯೋಜನವಷ್ಟು ಅಗಲ, ಹತ್ತುಸಾವಿರ ಯೋಜನವಷ್ಟು ಎತ್ತರ. ೪. ಇನ್ನು ಮೂರು ಲೋಕಗಳ ಕೆಳಭಾಗದ ಲೋಕಗಳು ಹನ್ನೆರಡುಲಕ್ಷ ನಲ್ವತ್ತಾರುಸಾವಿರದ ಇನ್ನೂರಯ್ವತ್ತು ಯೋಜನವಷ್ಟು ಅಗಲವಿದೆ. ಆ ಲೋಕಗಳನ್ನೆಲ್ಲ ಬಳಸಿರುವ ಭೂಮಿಯ ವಿಸ್ತಾರ ಇಪ್ಪತ್ತು ಕೋಟಿ. ಇದು ಬ್ರಹ್ಮಾಂಡದ ಓಟೆಯನ್ನು ಆವರಿಸಿದೆ. ಅದರ ಮೇಲಿನ ವಿಶಾಲವಾದ ಪ್ರದೇಶವೇ ಭೂಲೋಕ, ಎಲೈ ಸಿದ್ಧರಾಮನೇ, ಕೇಳು'' ಎಂದನು. ೫. ''ಈ ಭೂತಳದ ಕೆಳಗೆ ಅತಳ, ವಿತಳ, ಸುತಳಗಳು, ತಳಾತಳ, ಮಹಾತಳ, ರಸಾತಳಗಳು, ಪಾತಾಳ ಎಂದು ಹೆಸರಾದ ಏಳು ಲೋಕಗಳನ್ನು ಒಂದರಮೇಲೊಂದರಂತೆ ಪೇರಿಸಿ ನಿರ್ಮಿಸಿದನು. ಅದಕ್ಕೆ ಹೊನ್ನಿನ ಮೆರುಗನ್ನು ಕೊಟ್ಟು ಅವುಗಳನ್ನಾಳಲು ಆದಿಶೇಷ, ಬಲಿ ಮತ್ತು ಮುಚುಕುಂದರನ್ನು ನಿಯಮಿಸಿದನು. ಆ ಲೋಕದ ಎಲ್ಲ ಜನರೂ ಭೂತನಾಥನನ್ನು ಅಲ್ಲಿ ಶಿವನೆಂಬ ಹೆಸರಿ

CC-0. Jangamwadi Math Collection. Digitized by eGangotri

ವರರಸಾತಳಲೋಕವಂ ಶುಭ್ರವರ್ಣದಿಂ
ಪರಿರಚಿಸಿ ವಾಸುಗಿ ಸುವರ್ಣಾಖ್ಯರಂ ನಿಲಿಸೆ
ಪರಮೇಶನಂ ಶಂಭುವೆಂದು ಪೂಜಿಸುತಿರ್ಪರಿನ್ನಾ ಮಹಾತಳವನು
ಉರುಸಿಕತವರ್ಣದಿಂ ನಿರ್ಮಿಸಿ ಹಿರಣ್ಯಾಕ್ಷ
ನರಕಾಸುರರನಲ್ಲಿ ನೆಲೆಗೆಯ್ಯೆ ಶಿವನ ಶಂ
ಕರನೆಂಬ ನಾಮದಿಂ ಭಜಿಸುತಿಹುದಾ ಲೋಕಜನಮತುಳಭಕ್ತಿಯಿಂದೆ ೬

ರಾಮ ಕೇಳ್ ವಿಧಿ ತಳಾತಳಲೋಕವಂ ನವ್ಯ
ಹೇಮವರ್ಣವ ಮಾಡಿಯವರೊಳಗೆ ಮಯಕಾಲ
ನೇಮಿಗಳನೆಸೆವ ಕರ್ಕೋಟಕಾಹಿಯನಿರಿಸಿ ನೀಲಕಂಠಾಹ್ವಯದೊಳು
ಭೀಮನಂ ಪೂಜಿಸುವರಲ್ಲಿ ಸುತಳಕೆ ಪವಳ
ಧಾಮಮಂ ರಚಿಸಿ ತಾರಕ ಪ್ರಹಲ್ಲಾದರಂ
ಪ್ರೇಮದಿಂದಿರಿಸೆ ಶಂಭುವನುಮಾಪತಿಯೆಂದು ಭಜಿಸುವರ್ ಲೀಲೆಯಿಂದೆ ೭

ವಿತಳವಂ ನಿರ್ಮಳದ್ಯುತಿಯಿಂದೆ ಕೈಗೈದು
ಚತುರಾನನಂ ಶಂಖಪಾಲಮುಖರಾದ ಫಣಿ
ವಿತತಿಯಂ ಜಂಭಕುಂಭಕ ದೈತ್ಯರಂ ನಿಲಿಸೆ ಹಾಟಕೇಶ್ವರನಾಮದೆ

ನಿಂದ ಪೂಜಿಸುತ್ತಾರೆ. ೬. ರಸಾತಳಲೋಕವನ್ನು ಬೆಳ್ಳಿಯ ಬಣ್ಣದಲ್ಲಿ ರಚಿಸಿ ವಾಸುಕಿ ಮತ್ತು ಸುವರ್ಣರನ್ನು ಅಧಿಪತಿಯನ್ನಾಗಿ ಮಾಡಿದ್ದಾನೆ. ಆ ಲೋಕದಲ್ಲಿ ಪರಮೇಶ್ವರನನ್ನು ಶಂಭುವೆಂಬ ಹೆಸರಿನಿಂದ ಪೂಜಿಸುತ್ತಿರುವರು. ಇನ್ನು ಆ ಮಹಾತಳ ವನ್ನು ತಾಮ್ರವರ್ಣದಿಂದ ನಿರ್ಮಿಸಿ ಹಿರಣ್ಯಾಕ್ಷ, ನರಕಾಸುರರನ್ನು ಅಧಿಪತಿಗಳನ್ನಾಗಿ ಮಾಡಲು, ಶಿವನನ್ನು ಶಂಕರನೆಂಬ ಹೆಸರಿನಿಂದ ಆ ಮಹಾತಳಲೋಕದ ಜನರು ಅತ್ಯಂತ ಭಕ್ತಿಯಿಂದ ಭಜಿಸುತ್ತಿದ್ದಾರೆ. ೭. ಎಲೈ ಸಿದ್ಧರಾಮನೆ ಕೇಳು, ಬ್ರಹ್ಮನು ತಳಾತಳ ಲೋಕವನ್ನು ಬಂಗಾರದ ಬಣ್ಣದಲ್ಲಿ ನಿರ್ಮಿಸಿ ಅಲ್ಲಿಗೆ ಮಯ, ಕಾಲನೇಮಿ ಮತ್ತು ಪ್ರಸಿದ್ಧವಾದ ಕಾರ್ಕೋಟಕ ಸರ್ಪನನ್ನು ನೇಮಿಸಿದನು. ಶಿವನನ್ನು ನೀಲಕಂಠನೆಂಬ ಹೆಸರಿ ನಿಂದ ಆ ಲೋಕದಲ್ಲಿ ಪೂಜಿಸುತ್ತಾರೆ. ಸುತಳಲೋಕವನ್ನು ಹವಳದ ಬಣ್ಣದಲ್ಲಿ ನಿರ್ಮಿಸಿ ಅಲ್ಲಿಗೆ ತಾರಕಾಸುರ, ಪ್ರಹ್ಲಾದರನ್ನು ಪ್ರೀತಿಯಿಂದ ನೇಮಿಸಿದನು. ಅಲ್ಲಿ ಶಂಭುವನ್ನು ಉಮಾಪತಿಯೆಂದು ಕರೆದು ಪೂಜಿಸುತ್ತಾರೆ. ೮. ಬ್ರಹ್ಮನು ವಿತಳವನ್ನು ನಿರ್ಮಲಕಾಂತಿ ಯಿಂದ ಸೃಷ್ಟಿಸಿ ಅಲ್ಲಿಗೆ ಶಂಖಪಾಲ ಮೊದಲಾದ ಸರ್ಪಸಮೂಹವನ್ನೂ, ಜಂಭ–ಕುಂಭಕ ಮೊದಲಾದ ರಾಕ್ಷಸರನ್ನೂ ಒಡೆಯರನ್ನಾಗಿ ನೇಮಿಸಿದನು. ಆ ವಿತಳಲೋಕದಲ್ಲಿ ವಿಷಕಂಠ ನನ್ನು ಹಾಟಕೇಶ್ವರ ಎಂಬ ಹೆಸರಿನಿಂದ ಪೂಜಿಸುತ್ತಾರೆ. ಅನಂತರ ಅತಳವನ್ನು ನೀಲಿಯ

CC-0. Jangamwadi Math Collection. Digitized by eGangotri

ಶಿತಿಕಂಠನಂ ಸೇವಿಸುತ್ತಿರ್ಪರಲ್ಲಿ ಮೇ
ಲತಳವಂ ನೀಲವರ್ಣಂ ಮಾಡಿ ನಮುಚಿಗಂ
ಸ್ಥಿತಿಗೈದನಲ್ಲಿ ಶಿವನಂ ಮಹಾದೇವನೆಂದರ್ಚಿಸುವರೊಲವಿನಿಂದೆ ೮

ಮೇಲೆ ಭೂಮಂಡಲಮನಂತರದ ಭರಣಿಗಳ
ಮೇಲುಮುಚ್ಚಳಪಾಂಗಿನಿಂ ತೋರ್ಪುತಿಹುದಾ ವಿ
ಶಾಲಧಾತ್ರೀಪೀಠ ಮಧ್ಯದೊಳ್ ಕಣ್ಗೆಸೆವ ಸೌವರ್ಣಲಿಂಗದಂತೆ
ಸ್ಥೂಲಮಾಗಿರ್ಪುದು ಮಹಾಮೇರುಪರ್ವತಂ
ಪೇಳಲೇಂ ಸ್ವಾಯಂಭುವಮನು ಸಕಲಸಾಮ್ರಾಜ್ಯ
ಪಾಲನೆಯ ಪಟ್ಟಮಂ ಕಟ್ಟಿದಂ ಮುದದಿಂ ಪ್ರಿಯವ್ರತಕುಮಾರಕಂಗೆ ೯

ಹರುಷದಿಂ ಸಕಲಭೂಮಂಡಲದ ಭಾರಮಂ
ಧರಿಸಿ ತನ್ನಯ ರಾಜ್ಯದೊಳ್ ದಿವಾಕರಕಿರಣ
ಪರಿವರ್ತನಂ ಬೇಡ ಮದ್ದೇಹಕಾಂತಿಯೇ ಸಾಕೆಂದು ಸುರಗಿರಿಯನು
ವರರಥಾರೂಢನಾಗೇಳ್ ಬಾರಿಯೊಳ್ ಸುತ್ತಿ
ಬರಲೊಂದು ಗಾಲಿಯ್ಕೈದಿದ ತಾಣದೊಳಗೊಂದು
ಪರಿಯಲಾ ಮಧ್ಯದೊಳಗಿಂತು ಸಪ್ತದ್ವೀಪ ಸಪ್ತಶರಧಿಗಳಾದುವು ೧೦

ಲಕ್ಷ ಜಂಬೂದ್ವೀಪಮಾ ಲವಣಸಾಗರಂ
ಲಕ್ಷ ಯೋಜನದಳತೆಯದರೊತ್ತಿನೊಳಗೆರಡು
ಲಕ್ಷ ಯೋಜನದೊಳಾ ಪ್ಲಕ್ಷಮನಿತಿಕ್ಷುನಿಧಿ ನಾಲ್ಕು ಲಕ್ಷಂ ಶಾಲ್ಮಲಿ

ಬಣ್ಣದಿಂದ ರಚಿಸಿ ಅಲ್ಲಿಗೆ ನಮುಚಿಯನ್ನು ಒಡೆಯನನ್ನಾಗಿ ನೇಮಿಸಿದನು. ಅಲ್ಲಿ ಶಿವನನ್ನು ಮಹಾದೇವನೆಂಬ ಹೆಸರಿನಿಂದ ಪೂಜಿಸುತ್ತಾರೆ. ೯. ಈ ಪಾತಾಳಲೋಕಗಳ ಮೇಲಿನ ಭಾಗದಲ್ಲಿ ಭರಣಿಗಳ ಮೇಲಿನ ಮುಚ್ಚಳದಂತೆ ಭೂಮಂಡಲವು ಕಾಣುತ್ತಿದೆ. ಆ ವಿಶಾಲವಾದ ಭೂಮಂಡಲದ ಮಧ್ಯಭಾಗದಲ್ಲಿ ದಿವ್ಯವಾಗಿ ಹೊಳೆಯುವ ಸುವರ್ಣಲಿಂಗದಂತೆ ಮಹಾಮೇರುಪರ್ವತವು ಸ್ಥೂಲವಾಗಿ ಕಾಣುತ್ತಿದೆ. ಅಲ್ಲಿಗೆ ಸ್ವಾಯಂಭುಮನುವು ಸಕಲ ಸಾಮ್ರಾಜ್ಯವನ್ನು ರಕ್ಷಿಸುವ ಪಟ್ಟವನ್ನು ಪ್ರಿಯವ್ರತಕುಮಾರನಿಗೆ ಸಂತೋಷದಿಂದ ವಹಿಸಿಕೊಟ್ಟನು. ೧೦. ಸಂತೋಷದಿಂದ ಇಡೀ ಭೂಮಂಡಲದ ರಕ್ಷಣೆಯ ಭಾರವನ್ನು ಅವನು ವಹಿಸಿದನು. ತನ್ನ ರಾಜ್ಯದಲ್ಲಿ ಸೂರ್ಯನ ಕಿರಣವು ತಿರುಗುವುದು ಬೇಡ, ನನ್ನ ದೇಹದ ಕಾಂತಿಯೆ ಸಾಕು ಎಂದು ರಥಾರೂಢನಾಗಿ ಮೇರು ಪರ್ವತವನ್ನು ಏಳುಬಾರಿ ಸುತ್ತಿಬರಲು ಆಗ ಗಾಲಿಯು ಹರಿದ ಜಾಗದಲ್ಲಿ ಏಳು ಸಮುದ್ರಗಳೂ ಅವುಗಳ ಮಧ್ಯದಲ್ಲಿ ಏಳು ದ್ವೀಪಗಳೂ ಆದುವು. ೧೧. ಒಂದು ಲಕ್ಷ ಯೋಜನದಳತೆಯ ಜಂಬೂದ್ವೀಪ.ಅದರ ಸುತ್ತ ಲಕ್ಷ ಯೋಜನದಳತೆಯ ಲವಣಸಾಗರ, ಅದರ ಪಕ್ಕದಲ್ಲಿ ಎರಡುಲಕ್ಷ ಯೋಜನದಳತೆಯ ಪ್ಲಕ್ಷದ್ವೀಪ. ಅದರಷ್ಟೇ ಇಕ್ಷುಸಾಗರವಿತ್ತು. ಅದರ ಹೊರಗೆ ನಾಲ್ಕು ಲಕ್ಷ ಯೋಜನದಳತೆಯ ಶಾಲ್ಮಲೀದ್ವೀಪ,

CC-0. Jangamwadi Math Collection. Digitized by eGangotri

ಈಕ್ಷಿಸೆ ಸುರಾಶರಧಿಯಾ ಪ್ರಮಾಣಮದೆಂಟು
ಲಕ್ಷಂ ಕುಶದ್ವೀಪಮಂತೆಸೆವ ಸರ್ಪಿ ಮಿಗೆ
ಲಕ್ಷವಿಾರೆಂಟು ಕ್ರೌಂಚದ್ವೀಪಮಾ ಗಣನೆ ದಧಿಶರಧಿ ಕೇಳೆಂದನು ೧೧

ಬಿತ್ತರದೊಳೆಸೆವ ಶಾಖದ್ವೀಪದಳತೆ ಮೂ
ವತ್ತೆರಡು ಲಕ್ಷ ಯೋಜನಮಾ ಪಯಃಶರಧಿ
ಸುತ್ತಿಕೊಂಡಿರ್ಪುದಾ ಲೆಕ್ಕದಿಂದಾ ಕ್ಷೀರವಾರಿಧಿಯನೊಳಗುಮಾಡಿ
ಉತ್ತಮದ ಪುಷ್ಕರದ್ವೀಪವರುವತ್ತನಾ
ಲ್ಕೊತ್ತಿನೊಳಗೊಪ್ಪುವಾ ಸ್ವಾದೋದಕಾಂಬುನಿಧಿ
ಮತ್ತದರ ಪರಿಗಣನೆಯಿಂತು ಸಪ್ತದ್ವೀಪ ಸಪ್ತಶರಧಿಗಳ ಪರವು ೧೨

ಇರದೆ ಸಪ್ತ ದ್ವೀಪ ಸಪ್ತ ಶರನಿಧಿಗಳಂ
ದೆರಡುವರೆಕೋಟಿಮೂರ್ಲಕ್ಕವರೆ ಸೌವರ್ಣ
ಧರಣೆ ಹತ್ತುಂ ಕೋಟಿ ನೋಡೆ ಲೋಕಾಲೋಕಪರ್ವತಂ ಹತ್ತು ಕೋಟಿ
ಗಿರಿಯ ಹೊರಭಾಗದ ಮಹಾಂಧಕಾರಂ ತಿಳಿಯು
ಲೆರಡು ಕೋಟಿಯು ಮೇಲೆ ನಾಲ್ವತಾರುಂ ಲಕ್ಕ
ವರೆಯಿಂತು ಮೇರುವಿಂದತ್ತಲಿಪ್ಪತ್ತೈದುಕೋಟಿ ಯೋಜನದ ಪರವು ೧೩

ಇನ್ನಾಲಿಸೈ ರಾಮ ಸವನನುಂ ಭವ್ಯದ್ಯುತಿ
ಮಾನು ಜ್ಯೋತಿಷ್ಮಾನು ವರವಪುಷ್ಮಾನುಗಳ್
ಸನ್ನುತಂ ಮೇಧಾತಿಯಗ್ನೀಂದ್ರರೆಂಬರೇಳ್ಮಂದಿ ಸುತರಿರಲವರ್ಗೆ

ನೋಡಲಾಗಿ ಅದಷ್ಟಕ್ಕೂ ಸುರಾ(ಮದ್ಯ) ಸಮುದ್ರವಿತ್ತು. ಎಂಟು ಲಕ್ಷ ಯೋಜನ ದಳತೆಯ ಕುಶದ್ವೀಪ. ಅದರ ಹೊರಗೆ ಅಷ್ಟೇ ಅಳತೆಯ ತುಪ್ಪದ ಸಮುದ್ರ. ಹದಿನಾರು ಲಕ್ಷ ಯೋಜನದ ಕ್ರೌಂಚದ್ವೀಪ. ಅದರಷ್ಟೇ ಮೊಸರಿನ ಸಮುದ್ರ ಅದನ್ನು ಆವರಿಸಿತ್ತು. ೧೨. ವಿಸ್ತಾರವಾಗಿರುವ ಶಾಖದ್ವೀಪದ ಅಳತೆ ಮೂವತ್ತೆರಡು ಲಕ್ಷ ಯೋಜನ. ಅದನ್ನು ಅಷ್ಟೇ ವಿಶಾಲವಾದ ಹಾಲಿನ ಸಮುದ್ರ ಸುತ್ತಿಕೊಂಡಿದೆ. ಆ ಹಾಲಿನ ಸಮುದ್ರವನ್ನು ಒಳಗೊಂಡು ಅರವತ್ನಾಲ್ಕು ಲಕ್ಷ ಯೋಜನದಳತೆಯ ಪುಷ್ಕರದ್ವೀಪ ಇದೆ. ಅದನ್ನು ಅಷ್ಟೇ ಅಳತೆಯ ಸಿಹಿನೀರಿನ ಸಮುದ್ರವು ಆವರಿಸಿದೆ. ಈ ರೀತಿಯಾಗಿ ಸಪ್ತದ್ವೀಪಗಳು ಮತ್ತು ಸಪ್ತಶರಧಿಗಳು ವಿಸ್ತಾರವಾಗಿವೆ. ೧೩. ಸಪ್ತದ್ವೀಪ ಮತ್ತು ಸಪ್ತಸಾಗರಗಳ ವಿಸ್ತಾರ ಎರಡೂವರೆ ಕೋಟಿ ಮೂರುವರೆ ಲಕ್ಷ ಯೋಜನ. ಬಂಗಾರದ ಭೂಮಿ ಹತ್ತುಕೋಟಿ. ನೋಡಲಾಗಿ ಲೋಕಾಲೋಕ ಪರ್ವತವು ಹತ್ತುಕೋಟಿ.ಆ ಪರ್ವತದ ಹೊರಭಾಗದ ಕತ್ತಲೆಯು ಎರಡುಕೋಟಿ ನಲವತ್ತಾರೂವರೆ ಲಕ್ಷ. ಈ ರೀತಿಯಾಗಿ ಮೇರುಪರ್ವತದ ಅತ್ತಕಡೆಯ ಅಂದರೆ ಉತ್ತರ ಭಾಗ ಇಪ್ಪತ್ತೈದು ಕೋಟಿ ಯೋಜನದಷ್ಟು ವಿಶಾಲವಾದುದು. ೧೪. ಕೇಳಯ್ಯ ಸಿದ್ಧರಾಮ, ಸವನ, ಭವ್ಯ, ದ್ಯುತಿಮಾನ್, ಜ್ಯೋತಿಷ್ಮಾನ್, ವಪುಷ್ಮಾನ್, ಮೇಧಾತಿ, ಅಗ್ನೀಂದ್ರ

CC-0. Jangamwadi Math Collection. Digitized by eGangotri

ಮನ್ನಣೆಯೊಳಾ ಪ್ರಿಯವ್ರತಮಹೀಪಾಲಕಂ
ಮುನ್ನ ಪೇಳ್ದಾ ದ್ವೀಪದೊಳ್ ಪುಷ್ಕರಾದಿಗಳ
ನುನ್ನತ ಪ್ರೀತಿಯಿಂದೀಯೆ ಜಂಬೂದ್ವೀಪಕಗ್ನೀಂಧ್ರನರಸಾದನು ೧೪

ಪರಿಗಣಿಸಲಗ್ನೀಂಧ್ರನಂದನರ್ ನಾಭಿಕಿಂ
ಪುರುಷರುಂ ಹರಿಯಿಳಾವೃತರಮ್ಯಕರ್ ಮತ್ತೆ
ವರಹಿರಣ್ಮಯ ಕುರುನೃಪಂ ನೆಗಳ್ದ ಭದ್ರಾಶ್ವ ಕೇತುಮಾಲ್ಯಾದಿಗಳ್ಗೆ
ಧರೆಯನೊಂಬತ್ತುಭಾಗಂ ಮಾಡಿಕೊಡಲವರ
ವರ ಪೆಸರ್ಗಳವಕಾದುವಾ ನಾಭಿಗಂ ವೃಷಭ
ಧರಣಿಪತಿಯಾತಂಗೆ ಭರತನಾತನ ಪೆಸರ ಭರತಖಂಡಮುದಾದುದು ೧೫

ಸುರಗಿರಿಯ ತೆಂಕಣದಿಶಾಭಾಗದೊಳಗಿರ್ಪ
ಭರತಖಂಡದ ಭೂಮಿ ತಿಳಿಯೆ ಹನ್ನೆರಡುಸಾ
ವಿರದ ವಿಸ್ತೀರ್ಣವದು ಬಿಲ್ಲಂತೆ ಮೂರು ದಿಕ್ಕಿಂಗೆ ಲವಣಾಬ್ಧಿ ಮೆರೆಯೆ
ವರಹಿಮಾಚಲಮದರ ಬಡಗ ಪೂರ್ವಾಪರದ
ಶರಧಿಗಾಂತೆರಡು ಸಾಸಿರದುದ್ದಮಗಲ ಸಾ
ಸಿರದಿಂದಲೊಪ್ಪುವುದು ತತ್‌ಖಂಡಮುದು ಚಿತ್ರವರ್ಣದಿಂ ರಂಜಿಸುವುದು ೧೬

ಕಂಪುವೆಟ್ಟದ ಬಡಗಭಾಗದೊಳಗೊಪ್ಪುವುದು
ಕಿಂಪುರುಷ ವರ್ಷಮೇಕಾದಶಸಹಸ್ರದಗ
ಲಿಂ ಪೊಳೆವ ಕನಕವರ್ಣಂ ನೀಳಮಾಗಿ ಪೂರ್ವಾಪರಾಬ್ಧಿಯೆ ಗಡಿಯೆನೆ

ಎಂಬ ತನ್ನ ಏಳು ಮಂದಿ ಮಕ್ಕಳಿಗೆ ಪ್ರಿಯವ್ರತ ಮಹಾರಾಜನು ಈ ಮೊದಲು ಹೇಳಿದ ದ್ವೀಪವಲ್ಲಿ ಪುಷ್ಕರಾದಿಗಳನ್ನು ಪ್ರೀತಿಯಿಂದ ಕೊಡಲು ಜಂಬೂದ್ವೀಪಕ್ಕೆ ಅಗ್ನೀಂಧ್ರನು ರಾಜನಾದನು. ೧೫. ಪರೀಕ್ಷಿಸಲು ಆ ಅಗ್ನೀಂಧ್ರನ ಮಕ್ಕಳು ನಾಭಿ,ಕಿಂಪುರುಷ, ಹರಿ, ಇಳಾವೃತ, ರಮ್ಯಕ, ಹಿರಣ್ಮಯ, ಕುರುನೃಪ, ಭದ್ರಾಶ್ವ, ಕೇತುಮಾಲ್ಯ ಇವರುಗಳಿಗೆ ಭೂಮಿಯನ್ನು ಒಂಬತ್ತು ಭಾಗಮಾಡಿ ಹಂಚಿಕೊಟ್ಟನು. ಅವರವರು ಇರುವ ಭಾಗಕ್ಕೆ ಅವರವರ ಹೆಸರಾಯಿತು. ನಾಭಿಗೆ ವೃಷಭರಾಜನು ಹುಟ್ಟಿದ. ಅವನಿಗೆ ಭರತನು ಮಗನಾದನು. ಅವನ ಹೆಸರಿನಿಂದ ಈ ಭರತಖಂಡವಾಯಿತು. ೧೬. ಮೇರುಪರ್ವತದ ದಕ್ಷಿಣ ಭಾಗದಲ್ಲಿ ಇರುವ ಭೂಮಿಯೇ ಭರತಖಂಡ. ಅದು ಹನ್ನೆರಡು ಸಾವಿರ ಯೋಜನದಷ್ಟು ವಿಸ್ತೀರ್ಣವಾಗಿದೆ, ಬಿಲ್ಲಿನಾಕಾರದಲ್ಲಿದೆ. ಅದರ ಮೂರು ದಿಕ್ಕುಗಳಲ್ಲಿಯೂ ಲವಣ ಸಮುದ್ರವು ಮೆರೆಯುತ್ತಿದೆ. ಉತ್ತರ ಭಾಗದಲ್ಲಿ ಪಾವನಕರವಾದ ಹಿಮಾಲಯ ಪರ್ವತವು ಪೂರ್ವ ಮತ್ತು ಪಶ್ಚಿಮ ಸಮುದ್ರದವರೆಗೂ ಹಬ್ಬಿದೆ.ಇದರ ಅಳತೆ–ಎರಡು ಸಾವಿರದಷ್ಟು ಉದ್ದ, ಒಂದು ಸಾವಿರದಷ್ಟು ಅಗಲ. ಆ ಖಂಡವು ವಿಚಿತ್ರವಾದ ಕಾಂತಿಯಿಂದ ಶೋಭಿಸುತ್ತಿದೆ. ೧೭. ಹಿಮಾಚಲದ ಉತ್ತರದಿಕ್ಕಿನಲ್ಲಿ ಕಿಂಪುರುಷ ದೇಶವಿದೆ. ಅದು ಹನ್ನೊಂದು ಸಾವಿರ ಯೋಜನದಷ್ಟು ವಿಸ್ತಾರವಾಗಿದೆ. ಆ ಬಂಗಾರದ

CC-0. Jangamwadi Math Collection. Digitized by eGangotri

ಸೊಂಪಿನಿಂದಿಹುದು ಹೇಮಾದ್ರಿಯುದರುತ್ತರದೊ
ಳೇಂ ಪೇಳ್ವೆನಾ ಶೈಲದುದ್ದವೊಂದೇ ಸಾಸಿ
ರಂ ಪರಪದಯ್ನೂರು ಯೋಜನಂ ಪೇಳಲೇನದರ ಸೌಖ್ಯಸ್ಥಿತಿಯನು 18

ಹೇಮಶಿಖರಿಯ ಬಡಗಲೊಪ್ಪುವುದು ಹರಿವರ್ಷ
ಭೂಮಿ ದಶಸಾಹಸ್ರ ಯೋಜನಂ ಕಾಂತಿಯುಂ
ಹೇಮವರ್ಣಂ ಮೂಡ ಪಡುವಣ ಸಮುದ್ರಗಡಿಯುದ್ದ ಸಾಸಿರಯೋಜನಂ
ಆಮೇಲಣಗಲಯ್ನೂರರಿಂ ನಿಷಧಗಿರಿ
ಸೀಮೆಯಾಗಿಹುದು ಬಡಗಣ ದಿಕ್ಕಿನೊಳ್ ಸಿದ್ಧ
ರಾಮ ಕೇಳಿನ್ನಿಳಾವೃತದ ವಿಸ್ತಾರವಂ ನೀನೆಂದು ನಿರವಿಸಿದನು 19

ಕನಕಾಚಲದ ಚತುರ್ಭಾಗದೊಳಿಳಾವೃತಂ
ಕನಕಮಯಭೂಮಿಯಿಂದಿಹುದದರ ಬಡಗದಿ
ಕ್ಕಿನೊಳೆಸೆವ ನೀಲಾಚಲಂ ಮೇರೆ ತೆಂಕ ನಿಷಧಾಚಲಂ ಗಡಿ ಪಡುವಲು
ಘನಗಂಧಮಾದನಂ ಕಡೆ ಮೂಡ ಮಾಲ್ಯವಾ
ನೆನಿಪದ್ರಿಯೊತ್ತಾಗೆ ತದ್ಗಿರಿಯ ನಾಲ್ಕು ದಿ
ಕ್ಕಿನೊಳಿರವೆ ಮಂದರಂ ಮೊದಲಾಗಿ ನಿಷ್ಕಂಭಗಿರಿಚತುಷ್ಟಯಮಿರ್ಪುದು 19

ನೀಲಗಿರಿಯೊಂದು ಸಾಸಿರದುದ್ದಮನಿತೇ ವಿ
ಶಾಳಮದರುತ್ತರದೊಳಂ ಹತ್ತು ಸಾಸಿರದ
ನೀಳದಿಂದಪರ ಪೂರ್ವಾಬ್ಧಿ ಗಡಿಯಾಗಿಹುದು ರಮ್ಯಕಂ ಕನಕವರ್ಣಂ

ಬಣ್ಣದ ಭೂಮಿಗೆ ಪೂರ್ವ–ಪಶ್ಚಿಮ ಸಮುದ್ರಗಳೇ ಗಡಿಗಳು. ಅದರ ಉತ್ತರ ಭಾಗದಲ್ಲಿ ಹೇಮಾದ್ರಿಪರ್ವತವು ಬಹಳ ಚೆಲುವಾಗಿದೆ. ಏನು ಹೇಳಲಿ ? ಆ ಬೆಟ್ಟದ ಉದ್ದವೇ ಒಂದು ಸಾವಿರ ಯೋಜನ, ಅಗಲ ಐನೂರು ಯೋಜನ. ಅದರ ಸುಖದ ಸ್ಥಿತಿಯನ್ನು ಏನು ಹೇಳಲಿ ? 18. ಆ ಹೇಮಾದ್ರಿಯ ಉತ್ತರ ಭಾಗದಲ್ಲಿ ಹರಿವರ್ಷ ಭೂಮಿ ಇದೆ. ಅದು ಹತ್ತುಸಾವಿರ ಯೋಜನವಿದೆ.ಅದು ಚಿನ್ನದ ಕಾಂತಿಯುಳ್ಳದ್ದು. ಪೂರ್ವ–ಪಶ್ಚಿಮ ಸಮುದ್ರದ ಗಡಿಯ ಉದ್ದ ಒಂದು ಸಾವಿರ ಯೋಜನ. ಆ ಮೇಲಿನ ಅಗಲ ಐನೂರು ಯೋಜನ. ಅದರ ಉತ್ತರ ದಿಕ್ಕಿನಲ್ಲಿ ನಿಷಧಪರ್ವತ ಗಡಿಯಾಗಿದೆ. ಸಿದ್ಧರಾಮ, ಇನ್ನು ಇಳಾವೃತದ ವಿಸ್ತಾರವನ್ನು ಕೇಳು'' ಎಂದು ವಿವರಿಸಿದನು. 19. ''ಮೇರುಪರ್ವತದ ನಾಲ್ಕು ಭಾಗದಲ್ಲಿ ಆವೃತವಾಗಿ ಇಳಾವೃತವಿದೆ. ಅದು ಕನಕಮಯವಾಗಿದೆ. ಅದರ ಉತ್ತರಕ್ಕೆ ಪ್ರಸಿದ್ಧವಾದ ನೀಲಾಚಲವಿದೆ. ದಕ್ಷಿಣ ಭಾಗದಲ್ಲಿ ನಿಷಧಾಚಲವಿದೆ. ಪಶ್ಚಿಮಕ್ಕೆ ಗಂಧಮಾಧನ ಪರ್ವತವಿದೆ. ಪೂರ್ವಕ್ಕೆ ಮಾಲ್ಯವಂತ ಪರ್ವತವಿದೆ. ಒತ್ತೊತ್ತಾಗಿ ಆ ಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಮಂದರ ಮೊದಲಾದ ನಾಲ್ಕು ನಿಷ್ಕಂಭ ಪರ್ವತಗಳು ಇವೆ. 20. ನೀಲಗಿರಿಯು ಒಂದು ಸಾವಿರ ಯೋಜನ ಉದ್ದವಾಗಿದೆ. ಅಷ್ಟೇ ವಿಶಾಲವಾಗಿದೆ. ಅದರ ಉತ್ತರ ದಿಕ್ಕಿನಲ್ಲಿ ಹತ್ತು

CC-0. Jangamwadi Math Collection. Digitized by eGangotri

ಪೇಳಲೇನದಕವಧಿಯಾಗಿ ಬಡಗಲ್ ಶ್ವೇತ
ಶೈಲವಿಪ್ಪುದು ಸಹಸ್ರೋನ್ನತಂ ತದ್ಗಿರಿಯ
ಮೇಲಗಲವನಿತದರ ಬಡಗದಿಶೆಯೊಳು ಹಿರಣ್ಮಯವರ್ಷಮಂ ಪೇಳ್ವೆನು ೨೦

ಹನ್ನೊಂದು ಸಾಸಿರದ ಯೋಜನದ ನೀಳದಿಂ
ಮುನ್ನ ಪೇಳ್ದಂತುಭಯವಾರ್ಧಿಗಡಿಯಾಗಿ ಪೊಸ
ಚಿನ್ನದಂತಿರೆ ಕಾಂತಿಯೆಸೆವುದದಕವಧಿಯೇ ಶೃಂಗಪರ್ವತಮದಕ್ಕೆ
ಉನ್ನತಂ ಸಾಸಿರಂ ಹರಹು ಸಾಸಿರವಾಗ
ಲಿನ್ನದರ ಬಡಗದಿಕ್ಕಿನೊಳಿಹುದು ಕುರುಭೂಮಿ
ಹನ್ನೆರಡುಸಾಸಿರದ ತೆರಪಿನಿಂ ಪೂರ್ವಾಪರೋತ್ತರಾಬ್ಧಿಯೆ ಗಡಿಯೆನೆ ೨೧

ಸುರಗಿರಿಯ ಮೂಡಣ ದೆಸೆಯೊಳಿಹುದು ಭದ್ರಾಶ್ವ
ವರುಷವದು ಪೂರ್ವಾಬ್ಧಿ ಮೇರೆ ಪಶ್ಚಿಮಕೆ ಘನ
ಗಿರಿ ಮಾಲ್ಯವಂತನೇ ಗಡಿ ತ್ರಯತ್ರಿಂಶತ್ ಸಹಸ್ರಯೋಜನದ ಹರವು
ಇರೆ ದಕ್ಷಿಣೋತ್ತರಕೆ ಮೂವತ್ತುನಾಲ್ಕು ಸಾ
ಸಿರದಳತೆ ಜಠರಗಿರಿ ದೇವಕೂಟಾದ್ರಿಗಳ್
ಪರಿಗಣನೆಗಿಪ್ಪತ್ತುಸಾಸಿರಂ ದಕ್ಷಿಣೋತ್ತರಕುನ್ನತಂ ಸಾಸಿರಂ ೨೨

ಸಾವಿರ ಯೋಜನ ಉದ್ದವಿರುವ ಪೂರ್ವ–ಪಶ್ಚಿಮ ಸಮುದ್ರಗಳೇ ಗಡಿಯಾಗಿ ಉಳ್ಳದ್ದು ರಮ್ಯಕ ದೇಶ. ಅದು ಹೊನ್ನಬಣ್ಣದ ನಾಡು. ಅದಕ್ಕೆ ಉತ್ತರದಲ್ಲಿ ಗಡಿಯಾಗಿ ಶ್ವೇತ ಪರ್ವತವಿದೆ. ಅದು ಸಾವಿರ ಯೋಜನದಷ್ಟು ಎತ್ತರವಾಗಿದೆ, ಅಷ್ಟೇ ಅಗಲವಾಗಿದೆ. ಅದರ ಉತ್ತರಭಾಗದಲ್ಲಿ ಹಿರಣ್ಮಯದೇಶವಿದೆ. ಅದನ್ನು ಹೇಳುತ್ತೇನೆ. ೨೧. ಅದರ ಉದ್ದ ಹನ್ನೊಂದು ಸಾವಿರ ಯೋಜನ. ಈ ಮೊದಲೇ ಹೇಳಿದ ಹಾಗೆ ಎರಡು ಸಮುದ್ರಗಳೂ ಅದರ ಗಡಿಗಳು. ಹೊಸದಾದ ಚಿನ್ನದ ಕಾಂತಿಯಿಂದ ಆ ಹಿರಣ್ಮಯ ದೇಶ ಕೂಡಿದೆ. ಅದಕ್ಕೆ ಗಡಿಯೇ ಶೃಂಗಪರ್ವತ. ಅದರ ಎತ್ತರ ಮತ್ತು ಅಗಲ ಸಾವಿರ ಯೋಜನ. ಅದರ ಉತ್ತರ ದಿಕ್ಕಿನಲ್ಲಿ ಕುರುಭೂಮಿ ಇದೆ. ಅದು ಪೂರ್ವ ಮತ್ತು ಉತ್ತರ ಸಮುದ್ರವನ್ನೇ ಗಡಿಯಾಗಿ ಹೊಂದಿದ್ದು ಹನ್ನೆರಡು ಸಾವಿರ ಯೋಜನದಷ್ಟು ವಿಸ್ತಾರವಾಗಿದೆ. ೨೨. ಮೇರುಪರ್ವತದ ಪೂರ್ವದಿಕ್ಕಿನಲ್ಲಿ ಭದ್ರಾಶ್ವವೆಂಬ ದೇಶವಿದೆ. ಆ ದೇಶದ ಪೂರ್ವದಿಕ್ಕಿನ ಗಡಿ ಪೂರ್ವಸಮುದ್ರ. ಪಶ್ಚಿಮದಿಕ್ಕಿನ ಗಡಿ ದೊಡ್ಡದಾದ ಮಾಲ್ಯವಂತಪರ್ವತ. ಅದರ ವಿಸ್ತಾರ ಒಂಬತ್ತು ಲಕ್ಷ ಯೋಜನ. ದಕ್ಷಿಣೋತ್ತರವಾಗಿ ಮೂವತ್ತು ಸಾವಿರ ಯೋಜನವಿದೆ. ಆ ಭಾಗದಲ್ಲಿ ಜಠರಗಿರಿ, ದೇವಕೂಟಾದ್ರಿಗಳಿವೆ. ಅವು ಲೆಕ್ಕ ಹಾಕಿದರೆ ದಕ್ಷಿಣೋತ್ತರವಾಗಿ ಇಪ್ಪತ್ತು ಸಾವಿರ ಯೋಜನ ಉದ್ದವೂ

CC-0. Jangamwadi Math Collection. Digitized by eGangotri

ವರಕೇತುಮಾಲ್ಯವರ್ಷಂ ಪಶ್ಚಿಮಾಬ್ಧಿ ಗಡಿ
ಗಿರಿ ಗಂಧಮಾದನಂ ಮೊದಲೊತ್ತಾಗಿಹುದು
ಪರಿಗಣನೆ ಮೂವತ್ತುಮೂರ್ಸಾಸಿರಂ ದಕ್ಷಿಣೋತ್ತರಕ್ಕೊಂದು ಮಿಗಿಲು
ಪರಿಕಿಸಲಿಳಾವೃತಕ್ಕೀ ಪ್ರಮಾಣಂ ಪವನ
ಗಿರಿ ಪಾರಿಯಾತ್ರಂಗಳಿಪ್ಪತ್ತುಮೈದುಸಾ
ಸಿರದ ನೀಳಂ ದಕ್ಷಿಣೋತ್ತರಕುನ್ನತಂ ಸಾಸಿರದೊಳಿರುತಿರ್ಪುವು 	೨೩

ಹರಿವರ್ಷದೊಳಗೆಸೆವ ಕರವೀರ ಕೈಲಾಸ
ಗಿರಿಗಳಿಪ್ಪತ್ತೈದು ಸಾಸಿರದ ನೀಳದಿಂ
ದಿರುತಿರ್ಪುವಪರಪೂರ್ವಾಶಾಭಿಮುಖಮದು ತ್ರಿಸಾಸಿರಂ ರಜತವರ್ಣಂ
ಇರವೆ ರಮ್ಯಕದೊಳಿಹ ಶೃಂಗಮಕರವುಮೆಂಬ
ಗಿರಿಯುಗಳಮಿಪ್ಪತ್ತೈಸಾಸಿರದ ನೀಳದಿಂ
ದಿರವಪರ ಪೂರ್ವಾಭಿಮುಖಮಾಗಿ ಮೂರು ಸಾಸಿರಮುನ್ನತದೊಳಿರ್ಪುವು 	೨೪

ಪನ್ನೆರಡು ಸಾಹಸ್ರ ಯೋಜನಪರಿಪ್ರಮಾ
ಣೋನ್ನತಂ ನಾಲ್ಕುವರೆಸಾಸಿರದ ನೀಳಮಗ
ಲಂ ನೋಡೆ ಮೂರುಸಾವಿರದಿಂದೆ ಮುನ್ನಮುಸಿರ್ದಂತೆ ಮಂದರಮಿರ್ಪುದು

ಒಂದು ಸಾವಿರ ಯೋಜನ ಎತ್ತರವೂ ಇದೆ. ೨೩. ಶ್ರೇಷ್ಠವಾದ ಕೇತುಮಾಲ್ಯ ದೇಶವು ಇದೆ. ಅದರ ಪಶ್ಚಿಮ ದಿಕ್ಕಿನ ಗಡಿ ಪಶ್ಚಿಮಸಮುದ್ರ. ಗಂಧಮಾದನ ಪರ್ವತವು ಅದರ ಪೂರ್ವದಿಕ್ಕಿಗೆ ಇದೆ. ಲೆಕ್ಕ ಹಾಕಿದರೆ ಅದು ಮೂವತ್ತಮೂರು ಸಾವಿರ ಯೋಜನವಿದೆ. ದಕ್ಷಿಣೋತ್ತರಕ್ಕೆ ಒಂದು ಸಾವಿರ ಯೋಜನ ಹೆಚ್ಚಾಗಿದೆ. ಪರೀಕ್ಷಿಸಿದರೆ ಇಳಾವೃತಕ್ಕೂ ಇಷ್ಟೇ ಅಳತೆ. ಇದರ ದಕ್ಷಿಣೋತ್ತರಕ್ಕೆ ಪವನಗಿರಿ, ಪಾರಿಯಾತ್ರಗಳು ಇಪ್ಪತ್ತೈದು ಸಾವಿರ ಯೋಜನ ಉದ್ದವಿದೆ, ಎತ್ತರ ಸಾವಿರ ಯೋಜನವಿದೆ. ೨೪. ಹರಿವರ್ಷದಲ್ಲಿ ಕರವೀರ–ಕೈಲಾಸಗಿರಿಗಳು ಇವೆ. ಅವು ಇಪ್ಪತ್ತೈದು ಸಾವಿರ ಯೋಜನಗಳ ಉದ್ದವಿದೆ. ಪೂರ್ವ–ಪಶ್ಚಿಮದಿಕ್ಕಿಗೆ ಮೂರು ಸಾವಿರ ಯೋಜನವಿದೆ. ಬಿಳಿಯ ಬಣ್ಣದಿಂದ ಕೂಡಿದೆ. ರಮ್ಯಕದೇಶದಲ್ಲಿ ಇರುವ ಶೃಂಗ ಮತ್ತು ಮಕರ ಎಂಬ ಎರಡು ಪರ್ವತಗಳು ಪೂರ್ವ-ಪಶ್ಚಿಮವಾಗಿ ಇಪ್ಪತ್ತೈದು ಸಾವಿರ ಯೋಜನ ಉದ್ದ ಮತ್ತು ಮೂರು ಸಾವಿರ ಯೋಜನಗಳ ಎತ್ತರವಿವೆ. ೨೫. ಈ ಮೊದಲೇ ಹೇಳಿದಂತೆ ಪರ್ವತವು ಹನ್ನೆರಡು ಸಾವಿರ ಯೋಜನ ಎತ್ತರವಾಗಿಯೂ, ನಾಲ್ಕುವರೆ ಸಾವಿರ ಯೋಜನ ಉದ್ದವಾಗಿಯೂ, ಮೂರು ಸಾವಿರ

CC-0. Jangamwadi Math Collection. Digitized by eGangotri

ಇನ್ನದರ ತುದಿಯೊಳಿಹ ಕಡವದ ಮರಂ ಸಹ
ಸ್ರೋನ್ನತಂ ವಿಸ್ತಾರಮುಂ ಚೈತ್ರರಥವನಂ
ತನ್ನಗದೊಳಿಹುದು ಸಾಸಿರದಗಲದಿಂದಲ್ಲಿ ಕೊಳನೊಂದು ರಂಜಿಸುವುದು ೨೫

ಕನಕಾಚಲದ ತೆಂಕಭಾಗದೊಳ್ ಗಂಧಮಾ
ದನನಗಂ ನಾಲ್ಕುವರೆಸಾಸಿರದ ನೀಳಮುಂ
ಮಿನುಮಿನುಪ ಪವಳವಣ್ಣಂ ಮೂರುಸಾವಿರದ ವಿಸ್ತರಂ ಮೇಣುನ್ನತಂ
ದಿನಪಸಾಹಸ್ರಮುದರೊಳಗೆ ಜಂಬೂಕುಜಂ
ಘನವಾಗಿ ಸಾಹಸ್ರಯೋಜನೌನ್ನತ್ಯದಿಂ
ದನುದಿನಂ ತೋರ್ಪುದಾನೆಗಳ ತೋರೆಯು ಪಣ್ಗಳಾ ಕುಜದೊಳಿರ್ದಿರ್ಪುವು ೨೬

ನೆಲಕೆ ಬಿದ್ದೊಡೆದ ರಸ ಜಾಂಬೂನದಾಖ್ಯೆಯಿಂ
ಸಲೆ ಪರಿವುದಲ್ಲಿ ಜಂಬೂದ್ವೀಪನಾಮಮುಂ
ದಿಳೆಗೆ ಸಂದುದು ಗಂಧಮಾದನೆಂಬಾ ವನಂ ತನ್ನಾಮಸರಸಿಯಿಹುದು
ತಿಳಿಯೆ ಸುರಗಿರಿಯ ಪಶ್ಚಿಮಭಾಗದೊಳಗೊಂದು
ನೆಲಸಿಹುದು ನಿಷ್ಕಂಭಗಿರಿ ಮೂರುಸಾವಿರದ
ಗಲವಾರುಸಾವಿರ ಸ್ಥೂಲಮದು ನಾಲ್ಕುವರೆ ಸಾವಿರದ ನೀಳಮಿಹುದು ೨೭

ಯೋಜನ ಅಗಲವಾಗಿಯೂ ಇದೆ. ಇನ್ನು ಅದರ ತುದಿಯಲ್ಲಿ ಇರುವ ತಾಳೆಮರ ಸಾವಿರಯೋಜನ ಎತ್ತರವೂ, ವಿಸ್ತಾರವೂ ಆಗಿದೆ. ಆ ಪರ್ವತದಲ್ಲಿ ಚೈತ್ರರಥವನವೂ ಇದೆ. ಅದು ಒಂದು ಸಾವಿರ ಯೋಜನ ಅಗಲವಿದೆ. ಅಲ್ಲಿ ಒಂದು ಸರೋವರವು ಕಂಗೊಳಿಸುತ್ತದೆ. ೨೬. ಮೇರುಪರ್ವತದ ದಕ್ಷಿಣಭಾಗದಲ್ಲಿ ಗಂಧಮಾದನವೆಂಬ ಪರ್ವತವಿದೆ. ಅದು ನಾಲ್ಕುವರೆ ಸಾವಿರ ಯೋಜನ ಉದ್ದವಿದೆ. ಪ್ರಜ್ವಲಿಸುವ ಹವಳದ ಬಣ್ಣದಿಂದ ಕೂಡಿದೆ. ಮೂರು ಸಾವಿರ ಯೋಜನದಷ್ಟು ವಿಸ್ತಾರವಾಗಿದೆ. ಅದರ ಎತ್ತರ ಹನ್ನೆರಡು ಸಾವಿರ ಯೋಜನ. ಅದರಲ್ಲಿ ದೊಡ್ಡದಾದ ನೇರಳೆ ಮರವೊಂದಿದೆ. ಅದರ ಎತ್ತರ ಒಂದುಸಾವಿರ ಯೋಜನ. ಆ ಮರದಲ್ಲಿ ಪ್ರತಿದಿನವೂ ಆನೆಗಳ ಗಾತ್ರದ ಹಣ್ಣುಗಳು ತುಂಬಿರುತ್ತವೆ. ೨೭.(ಆ ನೇರಳೆ ಮರದಿಂದ) ನೆಲಕ್ಕೆಬಿದ್ದು ಒಡೆದುಹೋದ ಹಣ್ಣಿನ ರಸವು ಜಾಂಬೂನದವೆಂಬ ಹೆಸರಿನಿಂದ ನದಿಯಾಗಿ ಹರಿಯುತ್ತಿದೆ. ಇದರಿಂದ ಆ ಭೂಭಾಗಕ್ಕೆ ಜಂಬೂದ್ವೀಪವೆಂಬ ಹೆಸರಾಯಿತು. ಅಲ್ಲಿ ಗಂಧಮಾದನವೆಂಬ ವನವೂ ಅದೇ ಹೆಸರಿನ ಸರೋವರವೂ ಇದೆ. (ಸುರಗಿರಿಯ) ಮೇರುಪರ್ವತದ ಪಶ್ಚಿಮ ಭಾಗದೊಳಗೆ ನಿಷ್ಕಂಭಗಿರಿ ನೆಲಸಿದೆ. ಅದರ ಅಗಲ ಮೂರು ಸಾವಿರ ಯೋಜನ. ಅದರ ದಪ್ಪ ಮೂರು ಸಾವಿರ ಯೋಜನ. ಅದರ ಉದ್ದ ನಾಲ್ಕುವರೆ ಸಾವಿರ ಯೋಜನ.

CC-0. Jangamwadi Math Collection. Digitized by eGangotri

ಅರಳಿಯೊಂದಾ ಗಿರಿಯ ತುದಿಯೊಳಿಹುದೊಂದುಸಾ
ಸಿರದುದ್ದವಲ್ಲಿ ವೈಭ್ರಾಜವೆಂಬಾ ವನಂ
ಸರಸಿಯೊಂದತಿನಿರ್ಮಳೋದಕದಿನೊಪ್ಪುತಿಹುದಾ ವನದ ನಟ್ಟನಡುವೆ
ಒರೆವೆನುತ್ತರದಿಳಾವೃತದೊಳಗೆ ನಿಷ್ಕಂಭ
ಗಿರಿ ಮೂರುಸಾಸಿರದ ಹರಹು ತಿಳಿಯಲ್ಕೆ ಹ
ನ್ನೆರಡುಸಾಸಿರಯೋಜನೋನ್ನತಂ ನಾಲ್ಕುವರೆಸಾಸಿರದ ನೀಳವಿಹುದು ೨೮

ಆಲವಿಹುದದರಗ್ರದೇಶದೊಳಗುರುತರವಿ
ಶಾಲವುದರುನ್ನತಂ ಸಾಹಸ್ರಯೋಜನಂ
ಪೇಳಲೇಂ ನಂದನವನಂ ಸಾವಿರದ ತೆರಹಿನಿಂದಿಹುದು ಸರಸಿಯೊಂದು
ನೀಳಮೈನೂರ್ ಮಹಾಭದ್ರಯೆಂಬಭಿಧಾನ
ವಾಲಿಸೈ ರಾಮ ನಿಷ್ಕಂಬಗಳ ನಡುವೆ ದಿವಿ
ಜಾಲಯಂ ಲಕ್ಷಯೋಜನದ ಪರಿಗಣನೆಯಿಂದಿಹುದು ಕಾಂಚನಮಯದೊಳು ೨೯

ನೆಲದೊಳಗೆ ಪದಿನಾರುಸಾವಿರದ ಯೋಜನವು
ದಿಳಿದಿಹುದು ತೋರವುನಿತಲ್ಲಿಹುದು ಸಂತತಂ
ತಿಳಿಯಲ್ಕೆ ಮೇಲೆ ಚೌರಾಸೀತಿಯೋಜನಂ ಸ್ಥೂಲದಿಂ ಕಾಣಸುವುದು
ಬಳಸಿಕೊಂಡಿಹುವೆಂಟು ದಿಕ್ಕಿನೊಳ್ ದಿಕ್ಪಾಲ
ಕುಲದ ನಗರಂಗಳುಂ ಮತದ ಹೂವಿನ ಲೆಕ್ಕ
ದೊಳೆ ಮೆರೆವುದೆಲೆ ಸಿದ್ಧರಾಮ ಕೇಳಿನ್ನದರ ಮೇಲಣ ಸುವಿಸ್ತರವನು ೩೦

೨೮. ಆ ಪರ್ವತದ ತುದಿಯಲ್ಲಿ ಒಂದು ಸಾವಿರ ಯೋಜನ ಉದ್ದವಿರುವ ಅರಳೀಮರ ವೊಂದಿದೆ. ಅಲ್ಲಿ ವೈಭ್ರಾಜವೆನ್ನುವ ವನವಿದೆ. ಆ ವನದ ಮಧ್ಯೆ ನಿರ್ಮಲವಾದ ನೀರಿನಿಂದ ಕಂಗೊಳಿಸುತ್ತಿರುವ ಸರೋವರ ಒಂದಿದೆ. ಹೇಳುತ್ತೇನೆ ಕೇಳು, ಉತ್ತರ ಇಳಾವೃತದೊಳಗೆ ನಿಷ್ಕಂಭಗಿರಿ ಇದೆ. ಅದು ಮೂರು ಸಾವಿರ ಯೋಜನ ವಿಸ್ತಾರ ವಾಗಿದೆ. ಯೋಚಿಸಲು ಹನ್ನೆರಡು ಸಾವಿರ ಯೋಜನ ಎತ್ತರವಾಗಿದೆ, ನಾಲ್ಕುವರೆ ಸಾವಿರ ಯೋಜನ ಉದ್ದವಿದೆ. ೨೯. ಅದರ ತುದಿಯಲ್ಲಿ ವಿಶಾಲವಾದ ಒಂದು ಆಲದ ಮರವಿದೆ. ಅದರ ಎತ್ತರ ಸಾವಿರ ಯೋಜನ. ಏನು ಹೇಳಲಿ ? ಅಲ್ಲಿ ನಂದನವನ ವೊಂದಿದೆ. ಅಲ್ಲಿ ಮಹಾಭದ್ರವೆಂಬ ಹೆಸರಿನ ಒಂದು ಸರೋವರವಿದೆ. ಅದರ ವಿಸ್ತಾರ ಐನೂರು ಯೋಜನ. ಅದು ಸಾವಿರ ಯೋಜನ ಉದ್ದವಿದೆ. ಕೇಳಯ್ಯ ಸಿದ್ಧರಾಮ, ನಿಷ್ಕಂಭಗಳ ಮಧ್ಯದಲ್ಲಿ ಅಮರಾವತಿ ಇದೆ. ಅದು ಸುವರ್ಣಮಯವಾಗಿದೆ ಮತ್ತು ಲಕ್ಷ ಯೋಜನದಷ್ಟು ವಿಸ್ತಾರವಾಗಿದೆ. ೩೦. ಆ ಅಮರಾವತಿಯು ಹದಿನಾರು ಸಾವಿರ ಯೋಜನದಷ್ಟು ನೆಲದೊಳಗೆ ಇಳಿದಿದೆ. ಅಷ್ಟೇ ಗಾತ್ರವಾಗಿಯೂ ಇದೆ. ಯಾವಾಗಲೂ ಮೇಲೆ ಚತುರಸ್ರ ಯೋಜನದಷ್ಟು ಗಾತ್ರವಾಗಿ ಕಾಣಿಸುತ್ತದೆ. ಅದರ ಎಂಟು ದಿಕ್ಕಿನಲ್ಲಿಯೂ ದಿಕ್ಪಾಲಕರ ವಂಶದ ನಗರಗಳು ಬಳಸಿಕೊಂಡಿವೆ. ಅವು ಉಮ್ಮತ್ತಿ (ದತ್ತೂರಿ) ಹೂವಿನ ಆಕಾರದಲ್ಲಿ ಶೋಭಿಸುತ್ತಿವೆ. ಎಲೆ ಸಿದ್ಧರಾಮ, ಇನ್ನು ಅದರ ಮೇಲಿನ

CC-0. Jangamwadi Math Collection. Digitized by eGangotri

ಮೇರುವಿನ ಮೇಲೆ ಬತ್ತೀಸಸಾವಿರವ ವಿ
ಸ್ತಾರವುದರೊಳಗೀಶ್ವರಂಗೆ ಮನೆಯೊಂದಿಹುದು
ಚಾರುಮಣಿಮುಡಿತಂ ಧರೆಗೊಂದುಲಕ್ಷಯೋಜನದೊಳ್ ಭುವರ್ಲೋಕವು
ಸೇರಿರ್ಪುದದಕೆ ರವಿಯೊಡೆಯನೆರಡೇ ಲಕ್ಷ
ದೂರದೊಳಗಿಂದುವಿರ್ಪಂ ಮೂರುಲಕ್ಷದೊಳ್
ತಾರಕೆಗಳಿಹುದೈದುಲಕ್ಷದೊಳ್ ಬುಧನಿರ್ಪನೆಲೆ ರಾಮ ಕೇಳೆಂದನು ೩೧

ಧರೆಗೇಳುಲಕ್ಷ ಯೋಜನದುದ್ದದೊಳ್ ಶುಕ್ರ
ನಿರವು ನವಲಕ್ಷ ಯೋಜನದೊಳಗೆ ಮಂಗಳಂ
ಗುರುವಿರ್ಪನೇಕಾದಶಪ್ರಮಾಣದ ಲಕ್ಷದೊಳಗೆ ಶನಿ ಹದಿಮೂರರ
ಪರಿಗಣನೆಯಲ್ಲಿರ್ಪ ಪದಿನಾಲ್ಕು ಲಕ್ಷದೊಳ
ಗಿರುತಿರ್ಪರಾ ಸಪ್ತಋಷಿವರರ್ ಧ್ರುವನಿರ್ಪ
ಧರೆಗೆ ಹದಿನೈದುವರೆ ಲಕ್ಷಯೋಜನದುದ್ದವಿಂತಿವರ ತೆರನೆಂದನು ೩೨

ಇನ್ನಬ್ಜಮಿತ್ರನಿಂ ಮೇಲೆ ಪದಿನಾಲ್ಕುಲ
ಕ್ಷೋನ್ನತಂ ಸ್ವರ್ಗಮಾ ಧ್ರುವನಿಂದೆ ಮೇಲೆ ಲೆ
ಕ್ಕನ್ನೋಡಲೊಂದು ಕೋಟಿಯು ಮೇಲೆ ವರಮಹರ್ಲೋಕವೊಪ್ಪುವುದದರೊಳು

ಭಾಗವನ್ನು ವಿವರಿಸಿ ಹೇಳುತ್ತೇನೆ ಕೇಳು. ೩೧. ಎಲೈ ಸಿದ್ಧರಾಮನೇ, ಕೇಳು. ಮೇರು ಪರ್ವತದ ಮೇಲೆ ಮೂವತ್ತೆರಡು ಸಾವಿರ ಯೋಜನದಷ್ಟು ವಿಸ್ತಾರವಾಗಿದ್ದು ಅದರಲ್ಲಿ ಈಶ್ವರನಿಗೆ ಒಂದು ಮನೆಯಿದೆ. ಅದನ್ನು ಸೊಗಸಾದ ರತ್ನಗಳಿಂದ ನಿರ್ಮಿಸಲಾಗಿದೆ. ಭೂಮಿಗೆ ಒಂದು ಲಕ್ಷ ಯೋಜನ ದೂರದಲ್ಲಿ ಭುವರ್ಲೋಕವಿದೆ. ಅದಕ್ಕೆ ಸೂರ್ಯನು ಒಡೆಯ. ಅವನಿಗೆ ಎರಡು ಲಕ್ಷ ಯೋಜನ ದೂರದಲ್ಲಿ ಚಂದ್ರನಿದ್ದಾನೆ. ಅವನಿಗೆ ಮೂರು ಲಕ್ಷ ಯೋಜನ ದೂರದಲ್ಲಿ ನಕ್ಷತ್ರಗಳಿವೆ. ಅವುಗಳಿಗೆ ಐದು ಲಕ್ಷ ಯೋಜನ ದೂರದಲ್ಲಿ ಬುಧನಿದ್ದಾನೆ. ೩೨. ಭೂಮಿಗೆ ಏಳು ಲಕ್ಷ ಯೋಜನ ದೂರದಲ್ಲಿ ಶುಕ್ರನೂ, ಒಂಬತ್ತು ಲಕ್ಷ ಯೋಜನ ದೂರದಲ್ಲಿ ಮಂಗಳನೂ, ಹನ್ನೊಂದು ಲಕ್ಷ ಯೋಜನ ದೂರದಲ್ಲಿ ಗುರುವೂ, ಹದಿಮೂರು ಲಕ್ಷ ಯೋಜನ ಲೆಕ್ಕದಲ್ಲಿ ಶನಿಯೂ, ಹದಿನಾಲ್ಕು ಲಕ್ಷ ಯೋಜನದೊಳಗೆ ಶ್ರೇಷ್ಠರಾದ ಸಪ್ತ ಋಷಿಗಳೂ, ಆ ಭೂಮಿಯಿಂದ ಹದಿನೈದೂವರೆ ಲಕ್ಷ ಯೋಜನದ ದೂರದಲ್ಲಿ ಧ್ರುವನೂ ಇದ್ದಾರೆ. ಇದು ಅವರ ರೀತಿ ಎಂದನು. ೩೩. ಇನ್ನು ಕಮಲಬಾಂಧವನಾದ ಸೂರ್ಯನಿಂದ ಹದಿನಾಲ್ಕು ಲಕ್ಷ ಯೋಜನದ ಮೇಲೆ ಸ್ವರ್ಗವಿದೆ. ಧ್ರುವನಿಂದ ಒಂದು ಕೋಟಿಯ ಮೇಲೆ ಶ್ರೇಷ್ಠವಾದ ಮಹರ್ಲೋಕ ಒಪ್ಪುತ್ತಿದೆ. ಅದರಲ್ಲಿ ಪ್ರಖ್ಯಾತಮುನಿಯಾದ ಮಾರ್ಕಂಡೇಯ ಋಷಿ

CC-0. Jangamwadi Math Collection. Digitized by eGangotri

ಸನ್ನುತಂ ಮುನಿಪ ಮಾರ್ಕಂಡೇಯನಂ ಋಷಿಜ
ನನ್ನೋಡಿ ಭಕ್ತಿಭಾವಂಗಳಿಂದನುದಿನಂ
ಪನ್ನಗಾಭರಣಚರಣಾರಾಧನೆಗಳಿಂದವಿರ್ಪರವನೇವೇಳ್ವೆನು ೩೩

ಆ ಲೋಕದಿಂದೆ ಕೋಟಿದ್ವಯದ ಯೋಜನದ
ಮೇಲಿರ್ಪುದಾ ಜನರ್ಲೋಕಮದರೊಳ್ ಮುನಿಪ
ಜಾಲಸಹಿತೆಸೆವ ಸನಕಾದಿಗಳ್ ಶಿವಭಕ್ತಿಯೋಗದಿಂದಿರುತಿರ್ಪರು
ಆಲಿಸಾ ಲೋಕದಿಂ ನಾಲ್ಕು ಕೋಟ್ಯಂಬರದ
ಮೇಲಿರ್ಪುದಾ ತಪರ್ಲೋಕಮಾ ಲೋಕದ ವಿ
ಶಾಲಮನಿತವರೊಳಿರ್ಪಂ ಕಮಲಲೋಚನಂ ಪೇಳಲೇನದರಿರವನು ೩೪

ಸತತಂ ತಪರ್ಲೋಕದಿಂ ಮೇಲೆ ರಂಜಿಪುದು
ಋತುಕೋಟಿಯೋಜನೌನ್ನತ್ಯದಿಂ ಕಾಂತಿಸಂ
ಯುತವಾಗಿ ಸತ್ಯಲೋಕಂ ಚತುರ್ವದನನಲ್ಲಿರ್ಪನತಿಹರುಷದಿಂದೆ
ನುತಸತ್ಯಲೋಕದಿಂ ಮೇಲೆ ದಶಕೋಟಿಯುಂ
ಶ್ರುತಮದೆಂಬತ್ತೈದು ಲಕ್ಷಪರಿಗಣನೆಯು
ನ್ನತದಿನಿಮದಾಗಸಂ ಬ್ರಹ್ಮಾಂಡಮಿಂತುಟೈವತ್ತುಕೋಟಿಪ್ರಮಾಣಂ ೩೫

ಸರಸಿರುಹಸಂಜಾತನೀ ತೆರದೊಳೊಲವಿನಿಂ
ವರಚತುರ್ದಶ ಭುವನಭವನದೊಳ್ ನಾಗಕುಲ
ನರ ಸುರಾಸುರ ಸಿದ್ಧ ವಿದ್ಯಾಧರಾಪ್ಸರಪ್ರಕರ ಮನುಮುನಿಮುಖ್ಯರು

ಇದ್ದಾನೆ. ಅಲ್ಲಿರುವ ಋಷಿಗಳನ್ನು ನೋಡಿದರೆ ಅವರು ಯಾವಾಗಲೂ ಭಕ್ತಿಭಾವದಿಂದ ನಾಗಭೂಷಣನಾದ ಶಿವನ ಚರಣಗಳನ್ನು ಆರಾಧಿಸುತ್ತಾ ಇರುತ್ತಾರೆ. ೩೪. ಆ ಲೋಕದಿಂದ ಎರಡು ಕೋಟಿ ಯೋಜನದ ಮೇಲೆ ಜನರ್ಲೋಕವಿದೆ. ಅದರಲ್ಲಿ ಮುನಿಗಳ ಸಮೂಹದೊಡನೆ ಸನಕಾದಿಗಳು ಶಿವಭಕ್ತಿಯೋಗದಲ್ಲಿ ಪ್ರಕಾಶಿಸುತ್ತಿದ್ದಾರೆ. ಮತ್ತೂ ಕೇಳು, ಆ ಲೋಕದಿಂದ ನಾಲ್ಕು ಕೋಟಿ ಯೋಜನದ ಮೇಲೆ ತಪೋಲೋಕವಿದೆ. ಅದು ಅಷ್ಟೇ ವಿಶಾಲವಾಗಿದೆ. ಅದರೊಳಗೆ ವಿಷ್ಣು ಇದ್ದಾನೆ. ಅದರ ವೈಭವವನ್ನು ಏನೆಂದು ಹೇಳಲಿ? ೩೫. ತಪೋಲೋಕದಿಂದ ಆರು ಕೋಟಿ ಯೋಜನದಷ್ಟು ಎತ್ತರದ ಮೇಲೆ ಕಾಂತಿಯಿಂದ ಕೂಡಿ ಮನೋಹರವಾದ ಸತ್ಯಲೋಕವಿದೆ. ಅಲ್ಲಿ ಬಹಳ ಆನಂದದಿಂದ ಚತುರ್ಮುಖಬ್ರಹ್ಮನಿದ್ದಾನೆ. ಪ್ರಖ್ಯಾತವಾದ ಸತ್ಯಲೋಕದಿಂದ ಮೇಲೆ ಹತ್ತುಕೋಟಿ ಎಂಬತ್ತೈದು ಲಕ್ಷ ಯೋಜನ ದೂರದಲ್ಲಿ ಆಕಾಶವಿದೆ. ಬ್ರಹ್ಮಾಂಡವು ಈ ರೀತಿಯಾಗಿ ಐವತ್ತು ಕೋಟಿ ಪ್ರಮಾಣವುಳ್ಳದ್ದು. ೩೬. ಕಮಲಜನಾದ ಬ್ರಹ್ಮನು ಈ ರೀತಿಯಲ್ಲಿ ಸಂತೋಷದಿಂದ ಶ್ರೇಷ್ಠವಾದ ಹದಿನಾಲ್ಕು ಲೋಕಗಳಲ್ಲಿಯೂ ಸರ್ಪಕುಲ, ನರರು, ದೇವತೆಗಳು, ರಾಕ್ಷಸರು, ಸಿದ್ಧರು, ವಿದ್ಯಾಧರರು, ಅಪ್ಸರಸಮೂಹ, ಮನುಗಳು, ಮುನಿಮುಖ್ಯರು, ಗರುಡ, ಗಂಧರ್ವರು, ಕಿನ್ನರರು, ಕಿಂಪುರುಷರು ಎಂಬ

CC-0. Jangamwadi Math Collection. Digitized by eGangotri

ಗರುಡ ಗಂಧರ್ವ ಕಿನ್ನರ ಕಿಂಪುರುಷರೆಂಬ
ಪರಮಸಚರಾಚರಮನುಚಿತದಿಂದೆಡೆಯೊಡೆಯೊ
ಳಿರಿಸಿಯವರಿಂದೋಲಗಂಗೊಳುತೆ ಸುಖಸಂಕಥಾವಿನೋದದೊಳಿರ್ದನು ೩೬

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥವಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲ ಸುಖಮಂ ಸಕಲ ಭೋಗವನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೩೭

## ಹದಿನೈದನೆಯ ಸಂಧಿ ಸಂಪೂರ್ಣ

ಎಲ್ಲ ಸಚರಾಚರವನ್ನೂ ಯೋಗ್ಯರೀತಿಯಿಂದ ಆಯಾ ಸ್ಥಳದಲ್ಲಿ ನೆಲೆಗೊಳಿಸಿ, ಅವರಿಂದ ಸೇವೆ ಮಾಡಿಸಿಕೊಳ್ಳುತ್ತಾ ಸುಖಸಂಕಥಾವಿನೋದದಿಂದ ಇದ್ದನು. ೩೭. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಹದಿನೈದನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿನಾರನೆಯ ಸಂಧಿ

ಸೂಚನೆ : ಹರಿಯಜರ್ ಹಮ್ಮಿನಿಂ ತಮ್ಮೊಳಗೆ ತಾವು ಮ
ಚ್ಚರಿಸಿ ಕಾದುತ್ತಿರಲ್ ಸಕಲ ಜಗವಳಿಯಲಂ
ದುರುಲಿಂಗಮುದ್ಭವಿಸಲವರಹಂಕಾರಂಗಳುಂ ಮುರಿದುವಾಕ್ಷಣದೊಳು

ಗಿರಿರಾಜನಂದನಾಮುಖಸರೋಜಭ್ರಮರ
ಗಿರಿರಾಜನಂದನಾನಿಟಲಮೃಗಮದತಿಲಕ
ಗಿರಿರಾಜನಂದನಾರಾಗೋಷ್ಠಬಿಂಬಫಲಚುಂಬನೋತ್ಸಾಹಕೀರ
ಗಿರಿರಾಜನಂದನಾಕರ್ಣತಾಟಂಕಯುಗ
ಗಿರಿರಾಜನಂದನಾಕುಚತರಳಮಣಿಹಾರ
ಗಿರಿರಾಜನಂದನಾರ್ಧಾಂಗ ಕರುಣಾಪಾಂಗ ಜಯ ವಿರೂಪಾಕ್ಷಲಿಂಗ ೧

ರಾಮ ಕೇಳೊಂದುದಿವಸಂ ಕಮಲಸಂಭವಂ
ರಾಮಣೀಯಕಸಭೆಯೊಳಗೆ ರತ್ನನಿಕರಾಭಿ
ರಾಮಮೆಂದೆನಿಪ ಸಿಂಹಾಸನದೊಳೊಡ್ಡೋಲಗದೆ ಪುತ್ರಪೌತ್ರರೆನಿಪ
ಕಾಮರೂಪಿಗಳಾದ ಮನುಮುನಿ ಕ್ರತು ಭುಗ್ನಿ
ಕಾಮಬಲವದ್ರಾಕ್ಷಸಾಳಿಕೃತಸಂಸ್ತೋತ್ರ
ಕಾಮನಿರ್ದಂ ನೀನೆ ಸಕಲಜಗದೊಡೆಯನೆಂದಾ ಜನರ್ ನುತಿಸುತಿರಲು ೨

ಸೂಚನೆ : ವಿಷ್ಣು ಬ್ರಹ್ಮರು ಅಹಂಕಾರದಿಂದ ತಮ್ಮಲ್ಲಿ ತಾವೇ ಮತ್ಸರ ಹೊಂದಿ ಕಾದುತ್ತಿರುವಾಗ ಎಲ್ಲ ಜಗತ್ತೂ ನಾಶವಾಗಲು ತೊಡಗಿತು. ಆಗ ಶ್ರೇಷ್ಠವಾದ ಲಿಂಗ ಉದ್ಭವಿಸಿತು. ಕೂಡಲೇ ಅದರ ಅಹಂಕಾರಗಳೂ ಅಳಿದುವು. ೧. ಪಾರ್ವತಿಯ ಮುಖಕಮಲಕ್ಕೆ ದುಂಬಿಯಂತಿರುವ, ಗಿರಿಜೆಯ ಹಣೆಗೆ ಕಸ್ತೂರಿತಿಲಕದಂತಿರುವ, ಪಾರ್ವತಿಯ ಕೆಂಪಾದ ತೊಂಡೆಹಣ್ಣಿನಂತಹ ತುಟಿಯನ್ನು ಮುತ್ತಿಡಲು ಉತ್ಸಾಹವುಳ್ಳ ಗಿಳಿಯಂತಿರುವ, ಪಾರ್ವತಿಯ ಎರಡು ಕಿವಿಗಳಿಗೂ ಆಭರಣವಾದ, ಪಾರ್ವತಿಯ ಸ್ತನಗಳ ಮೇಲೆ ಮಿನುಗುವ ಮನೋಹರವಾದ ಮಣಿಹಾರದಂತಿರುವ, ಪಾರ್ವತಿಯ ಅರ್ಧಾಂಗನೂ ಕರುಣಾಪೂರ್ಣವಾದ ಕಡೆಗಣ್ಣಿನ ನೋಟವುಳ್ಳ ವಿರೂಪಾಕ್ಷಲಿಂಗನಿಗೆ ಜಯವಾಗಲಿ. ೨. ಎಲೈ ಸಿದ್ಧರಾಮನೆ ಕೇಳು, ಒಂದು ದಿವಸ ಬ್ರಹ್ಮನು ಮನೋಹರವಾದ ಸಭೆಯೊಳಗೆ ರತ್ನಗಳಿಂದ ಕೂಡ ಸುಂದರವಾದ ಸಿಂಹಾಸನದ ಮೇಲೆ ಕುಳಿತಿದ್ದ. ಆ ಸಭೆಯಲ್ಲಿ ಅವನ ಮಕ್ಕಳೂ, ಮೊಮ್ಮಕ್ಕಳೂ ಆದ ಕಾಮರೂಪಿಗಳಾದ ಮನು-ಮುನಿಗಳೂ, ಅಗ್ನಿ, ಬಲಿಷ್ಠರಾದ ರಾಕ್ಷಸಸಮೂಹವಿದ್ದಿತು. ಅವರೆಲ್ಲರೂ ನೀನೆ ಸಕಲ ಜಗತ್ತಿಗೂ ಒಡೆಯ



CC-0. Jangamwadi Math Collection. Digitized by eGangotri

ಆವನಿಂದಖಿಳಜನನಸ್ಥಿತಿಪ್ರಳಯಂಗ
ಳಾವನಿಂ ಸುಜನದುರ್ಜನರಕ್ಷೆಶಿಕ್ಷೆಗಳ
ದಾವನಾಜ್ಞೆಯೊಳಖಿಳಲೋಕಪಾಲಕರಿರ್ಪರತಿಕಲಾವತಿ ಶಾರದೆ
ಆವ ದೇವಂಗೆ ವಲ್ಲಭೆ ದೇವ ಮನುಮುನಿಗ
ಳಾವ ದೇವನ ಪುತ್ರ ಪೌತ್ರರಂತೆಸೆವರಾ
ದೇವ ನೀನೇ ನಿನಗೆ ದೇವರಿಲ್ಲೆಂದಾ ಸಭಾಸದರ್ ನುತಿಯಿಸಿದರು ೩.

ಎಂದು ಕೊಂಡಾಡಲ್ಕಹಂಕೃತಿಯೊಳಬುಜಜಂ
ಮುಂದುಗಾಣದೆ ತನ್ನ ಸಂಪದಕ್ಕಾರ್ ಸಾಟಿ
ಯೆಂದು ತನ್ನಂ ತಾನೆ ಪೊಗಳಿಕೊಳಲಜನಸತ್ಯದೆ ಲೋಕಮಳಿವುತಿರಲು
ಕಂದರ್ಪಜನಕನರಿದಾ ಕ್ಷಣದೊಳಜನೆಡೆಗೆ
ಬಂದು ನಿಂದಿರಲತುಳಗರ್ವದಿಂ ನೀನಾವ
ನೆಂದು ಕೇಳಲ್ ಮುಗುಳ್ನಗೆ ಮಿನುಗುತಿರಲಂದು ಕಮಲಾಕ್ಷನಿಂತೆಂದನು ೪

ಕುರಿಯೆಲಾ ಬೊಮ್ಮ ನೀಂ ಲೋಕಕಂ ನಿನಗಮಾ
ನೆರೆಯನಾಗಳೆ ಮರೆದೆಯಾ ತವಸಭಾಸದರ್
ನೆರೆ ಪೊಗಳೆ ನಿನಗಹಂಕಾರಮಾದುದೆ ಬೇಡವೆನೆ ಕಮಲಜಂ ಕನಲ್ದು

ಎಂದು ಹೊಗಳುತ್ತಿರಲು, ಸ್ತೋತ್ರಪ್ರಿಯನಾದ ಬ್ರಹ್ಮನು ಓಲಗದಲ್ಲಿದ್ದನು. ೩. ಯಾರಿಂದ ಎಲ್ಲ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳು ನಡೆಯುತ್ತದೆಯೋ, ಯಾವನಿಂದ ದುಷ್ಟಶಿಕ್ಷೆಯೂ-ಶಿಷ್ಟರಕ್ಷೆಯೂ ಆಗುತ್ತದೆಯೋ. ಯಾವನ ಆಜ್ಞೆಯಲ್ಲಿ ಎಲ್ಲ ಲೋಕಗಳ ಪಾಲಕರಿದ್ದಾರೆಯೋ, ಅತಿಕಲಾವತಿಯಾದ ಶಾರದೆ ಯಾವನ ವಲ್ಲಭೆ ಯಾಗಿದ್ದಾಳೆಯೋ, ಯಾವ ದೇವನಿಗೆ ಮನು—ಮುನಿಗಳು ಮಕ್ಕಳು, ಮೊಮ್ಮಕ್ಕಳಂತೆ ಶೋಭಿಸುತ್ತಿರುವರೋ ಆ ದೇವನು ನೀನೇ ಆಗಿರುವೆ. ನಿನಗಿಂತ ಬೇರೆ ದೇವರಿಲ್ಲ ಎಂದು ಆ ಸಭಿಕರು ಹೊಗಳುತ್ತಿದ್ದರು. ೪. ಈ ರೀತಿಯಾಗಿ ಅವರೆಲ್ಲ ಕೊಂಡಾಡಲು ಬ್ರಹ್ಮನಿಗೆ ಅಹಂಕಾರ ಹುಟ್ಟಿತು. ಆ ಅಹಂಕಾರದಿಂದ ಮುಂದುಗಾಣದೆ, ಬ್ರಹ್ಮನು ನನ್ನ ಐಶ್ವರ್ಯಕ್ಕೆ ಯಾರು ಸಮ ಎಂದು ತನ್ನನ್ನು ತಾನೇ ಹೊಗಳಿಕೊಂಡನು. ಬ್ರಹ್ಮನ ಈ ಅಸತ್ಯದಿಂದ ಲೋಕ ಹಾಳಾಗುತ್ತಿತ್ತು. ಮದನನ ಜನಕನಾದ ವಿಷ್ಣುವು ಇದನ್ನು ತಿಳಿದು ಕೂಡಲೇ ಬ್ರಹ್ಮನ ಹತ್ತಿರ ಬಂದು ನಿಲ್ಲಲು ಬ್ರಹ್ಮನು ಬಹಳ ಗರ್ವದಿಂದ ಅವನನ್ನು ನೀನು ಯಾರೆಂದು ಕೇಳಿದನು. ಆ ಮಾತಿಗೆ ನಸುನಕ್ಕು ವಿಷ್ಣುವು ಹೀಗೆ ಹೇಳಿದನು. ೫. ಎಲವೋ ಬ್ರಹ್ಮ ನೀನು ಕುರಿಯಲ್ಲವೇ ? ಲೋಕಕ್ಕೂ ನಿನಗೂ ನಾನೇ ಒಡೆಯನು. ಅದನ್ನು ಆಗಲೇ ಮರೆತೆಯೊ ? ನಿನ್ನ ಸಭಾಸದರು ನಿನ್ನನ್ನು ಹೊಗಳಿದರೆ ನಿನಗೆ ಅಹಂಕಾರ ಉಂಟಾಯಿತೆ ? ಬೇಡ, ಎನ್ನಲು. ಬ್ರಹ್ಮನು ಕೋಪಗೊಂಡು ಹೊಳೆಯುವ ರತ್ನಖಚಿತವಾದ ಸಿಂಹಾಸನದ ಮೇಲೆ ನಾನು

CC-0. Jangamwadi Math Collection. Digitized by eGangotri

ಮಿಱುಪ ಮಣಿಖಚಿತಸಿಂಹಾಸನದ ಸುತ್ತಲುಂ
ತುಱುಗಿದ ಸುರವ್ರಜದ ಮಧ್ಯದೊಳ್ ಮೆಱೆವವಂ
ಕುಱಿಯೊ ವಿಕ್ರಯಶೇಷಮೇಷನಂತಿರ್ಪವಂ ಕುಱಿಯೊ ನೀಂ ಪೇಳೆಂದನು ೫

ಕೇಳಿರೈ ಮನುಮುನಿಗಳೀತನ ಮಹಾಹಾಸ್ಯ
ದಾಳಾಪಮಂ ತಾಂ ಗಡಂ ಸಕಲಲೋಕಮಂ
ಪಾಲಿಪಂ ಗಡಮೆನಗೆ ವಲ್ಲಭಂ ಗಡ ನುಡಿಯೆ ತಕ್ಕುಮೇ ತತ್ಸಭೆಯೊಳು
ನಾಲಗೆಯನರಿಯಬೇಡವೆ ಕೊಬ್ಬಿದಿವನಂ ಯ
ಮಾಲಯಕೆ ಕಳುಪಿದಪೆನೀಕ್ಷಣಮೆನುತೆ ವಿಲಯ
ಕಾಲದಂತಕವೈರಿಯಂತಜಂ ಮುಳಿದೇಳೆ ವನಜಾಕ್ಷನಿಂತೆಂದನು ೬

ಎಲವೊ ವಿಕ್ರಯಶೇಷ ಮೇಷನೆಂದೆನ್ನ ನೀಂ
ಪಳಿದೆಲಾ ಕಾಣಬಹುದಿನ್ನೇಕೆ ನೋಡು ತ
ತ್ತಳವಿಯೊಳ್ ನೀನೆನ್ನ ಸೋಲಗೆಲವುಗಳನೆನುತಬ್ಜಾಕ್ಷನಾಕ್ಷಣದೊಳು
ಮುಳಿದು ಸೃಜಿಸಿದನಾನೆ ಕುದುರೆ ತೇರ್ ಕಾಲಾಳ
ನಿಳೆ ಜರೆಯೆ ಫಣಿಪನೆದೆಯೊಡೆಯೆ ಕುಲಗಿರಿ ಬಿರಿಯೆ
ತಲೆ ಕುಸಿಯೆ ದಿಗ್ಗಜಂಗಳ್ಗೆ ಸೇನಾರಜಂ ತುಡುಕೆ ದಿಙ್ಮಂಡಲವನು ೭

ಕುಳಿತು ನನ್ನ ಸುತ್ತಲೂ ದೇವತೆಗಳ ಸಮೂಹದಿಂದೊಡಗೂಡಿ ಇವರ ಮಧ್ಯದಲ್ಲಿ ಮೆರೆಯುವ ನಾನು ಕುರಿಯೋ ? ವಿಕ್ರಯವಾಗದೆ ಉಳಿದ ಮೇಕೆಯಂತಿರುವ ನೀನು ಕುರಿಯೋ ? ಹೇಳು ಎಂದನು. ೬. ಕೇಳಿರಯ್ಯಾ, ಮನುಮುನಿಗಳೆ ಈತನು ಹಾಸ್ಯಾಸ್ಪದವಾದ ಪ್ರಲಾಪವನ್ನು ಇವನಂತೆ ಎಲ್ಲ ಲೋಕಗಳನ್ನು ಕಾಪಾಡುವವನಂತೆ ! ನನಗೆ ಯಜಮಾನನಂತೆ ! ಈ ಸಭೆಯಲ್ಲಿ ಹೀಗೆ ಹೇಳಲು ಯೋಗ್ಯವೆ ? ಇವನ ನಾಲಗೆಯನ್ನು ಕತ್ತರಿಸಬೇಡವೆ ? ಗರ್ವಿಷ್ಠನಾದ ಇವನನ್ನು ಈಗಲೇ ಯಮಪುರಿಗೆ ಕಳಿಸುತ್ತೇನೆ ಎನ್ನುತ್ತ, ಪ್ರಳಯಕಾಲದ ರುದ್ರನಂತೆ ಬ್ರಹ್ಮನು ಕೋಪದಿಂದ ಏಳಲು ವಿಷ್ಣುವು ಹೀಗೆ ಹೇಳಿದನು. ೭. ಎಲವೋ, ಮಾರಾಟವಾಗದೆ ಉಳಿದ ಮೇಕೆ ಎಂದು ನನ್ನನ್ನು ನಿಂದಿಸಿದೆಯೊ ? ನನ್ನ ಸಾಮರ್ಥ್ಯವನ್ನು ನೋಡು. ನೀನು ನನ್ನ ಸೋಲು–ಗೆಲುವುಗಳನ್ನೂ ನೋಡು ಎನ್ನುತ್ತ ವಿಷ್ಣುವು ಕೋಪದಿಂದ ಆಕ್ಷಣವೇ ಆನೆ, ಕುದುರೆ, ರಥ, ಕಾಲಾಳುಗಳನ್ನು ಸೃಷ್ಟಿಸಿದನು. ಅವುಗಳ ಭಾರದಿಂದ ಭೂಮಿ ಜರ್ಝರಿತವಾಯಿತು, ಆದಿಶೇಷನ ಎದೆ ಒಡೆಯಿತು, ಕುಲಪರ್ವತಗಳು ಬಿರಿದುಹೋದುವು, ದಿಗ್ಗಜಗಳ ತಲೆಗಳು ಕುಸಿದುಹೋದುವು. ಆ ಸೇನಾಸಮೂಹದಿಂದ ಎದ್ದ ಧೂಳು ಎಲ್ಲ ದಿಕ್ಕನ್ನೂ

CC-0. Jangamwadi Math Collection. Digitized by eGangotri

ಆವಾವ ದಿಕ್ಕುದಿಕ್ಕುಗಳೊಳಂ ಹರಿಯ ದಂ
ತಾವಳಂ ಹರಿಯ ಹರಿಸಂಕುಳಂ ಹರಿಯ ಸುಭ
ಟಾವಳಿ ಹರಿಯ ವರೂಥಂಗಳಲ್ಲದ ಪೆರತನಾಂ ಕಾಣೆನಾಹವದೊಳು
ಈ ವಿವಿಧ ಸೇನಾನಿಕಾಯಮಂ ಕಂಡು ಕೋ
ಪಾವಲಂಬಿತಚಿತ್ತನಾಗಿ ಕಮಲಾಸನಂ
ತೀವಿರ್ದ ತನ್ನಯ ಸಭಾಸದರನೆಲ್ಲರಂ ಮುರಿದೀಕ್ಷಿಪವಸರದೊಳು ೮

ಕಲಕಿದುದು ತುಂಬಿದಾಸ್ಥಾನಮಂಡಲಮಾಗ
ತುಳುಕಿದುದು ವೀರರಸವವರಾಸ್ಯಮಂಡಲದೊ
ಳಳಿದುದು ಮನದ ಶಾಂತಿ ಪೆರ್ಚಿದುದು ವಿಭ್ರಾಂತಿ ಸಂಗರಾವೇಶದಿಂದೆ
ಮೊಳಗಿದುದು ವಾದ್ಯಸಂದೋಹಮಾ ಪದದೊಳು
ಜ್ವಲಿಸಿದುವು ಸುಭಟರ ಕರಂಗಳೊಳ್ ಕೈದುಗಳ್
ಕೊಳುಗುಳದ ವೃತ್ತಾಂತಮೆಂತುಟಹುದೆನುತೆ ಲೋಕದ ಜನಂ ಚಿಂತಿಸಿದುದು ೯

ಮನುಗಳುಬ್ಬೇರಿದರ್ ಮುನಿಗಳುರೆ ಮಿಾರಿದರ್
ದನುಜರಾರ್ಭಟಿಸಿದರ್ ಜಯಕೆ ಲಟಕಟಿಸಿದರ್
ದಿನಪಾಲರೊತ್ತಿದರ್ ದಿವಿಜಭಟರೆತ್ತಿದರ್ ಕಿನ್ನರರ್ ಸೇನೆಸಹಿತ
ಕನಲಿದಂ ಸುತ್ರಾಮನುರಿದನುದ್ಧೃತಸೋಮ
ನಿನಸುತಂ ಪೆರ್ಚಿದಂ ನಿರುತಿ ಬಾಳುರ್ಚಿದಂ
ವನಧಿಪಂ ಕೆರಳಿದಂ ಹರಿ ರಣಕೆ ತೆರಳಿದಂ ಧನದಂ ಮುನಿದು ನಡೆದನು ೧೦

ಆವರಿಸಿತು. ೮. ಯಾವ ದಿಕ್ಕಿನಲ್ಲಿ ನೋಡಿದರೂ ವಿಷ್ಣುವಿನ ಆನೆಗಳ ಸಮೂಹ, ಅವನ ಕುದುರೆಗಳ ಸಮೂಹ, ಸೈನಿಕರ ಮತ್ತು ರಥಗಳ ಸಮೂಹ. ಇವುಗಳಲ್ಲದೆ ಆ ಯುದ್ಧದಲ್ಲಿ ಬೇರೆ ಯಾವುದನ್ನೂ ನಾನು ಕಾಣಲಿಲ್ಲ. ಈ ನಾನಾ ವಿಧವಾದ ಸೈನ್ಯ ಸಮೂಹವನ್ನು ನೋಡಿ ಬ್ರಹ್ಮನು ಮನದಲ್ಲಿ ಕೋಪಗೊಂಡು ಆಸ್ಥಾನದಲ್ಲಿ ಸೇರಿದ್ದ ಸಭಾಸದರೆಲ್ಲರನ್ನೂ ತಿರುಗಿನೋಡುವ ಆ ಸಮಯದಲ್ಲಿ ೯. ಅವನ ತುಂಬಿದ ಆಸ್ಥಾನಮಂಟಪವೆಲ್ಲ ಕಲಕಿಹೋಯಿತು. ಅಲ್ಲಿ ಕುಳಿತಿದ್ದವರ ಮುಖದಲ್ಲಿ ವೀರರಸ ತುಂಬಿತುಳುಕಿತು. ಅವರ ಮನಸ್ಸಿನ ಕಾಂತಿ ನಾಶವಾಯಿತು. ಯುದ್ಧದ ಆವೇಶದ ಗೊಂದಲ ಹೆಚ್ಚಾಯಿತು. ಯುದ್ಧವಾದ್ಯಗಳ ಸಮೂಹ ಶಬ್ದಮಾಡಿದವು. ಆ ಸಮಯದಲ್ಲಿ ಸೈನಿಕರ ಕೈಯಲ್ಲಿದ್ದ ಆಯುಧಗಳು ಹೊಳೆದವು. ಯುದ್ಧದ ಸುದ್ದಿ ಯಾವ ರೀತಿಯಾಗುತ್ತದೆಯೋ ಎಂದು ಲೋಕದ ಜನ ಚಿಂತಿಸಿತು. ೧೦. ಮನುಗಳು ಹುರುಪುಗೊಂಡರು, ಋಷಿಗಳು ಮಿತಿಮಿಾರಿದರು, ರಾಕ್ಷಸರು ಆರ್ಭಟಿಸಿದರು, ದಿಕ್ಪಾಲಕರು ಯುದ್ಧದಲ್ಲಿ ಗೆಲ್ಲಲು ಕಾತುರಗೊಂಡರು, ದೇವತೆಗಳ ಸೈನಿಕವೀರರು ಮುನ್ನುಗ್ಗಿದರು, ಕಿನ್ನರರು ಸೈನ್ಯಸಮೇತರಾಗಿ ಲಗ್ಗೆ ಹತ್ತಿದರು, ಇಂದ್ರನು ಕೋಪಗೊಂಡನು, ಸೊಕ್ಕಿದ ಚಂದ್ರನು ಉರಿದನು, ಯಮನು ಉಬ್ಬಿದನು, ನಿರುತಿ ಕತ್ತಿಯನ್ನು

CC-0. Jangamwadi Math Collection. Digitized by eGangotri

ಅನಿತರೊಳ್ ಕಲಹಕರ್ತೃಗಳೀರ್ವರಾಜ್ಞೆಯಿಂ
ತನತನಗೆ ಚೂಣಿಯ ಭಟಾಳಿ ಮುಂಕೊಂಡು ಪೊ
ಕ್ಕನುವರದೊಳೆಚ್ಚಾಡಿದರ್ ಮಾಡಿದರ್ ಪ್ರತಿಜ್ಞಾವಚನಮಂ ಖತಿಯೊಳು
ಇನಮಂಡಲಕೆ ಸಮುದ್ರಂಗಳ್ಗೆ ನದಿಗಳ್ಗೆ
ಘನಪದಹತೋತ್ಥಿತರಜಂ ರಾಹು ಬಡಬಾಗ್ನಿ
ಘನನಿದಾಘಮದಾಯ್ತು ಶಿವಶಿವಾ ಪೊಗಳಲೇಂ ಸಂಗರದ ಸಂಭ್ರಮವನು ೧೧

ಸೃಷ್ಟಿ ರಕ್ಷಾ ಕರ್ತೃಗಳ್ಗೆ ಕಾಳಗವಾಗೆ
ನಷ್ಟಮೋ ಸುಖಮೋ ಜಗತ್ತ್ರಯಕೆ ಶಿವಶಿವಾ
ಕಷ್ಟರಿವರೀ ವಿಧಿಮುಕುಂದರಿನ್ನಾರ್ಗರಿಪಬೇಳ್ಪುದೀ ಸಂಕಟವನು
ಆಷ್ಟಮೂರ್ತಿಯೆ ಕರ್ತೃ ಸಕಲಜಗಮಂ ಪೊರೆವ
ಭೀಷ್ಟವಿನ್ನಾರ್ಗೀ ವಿರಿಂಚಿ ಕಮಲಾಂಬಕರ
ದುಷ್ಟ ಸಂಗ್ರಾಮಮಂ ಬಿಡಿಸನೇಯಕಟೆನುತೆ ಮೊರೆಯಿಟ್ಟುದಖಿಳ ಜನವು ೧೨

ಪಟಹ ತಮ್ಮಟ ಢಕ್ಕೆ ಡಮರುಡೆ ಕಹಳಾಸಮು
ತ್ಕಟನಾದಮಳ್ಳಿರಿಯೆ ಪೇಳ್ವುದೇಂ ಬ್ರಹ್ಮಾಂಡ
ಘಟವೊಡೆದು ಬಹಿರಾವರಣದಿಂದೆ ಬೀಳ್ವಂಬುಧಾರಾಪ್ರವಾಹವೆನಲು

ಸೆಳೆದನು, ಸಮುದ್ರರಾಜನು ಕೆರಳಿದನು, ಬ್ರಹ್ಮನು ಯುದ್ಧಕ್ಕೆ ಹೊರಟನು, ಕುಬೇರನು ಕೋಪಗೊಂಡು ನಡೆದನು. ೧೧. ಅಷ್ಟರಲ್ಲಿ ಯುದ್ಧವನ್ನು ಸೃಷ್ಟಿಸಿದ ಇಬ್ಬರು ನಾಯಕರ ಆಜ್ಞೆಯಿಂದ ಸೈನ್ಯದ ಮುಂಭಾಗದಲ್ಲಿದ್ದ ಭಟರ ಸಮೂಹ ತಮ್ಮಷ್ಟಕ್ಕೆ ತಾವೇ ಮುಂದೆ ನಡೆದು ಹೊಕ್ಕು ಯುದ್ಧದಲ್ಲಿ ಹೋರಾಡಿದರು, ಕೋಪದಿಂದ ಪ್ರತಿಜ್ಞೆಗಳನ್ನು ಮಾಡಿದರು, ಸೈನಿಕರ ಪದಹತಿಯಿಂದ ಎದ್ದ ದಟ್ಟವಾದ ಧೂಳು ಕ್ರಮವಾಗಿ ಸೂರ್ಯಮಂಡಲಕ್ಕೆ ರಾಹುವಿನಂತೆಯೂ, ಸಮುದ್ರಗಳಿಗೆ ಬಡಬಾಗ್ನಿಗಳಂತೆಯೂ, ನದಿಗಳಿಗೆ ಬೇಸಿಗೆಕಾಲದ ಬಿಸಿಲಬೇಗೆಯಂತೆಯೂ ಆಯಿತು. ಶಿವ, ಶಿವಾ, ಆ ಯುದ್ಧದ ಸಂಭ್ರಮವನ್ನು ಏನು ಹೇಳಲಿ ? ೧೨. ಸೃಷ್ಟಿ–ಸ್ಥಿತಿಕರ್ತರುಗಳಿಗೇ ಯುದ್ಧವಾದರೆ ಮೂರು ಲೋಕಕ್ಕೆ ಕಷ್ಟವೋ–ಸುಖವೋ ? ಶಿವ ಶಿವಾ, ಈ ಬ್ರಹ್ಮ ಮತ್ತು ವಿಷ್ಣುಗಳಿಬ್ಬರೂ ಕಠಿಣರು. ಈ ನಮ್ಮ ಕಷ್ಟವನ್ನು ಇನ್ನಾರಿಗೆ ಹೇಳುವುದು ? ಎಲ್ಲ ಲೋಕಗಳನ್ನು ನಿರ್ಮಿಸಿ ಕಾಪಾಡುವ ಇಚ್ಛೆ ಶಿವನಿಗಲ್ಲದೆ ಬೇರೆ ಇನ್ನಾರಿಗಿದೆ ? ಅವನು ಈ ಬ್ರಹ್ಮ ಮತ್ತು ವಿಷ್ಣುಗಳ ಕೆಟ್ಟ ಯುದ್ಧವನ್ನು ತಪ್ಪಿಸುವುದಿಲ್ಲವೇ ? ಅಯ್ಯೋ ! ಎನ್ನುತ್ತ ಎಲ್ಲ ಜನರೂ ಮೊರೆಯಿಟ್ಟರು. ೧೩. ಡೋಲು, ತಮಟೆ, ಜೋಡು ಡೊಳ್ಳು, ಸಣ್ಣ ಡೊಳ್ಳು, ಕಹಳೆ ಮುಂತಾದ ವಾದ್ಯಗಳ ಸಮೂಹದ ಶಬ್ದದಿಂದ ಬ್ರಹ್ಮಾಂಡವೆಂಬ ಮಡಕೆಯು ಒಡೆದು ಅದರ ಹೊರಭಾಗದಿಂದ ಬೀಳುವ ನೀರಿನ ಪ್ರವಾಹವೋ ಎನ್ನುವಂತೆ ಪರಾಕ್ರಮಿಗಳಾದ ಬಿಲ್ಗಾರರು ಬಿಟ್ಟ

CC-0. Jangamwadi Math Collection. Digitized by eGangotri

ಪಟುಧನುರ್ಧರಕರವಿಮುಕ್ತ ಬಾಣಂ ದಿಶಾ
ತಟಕೆ ಭೀತಿಯನಾಗಿಸಲ್ ಮಸಗಿ ಸಮರಲಂ
ಪಟರೆಚ್ಚು ಪಂಚಿದರ್ ಕಾಕಜಂಬುಕತತಿಗೆ ರಿಪುಭಟರ ಮಾಂಸಂಗಳ ೧೨

ಜೋದರಾನೆಗಳನಂಕುಶವಿಕ್ಕಿ ನೂಂಕಿದರ್
ನಾದಿಸುತೆ ಕೈಮಾಡಿದರ್ ಹಯಾರೋಹಕರ್
ಸೇದಿ ಸಿಂಜಿನಿಯ ತಲೆವಿಲ್ಗೊಂಡು ಪೊಕ್ಕರ್ ಧನುರ್ಧರರ್ ಮೂದಲಿಸುತೆ
ಪಾದಘಟ್ಟಣೆಗೆ ನೆಲನೊಡೆಯೆ ಫಣೆಗಳ್ ಸೆಡೆಯ
ಲಾದಿಕೂರ್ಮಂ ಕೆಡೆಯೆ ಕಣೆಕಣೆಗಳಂ ಕಡಿಯೆ
ಕಾದಿದರ್ ಕೈಜಡಿಯೆ ಕಂಡೆಯುದ ಬಿಣ್ಪಿನಿಂ ಪಟುಭಟರುಭಯಬಲದೊಳು ೧೪

ಇದೆ ನವಬ್ರಹ್ಮರಾಟೋಪವೀ ದೆಸೆಯೊಳಿಂ
ತಿದೆ ದಿನಪರುಬ್ಬಾಟವಿದೆ ಮನುಗಳಾವೇಶ
ವಿದೆ ದನುಜರಣ್ಮು ಬೇರಿದೆ ಸುರರ ಸಂರಂಭವಿದೆ ಭಟರ ಬೊಬ್ಬೆಯೆನುತೆ
ಕದನಕೌಶಲರಸ್ತ್ರಶಸ್ತ್ರಪ್ರವೀಣರು
ಚಿದ ಬಾಳ ಸೇದಿದೆಂಬಿನ ಮುಸಕದಿಂದೆ ಕಿಡಿ
ಗೆದರುತುಂ ಪೊಯ್ದಾಡಿದರ್ ಕೂಡಿದರ್ ವೈರಿಭಟರುಂ ಲಯಾಲಯದೊಳು ೧೫

ತೀಕ್ಷ್ಣವಾದ ಬಾಣಗಳು ದಿಕ್ಕುಗಳ ಕೊನೆಯನ್ನು ತುಂಬಿ ಭೀತಿಯನ್ನು ಉಂಟು ಮಾಡಲು ಯುದ್ಧಾಸಕ್ತರು ಬಾಣಗಳನ್ನು ಬಿಟ್ಟು ಶತ್ರುಸೈನಿಕರ ಮಾಂಸವನ್ನು ಕಾಗೆ ನರಿಗಳ ಸಮೂಹಕ್ಕೆ ಹಂಚಿದರು. ೧೪. ಮಾವುತರು ಅಂಕುಶಗಳಿಂದ ತಿವಿದು ಆನೆಗಳನ್ನು ಮುಂದಕ್ಕೆ ಓಡಿಸಿದರು. ಕುದುರೆಸವಾರರು ಆರ್ಭಟಿಸುತ್ತ ಯುದ್ಧಮಾಡಿದರು. ಬಿಲ್ಗಾರರು ಪರಸ್ಪರ ಮೂದಲಿಸುತ್ತ ಬಿಲ್ಲಿನ ತುದಿಯನ್ನು ಹಿಡಿದುಕೊಂಡು ಬಿಲ್ಲಿನ ಹಗ್ಗವನ್ನು ಜಗ್ಗಿಸಿ ಠೇಂಕಾರಮಾಡುತ್ತ ಸೈನಿಕರ ಮಧ್ಯೆ ನುಗ್ಗಿದರು, ಅವರ ಪಾದಗಳ ತುಳಿತಕ್ಕೆ ಸಿಕ್ಕಿ ನೆಲ ಒಡೆಯಿತು, ಸರ್ಪಗಳ ತಲೆಗಳು ಬಾಗಿದುವು, ಆದಿಕೂರ್ಮನು ಬಿದ್ದುಹೋದನು. ಬಾಣಗಳು ಪ್ರತಿ ಬಾಣಗಳನ್ನು ಕತ್ತರಿಸುತ್ತಿರಲು, ಕತ್ತಿಗಳ ಭಾರದಿಂದ ಕೈ ಸೋಲುವಂತೆ ಎರಡು ಕಡೆಯ ಶೂರಸೈನಿಕರೂ ಹೋರಾಡಿದರು. ೧೫. ಇದೇ ನವಬ್ರಹ್ಮರ ಆಟಾಟೋಪ. ಈ ದಿಕ್ಕಿನಲ್ಲಿ ನಡೆಯುತ್ತಿರುವುದೇ ದ್ವಾದಶಾದಿತ್ಯರ ಮೇಲಾಟ. ಇದೇ ಮನುಗಳ ಆವೇಶ. ಇದೇ ರಾಕ್ಷಸರ ಸಾಮರ್ಥ್ಯ. ಇದೇ ದೇವತೆಗಳ ಸಡಗರ. ಇದೇ ಭಟರ ಬೊಬ್ಬಾಟ ಎನ್ನುತ್ತ ಯುದ್ಧಕುಶಲಿಗಳು, ಅಸ್ತ್ರ–ಶಸ್ತ್ರಗಳ ಪ್ರವೀಣರು ಬಿಚ್ಚಿದ ಕತ್ತಿಯಿಂದ, ಎಳೆದ ಬಾಣದ ರಭಸದಿಂದ ಕಿಡಿಯನ್ನು ಕಾರುತ್ತ

CC-0. Jangamwadi Math Collection. Digitized by eGangotri

ಇತ್ತಲಿತ್ತಂಡದಚೂಣೆಯು ಭಟಾನೀಕವಿರ
ದೊತ್ತರಿಸಿ ಕಡಿದಿರಿದು ಕೆಡೆಯೆಚ್ಚು ಕಾದುತಿರ
ಲತ್ತ ಕಮಲಾಸನಂ ಹಂಸೆಯುಂ ಕಮಲಾಂಬಕಂ ಬೇಗದಿಂ ಗರುಡನ
ಒತ್ತರಿಪ ಸಕಲಸಂರಂಭದಿಂದೇರಿ ಪರಿ
ಸುತ್ತಿರಲ್ಕಾ ಕ್ಷಣಂ ಸನ್ನಾಹದಿಂ ತನ್ನ
ಯೊತ್ತಿಲಿಪ ದೊರೆದೊರೆಗಳಂ ನೋಡಿ ಹರಿಗೆ ಪಂಕಜಗರ್ಭನಿಂತೆಂದನು ೧೭

ಈ ಮರುತ್ಸೈನ್ಯವಿಾ ಮನುಮುನಿಗಳೀ ದನುಜ
ರೀ ಮಹಾಚತುರಚತುರಂಗಂ ನವಬ್ರಹ್ಮ
ರೀ ಮಿತ್ರರೀ ಗರುಡಗಂಧರ್ವರೀ ಯಕ್ಷಕಿನ್ನರರ್ ಕಿಂಪುರುಷರು
ಭೂಮಿಯೊಳದಾರ್ಗುಂಟು ತೋರೆನ್ನ ಸಂಪದಕೆ
ತಾಮರಸನಯನ ನೀಂ ಪಾಸಟಿಯೆ ಪೇಳೆನಲ್
ಕಾಮಜಿತನೆಲೆ ಮೂಢ ಕಮಲಸಂಭವ ತೋರ್ಪೆನೆನ್ನಿರವನಿನ್ನೆಂದನು ೧೮

ಪಡೆದನಂಬುಜಲೋಚನಂ ವಿಶ್ವರೂಪಿನಿಂ
ಬಿಡುಗಣ್ಣರಂ ಮನುಮುನೀಂದ್ರರಂ ದನುಜರಂ
ಕಡೆಯುಮಾತೇನಖಿಳಚತುರಂಗಮಂ ಬೊಮ್ಮರಂ ರವಿಗಳಂ ಗರುಡರ

ಹೊಡೆದಾಡಿದರು. ಯಮನ ಪಟ್ಟಣದಲ್ಲಿ ಶತ್ರುಸೈನಿಕರನ್ನು ಸೇರಿದರು. ೧೬. ಇತ್ತ ಎರಡು ಕಡೆಯ ಮುಂಭಾಗದ ಸೈನಿಕರ ಸಮೂಹ ಮುನ್ನುಗ್ಗಿತು. ಕಡಿದರು, ಇರಿದರು, ಸಾಯುವಂತೆ ಹೊಡೆದರು. ಈ ರೀತಿ ಯುದ್ಧ ಮಾಡುತ್ತಿರಲು ಬ್ರಹ್ಮನು ಹಂಸವನ್ನೂ, ವಿಷ್ಣುವು ಗರುಡನನ್ನೂ ಬೇಗನೆ ಹೊಮ್ಮುವ ಉತ್ಸಾಹದಿಂದ ಹತ್ತಿದರು. ಸೈನ್ಯವನ್ನು ಸುತ್ತ ಸುತ್ತುತ್ತಿರಲು ಆ ಸಮಯದಲ್ಲಿ ಸಕಲ ಸನ್ನಾಹದಿಂದ ತನ್ನ ಪಕ್ಕದಲ್ಲಿರುವ ರಾಜರುಗಳನ್ನು ನೋಡಿ ಬ್ರಹ್ಮನು ವಿಷ್ಣುವಿಗೆ ಈ ರೀತಿ ಹೇಳಿದನು. ೧೭. ಈ ಮರುತ್ತರ ಸೈನ್ಯ, ಈ ಮನು-ಮುನಿಗಳು, ಈ ರಾಕ್ಷಸರು, ಈ ಮಹಾಚತುರ ಚತುರಂಗ ಬಲ, ಈ ನವಬ್ರಹ್ಮರು, ಈ ಸೂರ್ಯರು, ಗರುಡ–ಗಂಧರ್ವ, ಯಕ್ಷ-ಕಿನ್ನರ, ಕಿಂಪುರುಷರು ಭೂಮಿಯಲ್ಲಿ ಇನ್ನಾರಿಗಿದ್ದಾರೆ ತೋರಿಸು. ಎಲೆ ವಿಷ್ಣು, ನನ್ನ ವೈಭವಕ್ಕೆ ನೀನು ಸಮನೆ ಹೇಳು, ಎನ್ನಲು ವಿಷ್ಣುವು ಎಲೆ ಮೂಢನಾದ ಬ್ರಹ್ಮ, ಇನ್ನು ಮುಂದೆ ನನ್ನ ಸಾಮರ್ಥ್ಯವನ್ನು ತೋರಿಸುತ್ತೇನೆ ಎಂದನು. ೧೮. ತನ್ನ ವಿಶ್ವರೂಪದಿಂದ ವಿಷ್ಣುವು ದೇವತೆಗಳನ್ನೂ, ಮನುಮುನಿಗಳನ್ನೂ, ರಾಕ್ಷಸರನ್ನೂ, ಹೆಚ್ಚಿನ ಮಾತೇನು ? ಈ ಎಲ್ಲ ಚತುರಂಗಬಲವನ್ನೂ, ಬ್ರಹ್ಮರುಗಳನ್ನೂ, ಸೂರ್ಯರನ್ನೂ, ಗರುಡರನ್ನೂ,

CC-0. Jangamwadi Math Collection. Digitized by eGangotri

ಬಿಡದೆ ಗಂಧರ್ವರಂ ಯಕ್ಷಕಿನ್ನರರನು
ಗ್ಗಡದ ಕಿಂಪುರುಷರಂ ಸೃಜಿಸಿಯನಿತಲ್ಲದಾ
ಗಡೆ ವಿಷ್ಣುಗಳನಸಂಖ್ಯಾತರಂ ತೋರಿದಂ ಪೊಗಳಲೇನಚ್ಚರಿಯನು ೧೮

ಇರಿದಾಡಿತುಭಯಸೇನಾವಿತತಿ ಕರಿಕರಿಯೊ
ಳುರುವಶ್ವವುಶ್ವಂಗಳೊಳ್ ಭಟರ್ ಭಟರೊಳುರೆ
ವಿರುಗವ ರಥಾರೋಪಕರ್ ವರೂಥಾರೂಢರೊಡನೆ ಸುರರಮರರೊಡನೆ
ಸರಿಗರಕ್ಕಸರಸುರರೊಡನನುಕ್ರಮದೊಳಿಂ
ತರಸಿ ನಾನಾಸ್ತ್ರ ಶಸ್ತ್ರಂಗಳಿಂ ಕಾದಿದರ್
ಕುರುಪಿಟ್ಟು ಪೊಗಳ್ವ ಕವಿಯಾರಂಬುಜಾಕ್ಷ ಕಮಲಾಸನರ ಪಟುಭಟರನು ೧೯

ಪರಿವ ರಕ್ತಕೆ ಸಿಡಿವ ತಲೆಗಳ್ಗೆ ಪಾರ್ವಂಬಿ
ಗುರುಳ್ವಟ್ಟೆಗಾರ್ಭಟಿಪ ರವಕಬ್ಧಿಯಾಗಸಂ
ಪರಿದಂತಮವನಿಮಂಡಲಮಂಬುಜಭವಾಂಡಸಮಿತಿಯಿಂಬಿಲ್ಲನಾಯ್ತು
ಗುರುತರ ವಡಬಶಿಖಿಗೆ ಋಕ್ಷಂಗಳಿಗೆ ದಿಶಾ
ಪರಿವೃಢರ ಪತ್ತನಂಗಳ್ಗೆ ಶೇಷನ ತಲೆಗು
ಪರಿಲೋಕತತಿಗದೃಶ್ಯತೆ ವಿಗತಕಾಂತಿ ಕಳ್ತಲೆ ಭರಂ ಬಧಿರವಾಯ್ತು ೨೦

ಗಂಧರ್ವರನ್ನೂ, ಯಕ್ಷ-ಕಿನ್ನರರನ್ನೂ, ಶ್ರೇಷ್ಠರಾದ ಕಿಂಪುರುಷರನ್ನೂ ಸೃಷ್ಟಿಸಿದನು. ಇಷ್ಟೇ ಅಲ್ಲದೆ ಅಸಂಖ್ಯಾತ ವಿಷ್ಣುಗಳನ್ನೂ ತೋರಿಸಿದನು, ಆಶ್ಚರ್ಯವನ್ನು ಏನೆಂದು ಹೊಗಳಲಿ ? ೧೯. ಎರಡು ಕಡೆಯ ಸೈನ್ಯಸಮೂಹವೂ ಪರಸ್ಪರ ಇರಿದಾಡಿತು. ಕ್ರಮವಾಗಿ ಆನೆ-ಆನೆಗಳೊಂದಿಗೆ, ಕುದುರೆ-ಕುದುರೆಗಳೊಂದಿಗೆ, ಭಟರು—ಭಟರೊಂದಿಗೆ, ರಥಿಕರು-ರಥಿಕರೊಡನೆ, ದೇವತೆಗಳು-ದೇವತೆಗಳ ಜೊತೆಗೆ, ಸಮಾನರಾದ ರಾಕ್ಷಸರು-ರಾಕ್ಷಸರ ಜೊತೆಯಲ್ಲಿ ಬೇರೆ ಬೇರೆ ಅಸ್ತ್ರ-ಶಸ್ತ್ರಗಳಿಂದ ಹೋರಾಡಿದರು. ಬ್ರಹ್ಮ ಮತ್ತು ವಿಷ್ಣುವಿನ ವೀರಭಟರುಗಳನ್ನು ಲಕ್ಷ್ಯವಿಟ್ಟು ಹೊಗಳುವ ಕವಿಯಾರು ? ೨೦. ರಕ್ತ ಹರಿಯುತ್ತಿತ್ತು, ತಲೆಗಳು ಸಿಡಿಯುತ್ತಿದ್ದುವು, ಹಾರುವ ಬಾಣಕ್ಕೆ ತಗುಲಿ ದೇಹಗಳು ಉರುಳುತ್ತಿದ್ದುವು, ಆರ್ಭಟದ ಶಬ್ದಕ್ಕೆ ಸಮುದ್ರ, ಆಕಾಶ ಹರಿದಂತೆಯೂ ಭೂಮಂಡಲ ಮತ್ತು ಬ್ರಹ್ಮಾಂಡ ಆಶ್ರಯವಿಲ್ಲದಂತೆ ಆಯಿತು. ಆಗ ಬಡಬಾಗ್ನಿಗೆ ಸಮುದ್ರದಲ್ಲಿ, ನಕ್ಷತ್ರಗಳಿಗೆ ಆಕಾಶದಲ್ಲಿ ಜಾಗವಿಲ್ಲದಂತೆ ಆಯಿತು. ದಿಕ್ಪಾಲಕರ ಪಟ್ಟಣಗಳಿಗೆ ಬ್ರಹ್ಮಾಂಡದಲ್ಲಿ, ಆದಿಶೇಷನಿಗೆ ಭೂಮಂಡಲದಲ್ಲಿ ಜಾಗವಿಲ್ಲದಂತಾಯಿತು, ಪಾತಾಳಲೋಕಗಳ ಸಮೂಹಕ್ಕೆ ಕಣ್ಣು ಕಾಣದಂತಾಗಿ-ಕಾಂತಿಹೀನವಾಗಿ, ಕತ್ತಲೆ

CC-0. Jangamwadi Math Collection. Digitized by eGangotri

ಮುಂಡಗಳ ರುಂಡಗಳ ತಂಡಗಳನುರೆ ಕರುಳ
ಜೊಂಡುಗಳ ತುಂಡುಗಳ ಹಿಂಡುಗಳ ಮುಂಕೆದರ್ದ
ಖಂಡಗಳ ಪಿಂಡಗಳ ಗುಂಡುಗಳನುಂಡುಂಡು ಕೊಂಡಾಡಿ ಪಟುಭಟರನು
ಗಂಡೇಳ್ವ ಭೂತಪ್ರೇತಜಾತಂಗಳಿಂ
ದಿಂಡುರುಳ್ವ ಪೊರಳ್ವ ನರಳ್ವಾ ಪರಾಕ್ರಮಿಗಳಿಂ
ಕಂಡೆಡೆಗೆ ಪಾಯ್ವರಿಂ ಕಾಯ್ವರಿಂ ಸುಯ್ವರಿಂ ತದ್ರಣಾಂಕಣಮೆಸೆದುದು ೨೧

ಪುಂಡರೀಕೋತ್ಪಾತಮಾಗಿಯುಂ ಭಾವಿಸಲ್
ಶುಂಡಾಲದಳಿತಸರಮುಲ್ತು ನುತಕಂಜಾತ
ಮಂಡನಂ ತಾನಾಗಿಯುಂ ದಿವಾಕರನಲ್ತು ಸಲೆ ವಿರಕ್ತಾಂಕಮಾಗಿ
ತಂಡದ ತಪೋವನಮದಲ್ತುರೆ ಶಿವಾನ್ವಿತಂ
ಖಂಡಪರಶುಪ್ರಯುತಮಾಗಿ ಕೈಲಾಸದು
ದ್ದಂಡಗಿರಿಯಲ್ತೆನಿಸಿ ನೋಟಕರ ಕಣ್ಗೆ ರಣಾಂಕಣಂ ಚೆಲ್ವಾದುದು ೨೨

ಈ ಪರಿಯೊಳುಭಯಸೇನಾಭಟರ್ ಪೊಯ್ದಾಡಿ
ರೂಪಳಿದು ಮಡಿವುದಂ ಕಂಡು ಹರಿಕಮಲಜರ್
ಕೋಪಮಾನಸರಾಗಿ ನಿಜವಾಹನಂಗಳಂ ಪದಸಂಜ್ಞೆಯಿಂ ನೂಂಕಲು

ದಟ್ಟವಾಗಿ ಕಿವಿ ಕೇಳದಂತೆ ಆಯಿತು. ೨೧. ಮುಂಡಗಳ, ರುಂಡಗಳ ರಾಶಿಯನ್ನು, ಹಿಂಡುಹಿಂಡಾದ ಕರುಳಮಾಲೆಗಳ ತುಂಡುಗಳನ್ನು, ಮುಂದೆ ಕೆದರಿದ್ದ ಮಾಂಸಖಂಡ ಗಳ-ತಿಂಡಿಗಳ ಉಂಡೆಯನ್ನು ನುಂಗಿ, ವೀರಸೈನಿಕರನ್ನು ಕೊಂಡಾಡಿ ಗಟ್ಟಿಗತನದಿಂದ ಕೂಡಿದ ಭೂತಪ್ರೇತಗಳ ಸಮೂಹಗಳಿಂದಲೂ, ಉರುಳಿಬೀಳುವ, ಹೊರಳುವ, ನರಳುವ ಪರಾಕ್ರಮಿಗಳಿಂದಲೂ, ಸಿಕ್ಕಸಿಕ್ಕಲ್ಲಿ ಹಾಯುವವರಿಂದ, ಯುದ್ಧ ಮಾಡುವವ ರಿಂದ, ನಿಟ್ಟುಸಿರು ಬಿಡುವವರಿಂದಲೂ ಆ ಯುದ್ಧಭೂಮಿಯು ಭಯಂಕರವಾಗಿ ತೋರುತ್ತಿತ್ತು. ೨೨. ಕಮಲಗಳು ಕೀಳಲ್ಪಟ್ಟಿದ್ದರೂ ಆನೆಯಿಂದ ಕಲಕಲ್ಪಟ್ಟ ಸರೋವರವಲ್ಲ, ಶ್ರೇಷ್ಠವಾದ ಕಮಲದಾಭರಣನೇ ತಾನಾಗಿದ್ದರೂ ಸೂರ್ಯನಲ್ಲ, ವೈರಾಗ್ಯದಕಣವಾಗಿದ್ದರೂ ತಪೋವನವಲ್ಲ, ಶಿವೆಯಿಂದ ಒಡಗೂಡಿದುದಾಗಿ, ಶಿವ ಸಹಿತ ವಾಗಿದ್ದರೂ ಕೈಲಾಸದ ಉನ್ನತವಾದ ಗಿರಿಶಿಖರವಲ್ಲ ಎನಿಸಿ ನೋಡುವವರ ಕಣ್ಣಿಗೆ ಆ ಯುದ್ಧಭೂಮಿ ಮನೋಹರವಾಯಿತು. [ಶ್ಲೇಷಾರ್ಥ :--ಆ ಯುದ್ಧಭೂಮಿ ಹುಲಿಯ ಹಾರಾಟದಂತೆ ತೀವ್ರವಾದ ಆಘಾತವುಳ್ಳದ್ದಾಗಿತ್ತು, ಕೂದಲು ಸಮೇತವಾದ ತಲೆಗಳು ಬಿದ್ದಿದ್ದವು, ವಿಶೇಷವಾದ ರಕ್ತದ ಕಣವಾಗಿತ್ತು, ನರಿಗಳಿಂದ ಕೂಡಿತ್ತು ಮತ್ತು ಮುರಿದ ಸಾವಿರಾರು ಕೊಡಲಿಗಳು ಅಲ್ಲಿ ಬಿದ್ದಿದ್ದುವು. ಇವೆಲ್ಲವುಗಳಿಂದ ನೋಡುವವರ ಕಣ್ಣಿಗೆ ಅದು ಮನೋಹರವಾಗಿತ್ತು.] ೨೩. ಈ ರೀತಿಯಾಗಿ ಎರಡು ಕಡೆಯ ಸೈನಿಕರೂ ಹೋರಾಡಿ ರೂಪವಳಿದು ಸತ್ತರು. ಇದನ್ನು ಕಂಡು ವಿಷ್ಣು–ಬ್ರಹ್ಮರಿಬ್ಬರೂ ಕೋಪದಿಂದ ಕೂಡಿದವರಾಗಿ ತಮ್ಮ ತಮ್ಮ ವಾಹನಗಳನ್ನು ಕಾಲಿನ ಸಂಜ್ಞೆಯಿಂದ

CC-0. Jangamwadi Math Collection. Digitized by eGangotri

ಆ ಪಕ್ಷಿ ಪಕ್ಷಾನಿಲಂ ಪೊಯ್ಯಲಾಕ್ಷಣಂ
ಭೂಪಯೋಧಿಗಳೊಂದುಗೂಡಿದುವು ನಿಮಿಷದೊಳ್
ಚಾಪವಂ ಜೇಗೆಯ್ದರುಭಯವೀರರ್ ಭಯಂಕರಮುಣ್ಮುತಿರೆ ಜಗದೊಳು ೨೩.

ಸಟೆಯು ಮಾತೇನಖಿಳ ಲೋಕಮಂ ಸಂಹರಿಪ
ನಿಟಿಲಾಂಬಕನ ಮಹಾಧ್ವಾನಮೋ ವಿಷ್ಣುಪದ
ನಟನದದ್ಭುತ ಪ್ರಳಯಕಾಲಮೇಘಾಡಂಬರಮೊ ಶಿವಶಿವಾ ಪೊಸತೆನೆ
ಪಟುತರದ ಸಮರಲಂಪಟಭಟೋರಸ್ಥಳಂ
ಸ್ಫುಟಮಾಗೆ ಸಕಲದಿಕ್ಕಟಕವಾಟಂ ತೆರೆಯೆ
ಚಟುಲ ಸಂಗ್ರಾಮಭೀಮರ ವಿಜಯಕಾಮರುರುಚಾಪರವಮಳ್ಕಿರಿದುದು ೨೪

ಸೇದಿ ತಾಂ ಸವಡಿವೆರಳಿನೊಳಂಬ ಕರ್ಣಾಂತ
ಕೈದಿಸಿ ನುಡಿದನೆಲವೊ ಬೊಮ್ಮ ಬೊಮ್ಮೆತಿಗಾಂ
ಕಾದೊಡರಿಯದೆ ಪೋದೆಲಾ ನೋಡು ನೋಡಾದೊಡೆನ್ನ ನಾರಾಚವೆನುತೆ
ವೇದಚೋರಧ್ವಂಸಿಯೆಸಲಾ ಕಳಂಬಮಂ
ಛೇದಿಸಿ ಮಗುಳೆ ದಿವ್ಯಬಾಣಂಗಳಿಂದೆಚ್ಚು
ಭೇದಿಸಲುರವನವರ ಘಾತಿಗೆ ಮುರಾಂತಕಂ ನೊಂದು ಖತಿಯಂ ತಾಳ್ದನು ೨೫

ನೂಕಿದರು. ಆ ಪಕ್ಷಿಗಳ ರೆಕ್ಕೆಗಳಿಂದ ಗಾಳಿಯು ಬೀಸಲಾಗಿ ಆ ಬಿರುಸಿಗೆ ಭೂಮಿ ಮತ್ತು ಸಮುದ್ರಗಳು ಒಂದಾದುವು. ಒಂದು ನಿಮಿಷದಲ್ಲಿ ಇಬ್ಬರು ವೀರರೂ ತಮ್ಮ ಬಿಲ್ಲಿನ ಠೇಂಕಾರ ಮಾಡಿದರು, ಪ್ರಪಂಚವು ಭಯಗೊಂಡಿತು. ೨೪. ಸುಳ್ಳುಮಾತೇನು ? ಎಲ್ಲ ಲೋಕವನ್ನೂ ಸಂಹಾರಮಾಡುವ ಮುಕ್ಕಣ್ಣನ ಮಹಾಧ್ವನಿಯೋ ? ನರ್ತನ ಮಾಡುವ ವಿಷ್ಣುವಿನ ಪಾದದ ಅದ್ಭುತವಾದ ಪ್ರಳಯಕಾಲದ ಮೋಡದ ಆಡಂಬರವೋ ! ಶಿವಶಿವಾ ! ಇದು ಹೊಸದು ಎನ್ನುವಂತೆ ಉಗ್ರವಾದ ಯುದ್ಧಾಸಕ್ತ ಭಟರ ಎದೆ ಬಿರಿಯುವಂತೆ, ಎಲ್ಲ ದಿಕ್ಕುಗಳ ಬಾಗಿಲುಗಳೂ ತೆರೆಯುವಂತೆ, ತೀವ್ರ ಯುದ್ಧವೀರರ, ವಿಜಯಕ್ಕೆ ಆಶಿಸುವವರ ಬಿಲ್ಲಿನ ಠೇಂಕಾರದ ಧ್ವನಿಯು ಭಯ ಹುಟ್ಟಿಸಿತು. ೨೫. ಜೋಡಿ ಬೆರಳಿನಿಂದ ಕಿವಿಯವರೆಗೂ ಬಾಣವನ್ನು ಎಳೆದು ವಿಷ್ಣುವು ಹೇಳಿದನು ; ಎಲವೋ ಬ್ರಹ್ಮ, ಬ್ರಹ್ಮಹತ್ಯಾದೋಷ ಬರುತ್ತದೆಂದು ನಾನು ಯುದ್ಧಮಾಡಲಿಲ್ಲ, ಅದನ್ನು ನೀನು ತಿಳಿಯದೆಹೋದೆ ನೋಡು, ನೋಡು ನನ್ನ ಬಾಣದ ಹೊಡೆತವನ್ನು ಎಂದು ವೇದಚೋರನನ್ನು ಧ್ವಂಸಮಾಡಿದ ವಿಷ್ಣುವು ನೀಳವಾದ ಬಾಣವನ್ನು ಬಿಟ್ಟನು. ಆ ಬಾಣವನ್ನು ಬ್ರಹ್ಮನು ತುಂಡರಿಸಿ ಪುನಃ ದಿವ್ಯ ಬಾಣವೊಂದನ್ನು ಪ್ರಯೋಗಿಸಿದನು. ಅದು ಅವನ ಎದೆಯನ್ನು ಭೇದಿಸಿತು. ಅದರ ಹೊಡೆತಕ್ಕೆ ವಿಷ್ಣುವು ನೊಂದು ಕೋಪ

CC-0. Jangamwadi Math Collection. Digitized by eGangotri

ಪೇಳಬಹುದೇಂ ಹರಿಯ ರೋಷವಹ್ನಿಯ ಬಹುಕ
ರಾಳತೆಯನಯ್ಯಯ್ಯೊ ಪೆರರುಪದ್ರಂಗಳಂ
ತೇಲಿಸುವವರ್ ತಾವೆ ಲೋಕಕಂಟಕರಾದರಿದ ಪರಿಹರಿಸದಿರ್ಪುದು
ಬಾಲೇಂದುಮೌಳಿಗೇಂ ಸೈರಣೆಯೆ ತನ್ನ ಕಾಂ
ತಾಲಿಂಗನಕ್ಕಿದೇ ಸಮಯವೇ ಭಕ್ತಜನ
ಪಾಲನೆಂಬೀ ಬಿರುದನುಳಿದನೋ ಹರನೆನುತೆ ಭುವನಜನಮಳವಳಿದುದು ೨೬

ಅನಿತರೊಳ್ ಶುಭಜಲದನಿಭಗಭೀರೋಕ್ತಿಯಿಂ
ವನಜಾಕ್ಷನೆಂದನೆಲೆ ಖೂಳ ಕಮಲಜ ನೀನೆ
ಘನವೆನುತ್ತೆನ್ನೊಡನೆ ಸೆಣಸಿದೀ ಫಲವನುಣ್ಣೆನುತೆಚ್ಚು ಬೊಬ್ಬಿಡಲ್ಕೆ
ಕನಲಿ ಬರ್ಪಾ ಬಾಣಮಂ ಕಡಿದು ಜಡದು ಭೋಂ
ಕನೆ ಚಿನ್ನಬತ್ತಳಿಕೆಯಿಂದೆ ಬ್ರಹ್ಮಾಸ್ತ್ರಮಂ
ವನಜಭವನುಗಿದು ತಿರುವಿಗೆ ಪೂಡಿ ಕಿವಿವರೆಗೆ ತೆಗೆದು ಬೊಬ್ಬಿರಿದೆಚ್ಚನು ೨೭

ಎಲೆಲೆ ಬೆಂದುದು ಲೋಕವೀಕ್ಷಣಂ ಜಗಕಿದೇಂ
ವಿಲಯಮೋ ನಿಲಿಸು ನಿಲಿಸೀ ಮೂರ್ಖಕಮಲಜನ
ಕೊಲೆಗಡುಕಸರವನೆಂದಲ್ಲಲ್ಲಿ ಗುಜುಗುಜಿಸೆ ಮುಂಬರಿವ ಬ್ರಹ್ಮಾಸ್ತ್ರವ

ಗೊಂಡನು. ೨೬. ವಿಷ್ಣುವಿನ ಕೋಪಾಗ್ನಿಯ ಉಗ್ರತೆಯನ್ನು ಬಣ್ಣಿಸಲು ಸಾಧ್ಯವೆ ? ಅಯ್ಯಯ್ಯೊ ! ಇತರರ ಕೋಟಲೆ ಉಪದ್ರವಗಳನ್ನು ನಿವಾರಿಸುವವರು ತಾವೇ ಲೋಕಕಂಟಕರಾದರೆ ಇದನ್ನು ಪರಿಹರಿಸದಿರುವುದು ಸೈರಿಸುವುದು ಶಿವನಿಗೆ ಸಾಧ್ಯವೆ? ತನ್ನ ಕಾಂತೆಯ ಅಪ್ಪುಗೆಯಲ್ಲಿರಲು ಇದೇ ಸಮಯವೆ ? ಭಕ್ತಜನಪಾಲನೆಂಬ ತನ್ನ ಬಿರುದನ್ನು ಬಿಟ್ಟುಬಿಟ್ಟನೋ ಶಿವನು ಎನ್ನುತ್ತ ಲೋಕದ ಜನ ಶಕ್ತಿಗುಂದಿ ವ್ಯಥೆಪಟ್ಟರು. ೨೭. ಅಷ್ಟರಲ್ಲಿ ಮೇಘಗಂಭೀರಧ್ವನಿಯಿಂದ ವಿಷ್ಣುವು ಹೀಗೆ ಹೇಳಿದನು, ಎಲೆ ನೀಚಬ್ರಹ್ಮನೆ, ನೀನೇ ದೊಡ್ಡವನೆನ್ನುತ್ತ ನನ್ನೊಡನೆ ಯುದ್ಧಮಾಡಿದುದರ ಫಲವನ್ನು ಅನುಭವಿಸು ಎನ್ನುತ್ತ ಬಾಣವನ್ನು ಬಿಟ್ಟು ಅಬ್ಬರಿಸಲು, ರೋಷದಿಂದ ಬರುತ್ತಿರುವ ಬಾಣವನ್ನು ಕಡಿದು ಕೋಪದಿಂದ ಜರಿದು ತಕ್ಷಣ ಬ್ರಹ್ಮನು ತನ್ನ ಚಿನ್ನದ ಬತ್ತಳಿಕೆಯಿಂದ ಬ್ರಹ್ಮಾಸ್ತ್ರವನ್ನು ತೆಗೆದುಕೊಂಡು ಬಿಲ್ಲಿಗೆ ಹೂಡಿ ಕಿವಿಯವರೆಗೆ ಎಳೆದು ಬೊಬ್ಬಿರಿಯುತ್ತ ಪ್ರಯೋಗಿಸಿದನು. ೨೮. ಓಹೋ ! ಈ ಕ್ಷಣ ಲೋಕವು ಸುಟ್ಟು ಹೋಯಿತು, ಜಗತ್ತಿಗೆ ಇದೇನು ಪ್ರಳಯವೋ ! ಈ ಮೂರ್ಖ ಬ್ರಹ್ಮನ ಕೊಲೆಗಡುಕತನವನ್ನು ತಡೆ, ತಡೆ ಎನ್ನುತ್ತ ಅಲ್ಲಲ್ಲಿ ಗುಜು ಗುಜು ಶಬ್ದ ಉಂಟಾಯಿತು, ಮುಂದೆ ಮುಂದೆ ಬರುತ್ತಿರುವ ಬ್ರಹ್ಮಾಸ್ತ್ರವನ್ನು ವಿಷ್ಣುವು ನೋಡಿ ತನ್ನ ಬತ್ತಳಿಕೆಯಲ್ಲಿದ್ದ

CC-0. Jangamwadi Math Collection. Digitized by eGangotri

ಜಲಜನಾಭಂ ಕಂಡ ತನ್ನ ಬತ್ತಳಿಕೆಯಿಂ
ಸೆಳೆದನುನ್ನತ ವೈಷ್ಣವಾಸ್ತ್ರಮಂ ಪೆರ್ಗಿಡಿಯ
ಬಳಗಂಗಳವಗಡಿಸೆ ಭಟರ ಭಯಮಿಮ್ಮಡಿಸೆ ಪೂಡಿದಂ ಕಾರ್ಮುಕದೊಳು ೨೮

ಪೂಡಬೇಡಕಟ ನಿಲ್ಲೆಂಬಂತೆ ಗಿರಿಗಳ
ಲ್ಲಾಡುತಿರ್ದುವು ಬಾಧವಹ್ನಿ ಪೀರ್ದಪುದೆಂದು
ನೋಡೆ ಮೊರೆಯಿಡುವಂತೆ ಶರಧಿ ತಳಮಳಲೇಳಲುದ್ಘೋಷಮಯಮಾದುದು
ಪೂಡೆ ಪಣ್ಣಾಮಳಕಫಲಮುದಿರ್ವಂದದಿಂ
ನಾಡೆ ಸುರಿದುದು ಋಕ್ಷರಾಜಿ ಲೋಕಂಗಳಿಗೆ
ಕೇಡಡಸಿತೆಂದು ಬಾಯ್ಬಿಡುವಂತೆ ಧರಣೀತಳಂ ಬಿರಿದುದೇವೇಳ್ವೆನು ೨೯

ನಾರಿಯಿಂದುಗಿದು ಬಿಡಲಾಕ್ಷಣಂ ಲಯದ ಮದ
ನಾರಿಯುರಿಗಣ್ಣಂತೆ ಬರ್ಪುದಂ ಪೇಳ್ವ ನರ
ನಾರಿನ್ನುಮದರ ಮಾರ್ಗಿಡಿಗಳಿಂ ಸಕಲಲೋಕಾಳಿ ಸಂವರ್ತಮಾಯ್ತು
ವಾರಿಜಭವಾಸ್ತ್ರಮಿಾ ಪ್ರತ್ಯಸ್ತ್ರಮಂ ಕಂಡು
ವಾರಿಧಿಯ ಕಿಚ್ಚಿನಂತಡರ್ದು ಲಟಕಟಿಸಲ್ಕೆ
ವಾರಿರುಹನಾಭನ ಶರಂ ತುಡುಕಿದುದು ಕವಿವ ಪೆರ್ಗಿಡಿಯ ಸಡಗರದೊಳು ೩೦

ಶ್ರೇಷ್ಠವಾದ ವೈಷ್ಣವಾಸ್ತ್ರವನ್ನು ಸೆಳೆದು ತನ್ನ ಕಡೆಯ ಬಳಗವು ಭಂಗಿಸುತ್ತಿರಲು, ಭಟಸಮೂಹದ ಭಯ ಹೆಚ್ಚಾಗಲು, ಆ ದೊಡ್ಡ ಬೆಂಕಿಯ ಕಿಡಿಗಳನ್ನು ಉಗುಳುವ ಅಸ್ತ್ರವನ್ನು ಬಿಲ್ಲಿಗೆ ಹೂಡಿದನು. ೨೯. ಅಯ್ಯೋ ! ಆ ಬಾಣವನ್ನು ಹೂಡಬೇಡ, ತಡೆ, ತಡೆ ಎಂದು ಹೇಳುವಂತೆ ಪರ್ವತಗಳು ಅಲ್ಲಾಡುತ್ತಿದ್ದುವು. ಬಾಣದ ಬೆಂಕಿ ನೀರನ್ನೆಲ್ಲ ಹೀರುತ್ತದೆ ಎಂದು ಮೊರೆಯಿಡುವಂತೆ ಸಮುದ್ರವು ತಳಮಳಿಸುತ್ತ ಮಹಾ ಶಬ್ದಮಾಡಿತು. (ಆ ಮಹಾಸ್ತ್ರವನ್ನು) ಹೂಡಲು ಹಣ್ಣಾದ ನೆಲ್ಲಿಕಾಯಿ ಉದಿರುವಂತೆ ನಕ್ಷತ್ರಗಳ ಸಮೂಹ ಉದುರಿದುವು, ಲೋಕಗಳಿಗೆ ಕೇಡು ಆವರಿಸಿತು ಎಂದು ಬಾಯಿ ಬಿಡುವಂತೆ ಭೂಮಿ ಬಿರಿಯಿತು, ಅದನ್ನು ಏನು ಹೇಳಲಿ ? ೩೦. ಆ ಬಾಣವನ್ನು ಬಿಲ್ಲಿನ ಹೆದೆಯಿಂದ ಬಿಟ್ಟ ಕೂಡಲೆ ಅದು ಪ್ರಳಯಕಾಲದ ಮುಕ್ಕಣ್ಣನ ಉರಿಗಣ್ಣಂತೆ ಬರುತ್ತಿದ್ದಿತು. ಅದನ್ನು ವರ್ಣಿಸುವ ಮನುಷ್ಯರು ಯಾರಿದ್ದಾರೆ ? ಅದರ ದೊಡ್ಡ ಕಿಡಿಗಳಿಂದ ಎಲ್ಲ ಲೋಕಗಳೂ ಮುಚ್ಚಿ ನಾಶವಾಗಿ ಹೋದುವು, ಬ್ರಹ್ಮಾಸ್ತ್ರವು ಈ ಪ್ರತ್ಯಸ್ತ (ವೈಷ್ಣವಾಸ್ತ್ರ)ವನ್ನು ನೋಡಿ ಬಡಬಾಗ್ನಿಯಂತೆ ಹಬ್ಬಿ ಉದ್ರೇಕಗೊಳ್ಳಲು, ವಿಷ್ಣುವಿನ ಬಾಣವು ಸಡಗರದಿಂದ ಕವಿಯುತ್ತಿರುವ ದೊಡ್ಡ ಕಿಡಿಗಳನ್ನು ಹಿಡಿದು

CC-0. Jangamwadi Math Collection. Digitized by eGangotri

ಹೂಂಕರಿಸುತುರಿಯನುಗುಳುತೆ ಮಲೆತು ಮತ್ಸರಿಸಿ
ಶಂಕೆಯಂ ಪುಟ್ಟಿಸುತೆ ಹರಿಕಮಲಜರ್ಗಾ ರ
ಣಾಂಕಣಮನುಳಿದಭ್ರಮಂಡಲದೊಳೊಂದನೊಂದಡರ್ದು ಚುಂಬಿಸುವಾಗಳು
ಪಂಕಜಭವಾಂಡಮುರಿದುದು ಮಹಾಪ್ರಲಯದಾ
ತಂಕಮಾದುದು ಹರಿವಿರಿಂಚಿಗಳ್ಗಿವರಿರ್ವ
ರುಂ ಕೂಡಿ ವರಖಗದ್ವಯವಲ್ಲದಾಹವಂ ಶೂನ್ಯಮಾಯ್ತೀವೇಳ್ವಿನು ೩೧

ಹರಿ ಗರುತ್ಮನನಿಳಿದು ಕರಕಾರ್ಮುಕವನುಳಿದು
ಗುರುತರ ಗದಾದಂಡಮಂ ಕೊಂಡು ನಿಲೆ ಕಂಡು
ಸರಸಿಜಭವಂ ವಾಹನವನಿಳಿದು ತಾಂ ಗದಾದಂಡಮಂ ತಳೆದುಕೊಂಡು
ಪರಿಪರಿದು ಪಾಡರಿದು ತಳಮೇಲ್ಗಳೊಳಗೆ ಪೊ
ಯ್ದುರವಣಿಸಿ ಪೆರಸಾರಿ ಮುಂಬರಿದು ಗದೆಗಳಂ
ತಿರುಪಿ ಭುಜಸತ್ತ್ವದಿಂ ತೋರಿದರ್ ಘನಗದಾಯುದ್ಧಮಂ ಸಂಗರದೊಳು ೩೨

ಪೊಯ್ವನೀ ಹರಿ ವಂಚಿಪಂ ಬೊಮ್ಮನದು ಪುಸಿಯೆ
ಕಾಯ್ವನೀ ಹರಿ ಕೂಡೆ ಕೈಮಾಳ್ಪನೀ ಬ್ರಹ್ಮ
ನಯ್ವಡಿ ಪರಾಕ್ರಮದೊಳೆರಗುವಂ ಹರಿ ಮತ್ತೆ ಮೈಗೊಡಂ ಕಮಲಭವನು

ಉಗುಳಿತು. ೩೧. ಆ ಎರಡು ಬಾಣಗಳೂ ಹೂಂಕರಿಸುತ್ತ ಉರಿಯನ್ನು ಉಗುಳುತ್ತ ಕೊಬ್ಬಿ ಮತ್ಸರಿಸಿದುವು. ಬ್ರಹ್ಮ–ವಿಷ್ಣುಗಳಿಗೆ ಅನುಮಾನ ಹುಟ್ಟುವಂತೆ ಮಾಡಿ ರಣಾಂಗಣವನ್ನು ಬಿಟ್ಟು ಆಕಾಶಕ್ಕೆ ಹಾರಿ ಒಂದನ್ನೊಂದು ಏರಿ ಮುತ್ತಿಟ್ಟವು. ಆಗ ಬ್ರಹ್ಮಾಂಡ ಉರಿಯಿತು, ಬ್ರಹ್ಮ ಮತ್ತು ವಿಷ್ಣುವಿಗೆ ಮಹಾಪ್ರಳಯವಾಗುವುದೆಂಬ ಆತಂಕ ಹುಟ್ಟಿತು, ಬ್ರಹ್ಮ–ವಿಷ್ಣು ಮತ್ತು ಅವರ ವಾಹನಗಳಾದ ಪಕ್ಷಿಗಳನ್ನು ಬಿಟ್ಟು ಉಳಿದವರೆಲ್ಲರೂ ಓಡಿಹೋದರು, ಯುದ್ಧಭೂಮಿಯು ಶೂನ್ಯವಾಯಿತು. ೩೨. ವಿಷ್ಣು ಗರುಡನನ್ನು ಇಳಿದು ಕೈಯಲ್ಲಿದ್ದ ಬಿಲ್ಲನ್ನು ಬಿಸುಟು ದೊಡ್ಡ ಗದೆಯನ್ನು ತೆಗೆದು ಕೊಂಡು ನಿಂತನು. ಅದನ್ನು ನೋಡಿದ ಬ್ರಹ್ಮನು ಕೂಡ ತನ್ನ ವಾಹನದಿಂದ ಇಳಿದು ತಾನೂ ಗದೆಯನ್ನು ತೆಗೆದುಕೊಂಡನು. ಒಬ್ಬರನ್ನೊಬ್ಬರು ತಪ್ಪಿಸಿ ಓಡಾಡಿದರು, ಕ್ರಮವನ್ನು ತಿಳಿದು ಮೇಲೆ—ಕೆಳಗೆ ವಿಜೃಂಭಿಸಿ ಹೊಡೆದರು, ವೇಗದಿಂದ ಹಿಂದೆ ಸರಿದು, ಮುಂದೆ ಬಂದು ಗದೆಗಳನ್ನು ತಿರುಗಿಸುತ್ತ ತಮ್ಮ ಭುಜಬಲದಿಂದ ಆ ಯುದ್ಧರಂಗದಲ್ಲಿ ಭಯಂಕರವಾದ ಗದಾಯುದ್ಧವನ್ನು ಪ್ರದರ್ಶಿಸಿದರು. ೩೩. ವಿಷ್ಣುವು ಹೊಡೆಯುತ್ತಾನೆ, ಬ್ರಹ್ಮನು ಅದನ್ನು ತಪ್ಪಿಸಿಕೊಳ್ಳುತ್ತಾನೆ. ತನ್ನ ಏಟು ತಪ್ಪಿಹೋಗಲು ವಿಷ್ಣು ಸಮಯಕ್ಕಾಗಿ ಕಾಯುತ್ತಾನೆ. ತಕ್ಷಣ ಬ್ರಹ್ಮನು ಹೊಡೆಯುತ್ತಾನೆ. ಅವನಿಗಿಂತ ಐದುಪಟ್ಟು ಹೆಚ್ಚು ಪರಾಕ್ರಮದಿಂದ ವಿಷ್ಣು ಮೇಲೆ ಬೀಳುತ್ತಾನೆ. ಮತ್ತೆ ಬ್ರಹ್ಮನು ತಪ್ಪಿಸಿಕೊಳ್ಳುತ್ತಾನೆ. ಬ್ರಹ್ಮನು ಅಲಕ್ಷ್ಯದಿಂದಿರುವ

CC-0. Jangamwadi Math Collection. Digitized by eGangotri

ಪಾಯ್ವನೀ ಪರಿಯಜಂ ನಿರ್ಲಕ್ಷನಾಗೆ ತಲೆ
ಗಾಯ್ವನೇ ನಿನ್ನನೆನುತೆರಗುವಂ ಬಿದಿಯೊಲಿದು
ಮೆಯ್ವಳಿಗೆ ಸಂದು ಸಾಧಿಸುವಂ ಮುರಧ್ವಂಸಿ ಪೊಗಳಲೇನಚ್ಚರಿಯಃನು ೩೩

ಮಿಾರುವರ್ ಬೀರುವರ್ ಶೌರ್ಯಮಂ ರಣಕೆ ಕಲಿ
ಯೇರುವರ್ ತೋರುವರ್ ಸಾಸಮಂ ಪೊಯ್ದು ಕೈ
ದೋರುವರ್ ಪೋರುವರ್ ಗಾಯಮಂ ಧರಣಿಮಂಡಲದಿಂದೆ ಗಗನತಳಕೆ
ಪಾರುವರ್ ಕೀರುವರ್ ಕೆಲಕಡೆಗೆ ಹರಿಯಂತೆ
ಚೀರುವರ್ ಜಾರುವರ್ ಮೆಯ್ಗೊಡದೆ ಬೀರಮಂ
ದೂರುವರ್ ಮಾರುವರ್ ಮೆಯ್ಗಳಂ ವಿಕ್ರಮದ್ರವ್ಯಕಿರ್ವರ್ ಸುಭಟರು ೩೪

ಇಂತಿರ್ವರುಂ ಸೋಲುಗೆಲವುಗಾಣದೆ ಗದೆಗ
ಳಂ ತೊರೆದು ಮಲ್ಲಗಾಳೆಗಕೆಳಸುತಿರಲಾಗ
ಕಂತುಪಿತನೇರುವ ಗರುತ್ಮಂಗೆ ಕಮಲಜನ ಹಂಸೆಗಾದುದು ಕಾಳೆಗಂ
ಅಂತವೆರಡುಂ ಕಾದಿ ಹತಮಾಗಿ ಪೋದ ಸಮ
ನಂತರದೊಳುಭಯವೀರರ್ ಬಾಹುಯುಗವನ
ತ್ಯಂತರೋಷದೊಳಾರ್ಭಟಿಸಿ ಪೊಯ್ಯಲಾ ಧ್ವನಿ ಮಹಾಭಯಂಕರಮಾದುದು ೩೫

ಸಮಯದಲ್ಲಿ ಹರಿಯು ಮೇಲೆ ಬೀಳುತ್ತಾನೆ. ನಿನ್ನ ತಲೆ ಉಳಿಸುತ್ತೇನೆಯೋ ಎಂದು ಬ್ರಹ್ಮನು ಸಮಯಸಾಧಿಸಿ ಮೇಲೆ ಬೀಳುತ್ತಾನೆ. ಅವನು ಮೈಮರೆತಾಗ ಸಮಯವನ್ನು ಸಾಧಿಸುತ್ತಾನೆ ವಿಷ್ಣು. ಈ ಆಶ್ಚರ್ಯವನ್ನು ಏನೆಂದು ಹೇಳಲಿ ? ೩೪. ಒಬ್ಬರ ನ್ನೊಬ್ಬರು ಮಿಾರಿಸುತ್ತಾರೆ, ಶಕ್ತಿಯನ್ನು ತೋರಿಸುತ್ತಾರೆ, ಯುದ್ಧಭೂಮಿಯಲ್ಲಿ ಪರಾಕ್ರಮದಿಂದ ಎರಗುತ್ತಾರೆ, ಸಾಹಸವನ್ನು ತೋರಿಸುತ್ತಾರೆ, ಹೊಡೆದು ತಮ್ಮ ಕೈಚಳಕವನ್ನು ತೋರಿಸುತ್ತಾರೆ, ಹೋರಾಡುತ್ತಾರೆ. ಆಘಾತವುಂಟುಮಾಡುತ್ತಾರೆ, ಭೂಮಿಯಿಂದ ಆಕಾಶಕ್ಕೆ ನೆಗೆಯುತ್ತಾರೆ, ಸಿಟ್ಟಿನಿಂದ ಮೊರೆಯುತ್ತಾರೆ, ಸಿಂಹದಂತೆ ಗರ್ಜಿಸುತ್ತಾರೆ, ತಮ್ಮ ದೇಹವನ್ನು ಕೊಡದೆ ಜಾರುತ್ತಾರೆ, ಒಬ್ಬರ ಪರಾಕ್ರಮವನ್ನು ಮತ್ತೊಬ್ಬರು ದೂರುತ್ತಾರೆ, ಆ ಇಬ್ಬರು ಸಾಹಸಿಗಳೂ ಪರಾಕ್ರಮಲಕ್ಷ್ಮಿಗೆ ತಮ್ಮ ದೇಹವನ್ನು ಮಾರುತ್ತಾರೆ. ೩೫. ಈ ರೀತಿಯಾಗಿ ಇಬ್ಬರೂ ಸೋಲು-ಗೆಲವುಗಳನ್ನು ಕಾಣದೆ ಗದೆಗಳನ್ನು ಬಿಸುಟು ಮಲ್ಲಯುದ್ಧಕ್ಕೆ ಮನಸ್ಸು ಮಾಡುತ್ತಿರಲು ಅಷ್ಟುಹೊತ್ತಿಗೆ ವಿಷ್ಣುವಿನ ವಾಹನವಾದ ಗರುಡನಿಗೂ, ಬ್ರಹ್ಮನು ಹತ್ತುವ ಹಂಸಕ್ಕೂ ಕಾಳಗವಾಯಿತು, ಆ ರೀತಿಯಾಗಿ ಕಾದಾಡಿ ಅವೆರಡೂ ಘಾಸಿಗೊಂಡು ಹೋದುವು. ಆ ಸಮಯದಲ್ಲಿ ಇಬ್ಬರು ವೀರರೂ ಅತಿಯಾದ ಕೋಪದಿಂದ ಅಬ್ಬರಿಸಿ ಎರಡು ತೋಳುಗಳನ್ನೂ

CC-0. Jangamwadi Math Collection. Digitized by eGangotri

ಲಲಿತಕರ್ಪೂರತಾಂಬೂಲಮಂ ತಮ್ಮಣಲೊ
ಳಳವಡಿಸಿ ಪುದಿದ ಬೆಮರ್ವನಿಗಳಂ ತತ್‌ಕ್ಷಣಂ
ಕಳನ ಧೂಳಿಯೊಳೆ ತಂಬಿಸಿ ಮುಷ್ಟಿಯಂ ಬಲಿದೆವೆಗಳಲುಗದೀಕ್ಷಿಸುತ್ತೆ
ನಳಿನಭವ ನಳಿನಾಕ್ಷರಿರ್ವರುಂ ಕೈಗಳಂ
ಪತೆ ತೋರಿ ತೋರುತೆ ಕುಲಾಲಚಕ್ರದ ಬವಣಿ
ಯೊಲುವೊಂದು ಯಾಮಮಾತ್ರಂ ತಿರುಗಿದರ್ ದಿಶಾಮಂಡಲಂ ತಿರುಗುತಿರಲು ೩೬

ನೋಡಿ ಬಣ್ಣಿಪರನಿಮಿಷರ್ಗೆ ಫಣಿರಾಜಂಗೆ
ಕೇಡು ಸಂಭವಿಸಿತ್ತು ಭಟರ ಸಂಗ್ರಾಮಮಂ
ನಾಡೆ ನಿಟ್ಟಿಸಿ ಪೊಗಳ್ವರಾರೋ ಮಹಾದೇವ ರಣಕಿದೇ ಕಡೆಯೆನಲ್ಕೆ
ನೀಡಿರ್ದ ವಾಮಹಸ್ತವ ನೆವರಿದುರುತರದ
ಗೂಢಮುಷ್ಟಿಯ ಚಪಲತನುಲತೆಯ ಕಲಿಗಳೊಲೆ
ದಾಡುತಿರ್ದರ್ ಧರಾಕಂಪದೊಳ್ ಕಂಪಿಸುವ ಕುಲಗಿರಿಯ ಪಾಂಗಿನಿಂದೆ ೩೭

ಘನಗುರುತ್ವಕೆ ರೋಹಣಾದ್ರಿ ನೀಲಾದ್ರಿಗಳ್
ಕನಲ್ದು ಕಾದಲ್ಕೆ ಬಂದುವೋ ಪೇಳೆನಲ್ಕಾಗ
ವನಜಭವ ವನಜನಾಭರ್ ತೋರಿದರ್ ಪೊಯ್ದು ತನತನಗೆ ಕೌಶಲ್ಯವ

ತಟ್ಟಿದರು. ಆ ಧ್ವನಿ ಕೇಳಲು ಬಹಳ ಭಯಂಕರವಾಯಿತು. ೩೬. ಮೃದುವಾದ ಕರ್ಪೂರವೀಳೆಯವನ್ನು ತಮ್ಮ ಬಾಯಲ್ಲಿ ಇಟ್ಟುಕೊಂಡು ಮೈಯಿಂದ ಹೊರಟ ಬೆವರುಹನಿಗಳನ್ನು, ಯುದ್ಧರಂಗದ ಧೂಳಿನೊಡನೆ ಸೇರಿಸಿದರು. ಮುಷ್ಟಿಯನ್ನು ಬಿಗಿದು, ರೆಪ್ಪೆಯನ್ನು ಅಲ್ಲಾಡಿಸದೆ ಒಬ್ಬರನ್ನು ಒಬ್ಬರು ನೋಡುತ್ತ, ಬ್ರಹ್ಮ ವಿಷ್ಣು ಗಳಿಬ್ಬರೂ ತಮ್ಮ ಕೈಗಳನ್ನು ಚೆನ್ನಾಗಿ ತೋರಿಸುತ್ತಾ, ಕುಂಬಾರನ ಚಕ್ರವು ತಿರುಗುವಂತೆ ದಿಙ್ಮಂಡಲವು ಸುತ್ತುತ್ತಿರಲು ಒಂದು ಜಾವ ಕಾಲ ಸುತ್ತಿದರು. ೩೭. ಇದನ್ನು ನೋಡಿ ವರ್ಣಿಸುವರೆ, ದೇವತೆಗಳಿಗೆ, ಆದಿಶೇಷನಿಗೆ ಕೇಡು ಉಂಟಾಯಿತು. ಈ ವೀರರ ಯುದ್ಧವನ್ನು ಚೆನ್ನಾಗಿ ನೋಡಿ ಯಾರು ಹೊಗಳಲು ಶಕ್ತರು ? ಮಹಾದೇವ, ಯುದ್ಧಕ್ಕೆ ಇದೇ ಕಡೆಯೆನ್ನುವಂತೆ ಮುಂದೆ ಚಾಚಿದ್ದ ಎಡಗೈಯನ್ನು, ಬಲಿಷ್ಠವಾದ ಮುಷ್ಟಿಯನ್ನು, ಚುರುಕಾದ ಚಲನವನ್ನು ಹೊಂದಿದ್ದ ದೇಹವನ್ನು ಆ ಇಬ್ಬರು ವೀರರೂ ಭೂಮಿಯ ಕಂಪನದಿಂದ ಕುಲಪರ್ವತಗಳು ಕಂಪಿಸುವ ರೀತಿಯಲ್ಲಿ ಅತ್ತಿತ್ತ ತೂಗಾಡಿಸು ತ್ತಿದ್ದರು. ೩೮, ತಮ್ಮ ಹೆಚ್ಚಾದ ಶ್ರೇಷ್ಠತೆಗಾಗಿ ರೋಹಣಾದ್ರಿ ಮತ್ತು ನೀಲಾದ್ರಿಗಳು ಪರಸ್ಪರ ಕೋಪಗೊಂಡು ಕಾದಾಡಲು ಬಂದಿವೆಯೋ ಹೇಳು ಎನ್ನುವಂತೆ ಆಗ ಬ್ರಹ್ಮ ಮತ್ತು ವಿಷ್ಣುಗಳು ಹೋರಾಡಿ ತಮ್ಮ ತಮ್ಮ ಕೌಶಲ್ಯವನ್ನು ತೋರಿಸಿದರು. ತಮ್ಮ

CC-0. Jangamwadi Math Collection. Digitized by eGangotri

ಮಿನುಗೆ ಮುಷ್ಟಿಯೊಳೆ ಪೆರ್ಗಿಡಿ ತಿವಿವ ತಿವಿಗಳ್ಗೆ
ದನಿದೋರೆ ಭಟರ ಕಾಯಂ ಗೆಲವುಗಾಣದ
ತ್ಯನುಪಮಪರಾಕ್ರಮಿಗಳಾರ್ಭಟಿಸಿ ಪೊಯ್ದಾಡಿದರ್ ಮಹಾಸಂಗರದೊಳು ೩೮

ಕರವಲಯಕೋರೊರ್ಮೆ ತಳಹತ್ತಕೋರೊರ್ಮೆ
ಸರಿಸಮುಂಕಡಕೊರ್ಮೆ ಬಂಧಪಟ್ಟಿಸಕೊರ್ಮೆ
ಉರಗಬಂಧನಕೊರ್ಮೆ ಬಾಹುದಣಿವಿಂಗೊರ್ಮೆ ಡೊಕ್ಕರಕ್ಕೊರ್ಮೆಯೊರ್ಮೆ
ಸಿರವಲಯಕೋರೊರ್ಮೆ ಕಂಡಡೊಕ್ಕರಕೊರ್ಮೆ
ಹರಿಕಮಲಭವರೊದಗಿದರ್ ಮತ್ತೆಯುಂ ಗೆಲವು
ದೊರೆಕೊಳ್ಳದಿರೆ ಮಹಾರೋಷಮಾನಸನಾಗಿ ಮಾಧವಂ ಚಿಂತಿಸಿದನು ೩೯

ಎನ್ನೊಡನೆ ಸರಿಬರಿಗೆ ಬರಲೇಸರವನಿವನ
ಗನ್ನವಂ ನಿಲಿಸುವೆಂ ತಾನೆನುತೆ ಮಾಧವಂ
ನನ್ನಿಯಿಂ ಕಮಲಜನ ಘಾತಿಗೊಡಲಂಗೊಟ್ಟು ಗೆಲವುದೋರಿಸಿ ಖತಿಯೊಳು
ಮುನ್ನೀರ ಮಗಳ ಗಂಡಂ ಬ್ರಹ್ಮಮಸ್ತಕವ
ನುನ್ನತದ ಮುಷ್ಟಿಯಿಂ ತಿವಿಯಲ್ಕೆ ತಚ್ಛಿರಂ
ಭಿನ್ನಮಾದುದು ನಾಲ್ಕು ಸೀಳ್ ಸಕ್ಕಸಮನಾಗೆ ಪೇಳ್ವೆನೇನದ್ಭುತವನು ೪೦

ಮುಷ್ಟಿಯಲ್ಲಿ ಬೆಂಕಿಯ ದೊಡ್ಡ ಕಿಡಿ ಹೊಳೆಯಲು, ಪರಸ್ಪರ ತಿವಿದಾಗ ಆ ವೀರರ ಶರೀರದಿಂದ ಶಬ್ದ ಹೊರಡುತ್ತಿರಲು, ಯಾರೂ ಗೆಲ್ಲದ ಆ ಪರಾಕ್ರಮಿಗಳು ಆರ್ಭಟಿಸಿ ೩೯. ಒಬ್ಬೊಬ್ಬರ ಬಾಹುಬಂಧನಕ್ಕೆ ಒಂದೊಂದು ಬಾರಿ ಒಬ್ಬೊಬ್ಬರು ಸಿಕ್ಕುತ್ತಿದ್ದರು. ಘೋರಯುದ್ಧದಲ್ಲಿ ಹೊಡೆದಾಡಿದರು. ಅಂಗೈ ಹಿಡಿತಕ್ಕೊಂದು ಸಾರಿ, ಕೋತಿಪಟ್ಟಿಗೊಂದು ಸಾರಿ, ಬಂಧವರಸೆಗೊಂದು ಬಾರಿ, ಸರ್ಪಬಂಧನಕ್ಕೊಂದು ಬಾರಿ, ಬಾಹುದಣಿವೆಂಬ ಪಟ್ಟಿಗೊಂದು ಬಾರಿ, ಗುದ್ದಿನ ಹೊಡೆತಕ್ಕೊಂದು ಸಾರಿ, ಕತ್ತಿನ ಪ್ರದೇಶದ ಪಟ್ಟಿಗೊಂದು ಬಾರಿ, ಮಾಂಸಖಂಡದ ಹೊಡೆತಕ್ಕೊಂದು ಸಾರಿ ಬ್ರಹ್ಮ-ವಿಷ್ಣುಗಳು ಒಳಗಾದರು. ಆದರೂ ಯಾರಿಗೂ ಗೆಲುವು ಉಂಟಾಗದಿರಲು ವಿಷ್ಣುವು ಮಹಾ ರೋಷಚಿತ್ತನಾಗಿ ಯೋಚಿಸಿದನು. ೪೦. ನನ್ನ ಸರಿಸಮನಾಗಲು ಇವನು ಎಷ್ಟರವನು ? ನಾನು ಇವನ ಒಣ ಹೆಮ್ಮೆಯನ್ನು ಮುರಿಯುತ್ತೇನೆ ಎಂದು ಮಾಧವನು ಬ್ರಹ್ಮನ ಹೊಡೆತಕ್ಕೆ ದೇಹವನ್ನು ಒಡ್ಡಿ ಅವನಿಗೆ ಗೆಲುವನ್ನು ತೋರಿಸುವಂತೆ ನಟಿಸಿ, (ಶರಧಿಸುತೆಯ ಗಂಡನಾದ ವಿಷ್ಣುವು) ಸಿಟ್ಟಿನಿಂದ ಬ್ರಹ್ಮನ ತಲೆಯನ್ನು ತನ್ನ ಮುಷ್ಟಿಯಿಂದ ಚಚ್ಚಿದನು. ಆ ಹೊಡೆತಕ್ಕೆ ಬ್ರಹ್ಮನ ತಲೆಯು ಸರಿಸಮನಾಗಿ ನಾಲ್ಕು ಹೋಳಾಗಿ ಒಡೆಯಿತು. ಆ ಅದ್ಭುತವನ್ನು ಏನು ಹೇಳಲಿ ?

CC-0. Jangamwadi Math Collection. Digitized by eGangotri

ಶಿರವೊಡೆದೊಡೇನಾಯ್ತು ಸರಸಿರುಹಸಂಭವಂ
ಧುರದರಿದ್ರನೆ ಬಿರಿದ ಮಸ್ತಕದ ಪೋಳ್ಗಳಂ
ವರಚತುರ್ವದನಂಗಳಂ ಮಾಡಿಕೊಂಡು ಪುನರಪಿ ಕ್ರುದ್ಧಚಿತ್ತನಾಗಿ
ಹರಿಗೆ ಮಾರಂತು ಬಾಹುದ್ವಯವನಪ್ಪಳಿಸಿ
ಮುರಿದೆರಗುವೆಂ ಮುರಾಂತಕನನೆಂಬವಸರದೊ
ಳಿರದಾದುದಾಗಸದೊಳೊಂದುಲುಹು ಸಿದ್ಧರಾಮೇಶ ಕೇಳ್ ಕೌತುಕವನು ೪೧

ಅರಿಯದವನೇ ನೀಂ ಮುರಾರಿ ಮೂರ್ಖನೆ ಬೊಮ್ಮ
ತರಿಸಂದು ನಿನಗವಗಾತಂಗವೊಂದೇ ವಸ್ತು
ಪೆರತುಂಟು ತದ್ವಸ್ತುವಿಲ್ಲಿ ಜನಿಸುವುದೀಗಳದರ ಪದಮಸ್ತಕವನು
ನೆರೆ ಪೋಗಿ ಕಂಡಾತನೇ ಸಾಸಿಯೆನೆ ಕೇಳ್ದು
ಬೆರಗಾಗಿ ತಾವಿರ್ವರುಂ ರಣಾವೇಶಮಂ
ಮರೆದು ನೋಳ್ಪನಿತರೊಳ್ ಸಿದ್ಧರಾಮೇಶ ಕೇಳಿನ್ನೊಂದು ಕೌತುಕವನು ೪೨

ತರಣಿಬಿಂಬಂಗಳಂ ಕರಗಿ ಕರುವಿಟ್ಟಿರೆವ
ಪಿರಿಯ ಮೂಲಸ್ತಂಭವೋ ಪಂಚಭೂತಮಂ
ಪರಿಗಣಿಸಲಳೆವ ವಿಸುನಿಯ ದಂಡವೋ ಮುಂದೆ ಸೃಜಿಯಿಸುವ ಲೋಕಂಗಳು

೪೧. ತಲೆ ಒಡೆದರೇನಾಯಿತು? ಬ್ರಹ್ಮನು ಯುದ್ಧಕ್ಕೆ ಅಷ್ಟು ದುರ್ಬಲನೆ? ಒಡೆದು ಹೋದ ತಲೆಯ ಹೋಳುಗಳನ್ನೇ ನಾಲ್ಕು ಮುಖಗಳನ್ನಾಗಿ ಮಾಡಿಕೊಂಡು ಮತ್ತೆ ಕೋಪಮಾನಸನಾಗಿ ವಿಷ್ಣುವನ್ನು ಪ್ರತಿಭಟಿಸಿ, ಎರಡು ತೋಳುಗಳನ್ನು ಚಪ್ಪರಿಸುತ್ತ ವಿಷ್ಣುವನ್ನು ಕೆಡವಿ ಮೇಲೆ ಬೀಳುತ್ತೇನೆ ಎಂಬ ಯತ್ನದಲ್ಲಿರುವಾಗ ಆಕಾಶದಲ್ಲಿ ಒಂದು ಧ್ವನಿಯಾಯಿತು. ಅಯ್ಯಾ ಸಿದ್ಧರಾಮಣ್ಣ ಅದರ ಆಶ್ಚರ್ಯವನ್ನು ಕೇಳು. ೪೨ ಎಲೈ ವಿಷ್ಣು, ನೀನು ತಿಳಿಯದವನೇ? ಎಲೈ ಬ್ರಹ್ಮನೇ ನೀನು ಮೂರ್ಖನೇ? ನಿಜವಾಗಿ ನಿನಗೂ ಆತನಿಗೂ ಒಂದೇ ಒಂದು ವಸ್ತು ಬೇರೆ ಇದೆ. ಆ ವಸ್ತುವು ಇಲ್ಲ ಈಗ ಹುಟ್ಟು ತ್ತದೆ. ಆ ವಸ್ತುವಿನ ಪಾದ ಮತ್ತು ತಲೆಯನ್ನುಹೋಗಿ ನೋಡಿದವನೇ ಸಾಹಸಿ ಎಂದಿತು. ಆ ಮಾತನ್ನು ಕೇಳಿ ಬೆರಗಾಗಿ ಅವರಿಬ್ಬರೂ ಯುದ್ಧಾವೇಶವನ್ನೇ ಮರೆತು ನೋಡುವಷ್ಟರಲ್ಲಿ ಇನ್ನೊಂದು ಆಶ್ಚರ್ಯಕರವಾದ ಸಂಗತಿ ನಡೆಯಿತು. ಸಿದ್ಧರಾಮನೇ (ಹೇಳುತ್ತೇನೆ) ಕೇಳು. ೪೩. ಅನೇಕ ಸೂರ್ಯಬಿಂಬಗಳನ್ನು ಕರಗಿಸಿ ಎರಕ ಹೊಯ್ದ ದೊಡ್ಡ ಮೂಲಸ್ತಂಭವೋ? ಪಂಚಭೂತಗಳನ್ನು ಖಚಿತವಾಗಿ ಅಳೆಯುವುದಕ್ಕಾಗಿ ಚಿನ್ನ ದಿಂದ ಮಾಡಿದ ಅಳತೆಗೋಲೋ? ಮುಂದೆ ಸೃಷ್ಟಿಸಲಿರುವ ಲೋಕಗಳು ಸರಿದಾವು, ಅವು



CC-0. Jangamwadi Math Collection. Digitized by eGangotri

ಜನಿದಪವವಕ್ಕಡರ್ಪಾಗಿರಲ್ವೇಳ್ಕೆಂದು
ಗುರುತರ ಸುವರ್ಣದ ಸಲಾಕೆಯಿಂ ಬಲಿದರೋ
ಹರಹರಾ ಪೇಳಲೇಂ ಹರಿಯಜರ ಮಧ್ಯದೆ ಮಹಾಲಿಂಗಮುದಯಿಸಿದುದು ೪೩

ಆ ಲಿಂಗದತುಳತರ ಪೀಠಂ ಧರಿತ್ರಿ ಶೈ
ಲಾಳಿ ಭುಜಮೆಸೆವ ಸಪ್ತಾಂಬುನಿಧಿಗಳೆ ಕುಕ್ಷಿ
ಲೋಲಾಕ್ಷಿಗಳ್ ಚಂದ್ರಸೂರ್ಯಾಗ್ನಿಗಳ್ ರಸಾತಳದ ಕಡೆಯೇ ಪಾದವು
ಮೇಲಿರ್ಪ ತಾರಾಳಿಗಳೆ ಪುಷ್ಪಸಂದೋಹ
ಮೋಲಗಿಪ ಪರಿವಾರವೇ ಪ್ರಮಥಗಣಮಾಗೆ
ಲೀಲೆಯಿಂ ಮೂಡಿದುದು ಲಿಂಗಮಜಹರಿಗಳಂ ಬೆರಗುವಡಿಸಿದುದಾಗಳು ೪೪

ಲಲಿತತೇಜೋಮಯದ ಲಿಂಗದಿದಿರೊಳ್ ಮಿಂಚು
ಬುಳುವೆಂತುಟಂತಾದುದಿವರ ತೇಜಂ ಕೂಡೆ
ತಿಳಿದು ನಿಶ್ಚಯಿಸಿದರ್ ಪಾದಮಂ ಹರಿ ಮಸ್ತಕವನಜಂ ಕಾಣ್ಬೆವೆಂದು
ನಳಿನನಾಭಂ ವರಾಹಾಕೃತಿಯನಾ ಕ್ಷಣಂ
ತಳೆದಿಳಿದು ಪೋದಂ ಧರಾತಳವನೊಡೆಬಗಿದು
ಕಲಹಂಸೆಯಾಗಿ ಬೊಮ್ಮಂ ಪೋಗುತಿದಿರೆ ಬಹ ಕೇತಕಿಯೊಳಿಂತೆಂದನು ೪೫

ಎಲೆ ಮಹಾತ್ಮನೆ ನಮಸ್ಕಾರಮೆಲ್ಲಿಂದಾಯ್ತು
ಸುಳಿವು ನಿಮಗೆಂದೆನಲು ಪರಶಿವನ ಮಕುಟದಿಂ
ದಿಳಿತಂದೆನೀಗ ಕೇತಕಿಯೆಂಬುದಭಿಧಾನಮೆನಗೆ ನೀನಾರೆನಲ್ಕೆ

ಗಳಿಗೆ ಆಧಾರವಾಗಿರಲಿ ಎಂದು ದೊಡ್ಡದಾದ ಚಿನ್ನದ ಸಲಾಕೆಯನ್ನು ಮಾಡಿದರೋ ? ಎನ್ನುವಂತೆ ಶಿವಶಿವಾ, ಏನು ಹೇಳಲಿ ? ಬ್ರಹ್ಮವಿಷ್ಣುಗಳ ಮಧ್ಯೆ ಒಂದು ಮಹಾಲಿಂಗವು ಉದ್ಭವಿಸಿತು. ೪೪. ಭೂಮಿಯೇ ಆ ಲಿಂಗದ ಶ್ರೇಷ್ಠವಾದ ಪೀಠ, ಪರ್ವತಗಳೇ ಅದರ ಭುಜಗಳು, ಪ್ರಕಾಶಿಸುವ ಸಪ್ತ ಸಮುದ್ರಗಳೇ ಅದರ ಹೊಟ್ಟೆ, ಚಂದ್ರ-ಸೂರ್ಯ-ಅಗ್ನಿಗಳೇ ಅದರ ಚಂಚಲವಾದ ಮೂರು ಕಣ್ಣುಗಳು. ರಸಾತಳದ ಕೊನೆಯೇ ಅದರ ಪಾದಗಳು, ಮೇಲೆ ಆಕಾಶದಲ್ಲಿರುವ ನಕ್ಷತ್ರಗಳ ಸಮೂಹವೇ ಹೂಗಳ ರಾಶಿ, ಅದನ್ನು ಓಲೈಸುವ ಪರಿವಾರವೇ ಪ್ರಮಥಗಣಗಳು. ಈ ರೀತಿ ಲೀಲೆಯಿಂದ ಹುಟ್ಟಿ ಆ ಮಹದಾಕಾರವಾದ ಲಿಂಗವು ವಿಷ್ಣು–ಬ್ರಹ್ಮರನ್ನು ಬೆರಗುಗೊಳಿಸಿತು. ೪೫. ಮನೋಹರವಾದ ತೇಜಸ್ಸಿನಿಂದ ಕೂಡಿದ ಆ ಲಿಂಗದ ಎದುರಿನಲ್ಲಿ ಇವರಿಬ್ಬರ ತೇಜಸ್ಸು ಮಿಂಚುಹುಳುಗಳ ಕಾಂತಿಯಂತಾಯಿತು. ಕೂಡಲೆ ಹರಿಯು ಅದರ ಪಾದವನ್ನೂ, ಅದರ ತಲೆಯನ್ನು ಬ್ರಹ್ಮನೂ ನೋಡುವುದಾಗಿ ನಿಶ್ಚಯಿಸಿದರು. ವಿಷ್ಣುವು ವರಾಹಾಕಾರವನ್ನು ತಾಳಿ ತಕ್ಷಣವೇ ಭೂಮಿಯನ್ನು ಬಗಿದು ಕೆಳಗಿಳಿದು ಹೋದನು. ಬ್ರಹ್ಮನು ರಾಜಹಂಸವಾಗಿ ಹೋಗುತ್ತಿರಲು ಎದುರಿಗೆ ಬಂದ ಕೇದಗೆಯನ್ನು ಕುರಿತು ಈ ರೀತಿ ಹೇಳಿದನು, ೪೬. ಎಲೈ ಮಹಾತ್ಮನೇ, ನಮಸ್ಕಾರ. ನೀವು ಎಲ್ಲಿಂದ ಬರುತ್ತಿದ್ದೀರಿ? ಎಂದನು. ಪರಶಿವನ

CC-0. Jangamwadi Math Collection. Digitized by eGangotri

ಜಲಜಸಂಭವನಾಂ ಸದಾಶಿವನ ಮುಕುಟಮಂ
ತಿಳಿಯಲೈದುವೆನಿಲ್ಲಿಗೆನಿತು ಗಾವುದವುಂಟು
ತಿಳಿಪೆನಲ್ ನಸುನಕ್ಕು ಪಲಯುಗದೊಳೈದೆಯುಂ ಕಾಣ್ಬುದಘಟಿತವೆಂದನು ೪೭

ಬೆಚ್ಚಿದಂ ಮನದೊಳಬುಜಾಸನಂ ಹೃದಯಮಂ
ಬಿಚ್ಚಿದಂ ಕೇತಕಿಯೊಳೆಲೆ ಪುರುಷ ಹರಿಗೆ ಮೂ
ರಚ್ಚಿಯುಳ್ಳನ ಮಸ್ತಕಂಗಂಡು ಬಹೆನೆಂದು ಭಾಷೆಯಂ ಕೊಟ್ಟು ಬಂದೆ
ಮುಚ್ಚುಮರೆಯೇಕೆ ಹರಿಯೊಡನೆ ನಾಂ ಗೆಲ್ವಂತು
ಟುಚ್ಚರಿಸವೇಳ್ಕೆಂದು ಬೇಡಿಕೊಳೆ ಕೈಕೊಳು
ತ್ತಚ್ಚರಿಯೊಳೈದಿ ಮುನ್ನಿನ ರಣಾಂಕಣದೆಡೆಗೆ ತಾವಿರ್ವರುಂ ಬಂದರು ೪೮

ಹರನ ಪಾದಾಬ್ಜಮಂ ಕಾಣದೆ ಮುರಾಂತಕಂ
ಮರಳಿ ಮುನ್ನಿನ ರಣಾಂಕಣಕೆ ಬರಲಿವರೆ ಮೊದ
ಲಿರೆ ಶಿವನ ಮುಕುಟಮಂ ಕಂಡೆಯಾ ನೀನೆನಲ್ ಕಮಲಜಂ ಕಂಡೆನೆನಲು
ನಿರುತಮೇ ಸಾಕ್ಷಿಯಾರೆನಲು ಕೇತಕಿರಾಜ
ನರವಿಂದನಾಭ ಬೊಮ್ಮಂ ಕಂಡನೆನೆ ತಿಳಿದು
ಹರನ ಮಸ್ತಕಕೆ ಸಲ್ಲದೆ ಪೋಗು ದೋಷಿ ನೀನೆನುತೆ ಹರಿ ಶಾಪಿಸಿದನು ೪೯

ತಲೆಯಿಂದ ಈಗ ಇಳಿದುಬಂದೆವು, ನನ್ನ ಹೆಸರು ಕೇದಗೆ, ನೀನು ಯಾರು? ಎನ್ನಲು ನಾನು ಬ್ರಹ್ಮ, ಸದಾಶಿವನ ತಲೆಯನ್ನು ತಿಳಿದುನೋಡಲು ಹೋಗುತ್ತಿದ್ದೇನೆ. ಇಲ್ಲಿಗೆ ಎಷ್ಟು ಗಾವುದ ದೂರವಿದೆ? ತಿಳಿಸು ಎನ್ನಲು, ಕೇದಗೆಯು ನಸುನಕ್ಕು 'ಹಲವು ಯುಗಗಳು ಕಳೆದರೂ ಅದನ್ನು ಕಾಣುವುದು ಅಸಾಧ್ಯ' ಎಂದನು. ೪೮. ಬ್ರಹ್ಮನು ಮನಸ್ಸಿನಲ್ಲಿಯೇ ಬೆದರಿದನು, ತನ್ನ ಮನಸ್ಸಿನಲ್ಲಿದ್ದುದನ್ನು ಕೇದಗೆಗೆ ಬಿಚ್ಚಿ ಹೇಳಿದನು, ಎಲೆ ಸತ್ಪುರುಷ, ವಿಷ್ಣುವಿಗೆ ಮುಕ್ಕಣ್ಣನ ತಲೆಯನ್ನು ನೋಡಿ ಬರುತ್ತೇನೆ ಎಂದು ಭಾಷೆಯನ್ನು ಕೊಟ್ಟು ಬಂದಿದ್ದೇನೆ, ನಿನ್ನಲ್ಲಿ ಮುಚ್ಚುಮರೆ ಏಕೆ? ವಿಷ್ಣುವಿನ ಜೊತೆಯಲ್ಲಿ ನಾನು ಗೆಲ್ಲುವಂತೆ ನೀನು ಹೇಳಬೇಕು ಎಂದು ಬೇಡಿಕೊಂಡನು, ಅದಕ್ಕೆ ಕೇದಗೆಯು ಒಪ್ಪಿಕೊಂಡು ಇಬ್ಬರೂ ಆಶ್ಚರ್ಯದಿಂದ ಮೊದಲಿನ ರಣರಂಗದ ಕಡೆಗೆ ಬಂದರು. ೪೯. ಶಿವನ ಪಾದಕಮಲಗಳನ್ನು ಕಾಣದೆ ವಿಷ್ಣುವು ತಿರುಗಿ ಯುದ್ಧಭೂಮಿಗೆ ಬಂದನು, ಆ ವೇಳೆಗಾಗಲೇ ಬ್ರಹ್ಮ ಮತ್ತು ಕೇದಗೆ ಅಲ್ಲಿಗೆ ಬಂದಿದ್ದರು. ಶಿವನ ತಲೆಯನ್ನು ನೀನು ನೋಡಿದೆಯಾ ಎಂದು ವಿಷ್ಣುವು ಕೇಳಿದನು. ಬ್ರಹ್ಮನು ನೋಡಿದೆ ಎಂದನು. ವಿಷ್ಣುವು ಇದು ಸತ್ಯವೇ? ಇದಕ್ಕೆ ಸಾಕ್ಷಿ ಯಾರು? ಎಂದನು. ಆಗ ಕೇದಗೆರಾಜನು ಎಲೈ ವಿಷ್ಣುವೇ, ಬ್ರಹ್ಮನು ನೋಡಿದನು ಎಂದು ಸಾಕ್ಷಿ ಹೇಳಲು,ವಿಷ್ಣುವು ನಿಜವನ್ನು ಅರ್ಥಮಾಡಿಕೊಂಡು ಕೇದಗೆಗೆ ಶಿವನ ತಲೆಗೆ ನೀನು ಸಲ್ಲದವನಾಗು, ನೀನು ದೋಷವುಳ್ಳವನು ಎಂದು ಶಾಪ

CC-0. Jangamwadi Math Collection. Digitized by eGangotri

ಶಾಪಮಂ ತಳೆದು ಕೇತಕಿರಾಜನತುಳಸಂ
ತಾಪದಿಂ ಪೋಗಲಾ ಲಿಂಗಮೇ ಭೀಕರದ
ರೂಪಮಂ ತೋರಲೆರ್ದೆ ಜರ್ಜರಿತಮಾಗಲಜಹರಿಗಳತಿಭೀತಿಯಿಂದೆ
ಈ ಪರಿಯ ನಿನ್ನ ಭೀಷಣಮೂರ್ತಿಯಂ ನೋಡ
ಲಾಪೆವೇ ನಾವೆಂದು ಪೊಗಳೆ ದೇವಂ ಸುಭಗ
ರೂಪಿನಿಂದಿರೆ ಕಂಡು ಕೈಮುಗಿಯುತಾ ಪಾರ್ವತೀಶನಂ ನುತಿಯಿಸಿದರು ೪೯

ಜಯಜಯ ಗುಣಾಭರಣ ಜಯ ದಿವಿಜನತಚರಣ
ಜಯಜಯ ಮಹಾಲಿಂಗ ಜಯ ನತಾಂಬುಜಭೃಂಗ
ಜಯಜಯ ಸದಾಸೋಮ ಜಯ ರಜತಗಿರಿಧಾಮ ಜಯ ಭೀಮವಿಧೃತಸೋಮಾ
ಜಯಜಯ ವಿಷಗ್ರೀವ ಜಯ ಭಕ್ತಸಂಜೀವ
ಜಯಜಯ ಕೃಪಾಪಾಂಗ ಜಯ ಗಿರಿಸುತಾರ್ಧಾಂಗ
ಜಯಜಯ ಚಿದಾನಂದ ಜಯ ಮಹಾಗಣವೃಂದ ಜಯವೆಂದಜಂ ನುತಿಸಿದಂ ೫೦

ರಾಜಶೇಖರ ದಿವಿಜರಾಜವಂದಿತಪಾದ
ರಾಜೀವ ವರರಾಜರಾಜಸಖ ಚಂದ್ರದಿನ
ರಾಜಕೋಟಿಪ್ರಭಾರಾಜಚ್ಛರೀರ ಬಳರಾಜಮದವಿಧ್ವಂಸನಾ

ಕೊಟ್ಟನು. ೪೯. ಕೇದಗೆರಾಜನು ಶಾಪವನ್ನು ಹೊಂದಿ ಬಹು ದುಃಖದಿಂದ ಹೊರಟು ಹೋಗಲು ಆಗ ಆ ಲಿಂಗವೇ ಭಯಂಕರ ರೂಪವನ್ನು ತಾಳಿ ಕಾಣಿಸಿಕೊಂಡಿತು. ಅದನ್ನು ನೋಡಿ ವಿಷ್ಣು ಬ್ರಹ್ಮರ ಎದೆ ಜರ್ಝರಿತವಾಯಿತು. ಅವರು ಅಂಜಿದವರಾಗಿ ಶಿವನನ್ನು ಕುರಿತು ಈ ರೀತಿಯ ನಿನ್ನ ಭಯಂಕರ ರೂಪವನ್ನು ನಾವು ನೋಡಲು ಸಾಧ್ಯವೇ ? ಎಂದು ಹೊಗಳಿದರು. ಆಗ ದೇವನು ಮನೋಹರವಾದರೂ ಪದಲ್ಲಿಕಾಣಿಸಿಕೊಳ್ಳಲು ಆಗ ಅವರಿಬ್ಬರೂ ಕೈಮುಗಿಯುತ್ತಾ ಈಶ್ವರನನ್ನು ಸ್ತೋತ್ರ ಮಾಡಿದರು. ೫೦. ಗುಣಗಳೇ ಆಭರಣವಾಗಿ ಉಳ್ಳವನಿಗೆ ಜಯವಾಗಲಿ, ದೇವತೆಗಳಿಂದ ನಮಸ್ಕರಿಸಿಕೊಳ್ಳುವ ಪಾದ ಗಳುಳ್ಳವನೇ, ಜಯವಾಗಲಿ, ಮಹಾಲಿಂಗನಿಗೆ ಜಯವಾಗಲಿ. ಶರಣರೆಂಬ ಭೃಂಗಗಳಿಂದ ನಮಸ್ಕರಿಸಿಕೊಳ್ಳುವ ಪಾದಕಮಲಗಳುಳ್ಳವನಿಗೆ ಜಯವಾಗಲಿ, ಯಾವಾಗಲೂ ಚಂದ್ರ ನಂತೆ ಪ್ರಶಾಂತವಾದ ಕಾಂತಿಯುಳ್ಳವನಿಗೆ ಜಯವಾಗಲಿ, ಬೆಳ್ಳಿಬೆಟ್ಟವನ್ನು ಮನೆಯಾಗಿ ಉಳ್ಳವನಿಗೆ, ಭೀಮನಿಗೆ, ಚಂದ್ರಮೌಳಿಗೆ, ವಿಷಕಂಠನಿಗೆ, ಭಕ್ತರಿಗೆ ಸಂಜೀವಿನಿಯಂತಿರು ವವರಿಗೆ, ಅನುಗ್ರಹ ದೃಷ್ಟಿಯುಳ್ಳವನಿಗೆ, ಅರ್ಧನಾರೀಶ್ವರನಿಗೆ, ಚಿದಾನಂದನಿಗೆ, ಪ್ರಮಥ ಗಣಗಳ ಸಮೂಹವುಳ್ಳವನಿಗೆ ಜಯವಾಗಲಿ ಎಂದು ಬ್ರಹ್ಮನು ಪ್ರಾರ್ಥಿಸಿದನು. ೫೧. ವಿಷ್ಣುವೂ ಸಹ ಈಶ್ವರನನ್ನು ಕುರಿತು ಚಂದ್ರಶೇಖರ, ದೇವೇಂದ್ರನಿಂದ ನಮಸ್ಕರಿಸಿ ಕೊಳ್ಳುವ ಪಾದವುಳ್ಳವನೆ, ತಲೆಯಲ್ಲಿ ಚಂದ್ರನನ್ನು ಧರಿಸಿದವನೇ, ಕುಬೇರನ ಮಿತ್ರನೆ, ಕೋಟಿ ಸೂರ್ಯ-ಚಂದ್ರರ ಪ್ರಕಾಶವನ್ನುಳ್ಳ ಶರೀರಿಯೆ, ದುಷ್ಟರಾಜರ ಗರ್ವವನ್ನು

CC-0. Jangamwadi Math Collection. Digitized by eGangotri

ರಾಜೀವಭವಮಕುಟರಾಜತ್ಸುರತ್ನ ನೀ
ರಾಜನಚರಣ ಭೋಗಿರಾಜಭೂಷಣ ಶೈಲ
ರಾಜಾತ್ಮಜಾಸ್ತನವಿರಾಜಕುಂಕುಮವಕ್ಷ ಸಲಹೆಂದು ಹರಿ ಪೊಗಳ್ದನು ೫೧

ಉಭಯಪಾರ್ಶ್ವದೊಳಿರ್ದು ಪೊಗಳ್ವ ಸೃಷ್ಟಿಸ್ಥಿತಿಯ
ವಿಭುಗಳಾ ನಿರಹಂಕೃತಿಸ್ತೋತ್ರತತಿಗಾಗ
ಳಭವನತಿಕರುಣಮಂ ತಾಳ್ದು ನಿರ್ಮಳಸುಪ್ರಸನ್ನತೆಯೊಳವರ ಮುಂದೆ
ವಿಭವದಿಂ ಪಂಚವದನದ ದಶಭುಜಂಗಳತಿ
ಶುಭವಾದ ಪಂಚದಶಲೋಚನದ ಕೆಂಜೆಡೆಯ
ಸುಭಗರೂಪಂ ತೋರಲಿರ್ವರುಂ ಮಗುಳೆ ಕೊಂಡಾಡಿದರ್ ಭಕ್ತಿಯಿಂದೆ ೫೨

ಮನದಣಿಯಲಿರ್ವರುಂ ಕೊಂಡಾಡೆ ಶಂಕರಂ
ದನುಜಾರಿಯಂ ಕರೆದು ನೀಂ ಸಕಲಲೋಕಂಗ
ಳನುಪಮದ ರಕ್ಷೆಯಂ ಮಾಡುತ್ತೆ ಕಮಲಜನಸತ್ಯದಿಂ ಕರಗಿ ಬಿದ್ದ
ಘನತರವೆನಿಪ್ಪ ಧರೆಯಂ ಮುನ್ನಿನಂದದಿಂ
ದನುಗೊಳಿಸು ಪೋಗೆಂದು ಕಾರುಣ್ಯದಿಂ ಬೆಸಸಿ
ವನಜಸಂಭವನು ಸಮೀಪಕ್ಕೆ ಕರೆದು ಪರಶಿವನಾಗಳಿಂತೆಂದನು ೫೩

ಸರಸಿಜೋದ್ಭವ ಕೇಳಸತ್ಯಮಂ ಬಿಟ್ಟು ಸು
ಸ್ಥಿರಬುದ್ಧಿಯಿಂ ಮುನ್ನಿನಂದದಿಂ ಸೃಷ್ಟಿಯಂ
ವಿರಚಿಸುವುದೆಂದು ನಿರವಿಸಿ ನಿರಾಕಾರವಂ ತಳೆಯೆ ಶಿವನಾಜ್ಞೆಯಿಂದೆ

ಮುರಿದವನೇ, ಬ್ರಹ್ಮನ ಕಿರೀಟದ ಶ್ರೇಷ್ಠವಾದ ರತ್ನಗಳೇ (ನಮಸ್ಕರಿಸಿದಾಗ) ಪಾದಗಳಿಗೆ ದೀಪಗಳಾಗಿ ಉಳ್ಳವನೇ, ಸರ್ಪಭೂಷಣನೆ, ಪಾರ್ವತಿಯ ಕೆಂಪಾದ ಸ್ತನಗಳ ಮೇಲೆ ಶೋಭಿಸುವ ಎದೆಯುಳ್ಳವನೆ ಕಾಪಾಡು ಎಂದು ಹೊಗಳಿದನು. ೫೨. ಸೃಷ್ಟಿ-ಸ್ಥಿತಿಗಳಿಗೆ ಒಡೆಯರಾದ ಬ್ರಹ್ಮ ವಿಷ್ಣುಗಳಿಬ್ಬರೂ ಎರಡು ಕಡೆಯೂ ನಿಂತು ಅಹಂಕಾರವಿಲ್ಲದ ಮನದಿಂದ ಹೊಗಳುತ್ತಿದ್ದರು. ಅದನ್ನು ಕೇಳಿ ಅಭವನು (ಶಿವನು) ಬಹಳ ಕರುಣೆಯನ್ನು ತಾಳಿ ನಿರ್ಮಲವಾದ ಪ್ರಸನ್ನತೆಯಿಂದ ಅವರ ಮುಂದೆ ವೈಭವದಿಂದ ಐದು ಮುಖ, ಹತ್ತು ಭುಜಗಳು, ಮಂಗಳಕರವಾದ ಹದಿನೈದು ಕಣ್ಣುಗಳು, ಕೆಂಜಡೆಗಳಿಂದ ಕೂಡಿದ ಮನೋಹರವಾದ ರೂಪವನ್ನು ಇವರ ಮುಂದೆ ಪ್ರಕಟಿಸಲು ಅವರಿಬ್ಬರೂ ಮತ್ತೆ ಭಕ್ತಿಯಿಂದ ಶಿವನನ್ನು ಕೊಂಡಾಡಿದರು. ೫೩, ಅವರಿಬ್ಬರೂ ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಕೊಂಡಾಡಲು ಶಂಕರನು ವಿಷ್ಣುವನ್ನು ಕರೆದು ನೀನು ಎಲ್ಲಾ ಲೋಕಗಳನ್ನು ಚೆನ್ನಾಗಿ ಕಾಪಾಡುತ್ತ, ಬ್ರಹ್ಮನ ಅಸತ್ಯದಿಂದ ಹಾಳಾದ ಶ್ರೇಷ್ಠತರವಾದ ಭೂಮಿಯನ್ನು ಮೊದಲಿನಂತೆಯೇ ನೆಲೆಗೊಳಿಸು, ಹೋಗು ಎಂದು ಕರುಣೆಯಿಂದ ನೇಮಿಸಿದನು. ಮತ್ತು ಬ್ರಹ್ಮನನ್ನು ಹತ್ತಿರಕ್ಕೆ ಕರೆದು ಪರಶಿವನು ಹೀಗೆಂದು ಹೇಳಿದನು. ೫೪. ಬ್ರಹ್ಮನೇ ಕೇಳು, ಇನ್ನು ಮೇಲೆ ಅಸತ್ಯವನ್ನು ಬಿಟ್ಟು ಒಳ್ಳೆಯ ಸ್ಥಿರವಾದ ಬುದ್ಧಿಯನ್ನು ತಾಳು.

CC-0. Jangamwadi Math Collection. Digitized by eGangotri

ಹರಿ ವರಾಹಾಕೃತಿಯೊಳಿರದೆತ್ತಿ ಕೂಡೆ ಸೈ
ತಿರಿಸಿ ಧರೆಯಂ ವಿಧಿಗೆ ಸೃಷ್ಟಿಸಲ್ವೇಳ್ದು ತಾಂ
ನಿರುತಮಮೃತಾಬ್ಧಿಯುತ್ತರಭಾಗದೊಳ್ ಪೋಗಿ ಪವಡಿಸಿದನಾ ಕ್ಷಣದೊಳು ೫೪

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೫೫

## ಹದಿನಾರನೆಯ ಸಂಧಿ ಸಂಪೂರ್ಣ

ಮೊದಲಿನಂತೆಯೇ ಸೃಷ್ಟಿಯನ್ನು ಮಾಡು ಎಂದು ಅಪ್ಪಣೆಮಾಡಿ ಶಿವನು ನಿರಾಕಾರವಾದನು. ಶಿವನ ಅಪ್ಪಣೆಯಂತೆ ವಿಷ್ಣುವು ವರಾಹಾವತಾರವನ್ನು ಎತ್ತಿ ಭೂಮಿಯನ್ನು ಕ್ಷೇಮದಿಂದಿರಿಸಿದನು, ಬ್ರಹ್ಮನಿಗೆ ಸೃಷ್ಟಿಕಾರ್ಯವನ್ನು ಮಾಡಲು ಹೇಳಿದನು. ತಾನು ಆ ಕ್ಷಣ ಕ್ಷೀರಸಮುದ್ರದ ಉತ್ತರ ಭಾಗದಲ್ಲಿ ಹೋಗಿ ಮಲಗಿದನು. ೫೫. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಹದಿನಾರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿನೇಳನೆಯ ಸಂಧಿ

ಸೂಚನೆ : ಪಂಕಜಭವಂ ಶಿವನನೊಲಿಸೆ ತನ್ನಿಟಿಲದಿಂ
ಶಂಕರಂ ಜನಿಸಲತಿರೌದ್ರಮಂ ಕಾಣುತೆ ಭ
ಯಂಕರದೊಳಜನಭವನಂ ನುತಿಸಲರ್ಧನಾರೀಶ್ವರತ್ವದೊಳೆಸೆದನು

ಕಾಲಕಂಧರ ದಿವಿಜಪಾಲ ವಿಧಿಸೌವರ್ಣ
ಚೇಲ ವಿನಮಿತಪದ ವಿಶಾಲತರಮಹಿಮ ಶಾ
ರ್ದೂಲಚರ್ಮಾಂಬರಸುಲೀಲ ನಾನಾ ಲೋಕಪಾಲವಂದಿತಪದಾಬ್ಜ
ಕೈಲಾಸಶಿಖರಿರಾಜಾಲಯಸ್ಥಿತ ಹೈಮ
ಶೈಲಜಾವರ ಸರ್ಪಜಾಲಭೂಷಣ ಲಸ
ದ್ಭಾಲಾಕ್ಷ ಲೋಕಮಂ ಪಾಲಿಸೈ ಪಂಪಾವಿರೂಪಾಕ್ಷ ದನುಜಶಿಕ್ಷ ೧

ವಿರಚಿಸುವೆನಿನ್ನಾಲಿಸೈ ಸಿದ್ಧರಾಮೇಶ
ಸರಸಿರುಹಸಂಭವಂ ಸೃಷ್ಟಿಯಂ ಮಾಳ್ಪೆನೆಂ
ದಿರದೆ ಚಿಂತಿಸಿ ಮುನ್ನ ಮಾಡಿರ್ದ ಸತ್ಯದಿಂ ಸೃಷ್ಟಿಯಳವಲ್ಲದಿರಲು
ಚಿರಕಾಲವಿನಾಶನಂ ಕುರಿತು ತಪಮಂ ಮಾಡೆ
ಹರನೊಲಿದು ಬೊಮ್ಮನೆಡೆಗೈತಂದು ಮೆಚ್ಚಿದೆಂ
ವರಮದೇಂ ಬೇಡೆನಲ್ ಕೊಂಡಾಡಿ ಕೈಮುಗಿದು ಕಮಲಭವನಿಂತೆಂದನು ೨

ಸೂಚನೆ : ಬ್ರಹ್ಮನು ಶಿವನನ್ನು ಒಲಿಸಲು ಶಂಕರನು ಅವನ ಹಣೆಯಿಂದ ಹುಟ್ಟಿದನು. ಆ ಅತಿರೌದ್ರ ರೂಪವನ್ನು ನೋಡುತ್ತಾ ಭಯದಿಂದ ಬ್ರಹ್ಮನು ಶಿವನನ್ನು ಸ್ತುತಿಸಲು, ಆಗ ಶಿವನು ಅರ್ಧನಾರೀಶ್ವರತ್ವದಲ್ಲಿ ಮೆರೆದನು. ೧. ವಿಷಕಂಠ, ದೇವತೆಗಳನ್ನು ಕಾಪಾಡುವವನೇ, ಬ್ರಹ್ಮ–ವಿಷ್ಣುಗಳಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳವನೇ, ವಿಶಾಲತರವಾದ ಮಹಿಮೆಯುಳ್ಳವನೇ, ಹುಲಿಯ ಚರ್ಮವನ್ನು ಬಟ್ಟೆಯಾಗಿ ಉಳ್ಳವನೇ, ಲೀಲಾವಿನೋದಿಯೇ, ನಾನಾ ಲೋಕಪಾಲಕರಿಂದ ನಮಸ್ಕರಿಸಿಕೊಳ್ಳುವ ಪಾದಕಮಲವುಳ್ಳವನೇ, ಕೈಲಾಸವಾಸಿಯೇ, ಪಾರ್ವತೀಪತಿಯೇ, ನಾಗಭೂಷಣನೇ, ಹೊಳೆಯುವ ಹಣೆಗಣ್ಣುಳ್ಳವನೇ, ರಾಕ್ಷಸರನ್ನು ಶಿಕ್ಷಿಸುವವನೇ, ಪಂಪಾವಿರೂಪಾಕ್ಷನೇ ಲೋಕವನ್ನು ಕಾಪಾಡು. ೨. ಮುಂದೆ ವಿಸ್ತರಿಸಿ ಹೇಳುತ್ತೇನೆ, ಕೇಳಯ್ಯ ಸಿದ್ಧರಾಮ, ಬ್ರಹ್ಮನು ಸೃಷ್ಟಿಯನ್ನು ಮಾಡುತ್ತೇನೆಂದು ಯೋಚಿಸಿ, ಮೊದಲೇ ಮಾಡಿದ್ದ ಅಸತ್ಯದಿಂದ ಸೃಷ್ಟಿ ಮಾಡಲು ಅವನಿಂದ ಸಾಧ್ಯವಾಗದಿರಲು, ಅನೇಕಕಾಲ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಒಲಿದು ಬ್ರಹ್ಮನ ಹತ್ತಿರಕ್ಕೆ ಬಂದು, 'ಮೆಚ್ಚಿದೆ, ವರವೇನು ? ಬೇಡು' ಎನ್ನಲು, ಬ್ರಹ್ಮನು ಶಿವನನ್ನು ಕೊಂಡಾಡಿ ಕೈಮುಗಿದು ಈ ರೀತಿ ಹೇಳಿದನು.

CC-0. Jangamwadi Math Collection. Digitized by eGangotri

ದೇವ ನಿನ್ನಾಜ್ಞೆಯಿಂ ಸೃಷ್ಟಿಯಂ ಮಾಳ್ಪೆನಂ
ದಾವಾವ ತೆರದೊಳಾನುಂ ನೋಡೆ ನಿನ್ನಯ ದ
ಯಾವಲಂಬನವಿಲ್ಲವಾಗದೀ ಸೃಷ್ಟಿ ಮುನ್ನಿಂದಧಿಕವೆನೆ ಮಾಳ್ಪೆನು
ನೀವೆನ್ನ ದೇಹದೊಳ್ ಜನಿಸೆಂದು ಕಮಲಜಂ
ದೇವದೇವನಜಾತನನಪ್ರಮೇಯನಂ
ಭಾವಶುದ್ಧಿಯೊಳೆ ಕೊಂಡಾಡಲ್ಕೆ ಶಂಕರಂ ಬ್ರಹ್ಮನೊಡನಿಂತೆಂದನು ೩

ಬೇಡಿದೆ ವರವನಿಂತು ನಿನ್ನೊಡಲೊಳಾನೊಡೆದು
ಮೂಡಿದಾಗಳೆ ನಿನಗೆ ವಿಲಯ ತಪ್ಪದು ಮರುಳೆ
ಬೇಡವೀ ವರವೆನಲ್ಕಾದೊಡಾಗಲಿ ಕರುಣಿಸೆನಲಂತೆ ಮಾಳ್ಪೆನಿಂತು
ಮಾಡುತಿರ್ ತಪಮಂ ಮನಃಪವನಯೋಗದಿಂ
ನೋಡು ನಿಶ್ಚಳದೃಷ್ಟಿಯಿಂ ನಿಜಸಮಾಧಿಯೊಳ್
ಕೂಡಿರೆಂದಭವನಾಜ್ಞಾಪಿಸಿ ನಿರಾಕಾರವಂ ತಳೆದನಾಕ್ಷಣದೊಳು ೪

ಸ್ಫಟಿಕಭಾಂಡದೊಳೆಸೆವ ಜ್ಯೋತಿಯಂದದೊಳಜನ
ಘಟದೊಳಗೆ ಷಟ್ಚಕ್ರಮಂ ಭೇದಿಸುತ್ತಜನ
ನಿಟಿಲಮಧ್ಯದೊಳೊಡೆದು ಮೂಡಿದನುಮಾಶಕ್ತಿಸಹಿತಂ ಮಹೇಶನಂದು
ಪಟುತರದ ಶತಕೋಟಿಬಾಲರವಿತೇಜಮು
ತ್ಕಟತಿಮಿರದೊಡನೆ ಬೆರಸಿದುದೊ ಪೇಳೆಂದೆನಲ್
ಚಟುಲಸ್ವರೂಪನೊಪ್ಪಿದನಜನ ತನುವೆರಳ್ಸೀಳಾಗೆ ತತ್ಕ್ಷಣದೊಳು ೫

೩. ದೇವ, ನಿನ್ನ ಅಪ್ಪಣೆಯಂತೆ ಯಾವ ಯಾವ ರೀತಿಯಲ್ಲಿಯೋ ಸೃಷ್ಟಿಯನ್ನು ಮಾಡಲು ನೋಡಿದೆ. ನಿನ್ನ ದಯೆಯ ಅವಲಂಬನೆ ಇಲ್ಲದೆ ಈ ಸೃಷ್ಟಿ ಸಾಧ್ಯವಾಗದು. ಮೊದಲಿಗಿಂತ ಉತ್ತಮ ರೀತಿಯಲ್ಲಿ ಸೃಷ್ಟಿಯನ್ನು ಮಾಡುತ್ತೇನೆ. ನೀವು ನನ್ನ ದೇಹ ದಲ್ಲಿ ಜನಿಸಿ—ಎಂದು ಬ್ರಹ್ಮನು ದೇವದೇವನನ್ನು, ಹುಟ್ಟಿಲ್ಲದವನನ್ನು, ತಿಳಿಯಲಾಗ ದವನನ್ನು ಚಿತ್ತಶುದ್ಧಿಯಿಂದ ಕೊಂಡಾಡಲು, ಶಿವನು ಬ್ರಹ್ಮನೊಡನೆ ಹೀಗೆ ಹೇಳಿದನು. ೪. ನೀನು ವರವನ್ನು ಬೇಡಿದೆ. ನಾನು ನಿನ್ನ ದೇಹದಲ್ಲಿ ಹುಟ್ಟಿದರೆ ನಿನಗೆ ಸಾವು ತಪ್ಪುವುದಿಲ್ಲ. ತಿಳಿಗೇಡಿಯೆ, ಈ ವರವು ಬೇಡ ಎಂದನು. ಆಗ ಬ್ರಹ್ಮನು, ಆದುದಾಗಲಿ, ಕರುಣಿಸು ಎನ್ನಲು, ಶಿವನು ಹಾಗೆಯೇ ಮಾಡುತ್ತೇನೆ. ನೀನು ಈ ರೀತಿ ಮನಃಪವನ ಯೋಗದಿಂದ ತಪಸ್ಸನ್ನು ಮಾಡುತ್ತಿರು, ನಿಶ್ಚಲದೃಷ್ಟಿಯಿಂದ ನೋಡು, ನಿಜಸಮಾಧಿ ಯಲ್ಲಿ ಕೂಡಿರು ಎಂದು ಶಿವನು ಆಜ್ಞಾಪಿಸಿ ಆ ಕ್ಷಣದಲ್ಲಿ ಮರೆಯಾದನು. ೫. ಸ್ಫಟಿಕ ಶಿಲೆಯ ಮಡಕೆಯಲ್ಲಿ ಪ್ರಜ್ವಲಿಸುವ ದೀಪದಂತೆ ಬ್ರಹ್ಮನ ದೇಹದೊಳಗೆ ಷಟ್ಚಕ್ರವನ್ನು ಭೇದಿಸುತ್ತ, ಹಣೆಯ ಮಧ್ಯದಲ್ಲಿ ಶಕ್ತಿಸಮೇತನಾಗಿ ಮಹೇಶ್ವರನು ಒಡೆದುಮೂಡಿದನು. ಆಗ ತೀವ್ರತರವಾದ ನೂರುಕೋಟಿ ಬಾಲಸೂರ್ಯರ ತೇಜಸ್ಸು ಅತ್ಯಧಿಕವಾದ ಕತ್ತಲೆ ಯೊಡನೆ ಬೆರೆಯಿತೋ ಎಂದೆನ್ನುವಂತೆ ಸೌಂದರ್ಯಸ್ವರೂಪನಾದ ಶಿವನು ಬ್ರಹ್ಮನ

CC-0. Jangamwadi Math Collection. Digitized by eGangotri

ಇಂತಜನ ತನುವೆರಳ್ ಸೀಳಾಗಿ ಬಿದ್ದ ಸಮ
ನಂತರದೊಳತಿರೌದ್ರದಿಂ ರುದ್ರಮೂರ್ತಿಯಂ
ತಾಂ ತಳೆದನಾ ಮಹೇಶಂ ಕಮಲಸಂಭವನ ಚಿತ್ತದಜ್ಞಾನದಿಂದೆ
ತಾಂ ತವೆ ಮಹಾಕಾಳಿಯಾದಳುಮೆಯಿವರಿರ್ವ
ರೆಂತಿರ್ದರೆನೆ ಬಾಲಚಂಡಾಂಶುಮಂಡಲೋ
ಪಾಂತದೊಳ್ ರಂಜಿಸುವ ನೀಲಮೇಘದ ತೆರದೆ ದಂಪತಿಗಳೆಸೆದಿರ್ದರು ೬

ಬಳಿಕ ರುದ್ರಂ ಮಹಾಕಾಳಿಯೊಳ್ ಸಂತಸದೊ
ಳೊಲಿದು ಕ್ರೀಡಿಸುತೆ ನಾನಾ ವಿಲಾಸಂಗಳಿಂ
ಕೆಲವು ಕಾಲಂಗಳಂ ಕಳೆವುತಿರೆ ನೀಲಲೋಹಿತಮುಖ್ಯ ರುದ್ರಗಣವು
ಬಲವಿಕರಣೆಯರುಂ ಬಲಪ್ರಮಥಿನಿಯರೆಂಬ
ಪಲತೆರದ ಶಕ್ತಿದೇವಿಯರಾದರಿವರನಂ
ದೊಲಿದು ದಂಪತಿಗಳಂ ಮಾಡಿಯಾ ರುದ್ರಗಣದೊಡನೆ ಸುಖವಿರುತಿರ್ದರು ೭

ಕರುಣದಿಂದಂ ಮಹಾರುದ್ರನಾ ಕಮಲಜನ
ಬಿರಿದ ಸೀಳೆರಡನೊಂದಿಸೆ ಮಲಗಿದವರೇಳ್ವ
ಪರಿಯೊಳೆಚ್ಚತ್ತುಭಯಮೂರ್ತಿಗಳ ರೌದ್ರಸ್ವರೂಪನೀಕ್ಷಿಸಿ ಭಯದೊಳು
ಹರಹರಾ ನಿಮ್ಮುಭಯಮೂರ್ತಿಗಳ ರೌದ್ರದೊಂ
ದಿರವಿಗೀಗೆನ್ನ ಹೃದಯಂ ನಡುಗುತಿದೆ ದೇವ
ಕರುಣಿಸುವುದೇಕರೂಪಿಂದೆನಲ್ಕರ್ಧನಾರೀಶ್ವರಂ ತಾನಾದನು ೮

ಶರೀರವನ್ನು ಎರಡು ಹೋಳಾಗಿಸಿ ಕಾಣಿಸಿಕೊಂಡನು. ೬. ಈ ರೀತಿಯಾಗಿ ಬ್ರಹ್ಮನ ದೇಹವು ಎರಡು ಸೀಳಾಗಿ ಬಿತ್ತು. ಆ ಸಮಯದಲ್ಲಿ ಬ್ರಹ್ಮನ ಮನಸ್ಸಿನ ಅಜ್ಞಾನದಿಂದ ಮಹೇಶ್ವರನು ಅತಿಭಯಂಕರಾಕಾರವನ್ನು ತಾಳಿ ರುದ್ರನಾದನು, ಉಮೆಯು ಮಹಾ ಕಾಳಿಯಾದಳು. ಈ ಇಬ್ಬರು ದಂಪತಿಗಳೂ ಬಾಲಸೂರ್ಯಮಂಡಲದ ಕೊನೆಯಲ್ಲಿ ಪ್ರಕಾಶಿಸುವ ನೀಲಮೇಘದ ರೀತಿಯಲ್ಲಿ ಪ್ರಕಾಶಮಾನವಾಗಿದ್ದರು. ೭. ಅನಂತರ ರುದ್ರನು ಮಹಾಕಾಳಿಯ ಜೊತೆಯಲ್ಲಿ ಸಂತೋಷದಿಂದ ಒಲಿದು ನಾನಾ ಬಗೆಯ ವಿಲಾಸ ದಿಂದ ಕ್ರೀಡಿಸುತ್ತ, ಕಾಲಕಳೆಯುತ್ತಿರಲು ನೀಲಲೋಹಿತ ಮೊದಲಾದ ರುದ್ರಗಣವೂ, ಬಲವಿಕರಣೆಯರು, ಬಲಪ್ರಮಥಿನಿಯರು ಎಂಬ ಹಲವು ತೆರದ ಶಕ್ತಿದೇವಿಯರೂ ಜನಿಸಿ ದರು. ಅವರನ್ನು ಒಲುಮೆಯಿಂದ ಗಂಡಹೆಂಡಿರನ್ನಾಗಿ ಮಾಡಿ ಆ ರುದ್ರಗಣಗಳೊಡನೆ ಸುಖವಾಗಿ ಇರುತ್ತಿದ್ದರು. ೮. ಮಹಾರುದ್ರನು ಕರುಣೆಯಿಂದ ಆ ಬ್ರಹ್ಮನು ದೇಹದ ಎರಡು ಸೀಳುಗಳನ್ನು ಒಂದುಗೂಡಿಸಲು, ಬ್ರಹ್ಮನು ಮಲಗಿದವರು ಎಚ್ಚರಗೊಳ್ಳು ವಂತೆ ಎದ್ದು ಆ ಎರಡು ಮೂರ್ತಿಗಳ ಭಯಂಕರ ರೂಪವನ್ನು ನೋಡಿ ಹೆದರಿ, ಶಿವ ಶಿವಾ, ನಿಮ್ಮ ಈ ಎರಡು ಮೂರ್ತಿಗಳ ಭಯಂಕರ ರೂಪಕ್ಕೆ ನನ್ನ ಎದೆ ನಡಗುತ್ತಿದೆ. ದೇವ, ಒಂದೇ ರೂಪವನ್ನು ತಾಳಿ ಕರುಣೆಸು, ಎನ್ನಲು ಶಿವನು ಅರ್ಧನಾರೀಶ್ವರನಾದನು.

CC-0. Jangamwadi Math Collection. Digitized by eGangotri

ನೀಲಮಾಣಿಕ್ಯಮೆರಡೊಂದಾದ ಮೂರ್ತಿ ಸ
ಲ್ಲೀಲೆಯಿಂ ಮುಡಿಯುಮಂ ಜಡೆಯುಮಂ ನವರತ್ನ
ದೋಲೆಯುಂ ಕುಂಡಲಮನೆಸೆವ ಕಂಠಾಭರಣಮುಂ ಪೊಳೆವ ತಲೆಮಾಲೆಯು
ನೀಲೋತ್ಪಲವನತುಳಶೂಲಮುಂ ಚಾರುಮಣಿ
ಜಾಲಮುಂ ಪನ್ನಗಾಭರಣಮುಂ ನೂತನದು
ಕೂಲಮುಂ ಚರ್ಮಾಂಬರವನಾಂತುದೆನಲರ್ಧನಾರೀಶ್ವರಂ ಮೆರೆದನು ೯

ಇಂತರ್ಧನಾರೀಶ್ವರಾಕಾರಲೀಲೆಯಿಂ
ಸಂತಸದೊಳಾ ಮಹಾರುದ್ರನಿರುತಿರೆ ಕಂಡು
ಮುಂತೆ ಕಮಲಾಸನಂ ಮೆಯ್ಯಿಕ್ಕಿ ಕೈಮುಗಿದು ಭಯಭರಿತಭಕ್ತಿಯಿಂದೆ
ಅಂತರಹಿತನನದ್ವಿತೀಯನನಜಾತನನ
ನಂತಮಹಿಮನನವ್ಯಯನನಪ್ರಮೇಯನಂ
ಸಂತೋಷದಿಂದೆ ಕೊಂಡಾಡಿ ನಾಂ ಸೃಷ್ಟಿಯನದೆಂತು ಮಾಡುವೆನೆಂದನು ೧೦

ಕೇಳಾದೊಡೆಲೆ ಚತುರ್ಮುಖ ಜಗತ್‌ಸೃಷ್ಟಿಯಂ
ನೀಲಲೋಹಿತಮುಖ್ಯರಾಗಿರ್ದ ರುದ್ರಗಣ
ಜಾಲಸಹಿತಂ ಮಾಡು ನೀನೆನಲ್ಕವರ ರೌದ್ರಸ್ವರೂಪಂ ಕಾಣುತೆ
ತಾಳಿ ಬಹು ಭೀತಿಯಂ ಸಾಕಿವರನೊಲ್ಲೆನೆನೆ
ಫಾಳಾಂಬಕಂ ನಕ್ಕು ನೀಂ ಮುನ್ನಿನಂದದಿಂ
ದೇಳಿಗೆಯ ಸೃಷ್ಟಿಯಂ ಮಾಡೆಂದು ಕರುಣದಿಂ ವರವಿತ್ತು ಬಯಲಾದನು ೧೧

೯. ನೀಲ ಮತ್ತು ಮಾಣಿಕ್ಯಗಳೆರಡೂ ಒಂದಾದಂತೆ ಕಂಡ ಆ ಮೂರ್ತಿಯು ಲೀಲೆಯಿಂದ ತಲೆಗೂದಲು ಮತ್ತು ಜಡೆ, ನವರತ್ನದ ಓಲೆ ಮತ್ತು ಕುಂಡಲ, ಪ್ರಕಾಶಿಸುವ ಕಂಠಾಭರಣ ಮತ್ತು ಹೊಳೆಯುವ ರುಂಡಮಾಲೆ, ನೀಲಿಕಮಲ ಮತ್ತು ಅತುಳವಾದ ತ್ರಿಶೂಲ, ಮನೋಹರವಾದ ರತ್ನಗಳ ಸಮೂಹ ಮತ್ತು ಹಾವಿನ ಆಭರಣ, ಹೊಸಪಟ್ಟೆಸೀರೆ ಮತ್ತು ಚರ್ಮಾಂಬರವನ್ನು ಹೊಂದಿರಲು ಅರ್ಧನಾರೀಶ್ವರನು ಮೆರೆದನು. ೧೦. ಈ ರೀತಿಯಲ್ಲಿ ಅರ್ಧನಾರೀಶ್ವರ ಲೀಲೆಯಿಂದ ಮಹಾರುದ್ರನು ಸಂತೋಷದಿಂದ ಇರಲು, ಅದನ್ನು ಕಂಡು ಬ್ರಹ್ಮನು ಅಡ್ಡಬಿದ್ದು ಕೈಮುಗಿದು, ಭಯಭರಿತ ಭಕ್ತಿಯಿಂದ ಅಂತರ ರಹಿತನನ್ನು, ಅದ್ವಿತೀಯನನ್ನು, ಅಜಾತನನ್ನು, ಅನಂತಮಹಿಮನನ್ನು, ನಾಶವಿಲ್ಲದವನನ್ನು, ಅಪ್ರಮೇಯನನ್ನು ಸಂತೋಷದಿಂದ ಕೊಂಡಾಡಿ ನಾನು ಸೃಷ್ಟಿಯನ್ನು ಹೇಗೆ ಮಾಡಲಿ ? ಎಂದು ಕೇಳಿದನು. ೧೧. ಎಲೈ ಬ್ರಹ್ಮನೆ, ಹಾಗಾದರೆ ಕೇಳು, ನೀನು ನೀಲಲೋಹಿತ ಮೊದಲಾದ ರುದ್ರಗಣಗಳ ಸಹಿತ ಜಗತ್ತಿನ ಸೃಷ್ಟಿಯನ್ನು ಮಾಡು ಎನ್ನಲು, ಅವರ ಭಯಂಕರ ಸ್ವರೂಪವನ್ನು ನೋಡಿ ಬ್ರಹ್ಮನು ಬಹಳ ಭಯಗೊಂಡನು, ಸಾಕು, ಇವರನ್ನು ಒಲ್ಲೆ ಎಂದನು. ಅದಕ್ಕೆ ಫಾಲಾಕ್ಷನು ನಕ್ಕು ನೀನು ಮೊದಲಿನಂತೆಯೇ ವೃದ್ಧಿಹೊಂದುವಂತಹ ಸೃಷ್ಟಿಮಾಡು ಎಂದು ಕರುಣೆಯಿಂದ ವರಕೊಟ್ಟು ಅಂತರ್ಧಾನ

CC-0. Jangamwadi Math Collection. Digitized by eGangotri

ಇಂತೆಂದು ಶಂಕರಂ ವರವಿತ್ತು ಪೋದ ಸಮ
ನಂತರದೊಳಜನಾ ಮಹೇಶನಾಜ್ಞೆಯನಾಂತು
ಪಿಂತೆ ಲೋಕದ ಸೃಷ್ಟಿಯೆಂತಾದುದಾ ತೆರದೊಳಂ ತಾನೆ ನಿರ್ಮಿಸಿದನು
ಮುಂತೆ ನಾನಾ ದೇವಸಂತತಿಗಳುಂ ಸಹಿತ
ಸಂತೋಷದಿಂ ಸತ್ಯಲೋಕದರಮನೆಯೊಳಗ
ನಂತ ವೈಭವದಿಂದಲೊಡ್ಡೋಲಗಂಗೊಟ್ಟು ಮೆರೆದಿರ್ದನುತ್ಸವದೊಳು ೧೨

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲ ಸುಖಮಂ ಸಕಲ ಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೧೩

ಹದಿನೇಳನೆಯ ಸಂಧಿ ಸಂಪೂರ್ಣ

ನಾದನು. ೧೨. ಈ ರೀತಿಯಾಗಿ ಶಂಕರನು ವರವನ್ನು ಕೊಟ್ಟು ಹೋದನಂತರ ಬ್ರಹ್ಮನು ಮಹೇಶ್ವರನ ಆಜ್ಞೆಯಂತೆ ಹಿಂದೆ ಲೋಕದ ಸೃಷ್ಟಿ ಹೇಗೆ ಆಯಿತೋ ಅದೇ ರೀತಿ ಸೃಷ್ಟಿಸಿದನು. ಮುಂದೆ ನಾನಾ ದೇವಸಂತತಿಗಳ ಸಮೇತನಾಗಿ ಸಂತೋಷದಿಂದ ಸತ್ಯ ಲೋಕದ ಅರಮನೆಯೊಳಗೆ, ಅನಂತ ವೈಭವದಿಂದ ಒಡ್ಡೋಲಗವನ್ನು ಕೊಟ್ಟು ಸಂಭ್ರಮದಿಂದ ಮೆರೆಯುತ್ತಿದ್ದನು. ೧೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಹದಿನೇಳನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹದಿನೆಂಟನೆಯ ಸಂಧಿ

ಸೂಚನೆ : ಸರಸಿಜೋದ್ಭವನಿರದಹಂಕರಿಸಿ ನಿಂದಿಸಲ್
ಪರಶಿವಂ ಕೇಳ್ದು ಭೈರವರೂಪದಿಂದವನ
ಶಿರವನರಿದುರುಲೀಲೆಯಂ ಚೆನ್ನಬಸವೇಶನಾ ಸಿದ್ಧರಾಮಂಗೊರೆದನು

ಪೊಂಬಣ್ಣದಿಪ ಜಡೆಯ ಬಂಬಲೊಳ್ ಥಳಥಳಿಸು
ವಂಬರಾಪಗೆಯ ವಿಮಲಾಂಬುವೊಳ್ ನೋಡೆ ಪ್ರತಿ
ಬಿಂಬಿಸುವ ಚೆಲ್ವುವಡೆದಂಬುಜಾರಿಯ ಕಲೆಯ ತುಂಬಿ ನವಕಂಧರದೊಳು
ಲಂಬಿಸುವ ಭೂಷಣಕದಂಬದ ತರಕ್ಷುಚ
ರ್ಮಾಂಬರದ ಕಮಲಜಶಿರಂಬಿಡಿದ ಕರದ ಲೋ
ಕಾಂಬಿಕಾನಾಥ ಪಂಪಾವಿರೂಪಾಕ್ಷದೇವಂ ಬಿಡದೆ ಸಲಹೆಮ್ಮನು ೧

ಆಲಿಸಿನ್ನೆಲೆ ಸಿದ್ಧರಾಮ ಪಂಕಜಗರ್ಭ
ನೋಲಗದೊಳೊಪ್ಪುತಿರೆ ನೆರೆದಿರ್ದ ಮುಖ್ಯಮುನಿ
ಜಾಲವೊಡನೆದ್ದು ಕೈಮುಗಿದು ಭಯಭಕ್ತಿಯಿಂ ಕೊಂಡಾಡಿ ಕಮಲಜನನು
ಕೇಳೆಲೆ ವಿಧಾತ ನಿತ್ಯನದಾವಂ ಜಗಕೆ
ಲೀಲೆಯಿಂದಾರಾರನರ್ಚಿಪೆವು ನಿಶ್ಚಯಂ
ಪೇಳೆಮೆಂದೆನಲಟ್ಟಹಾಸದಿಂದವರ್ಗೆ ಸರಸಿಜಜಾತನಿಂತೆಂದನು ೨

ಸೂಚನೆ : ಬ್ರಹ್ಮನು ಅಹಂಕಾರದಿಂದ ಶಿವನನ್ನು ನಿಂದಿಸಲು ಅದನ್ನು ಕೇಳಿದ ಪರಶಿವನು ಭೈರವರೂಪವನ್ನು ತಾಳಿ ಬ್ರಹ್ಮನ ಶಿರವನ್ನು ತರಿದ ಆ ಶ್ರೇಷ್ಠವಾದ ಲೀಲೆಯನ್ನು ಚೆನ್ನಬಸವಣ್ಣನು ಸಿದ್ಧರಾಮನಿಗೆ ಹೇಳಿದನು. ೧. ಬಂಗಾರದ ಬಣ್ಣದ ಜಡೆಯ ಗುಂಪಿನಲ್ಲಿ ಥಳಥಳಿಸುವ ದೇವಗಂಗೆಯ ನಿರ್ಮಲವಾದ ನೀರಿನಲ್ಲಿ ನೋಡಲಾಗಿ ಪ್ರತಿಬಿಂಬಿಸುವಂತಹ ಚೆಲುವಾದ ಚಂದ್ರನ ಕಲೆಯನ್ನು ತುಂಬಿ, ಕೊರಳಿನಲ್ಲಿ ತೂಗಾಡುವ ಆಭರಣಗಳನ್ನು ಧರಿಸಿರುವ, ಹುಲಿಯ ಚರ್ಮವನ್ನೇ ಬಟ್ಟೆಯಾಗಿ ಉಳ್ಳ, ಕೈಯಲ್ಲಿ ಬ್ರಹ್ಮನ ತಲೆಯನ್ನು ಹಿಡಿದಿರುವ ಲೋಕಾಂಬಿಕೆಯ ನಾಥನಾದ ಪಂಪಾವಿರೂಪಾಕ್ಷದೇವನೆ ನಮ್ಮನ್ನು ಬಿಡದೆ ಕಾಪಾಡು. ೨. ಇನ್ನು ಮುಂದೆ ಕೇಳಯ್ಯ ಸಿದ್ಧರಾಮ, ಬ್ರಹ್ಮನು ಓಲಗದಲ್ಲಿ ವೈಭವದಿಂದಿರಲು ಅಲ್ಲಿ ಸೇರಿದ್ದ ಮುನಿಮುಖ್ಯರ ಗುಂಪು ಒಡನೆ ಎದ್ದು ಕೈಮುಗಿದು ಬ್ರಹ್ಮನನ್ನು ಭಯಭಕ್ತಿಯಿಂದ ಕೊಂಡಾಡುತ್ತ ಎಲೈ ಬ್ರಹ್ಮನೇ, ಕೇಳು, ಜಗತ್ತಿನಲ್ಲಿ ನಿತ್ಯನಾದವನು ಯಾರು ? ನಾವು ನಿಜವಾಗಿ ಯಾರು ಯಾರನ್ನು ಪೂಜಿಸಬೇಕು ಹೇಳು ಎಂದು ಕೇಳಲು ಬ್ರಹ್ಮನು ಅಟ್ಟಹಾಸದಿಂದ

CC-0. Jangamwadi Math Collection. Digitized by eGangotri

ಈ ಸಕಲ ಜನವ ಸೃಷ್ಟಿ ಸ್ಥಿತಿ ಪ್ರಳಯಂಗ
ಳೈಸು ನನ್ನಾಧೀನವೀಭಾರಮಂ ಪೊತ್ತು
ನೀಸುವವನಾನಲ್ಲದಾರುಂಟು ತಿಳಿಯಲೀ ಸಚರಾಚರಕೆ ಪೂಜ್ಯರು
ವಾಸವ ಮುಕುಂದ ರುದ್ರರ್ ಮುಖ್ಯ ಸುರರೆನ್ನ
ನೇ ಸದಾ ಹೃತ್ಕಮಲಮಧ್ಯದೊಳ್ ಜಾನಿಸುವ
ರಾ ಸುರಜ್ಯೇಷ್ಠನಾನೇ ಪರಬ್ರಹ್ಮವೆನ್ನಿಂದಧಿಕವಿಲ್ಲೆಂದನು ೩

ಇಂತೆಂದು ವಿಧಿಯವರೊಳಾಡುತ್ತಿರಲಿತ್ತಲಾ
ಕಂತುಪಿತನರಿದೀತನಜ್ಞಾನವಂ ತಿಳಿದು
ಸಂತತಂ ಸುಜ್ಞಾನಿಯಪ್ಪಂತೆ ಮಾಳ್ಪೆನೆಂದೈತಂದು ಮುಂದೆ ನಿಂದು
ಇಂತಿದೇನೈ ಬ್ರಹ್ಮ ನೀಂ ಮೇರೆದಪ್ಪಿದೊಡೆ
ಸಂತವಿಡುವವರಾರಿದೇಕೆ ಮರುಳಾದೆ ಕಾ
ಮಾಂತಕನ ಮಾಯೆಯಿದು ನೀನರಿಯುವವನೇ ಕೇಳೆನುತ ಮತ್ತಿಂತೆಂದನು ೪

ನೀನೆ ಜಗತ್ಸೃಷ್ಟಿಕರ್ತೃ ರಕ್ಷಿಸುವಾತ
ನಾನೆನಗೆ ನಿನಗೆ ನಾಥಂ ಶಂಭು ಕೇಳಾತ
ನೇ ನಿತ್ಯನಾತನೇ ಪರದೈವವಾತನೇ ಸಕಲ ಜೀವಾಧಾರನು

ಅವರಿಗೆ ಹೀಗೆಂದು ಹೇಳಿದನು. ೩. ಈ ಸಮಸ್ತ ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳೆಲ್ಲವೂ ನನ್ನ ಅಧೀನ, ಇವುಗಳ ಹೊಣೆಗಾರಿಕೆಯನ್ನು ಹೊತ್ತು ಪೂರೈಸುವವನು ನಾನಲ್ಲದೆ ಇನ್ನು ಯಾರಿದ್ದಾರೆ? ಇದನ್ನು ಸಕಲ ಚರಾಚರಕ್ಕೂ ಪೂಜ್ಯರಾದವರು ತಿಳಿಯಬೇಕು. ದೇವತೆಗಳಲ್ಲಿ ಮುಖ್ಯರಾದ ಇಂದ್ರ, ವಿಷ್ಣು, ರುದ್ರರು ಯಾರನ್ನು ತಮ್ಮ ಹೃದಯ ಕಮಲದಲ್ಲಿ ಸದಾ ಧ್ಯಾನಿಸುತ್ತಾರೆಯೋ ಆ ಸುರಜೇಷ್ಠನಾದ ಪರಬ್ರಹ್ಮನೇ ನಾನು, ನನಗಿಂತ ಅಧಿಕರಾದವರು ಯಾರೂ ಇಲ್ಲ ಎಂದನು. ೪. ಈ ರೀತಿಯಲ್ಲಿ ಬ್ರಹ್ಮನು ಅವರ ಹತ್ತಿರ ಮಾತನಾಡುತ್ತಿರಲು ಅದನ್ನು ವಿಷ್ಣು ತಿಳಿದು ಇವನ ಅಜ್ಞಾನವನ್ನು ತಿಳಿದು ಅವನು ಯಾವಾಗಲೂ ಸುಜ್ಞಾನಿಯಾಗುವಂತೆ ಮಾಡುತ್ತೇನೆ, ಎಂದು ಬಂದು ಮುಂದೆ ನಿಂತುಕೊಂಡು ಇದೇನಯ್ಯಾ ಬ್ರಹ್ಮ, ನೀನೆ ಮಿತಿಮೀರಿ ನಡೆದರೆ ನಿನ್ನನ್ನು ಸಮಾಧಾನ ಮಾಡುವವರು ಯಾರು? ಇದೇಕೆ ಮರುಳಾದೆ? ಇದೆಲ್ಲವೂ ಶಿವನ ಮಾಯೆ, ಇದನ್ನು ನೀನು ತಿಳಿಯದವನೇ? ಕೇಳು ಎನ್ನುತ್ತ ಮತ್ತೆ ಹೀಗೆ ಹೇಳಿದನು. ೫.ಜಗತ್ತನ್ನು ಸೃಷ್ಟಿ ಮಾಡುವವನು ನೀನೆ, ಆದರೆ ಅದನ್ನು ಕಾಪಾಡುವವನು ನಾನು, ನನಗೂ-ನಿನಗೂ ಒಡೆಯ ಶಿವ. ಕೇಳು ಇವನೇ ನಿತ್ಯನು, ಆತನೇ ಪರದೈವ, ಆತನೇ ಸಕಲ ಜೀವಾಧಾರ,

CC-0. Jangamwadi Math Collection. Digitized by eGangotri

ನಾನುಂ ಕಮಲಗರ್ಭ ನೀನಾದಿಯಾದವ
ರ್ಗೇನೈ ಸ್ವತಂತ್ರವಾತನ ಸೂತ್ರದವರಾವು
ನೀನಿಂತು ಗರ್ವಿಪರೆ ನಂಬದೊಡೆ ಸಕಲವೇದಂಗಳಂ ಕೇಳೆಂದನು ೫

ಸಾಮಂ ಯಜುಸ್ಸಥರ್ವಣ ಮಹಾಋಗ್ಮುಖ್ಯ
ನಾಮವೇದಂಗಳಾಕಾರವಂ ತಳೆದೀ ಪಿ
ತಾಮಹನ ಸಭೆಗೆ ಬಂದೆಲೆ ಪಾಪಿಯತ್ಯತಿಷ್ಠದ್ದಶಾಂಗುಲನೆನಿಪ್ಪ
ಆ ಮಹೇಶ್ವರನದ್ವಿತೀಯನಾಥನೆಯಭವ
ನಾ ಮಹಿಮನೇ ಸಕಲ ಲೋಕಕಾಧಾರನಿಂ
ತೀ ಮರುಳ್ತನವೇಕೆನಲ್ಕೆ ನಿಜರೂಪಿನಿಂ ಸತ್ಪ್ರಣವಮಿಂತೆಂದುದು ೬

ಅಜನನವ್ಯನನಗುಣನನಪ್ರಮೇಯನಂ
ತ್ರಿಜಗವಂದಿತನನನುಪಮನನಮಲಾಂಗನಂ
ಗಜದಾನವಪ್ರಮರ್ದನನಂ ಮಹೇಶನಂ ಸಾಕ್ಷಾತ್ಪರಬ್ರಹ್ಮವ
ಅಜ ಸಾಕು ನಿಂದಿಸಿಯಹಂ ದೇವನೆಂದೆಂಬ
ಗಜಬಜಂ ಪಿಂತೊರ್ವನಂ ತನ್ನ ತಾಯ್ ಬಂಜೆ
ನಿಜಮೆಂಬ ಗಾದೆಗೀಡಾದೆ ನಿನ್ನಿಂ ಮರುಳರಾರೆಂದು ಬಯಲಾದುದು ೭

ನಾನು ನೀನು ಮೊದಲಾದವರಿಗೆ ಏನು ಸ್ವಾತಂತ್ರ್ಯವಿದೆ? ಅವನ ಸೂತ್ರದಂತೆ ನಡೆಯುವವರು ನಾವು, ಹೀಗೆ ಗರ್ವ ಪಡಬಹುದೇ? ನಂಬದೇ ಇದ್ದರೆ ಸಕಲ ವೇದಗಳನ್ನು ಕೇಳು ಎಂದನು. ೬. ಸಾಮ, ಯಜು, ಅಥರ್ವಣ ಮತ್ತು ಮಹಾಋಗ್ವೇದ ಎಂದು ಹೆಸರಾದ ನಾಲ್ಕು ವೇದಗಳೂ ರೂಪವನ್ನು ಧರಿಸಿ ಬ್ರಹ್ಮನ ಸಭೆಗೆ ಬಂದವು. ಎಲೆ ಪಾಪಿ, ಅತ್ಯತಿಷ್ಠದ್ದಶಾಂಗುಲನೆನಿಸುವ ಆ ಮಹೇಶ್ವರನು ಅದ್ವಿತೀಯನು, ಅವನೇ ಅಭವನು. ಆ ಮಹಿಮನೇ ಸಕಲ ಲೋಕಕ್ಕೂ ಆಧಾರ. ಈ ರೀತಿ ಏಕೆ ಮರುಳತನ ತೋರಿಸುತ್ತೀಯೆ? ಎಂದು ಹೇಳಲು ಆಗ ನಿಜರೂಪ ಧರಿಸಿ ಓಂಕಾರವು ಹೀಗೆ ಹೇಳಿತು. ೭. ಹುಟ್ಟಿಲ್ಲದವನನ್ನು, ಅವ್ಯಯನನ್ನು; ನಿರ್ಗುಣನನ್ನು, ಅಪ್ರಮೇಯನನ್ನು, ಮೂರು ಲೋಕಗಳಿಂದಲೂ ನಮಸ್ಕರಿಸಿಕೊಳ್ಳುವವನನ್ನು, ಉಪಮಾತೀತನನ್ನು, ಪರಿಶುದ್ಧವಾದ ದೇಹವುಳ್ಳವನನ್ನು, ಗಜಾಸುರನನ್ನು ಕೊಂದವನನ್ನು, ಮಹೇಶ್ವರನನ್ನು, ಸಾಕ್ಷಾತ್ಪರಬ್ರಹ್ಮನನ್ನು ಎಲೈ ಬ್ರಹ್ಮನೇ, ಅಂತಹ ಶಿವನನ್ನು ನಿಂದಿಸಿ ನಾನೇ ದೇವನೆಂದು ಹೇಳುವುದು ಅಹಂಕಾರದ ಮಾತು. ಹಿಂದೆ ಒಬ್ಬನು ತನ್ನ ತಾಯಿ ನಿಜವಾಗಿಯೂ ಬಂಜೆ ಎಂದು ಸಾಧಿಸಿದ ಎಂಬ ಗಾದೆಗೆ ನೀನು ಒಳಗಾದೆ. ನಿನಗಿಂತ ತಿಳಿಗೇಡಿಗಳು ಯಾರಿದ್ದಾರೆ ಎಂದು

CC-0. Jangamwadi Math Collection. Digitized by eGangotri

ಇಂತು ನಿಗಮೋಂಕಾರವಾಕ್ಯಂಗಳಂ ಕೇಳ್ದು
ಕಂತುಪಿತನಾಸ್ಯಮಂ ನೋಡಿ ಬರಿನುಡಿಯ ಬೊ
ಮ್ಮಂ ತವೆ ಪೊಗಳ್ದದಾ ಸತಿಗರ್ಧದೇಹಮಂ ಕೊಟ್ಟಾತನಂ ಸಭೆಯೊಳು
ದಂತಿಚರ್ಮವನುಟ್ಟಶುಚಿಯಂ ಸ್ಮಶಾನದೊಳು
ಭ್ರಾಂತಿಯಿಂದಿರ್ಪಶುಭಮೂರ್ತಿಯಂ ಕೇಳ್ದವರ
ದೆಂತು ನಂಬುವರೊ ತಿರುಕನ ಮಾತನೆಂದಜಂ ಜರೆಯುತಿರಲಾ ಕ್ಷಣದೊಳು ೮

ಪುದಿದ ಘೋರಾಂಧಕಾರಮಂ ಕಿಡಿಸುವೆನೆನು
ತ್ತುದಯಿಸುವ ಮಾರ್ತಾಂಡಮಂಡಲವೊ ಸಲೆ ಹೃದಯ
ಸದನದಜ್ಞಾನಮಂ ಪೊರಮಡಿಸಿ ನೆಲೆಗೊಂಬ ಸುಜ್ಞಾನಮೆಂಬಂತಿರೆ
ಮದದಿಂದೆ ಮುಂಗಾಣದಜನಿದಿರೊಳಂ ಪಂಚ
ವದನ ದಶಭುಜ ಪಂಚದಶಲೋಚನಂಗಳಿಂ
ಪೊದೆದ ಪುಲಿದೊವಲ ಕೆಂಜೆಡೆಯ ಮಂಜುಳಕಾಯನಾಕ್ಷಣಂ ಮೂಡಿರ್ದನು ೯

ಮುಂದೆ ಪ್ರತ್ಯಕ್ಷವಾಗಿರುತಿರ್ದ ಸಾಕ್ಷಾತ್ಪು
ರಂದರಪ್ರಮುಖ ಬೃಂದಾರಕಾವನತನಂ
ಮಂದಮತಿ ಕಮಲಜಂ ನೋಡಿ ಹಾಸ್ಯೋಕ್ತಿಯಿಂಪೀತನೇ ಜಗದೊಡೆಯನು

ಹೇಳಿ ಮಾಯವಾಯಿತು. ೮. ಈ ರೀತಿಯಾಗಿ, ವೇದಗಳ ಮತ್ತು ಓಂಕಾರದ ಮಾತುಗಳನ್ನು ಕೇಳಿ ಅರ್ಥವಿಲ್ಲದ ಮಾತುಗಳನ್ನಾಡುವ ಬ್ರಹ್ಮನು ವಿಷ್ಣುವಿನ ಮುಖವನ್ನು ನೋಡಿ ಹೀಗೆ ಹೇಳಿದನು : ತನ್ನ ಹೆಂಡತಿಗೆ ಅರ್ಧದೇಹವನ್ನು ಕೊಟ್ಟವನನ್ನು, ಆನೆಯ ಚರ್ಮವನ್ನುಟ್ಟ ಕೊಳಕನನ್ನು, ಭ್ರಾಂತಿಯಿಂದ ಸ್ಮಶಾನದಲ್ಲಿರುವ ಅಶುಭ ಮೂರ್ತಿಯನ್ನು ಕೇಳಿದವರು ಆ ತಿರುಕನ ಮಾತನ್ನು ಹೇಗೆ ನಂಬುತ್ತಾರೆಯೋ ಎಂದು ಬ್ರಹ್ಮನು ಹೀಯಾಳಿಸುತ್ತಿರಲು ಆ ಕ್ಷಣದಲ್ಲಿ ೯. ಲೋಕವನ್ನು ಆವರಿಸಿದ ಭಯಂಕರವಾದ ಕತ್ತಲೆಯನ್ನು ಹೋಗಲಾಡಿಸುತ್ತೇನೆ ಎನ್ನುತ್ತ ಹುಟ್ಟುವ ಸೂರ್ಯಮಂಡಲವೋ ! ಹೃದಯದ ಅಜ್ಞಾನವನ್ನು ಹೋಗಲಾಡಿಸಿ ಅಲ್ಲಿ ನೆಲೆನಿಲ್ಲುವ ಸುಜ್ಞಾನವೋ ! ಎನ್ನುವಂತೆ ಅಹಂಕಾರದಿಂದ ಮುಂದಾಲೋಚನೆ ಇಲ್ಲದ ಬ್ರಹ್ಮನ ಇದಿರಿನಲ್ಲಿ ಐದು ಮುಖ, ದಶಭುಜಗಳು, ಹದಿನೈದು ಕಣ್ಣುಗಳಿಂದ ಕೂಡಿ ಹುಲಿಚರ್ಮವನ್ನು ಹೊದೆದ, ಕೆಂಜಡೆಯ ಮನೋಹರ ದೇಹವುಳ್ಳ ಶಿವನು ಪ್ರತ್ಯಕ್ಷನಾದನು. ೧೦. ಮುಂದೆ ಕಾಣಿಸಿಕೊಂಡ ದೇವೇಂದ್ರನೇ ಮೊದಲಾದ ಎಲ್ಲ ದೇವತೆಗಳಿಂದಲೂ ನಮಸ್ಕರಿಸಿಕೊಳ್ಳುವ ಶಿವನನು ಮಂದಮತಿಯಾದ ಬ್ರಹ್ಮನು ನೋಡಿ ಹಾಸ್ಯದಿಂದ–ಈತನು ಜಗತ್ತಿಗೆ

CC-0. Jangamwadi Math Collection. Digitized by eGangotri

ನೊಂದಪುದು ಪೊಡೆ ನನಗೆ ಇವನ ಬಹುರೂಪು ಕ
ಣ್ಗಿಂದವಾಗಿದೆ ನೋಡಿ ನೀವೆಲ್ಲರುಂ ಕಾಣೆ
ವೆಂದೆನ್ನಬೇಡೆನುತೆ ಕೆಲದವರ ಕೈವೊಯ್ದು ನಕ್ಕು ಮತ್ತಿಂತೆಂದನು ೧೦

ತಿರುಕುಳಿಗೆ ಮಾನವೆತ್ತಣದು ತೆಗೆ ತಲೆವಾಲೆ
ಗೊರಲಂಗೆ ಮಹಿಮೆಯೆಲ್ಲಿಯದು ಸಲೆ ಸರ್ಪನಾ
ಭರಣಂಗೆ ಚಿರವೆಂತು ಸುಡುಗಾಡೊಳಿರ್ಪಂಗೆ ಶುಭವಾವುದೀ ಮರುಳಗೆ
ನಿರುತಮಿಾ ಪಂಚವದನದ ಪೆರ್ಮೆಯೈಸೆ ತಾಂ
ಧರಿಸುವೆಂ ಪಂಚವದನವನೆಂದು ಮೇಣೊಂದು
ಶಿರವನಬುಜಾಸನಂ ಸೃಜಿಸಿ ತಚ್ಛಿರದೊಳೀ ಶಂಭುವಂ ನಿಂದಿಸಿದನು ೧೧

ನೀನಂತೆ ಸಕಲ ಜಗದಾಧಾರ ನೀಂ ಮುಖ್ಯ
ನಾನಾ ಸುರಾವಳಿಗೆ ನೀಂ ಕರ್ತೃ ಗಡ ನಿನ್ನ
ನೇ ನುತಿಪರಂತೆ ದೇವವ್ರಾತವಾವಗಂ ನೀಂ ಪರಬ್ರಹ್ಮವೆಂತೆ
ನೀನೆಲ್ಲಿ ಜನಿಸಿದೆಯದಾರ್ ತಂದೆ ತಾಯ್ಗಳ್ ನಿ
ಧಾನವೆಮ್ಮೊಡನುಸುರಿವೆಂದಡಂ ನುಡಿದ ನಿಂ
ದಾನಗುತವೇ ಸ್ತೋತ್ರಮಾಯ್ತು ಸರ್ವೇಶ್ವರನ ಮಹಿಮೆಯೆಂತೋ ಜಗದೊಳು ೧೨

ಮತ್ತೆ ಕಮಲಜನಭವನಂ ಜರೆದು ನೀನಿಂತು
ಪೊತ್ತ ಚೋಹಂಗಳಂ ಬಿಟ್ಟೆನ್ನ ಪೊರ್ದೆ ನಿನ
ಗುತ್ತಮಪದಂಗಳಂ ಕೊಟ್ಟಪೆಂ ಬದುಕಲ್ಲದೊಡೆ ನಿನ್ನ ಸದೆದಸುವನು

ಒಡೆಯನೆ ? ನಕ್ಕು ನಕ್ಕು ನನ್ನ ಹೊಟ್ಟೆ ನೋಯುತ್ತಿದೆ. ಇವನ ವೇಷ ಕಣ್ಣಿಗೆ ಬಹು ಅಂದವಾಗಿದೆ ! ನೀವೆಲ್ಲರೂ ನೋಡಿ ! ಅನಂತರ ನೋಡಲಿಲ್ಲವೆನ್ನಬೇಡಿ ! ಎನ್ನುತ್ತ ಪಕ್ಕದವರ ಕೈತಟ್ಟಿ ನಕ್ಕು ಮತ್ತೆ ಈ ರೀತಿ ಹೇಳಿದನು. ೧೧. ಭಿಕ್ಷುಕನಿಗೆ ಮಾನವೆಲ್ಲಿದೆ ಬಿಡು, ಕೊರಳಲ್ಲಿ ರುಂಡಮಾಲೆ ಧರಿಸಿದವನಿಗೆ ಶ್ರೇಷ್ಠತೆ ಎಲ್ಲಿದೆ ? ಸರ್ಪವನ್ನೇ ಆಭರಣವಾಗಿ ಉಳ್ಳವನಿಗೆ ಶಾಶ್ವತನಾಗಿರಲು ಸಾಧ್ಯವೆ ? ಸ್ಮಶಾನದಲ್ಲಿ ಇರುವವನಿಗೆ ಶುಭ–ಅಶುಭ ಯಾವುದು ? ಈ ಹುಚ್ಚನಿಗೆ ಐದು ಮುಖವಿರುವುದೇ ಒಂದು ಹೆಮ್ಮೆಯಲ್ಲವೆ ? ನಾನೂ ಸಹ ಐದು ಮುಖಗಳನ್ನು ಧರಿಸುತ್ತೇನೆ ಎಂದು ಹೇಳಿ ಬ್ರಹ್ಮನು ಇನ್ನೊಂದು ಮುಖವನ್ನು ಸೃಷ್ಟಿಸಿ ಆ ಮುಖದಿಂದಲೂ ಶಿವನನ್ನು ನಿಂದಿಸಿದನು. ೧೨. ನೀನು ಸಕಲ ಜಗತ್ತಿಗೂ ಆಧಾರ ಹೇಗಾದೆ ? ನೀನು ಎಲ್ಲ ದೇವತೆಗಳಿಗೂ ಮುಖ್ಯಸ್ಥ ಹೇಗಾದೆ ? ನೀನು ಸೃಷ್ಟಿಕರ್ತನಲ್ಲವೆ? ನಿನ್ನನ್ನು ದೇವತೆಗಳೆಲ್ಲ ಏಕೆ ಯಾವಾಗಲೂ ಪ್ರಾರ್ಥಿಸುತ್ತಾರೆ? ನೀನು ಪರಬ್ರಹ್ಮ ಹೇಗಾದೆ ? ಎಲ್ಲಿ ಹುಟ್ಟಿದೆ ? ನಿನ್ನ ತಂದೆ–ತಾಯಿಗಳು ಯಾರು ? ಸಾವಧಾನವಾಗಿ ನನ್ನ ಹತ್ತಿರ ಹೇಳಿರಿ ! ಎಂದು ಬ್ರಹ್ಮನು ಹೇಳಿದ ನಿಂದೆಯೇ ಸ್ತೋತ್ರವಾಯಿತು. ಈ ಜಗತ್ತಿನಲ್ಲಿ ಸರ್ವೇಶ್ವರನ ಮಹಿಮೆ ಎಂತಹುದೋ ? ೧೩. ಬ್ರಹ್ಮನು ಪುನಃ ಅಭವನನ್ನು ಹೀಯಾಳಿಸಿ, ನೀನು ಈ ರೀತಿ ಧರಿಸಿರುವ ಸೋಗುಗಳನ್ನು

CC-0. Jangamwadi Math Collection. Digitized by eGangotri

ನೆತ್ತಿಯೊಳ್ ತೆಗೆವಪೆ ನೋಡೆಂದು ಘುಡುಘುಡಿಸು
ತೆತ್ತಲುಂ ನೆರೆದ ದೇವವ್ರಜಂ ಬೆದರೆ ಪಳಿ
ಪುತ್ತಿರ್ದನಂಬುಜಾಸನನಾಕ್ಷಣದೊಳೊಂದು ಕೌತುಕವನೇನೆಂಬೆನು ೧೩

ಪಲಬಗೆಯ ಕರದಾಯುಧಂಗಳಿಂ ಕಂಗಳಿಂ
ಥಳಥಳಿಪ ಚಾರುಮುಖದೋಳಿಯಿಂ ಪಾಳಿಯಿಂ
ದೊಲೆದೊಲೆದು ಪೊಳೆವ ಫಣಿಹಾರದಿಂ ಕ್ರೂರದಿಂದದ್ಭುತಾಕಾರವಾಗಿ
ಜಲಜಭವನೋಲಗದವರ್ ಚೆದುರೆ ವಿಧಿ ಬೆದರೆ
ಜಲಜಲನೆ ಬೆವರುತಿರಲುಗುರಿಂದೆ ಪೊಗರಿಂದೆ
ಪೊಳೆವ ಬೊಮ್ಮನ ನೂತನಾಸ್ಯಮಂ ಹಾಸ್ಯಮಂ ಮಾಡೆನುತೆ ಹರ ನುಡಿದನು ೧೪

ಘೋರತರ ಭೈರವಾಕಾರದಿಂ ಪರನೆಡವ
ಕೂರುಗುರಿನಿಂದಜನ ಶಿರವರಿಯೆ ನವರಕ್ತ
ಧಾರಾಪ್ರವಾಹದಿಂ ಸಕಲಲೋಕಂಗಳಿರದಾಕ್ಷಣಂ ಮುಳುಗುತಿರಲು
ಓರಂತೆ ಹರನೊಲಿದು ತನ್ನ ಭಾಳಾಕ್ಷಿಯಿಂ
ತೋರಕಿಡಿಯಂ ಬಿಡಲ್ಕಾಕ್ಷಣಂ ರುಧಿರಮಂ
ಹೀರಿ ಮುರಿದಜನ ಶಿರಮಂ ಪೋಳ್ದುದಭವನ ಮಹಾತ್ಮೆಯಂ ಪೊಗಳಲಳವೆ ೧೫

ಬಿಟ್ಟು ನನ್ನನ್ನು ಆಶ್ರಯಿಸಿದರೆ ನಿನಗೆ ಉತ್ತಮವಾದ ಪದವಿಗಳನ್ನು ಕೊಡುತ್ತೇನೆ ಬದುಕಿಕೋ. ಇಲ್ಲದಿದ್ದರೆ ನಿನ್ನನ್ನು ಸದೆಬಡಿದು ನಿನ್ನ ಪ್ರಾಣವನ್ನು ನೆತ್ತಿಯಿಂದ ತೆಗೆಯುತ್ತೇನೆ. ನೋಡು ಎಂದು ರೋಷದಿಂದ ಘರ್ಜಿಸಲು, ಸುತ್ತಲೂ ಇದ್ದ ದೇವತೆಗಳ ಗುಂಪು ಈ ನಿಂದೆಯ ಮಾತುಗಳನ್ನು ಕೇಳಿ ಹೆದರಿತು. ಈ ರೀತಿಯಾಗಿ ಬ್ರಹ್ಮನು ಬಯ್ಯುತ್ತಿರಲು ಆ ಕ್ಷಣದಲ್ಲಿ ನಡೆದ ಆಶ್ಚರ್ಯವನ್ನು ಏನೆಂದು ಹೇಳಲಿ ? ೧೪. ಕೈಯಲ್ಲಿ ಹಲವು ರೀತಿಯ ಆಯುಧಗಳನ್ನು ಹಿಡಿದು. ಹೊಳೆಯುವ ಕಣ್ಣುಗಳಿಂದ, ಸುಂದರವಾದ ಅನೇಕ ಮುಖಗಳಿಂದ, ಸರದಿಯ ಪ್ರಕಾರ ತಲೆದೂಗಿ ಹೊಳೆ ಹೊಳೆಯುವ ಸರ್ಪಹಾರದಿಂದ ಕೂಡಿ ಕ್ರೌರ್ಯದಿಂದ ಅದ್ಭುತಾಕಾರವನ್ನು ತಾಳಲು, ಬ್ರಹ್ಮನ ಆಸ್ಥಾನದಲ್ಲಿ ಇದ್ದವರೆಲ್ಲ ಓಡಿಹೋದರು. ಬ್ರಹ್ಮನು ಹೆದರಿ ಜಲಜಲನೆ ಬೆವರುತ್ತಿದ್ದಾಗ, ಕಾಂತಿಯಿಂದ ಹೊಳೆಯುವ ಉಗುರಿನಿಂದ ಕೂಡಿ ಬ್ರಹ್ಮನು ಹೊಸ ಮುಖವನ್ನು ಕುರಿತು ಹಾಸ್ಯಮಾಡು ಎನ್ನುತ್ತ ಶಿವನು ಹೇಳಿದನು. ೧೫. ಹರನು ಮಹಾಭಯಂಕರವಾದ ಭೈರವಾಕಾರವನ್ನು ತಾಳಿ ತನ್ನ ಎಡದ ಹರಿತವಾದ ಉಗುರಿನಿಂದ ಬ್ರಹ್ಮನ ತಲೆಯನ್ನು ಚಿವುಟಿದನು, ಆಗ ಹೊರಟ ಹೊಸ ರಕ್ತದ ಧಾರೆಯಿಂದುಂಟಾದ ಪ್ರವಾಹದಲ್ಲಿ ಆ ಕೂಡಲೇ ಎಲ್ಲ ಲೋಕಗಳೂ ಪೂರ್ಣವಾಗಿ ಮುಳುಗಿದುವು. ಆಗ ಈಶ್ವರನು ಒಲಿದು ತನ್ನ ಹಣೆಗಣ್ಣಿನಿಂದ ದೊಡ್ಡ ಕಿಡಿಯನ್ನು ಬಿಡಲು. ಆ ತಕ್ಷಣವೇ ಅದು ಹರಿಯುತ್ತಿದ್ದ ರಕ್ತಪ್ರವಾಹವನ್ನು ಹೀರಿ, ಚಿವುಟಿಹಾಕಿದ್ದ ಬ್ರಹ್ಮನ ತಲೆಯನ್ನು ಹೋಳುಮಾಡಿತು.



CC-0. Jangamwadi Math Collection. Digitized by eGangotri

ಕಂಡನಾ ಸಮಯದೊಳ್ ಕಮಲಜಂ ಹರಕರದೆ
ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲ
ಮುಂಡು ಪೋಳಿಸಿದ ನಯನಾಗ್ನಿಯುಂ ಪೊಗಳುತಿಹ ಸಕಲವೃಂದಾರಕರನು
ಕೊಂಡಾಡುವಖಿಳವೇದಂಗಳಂ ನುತಿಯಿಸುವ
ಪುಂಡರೀಕಾಕ್ಷನಂ ಶಿವಶಿವಾ ತಿಳಿಯದು
ದ್ದಂಡದೈವದ ಕೂಡೆ ಸೆಣಸಿದೆಂ ತಾನೆನುತೆ ಮಂಡೆಯೊಳ್ ಕೆಯ್ಯಿಟ್ಟನು ೧೬

ಹರನೊಡನೆ ಸೆಣಸಾಟವೆಂತಹುದೋ ನುತವಿಶ್ವ
ಭರಿತನೊಳಹಂಕಾರಮೆತ್ತಣದೊ ಲೋಕಸಂ
ಹರನೊಡನೆ ನಿಂದಿಸುವುದೇನೋ ಮಹಾಮಹಿಮನಿದಿರೊಳುಚ್ಚಾಸನದೊಳು
ಇರವೆಂತೊ ಕಂಡು ಕಂಡುಂ ಕೇಳಿ ಕೇಳಿಯಾಂ
ಮರುಳಾದೆನೈಸೆ ತವ ಮಹಿಮೆಯುಂ ಸಾಕುಳಿದ
ಸಿರವಿವಂ ಸವರು ಶೈವದ್ರೋಹಿಯಾನೆಂದು ವಿಧಿಯೆರಗಿದಂ ಪದದೊಳು ೧೭

ಕಂಬನಿಗಳಭಿಷೇಕವಾರಿಕಣ ಮಕುಟಾವ
ಲಂಬಮಣಿ ಪುಷ್ಪಸಂದೋಹವಮಾನುತಿ ಮಂತ್ರ
ವಿಂಬಾದ ನಯನಂಗಳೇ ದೀಪಸಂಕುಲಂ ತಾವಾಗೆ ಭಕ್ತಿಯಿಂದ

ಈಶ್ವರನ ಮಹಿಮೆಯನ್ನು ಹೊಗಳಲು ಸಾಧ್ಯವೆ ? ೧೬. ಆ ಸಮಯದಲ್ಲಿ ಬ್ರಹ್ಮನು ಶಿವನ ಕೈಯಲ್ಲಿ ತನ್ನ ಕತ್ತರಿಸಿದ ತಲೆಯನ್ನೂ,ರಕ್ತವನ್ನು ಹೀರಿ ಹೋಳುಮಾಡಿದ ಕಣ್ಣಿನ ಬೆಂಕಿಯನ್ನೂ, ಶಿವನನ್ನು ಹೊಗಳುತ್ತಿರುವ ದೇವತೆಗಳ ಸಮೂಹವನ್ನೂ, ಕೊಂಡಾಡುವ ಎಲ್ಲ ವೇದಗಳನ್ನೂ, ಸ್ತೋತ್ರಮಾಡುವ ವಿಷ್ಣುವನ್ನೂ ನೋಡಿ,ಶಿವಶಿವಾ ನಾನು ಪ್ರಬಲ ವಾದ ದೈವದ ಕೈಯಲ್ಲಿ ತಿಳಿಯದೆ ಹೋರಾಡಿದೆ ಎನ್ನುತ್ತ ತಲೆಯ ಮೇಲೆ ಕೈಹೊತ್ತನು. ೧೭. ಶಿವನ ಜೊತೆಯಲ್ಲಿ ನನ್ನ ಹೋರಾಟ ಎಂತಹುದು ? ವಿಶ್ವವಿಖ್ಯಾತನಾದ ಇವನಲ್ಲಿ ನಾನು ಅಹಂಕಾರದಿಂದ ನಡೆಯಬಹುದೇ ? ಲೋಕನಾಶಕನನ್ನು ನಿಂದಿಸುವುದೆಂದರೇನು? ಮಹಾಮಹಿಮನ ಎದುರಿಗೆ ಉನ್ನತವಾದ ಸಿಂಹಾಸನದ ಮೇಲೆ ಕುಳುತಿರುವುದು ಎಂದ ರೇನು ? ಶಿವನೇ, ನಿಮ್ಮ ಮಹಿಮೆಯನ್ನು ಕಂಡೂ ಕೇಳಿಯೂ ನಾನು ಮೂರ್ಖನಾದೆ ನಲ್ಲವೆ ? ಇನ್ನು ಸಾಕು, ಉಳಿದ ನನ್ನ ಎಲ್ಲ ತಲೆಯನ್ನೂ ಕಡಿದು ಹಾಕು, ನಾನು ಶಿವ ದ್ರೋಹಿ, ಎನ್ನುತ್ತ ಬ್ರಹ್ಮನು ಶಿವನ ಪಾದಗಳ ಮೇಲೆ ಬಿದ್ದನು. ೧೮. ಕಣ್ಣೀರೇ ಅಭಿಷೇಕದ ನೀರು. ಅವನ ಕಿರೀಟದಲ್ಲಿದ್ದ ರತ್ನಗಳೇ ಹೂಗಳ ಸಮೂಹ. ಅವನ ಹೊಗಳಿಕೆಯೇ ಮಂತ್ರ. ವಿಸ್ತಾರವಾದ ಕಣ್ಣುಗಳೇ ದೀಪಗಳ ಸಮೂಹಗಳಾದುವು. ಇವು ಗಳಿಂದ ಕೂಡಿದ ಬ್ರಹ್ಮನು ಭಕ್ತಿಯಿಂದ ಶಿವನ ಪೂಜೆಯಲ್ಲಿ ನಿರತನಾಗಿದ್ದಾನೆಯೋ !

CC-0. Jangamwadi Math Collection. Digitized by eGangotri

ಅಂಬುಜಭವಂ ಶಂಭುಪೂಜಾನಿರತನಾದ
ನೆಂಬಂತೆವೋಲೊಪ್ಪುತಿರೆ ಸಕಲ ಸುಮನಃಕ
ದಂಬಕಂ ಜಯ ಜಯ ತ್ರಾಹಿ ಮೃತ್ಯುಂಜಯ ತ್ರಾಹಿಯೆಂದೆನುತಿರ್ದುದು ೧೮

ಕೊಂಡಾಡುವಖಿಳದೇವವ್ರಜವನಾ ಕ್ಷಣಂ
ಖಂಡಪರಶು ಕೃಪಾಬ್ಧಿಯೊಳ್ ಮುಳುಂಗಿಸಿ ಪಾದ
ಪುಂಡರೀಕಕ್ಕೆ ನತನಾದ ವಾಣೀವರನನೊಲವಿನಿಂ ನೆಗಹಿ ಬಳಿಕ
ಮಂಡೆಯೊಳ್ ಕೈಯಿಟ್ಟು ಬೆದರಬೇಡೆಂದು ಮುಖ
ಮಂಡಲದೊಳೊಗೆವ ನಸುನಗೆಯಿಂದೆ ಮಾಸತಿಯ
ಗಂಡನಂ ನೋಡಿ ಕರುಣಾರಸದ ವೃಷ್ಟಿಯಂ ಕರೆದವರ ಬೀಳ್ಕೊಟ್ಟನು ೧೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೨೦

## ಹದಿನೆಂಟನೆಯ ಸಂಧಿ ಸಂಪೂರ್ಣ

ಎನ್ನುವಂತೆ ತೋರುತ್ತಿರಲು ಎಲ್ಲ ದೇವತೆಗಳ ಸಮೂಹವೂ ಜಯ ಜಯ, ಕಾಪಾಡು ಮೃತ್ಯುಂಜಯನೇ ರಕ್ಷಿಸು ಎನ್ನುತ್ತಿದ್ದಿತು. ೧೯. ಹೀಗೆ ಕೊಂಡಾಡುತ್ತಿರುವ ಎಲ್ಲ ದೇವತೆಗಳ ಗುಂಪನ್ನೂ ಖಂಡಪರಶುಧರನಾದ ಶಿವನು ತನ್ನ ಕೃಪಾಸಮುದ್ರದಲ್ಲಿ ಮುಳುಗಿಸಿದನು. ತನ್ನ ಪಾದಕಮಲಕ್ಕೆ ನಮಸ್ಕರಿಸಿದ ಬ್ರಹ್ಮನನ್ನು ಒಲವಿನಿಂದ ಮೇಲೆತ್ತಿದನು. ಅನಂತರ ತಲೆಯ ಮೇಲೆ ಕೈಯಿಟ್ಟು ಹೆದರಬೇಡವೆಂದು ಅಭಯವಿತ್ತನು. ನಸುನಗೆಯು ಸೂಸುತ್ತಿರುವ ಮುಖದಿಂದ ಮಹಾಪತಿವ್ರತೆಯೆನಿಸಿದ ಸರಸ್ವತಿಯ ಗಂಡನನ್ನು ಎಂದರೆ ಬ್ರಹ್ಮನನ್ನು ನೋಡಿ ಕರುಣರಸದ ಮಳೆಯನ್ನು ಅವರ ಮೇಲೆ ಕರೆದು ಅವರನ್ನು ಬೀಳ್ಕೊಟ್ಟನು. ೨೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಹದಿನೆಂಟನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಹತ್ತೊಂಬತ್ತನೆಯ ಸಂಧಿ

ಸೂಚನೆ : ಬೊಮ್ಮನ ಕಪಾಲಮಂ ಪಿಡಿದು ಭಿಕ್ಷಕೆ ನಡೆದು
ಹವ್ಮಿನಿಂ ಹರಿಯ ಭಕ್ತಿಯ ನೋಡಿ ಕೃಪೆಮಾಡಿ
ದಂ ಮಹೇಶ್ವರನಿರದೆ ಸುರಪುರಕೆ ಬಂದು ಸುರಸತಿಯರಂ ರಕ್ಷಿಸಿದನು

ಹಸ್ತಧೃತವಾಗೀಶಮಸ್ತಕ ಗಿರೀಂದ್ರತನು
ಜಾಸ್ತನವಿಲಿಪ್ತ ನವಕಸ್ತೂರಿಕಾವಕ್ಷ
ಸುಸ್ತವಪ್ರಿಯತರ ಸಮಸ್ತದಿವಿಜಾವಳಿಸುವಿಸ್ತರಿತ ಕೀರ್ತಿಭೂಪ
ನ್ಯಸ್ತಾಸ್ಥಿಮಾಲಾಪ್ರಶಸ್ತ ಹಿಮಕರಖರಗ
ಭಸ್ತಿಕೋಟಿಪ್ರಭಾವಿಸ್ತೀರ್ಣ ಪಂಪಾಪು
ರಸ್ತರಣ ಶರಣಜನ ಭಕ್ತಿಯ ವಿರೂಪಾಕ್ಷ ಸುಸ್ಥಿರದೊಳೆಮಗೀವುದು ೧

ಆದರದೊಳಿನ್ನಾಲಿಸೈ ರಾಮ ವಿಧಿಶಿರ
ಶ್ಛೇದಲೀಲೆಯೊಳಾ ಕಪಾಲಹಸ್ತಂ ಮಹ
ತ್ತಾದ ಭೈರವರೂಪನುಳಿದಾಗ ವಿಷ್ಣು ಮೊದಲಾದವರ ಭಕ್ತಿಗಳನು
ಭೇದಿಸುವೆನೀ ಶಿರಕೆ ತುಷ್ಟಿಬಡಿಪ್ಪುದರೊಳೆಂ
ದಾದಿರಹಿತಂ ಶಿವಂ ಭಿಕ್ಷಾಟನದ ನೆವದೊ
ಳಾ ದಿವ್ಯರೂಪದೊಳ್ ಪೊರಮಟ್ಟನಖಿಳಶ್ರುತಿಗಣವ್ಯೆದೆ ಕೊಂಡಾಡಲು ೨

ಸೂಚನೆ : ಬ್ರಹ್ಮಕಪಾಲವನ್ನು ಹಿಡಿದುಕೊಂಡು ಶಿವನು ಭಿಕ್ಷಕ್ಕೆ ಹೊರಟನು, ಉತ್ಸಾಹದಿಂದ ವಿಷ್ಣುವಿನ ಭಕ್ತಿಯನ್ನು ನೋಡಿ ಅವನಿಗೆ ಅನುಗ್ರಹ ಮಾಡಿದನು, ಅಲ್ಲಿಂದ ಅಮರಾವತಿಗೆ ಬಂದು ದೇವಸ್ತ್ರೀಯರನ್ನು ರಕ್ಷಿಸಿದನು. ೧. ಬ್ರಹ್ಮನ ಕಪಾಲವನ್ನು ಕೈಯಲ್ಲಿ ಹಿಡಿದವನೇ; ಪಾರ್ವತಿಯ ಸ್ತನಗಳ ಮೇಲೆ ಲೇಪಿಸಲಾದ ಹೊಸ ಕಸ್ತೂರಿಯನ್ನು ಎದೆಯ ಮೇಲೆ ಉಳ್ಳವನೇ. ಸ್ತುತಿಸಲ್ಪಡುವವನೇ. ತನಗೆ ಪ್ರಿಯರಾದ ಸಮಸ್ತ ದೇವತೆಗಳ ಸಮೂಹದಿಂದ ವಿಸ್ತರಿಸಿದ ಕೀರ್ತಿಯುಳ್ಳವನೇ. ಎಲುಬಿನ ಮಾಲೆಯನ್ನು ಧರಿಸಿರುವವನೇ, ಚಂದ್ರ ಮತ್ತು ಕೋಟಿ ಸೂರ್ಯರ ತೀಕ್ಷ್ಣಪ್ರಭೆಯಿಂದ ಬೆಳಗುವವನೇ, ಪಂಪಾಪುರದೊಡೆಯನಾದ ವಿರೂಪಾಕ್ಷನೇ ನಿನ್ನ ಶರಣಸಮೂಹದ ಭಕ್ತಿಯು ಸ್ಥಿರವಾಗಿ ನಮ್ಮಲ್ಲಿ ನೆಲಸುವಂತೆ ಕೃಪೆ ಮಾಡು. ೨. ಇನ್ನು ಕೇಳಯ್ಯ, ಸಿದ್ಧರಾಮ. ಆ ಕಪಾಲಹಸ್ತನಾದ ಪರಮೇಶ್ವರನು ಬ್ರಹ್ಮನ ಶಿರವನ್ನು ತರಿದ ಲೀಲೆಯನ್ನು ಮರೆದು, ಮಹಾಭೈರವರೂಪವನ್ನು ತ್ಯಜಿಸಿ, ಆ ತಲೆಯನ್ನು ಸಂತೃಪ್ತಿಗೊಳಿಸುವುದರಲ್ಲಿ ವಿಷ್ಣು ಮೊದಲಾದವರ ಭಕ್ತಿಯನ್ನು ಪರೀಕ್ಷಿಸುತ್ತೇನೆ ಎಂದು ಆದಿರಹಿತನಾದ ಶಿವನು ಭಿಕ್ಷಾಟನದ ನೆಪದಲ್ಲಿ ಎಲ್ಲ ಶ್ರುತಿಸಮೂಹಗಳೂ ಕೊಂಡಾಡು

CC-0. Jangamwadi Math Collection. Digitized by eGangotri

ಕೋಟಿಶಶಿಕಳೆಗಳಂ ಜರೆವ ನಗೆಮೊಗದ ರವಿ
ಕೋಟಿತೇಜಂಗಳಂ ಪಳಿವ ತನುರುಚಿಯು ಶತ
ಕೋಟಿಮನ್ಮಥ ಮಧು ಜಯಂತ ನಳಕೂಬರರ ಸೌಂದರ್ಯಮಂ ಮೀರುವ
ಕೋಟಿಲಾವಣ್ಯಮಂ ಬಣ್ಣಿಪೊಡೆ ಕೋಟಾನು
ಕೋಟಿಶೇಷರ ಬಗೆಗಸಾಧ್ಯವೆಂದೆನೆ ಜಟಾ
ಕೋಟೀರಭಾರನಾ ಹರಿಯ ಭಕ್ತಿಯು ನೋಳ್ಪೆನೆಂದಾಗ ನಡೆಗೊಂಡನು ೩

ಪೊಳೆವ ಕೆಂಜೆಡೆಯು ಭಸಿತತ್ರಿರೇಖೆಯು ನೊಸಲ
ಲಲಿತಭ್ರೂಲತೆಯು ಥಳಥಳಿಪ ಕಂಗಳ ಚೆಲ್ವು
ದಳೆವ ನಾಸಿಕದ ಸುಲಿಪಲ್ಲ ಬಾಯ್ದೆರೆಯ ಚುಬುಕದ ಕರ್ಣಯುಗಳಂಗಳ
ತೊಳಪ ಮಣಿಕುಂಡಲದ ನುತಕಪೋಲಂಗಳೊಳ
ಗಿಳಿವ ಶೃಂಗಾರರಸಮೆಂಬಂತೆಯುಡಿಗಡಿಗೆ
ಮೊಳೆವ ಕಿರುಬೆಮರ ವದನಂ ವಿಜಿತಮದನನಾ ಮೋಹಸದನಂ ನಡೆದನು ೪

ಕಾಯಜದಹನಭಸಿತವಗಣಿತರವಿಪ್ರಭಾ-
ಕಾಯದೊಳ್ ತೊಳಗೆ ತ್ರಿಸುಳಂ ಬಲದ ಕರಕಮಲ
ಕಾಯುತಮದಾಗಿ ರಂಜಿಸೆ ವಾಮಕರಕಮರ್ದ ವಿಧಿಕಪಾಲಂ ಮೆರೆಯುಲು

ತ್ತಿರಲು ದಿವ್ಯರೂಪವನ್ನು ಧರಿಸಿ ಅಲ್ಲಿಂದ ಹೊರಟನು. ೩. ಅವನ ನಗುಮುಖದ ಕಾಂತಿಯು ಕೋಟಿ ಚಂದ್ರರ ಕಳೆಯನ್ನು ಹೀಯಾಳಿಸುವಂತಿತ್ತು. ಅವನ ದೇಹದ ಕಾಂತಿ ಕೋಟಿ ಸೂರ್ಯರ ಪ್ರಕಾಶವನ್ನು ಹಳಿಯುತ್ತಿತ್ತು. ನೂರುಕೋಟಿ ಮನ್ಮಥರು, ಮಧು, ಜಯಂತ, ನಳಕೂಬರ ಮೊದಲಾದವರ ಸೌಂದರ್ಯವನ್ನು ಮೀರಿಸುವಂತಿದ್ದ ಅವನ ಕೋಟಿ ಲಾವಣ್ಯವನ್ನು ವರ್ಣಿಸಲು ಕೋಟ್ಯನುಕೋಟಿ ಆದಿಶೇಷರಿಗೂ ಅಸಾಧ್ಯ. ಇಂಥ ಜಟಾಮುಕುಟಧಾರಿಯಾದ ಶಿವನು ವಿಷ್ಣುವಿನ ಭಕ್ತಿ ಎಂತಹುದೆಂದು ನೋಡುತ್ತೇನೆಂದು ಹೊರಟನು. ೪. ಹೊಳೆಯುವ ಕೆಂಜಡೆಗಳಿದ್ದುವು, ಹಣೆಯಲ್ಲಿ ವಿಭೂತಿಯ ಮೂರು ಪಟ್ಟೆಗಳಿದ್ದುವು, ಮನೋಹರವಾದ ಹುಬ್ಬುಗಳು, ಹೊಳೆಯುವ ಕಣ್ಣುಗಳು, ಚೆಲುವಾದ ಮೂಗು, ಶುಭ್ರವಾದ ಹಲ್ಲುಗಳು, ಕೆಂಪಾದ ತುಟಿ, ತುಂಬಿದ ಗಲ್ಲ, ಕಿವಿಗಳಲ್ಲಿ ಹೊಳೆಯುವ ರತ್ನಕುಂಡಲಗಳು, ಮೃದುವಾದ ಕೆನ್ನೆಗಳಿಂದ ಇಳಿಯುವ ಶೃಂಗಾರರಸವೋ ಎನ್ನುವಂತೆ ಮತ್ತೆ ಮತ್ತೆ ಕಿರು ಬೆವರುವ ಮುಖ ಇವುಗಳಿಂದ ಕೂಡಿ ಮನ್ಮಥನನ್ನು ಜಯಿಸಿದ. ಮೋಹಕ್ಕೆ ಆಗರವಾದ ಶಿವನು ಹೊರಟನು. ೫. ಶರೀರಕ್ಕೆ ಧರಿಸಿದ್ದ ಮನ್ಮಥನನ್ನು ಸುಟ್ಟ ಬೂದಿಯು ಅನೇಕ ಸೂರ್ಯಪ್ರಕಾಶ ದಿಂದ ಬೆಳಗುತ್ತಿರಲು, ಬಲಗೈಯಲ್ಲಿ ತ್ರಿಶೂಲವು ಒಪ್ಪಿ ರಂಜಿಸುತ್ತಿರಲು, ಎಡಗೈಯಲ್ಲಿ ಬ್ರಹ್ಮಕಪಾಲವು ಮೆರೆಯುತ್ತಿರಲು, ಹದಿನಾರು ವರ್ಷ ಪ್ರಾಯವು ಚೆನ್ನಾಗಿ ಒಪ್ಪು

CC-0. Jangamwadi Math Collection. Digitized by eGangotri

ಪ್ರಾಯಮೆರಡೆಣ್ಬರಿಸಮುಳವಡಲ್ ತನ್ನಭಿ
ಪ್ರಾಯಮಾರ್ಗೆಯುಮಿಂಬುಗೊಡದಿರಲ್ ನಡೆದನ
ಪ್ರಾಯಾಸಯತ್ನದಿಂದಂಗಜಂ ಬಿಲ್ವಿಡಿದು ಸತಿಯರಂ ಜಯಿಸೆ ನಡೆಯೆ ೫

ಸಿಂಗರದ ಕರುವೊ ಮುಕ್ತಿಯ ಗುರುವೊ ಮೋಹರಸ
ದಿಂಗಡಲೊ ಸುಕೃತದೊಡಲೋ ಸೌಖ್ಯಲತೆಯ ಪೊಸ
ಮುಂಗುಡಿಯೊ ಮೋಕ್ಷದೆಡೆಯೋ ಸೊಗಸುವೀಡೊ ಪ್ರಣವದ ಜೋಡೊ ಸಲೆ ಭಾವಿಸೆ
ಮಂಗಳಾಕಾರವೋ ಶಿವತತ್ತ್ವಸಾರವೊ ಅ
ನಂಗರಾಜ್ಯದ ಬೆಳೆಯೊ ಭಕ್ತಿಕಳೆಯೋಯೆಂದು
ಪಿಂಗದಲೆ ಕಾಮಯೋನಿಗಳೀಕ್ಷಿಸಲ್ ಮೋಹಬೊಮ್ಮನಡಿಯಿಟ್ಟನಂದು ೬

ಇಂತಪ್ಪ ಸಿಂಗರಮನಾಂತು ನಡೆತಂದುಮಾ
ಕಾಂತನಾ ಮಾಕಾಂತಭಕ್ತಿಯಂ ಕಾಣ್ಬಧಿಕ
ಸಂತಸದೊಳಮಳವೈಕುಂಠಪುರಕಾಗಿ ನಡೆತಂದು ಪೊರವಳಲ ಸಿರಿಯಾ
ಅಂತಂತು ನೋಡಿ ಮಚ್ಚುತ್ತೊಡನೆ ಬಾಗಿಲಗ
ಳಂತರಂಗಳೆದು ನಡೆತರುತಿರಲ್ಕಾ ಪುರದ
ಕಾಂತಾಜನಂ ಕಂಡು ಕೇಳ್ದೊಡನೆ ಸೋಲ್ತು ಬೆಂಬಿಡದೆ ಬೀದಿಯೊಳ್ಕೈದಿತು ೭

ತ್ತಿರಲು, ತನ್ನ ಮನಸ್ಸಿನಲ್ಲಿ ಇದ್ದುದನ್ನು ಯಾರಿಗೂ ಬಿಟ್ಟುಕೊಡದೆ ಲೀಲೆಯಿಂದ, ಸ್ತ್ರೀಯರನ್ನು ಜಯಿಸಲು ಬಿಲ್ಲನ್ನು ಹಿಡಿದು ಹೊರಟ ಮನ್ಮಥನಂತೆ ನಡೆದನು. ೬. ಶೃಂಗಾರವನ್ನೇ ಎರಕ ಹೊಯ್ದು ನಿರ್ಮಿಸಿದ ಬೊಂಬೆಯೋ, ಮುಕ್ತಿಯ ಗುರುವೋ, ಮೋಹರಸದ ಸಮುದ್ರವೋ, ಪುಣ್ಯದ ದೇಹವೋ, ಸೌಖ್ಯವೆಂಬ ಬಳ್ಳಿಯ ಹೊಸ ಕುಡಿಯೋ, ಮೋಕ್ಷದ ಆವಾಸಸ್ಥಾನವೋ, ಸೊಗಸಿನ ಮನೆಯೋ, ಓಂಕಾರದ ನೆಲೆಯೋ, ಚೆನ್ನಾಗಿ ಆಲೋಚಿಸಲಾಗಿ ಅವನು ಮಂಗಳಾಕಾರನೋ, ಶಿವತತ್ತ್ವದ ಸಾರವೋ, ಮನ್ಮಥನ ರಾಜ್ಯದ ಬೆಳಸೋ, ಭಕ್ತಿಯ ಬೆಳಕೋ ಎಂದು ಕಾಮಿಗಳು, ಹಿಂದೆ ಸರಿಯದೆ ನೆಟ್ಟ ದೃಷ್ಟಿಯಿಂದ ನೋಡುತ್ತಿರಲು ಮೋಹಬ್ರಹ್ಮನು ಮುಂದೆ ನಡೆದನು. ೭. ಈ ರೀತಿಯಾಗಿ ಶೃಂಗಾರ ಮಾಡಿಕೊಂಡು ಈಶ್ವರನು ವಿಷ್ಣುವಿನ ಭಕ್ತಿಯನ್ನು ನೋಡುವ ಹೆಚ್ಚಾದ ಸಂತೋಷದಿಂದ ಪವಿತ್ರವಾದ ವೈಕುಂಠಕ್ಕೆ ಬಂದು, ಪಟ್ಟಣದ ಹೊರಭಾಗದ ವೈಭವವನ್ನು ತಡೆತಡೆದು ನೋಡುತ್ತ, ಮೆಚ್ಚುತ್ತ, ಪಟ್ಟಣದ ಹೊರಬಾಗಿಲನ್ನು ಪ್ರವೇಶಿಸಿ ನಡೆದುಬರುತ್ತಿರಲು ಆ ಪಟ್ಟಣದ ಸ್ತ್ರೀಜನರು ಅವನನ್ನು ನೋಡಿ, ಅವನ ವಿಷಯವನ್ನು ಕೇಳಿ, ಒಡನೆಯೇ ಮನಸೋತು ಅವನ

CC-0. Jangamwadi Math Collection. Digitized by eGangotri

ಮುಡಿಯುಮಂ ಸೈತಿಡುವ ಪೂಗಳಂ ಮುಡಿವ ಚೆ
ಲ್ವಿಡಿದು ಮಣಿಭೂಷಣಂದೊಡುವ ಸೀರೆಯನುಡುವ
ತೊಡೆವ ಸಿರಿಖಂಡ ಮಜ್ಜನಭೋಜನಾದಿ ಕ್ರಿಯೆಗಳನುಳಿದು ತಮ್ಮಿನಿಯರ
ತೊಡರ್ದ ತೆಕ್ಕೆಯನೊದ್ದು ನೂಂಕುತೇಳುತೆ ಬೀಳು
ತೊಡನೆ ಪಿಂದುಂ ಮುಂದುಗಾಣದೈತರುತಲಾ
ಮೃಡನ ರೂಪಂ ಕಂಡು ಮೂರ್ಛೆವಡೆದರ್ ಕೆಲಬರಂಗನೆಯರೇನೆಂಬೆನು ೮

ತಳಿವ ಪನ್ನೀರ್ಗೆ ತಂಗೊಳಕೆ ಚಂದನದಂಪಿ
ಗಲರ ಹಾಸಿಕೆಗೆ ಸುಳಿಗಾಳಿಗೊಡನೊಡನೆ ಕಂ
ಗೊಳಿಪ ನಂದನಕೆಳಸುವಂತೆ ಕಾಮಂಗೆ ಕಾಮಿನಿಯರಂ ಮಾರುತೊಡನೆ
ತಳರ್ದು ಹರಿಯರಮನೆಯ ಬಾಗಿಲ್ಗೆ ಬಂದು ಮುಂ
ದೊಳಪುಗಲ್ ಕಂಡು ವಿಷ್ವಕ್ಸೇನನೆಂಬವಂ
ನಿಲಿಸಲ್ ತ್ರಿಶೂಲದಿಂದಿರಿದೆತ್ತಿದಂ ಹರಂ ಲೀಲಾವಿನೋದದಿಂದೆ ೯

ಅಚ್ಚರಿಯನೇನೆಂಬೆನಾ ತ್ರಿಶೂಲದ ಪತಿಗೆ
ಬೆಚ್ಚದಾ ದ್ವಾರಪಾಲಂ ಕೂಡೆ ಗಹಗಹಿಸೆ
ಕೆಚ್ಚೆರ್ದೆಯನಹುದು ನೀಂ ನಗುವ ಕಾರಣವದೇನೆಂದೀಶ್ವರಂ ನುಡಿಯಲು

ಬೆನ್ನುಬಿಡದೆ ಬೀದಿಯಲ್ಲಿ ಹಿಂಬಾಲಿಸಿದರು. ೮. ತುರುಬನ್ನು ಓರಣಗೊಳಿಸುವ, ಹೂಗಳನ್ನು ಮುಡಿಯುವ, ಸೊಗಸಾಗಿ ಕಾಣುವ ರತ್ನಭೂಷಣಗಳನ್ನು ತೊಟ್ಟು ಕೊಳ್ಳುವ, ಸೀರೆಯನ್ನು ಉಟ್ಟುಕೊಳ್ಳುವ, ಶ್ರೀಗಂಧವನ್ನು ಹಚ್ಚಿಕೊಳ್ಳುವ, ಸ್ನಾನ–ಊಟ ಮುಂತಾದ ಕೆಲಸಗಳನ್ನು ಬಿಟ್ಟು, ತಮ್ಮ ಪ್ರಿಯರ ಪ್ರೀತಿಯ ಆಲಿಂಗನದಿಂದ ಬಿಡಿಸಿಕೊಂಡು ಏಳುತ್ತ–ಬೀಳುತ್ತ, ಹಿಂದು–ಮುಂದೆ ನೋಡದೆ ಬಂದರು. ಕೆಲವು ಸ್ತ್ರೀಯರು (ಮೃಡನ) ಶಿವನ ಸುಂದರರೂಪವನ್ನು ನೋಡಿ ಮೂರ್ಛೆಹೋದರು. ಇದನ್ನು ಏನೆಂದು ಹೇಳಲಿ ? ೯. ಚಿಮುಕಿಸುವ ಪನ್ನೀರಿಗೆ, ತಂಪಾದ ಕೊಳಕ್ಕೆ, ಶ್ರೀಗಂಧದ ತಂಪಿಗೆ, ಹೂವಿನ ಹಾಸಿಗೆಗೆ, ಸುಳಿಗಳಿಗೆ, ಕಂಗೊಳಿಸುವ ನಂದನವನಕ್ಕೆ ಅಪೇಕ್ಷಿಸುವಂತೆ ಸ್ತ್ರೀಯರನ್ನು ಕಾಮಪೀಡಿತರನ್ನಾಗಿ ಮಾಡಿ, ಅಲ್ಲಿಂದ ಹೊರಟು ವಿಷ್ಣುವಿನ ಅರಮನೆಯ ಬಾಗಿಲಿಗೆ ಬಂದು ಒಳಕ್ಕೆ ಪ್ರವೇಶಿಸಲು ಪ್ರಯತ್ನಿಸಿದನು. ಆಗ ಅದನ್ನು ನೋಡಿ ವಿಷ್ವಕ್ಸೇನನೆಂಬವನು ಅವನನ್ನು ತಡೆಯಲು, ಈಶ್ವರನು ಲೀಲಾ ವಿನೋದದಿಂದ ತ್ರಿಶೂಲದಿಂದ ತಿವಿದು ಅವನನ್ನು ಮೇಲಕ್ಕೆ ಎತ್ತಿದನು. ೧೦. ಆಶ್ಚರ್ಯ ವನ್ನು ಏನೆಂದು ಹೇಳಲಿ ? ಆ ತ್ರಿಶೂಲದ ಹೊಡೆತಕ್ಕೆ ಬೆದರದೆ ಆ ದ್ವಾರಪಾಲಕನು ತಕ್ಷಣ ಗಹಗಹಿಸಿ ನಕ್ಕನು. ಆಗ ಶಿವನು ನೀನು ಧೈರ್ಯಶಾಲಿ, ನಗಲು ಕಾರಣವೇನೆಂದು ಕೇಳಿದನು. ಹೇಳುವುದೇನು ? ವೇದಗಳು ಹುಡುಕಿಯೂ ಕೂಡ ಕಾಣದೆ ಇರುವ ನಿನ್ನ

CC-0. Jangamwadi Math Collection. Digitized by eGangotri

ಉಚ್ಚರಿಪ್ಪದೇಂ ವೇದಮರಸಿ ಕಾಣದ ನಿನ್ನ
ಸಚ್ಚಿದಾನಂದರೂಪಂ ಕಂಡೆನೆನೆ ಶಿವಂ
ಮೆಚ್ಚಿದೆನೆನಲ್ ಶೂಲದಿಂದಿಳಿಪಬೇಡವೆನೆ ಪರನದು ಕೈಕೊಂಡನು ೧೦

ಅನಿತರೊಳಗೊರ್ವನಾ ಹರಿಯೆಡೆಗೆ ಪೋಗಿ ಬಳಿ
ಕಿನಿತವಸ್ಥೆಯನೆಲ್ಲವಂ ಪೇಳೆ ಕೇಳ್ದು ಭೋಂ
ಕನೆ ಸಿಂಹಪೀಠದಿಂದೆದ್ದೊಡನೆ ಪರಿತಂದು ಶಿವನ ರೂಪಂ ಕಾಣುತೆ
ಮನದೊಳುರೆ ಹಿಗ್ಗುತತಿದೂರದಿಂದವನಿಯೊಳ್
ತನುವನೀಡಾಡಿ ಮಗುಳ್ದೆದ್ದು ಕುಣಿದಾಡಿ ತ
ನ್ನನೆ ಮರೆವುತೆಚ್ಚರುತೆ ಭಕ್ತಿರಸವೊಳಗಾಳುತೇಳುತಾ ಹರಿಯೆಸೆದನು ೧೧

ಜಯಜಯತು ಜಗದೀಶ ಜನನಮರಣವಿನಾಶ
ಜಯಜಯತು ನುತಕಾಯ ನಿತ್ಯ ನಿರ್ಜಿತಮಾಯ
ಜಯಜಯತು ದಿವ್ಯಾಂಗ ಗೀಷ್ಪತಿಶಿರೋಭಂಗ ಜಯಜಯ ಕೃಪಾಪಾಂಗನೇ
ಜಯಜಯತು ಮುನಿಪಾಲ ದಾಕ್ಷಾಯಣೀಲೋಲ
ಜಯಜಯತು ಭಾಳಾಕ್ಷ ಭಕ್ತರಘಸಂಶಿಕ್ಷ
ಜಯಜಯತು ಸದ್ಗ್ರೀವ ನಿಖಿಳಸುರಸಂಜೀವ ಜಯತು ಜಯತೆನುತಿರ್ದನು ೧೨

ಇಂತು ನಾನಾತೆರದೆ ನುತಿಸುತಿರ್ಪಾ ಹರಿಯ
ನಂತಭಕ್ತಿಯನೀಶ್ವರಂ ನೋಡಿ ಮೆಚ್ಚುತ
ತ್ಯಂತ ಕರುಣದೊಳೆಂದನೆಲೆ ವಿಷ್ಣು ಕೇಳಾವು ಬಂದ ಬರವಂ ತಿಳಿಯದೆ

ಸಚ್ಚಿದಾನಂದ ರೂಪವನ್ನು ನಾನು ನೋಡಿದೆ ಎಂದನು. ಅದಕ್ಕೆ ಶಿವನು, 'ಮೆಚ್ಚಿದೆ' ಎಂದನು. ಆಗ ಅವನು ಶೂಲದಿಂದ ನನ್ನನ್ನು ಇಳಿಸಬೇಡ ಎನ್ನಲು ಶಿವನು ಹಾಗೆಯೇ ಮಾಡಿದನು. ೧೧. ಅಷ್ಟರಲ್ಲಿ ಒಬ್ಬನು ವಿಷ್ಣುವಿನ ಹತ್ತಿರಕ್ಕೆ ಹೋಗಿ ನಡೆದೆಲ್ಲ ಘಟನೆಯನ್ನೂ ಹೇಳಿದನು. ಅದನ್ನು ಕೇಳಿ ತಕ್ಷಣ ಸಿಂಹಾಸನದಿಂದ ವಿಷ್ಣುವು ಎದ್ದುಬಂದು ಶಿವನ ರೂಪವನ್ನು ಕಾಣುತ್ತಲೆ ಮನಸ್ಸಿನಲ್ಲಿ ಬಹಳ ಸಂತೋಷಿಸುತ್ತ ದೂರದಿಂದಲೇ ನೆಲದ ಮೇಲೆ ಅಡ್ಡಬಿದ್ದು, ಮತ್ತೆ ಮೇಲೆದ್ದು ಕುಣಿದಾಡಿ ತನ್ನನ್ನೇ ತಾನು ಮರೆತನು. ಮತ್ತೆ ಎಚ್ಚೆತ್ತುಕೊಂಡು ಭಕ್ತಿರಸದಲ್ಲಿ ಮುಳುಗಿ ಏಳುತ್ತಾ ವಿಷ್ಣುವು ಪ್ರಕಾಶಿಸಿದನು. ೧೨. ಹೇ ಜಗದೀಶ್ವರನೇ,ಹುಟ್ಟುಸಾವುಗಳನ್ನು ನಾಶಮಾಡುವವನೇ, ಹೊಗಳಿಸಿಕೊಳ್ಳುವ ದೇಹವುಳ್ಳವನೇ, ಶಾಶ್ವತನಾದವನೇ, ಮಾಯೆಯನ್ನು ಜಯಿಸಿದವನೇ, ಸುಂದರವೂ ಶ್ರೇಷ್ಠವೂ ಆದ ಶರೀರವುಳ್ಳವನೇ, ಬ್ರಹ್ಮನ ತಲೆಯನ್ನು ತರಿದವನೇ, ಕರುಣಾದೃಷ್ಟಿಯುಳ್ಳವನೇ, ಮುನಿಗಳನ್ನು ಸಂರಕ್ಷಿಸುವವನೇ, ದಾಕ್ಷಾಯಿಣೀಲೋಲನೇ, ಹಣೆಗಣ್ಣನೇ, ಭಕ್ತರ ಪಾಪವನ್ನು ಹೋಗಲಾಡಿಸುವವನೇ, ವಿಷಕಂಠನೇ, ದೇವತೆಗಳಿಗೆ ಸಂಜೀವಿನೀ ಸ್ವರೂಪನೇ ನಿನಗೆ ಜಯವಾಗಲಿ, ಜಯವಾಗಲಿ ಎಂದು ಸ್ತುತಿಸುತ್ತಿದ್ದನು. ೧೩. ಹೀಗೆ ನಾನಾ ರೀತಿಯಲ್ಲಿ ಸ್ತೋತ್ರ ಮಾಡುತ್ತಿರುವ ವಿಷ್ಣುವಿನ ಅನಂತಭಕ್ತಿಯನ್ನು ನೋಡಿ

CC-0. Jangamwadi Math Collection. Digitized by eGangotri

ಅಂತಿಂತು ಪೊಗಳೆ ಫಲವೇನೆಂದು ವಾಚಿಸಿದ
ಕುತುಮರ್ದನನ ವಚನಜ್ಯೋತಿ ಬೆಳಗೆ ಪರಿ
ಯಂತಸ್ತಮಂ ತೊಲಗಿ ಪರಮಸಮ್ಯಗ್ಜ್ಞಾನಮವತರಿಸಿತಾಕ್ಷಣದೊಳು ೧೩

ಅರಿದನಾ ವಿಧಿಶಿರಂ ಪರಿದೊಂದುತೆರನನಿದ
ಕೆರವೆನ್ನೀ ನೊಸಲೊಳೊರೆವ ರಕ್ತಮನೆಂದು
ಸರಸರನೆ ಚಕ್ರದಿಂ ಪೆರೆನೊಸಲ್ಗೊರೆದು ಹರಕರಪಾತ್ರೆಗುರೆ ಬಾಗಿಸೆ
ದುರುದುರಿವ ಕೆನ್ನೀರ ತೊರೆ ಬೆಟ್ಟದಿಂದಿಳಿವ
ತೆರದೊಳ್ ಕಪಾಲದಿಂ ಕರೆವುತಿರಲದರ ಕೆಲ
ದೆರಪಿಂಗದೊಮ್ಮೆಯುಂ ನೆರೆಯದಿರೆ ಹರಿಯದಟು ಬರತುದೇಂ ಬಣ್ಣಿಸುವೆನು ೧೪

ಸುರರ ಸಾಸಿರಬರಿಸಮುಂ ಬಿಡದೆ ಸುರಿಯಲಾ
ಹರಿಯ ಸರ್ವಾಂಗರಕ್ತಂ ಮಜ್ಜೆ ಮಾಂಸಂಗ
ಳಿರದೆ ಪೋಗಲ್ ಬಳಿಕ್ಕುಳಿದ ಚರ್ಮಾಸ್ಥಿಯಿಂ ತರಹರಿಸಿ ನಿಲಲಾರದೆ
ಹರಿ ಧರೆಗೆ ಬೀಳಲಾ ಹರನಂದು ಕರುಣದಿಂ
ಪರಣಮಂ ಪಡೆಯೆ ಪಳೆಯಂತೆ ಹರಿ ರಕ್ತಮಂ
ಸುರಿವುತಿರಲೀಶ್ವರಮನಂ ಭಕ್ತಚರಿತಕ್ಕೆ ಕರಗಿತ್ತದೇವೇಳ್ವೆನು ೧೫

ಈಶ್ವರನು ಮೆಚ್ಚಿ ಅತ್ಯಂತ ಕರುಣೆಯಿಂದ ಈ ರೀತಿ ಹೇಳಿದನು. ಎಲೈ ವಿಷ್ಣುವೇ, ಕೇಳು, ನಾನು ಬಂದ ಉದ್ದೇಶವನ್ನೇ ನೀನು ತಿಳಿಯದೆ ಈ ರೀತಿ ಹೊಗಳಿದರೆ ಫಲವೇನು ಎಂದ ಶಿವನ ಮಾತಿನ ಜ್ಯೋತಿಯು ಬೆಳಗಲು ವಿಷ್ಣುವಿನ ಮನದ ಅಜ್ಞಾನವು ತೊಲಗಿ ಕೂಡಲೇ ಪರಮಜ್ಞಾನವು ಉದಯಿಸಿತು. ೧೪. ಆದರಿಂದ ಬ್ರಹ್ಮನ ತಲೆಯನ್ನು ಕಡಿದ ವಿಷಯವನ್ನು ವಿಷ್ಣುವು ತಿಳಿದುಕೊಂಡನು. ಮತ್ತು ಆ ಕಪಾಲಕ್ಕೆ ನನ್ನ ಈ ಹಣೆಯಿಂದ ಹರಿಯುವ ರಕ್ತವನ್ನೇ ಹೊಯ್ಯುತ್ತೇನೆ ಎಂದು ಬೇಗನೆ ಚಕ್ರದಿಂದ ಹಣೆಯ ಮೇಲ್ಭಾಗವನ್ನು ಕೊರೆದು, ಶಿವನ ಕೈಯಲ್ಲಿದ್ದ ಪಾತ್ರೆಗೆ ಹಣೆಯನ್ನು ಬಾಗಿಸಿದನು. ಆಗ ಆ ರಕ್ತವು ಬೆಟ್ಟದಿಂದಿಳಿಯುವ ಪ್ರವಾಹದಂತೆ ವಿಷ್ಣುವಿನ ತಲೆಯಿಂದ ಶಿವನ ಕೈಯಲ್ಲಿದ್ದ ಕಪಾಲಕ್ಕೆ ದಡದಡನೆ ಹರಿಯಿತು. ಆದರೂ ಶಿವನ ಕೈಯಲ್ಲಿದ್ದ ಕಪಾಲವು ತುಂಬಲಿಲ್ಲ. ಆಗ ಹರಿಯ ಶೌರ್ಯ ಮತ್ತು ಗರ್ವವು ಬತ್ತಿಹೋಯಿತು. ಅದನ್ನು ಏನೆಂದು ಬಣ್ಣಿಸಲಿ ? ೧೫. ದೇವತೆಗಳ ಒಂದು ಸಾವಿರ ವರ್ಷಗಳವರೆಗೆ ಒಂದೇ ಸಮನಾಗಿ ವಿಷ್ಣುವಿನ ಸರ್ವಾಂಗದಿಂದ ರಕ್ತ ಸುರಿಯಿತು. ಆಗ ಅವನ ದೇಹದ ಕೊಬ್ಬು, ಮಾಂಸ ಎಲ್ಲವೂ ಹರಿದು ಹೋದುವು, ಚರ್ಮ ಮತ್ತು ಮೂಳೆ ಮಾತ್ರ ಉಳಿಯಲು, ನಿಲ್ಲಲು ತ್ರಾಣವಿಲ್ಲದೆ ವಿಷ್ಣುವು ನೆಲಕ್ಕೆ ಬೀಳಲು, ಆಗ ಶಿವನ ಕರುಣೆಯಿಂದ ಅವನ ಪ್ರಾಣ ಹಿಂದಿರುಗಲು ಮೊದಲಿನಂತೆಯೇ ವಿಷ್ಣುವು ರಕ್ತವನ್ನು ಸುರಿಸುತ್ತಿರಲು ಈಶ್ವರನ ಮನಸ್ಸು ಭಕ್ತನ

CC-0. Jangamwadi Math Collection. Digitized by eGangotri

ಹೋ ಹೋ ಪುರೇ ಪುರೇ ಸಾಕು ಸಾಕೈ ನಿನ್ನ
ಸಾಹಸದ ಭಕ್ತಿಗೆಮ್ಮಯ ಮನಂ ಮಚ್ಚಿತಿಂ
ತೀ ಹಂಸವಾಹನನ ಹಮ್ಮಿನಿಂದೊಗೆದ ಕೋಪಂ ಶಾಂತಮಾದುದಿನ್ನು
ಊಹಿಸಲ್ ನಿನಗೆ ಸರಿ ಭಕ್ತರುಂಟೇಯೆನು
ತ್ತಾ ಹರಿಯನಾದರಿಸಿ ಬೀಳ್ಕೊಟ್ಟು ಹರುಷದಿಂ
ದೀ ಹರಂ ದೇವೇಂದ್ರಪುರಕೆ ನಡೆತಂದನದನೇನೆಂದು ಬಣ್ಣಿಸುವೆನು ೧೬

ಭೋಗಿಸಂಕುಲಶೋಭಿತಂ ಸರ್ವಮಾಂಗಲ್ಯ
ಯೋಗಿ ಭೂತಿಪ್ರಯುಕ್ತಂ ಕಾಮವಿಹರಣಂ
ಮೇಗೆ ವಿಭವಪ್ರದಂ ವಿಧೃತಗೋಪಂ ಸಮಾಶ್ರಿತಸೋಮನೆಂಬ ಪೆಸರಿಂ
ಈಗಳೀ ಪುರವೆಮ್ಮ ನಾಮಾಂಕಿತಂದಳೆದು
ರಾಗಮಂ ಮನಕೀವುತಿದೆ ನೋಳ್ಪೆವಿದನೆಂದು
ನಾಗಭೂಷಂ ವಿಮಲವೇಷನಮರಾವತಿಯನೊಳಪೊಕ್ಕನುತ್ಸವದೊಳು ೧೭

ಪೆಸರದಮರಾವತೀಪುರಮದಂ ನಯದೆ ಪಾ
ಲಿಸುವವಂ ದೇವೇಂದ್ರನವನ ಪೊರೆಯೊಳಗಿರ್ದು
ಬೆಸಕೈವರಮಲದಿಕ್ಪಾಲರುಂಬುದೆ ಸುಧಾಹಾರವಮಾತನ ಸತಿಯರು

ಉತ್ತಮನಡತೆಗೆ ಕರಗಿತು. ಅದನ್ನು ಏನೆಂದು ಹೇಳಲಿ? ೧೬. ಹೋಹೋ! ಭಾಪು, ಭಾಪುರೇ. ಸಾಕು ಸಾಕು, ನಿನ್ನ ಸಾಹಸದ ಭಕ್ತಿಗೆ ನನ್ನ ಮನಸ್ಸು ಮೆಚ್ಚಿತು. ಬ್ರಹ್ಮನ ಗರ್ವದಿಂದ ಉಂಟಾದ ನನ್ನ ಕೋಪ ಶಾಂತವಾಯಿತು. ಯೋಚಿಸಲು ನಿನಗೆ ಸಮನಾದ ಭಕ್ತರು ಇದ್ದಾರೆಯೇ? ಎಂದು ಹೇಳುತ್ತ ವಿಷ್ಣುವನ್ನು ಉಪಚರಿಸಿ ಶಿವನು ಅವನನ್ನು ಕಳುಹಿಸಿ ಸಂತೋಷದಿಂದ ಅಮರಾವತಿಗೆ ಬಂದನು. ೧೭. ಸರ್ಪಭೂಷಣ (ಭೋಗಿಗಳ ಸಮೂಹದಿಂದ ಶೋಭಿತ) ಸರ್ವಮಂಗಳಯೋಗಿ (ಎಲ್ಲರಿಗೂ ಮಂಗಳವನ್ನುಂಟು ಮಾಡುವ ಋಷಿಗಳಿದ್ದರು) ವಿಭೂತಿಧರಿಸಿದವನು (ಐಶ್ವರ್ಯದಿಂದ ಕೂಡಿದವರು)ಕಾಮನನ್ನು ಸಂಹರಿಸಿದವನು (ಕಾಮವಿಹಾರಿ) ಐಶ್ವರ್ಯಪ್ರದ (ಐಶ್ವರ್ಯ ನೀಡುವವರು) ವೃಷಭವಾಹನ (ದೇವೇಂದ್ರನಿಂದ ಕೂಡಿದ್ದು) ಚಂದ್ರಶೇಖರ (ಚಂದ್ರನಿಗೆ ಆಶ್ರಯ ಸ್ಥಾನ) ಎನ್ನುವ ನನ್ನ ಹೆಸರುಗಳನ್ನು ಈ ಪಟ್ಟಣ ಹೊಂದಿದೆ, ಅಲ್ಲದೆ ಮನಸ್ಸಿಗೆ ಪ್ರೀತಿಯನ್ನುಂಟುಮಾಡುತ್ತದೆ. ಇದನ್ನು ನೋಡುತ್ತೇನೆ ಎಂದು ನಾಗಭೂಷಣನಾದ ಶಿವನು ಮನೋಹರವೇಷದಿಂದ ಅಮರಾವತಿಯನ್ನು ಉತ್ಸಾಹಗೊಂಡು ಪ್ರವೇಶಿಸಿದನು. ೧೮. ಅದರ ಹೆಸರು ಅಮರಾವತಿ ಪಟ್ಟಣ. ಅದನ್ನು ನ್ಯಾಯ-ನೀತಿಗಳಿಂದ ಆಳುವವನು ದೇವೇಂದ್ರ. ಅವನ ಪಕ್ಕದಲ್ಲಿದ್ದು ಅಪ್ಪಣೆಯಂತೆ ನಡೆಯುವವರು ದಿಕ್ಪಾಲಕರು. ಅವರು ಉಣ್ಣುವುದೇ ಅಮೃತವನ್ನು. ಕೀರ್ತಿಶಾಲಿಗಳಾದ ಶಚಿ, ರಂಭೆ, ಊರ್ವಶಿ, ತಿಲೋತ್ತಮೆ

CC-0. Jangamwadi Math Collection. Digitized by eGangotri

ಪೆಸರಾದ ಶಚಿ ರಂಭೆಯುರ್ವಸಿ ತಿಲೋತ್ತಮೆಯು
ರೆಸೆವ ಮೇನಕೆ ಸುಕೇಶಿಯರನಿಬರೊಸೆದು ಪೂ
ಜಿಸುವಿಷ್ಟಲಿಂಗಮೆ ವಿರೂಪಾಕ್ಷನೆನಲದರ ಪೆಂಪನೇಂ ಬಣ್ಣಿಸುವೆನು ೧೮

ಈ ವಿಭವದಿಂದೆಸೆವ ಪುರವನೊಳಪೊಕ್ಕು ಮ
ತ್ತಾ ವಿಕೃತವೇಷ ಸರ್ವೇಶ್ವರಂ ಪಣ್ಯಾಂಗ
ನಾವೀಥಿಯೊಳ್ ನಡೆದು ಬರಬರಲ್ ಚರಿಪ ಸಖಿಯರ ಚೆಲ್ಲೆಗಣ್ದುಂಬಿಗೆ
ಆ ವಿಭುವಿನವಮಳವದನಾಬ್ಜಮಿದಿರಾಗಲದ
ನೇವೇಳ್ವೆನವರವರ್ ತಂತಮ್ಮವರ್ಗುಸುರ್ವ
ಸಾವಧಾನದೊಳೊಬ್ಬರೊಬ್ಬರಂ ಮುಂಚಿ ನಡೆದೊಡತಿಯರೊಳಿಂತೆಂದರು ೧೯

ಅಕ್ಕ ಕೇಳಾತನಾರೆಂದರಿಯೆವವನೊರ್ವ
ಚಿಕ್ಕಹರಯದ ಸೊಬಗನವೆ ಪೋದಪಂ ಮರೆಯ
ಮುಕ್ಕಣ್ಣನಪ್ಪನಲ್ಲದೆ ವಿಷ್ಣು ಶಶಿ ಸೂರ್ಯ ಮನಸಿಜರ್ಗಿನಿತು ರೂಪು
ಮಿಕ್ಕಿರದು ನಿನ್ನಾಣೆ ಪುಸಿಯಲ್ಲ ಮಿಗೆ ಕೈಯೊ
ಳಿಕ್ಕಿದಾಭರಣಕ್ಕೆ ಕನ್ನಡಿಯೆ ನಿನ್ನೆರ್ದೆಗೆ
ತಕ್ಕವಂ ಸೌಭಾಗ್ಯಮೆಂತಿರ್ಪುದೋ ಎಂದು ಕೂಡೆ ಮತ್ತಿಂತೆಂದರು ೨೦

ಮತ್ತು ಹೆಸರಾಂತ ಮೇನಕೆ, ಸುಕೇಶಿನಿಯರು ದೇವೇಂದ್ರನ ಪತ್ನಿಯರು. ಅವರೆಲ್ಲರೂ ಪ್ರೀತಿಯಿಂದ ಪೂಜಿಸುವ ಇಷ್ಟಲಿಂಗವೇ ವಿರೂಪಾಕ್ಷ ಎನ್ನಲು ಆದರ ವೈಭವವನ್ನು ಏನೆಂದು ಬಣ್ಣಿಸಲಿ? ೧೯. ವಿಚಿತ್ರವೇಷದ ಸರ್ವೇಶ್ವರನು ಈ ರೀತಿ ವೈಭವದಿಂದಿರುವ ಆ ಪಟ್ಟಣವನ್ನು ಹೊಕ್ಕು ವೇಶ್ಯಾಜನರ ಬೀದಿಯಲ್ಲಿ ನಡೆದುಬರುತ್ತಿದ್ದನು. ಆ ಪ್ರಭುವಾದ ಶಿವನ ಸುಂದರವಾದ ಮುಖಕಮಲವು ಅಲ್ಲಿ ಸಂಚರಿಸುತ್ತಿದ್ದ ಸಖಿಯರ ದೀರ್ಘವಾದ ಕಣ್ಣೆಂಬ ದುಂಬಿಗೆ ಎದುರಾಯಿತು. ಆಗ ಏನೆಂದು ಹೇಳಲಿ? ಅವರು ತಮ್ಮತಮ್ಮವರಿಗೆ ಈ ವಿಷಯವನ್ನು ಹೇಳುವ ಆತುರದಿಂದ ಒಬ್ಬರನ್ನೊಬ್ಬರು ಹಿಂದೆ ಹಾಕಿ ನಡೆದು ತಮ್ಮ ಒಡತಿಯರ ಬಳಿಸೇರಿ ಹೀಗೆ ಹೇಳಿದರು. ೨೦, ಅಕ್ಕ ಕೇಳು ಅವನು ಯಾರೆಂದು ತಿಳಿಯದು. ಅವನೊಬ್ಬ ಎಳೆಯ ಪ್ರಾಯದ ಸೊಗಸುಗಾರ. ಅದೋ ಅಲ್ಲಿ ಹೋಗುತ್ತಿದ್ದಾನೆ. ವೇಷ ಮರೆಸಿಕೊಂಡಿರುವ ಮುಕ್ಕಣ್ಣನಿರಬೇಕು. ಅಲ್ಲದೆ ವಿಷ್ಣು, ಚಂದ್ರ, ಸೂರ್ಯ, ಮನ್ಮಥರಿಗೆ ಈ ರೂಪು ಇರಲು ಸಾಧ್ಯವಿಲ್ಲ, ನಿನ್ನಾಣೆಯಾಗಿಯೂ ಇದು ಸುಳ್ಳಲ್ಲ. ಕೈಯಲ್ಲಿ ತೊಟ್ಟಿರುವ ಆಭರಣಕ್ಕೆ ಕನ್ನಡಿ ಏಕೆ ? ನಿನ್ನ ಮನಸ್ಸಿಗೆ ಯೋಗ್ಯನಾದ ವರ. ನಿನ್ನ ಸೌಭಾಗ್ಯ ಹೇಗಿದೆಯೋ ಎಂದು ಅವಳ ಸಂಗಡ ಮತ್ತೆ ಹೀಗೆ

CC-0. Jangamwadi Math Collection. Digitized by eGangotri

ಈಯಮರನಗರಕ್ಕೆತರದ ಸುರ ನರ ನಾಗ
ನಾಯಕರ್ ಮುನ್ನಿಲ್ಲವವರೊಳೀ ಪರಿ ಜಾಶಿ
ನಾಯಕನನೊರ್ವನಂ ಕಂಡುದಿಲ್ಲವನೆಡದ ಕಾಯಕಾ ಬಲದಕಡೆಯು
ಕಾಯಮೆಣೆಯಲ್ಲದಿಂ ಪಡಿಯಿಡುವ ವಸ್ತುವಿ
ನ್ನೀಯಬುಜಭವಕೋಟಿಸೃಷ್ಟಿಯೊಳಗಿಲ್ಲ ಬರಿ
ಬಾಯ ಮಾತಲ್ಲ ನೋಳ್ಪೊಡೆ ತೋರ್ಪೆವೆನಲವರ್ ಸಂಭ್ರಮವೆ ಪೊರಮಟ್ಟರು ೨೧

ಸರಸಶಿವದನೆಯರ್ ಸಕಲಗುಣಸದನೆಯರ್
ಸರಸಿರುಹಪಾಣಿಯರ್ ಸಾರಸಸುವಾಣಿಯರ್
ಸರಳತರಳಾಕ್ಷಿಯರ್ ಸತ್ಕಲಾಪೇಕ್ಷೆಯರ್ ಸಕಲಲಕ್ಷಣಯುತೆಯರು
ಶರಧಿಗಂಭೀರೆಯರ್ ಸಂಗೀತಸಾರೆಯರ್
ಸರಣಜಿತಭೋಗಿಯರ್ ಸಂತತಂ ರಾಗಿಯರ್
ಸರಳ್ಗೆದರೆಡೆಯಾಗಿ ಸಂಭ್ರಮದ ನಡೆಯಾಗಿ ಬರುತಿರ್ದರೇವೇಳ್ವೆನು ೨೨

ಪೀಲಿದಳೆವಿಡಿದಂತೆ ಮೈಗಂಪಿಗಳಿಕುಳಂ
ಮೇಲೆತ್ತಿ ಬರೆ ಸೋಗೆಮುಡಿಗೆ ಸೋಲ್ತೊಡನೆ ನವಿ
ಲೋಲಗಿಸಿ ಬರೆ ಕುಚದ್ವಯದ ಚೆಲ್ವಿಗೆ ಕೋಕವಿಘಸಂಗಳೊಡನೆ ಬರಲು

ಹೇಳಿದರು. ೨೧, ಈ ದೇವತೆಗಳ ನಗರಕ್ಕೆ ಬರದೆ ಇರುವ ಸುರರು, ಮನುಷ್ಯರು ಮತ್ತು ನಾಗನಾಯಕರು ಹಿಂದೆ ಯಾರೂ ಇಲ್ಲ. ಅವರಲ್ಲಿ ಈ ರೀತಿಯ ಶ್ರೇಷ್ಠ ನಾಯಕ ನನ್ನು ಇದುವರೆವಿಗೂ ನಾವು ಕಾಣಲಿಲ್ಲ. ಅವನ ಎಡಭಾಗದ ಶರೀರ ಅವನ ಬಲಭಾಗದ ಶರೀರಕ್ಕೆ ಸಮನಾಗಿಲ್ಲ. ಅಲ್ಲದೆ ಇದಕ್ಕೆ ಸಮನಾದ ವಸ್ತು ಈ ಬ್ರಹ್ಮನ ಕೋಟಿ ಸೃಷ್ಟಿ ಯಲ್ಲಿ ಇಲ್ಲ. ಇದು ಬರಿಯ ಮಾತಲ್ಲ. ನೋಡುವುದಾದರೆ ತೋರಿಸುತ್ತೇನೆ ಎಂದು ಹೇಳಲು ಅವರು ಸಂಭ್ರಮದಿಂದ ಹೊರಹೊರಟರು. ೨೨. ಚೆಲುವೆಯರಾದ ಚಂದ್ರಮುಖಿಯರು, ಸಕಲ ಗುಣಗಳಿಗೂ ಆಶ್ರಯರಾದವರು, ಕಮಲದಂತಹ ಕೈ ಉಳ್ಳವರು, ಮನೋಹರವಾದ ಇಂಪಾದ ಕಂಠವುಳ್ಳವರು, ಸರಳವಾದವರು, ಚಂಚಲವಾದ ಕಣ್ಣನ್ನು ಉಳ್ಳವರು, ಒಳ್ಳೆಯ ಕಲೆಗಳಲ್ಲಿ ಅಪೇಕ್ಷೆಯುಳ್ಳವರು, ಎಲ್ಲ ಲಕ್ಷಣಗಳಿಂದ ಕೂಡಿದವರು, ಸಮುದ್ರದಂತೆ ಗಂಭೀರೆಯರು, ಸಂಗೀತಪ್ರಿಯರು, ತಮ್ಮ ಭೋಗದಿಂದ ಯೋಗಿಗಳನ್ನು ಗೆದ್ದವರು, ಯಾವಾಗಲೂ ಅನುರಾಗವುಳ್ಳವರು ಕಾಮನಿಗೆ ಬಲಿಯಾಗಿ ಸಂಭ್ರಮದಿಂದ ನಡೆಯುತ್ತ ಬರುತ್ತಿದ್ದರು. ೨೩. ಒಬ್ಬಳ ಮೈಯ ಸುವಾಸನೆಗೆ ದುಂಬಿಗಳ ಸಮೂಹ ನವಿಲುಗರಿಯನ್ನು ಹಿಡಿದಂತೆ ಮುತ್ತಿಬರುತ್ತಿದ್ದುವು. ಅವಳ ನವಿಲಿ ನಂತಹ ಮುಡಿಗೆ ನವಿಲು ಸೋತು ಒಲಿಸಿಕೊಳ್ಳಲು ಬರುತ್ತಿದ್ದಿತು. ಆಕೆಯ ಎರಡು

CC-0. Jangamwadi Math Collection. Digitized by eGangotri

ಮೇಲೆ ನಡೆ ನುಡಿಗಂಚೆ ಗಿಳಿಗಳೊಡವರಲೊಂದು
ಲೀಲಾಬ್ಜಮಂ ಪಿಡಿದು ಬರ್ಪಳೊಪ್ಪಿರ್ದಳೈ
ಗೋಲನಧಿದೇವತೆಯೊ ಪೇಳೆಂಬಿನಂ ಶಿವನನೀಕ್ಷಿಪೌತ್ಸುಕ್ಯದಿಂದೆ ೨೩

ಅರಮೆ ತಿದ್ದಿದ ತಿಲಕಮೇಕನಯನಾಂಜನಂ
ಕರದ ಕನ್ನಡಿ ಕಟ್ಟದೊಳ್ಮುಡಿ ವಿಭಾಗಿಸದ
ಕರುಳ ಬೈತಲೆಯೊಂದು ತೋಳ್ಗವುರ್ದ ರವಕೆ ತಿಗುರದ ಗಂಧಮೊಟ್ಟಿದೊಡಲು
ಅರೆಯುಟ್ಟ ಸೀರೆ ನೆಲಕಲೆವ ಮೇಲುದು ಸಿರಂ
ಬೆರೆದ ಕಮ್ಮೆಣ್ಣೆ ನೀರಾರದ ಕುರುಳ್ ಮೆರೆಯೆ
ಬರುತಿರ್ದರರೆಮಾಳ್ಪ ಸಿಂಗರಂಗಳನುಳಿದು ತರಳೆಯರ್ ತವಕದಿಂದೆ ೨೪

ಕೆಂಪೇರಿದರಳ್ಗಣ್ಣ ಕಡೆಪರೆದ ಕುರುಳಾಂತ
ನುಂಪುವಣೆ ಮಸುಳ್ದ ತಿಲಕಂ ಕದಡಿದಂಜನದ
ಸೊಂಪು ಸೊಪ್ಪಾಗಿ ಬೆಳ್ಪಾದಧರಮುಗುರಿರಿತಮುಡಿದ ನೆಲೆಮೊಲೆ ನಡೆಯೊಳು
ಕಂಪಿಸುವ ತೊಡೆಗಳಾರದ ಬೆಮರ್ ನಿಟ್ಟುಸುರ್ಗ
ಳಿಂ ಪೊಯ್ಸ ತೆಳ್ವಳಿಯ ಬಳಲ್ದ ಕೈಮೆಯ್ಯ ಪೊಸ
ಗಂಪು ಕೆದರಿದ ನಿರಿಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು ೨೫

ಮೊಲೆಗಳ ಸೌಂದರ್ಯಕ್ಕೆ ಚಕ್ರವಾಕಪಕ್ಷಿಗಳ ಜೋಡಿಯು ಕೂಡಲೆ ಹಿಂಬಾಲಿಸಿದುವು. ಅಲ್ಲದೆ ಅವಳ ನಡಿಗೆ ಮತ್ತು ಮಾತಿಗೆ ಹಂಸೆ ಮತ್ತು ಗಿಳಿಗಳು ಒಡನೆಯೇ ಬರಲು ಲೀಲೆಯಿಂದ ಬಳುಕುವ ಕಮಲವನ್ನು ಹಿಡಿದುಕೊಂಡು ಶಿವನನ್ನು ನೋಡುವ ಸಂಭ್ರಮ ದಿಂದ ಬರುತ್ತಿದ್ದ ಆಕೆಯು ಪಂಚಬಾಣನಾದ ಮನ್ಮಥನ ಅಧಿದೇವತೆಯೋ ಹೇಳು ಎಂಬಂತೆ ಕಂಗೊಳಿಸುತ್ತಿದ್ದಳು. ೨೪. ಅರ್ಧ ತಿದ್ದಿದ ತಿಲಕ, ಒಂದು ಕಣ್ಣಿಗೆ ಬಳಿದ ಕಾಡಿಗೆ, ಕೈಯಲ್ಲಿ ಹಿಡಿದಿರುವ ಕನ್ನಡಿ, ಗಂಟಿಕ್ಕದೇ ಇರುವ ಜೋಲುಮುಡಿ. ಬೈತಲೆಯನ್ನು ತಿದ್ದದಿರುವ ಕೂದಲು.ಒಂದು ತೋಳನ್ನು ತೊಟ್ಟುಕೊಂಡ ರವಿಕೆ. ಸುಗಂಧವನ್ನು ಸರಿಯಾಗಿ ಬಳಿಯದ ಶರೀರ, ಅರ್ಧ ಉಟ್ಟ ಸೀರೆ, ನೆಲದ ಮೇಲೆ ಜೋತಾಡುವ ಮೇಲ್ಸೆರಗು, ತಲೆಗೆ ಹಚ್ಚಿದ ಸುವಾಸನೆಯ ಎಣ್ಣೆ, ಇನ್ನೂ ನೀರು ಆರದಿರುವ ತಲೆಗೂದಲುಗಳು ಪ್ರಕಾಶಿಸುತ್ತಿರಲು, ಮಾಡಿಕೊಳ್ಳುತ್ತಿದ್ದ ಶೃಂಗಾರವನ್ನು ಅರ್ಧದಲ್ಲಿಯೇ ಬಿಟ್ಟು ಆತುರದಿಂದ ತರುಣಿಯರು ಬರುತ್ತಿದ್ದರು. ೨೫. ಕೆಂಪೇರಿದ ಅಗಲವಾದ ಕಣ್ಣು, ಪಕ್ಕಕ್ಕೆ ಸರಿದ ಕೂದಲು, ನುಣ್ಣಾದ ಹಣೆ, ಮಸಕಾದ ತಿಲಕ, ಕದಡಿಹೋದ ಕಾಡಿಗೆಯ ಕಾಂತಿ, ಸೊರಗಿಹೋಗಿ ಬಿಳುಪಾದ ತುಟಿ, ಉಗುರಿನಿಂದ ಚುಚ್ಚಿದ ಗುರುತುಳ್ಳ ನೆಲೆಮೊಲೆ, ನಡೆದಾಗ ನಡುಗುವ ತೊಡೆಗಳು, ಸುರಿಯುವ ನಿಟ್ಟುಸಿರಿನಿಂದ ಅಲುಗಾಡುವ ತೆಳುವಾದ ಹೊಟ್ಟೆಯ ಮೇಲಿನ ಗೆರೆಗಳು, ಬಳಲಿದ ಮೈ ಕೈಗಳಿಂದ ಹೊರಡುವ ಕಂಪು, ಕೆದರಿಹೋದ ಸೀರೆಯ ನೆರಿಗೆಯಿಂದ ಕೂಡಿ ಸಂಭೋಗವನ್ನು

CC-0. Jangamwadi Math Collection. Digitized by eGangotri

ಎಣ್ಣೆಗಂಟಿನ ಪೊರೆಗೆ ಸುಣ್ಗೊರಲ್ ಬಳ್ಕೆ ಕಡು
ತಿಣ್ಣ ಮೊಲೆಗಳ ಬಿಣ್ಪಿಗಸಿಯು ನಡುವಳ್ಕೆ ಪೊಂ
ಬಣ್ಣ ಕೊಡಪೊರವಾರ ಭರಕೆ ಪೊಂಬಾಳೆದೊಡೆ ದಡದಡಿಸೆ ಘಳಘಳಿಸುವಾ
ಹುಣ್ಣಿಮೆಯ ಸಸಿಮೊಗದೊಳುದಿಸೆ ಬೆಮರ್ವನಿಯಾಲ
ವಣ್ಣನೆಯ ತುಟಿ ಸುಯಿಲ ಬಿಸುಪಿನಿಂ ಬತ್ತಲಾ
ಪೆಣ್ಣಿವಿಂಡಂಗಜನ ಬಾಣದೇರಿಂ ನೋವುತಡಿಯಿಟ್ಟತಾಕ್ಷಣದೊಳು ೨೬

ಮಗ್ಗುಲಿನಿಯನನುಳಿದು ಪೋಪ್ಪುದುಚಿತವೆ ಮಗಳೆ
ಸಗ್ಗವೆಣ್ಣೆಂಬ ಮಾತಿಗೆ ಕಾಯ್ದು ನಟಿಕೆಯಂ
ನೆಗ್ಗಿ ಪಿಂಬಪ್ಪಾಳಿಯಂ ಬಯ್ದು ಮುಡಿ ಮೊಲೆಯ ಪೊರವಾರ ಬಿಣ್ಪನಿಂತು
ವೆಗ್ಗಳಿಸಲೇಕೆಂದು ಬೊಮ್ಮನಂ ಜರೆವುತ್ತೆ
ಕಿಗ್ಗಡೆಯ ತೊಡೆಗಳಂ ನುಗ್ಗುಮಾಡುತ್ತೊರ್ವ
ದಿಗ್ಗಜೋಪಮಯಾನೆ ಭರ್ಗನಂ ಕಾಣುತ್ತೆ ಬಗ್ಗಬರಿಯೆರ್ದೆಯಾದಳು ೨೭

ಒತ್ತಿಲಿಹ ನಲ್ಲನಂ ಮರೆವುತಾಡುವ ಪಗಡೆ
ಲೆತ್ತ ಚದುರಂಗಂಗಳಂ ಬಿಸುಟ್ಟೋದುತಿಹ
ಚಿತ್ತಜಾಗಮದೋಲೆಗಳನೊದ್ದು ನೂಂಕಿ ಮುಂಗೈಗಿಳಿಯನವನಿಗಿಟ್ಟು

ಮುಗಿಸಿಕೊಂಡಿದ್ದ ಸುರಸುಂದರಿಯರು ಬರುತ್ತಿದ್ದರು. ೨೬. ಎಣ್ಣೆ ತೊಡೆದು ಗಂಟುಹಾಕಿದ ಮುಡಿಯ ಭಾರಕ್ಕೆ ತೆಳುವಾದ ಕುತ್ತಿಗೆ ಬಳುಕುತ್ತಿರಲು, ಬಹಳ ದೊಡ್ಡದಾದ ಮೊಲೆಗಳ ಭಾರಕ್ಕೆ ತೆಳುವಾದ ನಡು ನಡುಗುತ್ತಿರಲು, ಬಂಗಾರದ ಬಣ್ಣದ ದೊಡ್ಡ ಪೃಷ್ಟದ ಬಿರುಸಿಗೆ ಹೊಂಬಾಳೆಯಂತಹ ತೊಡೆಗಳು ನಡುಗುತ್ತಿರಲು, ಘಳಘಳನೆ ಹೊಳೆಯುವ ಪೂರ್ಣಚಂದ್ರಮುಖದಲ್ಲಿ ಬೆವರುಹನಿ ಹುಟ್ಟುತ್ತಿರಲು, ಆಲದಹಣ್ಣಿಗೆ ಸಮನಾದ ಕೆಂದುಟಿಯು ಬಿಸಿಯುಸಿರಿನ ಶಾಖದಿಂದ ಬತ್ತುತ್ತಿರಲು ಆ ಹೆಂಗಸರ ಸಮೂಹವು ಮನ್ಮಥನ ಬಾಣದ ಹೊಡೆತದಿಂದ ನೋಯುತ್ತ ನಡೆದುಬರುತ್ತಿದ್ದಿತು. ೨೭. ಪಕ್ಕದಲ್ಲಿರುವ ಪ್ರಿಯಕರನನ್ನು ಬಿಟ್ಟು ಹೋಗುವುದು ಸ್ವರ್ಗದ ಸ್ತ್ರೀಯರಿಗೆ ಉಚಿತವಾದುದೆ ಮಗಳೆ? ಎಂಬ ಮಾತಿಗೆ ಕೋಪಗೊಂಡು ನಟಿಕೆ ಮುರಿದು, ಹಿಂದೆ ಬರುತ್ತಿದ್ದ ಪ್ರಿಯನನ್ನು ಬಯ್ದು, ತಲೆಗೂದಲು, ಮೊಲೆಗಳು, ಮತ್ತು ಪೃಷ್ಠದ ಭಾರವನ್ನು ಏಕೆ ಅಧಿಕಗೊಳಿಸಬೇಕೆಂದು ಬ್ರಹ್ಮನನ್ನು ಜರಿಯುತ್ತ, ಸಣ್ಣದಾಗಿ ತಾಕಲಾಡುತ್ತಿದ್ದ ಕೆಳ ತೊಡೆಗಳನ್ನು ನುಗ್ಗುನುರಿ ಮಾಡುತ್ತ ಬರುತ್ತಿದ್ದ ಒಬ್ಬಳು ಮದಗಜಗಮನೆ ಶಿವನನ್ನು ನೋಡುತ್ತ ತನ್ನ ಹೃದಯವನ್ನೇ ಕಳೆದುಕೊಂಡಂತಾದಳು. ೨೮. ಪಕ್ಕದಲ್ಲಿದ್ದ ಪ್ರಿಯನನ್ನು ಮರೆಯುತ್ತ, ಆಡುವ ಪಗಡೆ-ದಾಳ ಚದುರಂಗಗಳನ್ನು ಬಿಸುಟು, ಓದುತ್ತಿದ್ದ ಕಾಮವೆಂದರೆ ಓಲೇಗರಿಗಳನ್ನು ಒದ್ದು ನೂಕಿ, ಮುಂಗೈ ಮೇಲಿದ್ದ ಅರಗಿಳಿಯನ್ನು ನೆಲದ ಮೇಲೆ ಬಿಸುಟು, ಸುತ್ತಲೂ

CC-0. Jangamwadi Math Collection. Digitized by eGangotri

ಸುತ್ತಲಿಹ ಸಖಿಯರಂ ಕಣ್ಪುರ್ವುಗಳೊಳೆ ಜರೆ
ವುತ್ತೆ ಭರವಸದೆ ನಡೆವುತ್ತೆ ಬೆಮರುತ್ತೆ ಕಾ
ಣುತ್ತೆ ಶಿವನಂಗವನನಂಗನಸರಳಂಬಿಗೊರೆಯಾದರಖಿಳಸ್ತ್ರೀಯರು ೨೮

ದಡವಡಿಪ ನಡೆಗಳಿಂ ತಬ್ಬಿಬ್ಬ ನುಡಿಗಳಿಂ
ಕಡುಬಿಸುಪ ಸುಯ್ಗಳಿಂ ಕಂಪಿಸುವ ಮೆಯ್ಗಳಿಂ
ಮಿಡಿವ ಕಂಬನಿಗಳಿಂ ಮಿಡುಕದಿಹ ದನಿಗಳಿಂ ಮೀರುವ ಮನಂಗಳಿಂದೆ
ಮುಡಿಬಿಟ್ಟೆಳಲ್ವರಿಂ ಮುದ್ದುವೊಗಬಳಲ್ವರಿಂ
ವೊಡಲ್ಗಳಂ ಮರೆವರಿಂದೋಪರಂ ತೊರೆವರಿಂ
ಮಡಲಿರಿವ ವಿರಹದಿಂ ಮತಿಗೆಟ್ಟ ಕರಹದಿಂದಬಲೆಯರ್ ಕಂಗೆಸೆದರು ೨೯

ನೆಗೆವ ರೋಮಾಂಚಮುಣ್ಮುವ ಬೆಮರ್ ನಡುವ ಮೈ
ಯೊಗುವ ಕಂಬನಿ ಬಿನ್ನದನಿ ವಿವರ್ಣಮುನಾಂತ
ಮೊಗಮಿರ್ದೆಡೆಯಲಿ ಚಲಿಸದೆ ಕಂಬಮಾದತನು ಸಂಪೂರ್ಣ ಭಾವರತಿಯು
ಸೊಗಸಿನೊಳಗೊಂದಿರ್ಪ ಚೇತನಮಿವೆಂಟು ತಾ
ನೊಗುಮಿಗೆಯ ಸಾತ್ತ್ವಿಕರಸಾವೇಶಮುಮರಿಯರೊ
ಳೊಗೆದುವು ಸುಧೈರ್ಯಮುಂ ತೆಗೆದುವವರಂ ಕೊಲಲ್ ಬಗೆದುವೇಂ ಬಣ್ಣಿಸುವೆನು ೩೦

ಇದ್ದ ಸಖಿಯರನ್ನು ಕಣ್ಣ ಹುಬ್ಬಿನಿಂದಲೇ ಜರಿಯುತ್ತ, ಪರವಶರಾಗಿ ನಡೆಯುತ್ತ ಬೆವರುತ್ತ ಶಿವನ ಸುಂದರ ದೇಹವನ್ನು ನೋಡುತ್ತ ಎಲ್ಲ ಸ್ತ್ರೀಜನರೂ ಮನ್ಮಥನ ಹೂಬಾಣಕ್ಕೆ ಒಳಗಾದರು. ೨೯. ತಡಬಡಿಸುತ್ತಿದ್ದ ನಡಿಗೆಯಿಂದ, ತಬ್ಬಿಬ್ಬಾದ ಮಾತುಗಳಿಂದ, ಅತಿಬಿಸಿಯಾದ ನಿಟ್ಟುಸಿರಿನಿಂದ, ನಡುಗುವ ಮೈಗಳಿಂದ, ಸುರಿಯುತ್ತಿರುವ ಕಣ್ಣೀರಿನಿಂದ, ಹೊರಗೆ ಬರದೆ ಇರುವ ಸ್ವರಗಳಿಂದ, ಹತೋಟಿ ತಪ್ಪುತ್ತಿರುವ ಮನಸ್ಸುಗಳಿಂದ, ಬಿಚ್ಚಿ ಜೋತಾಡುವ ಕೂದಲಿನಿಂದ, ಮುದ್ದಾದ ಮುಖ ಬಳಲಿದವರಿಂದ, ಮೈಮರೆಯುವವರಿಂದ, ಪ್ರಿಯತಮರನ್ನು ತೊರೆದು ಬರುತ್ತಿದ್ದವರಿಂದ, ಹೆಚ್ಚಾದ ವಿರಹದಿಂದ, ಬುದ್ಧಿ ಕೆಟ್ಟ ಕೂಗಾಟದಿಂದ ಸ್ತ್ರೀಯರು ಕಣ್ಣಿಗೆ ಮನೋಹರವಾಗಿ ಕಾಣಿಸಿದರು. ೩೦. ಕಾಣಿಸುತ್ತಿರುವ ರೋಮಾಂಚ, ಹರಿಯುತ್ತಿರುವ ಬೆವರು, ನಡುಗುತ್ತಿರುವ ಮೈ, ಸುರಿಯುತ್ತಿರುವ ಕಂಬನಿ, ಕುಗ್ಗಿದ ಧ್ವನಿ, ಬಿಳಿಚಿಕೊಂಡ ಮುಖ, ಇದ್ದ ಸ್ಥಳದಲ್ಲಿಯೇ ಚಲಿಸಲಾರದೆ ಕಂಬದಂತೆ ಆದ ದೇಹ, ಸಂಪೂರ್ಣವಾಗಿ ಕಲ್ಪನಾಸಂಭೋಗದ ಸುಖದಲ್ಲಿ ಕೂಡಿಕೊಂಡ ಮನಸ್ಸು—ಈ ಎಂಟು ಸಾತ್ವಿಕರ ಸಮಾವೇಶಗಳೂ ಅಧಿಕವಾಗಿ ಆ ದೇವತಾಸ್ತ್ರೀಯರಲ್ಲಿ ಗೋಚರವಾದುವು. ಅವರ ಮನಸ್ಸಿನ ಸ್ಥೈರ್ಯವು ಕುಗ್ಗಿತು, ಅವರನ್ನು ಕೊಲ್ಲಲು

CC-0. Jangamwadi Math Collection. Digitized by eGangotri

ಬಿಡದೆ ನಿಟ್ಟಿಸುವ ಕಂಡೊಡನೆ ಚಿಂತಿಸುವ ನೊಂ
ದಡಿಗಡಿಗೆ ಸುಯ್ವ ಜ್ವರವಿಡಿದು ತಾಪಿಸುವ ಸೆಕೆ
ಗೊಡಲನುರೆ ಕಳಲ್ವ ಭುಕ್ತಿಯನುಳಿವ ವಿಕಳಿಸುವ ನುಡಿಯಡಗಿ ಸುಮ್ಮನಿರ್ಪ
ಕಡುಸೊರಗಿ ಮೂರ್ಛಿಸುವ ಸುಧೆಯುಂಡುದರಿನುಸುರ್
ಮಿಡುಕುತಿಹ ಗಳಗತಪ್ರಾಣೆಯರ್ ಬಾಯ್ಗಳಂ
ಬಿಡುವ ಬಿಡುಗಂಗಳ ಸುಜಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸೆದರು ೩೧

ಸೋತು ಮೇಲುಕ್ಕಿಯೊದಗುವ ಮನಂ ತಳ್ಕಿಸುವ
ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ ಸಲೆ ಚುಂಬಿ
ಪಾತುರದೊಳೊರೆವ ಬಾಯ್ ಸವಿಲಲ್ಲೆನುಡಿಗೆ ಲವಲವಿಪ ನಾಲಗೆ ಕೂಟಕೆ
ಕಾತರಿಸಿ ಮಿಡುಮಿಡುಕಲೊಸರ್ವ ನಾಣೆದೆ ನಿಂದ
ರೀತಿಯಿಂ ಕಳೆಯದೋಸರಿಪ ನಿರಿಯಡಿಗಡಿಗೆ
ಧಾತುಗುಂದುವ ಧೈರ್ಯಮೆಸೆಯಲೆಸೆದರ್ ಶಿವನ ಬೆಂಕೊಂಡು ಸುರಸತಿಯರು ೩೨

ಹರಿಣೆ ಮಧುಕೇಶಿಯುರ್ವಶಿ ತಿಲೋತ್ತಮೆ ರಂಭೆ
ವರಮಂಜುಘೋಷೆ ಮೇನಕೆ ಸುರಸೆ ಮೊದಲಾದ
ಪರಿಗಣನೆಯಿಂ ಮೂರುಲಕ್ಕ ಮೂವತ್ತಾರುಸಾವಿರಂ ಕಲೆಗೆ ಸಂದ

ಹವಣಿಸಿದುವು. ೩೧. ಒಂದೇ ಸಮನಾಗಿ ದೃಷ್ಟಿಸಿ ನೋಡುತ್ತಿದ್ದರು. ಅವನನ್ನು ಕಂಡ ತಕ್ಷಣ ಆಲೋಚನೆಗೆ ಒಳಗಾಗುತ್ತಿದ್ದರು. ನೊಂದು ಪದೇ ಪದೇ ನಿಟ್ಟುಸಿರು ಬಿಡುತ್ತಿದ್ದರು. ಮದನಜ್ವರಕ್ಕೊಳಗಾಗಿ ತಪಿಸುತ್ತಿದ್ದರು. ಸೆಕೆಯಿಂದ ಅವರ ದೇಹವು ಸೊರಗುತ್ತಿದ್ದಿತು. ಊಟವನ್ನು ಬಿಡುತ್ತಿದ್ದರು, ಭ್ರಮೆಗೊಳ್ಳುತ್ತಿದ್ದರು, ಮಾತಿಲ್ಲದೆ ಮೂಕರಾಗಿರುತ್ತಿದ್ದರು, ಬಹಳವಾಗಿ ಸೊರಗಿ ಮೂರ್ಛೆ ಹೋಗುತ್ತಿದ್ದರು, ಅಮೃತವನ್ನು ಕುಡಿದಿದ್ದುದರಿಂದ ಪ್ರಾಣ ಮಿಡುಕುತ್ತಿದ್ದಿತು, ಕಂಠದಲ್ಲಿ ಪ್ರಾಣವನ್ನು ಹಿಡಿದಿದ್ದರು. ಬಾಯ್ಗಳನ್ನು ಬಿಡುತ್ತಿದ್ದರು. ವಿಶಾಲವಾದ ಕಣ್ಣುಳ್ಳ ಇಂಥ ಜಾಣೆಯರು ದಶಾವಸ್ಥೆಗೆ ಒಳಗಾಗಿ ಕಣ್ಣಿಗೆ ಕಂಡರು. ೩೨. ಅವನಿಗೆ ಸೋತು ಮೇರೆಮೀರುತ್ತಿದ್ದ ಮನಸ್ಸು, ಪ್ರೀತಿಯಿಂದ ಅಪ್ಪಿಕೊಳ್ಳಲು ತವಕದಿಂದ ಚಾಚುವ ತೋಳು, ವಿಶೇಷವಾಗಿ ಚುಂಬಿಸಬೇಕೆಂಬ ಆತುರದಿಂದ ಹತ್ತಿರಕ್ಕೆ ಬರುವ ಬಾಯಿ, ಸವಿಮಾತಾಡಲು ಹುರುಪುಗೊಳ್ಳುವ ನಾಲಿಗೆ, ಅವನನ್ನು ಕೂಡಲು ಕಾತುರದಿಂದ ಮಿಡುಕಲು ಸ್ರವಿಸುತ್ತಿದ್ದ ಮರ್ಮಾಂಗ, ನಿಂತ ರೀತಿಯನ್ನು ಬದಲಾಯಿಸದೆಯೇ ಸರಿಸುತ್ತಿದ್ದ ನೆರಿಗೆ, ಗಳಿಗೆ ಗಳಿಗೆಗೂ ಶಕ್ತಿಗುಂದುವ ಧೈರ್ಯ ಇವುಗಳಿಂದ ಕೂಡಿದ ದೇವತಾಸ್ತ್ರೀಯರು ಶಿವನನ್ನು ಹಿಂಬಾಲಿಸಿದರು. ೩೩. ಶ್ರೇಷ್ಠವಾದ ವೇದಾಂತವೆಂಬ ಸ್ತ್ರೀಯರೂ ಕೂಡ ಹುಡುಕಿ ಸೇರಲಾರದೆ ಇರುವ ಪರಬ್ರಹ್ಮಮೂರ್ತಿಯನ್ನು ಹರಿಣೆ, ಮಧುಕೇಶಿ, ಊರ್ವಶಿ, ತಿಲೋತ್ತಮೆ, ರಂಭೆ,

CC-0. Jangamwadi Math Collection. Digitized by eGangotri

ಸುರಸತಿಯರಭವನು ಬೆಂಬತ್ತಿದರ್ ಬಿಡದೆ
ಪರಮವೇದಾಂತಕಾಂತೆಯರಕ್ಕರಿಂದರಸಿ
ಪರಿವೈದಲಾರದ ಪರಬ್ರಹ್ಮಮೂರ್ತಿಯು ಪೇಳಲೇನಚ್ಚರಿಯನು ೩೩

ಈ ತೆರದೊಳಾ ಸುರವರಾಂಗನೆಯರೆಲ್ಲರುಂ
ಕಾತರಿಸಿ ಬೆಂಬಿಡಿವುದಂ ಕಂಡು ನಸುನಗುತೆ
ಸೋತವನ ತೆರದೊಳೋರಡಿಗೊರ್ಮೆ ನಿಂದು ನೋಡುತೆ ತಿಸುಳವಂ ತಿರುಪುತೆ
ಜಾತಿವಿಟಚಿಹ್ನಮಂಗದೊಳೆಸೆಯೆ ನಟನೆಗಳ
ರೀತಿ ಪೊಸತೆಸೆಯೆ ನಡೆನಡೆಗೆ ಸೊಬಗೆಸೆಯುಲಿವ
ನೇತೆರದ ಮಾಯಾವಿಯೋ ಚೋದ್ಯಮೆನಲಭವನಡಿಯಿಟ್ಟು ಬರುತಿರ್ದನು ೩೪

ನಗೆಯೊಳ್ ಕೆಲಂಬರಂ ಸೋಲ್ತಂತೆ ನಿಲ್ವ ಕಾ
ಲ್ದೆಗೆಯೊಳ್ ಕೆಲಂಬರಂ ವಿಟಮಾರ್ಗಮಂ ತೋರ್ಪ
ಬಗೆಯೊಳ್ ಕೆಲಂಬರಂ ನೋಡಿ ನೋಡದೆ ಬಿಡದೆ ನೋಡಿ ತಿರುತಿರುಗಿ ನೋಳ್ಪ
ಬಿಗುಹಿನೊಳ್ ಕೆಲಕೆಲಬರಂ ಜಾಣ್ಮೆಗಾಡಿಗಳ
ತೆಗಹಿನೊಳ್ ಕೆಲಕೆಲಬರರೆಸೋಲವರಿದು ಮೈ
ದೆಗಹಿನೊಳ್ ಕೆಲಕೆಲಬರಂ ಮರುಳ್ಮಾಡುತೀಶ್ವರನಡಿಯಿಡುತಿರ್ದನು ೩೫

ಮಂಜುಘೋಷೆ, ಮೇನಕೆ,ಸುರಸೆ ಮೊದಲಾದ, ಲೆಕ್ಕಹಾಕಲು ಮೂರುಲಕ್ಷ ಮೂವತ್ತಾರು ಸಾವಿರ ಜನ ಕಲಾಪ್ರವೀಣರಾದ ಈ ದೇವತಾಸ್ತ್ರೀಯರು ಬಿಡದೆ ಹಿಂಬಾಲಿಸಿದರು. ಈ ಆಶ್ಚರ್ಯವನ್ನು ಏನೆಂದು ಹೇಳಲಿ ? ೩೪. ಈ ರೀತಿಯಲ್ಲಿ ಆ ದೇವತಾಸ್ತ್ರೀಯರೆಲ್ಲ ಕಾತುರದಿಂದ ತನ್ನನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಶಿವನು ನಸುನಗುತ್ತ ಸೋತವನ ರೀತಿಯಲ್ಲಿ ಹೆಜ್ಜೆ ಹೆಜ್ಜೆಗೂ ಒಂದುಬಾರಿ ನಿಂತು ನೋಡುತ್ತಿದ್ದನು, ತ್ರಿಶೂಲ ವನ್ನು ತಿರುಗಿಸುತ್ತಿದ್ದನು. ಶ್ರೇಷ್ಠ ವಿಟನ ಗುರುತುಗಳು ಅವನ ದೇಹದ ಮೇಲೆ ಕಾಣುತ್ತಿದ್ದಿತು. ಅವನ ಹಾವ-ಭಾವಗಳು ಹೊಸರೀತಿಯಲ್ಲಿದ್ದುವು. ಹೆಜ್ಜೆ ಹೆಜ್ಜೆಗೂ ಸೊಬಗು ಸೂಸುತ್ತಿತ್ತು. ಇವನು ಯಾವ ರೀತಿಯ ಮಾಯಾವಿಯೋ ! ಸೋಜಿಗವು! ಎನ್ನುವಂತೆ ಈಶ್ವರನು ನಡೆದುಬರುತ್ತಿದ್ದನು. ೩೫. ತನ್ನ ನಗುವಿನಲ್ಲಿಯೇ ಕೆಲವರನ್ನು, ಸೋತಂತೆ ನಿಲ್ಲುವ ರೀತಿಯಲ್ಲಿಯೇ ಕೆಲವರನ್ನು, ಹೆಜ್ಜೆ ಇಡುವ ರೀತಿಯಲ್ಲಿ ಕೆಲವರನ್ನು, ವಿಟನ ಹಾವ-ಭಾವಗಳನ್ನು ತೋರಿಸುವ ರೀತಿಯಲ್ಲಿ ಕೆಲವರನ್ನು, ನೋಡಿಯೂ ನೋಡದಂತೆ, ಬಿಡದೆ ನೋಡಿ-ತಿರುತಿರುಗಿ ನೋಡುವ ಬಿಗುಮಾನ ದಲ್ಲಿ ಮತ್ತೆ ಕೆಲವರನ್ನು, ಜಾಣತನ ಮತ್ತು ಸೌಂದರ್ಯವನ್ನು ಹೊಂದಿದ್ದ ರೀತಿಯಲ್ಲಿ ಕೆಲವರನ್ನು, ಅರ್ಧ ಸೋಲನ್ನು ಅರ್ಥಮಾಡಿಕೊಂಡು ತನ್ನ ಮೈ ಹೊಂದಾಣಿಕೆಯಲ್ಲಿ ಇನ್ನೂ ಕೆಲವರನ್ನು ಮರುಳು ಮಾಡುತ್ತ ಈಶ್ವರನು ಹೆಜ್ಜೆ

19

CC-0. Jangamwadi Math Collection. Digitized by eGangotri

ಉರಿವ ಬೇಸಗೆಯೊಳೊಣಗಿದ ಲತೆಗಳಂ ಸುಡುವ
ಮರುದಾಪ್ತನೊಳ್ ತುಪ್ಪವೆರೆದೆಲರನೂದಿದೊಡೆ
ತರಹರಿಪುದೇ ಮುನ್ನಮೆಳವಳ್ಳಿ ಮೆಯ್ಯುವರ್ತನತು ವಿರಹದೊಳುರಿವರಂ
ಸರಸಸೌಂದರ್ಯರೂಪಂ ನೋಡಿ ನಕ್ಕು ಮೊಗ
ದಿರುಹಿ ನಿಲ್ಲದೆ ಪೋಗುತಿರೆ ತರಳೆಯರ್ ಕಂಡು
ತರಹರಿಪರೇ ಮೋಹದಿಂ ಧೈರ್ಯಮಳಿದು ಬಹುದೈನ್ಯದಿಂದಿಂತೆಂದರು ೩೬

ಪಿಂತಿರುಗಿ ನೋಡೆಲೊ ವಿಶಾಲಾಕ್ಷ ಮೋಹರಸ
ಮಂ ತುಳ್ಕಿ ನುಡಿಸೊ ಸವಿನುಡಿಜಾಣ ತವಕದಿಂ
ದಂ ತಳ್ಕಿಗೆಯ್ಯೊ ಬರಿಕೆಯ್ಯು ತೋಳ್ಗಳ ನೀಡ ಕುರುಳ್ವಿಡಿವುತಧರಸುಧೆಯು
ನೀಂ ತಳುವದೀಂಟೊ ಚೆಂದುಟಿಯಿನಿಯು ನೆಲೆಮೊಲೆಗ
ಳಂ ತಡವುತೊತ್ತೊ ತಳಿರ್ಗೈಯ ತಂಪಿಗ ವಿರಹ
ಮಂ ತವಿಸಿ ನೆರೆಯೊ ಹದಗಾರ ನೀನೆಮ್ಮನೆಂದವುರೆಯರ್ ಭ್ರಮೆಗೊಂಡರು ೩೭

ಕೂಡಲಾಗದ ಕೂಡಲೊಲ್ಲದೊಡೆ ನಿಂದು ಮಾ
ತಾಡಲಾಗದೆ ಮಾತನಾಡದೊಡೆ ಕೈಸನ್ನೆ
ಮಾಡಲಾಗದೆ ಸನ್ನೆಮಾಡದೊಡೆ ಕಟಾಕಟಾ ನಿನ್ನ ಕಣ್ಣೋರೆಯಿಂದೆ

ಹಾಕುತ್ತಿದ್ದನು. ೩೬. ಉರಿಯುವ ಬೇಸಗೆಯಲ್ಲಿ ಒಣಗಿದ ಬಳ್ಳಿಗಳನ್ನು ಸುಡುವ ಬೆಂಕಿಗೆ ತುಪ್ಪವನ್ನು ಸುರಿದು, ಗಾಳಿಯನ್ನು ಊದಿದರೆ ಅದು ಸಹಿಸುತ್ತದೆಯೇ ? ಮುಂಚೆಯೇ ಎಳೆಬಳ್ಳಿಯಂತಹ ದೇಹವುಳ್ಳವರು. ಜೊತೆಗೆ ತಮ್ಮ ತಮ್ಮ ವಿರಹ ತಾಪದಿಂದ ಬೇಯುತ್ತಿರುವವರು. ಅಂತಹವರ ಸರಸ ಸೌಂದರ್ಯದ ರೂಪನ್ನು ನೋಡಿ ನಕ್ಕು ಮುಖ ತಿರುಗಿಸಿಕೊಂಡು ಶಿವನು ನಿಲ್ಲದೆ ಹೋಗುತ್ತಿರಲು ಆ ಲತಾಂಗಿಯರು ಅದನ್ನು ನೋಡಿ ಸಹಿಸಲು ಸಾಧ್ಯವೆ ? ಮೋಹಾಂಧರಾಗಿ ಧೈರ್ಯಗುಂದಿ ಬಹುವಾದ ದೈನ್ಯದಿಂದ ಅವರು ಹೀಗೆ ಹೇಳಿದರು. ೩೭. ವಿಶಾಲವಾದ ಕಣ್ಣುಳ್ಳವನೆ, ಹಿಂತಿರುಗಿ ನೋಡು. ಮೋಹರಸವನ್ನು ತುಳುಕಿಸುತ್ತ ಮಾತನಾಡಿಸಯ್ಯ, ಸವಿನುಡಿ ಜಾಣ ಬರಿದಾದ ತೋಳುಗಳನ್ನು ಮನೋಹರನೆ ನೀನು ತವಕದಿಂದ ಅಪ್ಪಿಕೊ. ನನ್ನ ಮುಂಗುರುಳುಗಳನ್ನು ಹಿಡಿದು ಸವರುತ್ತ ತಡಮಾಡದೆ ನನ್ನ ತುಟಿಗಳಲ್ಲಿರುವ ಅಮೃತವನ್ನು ಪಾನ ಮಾಡೊ, ಚೆಂದುಟಿಯ ಇನಿಯು, ಎಳೆಚಿಗುರಿನಂತಹ ತಂಪಾದ ಕೈಗಳನ್ನು ಉಳ್ಳವನೆ ನನ್ನ ದಪ್ಪನಾದ ಮೊಲೆಗಳನ್ನು ತಡವುತ್ತ ಒತ್ತು. ನಮ್ಮ ವಿರಹವನ್ನು ತೃಪ್ತಿಪಡಿಸಿ ನಮ್ಮನ್ನು ಕೂಡಯ್ಯ, ಪ್ರೇಮದ ಹದರನ್ನು ಅರಿತವನೆ ಎಂದು ಹೇಳುತ್ತಾ ಆ ಅಮರ ಸ್ತ್ರೀಯರು ದಿಕ್ಕುತೋಚದಂತಾದರು. ೩೮. ನೀನು ನಮ್ಮೊಂದಿಗೆ ಕುಳಿತುಕೊಳ್ಳಬಾರದೆ? ಕುಳಿತುಕೊಳ್ಳಲು ಇಷ್ಟವಿಲ್ಲದಿದ್ದರೆ ನಿಂತು ಮಾತಾಡಬಾರದೆ ? ಹಾಗೆ ನಿಂತು ಮಾತನಾಡಲಿಷ್ಟವಿಲ್ಲದಿದ್ದರೆ ಕೈಸನ್ನೆಯನ್ನಾದರೂ ಮಾಡಲಾಗದೆ ? ಕೈಸನ್ನೆ ಮಾಡದಿದ್ದರೆ,

CC-0. Jangamwadi Math Collection. Digitized by eGangotri

ನೋಡಲಾಗದೆ ನೋಡಲೊಲ್ಲದೊಡೆ ಮೆಲ್ಲನೆಡೆ
ಯಾಡಲಾಗದೆಯೇತರಾಶೆಯುಂ ಕೂಡನಾವ
ನಾಡ ನಿಷ್ಕರುಣಿಯೋ ಶಿವ ಶಿವಾಯೆಂದೊರ್ವ ಸುದತಿ ಸಖಿಯೊಳ್ ನುಡಿದಳು ೩೮

ಉರಿಗಣ್ಣಿನಿಂದಳಿದ ಸ್ಮರನೆನ್ನ ಹೃದಯದೊಳ್
ಮರಳಿ ತಾಂ ಜನಿಸಿ ಮತ್ತೆನ್ನನೀಗಂ ಕೊಲ್ಲ
ದಿರನದಕ್ಕೀಶ ನೀನೀ ಹೃದಯದೊಳಗಿರಲ್ ಮದನಭಯವಿಲ್ಲವೆಂದು
ಹರನನಾ ಕಣ್ಬಾಗಿಲಿಂ ಪುಗಿಸಿಯನಿಮಿಷತೆ
ಯಿರವನುಳಿದೆರ್ದೆಗದಂಗೆತ್ತಳೋಂಯೆನಲೊರ್ವ
ತರುಣಿ ಚಿತ್ತದೊಳೀಶನಂ ನೆರೆದ ರತಿಮೂರ್ಛೆಯಿರವದೇಂ ಚೆಲ್ವಾದುದೋ ೩೯

ಪೂಗಣೆಯ ಪೋರಟೆಗೆ ತರಹರಿಸದಬಲೆ ನೀ
ನೀಗ ನೋಟದ ಹಂಬಲಂಬಿಟ್ಟು ಹೃನ್ಮಧ್ಯ
ಕೀ ಗಾಡಿಕಾರನಂ ತಂದು ನೆರೆದಪೆನೆಂದು ಕಣ್ಮುಚ್ಚಿ ಧ್ಯಾನಿಸಿದೊಡೆ
ಈ ಗಲಭೆಯೊಳಗಪ್ಪುದೇ ಚಿತ್ತಶುದ್ಧಿ ಚೆ
ನ್ನಾಗಿ ಕಣ್ಗಳ ಸೌಖ್ಯಮಂ ಪಡೆಯದಕಟ ಮರು
ಳಾಗದಿರ್ ಸೊಬಗನಂ ಕಣ್ದೆರೆದು ನೋಡೆಂದು ಸವಿಗಾರ್ತಿ ಸಖಿಗುಸಿರ್ದಳು ೪೦

ಅಯ್ಯೋ, ಓರೆಗಣ್ಣಿಂದ ನೋಡಬಾರದೆ? ನಿನ್ನ ಓರೆಗಣ್ಣಿನಿಂದ ಹೋಗಲಿ,ಮೆಲ್ಲನೆ ನಮ್ಮ ಸಮೀಪದಲ್ಲಿಯೇ ಓಡಾಡಬಾರದೆ ? ನೋಡಲಿಷ್ಟವಿಲ್ಲದಿದ್ದರೆ ಇವನು ನಮ್ಮ ಯಾವ ಆಸೆಯನ್ನೂ ಪೂರೈಸನು. ಇವನು ಯಾವ ದೇಶದ ನಿಷ್ಕರುಣಿಯೋ ? ಶಿವಶಿವಾ, ಒಬ್ಬ ಸುಂದರಿಯು ತನ್ನ ಸ್ನೇಹಿತೆಯೊಡನೆ ಹೇಳಿದಳು. ೩೯. ಉರಿಗಣ್ಣಿನಿಂದ ಸತ್ತು ಹೋದ ಮನ್ಮಥನು ಮತ್ತೆ ನನ್ನ ಹೃದಯದಲ್ಲಿ ಹುಟ್ಟಿ ನನ್ನನ್ನು ಈಗ ಕೊಲ್ಲದೆ ಇರುವುದಿಲ್ಲ. ಆದ್ದರಿಂದ ಹೇ ಈಶ್ವರ, ನೀನು ಈ ನನ್ನ ಹೃದಯದೊಳಗೆ ಇರಲು ಕಾಮನ ಭಯ ನನಗಿಲ್ಲ ಎಂದು ಹರನನ್ನು ಕಣ್ಣು ಎಂಬ ಬಾಗಿಲಿನಿಂದ ಪ್ರವೇಶ ಮಾಡಿಸಿ ಎದೆಯಲ್ಲಿಟ್ಟುಕೊಂಡು ದೇವತೆಗಳ ಒಂದು ಲಕ್ಷಣವಾದ ಅನಿಮಿಷತೆ ಎಂದರೆ ರೆಪ್ಪೆ ಮುಚ್ಚದಿರುವಿಕೆಯನ್ನುಳಿದು ಕದವನ್ನು ಮುಚ್ಚಿದಳೋ ಎಂಬಂತೆ ಕಣ್ಣುಮುಚ್ಚಿ ಒಬ್ಬ ತರುಣಿ ಹೃದಯದಲ್ಲೇ ಈಶ್ವರನನ್ನು ಕೂಡಿ ರತಿಮೂರ್ಛೆಯಿಂದ ಇದ್ದಳು, ಅವಳ ಆ ಅವಸ್ಥೆಯು ಎಷ್ಟು ಸೊಗಸಾಯಿತೋ ! ೪೦. ಈ ಹೂಬಾಣದ ಹೊಡೆತಕ್ಕೆ ಹೆದರದ ಅಬಲೆಯೆ, ನೀನು ಈಗ ನೋಡುವ ಆಸೆಯನ್ನು ಬಿಟ್ಟು ಆ ಸೊಗಸುಗಾರರನ್ನು ಹೃದಯ ಮಧ್ಯದಲ್ಲಿ ತಂದು ಕೂಡುತ್ತೇನೆ ಎಂದು ಕಣ್ಮುಚ್ಚಿ ಧ್ಯಾನಿಸಿದರೆ ಈ ಗಲಭೆ ಮಧ್ಯದಲ್ಲಿ ಚಿತ್ತಶುದ್ಧಿ ಉಂಟಾಗುತ್ತದೆಯೇ ? ಚೆನ್ನಾಗಿ ಕಣ್ಣಿಂದ ನೋಡುವ ಸುಖವನ್ನು ಪಡೆಯದೆ ಅಯ್ಯೋ ನೀನು ಮರುಳಾಗಬೇಡ. ಆ ಸೊಗಸುಗಾರನನ್ನು ಕಣ್ಣು

CC-0. Jangamwadi Math Collection. Digitized by eGangotri

ಮೇಲಿಕ್ಕಿದಪೆನಿಂತು ಮುದ್ದಿಸುವೆನಿಂತು ಮು
ತ್ತಾಲಿಂಗಿಸುವೆನಿಂತು ಚುಂಬಿಸುವೆನಿಂತು ಸ
ಮ್ಮೇಳಿಸುವೆನಿಂತು ಪೊಯ್ದಪೆನಿಂತು ಬಯ್ದಪೆಂ ಮುನಿಸಿದೊಡೆ ತಿಳಿಪಿ ರತಿಯು
ಕಾಲವರಿದಿಂತು ನೆರೆದಪೆನವನೊಳೆಂದೊರ್ವ
ಬಾಲೆ ಭಾವಿಸುತಮಿರೆ ಬರೆ ಭಾವರತಿಮೂರ್ಛೆ
ಯೇಳಿಗೆಯೊಳವಳೊಪ್ಪಿದಳ್ ಚಂದ್ರನುದಯದಿಂದೊಘಲದ ಪ್ರತಿಮೆಯುಂತೆ ೪೧

ಬಿತ್ತರಿಪೊಡರಿದೆನಲ್ ಕೆಲಕೆಲರ್ ತಂತಮ್ಮ
ಚಿತ್ತದೊಳಗೀಶನಂ ನೆರೆದಪೆವೆನುತೆ ಮೂರ್ಛೆ
ವೆತ್ತು ಮನಸಿನೊಳ್ಕೂಡಿದರ್ ಕೆಲಕೆಲರ್ ನೋಡಿ ಸುಖಮುಂ ಪಡೆದರು
ಮತ್ತೆ ಕೆಲಕೆಲರಿಂತುಮಿಂತು ದಣಿಯದೆ ಸಾವ
ಹೊತ್ತನರಿಯದೆ ಶಿವನ ಚಿತ್ತವರಿಯದೆ ಹಿಂದೆ
ಸುತ್ತಿ ನೆರೆಯದೆ ಬಾಯೆ ಬತ್ತಿ ಬರಿಯೆದೆಯಾಗಿ ಬಳಲಿದರದೇನೆಂಬೆನು ೪೨

ಕಡುಬಿಸಿಲ ಮರಿವಕ್ಕಿಯಂತೆ ಗಂಟಲ್ ಮಿಡುಕಿ
ಯುಡವಿಗಿಚ್ಚಟ್ಟಿವೆಳಹುಲ್ಲೆಯಂತೆರ್ದೆ ದಡಂ
ದಡಿಸಿ ಪವ್ವನೆಪಾರಿ ದೂವೆಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು

ತೆರೆದು ನೋಡು ಎಂದು ಸವಿಗಾರ್ತಿ ತನ್ನ ಸಖಿಗೆ ಹೇಳಿದಳು. ೪೧. ಈ ರೀತಿ ಮೇಲೆ ಬೀಳುತ್ತೇನೆ, ಈ ರೀತಿ ಮುದ್ದಿಸುತ್ತೇನೆ, ಈ ರೀತಿ ಅಪ್ಪಿಕೊಳ್ಳುತ್ತೇನೆ, ಈ ರೀತಿ ಚುಂಬಿಸುತ್ತೇನೆ. ಈ ರೀತಿ ಜೊತೆಗೂಡುತ್ತೇನೆ, ಈ ರೀತಿ ಹೊಡೆಯುತ್ತೇನೆ, ಈ ರೀತಿ ಬೈಯುತ್ತೇನೆ, ಮುನಿಸಿಕೊಂಡರೆ ತಿಳಿಯಹೇಳಿ ಅವನ ಜೊತೆಯಲ್ಲಿ ಸಮಯವರಿತು ನೆರೆಯುತ್ತೇನೆ ಎಂದು ಒಬ್ಬ ಬಾಲೆ ಆಲೋಚಿಸುತ್ತ ಇರಲು, ಅವಳಿಗೆ ಮನಸ್ಸಿನಲ್ಲಿಯೇ ರತಿಮೂರ್ಛೆ ಉಂಟಾದಾಗ ಚಂದ್ರನು ಹುಟ್ಟಿದಾಗ ಹೇಗೆ ಚಂದ್ರಕಾಂತಶಿಲೆಯ ಪ್ರತಿಮೆ ಕಾಣಿಸುತ್ತದೆಯೋ ಆ ರೀತಿ ಮನೋಹರವಾಗಿ ಕಾಣುತ್ತಿದ್ದಳು. ೪೨. ಇದನ್ನು ಹೇಳಲು ಸಾಧ್ಯವಿಲ್ಲ ಎನ್ನುವಂತೆ ಕೆಲಕೆಲವರು ತಮ್ಮ ತಮ್ಮ ಮನಸ್ಸಿನಲ್ಲಿ ಈಶ್ವರನನ್ನು ಕೂಡುತ್ತೇವೆ ಎನ್ನುತ್ತ ಮೋಹಮೂರ್ಛೆ ಹೊಂದಿ ಮನಸ್ಸಿನಲ್ಲಿಯೇ ಅವನನ್ನು ಕೂಡಿದರು. ಮತ್ತೆ ಕೆಲವರು ನೋಡಿಯೇ ಸುಖವನ್ನು ಪಡೆದರು. ಮತ್ತೆ ಕೆಲಕೆಲವರು ಸ್ವಲ್ಪವೂ ಆಯಾಸಗೊಳ್ಳದೆ, ಕಾಲವು ಕಳೆದುಹೋಗುತ್ತಿದ್ದುದನ್ನೂ ತಿಳಿಯದೆ, ಶಿವನ ಮನಸ್ಸನ್ನು ಅರ್ಥಮಾಡಿಕೊಳ್ಳದೆ, ಅವನ ಹಿಂದೆ ಹಿಂದೆ ಸುತ್ತಿ ಬಂದು ಕೂಡದೆ, ಬಾಯಿ ಬತ್ತಿ–ಎದೆ ಬರಿದಾಗಿ ಬಳಲಿದ್ದರು. ೪೩. ಪ್ರಖರವಾದ ಬಿಸಿಲಿನಲ್ಲಿ ಬಿದ್ದು ಬಾಯಿ ಬಿಡುವ ಮರಿಹಕ್ಕಿಯಂತೆ, ಕಾಡುಗಿಚ್ಚಿನಿಂದ ಧೈರ್ಯಗುಂದಿ–ಡವಡವನೆ ಹೊಡೆದು ಕೊಳ್ಳುವ ಎದೆಯಿಂದ ಸರ್ರನೆ ಹಾರಿಹೋಗುವ ಜಿಂಕೆಯ ಮರಿಯಂತೆ, ಹೊಗೆಯಲ್ಲಿ

CC-0. Jangamwadi Math Collection. Digitized by eGangotri

ಮಡುವಿನಿಂ ಪೊರವಟ್ಟ ಮರಿಮೀನಿನಂತೆ ಕೆಲ
ಸಿಡಿಸಿಡಿದು ಪೊರಳಿ ಬಿರಹದ ಬೆಂಕೆಯಿಂ ಬೆಂದು
ಕಡುಹರವಸಂಬೋದರಮರಿಯರ್ ನಡೆವಲ್ಲಿ ನಿಂತಲ್ಲಿ ತತ್‌ಕ್ಷಣದೊಳು ೪೩

ಪರಿದು ಬಿಸುಟೆಳೆವಳ್ಳಿಯಂತೆಸೆವ ಮೆಯ್ಗಳಿಂ
ಮುರಿದಿಟ್ಟ ತಾವರೆಗಳಂತೆಸೆವ ಕೆಯ್ಗಳಿಂ
ತರಿದ ನೈದಿಲಪೂಗಳಂತೆಸೆವ ಕಣ್ಗಳಿಂ ಮಿಡುಕುತಿಹ ಗೋಣ್ಗಳಿಂದೆ
ನೆರೆ ಪಗಲ ಚಂದ್ರನಂತೊಪ್ಪುವ ಮೊಗಂಗಳಿಂ
ತಿರಿದ ಚೆಂದಳಿರ್ಗಳಂತೊಪ್ಪುವಧರಂಗಳಿಂ
ಮರೆದಿಪ್ಪ ಮನದ ಚೇತನದ ಸುರವನಿತೆಯರ್ ಕಂಗೆಸೆವರೇನೆಂಬೆನು ೪೪

ಈ ಸಗ್ಗದಬಲೆಯರ ಸಂಭೋಗಕೆಳಸಿ ನಾ
ನಾ ಸಮುದ್ರಾಂತ ಚಕ್ರೇಶ್ವರರ್ ಬಹುಜನ್ಮ
ದಾ ಸುಕೃತವೊದವಲೆಸಗಿದ ಯಜ್ಞಮುಖದೊಳೈತಂದಿವರ ಪಡಿಗವಿಡಿವ
ದಾಸಿಯರೊಳೊಂದಿವಸಮಿಪ್ಪುದಘಟಿತಮಪ್ಪು
ದೇ ಸೊಬಗನೋ ರೂಪಮಾತ್ರದಿಂ ರಂಭಾದಿ
ಭಾಸುರಸ್ತ್ರೀಯರಂ ನಾಣ್ಗೆಡಿಪನಿವನೆಂದು ಪುರಜನಂ ಬೆರಗಾದುದು ೪೫

ಹೊಕ್ಕು ತೀವ್ರವಾಗಿ ಬೆಂದ ಸರ್ಪದಂತೆ, ಸರೋವರದಿಂದ ಹೊರಬಿದ್ದು ಅಕ್ಕಪಕ್ಕಕ್ಕೆ ಸಿಡಿದು ಹೊರಳಾಡುವ ಮರಿಮೀನಿನಂತೆ, ವಿರಹದ ಬೆಂಕಿಯಿಂದ ಬೆಂದು ನಿಂತಂತೆಯೋ, ನಡೆವಂತೆಯೋ ಆ ದೇವಸ್ತ್ರೀಯರು ಪರವಶಗೊಂಡರು. ೪೪. ಹರಿದು ಬಿಸಾಡಿದ ಎಳೆಯ ಬಳ್ಳಿಯಂತೆ ಕಾಣುವ ದೇಹಗಳು, ಮುರಿದುಹಾಕಿದ ತಾವರೆದಂಟಿನಂತೆ ಕಾಣುವ ಕೈಗಳು, ತರಿದುಹಾಕಿದ ನೈದಿಲೆಹೂಗಳಂತೆ ಕಾಣುವ ಕಣ್ಣುಗಳು, ಮಿಡುಕಾಡುವ ಕುತ್ತಿಗೆಗಳು, ಹಗಲಿನಲ್ಲಿನ ಚಂದ್ರನಂತೆ ಮಸುಕಾಗಿ ಕಾಣುವ ಮುಖಗಳು, ಚಿವುಟಿಹಾಕಿದ ಎಳೆಯ ಚಿಗುರಿನಂತಹ ತುಟಿಗಳಿಂದ ಕೂಡಿ ಮರವೆಹೊಂದಿದ ಮನಸ್ಸಿನ ಚೇತನದ ದೇವತಾಸ್ತ್ರೀಯರು ಅಲ್ಲಿ ಕಣ್ಣಿಗೆ ಕಾಣಿಸಿದರು. ೪೫. ನಾನಾ ಸಮುದ್ರಗಳ ವರೆಗೆ ಹಬ್ಬಿರುವ ರಾಜ್ಯಗಳ ಚಕ್ರವರ್ತಿಗಳು ಅನೇಕ ಜನ್ಮಗಳಲ್ಲಿ ಮಾಡಿದ ಯಜ್ಞ–ಯಾಗಾದಿಗಳ ಪುಣ್ಯಫಲದಿಂದ ಈ ಸ್ವರ್ಗದ ಸ್ತ್ರೀಯರೊಡನೆ ಸಂಭೋಗಕ್ಕೆ ಆಸೆಪಟ್ಟು ದೇವಲೋಕಕ್ಕೆ ಬಂದರು. ಆದರೆ ಈ ಸುರಲೋಕದ ಸುಂದರಿಯರ ಪೀಕದಾನಿ ಹಿಡಿದು ಕೊಳ್ಳುವ ದಾಸಿಯರಲ್ಲಿ ಒಂದು ದಿವಸ ಇರುವುದು ಕೂಡ ಅಸಾಧ್ಯವಾದದ್ದು. ಆದರೆ ಈ ಸೊಗಸುಗಾರನಾದರೋ ತನ್ನ ರೂಪಮಾತ್ರದಿಂದ ರಂಭೆಯೇ ಮೊದಲಾದ ಚೆಲುವನ್ನು ಹೊಂದಿದ ದೇವತಾಸ್ತ್ರೀಯರನ್ನು ನಾಚಿಸುತ್ತಾನೆ ಎಂದು ಪುರಜನರು ಬೆರಗಾದರು.

CC-0. Jangamwadi Math Collection. Digitized by eGangotri

ಕಂಡನೀಪರಿ ಮರುಗುತಿರ್ಪ ಕಮಲಾಕ್ಷಿಯರ
ತಂಡವುನಕಟ ಸಕಲ ಪ್ರಾಣಿಗಳ್ಗಾ ಕಾಮು
ನಂಡಲೆ ವಿಶೇಷಮಲ್ಲಾಯೆಂದು ಕರುಣರಸಪೂರ್ಣ ದೃಷ್ಟಿಯೊಳೀಕ್ಷಿಸೆ
ಖಂಡಿಸಿತು ವಿರಹಮೆರ್ದೆಗಾಯ್ತು ಸವಿ ರತಿಸುಖಮು
ಸುಂಡಬಲೆಯರ್ ತಮ್ಮ ಮನೆಗಳ್ಗೆ ಪೋಗಲಾ
ಖಂಡಲನ ಗೃಹಕೆ ನಡೆತರುತಿರ್ದನಭವನತಿಲೀಲಾವಿನೋದದಿಂದ ೪೬

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೭

## ಹತ್ತೊಂಬತ್ತನೆಯ ಸಂಧಿ ಸಂಪೂರ್ಣ

೪೬. ಈ ರೀತಿ ಸಂಕಟಪಡುತ್ತಿದ್ದ ಕಮಲನೇತ್ರೆಯರ ಗುಂಪನ್ನು ಕಂಡು ಅಯ್ಯೋ ! ಎಲ್ಲ ಪ್ರಾಣಿಗಳಿಗೂ ಈ ಮನ್ಮಥನ ಕೋಟಲೆ ವಿಶೇಷವಾಗಿದೆಯಲ್ಲಾ ಎಂದು ಕರುಣ ರಸದಿಂದ ಕೂಡಿದ ದೃಷ್ಟಿಯಿಂದ ಈಶ್ವರನು ನೋಡಿದನು. ಆಗ ಅವರ ವಿರಹವು ನಾಶ ವಾಯಿತು, ಎಲ್ಲರ ಹೃದಯಕ್ಕೂ ಸಂತೋಷ ಉಂಟಾಯಿತು, ಸಂಭೋಗಸುಖ ವನ್ನು ಅನುಭವಿಸಿದ ಆ ಅಬಲೆಯರು ತಮ್ಮ ಮನೆಗಳಿಗೆ ಹಿಂದಿರುಗಿದರು. ಅತಿಯಾದ ಲೀಲಾವಿನೋದದಿಂದ (ಅಭವ) ಶಿವನು ದೇವೇಂದ್ರನ ಅರಮನೆಗೆ ಬರುತ್ತಿದ್ದನು.
೪೭. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದ ವರಿಗೆ, ಪಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವ ತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಹತ್ತೊಂಬತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತನೆಯ ಸಂಧಿ

ಸೂಚನೆ : ಇಂದ್ರ ಮೊದಲಾದ ದಿಕ್ಪಾಲಕರ ಮನೆಗೊಲ್ದು
ಚಂದ್ರಧರನೈದಿ ಭಿಕ್ಷವನಾಂತು ಬಳಿಕಾ ಮು
ನೀಂದ್ರರ್ಗೆ ಶಿವನೊಲ್ದು ದಕ್ಷಿಣಾಮೂರ್ತಿಯಾಕಾರದಿಂ ಬೋಧಿಸಿದನು

ಕರಧೃತಕಪಾಲ ವಿನಮಿತಲೋಕಪಾಲ ಭೀ
ಕರದೈತ್ಯಮಥನ ವಿಶ್ರುತವಿಮಲಕಥನ ಹಿಮ
ಕರಕಲಾಜೂಟಭೂಷಿತ ಕಾಳಕೂಟಾಂಧಕಾಸುರನಿಶಾಟವಿಜಯ
ಸರಸಗುಣಧಾಮ ಸಂತತನತಪ್ರೇಮ ವಾ
ಸರವಾಹವಹನ ಪೂಸರನಂಗದಹನಕರ
ಶರಣಜನರಕ್ಷ ಪಂಪಾವಿರೂಪಾಕ್ಷ ಲೋಕಾಧ್ಯಕ್ಷ ಸಲಹೆಮ್ಮನು ೧

ಪೊಸತಿದೆಲೆ ಚೆನ್ನಬಸವೇಶ ಶೂಲಿಯ ಕೈಯ
ತಿಸುಳಪೆಣನಂ ಕರಕಪಾಲಮುಂ ಕಂಡೊರ್ವ
ಶಶಿಮುಖಿಯರಾದೊಡಂ ಭಯಬೀಭತ್ಸಗೆ ಸಂದುದಿಲ್ಲವೆನೆ ಶಿವಮುಖದೊಳು
ಬೆಸುಗೆಗಣ್ಗಳ್ ಪೆರತು ಕಾಣ್ಬುವೇ ಮೇಣ್ ಮಿಕ್ಕ
ರಸಮೆನಿತ್ತಾದೊಡಂ ಮೋಹರಸಮುಂ ತಗು
ಳ್ಚಿಸಬಲ್ಲುದೇ ಕಾಮಿಗಳ್ ಕಣ್ಣುಗಾಣರೆಂಬುದು ಪುಸಿಯೆ ಕೇಳೆಂದನು ೨

ಸೂಚನೆ : ಇಂದ್ರನೇ ಮೊದಲಾದ ದಿಕ್ಪಾಲಕರ ಭವನಗಳಿಗೆ ಪ್ರೀತಿಯಿಂದ ಚಂದ್ರಶೇಖರನು (ಶಿವ) ಬಂದು, ಭಿಕ್ಷವನ್ನು ಪಡೆದು ಬಳಿಕ ಆ ಮುನಿಶ್ರೇಷ್ಠರಿಗೆ ಒಲಿದು ದಕ್ಷಿಣಾಮೂರ್ತಿಯ ಸ್ವರೂಪವನ್ನು ತಳೆದು ಉಪದೇಶ ಮಾಡಿದನು. ೧. ಕೈಯಲ್ಲಿ ಕಪಾಲ ಧರಿಸಿದ, ಲೋಕಪಾಲಕರಿಂದ ನಮಸ್ಕರಿಸಿಕೊಳ್ಳುವ, ಭಯಂಕರ ರಾದ ರಾಕ್ಷಸರನ್ನು ಸಂಹರಿಸಿದ, ಪ್ರಖ್ಯಾತವಾದ, ಮಂಗಳಕರವಾದ ಚರಿತ್ರೆಯುಳ್ಳ, ಜಟೆಯಲ್ಲಿ ಚಂದ್ರನನ್ನು ಧರಿಸಿರುವ, ಕಾಲಕೂಟವನ್ನು ಆಭರಣವಾಗಿ ಧರಿಸಿದ, ಅಂಧಕಾಸುರ ಎಂಬ ರಾಕ್ಷಸನನ್ನು ಗೆದ್ದ, ಸರಸಗುಣಗಳಿಗೆ ಆಶ್ರಯದಾತನಾದ, ನಮಿಸುವ ಭಕ್ತರನ್ನು ಯಾವಾಗಲೂ ಪ್ರೀತಿಸುವ, ಯಮನನ್ನು ಜಯಿಸಿದ, ಪುಷ್ಪಬಾಣನಾದ ಮನ್ಮಥನನ್ನು ದಹಿಸಿದ, ಶರಣಜನರನ್ನು ರಕ್ಷಿಸುವ, ಸಕಲ ಲೋಕಗಳಿಗೂ ಪ್ರಭುವಾದ ಪಂಪಾವಿರೂಪಾಕ್ಷನೇ, ನಮ್ಮನ್ನು ಕಾಪಾಡು. ೨. ಎಲೈ ಚೆನ್ನಬಸವಣ್ಣನೆ, ಶಿವನ ಕೈಯ ತ್ರಿಶೂಲದಲ್ಲಿದ್ದ ಹೆಣವನ್ನೂ, ಕೈಯಲ್ಲಿದ್ದ ತಲೆಯ ಬುರುಡೆಯನ್ನೂ ನೋಡಿ ಒಬ್ಬ ಸ್ತ್ರೀಯಾದರೂ ಭಯಗೊಳ್ಳಲಿಲ್ಲ ಎಂಬುದು ಹೊಸದು ಎನ್ನಲು ಈಶ್ವರನ ಮುಖದಲ್ಲೇ ಕೀಲಿಸಿದ್ದ ಅವರ ಕಣ್ಣುಗಳು ಬೇರೆ ವಸ್ತುವನ್ನು ಕಾಣುತ್ತವೆಯೇ ? ಅಲ್ಲದೆ

CC-0. Jangamwadi Math Collection. Digitized by eGangotri

ಪೊಕ್ಕನೀಶಂ ಸುರೇಂದ್ರನ ಮನೆಯ ಬಾಗಿಲೊಳ್
ಕಿಕ್ಕಿರಿದ ಸುರಭಟರ ಸಂದಣಿಗಳೇನುವಂ
ಲೆಕ್ಕಿಸದೆ ಶೂಲಮಂ ನೆಗಪಿ ಬ್ರಹ್ಮನ ಕಪಾಲವನುದ್ದಕೆತ್ತಿ ಕೂಡೆ
ಎಕ್ಕೆಕ್ಕೆಯಿಂದಮತ್ಯುಚ್ಚ ಸ್ವರಂಗಳಿಂ
ಮುಕ್ಕಣ್ಣನಂದು ಭಿಕ್ಷಾಭಿಕ್ಷಮೆನೆ ಕೇಳು
ತುಕ್ಕುವತಿಹರುಷದಿಂದಿಂದ್ರನೈತಂದಭವನಂ ಕಾಣುತಿಂತೆಂದನು ೩

ಕೇಳ್ದಂ ಗಂಭೀರಭಿಕ್ಷಾಧ್ವನಿಯನಂಗದೊಳ್
ತಾಳ್ದಂ ಪುಳಕಜಲಮನಾನಂದವಾರ್ಧಿಯೊಳ
ಗಾಳ್ದಂ ಮನಕ್ಕೆ ಸರಿಯಾದಾಪ್ತರೊಳ್ ಮುನಿಗಳೊಳ್ ಶಚೀದೇವಿಯರೊಳು
ಪೇಳ್ದಂ ಮಹೇಶನ ಬರವು ಚೋದ್ಯಮೆಂದು ಸುರ
ರಾಳ್ದಂ ಮೃಗೇಂದ್ರಪೀಠವನಿಳಿದು ನಡೆತಂದು
ಬೀಳ್ದಂ ಮಹಾದೇವನಿದಿರೊಳಷ್ಟಾಂಗದಿಂ ಭಯಭರಿತ ಭಕ್ತಿಯಿಂದೆ ೪

ಕಾರ ಮೊಳಗಂ ಕೇಳ್ದ ನವಿಲಂತೆ ನಲಿದು ಶಶಿ
ಸೂರರುದಯಂಗಂಡ ಕುಮುದಕಮಲಂಗಳಂ
ತೋರದಿಸಿ ಪೆರ್ಚಿ ಗುರುವಂ ಕಂಡ ಶಿಷ್ಯನಂತಧಿಕ ಭಕ್ತಿಯನೆ ತಾಳ್ದು

ಬೇರೆ ಯಾವ ರಸವು ಎಷ್ಟಿದ್ದರೂ ಮೋಹರಸವನ್ನು ಮೀರಿಸಬಲ್ಲುದೆ ? ಕಾಮಿಗಳಿಗೆ ಕಣ್ಣು ಕಾಣಿಸುವುದಿಲ್ಲ ಎಂಬ ಮಾತು ಸುಳ್ಳೆ ? ಕೇಳು ಎಂದನು. ೩. ಈಶ್ವರನು ದೇವೇಂದ್ರನ ಅರಮನೆಯನ್ನು ಪ್ರವೇಶಿಸಿದನು. ಬಾಗಿಲಿನಲ್ಲಿ ಕಿಕ್ಕಿರಿದು ಸೇರಿದ್ದ ದೇವ ಭಟರ ಗುಂಪನ್ನು ಸ್ವಲ್ಪವೂ ಲೆಕ್ಕಿಸದೆ, ಶೂಲವನ್ನು ಮೇಲಕ್ಕೆತ್ತಿ, ಬ್ರಹ್ಮನ ಕಪಾಲ ವನ್ನು ಉದ್ದಕ್ಕೂ ಚಾಚಿ, ಕೂಡಲೆ ಒಂದೇ ಸಮನೆ ಬಹಳ ಉಚ್ಚಸ್ವರದಿಂದ ಮುಕ್ಕಣ್ಣನು ಅಂದು, "ಭಿಕ್ಷಾ, ಭಿಕ್ಷಾ" ಎಂದು ಕೂಗಿದನು. ಅದನ್ನು ಕೇಳಿ ಇಂದ್ರನಿಗೆ ಅತಿಯಾದ ಸಂತೋಷವುಂಟಾಗಿ, ತನ್ನ ಬಳಿಗೆ ಬಂದ (ಅಭವ) ಶಿವನನ್ನು ನೋಡಿ ಹೀಗೆ ಹೇಳಿದನು. ೪. 'ಭಿಕ್ಷಾ' ಎಂದು ಕೂಗುತ್ತಿದ್ದ ಗಂಭೀರಧ್ವನಿಯನ್ನು ಕೇಳಿ ಪುಳಕಿತನಾದನು. ಆನಂದ ಸಾಗರದಲ್ಲಿ ಮುಳುಗಿದನು. ತನ್ನ ಮನಸ್ಸಿಗೆ ಸರಿಯಾದ ಆಪ್ತರಲ್ಲಿ, ಮುನಿಗಳಲ್ಲಿ, ತನ್ನ ಪತ್ನಿಯಾದ ಶಚೀದೇವಿಯಲ್ಲಿ ಈಶ್ವರನ ಆಗಮನವು ಆಶ್ಚರ್ಯಕರವೆಂದು ಹೇಳಿ ದೇವೇಂದ್ರನು ಸಿಂಹಾಸನದಿಂದ ಇಳಿದುಬಂದು ಮಹಾದೇವನ ಎದುರಿನಲ್ಲಿ ಭಯಭರಿತ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದನು. ೫. ಮಳೆಗಾಲದ ಗುಡುಗನ್ನು ಕೇಳಿದ ನವಿಲಿನಂತೆ ನಲಿದು, ಸೂರ್ಯ, ಚಂದ್ರರ ಉದಯವನ್ನು ಕಂಡ ಕಮಲ ಮತ್ತು ಕನ್ನೈದಿಲೆಗಳಂತೆ ಸಂತೋಷದಿಂದ ಉಬ್ಬಿ, ಗುರುವನ್ನು ನೋಡಿದ ಶಿಷ್ಯನಂತೆ ಹೆಚ್ಚಾದ ಭಕ್ತಿಯನ್ನು ತಾಳಿದನು. ತಿಳಿಯದೇ ಇರುವ ಅರ್ಥ ಹೊಳೆದಾಗ ಆನಂದಿಸುವ ಕವಿಯಂತೆ,

CC-0. Jangamwadi Math Collection. Digitized by eGangotri

ಚಾರದರ್ಘಂಗಂಡ ಕವಿಯಂತೆ ಮೆಚ್ಚಿ ಕ
ಣ್ಣಾರೆ ನಿಧಿಯಂ ಕಂಡ ಬಡವನಂತುಬ್ಬಿ ತ
ನ್ನಾರಪರ ಮುಖಕಮಲಮಂ ದೂರದಿಂ ಕಾಣುತಮರೇಂದ್ರನಿಂತೆಂದನು ೫

ಫಲಿತಮಾದುದು ಪೂರ್ವಸುಕೃತಲತೆ ಪರಿತಂದು
ದೊಲವಿನಿಂದಮೃತಪ್ರವಾಹಮುತ್ಸುಕೃತ್ಸವಂ
ದಳೆದು ಬಂದುದು ಪರಬ್ರಹ್ಮಾನಂದವಾರಾಶಿ ದಾಂಗುಡಿಯಿಟ್ಟುದು
ಸಲೆ ಸೌಖ್ಯವೇ ರೂಪನಾಂತು ನಡೆತಂದುದು
ಜ್ವಳಮುಕ್ತಿಯೇ ಮೂರ್ತಿವೆತ್ತು ಸಾರ್ದತ್ತೆನ್ನ
ಪಲವು ಜನ್ಮಂ ಸಫಲಮಾದುದೆಂದಮರೇಂದ್ರನಭವನಂ ನುತಿಯಿಸಿದನು ೬

ಶರಣು ನುತಶಶಿಚೂಡ ಸಕಲದುರಿತವಿಭಾಡ
ಶರಣು ಸೌಖ್ಯಾಪೂರ್ಣ ಸರ್ಪವೇಷ್ಟಿತಕರ್ಣ
ಶರಣು ಸರ್ವಾಭೇದ್ಯ ಸಚ್ಚರಿತಯುತಹೃದ್ಯ ಶರಣು ಸಲ್ಲಲಿತಶೀಲಾ
ಶರಣು ಸಜ್ಜನಪಾಲ ಸಾಮಗಾನವಿಲೋಲ
ಶರಣು ಮುನಿಜನಸಂಗ ಮುಕ್ತ್ಯಂಗನಾಲಿಂಗ
ಶರಣು ಹರಿನತಚರಣ ಹಸ್ತಿಚರ್ಮಾವರಣ ಶರಣೆನುತ್ತಡಿಗೆಡೆದನು ೭

ಕಣ್ಣಾರೆ ಐಶ್ವರ್ಯವನ್ನು ಕಂಡ ಬಡವನಂತೆ ಸಂತೋಷಿಸಿ. ಆ ಮನ್ಮಥನ ಸಂಹಾರಿಯಾದ ಈಶ್ವರನ ಮುಖಕಮಲವನ್ನು ದೂರದಿಂದ ನೋಡುತ್ತಲೇ ಇಂದ್ರನು ಈ ರೀತಿ ಹೇಳಿದನು. ೬. ಪೂರ್ವಜನ್ಮದ ಪುಣ್ಯದ ಬಳ್ಳಿ ಫಲಬಿಟ್ಟಿತು; ಪ್ರೀತಿಯಿಂದ ಅಮೃತದ ಪ್ರವಾಹವು ಹರಿದುಬಂದಿತು ; ಪರಬ್ರಹ್ಮಾನಂದಸಾಗರವು ಅತ್ಯುತ್ಸಾಹದಿಂದ ಮೇರೆ ಮೀರಿತು ; ಸುಖವೇ ರೂಪವನ್ನು ಪಡೆದು ನಡೆದುಕೊಂಡು ಬಂದಿತು ; ಉಜ್ವಲವಾದ ಮುಕ್ತಿಯೇ ಮೂರ್ತಿವೆತ್ತು ಹತ್ತಿರ ಬಂತು. ನನ್ನ ಹಲವು ಜನ್ಮಗಳು ಸಫಲವಾದುವು ಎಂದು ದೇವೇಂದ್ರನು ಅಭವ (ಶಿವನನ್ನು) ಸ್ತೋತ್ರಮಾಡಿದನು. ೭. ಎಲ್ಲರ ಸ್ತುತಿಗೆ ಪಾತ್ರನಾದ ಚಂದ್ರಶೇಖರನೇ, ಎಲ್ಲ ಪಾಪಗಳನ್ನೂ ನಾಶಮಾಡುವವನೇ. ಶರಣು. ಸಂಪೂರ್ಣವಾದ ಸುಖವನ್ನು ಹೊಂದಿದವನೇ, ಕಿವಿಗಳಿಗೆ ಹಾವುಗಳನ್ನೇ ಆಭರಣವಾಗಿ ಉಳ್ಳವನೇ, ನಮಸ್ಕಾರ. ಸರ್ವರೀತಿಯಲ್ಲಿಯೂ ಭೇದಿಸಲು ಅಸಾಧ್ಯನಾದವನೇ, ಸಚ್ಚಾರಿತ್ರ್ಯವುಳ್ಳ ಭಕ್ತರ ಹೃದಯದಲ್ಲಿ ನೆಲಸಿರುವವನೇ, ನಿನಗೆ ಶರಣು. ಮನೋಹರವಾದ ಶೀಲವುಳ್ಳ ಮತ್ತು ಸಜ್ಜನರಕ್ಷಕನಾದ, ಸಾಮಗಾನಲೋಲನಾದ, ಮುನಿಜನಗಳ ಸಹವಾಸವುಳ್ಳ, ಮುಕ್ತಿಯೆಂಬ ಅಂಗನೆಯನ್ನು ಆಲಿಂಗಿಸಿಕೊಂಡ, ವಿಷ್ಣುವಿನಿಂದ ನಮಸ್ಕರಿಸಿಕೊಂಡ ಪಾದಗಳುಳ್ಳ, ಗಜಚರ್ಮಾಂಬರಧರನಾದ ಪರಮೇಶ್ವರನೇ ನಿನಗೆ

CC-0. Jangamwadi Math Collection. Digitized by eGangotri

ಮಾಣದಿಂತಡಿಗೆರಗಿದಿಂದ್ರನಂ ನಮಿಸಿದಿಂ
ದ್ರಾಣಿಯುಮನೀಶ್ವರಂ ನೆಗಪಲೊಡನಾಕಾಶ
ವಾಣಿ ನುಡಿದತ್ತೆಲೆಲೆ ಸುರಪ ಕೇಳ್ ಪರಮೇಶನೆಡದ ಹಸ್ತದೊಳೊಪ್ಪುವಾ
ವಾಣೀಪತಿಯ ಕಪಾಲಕೆ ಭಿಕ್ಷಮಂ ನಿನ್ನ
ತ್ರಾಣಮುಳ್ಳನಿತು ಮುನ್ನೀಡೆಂಬ ವಚನಮಂ
ಪ್ರಾಣಮೈತಂದಂತೆ ಕೇಳ್ದೊಡನೆ ತರಿಸಿದಂ ನಾನಾ ಸುವಸ್ತುಗಳನು ೮

ಎಣಿಕೆಯಿಲ್ಲದ ವಸ್ತುವಂ ತರಿಸಿ ಶಚಿಯೊಡನೆ
ಫಣಿಭೂಷಣನ ಕರಕಪಾಲಕ್ಕೆ ಭಿಕ್ಷಮಂ
ಪಣೆಯದೆಡೆಮಾಡೆನಲ್ಕನುವಾದಳೈವತ್ತುಲಕ್ಷ ಸುರಸತಿಯರೊಡನೆ
ಮಣಿಖಚಿತ ಹೊನ್ನ ಹರಿವಾಣಂಗಳಂ ತುಂಬಿ
ಮಣಿಮಣಿದು ನೀಡಲ್ಕೆ ತುಂಬದಿರೆ ಸುರಪ ಸುರ
ಮಣಿಯಂ ಸುಧಾಕಳಶಮಂ ನೀಡಬರಲಭವನೊಲಿದಾಗಳಿಂತೆಂದನು ೯

ಸಾಕು ಸಾಕೈ ಸುರಪ ಕೇಳ್ ಸುಧಾಕಲಶಮಿ
ನಾಕಿಗರ ಜೀವನಾಧಾರಮಿದನತ್ಯಂತ
ಜೋಕೆಯಿಂ ಬೈತಿಡುವುದೆನುತವರ ಬೀಳ್ಕೊಡುತ್ತನಲಪುರಕೈದಲಗ್ನಿ

ಶರಣು ಎನ್ನುತ್ತ ಅವನ ಪಾದಗಳಿಗೆ ಸಾಷ್ಟಾಂಗವೆರಗಿದನು. ೮. ಈ ರೀತಿ ನಮಸ್ಕರಿಸಿದ ಇಂದ್ರನನ್ನೂ, ಆತನ ಪತ್ನಿ ಇಂದ್ರಾಣಿಯನ್ನೂ ಈಶ್ವರನು ಹಿಡಿದೆತ್ತಿದನು. ಆಗ ಅಶರೀರ ವಾಣಿ ನುಡಿಯಿತು—''ಎಲೆಲೆ ದೇವೇಂದ್ರನೇ, ಕೇಳು, ಪರಮೇಶ್ವರನ ಎಡಗೈಯಲ್ಲಿ ಇರುವ ಬ್ರಹ್ಮಕಪಾಲಕ್ಕೆ ನಿನಗೆ ಶಕ್ತಿಯಿದ್ದಷ್ಟು ಭಿಕ್ಷೆಯನ್ನು ಮೊದಲು ನೀಡು. ಇಂದ್ರನು ಈ ಮಾತನ್ನು ಕೇಳಿ, ಪ್ರಾಣ ಬಂದಂತಾಗಿ, ತಕ್ಷಣ ಅನೇಕ ಉತ್ತಮವಾದ ವಸ್ತುಗಳನ್ನು ತರಿಸಿದನು. ೯. ಲೆಕ್ಕವಿಲ್ಲದಷ್ಟು ವಸ್ತುಗಳನ್ನು ತರಿಸಿ, ಶಚೀದೇವಿಯನ್ನು ಕುರಿತು, ಸರ್ಪಭೂಷಣನಾದ ಈಶ್ವರನ ಕೈಯಲ್ಲಿರುವ ಕಪಾಲಕ್ಕೆ ಆಯಾಸಗೊಳ್ಳದೆ ಭಿಕ್ಷೆ ನೀಡು ಎಂದನು. ಆಗ ಅವಳು ಐವತ್ತು ಲಕ್ಷ ದೇವತಾಸ್ತ್ರೀಯರನ್ನು ಕೂಡಿಕೊಂಡು, ಮಣಿಖಚಿತವಾದ ಬಂಗಾರದ ತಟ್ಟೆಗಳಲ್ಲಿ ವಸ್ತುಗಳನ್ನು ತುಂಬಿ ಮಣಿಮಣಿದು ನೀಡಿದಳು, ಆದರೂ ಕಪಾಲವು ತುಂಬಲಿಲ್ಲ, ಆಗ ದೇವೇಂದ್ರನು ಚಿಂತಾಮಣಿಯನ್ನೂ, ಅಮೃತ ಕಳಶವನ್ನೂ ಭಿಕ್ಷೆ ನೀಡಲು ಮುಂದಾಗಲು ಭವರಹಿತನಾದ ಶಿವನು ಸಂತೋಷಗೊಂಡು ಹೀಗೆ ಹೇಳಿದನು. ೧೦. ಸಾಕು ಸಾಕು, ದೇವೇಂದ್ರನೇ, ಕೇಳು. ಈ ಅಮೃತಕಳಶವು ದೇವತೆಗಳ ಜೀವನಾಧಾರವಾದುದು. ಇದನ್ನು ಬಹಳ ಎಚ್ಚರಿಕೆಯಿಂದ ಜೋಪಾನ ವಾಗಿಡಬೇಕು ಎನ್ನುತ್ತ ಅವರನ್ನು ಬೀಳ್ಕೊಂಡು, ಅಲ್ಲಿಂದ ಅಗ್ನಿ ನಗರಕ್ಕೆ ಬರಲು,

CC-0. Jangamwadi Math Collection. Digitized by eGangotri

ಆ ಕಪರ್ದಿಯ ಕರಕಪಾಲಕ್ಕೆ ಭಿಕ್ಷವುಂ
ಬೇಕಾದ ರತ್ನಂಗಳಂ ಬಡಿಸಲಲ್ಲಿಂದ
ನೇಕಪರುಷದೆ ಯಮನ ಪುರಕೆ ಬಂದಾ ಜವನ ಪೂಜೆಯಂ ಕೈಕೊಂಡನು ೧೦

ಎಲೆ ಸಿದ್ಧರಾಮ ಕೇಳಾ ಯಮನ ಪಟ್ಟಣದೆ
ಪುಳುಗೊಂಡವಾದಿಯಗಣಿತಕೋಟಿಯವರೊಳಗೆ
ತಿಳಿಯಲೆಪ್ಪತ್ತೆಂಟುಕೋಟಿ ನಾಯಕನರಕವುನಿತು ಕುಂಡಂಗಳಲ್ಲಿ
ಮುಳುಗಿರ್ದ ನರಕಿಗಳಭವ ಬಂದ ಮಾತ್ರದಿಂ
ಸಲೆ ಶೈವಲೋಕ ಸಂಪ್ರಾಪ್ತರಾದರ್ ಶಿವನ
ನೊಲವಿನಿಂ ಹೃತ್ಕಮಲಕರ್ಣಿಕೆಯೊಳಿಂಬಿಟ್ಟರಂ ಪೊಗಳಲರಿದೆಂದನು ೧೧

ಹರುಷದಿಂ ಕಾಲನಂ ಬೀಳ್ಕೊಂಡು ನೈರುತ್ಯ
ವರುಣ ವಾಯು ಕುಬೇರರೀಶಾನರೆಂದೆಂಬ
ವರಪುರಂಗಳ್ಗೆ ಕ್ರಮದೊಳ್ ಬರಲ್ಕವರಿದಿರ್ಗೊಂಡಧಿಕ ಭಕ್ತಿಯಿಂದೆ
ತರುಣಿಯರ್ವೆರಸಿ ನವರತ್ನಂಗಳಂ ಶಿವನ
ಕರದ ಪಾತ್ರೆಗೆ ಭಿಕ್ಷವುಂ ನೀಡಲವರ್ಗಳಂ
ಕರೆದು ಸಂತೈಸಿ ಬೀಳ್ಕೊಂಡು ಶಂಕರನಂದು ಬರುತಿರ್ದನೇವೇಳ್ವೆನು ೧೨

ಸಕಲ ಜಗವುಂ ಪಾವನಂ ಮಾಡಿ ನಾಮಗೋ
ಪ್ಯಕಭೂಮಿಯಂ ಪುಣ್ಯಭೂಮಿಯೆಂದೆನಿಸಿ ನಿ
ಪ್ಪ್ರಕಟಗಿರಿಗಳನಮಳಗಿರಿಗಳೆಂದೆನಿಸಿ ಪೆಸರ್ವಡೆಯದಿಹ ನದನದಿಗಳ

ಅಗ್ನಿಯು ಆ ಶಿವನ ಕೈಯಲ್ಲಿದ್ದ ಬ್ರಹ್ಮಕಪಾಲಕ್ಕೆ ಬೇಕುಬೇಕಾದ ರತ್ನಗಳನ್ನು ಭಿಕ್ಷವನ್ನಾಗಿ ನೀಡಿದನು. ಶಿವನು ಅಲ್ಲಿಂದ ಯಮನ ಪಟ್ಟಣಕ್ಕೆ ಬಹು ಸಂತೋಷದಿಂದ ಬಂದು, ಅವನಿಂದ ಪೂಜೆಯನ್ನು ಸ್ವೀಕರಿಸಿದನು. ೧೧. ಎಲೈ, ಸಿದ್ಧರಾಮನೆ, ಕೇಳು, ಆ ಯಮನ ಪಟ್ಟಣದಲ್ಲಿ ಪುಳುಗೊಂಡ ಮೊದಲಾದ ಅನೇಕ ಕೋಟಿ ನರಕಗಳಿವೆ, ಅವುಗಳಲ್ಲಿ ಎಪ್ಪತ್ತೆಂಟು ಕೋಟಿ ನಾಯಕನರಕಗಳಿವೆ. ಅಷ್ಟು ನರಕಕುಂಡಗಳಲ್ಲಿ ಮುಳುಗಿದ್ದ ನರಕಿಗಳು ಶಿವನು ಅಲ್ಲಿಗೆ ಬಂದ ಮಾತ್ರದಿಂದಲೇ ಶ್ರೇಷ್ಠವಾದ ಶಿವಲೋಕವನ್ನು ಹೊಂದಿದವರಾದರು. ಶಿವನನ್ನು ಭಕ್ತಿಯಿಂದ ತಮ್ಮ ಹೃದಯಕಮಲಮಧ್ಯದಲ್ಲಿ ನೆಲೆಗೊಳಿಸಿಕೊಂಡರು. ಅವರನ್ನು ಹೊಗಳಲು ಅಸಾಧ್ಯ ಎಂದನು. ೧೨. ಸಂತೋಷದಿಂದ ಯಮನಿಂದ ಕಳುಹಿಸಿಕೊಂಡು ನೈರುತ್ಯ, ವರುಣ, ವಾಯು, ಕುಬೇರ, ಈಶಾನ್ಯ ಎಂಬುವರ ಪಟ್ಟಣಗಳಿಗೆ ಅನುಕ್ರಮವಾಗಿ ಬಂದನು. ಅವರೆಲ್ಲರೂ ಬಹು ಭಕ್ತಿಯಿಂದ ಶಿವನನ್ನು ಎದುರುಗೊಂಡು ತಮ್ಮ ತಮ್ಮ ಪತ್ನಿಯರ ಜೊತೆಗೂಡಿ ಈಶ್ವರನ ಕೈಯಲ್ಲಿದ್ದ ಪಾತ್ರೆಗೆ ನವರತ್ನಗಳನ್ನು ಭಿಕ್ಷೆ ನೀಡಿದರು, ಅವರೆಲ್ಲರನ್ನೂ ಕರೆದು ಸಂತೈಸಿ ಶಂಕರನು ಅಲ್ಲಿಂದ ಹೊರಟುಬರುತ್ತಿದ್ದನು. ೧೩. ಎಲ್ಲ ಜಗತ್ತನ್ನೂ ಪಾವನ ಮಾಡಿ, ಹೆಸರು ಕೂಡ ತಿಳಿಯದ ಭೂಮಿಯನ್ನು ಪುಣ್ಯಭೂಮಿಯನ್ನಾಗಿ ಮಾಡಿದನು. ಪ್ರಸಿದ್ಧವಲ್ಲದ

CC-0. Jangamwadi Math Collection. Digitized by eGangotri

ಅಕಳಂಕ ಪುಣ್ಯನದಿಯೆನಿಸುತಲ್ಲಲ್ಲಿ ಬಾ
ಧಕವನಂಗಳನೆಸೆವ ಪುಣ್ಯವನಮೆನಿಸಿ ದ
ರ್ಪಕಹರಂ ಹಿಮಶೈಲವಿದ್ದೆಡೆಗೆ ನಲವಿನಿಂದಾಗ ನಡೆತರುತಿರ್ದನು ೧೩

ಆ ಗಿರಿನಿತಂಬದೊಳ್ ದಾರುವನಮಿರಲದರೊ
ಳಾ ಗೌತಮಂ ಭೃಗು ಭರದ್ವಾಜನತ್ರಿ ಮ
ತ್ತಾ ಗಾಲವಂ ವಸಿಷ್ಠಂ ಕೌಶಿಕಂ ಕಶ್ಯಪಂ ವ್ಯಾಸನಂಗೀರಸಂ
ಬಾಗುರಿ ಪರಾಶರಂ ಗಾರ್ಗ್ಯ ಕಣ್ವರ್ ಮುಖ್ಯ
ರಾಗಿರ್ದ ವರಮುನಿಗಳಗಣಿತರ್ ತಂತಮ್ಮ
ಯೋಗನಿಷ್ಠೆಯೊಳೀಶ್ವರಧ್ಯಾನದಿಂ ಮನಂಗೊಳಿಸಿರ್ದರೇನೆಂಬೆನು ೧೪

ನೆಳಲಂತೆ ಮೆಯ್ವಳಿಗೆ ಸಂದು ಮತಿಯಂತೆ ನಿ
ರ್ಮಳಕರ್ಮಕನುಸಾರಿಯಾಗಿ ನುಂಗಿದ ರಸಂ
ಸಲೆ ತಿವಿದ ಬಳಿಗೋದಗುವಂತೆ ನೆನಹಿಗೆ ಮುಂಚಿ ಶುಶ್ರೂಷೆಗಳ ಮಾಡುವ
ತಳಿರ್ಗಯ್ಯ ತೆಳ್ವಸುರ ಸುಳಿಗುರುಳ ಸೆಳೆನಡುವಿ
ನೆಳಜವ್ವನದ ಮುದ್ದುಮೊಗದ ಕೋಮಲಕಾಯ
ದಲಘುಜಘನದ ಮಹಾಪಾತಿವ್ರತಾಜನಂ ಕಂಗೊಳಿಸಿತೇನೆಂಬೆನು ೧೫

ಪರ್ವತಗಳನ್ನು ಶ್ರೇಷ್ಠವಾದ ಪರ್ವತಗಳನ್ನಾಗಿ ಮಾಡಿದನು. ಹೆಸರುವಾಸಿಯಲ್ಲದ ನದ ನದಿಗಳನ್ನು ಕಳಂಕರಹಿತವಾದ ಪುಣ್ಯನದಿಗಳು ಎನ್ನಿಸಿದನು. ಅಲ್ಲಲ್ಲಿ ತೊಂದರೆ ಯನ್ನುಂಟುಮಾಡುತ್ತಿದ್ದ ವನಗಳನ್ನು ಪುಣ್ಯವನಗಳೆನ್ನಿಸಿ ಮನ್ಮಥಸಂಹಾರಕನಾದ ಈಶ್ವರನು ಸಂತೋಷದಿಂದ ಹಿಮಾಲಯಪರ್ವತದ ಕಡೆಗೆ ನಡೆದುಬರುತ್ತಿದ್ದನು. ೧೪. ಆ ಪರ್ವತದ ತಪ್ಪಲಿನಲ್ಲಿ ದಾರುವನವಿದ್ದಿತು. ಅದರಲ್ಲಿ ಗೌತಮ, ಭೃಗು, ಭರದ್ವಾಜ, ಅತ್ರಿ ಮತ್ತು ಗಾಲವ, ವಸಿಷ್ಠ, ಕೌಶಿಕ, ಕಶ್ಯಪ, ವ್ಯಾಸ, ಅಂಗೀರಸ ಬಾಗುರಿ, ಪರಾಶರ, ಗಾರ್ಗ್ಯ, ಕಣ್ವರೇ ಮೊದಲಾದ ಅಸಂಖ್ಯಾತ ಶ್ರೇಷ್ಠ ಋಷಿಗಳು ತಮ್ಮ ತಮ್ಮ ಯೋಗನಿಷ್ಠೆಯಲ್ಲಿ ಈಶ್ವರಧ್ಯಾನದಿಂದ ನೋಡುವವರ ಮನಸ್ಸನ್ನು ಆಕರ್ಷಿಸುತ್ತಿದ್ದರು. ೧೫. ದೇಹದ ಜೊತೆಯಲ್ಲಿಯೇ ಇರುವ ನೆರಳಿನಂತೆ, ನಿರ್ಮಲ ವಾದ ಕರ್ಮಕ್ಕೆ ಅನುಸಾರವಾದ ಬುದ್ಧಿಯಂತೆ, ನುಂಗಿದ ಪಾದರಸವು ತಳ್ಳಿದ ಕಡೆಗೆ ಬೇಗನೆ ಹೋಗುವಂತೆ, ನೆನಸುವ ಮುಂಚೆಯೇ ಪತಿಗಳ ಸೇವೆಯನ್ನು ಮಾಡುತ್ತಿದ್ದ ಚಿಗುರಿನಂತಹ ಕೋಮಲವಾದ ಕೈಯುಳ್ಳ, ತೆಳುವಾದ ಹೊಟ್ಟೆಯುಳ್ಳ, ಗುಂಗುರು ಕೂದಲುಳ್ಳ, ಸಣ್ಣನಡುವಿನ, ಎಳೆಯ ಪ್ರಾಯದ, ಮುದ್ದುಮುಖದ, ಕೋಮಲವಾದ ಶರೀರದ, ದಪ್ಪನಾದ ಜಘನದ ಮಹಾ ಪತಿವ್ರತಾಸ್ತ್ರೀಯರು ಮನೋಹರವಾಗಿ

CC-0. Jangamwadi Math Collection. Digitized by eGangotri

ಆ ಮುನಿಗಳಾಶ್ರಮವನೊಳಪೊಗುತ್ತೀಶ್ವರಂ
ಕೋಮಲಾಂಗಂ ಥಳತ್ಥಳಿಸೆ ಪೊಳೆಪೊಳೆವ ಸೌ
ದಾಮಿನಿಯ ಸಾರೂಪ್ಯಮಂ ಪಡೆಯೆ ಕಣ್ ಮೊಗಂ ನಡೆನಡೆಗೆ ಗಾಡಿವಿಗಲು
ಆ ಮಹಾಶೇಷರೀತನ ರೂಪಮಂ ಪೊಗಳೆ
ಸಾಮರ್ಥ್ಯರಲ್ಲೆಂಬ ಸಂಶಯಂ ವನಜನ
ಸ್ತೋಮಕ್ಕೆ ಪುಟ್ಟೆ ಭಿಕ್ಷಾಧ್ವನಿಗಳುಣ್ಮೆ ಕಡುಚೆಲ್ವಿನಿಂ ನಡೆತಂದನು ೧೬

ಆ ಋಷಿಸ್ತ್ರೀಯರುಂ ಮನೆಗಳೊಳ್ ತಮ್ಮ ಸಂ
ಸಾರಕೃತ್ಯಂಗಳಿಂದಿರುತಿರ್ದು ಶಿವನ ಗಂ
ಭೀರ ಭಿಕ್ಷಾಧ್ವನಿಗಳಂ ಕೇಳ್ದು ಸುಪವಿತ್ರಪಾತ್ರೆಯೊಳ್ ದಿವ್ಯಾನ್ನವ
ಸಾರಸವ ನವನೀತಮಂ ಬಡಿಸಿ ತಂದು ಕೈ
ಯಾರೆ ಭಿಕ್ಷವ ನೀಡಿ ಮುಖವನೀಕ್ಷಿಸದೆ ಕ
ಣ್ಣೋರೆಯಿಂ ಪ್ರತಿಕೃತಿಯನುಗುರ್ವೆಳಗಿನೊಳ್ ಕಂಡು ಮೋಹಿಸಿದರಾಕ್ಷಣದೊಳು ೧೭

ಆವ ಚೆನ್ನಿಗನೀತನಾವನೀ ಜಾಣನಿವ
ನಾವನೀ ಗಾಡಿಕಾರಂ ಶಿವಾಯೆಂದತ್ತೆ
ಮಾವ ಮೈದುನ ಭಾವ ಗಂಡರಿರೆ ಮನೆಗಳಂ ಬಿಟ್ಟಳ್ವ ಮಕ್ಕಳ್ಗಳ

ಕಾಣುತ್ತಿದ್ದರು. ೧೬. ಈಶ್ವರನು ಆ ಮುನಿಗಳ ಆಶ್ರಮವನ್ನು ಪ್ರವೇಶಿಸುತ್ತ, ಅವನ ಕೋಮಲವಾದ ಶರೀರವು ಥಳಥಳನೆ ಹೊಳೆಯಲು, ಹೊಳೆಯುವ ಮಿಂಚಿನ ಸಾದೃಶ್ಯ ವನ್ನು ಕಣ್ನೋಟವು ಪಡೆಯಲು, ಮುಖದ ಸೌಂದರ್ಯ ಹೆಜ್ಜೆಹೆಜ್ಜೆಗೆ ಹೆಚ್ಚಾಗಲು, ಆ ಮಹಾಆದಿಶೇಷರು ಕೂಡ ಇವನ ರೂಪವನ್ನು ಹೊಗಳಲು ಸಮರ್ಥರಲ್ಲ ಎಂಬ ಸಂಶಯವು ಆ ಕಾಡಿನಲ್ಲಿದ್ದ ಜನಗಳಿಗೆ ಉಂಟಾಗಲು, ಭಿಕ್ಷಾಭಿಕ್ಷೆ ಎಂಬ ಧ್ವನಿ ಹೊರಡಲು, ಅವನು ಬಹಳ ಚೆಲುವಿನಿಂದ ನಡೆದುಬಂದನು. ೧೭. ಆ ಋಷಿಪತ್ನಿ ಯರು ತಮ್ಮ ತಮ್ಮ ಮನೆಗಳಲ್ಲಿ ಸಂಸಾರದ ಕೆಲಸಗಳನ್ನು ಮಾಡುತ್ತಿದ್ದರು. 'ಭಿಕ್ಷೆ' ಎಂಬ ಶಿವನ ಗಂಭೀರಧ್ವನಿಯು ಅವರಿಗೆ ಕೇಳಿಸಿತು. ಅವರು ಪವಿತ್ರವಾದ ಪಾತ್ರೆಗಳಲ್ಲಿ ದಿವ್ಯವಾದ ಅನ್ನ, ಸಾರು ಮತ್ತು ಬೆಣ್ಣೆಯನ್ನು ಬಡಿಸಿಕೊಂಡು ತಂದು ತಮ್ಮ ಕೈಯಾರೆ ಭಿಕ್ಷವನ್ನು ನೀಡಿ, ಅವನ ಮುಖವನ್ನು ದೃಷ್ಟಿಸಿ ನೋಡದೆ, ಓರೆಗಣ್ಣಿನಿಂದ ಅವನ ಪ್ರತಿಬಿಂಬವನ್ನು ತಮ್ಮ ಬೆಳಗುತ್ತಿದ್ದ ಉಗುರಿನಲ್ಲಿ ಕಂಡು ತಕ್ಷಣ ಮೋಹಗೊಂಡರು ೧೮. ಈತ ಯಾವ ಚೆನ್ನಿಗ ? ಈ ಜಾಣ ಯಾರು ? ಈ ಸುಂದರಾಂಗ ಯಾರು ? ಶಿವ ಶಿವಾ ಎನ್ನುತ್ತ ಅತ್ತೆ, ಮಾವ, ಮೈದುನ, ಭಾವ, ಗಂಡ ಇವರೆಲ್ಲರೂ ಇರುವಂತೆಯೇ ಮನೆಗಳನ್ನು ಬಿಟ್ಟು, ಅಳುವ ಮಕ್ಕಳನ್ನು ಸಮಾಧಾನಪಡಿಸದೆ, ಮುನಿಗಳ ಹೋಮಕ್ಕೆ

CC-0. Jangamwadi Math Collection. Digitized by eGangotri

ಓವದೆ ಮುನೀಂದ್ರ ಹೋಮಾಜ್ಯಚರುಸಮಿತ್ತೆಗಳ
ಕೋವಿ ಗಂಧಾಕ್ಷತೆಗಳಂ ಬಿಸುಟು ಪರಿತಂದು
ದೇವೇಳ್ವೆನಬ್ಜಾಕ್ಷಿಯರ್ ಮದನಲಕ್ಷ್ಮಿಯರ್ ನಿಟ್ಟಿಸಿದರೀಶನಿರವ ೧೮

ಕಾಣುತೀಶನ ಮೂರ್ತಿಯಂ ಮಹಾಸತಿಯರೆರ್ದೆ
ದಾಣಮಲರ್ಗಣೆಗೆ ನೆಲೆದಾಣಮಾದುವು ಮನಂ
ಮಾಣದಡಿಗಡಿಗೆ ಬೆಂಬತ್ತಿದುವು ಬತ್ತಿದುವು ಬಾಯ್ಗಳತಿತವಕದಿಂದೆ
ತ್ರಾಣಮೆಳದಾಯ್ತು ಮತ್ತೊಡನೊಡನೊಸರ್ವ ನಾ
ಣ್ದಾಣಮುಬ್ಬರಮಾಯ್ತು ನಡೆಗೆ ತಡಬಡಮಾಯ್ತು
ವಾಣಿ ತಬ್ಬಿಬ್ಬಾಯ್ತು ಸುಮತಿ ಮರುಳಾಯ್ತೊಂದು ನಿಮಿಷದೊಳಗೇನೆಂಬೆನು ೧೯

ಸ್ನಾನ ಜಪ ಹೋಮಮಾಧ್ಯಾಯನ ತಪಸ್ಸು ಸಂ
ಧ್ಯಾನಯುಕ್ತಾತ್ಮಪತಿಗಳ ಜನ್ಮಜಾಡ್ಯದೊಳ್
ತಾನಡ್ಡಕಟ್ಟುವಡೆದಾ ಕಾಮಗಟ್ಟೆ ಸ್ಮರವೈರಿಯೀಕ್ಷಣಘಾತಕೆ
ಆನದೊಡೆದೊಸರ್ದುದು ಪರಿವಂತೆ ಬೆಮರ್ವನಿಗಳಂ
ದಾನನಾಬ್ಜಂಗಳೊಳ್ ಹರುಷಾಶ್ರು ಕಣ್ಗಳೊಳ್
ಮಾನಿತವರಾಂಗದೊಳ್ ತೆಳ್ವದಂ ಸೂಸೆ ಮೋಹಿಸಿದರಖಿಳಸ್ತ್ರೀಯರು ೨೦

ಹಾಕುವ ತುಪ್ಪ, ಹವಿಸ್ಸು, ಸಮಿತ್ತುಗಳನ್ನು ಕೆಡವಿ, ಗಂಧಾಕ್ಷತೆಗಳನ್ನು ಬಿಸಾಟು, ಓಡಿ ಬಂದ ಆ ಕಮಲಾಕ್ಷಿಯರು ಮದನಲಕ್ಷ್ಮಿಯರು ಈಶ್ವರನ ಮೋಹನಾಕಾರವನ್ನು ನಿಟ್ಟಿಸಿ ನೋಡಿದರು. ೧೯. ಈಶ್ವರನ ಮೂರ್ತಿಯನ್ನು ನೋಡುತ್ತಲೇ ಆ ಮಹಾಸತಿಯರ ಹೃದಯದಲ್ಲಿ ಮನ್ಮಥನ ಪುಷ್ಪಬಾಣವು ಹೊಕ್ಕುನೆಲಸಿತು. ಮನಸ್ಸು ನಿಲ್ಲದೆ ಮತ್ತೆ ಮತ್ತೆ ಅವನನ್ನೇ ಹಿಂಬಾಲಿಸಿತು. ಅತಿಯಾದ ತವಕದಿಂದ ಬಾಯ್ಗಳು ಒಣಗಿದುವು, ಶಕ್ತಿ ಕುಂದಿತು, ಮತ್ತೆ ಮತ್ತೆ ಸ್ರವಿಸುವ ಯೋನಿಗಳು ದೊಡ್ಡದಾದುವು, ನಡಿಗೆ ತಡವರಿಸಿತು, ಅವರ ಮಾತುಗಳು ತಬ್ಬಿಬ್ಬಾದುವು, ಒಳ್ಳೆಯ ಬುದ್ಧಿ ಒಂದು ನಿಮಿಷದಲ್ಲಿ ಮರುಳಾಯಿತು, ಇದನ್ನು ಏನೆಂದು ಹೇಳಲಿ ? ೨೦. ಸ್ನಾನ, ಜಪ, ಹೋಮ, ಅಧ್ಯಯನ, ತಪಸ್ಸು, ಸಂಧ್ಯಾಹ್ನಿಕಗಳಲ್ಲಿ ತೊಡಗಿರುವ ತಮ್ಮ ಗಂಡಂದಿರ ಜನ್ಮಜಾಡ್ಯದಲ್ಲಿ ತಡೆಹಿಡಿದಿದ್ದ ಕಾಮದ ಅಡ್ಡಗಟ್ಟೆ ಕಾಮವೈರಿಯಾದ ಈಶ್ವರನ ನೋಟದ ಆಘಾತವನ್ನು ತಾಳಲಾರದೆ ಒಡೆದುಹೋಯಿತು. ತಕ್ಷಣ ಜಿನುಗಿ ಹರಿಯುವಂತೆ ಮುಖಕಮಲದಲ್ಲಿ ಬೆವರುಹನಿಗಳು, ಕಣ್ಣುಗಳಲ್ಲಿ ಆನಂದಾಶ್ರು, ಮರ್ಯಾದಿತವಾದ ಅವರ ಗುಹ್ಯಾಂಗಗಳಲ್ಲಿ ಮದನದ್ರವ ಹರಿಯುತ್ತಿರಲು ಆ ಎಲ್ಲ ಸ್ತ್ರೀಯರೂ ಪರಮೇಶ್ವರನನ್ನು ಮೋಹಿ

CC-0. Jangamwadi Math Collection. Digitized by eGangotri

ಸಾಜಗುಣಮಲ್ಲದರಿಯದ ಮುಗ್ಧೆಯರ್ ಬಳಿ
ಕ್ಕೀ ಬೇಟಗಾರನಂ ಕಂಡು ಮರುಳಪ್ಪುದಿದು
ಸೋಜಿಗಮೆ ಶಿವಶಿವಾ ತರಳೆಯರ್ ಬೆಂಕೆಯೊತ್ತಿನ ಬೆಣ್ಣೆಯಂತೆ ಕರಗಿ
ಸೂಜಿಗಲ್ಲಿದಿರ ಕಾರ್ಬೊನ್ನಂತೆ ತಿರುಗಿದೆಡೆ
ಗಾ ಜವದೊಳೊಡದಿರುಗಿ ಬೆಂಡಾಗಿ ನಾರೀಪ
ಮಾಜಮೆಸೆದುದು ಸೂತ್ರಧಾರಿ ಪಿಡಿದಾಡಿಸುವ ಬೊಂಬೆಗಳ ಬಳಗದಂತೆ ೨೧

ಆಚ್ಚರಿಯನಾಲಿಸೆಲೆ ರಾಮ ಮುನಿಜನಕೆ ಖತಿ
ಪೆಚ್ಚಬೇಕೆಂದೀಶ್ವರಂ ವಿನೋದಕ್ಕೆ ಕಣ್
ಮುಚ್ಚಿ ಧ್ಯಾನಿಸುವ ಸತಿಯರ ಕರಸ್ಪರ್ಶನಂಗೆಯ್ಯಲೊಡನಾ ಕ್ಷಣದೊಳು
ಅಚ್ಚರದ ಶಿವನ ಸಾರೂಪ್ಯದಿಂ ಥಳಥಳಿಸು
ವಚ್ಚಮುತ್ತಿನ ಬೊಂಬೆಯಂತಿರ್ಪ ಶಿಶುಗಳಳು
ತುಚ್ಚಿ ಬಸಿರಿಂ ಬಿಳ್ದವೀಶ್ವರಮಹಾತ್ಮೆಯಂ ಬಣ್ಣಿಸುವರಾರೆಂದನು ೨೨

ನೆರೆದುದಲ್ಲಲ್ಲಿ ಪಟುವಟುಸಂಚಯಂ ತಮ್ಮ
ಗುರುಗಳೊಡನೀ ವಾರ್ತೆಯಂ ಪೇಳಬೇಕೆಂದು
ಪರಿದು ಬಂದಡ್ಡಬಿದ್ದೊಡನೆದ್ದು ಕೈಗಳಂ ಮುಗಿದು ತಮತಮಗೆ ನಿಂದು
ಉರಿದುವೀ ನಿಮ್ಮಯ ತಪೋಜಪಧ್ಯಾನಂಗ
ಳಿರವದೇಂ ಥಾನಸಮದೊರ್ವ ಮಾಯಾವಿ ನಿ
ಮ್ಮರಸಿಯರನೊಲಿಸಿ ಕೊಂಡೊಯ್ದಪಂ ಬಿಡಿಸಿಕೊಳಿಮೇಳೆಂದೊರಲ್ದರಂದು ೨೩

ಸಿದರು. ೨೧. ಶಿವ ಶಿವಾ ! ಸಹಜ ಗುಣವಲ್ಲದೆ ಬೇರೇನನ್ನೂ ತಿಳಿಯದ ಮುಗ್ಧೆಯರು ಈ ಪ್ರೇಮಿಯನ್ನು ನೋಡಿ ಮರುಳಾಗುವುದು ಸೋಜಿಗವೆ ? ಆ ತರಳೆಯರು ಬೆಂಕಿಯ ಪಕ್ಕದಲ್ಲಿದ್ದ ಬೆಣ್ಣೆಯಂತೆ ಕರಗಿದರು. ಸೂಜಿಗಲ್ಲಿನ ಸಮೀಪದಲ್ಲಿರುವ ಕಬ್ಬಿಣದಂತೆ ಅವನು ತಿರುಗಿದ ಕಡೆಗೆ ವೇಗವಾಗಿ ಇವರೂ ತಿರುಗಿ ಬೆಂಡಾಗಿ (ಆ ಸ್ತ್ರೀ ಸಮೂಹವು) ಸೂತ್ರವನ್ನು ಹಿಡಿದವನು ಆಡಿಸುವ ಬೊಂಬೆಗಳಂತೆ ಕಾಣಿಸಿದರು. ೨೨. ಆಶ್ಚರ್ಯ ವನ್ನು ಕೇಳಯ್ಯಾ, ಸಿದ್ಧರಾಮ. ಮುನಿಗಳಿಗೆ ಕೋಪವನ್ನು ಹೆಚ್ಚಿಸಬೇಕೆಂದು ಈಶ್ವರನು ವಿನೋದಕ್ಕಾಗಿ ಕಣ್ಣುಮುಚ್ಚಿ ತನ್ನನ್ನೇ ಧ್ಯಾನಿಸುವ ಆ ಸತಿಯರ ಕೈಯನ್ನು ಮುಟ್ಟಿದ, ತಕ್ಷಣ ಅಪ್ಸರಸಮಾನವಾದ, ಶಿವನ ರೂಪಸಾದೃಶ್ಯಹೊಂದಿ ಥಳಥಳಿಸುವ ಅಚ್ಚ ಮುತ್ತಿನ ಬೊಂಬೆಗಳಂತೆ ಇದ್ದ ಮಕ್ಕಳು ಅಳುತ್ತ ಅವರ ಬಸಿರಿನಿಂದ ಹೊರಬಿದ್ದುವು, ಶಿವನ ಮಹಾತ್ಮೆಯನ್ನು ಯಾರು ಬಣ್ಣಿಸಬಲ್ಲರು ? ೨೩. ಅಲ್ಲಲ್ಲಿ ಚುರುಕಾದ ವಟುಗಳ ಗುಂಪು ಸೇರಿತು, ತಮ್ಮ ಗುರುಗಳೊಂದಿಗೆ ಈ ವಿಷಯ ಹೇಳಬೇಕೆಂದು ಓಡಿಬಂದು ನಮಸ್ಕರಿಸಿ ಮೇಲೆದ್ದು, ಕೈಗಳನ್ನು ಮುಗಿದು ತಮ್ಮಷ್ಟಕ್ಕೆ ತಾವು ಎದ್ದುನಿಂತು ನಿಮ್ಮ ಜಪ ತಪ ಧ್ಯಾನಗಳಿಗೆ ಬೆಂಕಿ ಬೀಳಲಿ, ಇದೇನು ವಿಳಂಬ ಸ್ವಭಾವ ನಿಮ್ಮದು? ಅಲ್ಲಿ ಒಬ್ಬ ಮಾಯಾವಿ ನಿಮ್ಮ ಹೆಂಡತಿಯನ್ನು ಒಲಿಸಿಕೊಂಡು ಕರೆದುಕೊಂಡು ಹೋಗುತ್ತಿದ್ದಾನೆ,

CC-0. Jangamwadi Math Collection. Digitized by eGangotri

ಕೇಳಿ ಕಣ್ದೆರೆದು ಜಪಮಂ ಮರೆದು ಕೋಪಮಂ
ತಾಳಿ ತಪಮಂ ತೊರೆದು ಮೌನಮಂ ಮರೆದು ನೆರೆ
ಬೇಳುತಿರ್ಪಾಹುತಿಯನಿಟ್ಟು ಷಟ್ಕರ್ಮಮಂ ಬಿಟ್ಟು ನೆರೆ ಬೆರಗುವಟ್ಟು
ಕಾಳಕೂಟಕ್ಕೆಳಸಿದವರಾರ್ ಮಹಾರುದ್ರ
ಭಾಳಲೋಚನದ ಕಿಚ್ಚಿಂ ಕಾವರಾರೆಂದು
ಘೀಳಿಡಲ್ ದೆಸೆಗಳಾರ್ಭಟಿಸುತೆದ್ದುದು ಮಹಾಮುನಿಗಳದನೇನೆಂಬೆನು ೨೪

ತೋರು ತೋರಾವೆಡೆಯೊಳಿರ್ಪನಿಂದಿನ ಜೇಟಿ
ಕಾರನವನಂ ಕರೆ ವಿಚಾರಿಸವನೀ ಪರಿಯ
ದೂರನೆಂದೊರ್ವ ಸಿಂಹೋಗ್ರನೆಂದೆಂಬ ವಟುವಂ ಕರೆದು ನೇಮವೀಯೆ
ತೂರಿ ಕಂಗಳ್ ಕಿಡಿಗಳಂ ಸೂಸೆ ಮೈ ಬೆಮರ್
ತಾರೆ ಬೇಗದೊಳೀಶನೆಡೆಗೆ ಬಂದೆಲೆ ಮಾಯ
ಕಾರ ನಿನ್ನಂ ಮಹಾಋಷಿಗಳೊಡಗೊಂಡು ಬರವೇಳ್ದರೆನಲಿಂತೆಂದನು ೨೫

ಒಸಗೆಯೇಂ ಋಷಿಗಳೆಮ್ಮಂ ಕರೆಯಬರಲದೇಂ
ಬೆಸನವೆಮಗೀ ಭಿಕ್ಷಮಲ್ಲದವರೆಡೆಗೆ ಬಹ
ಗಸಣೆಯೇಂ ಬಂದಂತೆ ನೀಂ ನಡೆಯೆನಲ್ಕೆ ಸಿಂಹೋಗ್ರನತಿಕೋಪದಿಂದೆ

ಏಳಿರಿ, ಅವರನ್ನು ಬಿಡಿಸಿಕೊಳ್ಳಿ—ಎಂದು ಕೂಗಿದರು. ೨೪. ಇದನ್ನು ಕೇಳಿ ಋಷಿಗಳು ಕಣ್ಣುಬಿಟ್ಟರು. ತಾವು ಮಾಡುತ್ತಿದ್ದ ಜಪವನ್ನು ಮರೆತರು, ಕೋಪವನ್ನು ತಾಳಿದರು, ತಪಸ್ಸನ್ನು ತೊರೆದರು. ಮೌನವನ್ನು ಮರೆತರು. ಯಜ್ಞಕ್ಕೆ ಆಹುತಿಯನ್ನು ಕೊಡುತ್ತಿದ್ದುದನ್ನು ಅಲ್ಲೇ ಇಟ್ಟರು, ಷಟ್ಕರ್ಮವನ್ನು ತ್ಯಜಿಸಿದರು, ವಿಶೇಷವಾಗಿ ಆಶ್ಚರ್ಯ ಹೊಂದಿ. ಕಾಳಕೂಟವಿಷಕ್ಕೆ ಆಸೆ ಮಾಡಿದವರು ಯಾರು ? ಮಹಾರುದ್ರನ ಹಣೆಗಣ್ಣಿನ ಬೆಂಕಿಯಿಂದ ರಕ್ಷಿಸುವವರು ಯಾರು ಎಂದು ಆ ಮಹಾಮುನಿಗಳು ದಿಕ್ಕುದಿಕ್ಕುಗಳಲ್ಲಿ ಪ್ರತಿಧ್ವನಿಸುವಂತೆ ಕೂಗುತ್ತ ಎದ್ದರು. ೨೫. ತೋರಿಸು ಎಲ್ಲಿದ್ದಾನೆ ಇಂದಿನ ಮಾಯಾವಿ. ತೋರಿಸು, ಅವನನ್ನು ಕರೆ, ಈ ರೀತಿಯ ದೂರನ್ನು ವಿಚಾರಿಸು ಎಂದು ಸಿಂಹೋಗ್ರ ಎಂಬ ವಟುವನ್ನು ಕರೆದು ಆಜ್ಞೆ ಮಾಡಿದರು, ಅವನ ಕಣ್ಣುಗಳಲ್ಲಿ ಕಿಡಿ ಸಿಡಿಯುತ್ತಿತ್ತು. ಮೈ ಬೆವರುತ್ತಿತ್ತು. ಅವನು ವೇಗವಾಗಿ ಈಶ್ವರನ ಬಳಿಗೆ ಬಂದು. ಎಲೈ ಮಾಯಗಾರನೇ, ನಿನ್ನನ್ನು ಕರೆದುಕೊಂಡು ಬರುವಂತೆ ಮಹಾಋಷಿಗಳು ಹೇಳಿದರು ಎನ್ನಲು ಅವನು ಈ ರೀತಿ ಹೇಳಿದನು. ೨೬. ಏನು ಸಂಗತಿ? ಋಷಿಗಳು ನನ್ನನ್ನು ಕರೆಕಳುಹಲು ಏನು ಕಾರಣ ? ನಮಗೆ ಈ ಭಿಕ್ಷೆಯಲ್ಲದೆ ಅವರ ಬಳಿಗೆ ಬರುವ ಗೋಜು ಏನಿದೆ ? ನೀನು ಬಂದ ದಾರಿಯಲ್ಲಿ ಹೋಗು ಎನ್ನಲು, ಸಿಂಹೋಗ್ರನು ಅತಿಯಾದ

CC-0. Jangamwadi Math Collection. Digitized by eGangotri

ಮಸಗಿದ ಮೃಗೇಂದ್ರನಂತಾರ್ಭಟಿಸುತ್ತೆಗ್ಗಮಾ
ನಸರ ಕುಲಗುರುವೆಯಿಾಗಳೆ ನಿಂದ ನಿಲವಿನಿಂ
ಭಸಿತವಾಗೆಂದು ಸರ್ವೇಶನಂ ಶಪಿಸಿದಂ ಪೇಳಲೇನಚ್ಚರಿಯನು ೨೬

ಜಂಬುಕನ ಕೋಪದೊಳ್ ವಾರಣದ ರೋಮಂಗ
ಳೇಂ ಬಳ್ಕಿದಪ್ಪವೆ ಮುನಿವಟು ಶಪಿಸಲಭವಂಗೆ
ಯುಂ ಬಪ್ಪುದೇ ಹಾನಿ ಕೇಳ್ದು ನಸುನಗುತೀಶ್ವರಂ ಮುಂದೆ ನಡೆವುತಿರಲು
ಎಂಬುದೇನಚ್ಚರಿವಡುತ್ತಧಿಕತೀವ್ರದಿಂ
ದಂ ಬಂದು ಮುನಿಗಳೊಡನೀ ವಾರ್ತೆಯುಂ ಪೇಳೆ
ನಂಬದಾತನ ವಚನಮಂ ತಾವೆ ಬಂದರುರಿವುತೆ ಹೊಗೆವುತೀಶನೆಡೆಗೆ ೨೭

ಬಂದು ಕಾಣುತ್ತೆಲ್ಲರುಂ ಶಪಿಸಲಣುಮಾತ್ರ
ಮೆಂದು ಬಗೆಯದುದನೀಕ್ಷಿಸಿ ಮತ್ತೆ ದರ್ಭೆಯಿಂ
ದಂ ದಿವ್ಯಮಂತ್ರಮಂ ಮಂತ್ರಿಸಿಡೆ ಕಾಲಾಗ್ನಿಯಂತೈದಿ ಶಿವನಿದಿರೊಳು
ನಂದಿ ಪೋಗಲ್ ಬಳಿಕ ನಾನಾ ಪ್ರಕಾರದಿಂ
ಕೊಂದಪೆನೆನುತ್ತೆಸಗಿದನಿತುಮಂ ಬಯಲಾಗೆ
ನಿಂದು ಮಾರಣಹೋಮಮಂ ತೊಡಗಿದರವರವನೇನೆಂಬೆನದ್ಭುತವನು ೨೮

ಕೋಪದಿಂದ ಕೆರಳಿದ ಸಿಂಹದಂತೆ ಆರ್ಭಟಿಸುತ್ತ, ಎಲೈ ಗಾಂಪರ ಗುರುವೆ, ನೀನು ಈಗಲೇ ನಿಂತಹಾಗೆಯೇ ಸುಟ್ಟು ಬೂದಿಯಾಗು ಎಂದು ಈಶ್ವರನನ್ನು ಶಪಿಸಿದನು. ಆಶ್ಚರ್ಯವನ್ನು ಏನೆಂದು ಹೇಳಲಿ ? ೨೭. ನರಿಯು ಕೋಪಗೊಂಡರೆ ಆನೆಯ ಕೂದಲುಗಳೇನಾದರೂ ಅಲ್ಲಾಡುತ್ತವೆಯೆ ? ಮುನಿಶಿಷ್ಯನು ಶಾಪಕೊಟ್ಟರೆ ಶಿವನಿಗೇನಾದರೂ ಹಾನಿ ಉಂಟಾಗುತ್ತದೆಯೆ ? ಅವನ (ಸಿಂಹೋಗ್ರವಟುವಿನ) ಮಾತನ್ನು ಕೇಳಿ ಈಶ್ವರನು ನಸುನಗುತ್ತ ಮುಂದೆ ನಡೆದನು. ಅತಿ ಆಶ್ಚರ್ಯವನ್ನು ಹೊಂದಿ ಸಿಂಹೋಗ್ರನು ಅತಿವೇಗದಿಂದ ಬಂದು ಋಷಿಗಳಿಗೆ ಸಂಗತಿಯನ್ನು ಹೇಳಿದನು. ಆ ಮುನಿಗಳು ಅವನ ಮಾತನ್ನು ನಂಬದೆ, ಸಿಟ್ಟಿನಿಂದ ಉರಿಯುತ್ತ, ಬುಸುಗುಟ್ಟುತ್ತ, ತಾವೇ ಈಶ್ವರನ ಬಳಿಗೆ ಬಂದರು. ೨೮. ಬಂದು ನೋಡಿ ಎಲ್ಲರೂ ಶಾಪಕೊಟ್ಟರು. ಈಶ್ವರನು ಸ್ವಲ್ಪವೂ ಲಕ್ಷಿಸದೆ ಇರಲು, ಅದನ್ನು ನೋಡಿ ಮತ್ತೆ ದರ್ಭೆಯನ್ನು ತೆಗೆದುಕೊಂಡು ದಿವ್ಯಮಂತ್ರವನ್ನು ಮಂತ್ರಿಸಿ ಬಿಡಲು, ಅದು ಕಾಲಾಗ್ನಿಯಂತೆ ಬಂದು ಶಿವನ ಎದುರಿನಲ್ಲಿ ನಂದಿ ತಣ್ಣಗಾಗಲು, ನಂತರ ಅನೇಕ ರೀತಿಯಲ್ಲಿ ಕೊಲ್ಲಲು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾಯಿತು. ಆಗ ಆ ಮುನಿಗಳು ಮಾರಣಹೋಮವನ್ನು ಮಾಡಲು ಸಿದ್ಧರಾದರು. ಆ



CC-0. Jangamwadi Math Collection. Digitized by eGangotri

ಯೋಜನದ ವಿಸ್ತೀರ್ಣದೊಳ್ ಕುಂಡಮಂ ಸೃಜಿಸಿ
ಮೂಜಗದ ಸಿದ್ಧಸಮಿತುಗಳೊಳವರಾಜ್ಯದಿಂ
ದಾ ಜಗತ್‌ಸಿದ್ಧ ನಾಲ್ವತ್ತೆಂಟುಸಾವಿರ ಮಹಾಮುನಿಗಳಲ್ಲಿ ಕುಳಿತು
ಆ ಜಾತವೇದನೊಳ್ ಘೋರಮಂತ್ರಂಗಳಿಂ
ದೀ ಜೇಟಕಾರನಂ ದಹಿಸೆನುತ್ತಾಹುತಿಸ
ಮಾಜದಿಂ ಬೇಳುತಿರ್ದರ್ ಕೋಟಿಶತಕೋಟಿಗಳನೊರ್ವರೊರ್ವರಂದು ೨೯

ಹೊಗೆಹೊಗೆದು ಸುತ್ತಲೆತ್ತೆತ್ತಲುಂ ಸಲೆ ಸುತ್ತು
ವೊಗೆಯ ಚೂಣಿಯನೊತ್ತಿ ನೂಂಕಿ ನೆರೆ ಭುಗಿಭುಗಿಲ್
ಭುಗಿಲೆನುತ್ತುರಿವ ಶಿಖಿ ನಾಲಗೆಯೊಳೊಂದರಿಂದೊಂದುಗ್ರವಾಗಿ ಕೂಡೆ
ನೆಗೆದುವಂದುಗ್ರವ್ಯಾಘ್ರಂ ಘೋರಸರ್ಪಂಗ
ಳಗಣಿತಾಯುಧಮೇಳೆ ಭೂತಗಣಶಕ್ತಿಗಳ್
ಮಿಗುವಪಸ್ಮಾರವೆಂಬದ್ಭುತದ ರೂಪಂಗಳಾರ್ಭಟಿಸುತಿಂತೆಂದುವು ೩೦

ಬೆಸಸು ಬೆಸಸಾಹುತಿಯನೆಮಗೆನುತ್ತೊಡನೆ ಗ
ರ್ಜಿಸುವನಿತುಮಂ ನೋಡಿ ಸನ್ನೆಯಿಂದೀಶನಂ
ಮುಸುಕಿ ನುಂಗಲ್ ಪೇಳಲೊಡನೀಶನಂ ಕಾಣುತಾರ್ಭಟಿಸಿ ಮೇಲ್ವಾಯಲು

ಅದ್ಭುತವನ್ನು ಏನೆಂದು ಹೇಳಲಿ ? ೨೯. ಒಂದು ಯೋಜನ ವಿಸ್ತೀರ್ಣವುಳ್ಳ ಒಂದು ಯಜ್ಞಕುಂಡವನ್ನು ಸೃಷ್ಟಿಸಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ನಾಲ್ವತ್ತೆಂಟು ಸಾವಿರ ಮಹಾಮುನಿಗಳು ಅಲ್ಲಿ ಕುಳಿತರು. ಮೂರು ಲೋಕಗಳಲ್ಲಿರುವ ಸಿದ್ಧವಾದ ಸಮಿತ್ತುಗಳಿಂದ ಆಜ್ಯಾಹುತಿ ಕೊಟ್ಟು ಘೋರವಾದ ಮಂತ್ರಗಳಿಂದ ಈ ಜಟೆಯುಳ್ಳವ ನನ್ನು ದಹಿಸು ಎಂದು ಅಗ್ನಿಯನ್ನು ಪ್ರಾರ್ಥಿಸುತ್ತ ಒಬ್ಬೊಬ್ಬ ಕೋಟಿ, ನೂರುಕೋಟಿ ಆಹುತಿಯನ್ನು ಯಜ್ಞಮಾಡಿ ಸಮರ್ಪಿಸುತ್ತಿದ್ದರು. ೩೦. ಎಲ್ಲೆಡೆಯಲ್ಲಿಯೂ ಹೊಗೆ ತುಂಬಿತು. ಸುತ್ತಲೂ ಎಲ್ಲೆಲ್ಲಿಯೂ ಸುತ್ತುವರಿಯುತ್ತಿರುವ ಹೊಗೆಯ ಮುಂಭಾಗ ವನ್ನು ಭೇದಿಸಿಕೊಂಡು ಭುಗಿಲ್ ಭುಗಿಲ್ ಭುಗಿಲೆಂದು ಉರಿಯುತ್ತಿರುವ ಬೆಂಕಿಯ ಜ್ವಾಲೆಗಳು ಒಂದಕ್ಕಿಂತ ಒಂದು ಉಗ್ರವಾಗಿ ಮೇಲಕ್ಕೆ ನೆಗೆದುವು. ಆಗ ಭಯಂಕರ ಸರ್ಪಗಳು, ಉಗ್ರವಾದ ಹುಲಿಗಳು, ಅಸಂಖ್ಯಾತವಾದ ಆಯುಧಗಳು ಎದ್ದು ಕಾಣಿಸಿ ಕೊಂಡುವು. ಭೂತಗಣಗಳು, ಶಕ್ತಿಗಳು, ಅವಕ್ಕಿಂತ ಮಿಗಿಲಾದ ಅಪಸ್ಮಾರ ಎಂಬ ಅದ್ಭುತರೂಪಗಳು ಆರ್ಭಟಿಸುತ್ತ ಈರೀತಿ ಹೇಳಿದುವು. ೩೧. ನಮಗೆ ಆಹುತಿ ಯಾವುದು ಹೇಳು, ಹೇಳು, ಎನ್ನುತ್ತ ಒಂದೇಸಮನೆ ಘರ್ಜಿಸುತ್ತಿದ್ದುವು. ಅವುಗಳನ್ನು ನೋಡಿ ಆ ಋಷಿಗಳು ಸನ್ನೆಯಿಂದ ಈಶ್ವರನನ್ನು ಮುತ್ತಿ ನುಂಗಲು ಹೇಳಿದ ತಕ್ಷಣವೇ ಈಶ್ವರನನ್ನು ನೋಡುತ್ತ ಅವೆಲ್ಲವೂ ಆರ್ಭಟಿಸುತ್ತ ಮೇಲೆ ಬೀಳಲು ಶಿವನು ನಸು

CC-0. Jangamwadi Math Collection. Digitized by eGangotri

ನಸುನಗುತ್ತೆರಳೆಯಂ ತಾಳ್ದು ಪುಲಿಯುಂ ಸೀಳ್ದು
ಪೊಸಸಮ್ಮವುಟ್ಟು ಫಣಿಗಳ ತೊಟ್ಟು ಕೈದುಗಳ
ನೆಸಕದಿಂ ಧರಿಸಿ ಶಕ್ತಿಯನೊರಸಿ ಮತ್ತೆ ಬರ್ಪುರಿಯುನಾಂತಂ ಕರದೊಳು ೩೧

ಮತ್ತಪಸ್ಮಾರವತಿಕೋಪದಿಂ ರುದ್ರನಂ
ಮುತ್ತೆ ಮುಂದಲೆವಿಡಿದು ಕೆಡಹಿ ಪಾದಂಗಳಿಂ
ತೊತ್ತಳಂದುಳಿದು ತಾಂಡವರೂಪಮಂ ಧರಿಸಿ ಕುಣಿವುತಿರೆ ಭೂತಂಗಳು
ತತ್ತಧಿಮಿಧಿಮಿಕೆಂದು ತಾಳಮದ್ದಳೆಗಳುಮ
ನೊತ್ತಿ ಪಾಡುತ್ತಿರಲ್ ವಿಸ್ಮಯಂಬಟ್ಟು ಮುನಿ
ಪೋತ್ತಮರ್ ಶಿವನೆಂದು ನಿಶ್ಚಯಿಸಿ ನಿಗುರ್ವ ನಾಲಗೆಯಿಂದೆ ಪೊಗಳ್ದರಂದು ೩೨

ರಕ್ಷಿಸಿಂತರಿಯದತಿಮರುಳ್ಗಳಂ ಪರಮೇಶ
ರಕ್ಷಿಸೈ ಕಂಡು ಕಾಣದ ಪುಟ್ಟುಗುರುಡರಂ
ರಕ್ಷಿಸೈ ಕೇಳ್ದು ಕೇಳದ ಮೂರ್ಖ ಬಧಿರರಂ ನೀನೆನುತ್ತಡಿಗೆರಗಲು
ಈಕ್ಷಿಸಿ ಕೃಪಾವಲೋಕನದೊಳವರೆಲ್ಲರನು
ಪೇಕ್ಷೆಯಿಲ್ಲದೆ ಸಂತವಿಟ್ಟು ಬೀಳ್ಕೊಳೆ ತಮಗೆ
ಶಿಕ್ಷೆಗೆಯ್ಯುಮಳಜ್ಞಾನೋಪದೇಶವನೆಂದು ಬಿನ್ನಪಂಗೆಯ್ದರಂದು ೩೩

ನಗುತ್ತ ಜಿಂಕೆಯನ್ನು ಹಿಡಿದು ಧರಿಸಿದನು, ಹುಲಿಯನ್ನು ಸೀಳಿ ಹೊಸ ಚರ್ಮವನ್ನು ಉಟ್ಟನು, ಹಾವುಗಳನ್ನು ಭೂಷಣಗಳಂತೆ ತೊಟ್ಟನು, ಆಯುಧಗಳನ್ನು ಪ್ರತಾಪ ದಿಂದ ಹಿಡಿದು ಧರಿಸಿದನು, ಶಕ್ತಿಯನ್ನು ನಾಶಗೊಳಿಸಿದನು, ಮತ್ತೆ ತನ್ನನ್ನು ನುಂಗಲು ಬರುತ್ತಿದ್ದ ಉರಿಯನ್ನು ಕೈಯಲ್ಲಿ ಹಿಡಿದನು. ೩೨. ಮತ್ತೆ ಅಪಸ್ಮಾರವು ಅತಿಯಾದ ಕೋಪದಿಂದ ರುದ್ರನನ್ನು ಆಕ್ರಮಿಸಿತು. ರುದ್ರನು ಅದರ ಮುಂದಲೆಯನ್ನು ಹಿಡಿದುಕೊಂಡು ಕೆಳಕ್ಕೆ ಕೆಡವಿ ಪಾದಗಳಿಂದ ತೊತ್ತಳದುಳಿದು, ತಾಂಡವರೂಪವನ್ನು ಧರಿಸಿ ಕುಣಿಯುತ್ತಿರಲು ಭೂತಗಳು ತತ್ತಧಿಮಿಧಿಮಿಕೆಂದು ತಾಳಮದ್ದಳೆಗಳನ್ನು ಬಾರಿಸಿ ಹಾಡುತ್ತಿದ್ದುವು. ಋಷಿಗಳೆಲ್ಲರೂ ಅದನ್ನು ವಿಸ್ಮಯದಿಂದ ನೋಡಿ ಇವನು ಶಿವನೆಂದು ನಿಶ್ಚಯಿಸಿ ಅಂದು ಅವನನ್ನು ಬಾಯಿ ತುಂಬ (ನಾಲಗೆಯನ್ನು ಉದ್ದಕ್ಕೆ ಚಾಚಿ) ಹೊಗಳಿದರು. ೩೩, ಅಜ್ಞಾನಿಗಳಾದ ಮರುಳುಗಳನ್ನು ಪರಮೇಶನೇ ಕಾಪಾಡು. ಕಣ್ಣಿದ್ದೂ ನೋಡಿ ತಿಳಿಯದ ಹುಟ್ಟುಗುರುಡರಾದ ನಮ್ಮನ್ನು ಕಾಪಾಡು. ಕಿವಿಯಿದ್ದೂ ಕೇಳದ ಮೂರ್ಖರಾದ ಕಿವುಡರನ್ನು ನೀನು ರಕ್ಷಿಸು ಎನ್ನುತ್ತ ಅವರೆಲ್ಲರೂ ಶಿವನ ಪಾದಗಳಿಗೆ ನಮಸ್ಕರಿಸಿದರು. ಅವರೆಲ್ಲರನ್ನೂ ಈಶ್ವರನು ಕೃಪಾದೃಷ್ಟಿಯಿಂದ ನೋಡಿ, ಉಪೇಕ್ಷೆ ಮಾಡದೆ ಎಲ್ಲರನ್ನೂ ಸಮಾಧಾನಪಡಿಸಿ ಬೀಳ್ಕೊಟ್ಟನು. ಆಗ ಅವರು ನಮಗೆ ನಿರ್ಮಲ

CC-0. Jangamwadi Math Collection. Digitized by eGangotri

ಎನಲೀಶ್ವರಂ ಕರುಣದಿಂ ಕರಕಪಾಲಮಂ
ಮನವೊಲಿದು ಭೈರವನ ಕೈಗಿತ್ತು ಕೂಡೆ ಮುನಿ
ಜನಕೆ ತ್ತತ್ವಜ್ಞಾನಮಂ ಬೋಧಿಪುಜ್ಜುಗದೆ ದಕ್ಷಿಣಾಮೂರ್ತಿರೂಪಂ
ಅನುನಯದೊಳಾಂತು ಬೋಧಿಸಿ ಮುನಿಪರಂತವರ
ವನಿತೆಯರ್ ಸಹವಾಗಿ ಬೀಳ್ಕೊಟ್ಟು ಗಿರಿರಾಜ
ತನುಜೆಯಂ ನೆನೆದೈದಿ ಕೈಲಾಸಮಂ ಪೊಕ್ಕು ವಿಭವದಿಂದಿರುತಿರ್ದನು ೩೪

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೫

### ಇಪ್ಪತ್ತನೆಯ ಸಂಧಿ ಸಂಪೂರ್ಣ

ಜ್ಞಾನೋಪದೇಶವನ್ನು ನೀಡು ಎಂದು ಪ್ರಾರ್ಥಿಸಿದರು. ೩೪. ಅವರ ಬಿನ್ನಹ ವನ್ನು ಕೇಳಿ ಈಶ್ವರನು ಕರುಣೆಯನ್ನು ತಾಳಿ, ತನ್ನ ಕೈಯಲ್ಲಿದ್ದ ಕಪಾಲವನ್ನು ಭೈರವನ ಕೈಗೆ ಕೊಟ್ಟು, ಅಲ್ಲಿ ಸೇರಿದ್ದ ಎಲ್ಲ ಮುನಿಗಳಿಗೂ ತತ್ತ್ವಜ್ಞಾನವನ್ನು ಬೋಧಿಸುವ ಉದ್ದೇಶದಿಂದ ದಕ್ಷಿಣಾಮೂರ್ತಿ ಅವತಾರವನ್ನು ಮನಪ್ರೊಲಿದು ಕೈಕೊಂಡು, ಪ್ರೀತಿ ಯಿಂದ ಎಲ್ಲರಿಗೂ ಉಪದೇಶಿಸಿ, ಮುನಿಗಳನ್ನೂ ಮತ್ತು ಅವರ ಪತ್ನಿಯರನ್ನೂ ಒಟ್ಟಿಗೆ ಬೀಳ್ಕೊಟ್ಟು, ಗಿರಿಜೆಯನ್ನು ನೆನೆದು ಹೊರಟು ಕೈಲಾಸವನ್ನು ಪ್ರವೇಶಿಸಿ ವೈಭವದಿಂದ ಇರುತ್ತಿದ್ದನು. ೩೫. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆ ಯವರೆವಿಗೂ ಹೇಳಿದವರಿಗೆ, ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇ ಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

### ಇಪ್ಪತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತೊಂದನೆಯ ಸಂಧಿ

ಸೂಚನೆ : ಭೃಗುಶಾಪದಿಂದೆ ಹರಿ ಮತ್ಸ್ಯಾವತಾರದಿಂ
ನಿಗಮಂಗಳಂ ತಂದು ಬಳಿಕಹಂಕರಿಸಲಾ
ವಿಗಡಮೀನಂ ಕೊಂದು ಕಂಕಾಳಧರಲೀಲೆಯಿಂದಲಭವಂ ಮೆರೆದನು

ಹರಿಭೂಷ ಹರಿದಹನ ಹರಿವಸನ ಹರಿಶಯನ
ಹರಿತನುಜ ಹರಿಮುಖ್ಯ ಸುರವಿನುತ ಹರಿಚರಣ
ಹರಿಹರಿ ಹರಿಪ್ರಸಖ ಹರಿನಯನ ಹರಿಜನಕತನಯಾನುಜಾತವರದ
ಹರಿತನಯಸಂಹಾರ ಹರಿಕಲಾಲಂಕಾರ
ಹರಿಜಾತಜಾತಜಾತಪ್ರಮದವಿಧ್ವಂಸ
ಹರಿಕೋಟಿಸಂಕಾಶ ಪಂಪಾವಿರೂಪಾಕ್ಷ ರಕ್ಷಿಸಾನತಜನರನು ೧

ಆದಿಯೊಳ್ ರಾಮ ಕೇಳ್ ತಮನೆಂಬ ಖಳನಖಿಳ
ವೇದಮಂ ಕದ್ದಬ್ಧಿಯೊಳ್ ಮುಳುಂಗಲ್ ಕೆಟ್ಟು
ಪೋದುವವನಿಯ ಸದಾಚಾರ ಸುತಪೋಧರ್ಮ ಜಪ ನೇಮ ಹೋಮಂಗಳು
ಆ ದಿವ್ಯಮಂತ್ರ ಮುಖ ಹವ್ಯಕವ್ಯಾದಿ ನಾ
ನಾ ದಿವಿಜತರ್ಪಣಂಗಳ್ ಬಳಿಕೆ ದೇವತತಿ
ಗಾದುದೈಶ್ವರ್ಯನಾಶಂ ಬಹುಕ್ಲೇಶಮುಪಸಂತೋಷಮೇನೆಂಬೆನು ೨

ಸೂಚನೆ : ಭೃಗುಮಹರ್ಷಿಯ ಶಾಪದಿಂದ ವಿಷ್ಣುವು ಮತ್ಸ್ಯಾವತಾರವನ್ನು ಎತ್ತಿ ವೇದಗಳನ್ನು ಮೇಲಕ್ಕೆ ತಂದನು. ಅನಂತರ ಅವನಿಗೆ ಅಹಂಕಾರವುಂಟಾಯಿತು. ಆಗ ಆ ಭಯಂಕರವಾದ ಮೀನನ್ನು ಕೊಂದು ಪರಶಿವನು ಕಂಕಾಳಧರಲೀಲೆಯಿಂದ ಮೆರೆದನು. ೧. ಹೇ ಸರ್ಪಭೂಷಣ, ಮೃತ್ಯುಂಜಯ, ಹಳದಿಯ (ವ್ಯಾಘ್ರ) ಚರ್ಮವನ್ನು ಧರಿಸಿದವನೇ, ವಿಷ್ಣು-ಬ್ರಹ್ಮ–ದೇವೇಂದ್ರ ಮುಂತಾದ ದೇವತೆಗಳಿಂದ ಹೊಗಳಿಸಿಕೊಳ್ಳುವ ಶ್ರೇಷ್ಠವಾದ ಪಾದವುಳ್ಳವನೇ. ಬ್ರಹ್ಮ-ವಿಷ್ಣು-ಇಂದ್ರರಿಗೆ ಉತ್ತಮ ಸ್ನೇಹಿತನೇ, ಅಗ್ನಿನೇತ್ರ, ಯಮುನ ತಂದೆಯಾದ ಸೂರ್ಯಸಮಾನ ಕರ್ಣ, ಅವನ ತಮ್ಮ ಅರ್ಜುನನಿಗೆ ವರಕೊಟ್ಟವನೇ, ಮನ್ಮಥನನ್ನು ಸುಟ್ಟವನೇ, ಶಶಿಭೂಷಣನೇ, ಬ್ರಹ್ಮನಲ್ಲಿ ಹುಟ್ಟಿದ ಮದವನ್ನು ನಾಶಮಾಡಿದವನೇ ಕೋಟಿ ಸೂರ್ಯಪ್ರಕಾಶವುಳ್ಳ ಪಂಪಾ ವಿರೂಪಾಕ್ಷನೇ ಶರಣಾಗತರನ್ನು ಕಾಪಾಡು. ೨. ಎಲೈ ಸಿದ್ಧರಾಮನೆ, ಕೇಳು, ಪೂರ್ವದಲ್ಲಿ ತಮನೆಂಬ ರಾಕ್ಷಸನು ಎಲ್ಲ ವೇದಗಳನ್ನೂ ಕದ್ದು, ಅವುಗಳ ಸಮೇತ ಸಮುದ್ರದಲ್ಲಿ ಮುಳುಗಿದನು. ಆಗ ಭೂಮಿಯಲ್ಲಿ ಸದಾಚಾರ, ಒಳ್ಳೆಯ ತಪಸ್ಸಿನ ಧರ್ಮ, ಜಪ, ನಿಯಮ, ಹೋಮಾದಿ ಕ್ರಿಯೆಗಳೆಲ್ಲ ಕೆಟ್ಟುಹೋದುವು, ದಿವ್ಯಮಂತ್ರದಿಂದ ಕೂಡಿದ ಯಜ್ಞ-ಯಾಗಾದಿಗಳು, ಹವಿಸ್ಸು ಮುಂತಾದವು, ದೇವತೆಗಳಿಗೆ ಸಲ್ಲುತ್ತಿದ್ದ ತರ್ಪಣ

CC-0. Jangamwadi Math Collection. Digitized by eGangotri

ಇಂತು ಕೆಲಕಾಲವಿರುತಿರ್ದು ನಾನಾ ದೇವ
ಸಂತತಿ ಹಿರಣ್ಯಗರ್ಭಂಗೆ ಮೊರೆಯಿಡಲುವಾ
ಕಾಂತನಿಂದಲ್ಲದಿದು ಪರಿಯದೆಂದವರನೊಡಗೊಂಡು ಶಿವನೆಡೆಗೆ ಬಂದು
ಸಂತಸದೊಳೆಲ್ಲರುಂ ಮೆಯ್ಯಿಕ್ಕಿ ಸಕಲವೃ
ತ್ತಾಂತಮಂ ಬಿನ್ನವಿಸೆ ಕೇಳ್ದೀಶ್ವರಂ ರಮಾ
ಕಾಂತಂಗೆ ನೇಮಿಸಲ್ ತದ್ವಿಷ್ಣು ಪೊರಮಟ್ಟನಭವನಡಿಗಳ್ಗೆ ಮಣಿದು ೩

ನಿಮಿಷದೊಳ್ ಶಂಭುವಂ ಬೀಳ್ಕೊಳುತ್ತುಂ ಮಹಾ
ನಿಮಿಷರೂಪಂದಾಳ್ದು ವಾರ್ಧಿಯಂ ಪೊಕ್ಕಂದ
ನಿಮಿಷರಿಪುವಂ ಕೊಂದು ನಿಗಮಂಗಳಂ ದೇವತತಿಗಿತ್ತಪಂಕ್ತಿಯೊಳು
ಕ್ರಮಿತವೈರಾಟ್ಕಾಯಮಂ ಧರಿಸಿ ಕೂಡೆ ಸಂ
ಕ್ರಮಿತನಿಖಿಳಾಬ್ಧಿಗಳ್ ಮೇರೆಯಂ ಮೀರಲಾ
ಕ್ರಮಿತಜಲದಿಂ ಧರಣಿಶರಧಿಯೊಂದಾದುವದನೇನೆಂಬೆನಚ್ಚರಿಯನಂ ೪

ಪೊಡೆಮಗುಳಲಬ್ಧಿಯಂತಿಂತಾಗಿ ತಾಯ್ಮಳಲ್
ಗಡಿಗಾಣಲುಣ್ಮುತಿರ್ಪುಸಿರ್ವೊಯ್ಗಳಿಂದೆ ಬುಡ
ಬುಡನೇಳ್ವ ಬುದ್ಬುದಂಗಳ್ ಹಿಮಾದ್ರಿಯವೊಲಾಕಾಶವಂ ಚುಂಬಿಸುತಿರೆ

ಮುಂತಾದುವು ಕೆಟ್ಟುಹೋದುವು. ಅನಂತರ ದೇವತೆಗಳ ಐಶ್ವರ್ಯ ನಾಶವಾಯಿತು, ಬಹಳ ತೊಂದರೆ ಉಂಟಾಯಿತು, ಅವರಿಗೆ ಉಂಟಾದ ದುಃಖ ಏನೆಂದು ಹೇಳಲಿ ? ೩. ಈ ರೀತಿ ಕೆಲವು ಕಾಲದವರೆಗೆ ಇದ್ದು ಎಲ್ಲ ದೇವತೆಗಳ ಸಮೂಹವು ಬ್ರಹ್ಮನ ಹತ್ತಿರ ಬಂದು ಮೊರೆಯಿಟ್ಟಿತು. ಅವನು ಶಿವನಿಂದಲ್ಲದೆ ಬೇರೆಯವರಿಂದ ಇದು ಪರಿಹಾರವಾಗದು ಎಂದು ತಿಳಿದು, ಅವರೆಲ್ಲರನ್ನೂ ಕರೆದುಕೊಂಡು ಶಿವನ ಬಳಿಗೆ ಬಂದನು, ಸಂತೋಷದಿಂದ ಅವರೆಲ್ಲರೂ ಶಿವನಿಗೆ ನಮಸ್ಕರಿಸಿ ಎಲ್ಲ ವಿಷಯಗಳನ್ನೂ ವಿಜ್ಞಾಪಿಸಿಕೊಂಡರು, ಎಲ್ಲವನ್ನೂ ಕೇಳಿದ ಈಶ್ವರನು ಆ ಕೆಲಸಕ್ಕೆ ವಿಷ್ಣುವನ್ನು ನೇಮಿಸಲು, ವಿಷ್ಣುವು ಈಶ್ವರನ ಪಾದಗಳಿಗೆ ನಮಸ್ಕರಿಸಿ ಹೊರಟನು. ೪. ನಿಮಿಷದಲ್ಲಿ ಶಿವನಿಂದ ಬೀಳ್ಕೊಳ್ಳುತ್ತ ದೊಡ್ಡ ಮೀನಿನ ರೂಪವನ್ನು ತಳೆದು ಸಮುದ್ರ ಪ್ರವೇಶಮಾಡಿ ದೇವತೆಗಳ ಹಗೆಯಾದ ಆ ರಾಕ್ಷಸನನ್ನು ಕೊಂದು, ವೇದಗಳನ್ನು ದೇವತೆಗಳ ವಶಕ್ಕೆ ಕೊಟ್ಟನು, ಆ ಅಹಂಕಾರದಿಂದ ಬೆಳೆದು ವಿರಾಟರೂಪವನ್ನು ತಾಳಿದನು. ಹೀಗೆ ಬೆಳೆದು ಸಮುದ್ರಗಳಲ್ಲಿ ಚಲಿಸುತ್ತಿದ್ದನು, ಆಗ ಸಮುದ್ರಗಳು ಮೇರೆಮೀರಿ ಭೂಮಿಯನ್ನು ಆಕ್ರಮಿಸಿದುವು, ಇದರಿಂದ ಭೂಮಿ ಮತ್ತು ನೀರು ಒಂದಾದುವು, ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೫. ಹೀಗೆ ಸಮುದ್ರವು ಮೇಲು-ಕೆಳಗಾಗಲು ತಳದಲ್ಲಿರುವ ಕೆಸರಿನಿಂದ ಕೂಡಿದ ಮರಳು ಮೇಲಕ್ಕೆ ಬರುತ್ತಿತ್ತು. ಇದರ ಹೊಡೆತದಿಂದ ನೀರುಗುಳ್ಳೆಗಳು ಬುಡಬುಡನೆ ಏಳುತ್ತಿದ್ದುವು,

CC-0. Jangamwadi Math Collection. Digitized by eGangotri

ಕುಡಿವಾಲಮಪ್ಪಳಿಸಲೊಗೆದ ತುಂತುರ್ ಜಗಕೆ
ಕಡೆಗಾಲಮಂ ಮಾಡಲಮರರೊಡನಜನೈದಿ
ಮೃಡನಡಿಗೆ ಬಿನ್ನೈಸಲಬ್ಧಿಗೈತಂದು ಮೀನಂ ಕಾಣುತಿಂತೆಂದನು ೫

ಕಟಕಟಾಯಿಾ ಮತ್ಸ್ಯಮಿಲ್ಲಿರಲ್ ಜಗಕೆ ಸಂ
ಕಟಮಪ್ಪುದಚ್ಚರಿಯೆ ನೋಡೆಂದು ಕೂಡೆ ಲಟ
ಕಟಿಸಿ ಕಡಲೊಳ್ ಪೊಕ್ಕು ಗುಡಿಗುಡಿಪ ಮೀನ ಬಗ್ಗುರಿಯನೊದೆದೌಂಕಿ ಕೂಡೆ
ಕಟವಾಯ್ಗೆ ಕೈಯನಿಟ್ಟರಡೆರಳ್ ಸೀಳಾಗಿ
ನಿಟಿನೆರಿಲ್ ನಿಟಿಲೆನಲ್ ನಿಟ್ಟೆಲುವಮುರೆ ಮುರಿದು
ನಿಟಿಲಾಕ್ಷನಂದು ಕಂಕಾಳಾಯುಧಂಬಿಡಿದನೆನೆ ರಾಮನಿಂತೆಂದನು ೬

ವಿರಚಿಸೆಲೆ ಚೆನ್ನಬಸವೇಶ ತದ್ವಿಷ್ಣುವಾ
ಹರನಾಜ್ಞೆಯೊಳ್ ಲೋಕಹಿತಮತ್ಸ್ಯರೂಪಮಂ
ಧರಿಸಿ ತಮನಂ ಕೊಂದು ವೇದಮಂ ತಂದ ಕಜ್ಜಂ ಮುಗಿದಮೇಲದೇಕೆ
ಶರಧಿಯೊಳಗಜ್ಞಾನದಿಂದಹಂಕರಿಸಿರ್ದ
ಪರಿಯದೇನೀಶ್ವರನದಂ ಮರಳ್ದಿಂತು ಸಂ
ಹರಿಸಲೇಂ ಕಾರಣಮೆನುತ್ತೆ ಬಿನ್ನವಿಸಿದಂ ನಿಟಿಲತಟಹಸ್ತನಾಗಿ ೭

ಮತ್ತು ಆಕಾಶವನ್ನು ಹಿಮಾಲಯದಂತೆ ಮುತ್ತಿಡುತ್ತಿದ್ದುವು. ಬಾಲದ ತುದಿಯಿಂದ ಅಪ್ಪಳಿಸಿದಾಗ ಉಂಟಾದ ತುಂತುರುಹನಿಗಳು ಜಗತ್ತನ್ನು ನಾಶಮಾಡುತ್ತಿದ್ದುವು. ಆಗ ಬ್ರಹ್ಮನು ದೇವತೆಗಳ ಜೊತೆಯಲ್ಲಿ ಬಂದು ಶಿವನ ಪಾದಕ್ಕೆ ನಮಸ್ಕರಿಸಿ ವಿಜ್ಞಾಪಿಸಲು. ಶಿವನು ಸಮುದ್ರದ ಬಳಿಗೆ ಬಂದು ಆ ಮೀನನ್ನು ಕಾಣುತ್ತ ಹೀಗೆ ಹೇಳಿದನು. ೬. ಅಯ್ಯಯ್ಯೊ ! ಈ ಮೀನು ಇಲ್ಲಿಯೇ ಇದ್ದರೆ ಜಗತ್ತಿಗೆ ಕಷ್ಟ ಬರುವುದರಲ್ಲಿ ಆಶ್ಚರ್ಯವಿಲ್ಲ ನೋಡಿ ಎನ್ನುತ್ತ ಆತುರದಿಂದ ಉತ್ಸಾಹ ತೋರಿ ಸಮುದ್ರವನ್ನು ಪ್ರವೇಶಿಸಿ, ಗುಡುಗುಡಿಸುತ್ತಿದ್ದ ಮೀನಿನ ಗಂಟಲಿನ ಎಲುಬನ್ನು ಕಾಲಿನಲ್ಲಿ ತುಳಿದು ಅಮುಕಿದನು. ತಕ್ಷಣವೇ ಕಟವಾಯಿಗೆ ಕೈಯಿಟ್ಟು ಎರಡು ಹೋಳಾಗಿ ಸೀಳಿದನು, ನಿಟಿ ನಿರಿಲ್ ನಿಟಿಲೆಂದು ಶಬ್ದವುಂಟಾಗಿ, ಬೆನ್ನೆಲುಬು ಮುರಿಯಿತು. ಶಿವನು ಅಂದು ಕಂಕಾಳಾಯುಧವನ್ನು ಹಿಡಿದನು ಎಂದು ಹೇಳಲು ಸಿದ್ಧರಾಮನು ಹೀಗೆಂದನು. ೭. ಎಲೈ ಚೆನ್ನಬಸವೇಶನೆ, ವಿವರವಾಗಿ ಹೇಳು, ವಿಷ್ಣುವು ಶಿವನ ಆಜ್ಞೆಯಂತೆ ಲೋಕಹಿತಕ್ಕಾಗಿ ಮೀನಿನ ರೂಪವನ್ನು ಧರಿಸಿ, ತಮನೆಂಬ ರಾಕ್ಷಸನನ್ನು ಕೊಂದು ವೇದಗಳನ್ನು ಮೇಲಕ್ಕೆ ತರುವ ತನ್ನ ಕೆಲಸ ಮುಗಿದ ಮೇಲೆ ಸಮುದ್ರದಲ್ಲಿದ್ದು ಅಜ್ಞಾನದಿಂದ ಅಹಂಕಾರಪಟ್ಟದ್ದು ಹೇಗೆ ? ಈಶ್ವರನು ಅವನನ್ನು ಪುನಃ ಹಾಗೆ ಸಂಹರಿಸಿದ ಕಾರಣವೇನು ಎನ್ನುತ್ತ ಹಣೆಗೆ

CC-0. Jangamwadi Math Collection. Digitized by eGangotri

ಅದನೊರೆದಪೆಂ ಸಿದ್ಧರಾಮ ಕೇಳಾದಿಕಾ
ಲದ ವೈರದಿಂದಮರದನುಜರ್ಗೆ ಕಾಳೆಗಂ
ಪುದಿಯಲಾ ದಿವ್ಯಸಾಹಸ್ರವರ್ಷಂಗಳೀರೈದಾಗಲಾ ಮಧ್ಯದ
ಕದನದೊಳ್ ಪುತ್ರಮಿತ್ರಾನುಜಾಗ್ರಜರಳಿದ
ಹದನನೀಕ್ಷಿಸಿ ಕಲಹವಂ ಮಾಣ್ದು ಪುರಕೈದಿ
ಮುದವುಡಗಿ ದಿವಿಜಪತಿ ಗುರುವಿಂಗೆ ಬಿನ್ನವಿಸಲಾತನೊಲಿದಿಂತೆಂದನು ೮

ಸುತ್ರಾಮ ಕೇಳ್ ಕಲಹವೆಂಬುದಿದು ಪಟದೊಳಗೆ
ಚಿತ್ರಿಸಿದ ಬೊಂಬೆಗಳ ಕಾಳೆಗಮೆ ಸತಿ ಪುತ್ರ
ಮಿತ್ರ ಬಾಂಧವರ ಕೇಡಿಂಗಳಲ್ವೊಡೆ ದೇವಲೋಕದೊಡೆತನವೇತಕೆ
ಸತ್ರದಂಬಲಿಯೆ ಸಾಲದೆ ನಿನಗೆ ದಿವಿಜಪತಿ
ಚಿತ್ರಮಿದು ನಿನ್ನಾಳ್ತನಂ ಸೋಲಗೆಲವೀಶ
ಪುತ್ರನಾದೊಡೆ ಬಿಡುವುದೇ ಮರುಳೆ ಕೇಳೆನುತೆ ಜೀವನರಿದಿಂತೆಂದನು ೯

ದೇವೇಂದ್ರ ಕೇಳ್ ಹಿಮಾಲಯತಟದೊಳಾ ಮಹಾ
ದೇವನಂ ಭಜಿಸಿಯಳಿದವರನೆಬ್ಬಿಸುವ ಸಂ
ಜೀವಿನೀಮಂತ್ರಮಂ ಪಡೆವೆನೆಂದಮರಗುರು ಪೋಗಿ ತಪದಿಂದಿರುತಿರೆ

ಕೈಯಿಟ್ಟು ಕೇಳಿದನು. ೮. ಅದನ್ನು ಹೇಳುತ್ತೇನೆ ಕೇಳಯ್ಯ ಸಿದ್ಧರಾಮ, ಮೊದಲಿನಿಂದಲೂ ದೇವದಾನವರಿಗೆ ದ್ವೇಷವಿದ್ದಿತು. ಅದರಿಂದ ಹತ್ತುಸಾವಿರ ವರುಷಗಳವರೆಗೂ ಯುದ್ಧ ನಡೆಯಿತು. ಆಗ ಆ ಯುದ್ಧದಲ್ಲಿ ಮಕ್ಕಳು, ಸ್ನೇಹಿತರು, ಅಣ್ಣ-ತಮ್ಮಂದಿರು ಸತ್ತರು. ಅದನ್ನು ನೋಡಿ ದೇವೇಂದ್ರನು ಮಧ್ಯದಲ್ಲಿಯೇ ಯುದ್ಧವನ್ನು ನಿಲ್ಲಿಸಿ ನಗರಕ್ಕೆ ಬಂದು ದುಃಖದಿಂದ ತನ್ನ ಗುರುವಿಗೆ ವಿಷಯವನ್ನು ತಿಳಿಸಿದ. ಆತನು ಅದಕ್ಕೆ ಹೀಗೆಂದು ಹೇಳಿದನು. ೯. ದೇವೇಂದ್ರನೇ, ಕೇಳು, ಯುದ್ಧವೆಂಬುದು ಚಿತ್ರಪಟದಲ್ಲಿ ಚಿತ್ರಿಸಿದ ಬೊಂಬೆಗಳ ಯುದ್ಧವೆ ? ಹೆಂಡತಿ-ಮಕ್ಕಳು ಸ್ನೇಹಿತರು ಮತ್ತು ಬಂಧು ಬಾಂಧವರ ಕೇಡಿಗೆ ದುಃಖಿಸುವುದಾದರೆ ನಿನಗೆ ದೇವಲೋಕದ ಒಡೆತನವೇಕೆ ? ಯಜ್ಞದಲ್ಲಿ ಕೊಡುವ ಹವಿಸ್ಸು ಸಾಲದೆ ? ನಿನ್ನ ಶೌರ್ಯ ವಿಚಿತ್ರವಾದುದು, ಸಾಕ್ಷಾತ್ ಈಶ್ವರನ ಮಗನಾದರೂ ಸೋಲು-ಗೆಲವು ತಪ್ಪುತ್ತದೆಯೆ ? ಅಯ್ಯ ಮರುಳೆ, ಕೇಳು ಎನ್ನುತ್ತ ಬೃಹಸ್ಪತಿ ಯೋಚಿಸಿ ಈ ರೀತಿ ಹೇಳಿದನು. ೧೦. ದೇವೇಂದ್ರನೇ ಕೇಳು, ಹಿಮಾಲಯಪರ್ವತದ ತಪ್ಪಲಿನಲ್ಲಿ ಮಹಾದೇವನನ್ನು ಧ್ಯಾನಿಸಿ ಸತ್ತವರನ್ನು ಬದುಕಿಸುವ ಸಂಜೀವಿನೀಮಂತ್ರವನ್ನು ಪಡೆಯುತ್ತೇನೆ ಎಂದು ಬೃಹಸ್ಪತಿ ಹೋಗಿ

CC-0. Jangamwadi Math Collection. Digitized by eGangotri

ಈ ವಾರ್ತೆಯಂ ಕೇಳುತಳಲಿನಿಂದಸುರಗುರು
ಜೀವನಿರ್ದೆಡೆಗೈದಿ ತನ್ಮಂತ್ರಮಂ ಕುರಿತು
ಭಾವದೊಳ್ ಶಂಭುವಂ ನೆಲೆಗೊಳಿಸುತುಗ್ರತಪದಿಂದಿರ್ದನವನಿದಿರೊಳು ೧೦

ಅಂತಸುರಸುರಗುರುಗಳಿರ್ವರುಂ ಮುಂಚಿ ಶಿವ
ನಂ ತಮತಮಗೆ ಮೆಚ್ಚಿಸುವೆವೆಂದು ಚಿರಕಾಲ
ಮುಂ ತಪಂಗೆಯ್ಯಲೀಶಂ ಪ್ರಸನ್ನತೆಯೊಳೈತಂದವರ್ಗಳಿತ್ತಂಡದ
ಮುಂತೆ ನಿಂದೆಲೆ ಜೀವಶುಕ್ರರಿರ ಬಳಲ್ದಿರಿ
ನ್ನೇಂ ತಳುವದುಸಿರಿರೈ ನಿಮ್ಮ ಬಯಕೆಯನೆನಲ್
ಸಂತಸದೊಳಿರ್ವರುಂ ಬಿನ್ನವಿಸಿದರ್ ಕೂಡೆ ತಂತಮ್ಮ ಬಯಕೆಗಳನು ೧೧

ಅಸುರಸುರಗುರುಗಳಿಷ್ಟಾರ್ಥವೊಂದಾದುವಿದ
ನುಸಿರದಿರಬಾರದುಸಿರ್ದೊಡೆ ದೈತ್ಯರಿಂದಮು
ಬ್ಬಸಮಪ್ಪುದಿದನೊಂದುಪಾಯದೊಳ್ ತಮಗಸಾಧ್ಯಂ ಮಾಡಿ ಕಳೆವೆನೆಂದು
ಪೆಸರ್ಗೊಂಡು ಕರೆದಿರ್ವರಂ ನಿಮ್ಮ ಬಯಕೆಗಳ-
ನೊಸೆದೀವೆನದು ನಿಮ್ಮ ಕೈಯೊಳಪ್ಪೊಡೆ ಮಾಳ್ಕು
ದಸಮಮಂತ್ರದ ಪುನಶ್ಚರಣೆಯುಂ ಕೇಳೆಮೊಂದೀಶ್ವರಂ ನಿರವಿಸಿದನು ೧೨

ತಪಸ್ಸನ್ನು ಮಾಡುತ್ತಿದ್ದನು. ಈ ಸುದ್ದಿಯನ್ನು ಕೇಳಿದ ರಾಕ್ಷಸರ ಗುರು ಶುಕ್ರಾಚಾರ್ಯನು ಹೆದರಿಕೆಯಿಂದ ಬೃಹಸ್ಪತಿ ಇರುವ ಜಾಗಕ್ಕೆ ಹೋಗಿ ಸಂಜೀವಿನೀಮಂತ್ರವನ್ನು ಕುರಿತು ಈಶ್ವರನನ್ನು ಮನಸ್ಸಿನಲ್ಲಿ ನೆಲೆಗೊಳಿಸಿ ಅವನಿಗೆದುರಾಗಿ ಘೋರ ತಪಕ್ಕೆ ಕುಳಿತನು. ೧೧. ಈ ರೀತಿ ದೇವದಾನವ ಗುರುಗಳಿಬ್ಬರೂ ಒಬ್ಬರನ್ನೊಬ್ಬರು ಮೀರಿಸಿ ಶಿವನನ್ನು ತಾವೇ ಮೆಚ್ಚಿಸುತ್ತೇವೆ ಎಂದು ಬಹಳ ಕಾಲ ತಪಸ್ಸನ್ನು ಮಾಡಿದರು. ಈಶ್ವರನು ಪ್ರಸನ್ನನಾಗಿ ಅವರ ಬಳಿಗೆ ಬಂದು ಇಬ್ಬರ ಮುಂದೆಯೂ ನಿಂತನು. ಎಲೈ ಬೃಹಸ್ಪತಿ ಶುಕ್ರರಿರಾ ನೀವಿಬ್ಬರೂ ಬಳಲಿದ್ದೀರಿ, ತಡಮಾಡದೆ ನಿಮ್ಮ ಬಯಕೆಯನ್ನು ಹೇಳಿ ಎಂದನು. ಆಗ ಸಂತೋಷದಿಂದ ಅವರಿಬ್ಬರೂ ತಮ್ಮ ತಮ್ಮ ಬಯಕೆಗಳನ್ನು ಬಿನ್ನವಿಸಿಕೊಂಡರು. ೧೨. ರಾಕ್ಷಸ ಮತ್ತು ದೇವಗುರುಗಳಿಬ್ಬರ ಬಯಕೆಯೂ ಒಂದೇ ಆಗಿದೆ. ಹೀಗೆಂದು ಹೇಳಬಾರದು, ಹೇಳಿದರೆ ರಾಕ್ಷಸರಿಂದ ತೊಂದರೆ. ಇದನು ಒಂದು ಉಪಾಯದಿಂದ ತಮಗೆ ಅಸಾಧ್ಯವೆನ್ನುವಂತೆ ಮಾಡಿ ನಿವಾರಿಸುತ್ತೇನೆ ಎಂದುಕೊಂಡು ಶಿವನು ಅವರಿಬ್ಬರನ್ನೂ ಹೆಸರುಹಿಡಿದು ಕರೆದು ನಿಮ್ಮ ನಿಮ್ಮ ಬಯಕೆಗಳನ್ನು ಪ್ರೀತಿಯಿಂದ ಸಲ್ಲಿಸುತ್ತೇನೆ. ನಿಮ್ಮ ಕೈಯಲ್ಲಿ ಸಾಧ್ಯವಾದರೆ ಆ ಶ್ರೇಷ್ಠ ಮಂತ್ರದ

CC-0. Jangamwadi Math Collection. Digitized by eGangotri

ಚಚ್ಚೌಕವಾಗಿ ಘನಕುಂಡಮಂ ತೆಗೆದು ಪೆ
ರ್ಗಿಚ್ಚನದರೊಳಗೊಟ್ಟಿ ಹೊಗೆಹೊಗೆಯುತದರೊಡನೆ
ಪೆಚ್ಚುವುರಿಯಂ ಸೋಂಕಿ ತಲೆಕೆಳಗುವಾಗಿ ನಭದೊಳ್ ನಿಂದು ನಿಶ್ಚಲತೆಯಿಂ
ಬೆಚ್ಚದಾ ಹೊಗೆಯನಾಸ್ವಾದಿಸುತೆ ತನ್ಮಂತ್ರ
ದುಚ್ಚರಣೆಯಿಂ ದಿವ್ಯಸಾಹಸ್ರವರ್ಷವಿರೆ
ನಚ್ಚಿದಂತೀ ಮಂತ್ರಸಿದ್ಧಿಯಪ್ಪುದು ನಿಮಗೆ ಕೈಕೊಂಬುದಿದನೆಂದನು ೧೩

ಕೇಳಿ ನಡುನಡುಗಿದಂ ದಿವಿಜಗುರು ದೃಢಶಕ್ತಿ
ಸಾಲದೆನಗೀ ತಪಸ್ಸಿಂಗೆಂದು ಶಶಿಕಲಾ
ಮೌಳಿಯಡಿಗೆರಗಿ ಬಿನ್ನವಿಸಿ ಹಿಮ್ಮೆಟ್ಟಿದಂ ಶುಕ್ರನಾ ಖಳಕುಲಕ್ಕೆ
ಮೂಲಮಂತ್ರವ ಗುರುವೆನಲ್ ಬಳಿಕೆ ವಿಸ್ತರಿಸಿ
ಪೇಳಲಳವಲ್ಲ ಸರ್ವಜ್ಞನಂ ಜಾಣ್ನುಡಿಯು
ಕೀಲಣೆಕೆಯಿಂ ಗೆಲಿದನಭವ ನೀನೆನ್ನಿಂದಲಪುದನಲ್ ಮಾಳ್ಪೆನೆಂದು ೧೪

ಮರಳಿ ಮೆಚ್ಚಿದನಭವನವನ ಚದುರಿಂಗೆ ಭಾ
ಪುರೆ ಭಲರೆ ಚಾಗೆಂದು ಮೂಗಿನೊಳ್ ಬೆರಳಿಟ್ಟು
ಶಿರವನೊಲೆದೊಲೆದು ಕೇಳೆಲೆ ಶುಕ್ರ ನೀ ಜಾಣನಹುದೆನುತೆ ಕರುಣದಿಂದೆ

ಪುನರುಚ್ಚಾರಮಾಡಿ ಎಂದು ಈಶ್ವರನು ಆ ಮಂತ್ರವನ್ನು ನಿರೂಪಿಸಿದನು. ೧೨. ದೊಡ್ಡದಾದ ಚಚ್ಚೌಕವಾದ ಯಜ್ಞಕುಂಡವನ್ನು ತೆಗೆದು ಅದರಲ್ಲಿ ದೊಡ್ಡ ಅಗ್ನಿಯನ್ನು ಒಟ್ಟಬೇಕು. ಹೊಗೆಯಿಂದ ಕೂಡಿದ ಆ ಕುಂಡದಲ್ಲಿ ಅಧಿಕವಾದ ಉರಿಯನ್ನು ಸೋಕಿ ಆಕಾಶದಲ್ಲಿ ತಲೆಕೆಳಗಾಗಿ ನಿಲ್ಲಬೇಕು. ಹೀಗೆ ನಿಶ್ಚಲವಾಗಿ ನಿಂತು ಹೆದರದೆ ಆ ಹೊಗೆಯನ್ನು ಕುಡಿಯುತ್ತ ಆ ಮಂತ್ರವನ್ನು ಸಾವಿರ ವರ್ಷಗಳು ಉಚ್ಚಾರಮಾಡಬೇಕು. ಆಗ ನಿಮಗೆ ಈ ಮಂತ್ರಸಿದ್ಧಿಯಾಗುತ್ತದೆ. ಇದನ್ನು ಪ್ರಯತ್ನಿಸುವುದು ಎಂದನು. ೧೪. ಇದನ್ನು ಕೇಳಿ ದೇವಗುರು ನಡುಗಿದನು, ತನಗೆ ಇಂತಹ ತಪಸ್ಸಿಗೆ ದೃಢಶಕ್ತಿ ಸಾಲದೆಂದು ವಿಜ್ಞಾಪಿಸಿ ಶಿವನ ಪಾದಕ್ಕೆ ನಮಸ್ಕರಿಸಿ ಹಿಂದಿರುಗಿದನು. ರಾಕ್ಷಸ ಗುರುವಾದ ಶುಕ್ರನಾದರೋ ಆ ರಾಕ್ಷಸಕುಲಕ್ಕೆ ಮೂಲಮಂತ್ರವನ್ನು ವಿಸ್ತರಿಸಿ ಹೇಳಲು ನನಗೆ ಸಾಧ್ಯವಿಲ್ಲ ಎಂದು ತಿಳಿದು ನನ್ನಿಂದ ಸಾಧ್ಯವಾಗುತ್ತದೆಯೆಂದು ನೀನು ಹೇಳಿದರೆ ಮಾಡುತ್ತೇನೆ ಎಂದು ಹೇಳಿ ಸರ್ವಜ್ಞನಾದ ಶಿವನನ್ನು ತನ್ನ ಚತುರತೆಯ ಮಾತಿನ ಜೋಡಣೆಯಿಂದ ಗೆದ್ದನು. ೧೫. ಪರಮೇಶ್ವರನು ಅವನ ಚದುರಮಾತಿಗೆ ಮತ್ತೆ ಮೆಚ್ಚಿದನು, ಭಾಪುರೆ, ಭಲರೆ, ಭೇಷ್ ಎಂದು ಮೂಗಿನ ಮೇಲೆ ಬೆರಳಿಟ್ಟು ತಲೆದೂಗಿ ಎಲೈ ಶುಕ್ರನೇ, ಕೇಳು ನೀನು ಬಹಳ ಬುದ್ಧಿವಂತನೇ ಸರಿ ಎಂದು ಕರುಣೆಯಿಂದ ಆ ಶ್ರೇಷ್ಠವಾದ

CC-0. Jangamwadi Math Collection. Digitized by eGangotri

ಪರಮಮಂತ್ರೋಪದೇಶವನಿತ್ತು ಶಂಕರಂ
ತೆರಳಿದಂ ಕೈಲಾಸಗಿರಿಗತ್ತಲಿತ್ತಲತಿ
ಹರುಷದಿಂ ಭೃಗುಸುತಂ ಸಂತಸದೊಳಿರ್ದನೆಲೆ ರಾಮ ಕೇಳಚ್ಚರಿಯನು ೧೫

ಪಲ್ಲವಿಸಿದುದು ಶುಕ್ರನಾನಂದಲತೆ ಶಿಷ್ಯ
ರೆಲ್ಲರಂ ಕರೆದೆಂದನೆಮಗೀಗ ಪಾರ್ವತೀ
ವಲ್ಲಭನ ಕರುಣಮಾಯ್ತಾ ಮಂತ್ರಸಿದ್ಧಿಯಪ್ಪನ್ನೆಗಂ ನೀವಿನಿಬರು
ಸಲ್ಲಲಿತ ಭಸಿತ ರುದ್ರಾಕ್ಷಿ ಜಟೆಗಳ ಧರಿಸು
ತಲ್ಲಲ್ಲಿ ತಪಿಸುತಿರಿ ನಿಮ್ಮ ವೈರಿಗಳಟ್ಟಿ
ಕೊಲ್ಲಬಂದರೆ ಕಾಯ್ವನೆಮ್ಮ ಪಿತ ಭೃಗುವಾತನಾಶ್ರಮಂಬುಗಿವೆಂದನು ೧೬

ಎಂದವರನೆಲ್ಲರಂ ಕಳುಪಿ ಪಿತನಾಶ್ರಮಕೆ
ಬಂದು ತದ್ವೃತ್ತಾಂತಮಂ ಬಿನ್ನಪಂಗೆಯ್ದು
ತಂದೆಯಂ ಬೀಳ್ಕೊಂಡು ಪೋಗಿ ತಪಮಂ ಮಾಡುತಿರೆ ಶುಕ್ರನತ್ತಲಿತ್ತ
ಮುಂದುಗೆಟ್ಟಮರರ್ಕೈತಂದು ಶುಕ್ರಂ ಮಾಡಿ
ದಂದಮಂ ಹರಿಗೆ ಬಿನ್ನವಿಸಲಾತಂ ನುಡಿದ
ನಿಂದುಮೌಳಿಯ ವರಂ ಫಲಿಸಿವುದೇಯೆನುತೆ ತದ್ವಿಷ್ಣು ಮಗುಳಿಂತೆಂದನು ೧೭

ಬಲ್ಲಿದಂ ಶುಕ್ರನಾ ಮಂತ್ರಸಿದ್ಧಿಯ ಪಡೆದು
ಮೆಲ್ಲನೈತರ್ಪನಂ ದನುಜಸಂಕುಲಕುಲಮ
ನಿಲ್ಲೆನಿಸಬೇಕೆನುತಲಲ್ಲಲ್ಲಿಯುಗ್ರತರತಪದಿಂದಲೊಪ್ಪುತಿರ್ಪ

ಮಂತ್ರೋಪದೇಶವನ್ನು ಮಾಡಿ ಅತ್ತ ಶಿವನು ಕೈಲಾಸಪರ್ವತಕ್ಕೆ ಹೋದನು. ಈ ಕಡೆಯಲ್ಲಿ ಭೃಗುವಿನ ಮಗನಾದ ಶುಕ್ರನು ಸಂತೋಷದಿಂದ ಇದ್ದನು, ಎಲೈ ಸಿದ್ಧರಾಮ, ಆಶ್ಚರ್ಯವನ್ನು ಕೇಳು. ೧೬. ಶುಕ್ರನಿಗೆ ಬಹಳ ಸಂತೋಷ ವಾಯಿತು. ತನ್ನ ಶಿಷ್ಯರನ್ನೆಲ್ಲ ಒಟ್ಟಿಗೆ ಕರೆದು ಹೀಗೆ ಹೇಳಿದನು. ನಮ್ಮ ಮೇಲೆ ಈಗ ಪರಮೇಶ್ವರನಿಗೆ ಕರುಣೆಯುಂಟಾಗಿದೆ. ಆ ಮಂತ್ರಸಿದ್ಧಿ ಆಗುವವರೆಗೂ ನೀವೆಲ್ಲರೂ ವಿಭೂತಿ, ರುದ್ರಾಕ್ಷಿ, ಜಟೆಗಳನ್ನು ಧರಿಸಿಕೊಂಡು ಅಲ್ಲಲ್ಲಿ ತಪಸ್ಸನ್ನು ಮಾಡುತ್ತಿರಿ. ನಿಮ್ಮ ಶತ್ರುಗಳು ಅಟ್ಟಿಸಿಕೊಂಡು ಕೊಲ್ಲಬಂದರೆ ನಮ್ಮ ತಂದೆಯಾದ ಭೃಗುವು ನಿಮ್ಮನ್ನು ಕಾಪಾಡುತ್ತಾನೆ. ಆತನ ಆಶ್ರಮವನ್ನು ಪ್ರವೇಶಿಸಿ ಎಂದನು. ೧೭. ಹೀಗೆ ಹೇಳಿ ಅವರೆಲ್ಲರನ್ನೂ ಕಳುಹಿಸಿ ತನ್ನ ತಂದೆಯ ಆಶ್ರಮಕ್ಕೆ ಬಂದನು. ಆ ಸಂಗತಿಯನ್ನೆಲ್ಲ ಅವನಿಗೆ ವಿಜ್ಞಾಪಿಸಿಕೊಂಡನು. ತಂದೆಯಿಂದ ಬೀಳ್ಕೊಂಡು ಅತ್ತ ಶುಕ್ರನು ತಪಸ್ಸನ್ನು ಮಾಡುತ್ತಿರಲು ಇತ್ತಕಡೆ ದಿಕ್ಕುತೋಚದ ದೇವತೆಗಳು ಬಂದು ಶುಕ್ರನು ಮಾಡಿದ ರೀತಿಯನ್ನು ವಿಷ್ಣುವಿಗೆ ಬಿನ್ನವಿಸಿಕೊಳ್ಳಲು ವಿಷ್ಣುವು ಚಂದ್ರ ಶೇಖರನ ವರವು ಸುಳ್ಳಾಗುತ್ತದೆಯೆ ? ಎನ್ನುತ್ತ ಮತ್ತೆ ಹೀಗೆಂದನು. ೧೮. "ಶುಕ್ರನು ಬಲು ಸಮರ್ಥನು. ಅವನು ಆ ಮಂತ್ರಸಿದ್ಧಿಯನ್ನು ಪಡೆದು ಮೆಲ್ಲನೆ ಬರುವ ವೇಳೆಗೆ

CC-0. Jangamwadi Math Collection. Digitized by eGangotri

ಖುಲ್ಲ ದಾನವಸಮೂಹಂಗಳಂ ಬಿಡದೆ ಪೊ
ಕ್ಕಲ್ಲಿ ಪೊಕ್ಕರಸಿ ನಾನಾ ಪ್ರಕಾರಂಗಳಿಂ
ಕೊಲ್ಲಿಮೆಂದಷ್ಟದಿಕ್ಪಾಲರ್ಗೆ ವಿಷ್ಣುವಾಜ್ಞಾಪಿಸಿದನಾ ಕ್ಷಣದೊಳು ೧೮

ಪರಿಯ ನೇಮದೊಳುಂ ಚತುರ್ಬಲಂಗಳ್ವೆರಸಿ
ಪರಿಮುಖ್ಯದಿಗಧಿಪರ್ ಸುತ್ತಲೆತ್ತೆತ್ತಲುಂ
ಪರಿಪರಿದು ಗಿರಿ ವನ ನದೀ ನದಂಗಳ ತೀರದಲ್ಲಿ ನಾನಾ ತೆರದೊಳು
ಹರನ ಧ್ಯಾನದೊಳಿರ್ಪ ದೈತ್ಯರು ಕೂಡೆ ಸಂ
ಹರಣಮಂ ಮಾಡತೊಡಗಿದರಸುರಕಾಯದಿಂ
ಹರಣಂಗಳಳಿವುತಿರ್ದುವು ನಿರಾಯುಧರನಿರಿವಲ್ಲಿ ತಡೆಗಿಡೆಗಳುಂಟೇ ೧೯

ತರಿದರರಿದರ್ ಕೂಡೆ ಕತ್ತರಿಸಿದರ್ ಪೊಯ್ದ
ರಿರಿದರೆಚ್ಚರ್ ಕೊಚ್ಚಿದರ್ ಕರಪದಂಗಳಂ
ಮುರಿದಿಟ್ಟರಟ್ಟಿದರ್ ಮೆಟ್ಟಿದರ್ ಪೆಣಗಳನೊಡಲ್ಗಳೊಳ್ ಭಲ್ಲೆಹಗಳು
ಮುರಿಯೆ ಸಿಕ್ಕಿದರೊಕ್ಕಲಿಕ್ಕಿದರ್ ಮುಕ್ಕಿದರ್
ಕೊರೆದರರೆದರ್ ಕೊಂದರಂದಗೆಡಿಸಿದರಸುಂ
ದೊರೆವಿನಂ ಬಾಯ್ಗಳಂ ತೆರೆವಿನಂ ಮೆಯ್ಗಳಂ ಮರೆವಿನಂ ಸುರರಸುರರ ೨೦

ರಾಕ್ಷಸರ ಕುಲವನ್ನೇ ಇಲ್ಲ ಎನ್ನಿಸಬೇಕೆಂದು ಹೇಳಿ ಅಲ್ಲಲ್ಲಿ ಘೋರ ತಪಸ್ಸನ್ನು ಮಾಡುತ್ತಿದ್ದ ಖೂಳರೀದ ರಾಕ್ಷಸರ ಸಮೂಹವನ್ನು ಬಿಡದೆ ಅವರು ಹೋದೆಡೆಯಲ್ಲಿ ಬೆನ್ನಟ್ಟಿ ಹೋಗಿ ವಿಧ ವಿಧವಾದ ರೀತಿಯಲ್ಲಿ ಕೊಲ್ಲಿರಿ'' ಎಂದು ವಿಷ್ಣುವು ಆ ಕ್ಷಣದಲ್ಲಿ ಅಷ್ಟದಿಕ್ಪಾಲಕರುಗಳಿಗೆ ಅಪ್ಪಣೆ ಮಾಡಿದನು. ೧೯. ವಿಷ್ಣುವಿನ ಆಜ್ಞೆಯಂತೆ ಚತುರಂಗ ಸೇನೆಯೊಡನೆ ದೇವೇಂದ್ರನೇ ಮೊದಲಾದ ಅಷ್ಟದಿಕ್ಪಾಲಕರು ಸುತ್ತ ಎಲ್ಲ ಕಡೆಯೂ ತಿರುಗಾಡಿ ಪರ್ವತ, ಕಾಡು, ನದೀ-ನದಗಳ ತೀರದಲ್ಲಿ ನಾನಾ ರೀತಿಯಲ್ಲಿ ಶಿವನ ಧ್ಯಾನದಲ್ಲಿದ್ದ ರಾಕ್ಷಸರನ್ನು ಕೊಲ್ಲಲು ಆರಂಭಿಸಿದರು. ಆಗ ರಾಕ್ಷಸರ ದೇಹಗಳಿಂದ ಪ್ರಾಣಗಳು ನಾಶವಾಗುತ್ತಿದ್ದುವು. ನಿರಾಯುಧರನ್ನು ಕೊಲ್ಲುವಲ್ಲಿ ತಡೆಬಡೆಗಳಿರುತ್ತವೆಯೆ ? ೨೦. ಪ್ರಾಣ ಹೋಗುವಂತೆ, ಬಾಯ್ಬಿಡುವಂತೆ, ಮೈಮರೆಯುವಂತೆ ದೇವತೆಗಳು ರಾಕ್ಷಸರನ್ನು ತರಿದರು, ಕತ್ತರಿಸಿದರು, ಹೊಡೆದರು, ಕತ್ತರಿಸಿದರು, ಬಾಣಪ್ರಯೋಗಿಸಿದರು, ಕೊಚ್ಚಿಹಾಕಿದರು, ಕೈಕಾಲುಗಳನ್ನು ಮುರಿದಿಟ್ಟರು, ಓಡಿಸಿದರು, ತುಳಿದರು, ಹೆಣಗಳ ಶರೀರದಲ್ಲಿ ಈಟಿಗಳು ಮುರಿಯುವಂತೆ ತಿವಿದರು, ಕೈಗೆ ಸಿಕ್ಕಿದವರನ್ನು ಒಡಿದರು ಮುಕ್ಕಿದರು, ಕೊರೆದರು, ಅರೆದುಹಾಕಿದರು, ಕೊಂದರು.

CC-0. Jangamwadi Math Collection. Digitized by eGangotri

ವೆಂಟಣಿಸಿ ಲುಬ್ಧಕರ್ ಮೃಗಸಮೂಹಂಗಳಂ
ಗೋಂಟು ಗೋಂಟಂ ಸೋಹಿ ತರುತಿರ್ಪ ವಾಳ್ಕೆಯಿಂ
ದೆಂಟುದೆಸೆಯುಂ ಬಿಡದೆ ಕೊಲ್ವ ದಿಕ್ಪಾಲಕರ ದಾಳಿ ಬೆನ್ನಟ್ಟಿಬರಲು
ಕಂಟಕಂಗಳ್ ನಾಂಟಿ ಬಿದ್ದು ಕಾಲೊಡೆದು ಬಾಯ್
ಗಂಟಲ್ಗಳೊಣಗಿ ಗತಿಗೆಟ್ಟು ಮತಿಯಳಿದೇಸು
ಗೆಂಟೊ ಭೃಗುಮುನಿಪನಾಶ್ರಮಮೆಂದು ಕಂಗೆಟ್ಟು ಬರುತಿರ್ದರಾ ದನುಜರು ೨೧

ಹರಿಸುರೇಂದ್ರಾದಿ ನಾನಾ ದಿವಿಜರೋನಿಜರ್
ಕರುಣಮೆಳ್ಳನಿತಿಲ್ಲದೀ ನಿರಾಯುಧರನೀ
ಪರಿ ಕೊಲಲ್ಕವರೆಂತು ಗೆಯ್ವರೆಂದಷ್ಟದೆಸೆಗೆ ಬಾಯ್ಬಿಟ್ಟು ಮೊರೆಯನಿಟ್ಟು
ತಿರುತಿರುಗಿ ಚಾರಿವರಿದೋಡಿ ಹೊಗೆ ದೆಸೆಗಾಣ
ದರಿಗಳಿಂ ಕಡಿಯಿಂಡಮಾದರರೆಬರ್ ಮಿಕ್ಕ
ದೊರೆರಕ್ಕಸರ್ ಮಹಾಕೋಪದಿಂ ಗುಡುಗುಡಿಸಿ ಪಲ್ಮೊರೆವುತಿಂತೆಂದರು ೨೨

ಪುಟ್ಟಿದಂದಿಂದೆ ಸುರರೆಮ್ಮುಮಂ ಕಂಡು ಕಂ
ಗೆಟ್ಟೋಡುವವರಿಂದು ತಮ್ಮ ಬಾಳ್ ತಲೆಗಳಂ
ಕುಟ್ಟುವಂತಾಯ್ತು ಹುಲಿಮೀಸೆಯಂ ನರಿಗಳಲ್ಲಾಡುವಂತಾದುದೆಂದು
ಬೆಟ್ಟಂಗಳಂ ಕಿತ್ತು ಪೊತ್ತಿವರನಿಟ್ಟು ಬೆ
ನ್ನಟ್ಟಿದಪೆವೆಂದೊಡನೆ ಗುರುವಿನಾಜ್ಞೆಗೆ ಭಯಂ
ಬಟ್ಟು ಭೃಗುಮುನಿಪನಾಶ್ರಮವನೊಳಪೊಕ್ಕು ಬಾಯ್ಬಿಟ್ಟು ಮೊರೆಯಿಟ್ಟರಂದು ೨೩

ವಿರೂಪಗೊಳಿಸಿದರು. ೨೧. ಬೇಟೆಗಾರರು ಮೃಗಸಮೂಹವನ್ನು ಸುತ್ತುವರಿದು ಮೂಲೆ ಮೂಲೆಯನ್ನು ಹುಡುಕಿ ಎಬ್ಬಿಸಿ ತರುವ ರೀತಿಯಲ್ಲಿ ಎಂಟು ದಿಕ್ಕುಗಳಲ್ಲಿಯೂ ಬಿಡದೆ ಕೊಲ್ಲುತ್ತಿರುವ ದಿಕ್ಪಾಲಕರ ದಾಳಿಯು ಬೆನ್ನಟ್ಟಿ ಬರಲು, ಮುಳ್ಳುಗಳು ಚುಚ್ಚಿ, ಬಿದ್ದು ಕಾಲುಗಳು ಒಡೆದು, ಬಾಯಿ–ಗಂಟಲುಗಳು ಒಣಗಿ, ದಿಕ್ಕುಗೆಟ್ಟು, ಹುಚ್ಚರಂತೆ ಭೃಗುಋಷಿಯ ಆಶ್ರಮವು ಇನ್ನೂ ಎಷ್ಟು ದೂರವೋ ಎಂದು ಕಂಗೆಟ್ಟು ಆ ರಾಕ್ಷಸರು ಬರುತ್ತಿದ್ದರು. ೨೨. ವಿಷ್ಣು, ದೇವೇಂದ್ರನೇ ಮೊದಲಾದ ಅನೇಕ ದೇವತೆಗಳು ಸ್ವಲ್ಪವೂ ಕರುಣೆಯಿಲ್ಲದೆ ನಿರಾಯುಧರನ್ನು ಈ ರೀತಿ ಕೊಲ್ಲುತ್ತಿದ್ದರೆ, ಅವರೇನು ಮಾಡುತ್ತಾರೆ ಎಂದು ಎಂಟು ದಿಕ್ಕಿಗೂ ಬಾಯ್ಬಿಟ್ಟು ಮೊರೆಯಿಟ್ಟು ಮತ್ತೆ ಮತ್ತೆ ಉಪಾಯದಿಂದ ಓಡಿ ಆಶ್ರಯ ಪಡೆಯಲು ಸ್ಥಳವಿಲ್ಲದೆ ಅರ್ಧ ಜನರು ಶತ್ರುಗಳಿಂದ ತುಂಡು ತುಂಡಾಗಿ ಕಡಿಯಲ್ಪಟ್ಟರು. ಮಿಕ್ಕ ವೀರರಾದ ರಾಕ್ಷಸರಾಜರು ಅತಿಯಾದ ಕೋಪದಿಂದ ಗರ್ಜಿಸುತ್ತ ಹಲ್ಲುಗಳನ್ನು ಕಡಿಯುತ್ತ ಈ ರೀತಿ ಹೇಳಿದರು. ೨೩. ಹುಟ್ಟಿದಂದಿನಿಂದ ದೇವತೆಗಳು ನಮ್ಮನ್ನು ನೋಡಿ ಕಂಗೆಟ್ಟು ಓಡುತ್ತಿದ್ದರು. ಈದಿನ ಅವರ ಕತ್ತಿ ನಮ್ಮ ತಲೆಗಳನ್ನು ಕುಟ್ಟುವಂತೆ ಆಯಿತು. ಹುಲಿಯ ಮೀಸೆಯನ್ನು ನರಿಗಳು ಅಲ್ಲಾಡಿಸುವಂತಾಯಿತು, ಬೆಟ್ಟಗಳನ್ನು ಕಿತ್ತು ಹೊತ್ತು, ಇವರನ್ನು ಕುಟ್ಟಿ ಬೆನ್ನಟ್ಟಿ ಇವರನ್ನು ಹೊಡೆಯಬಲ್ಲೆವು,

CC-0. Jangamwadi Math Collection. Digitized by eGangotri

ಎಲೆ ರಾಮ ಕೇಳ್ ಭೃಗುಮುನೀಶ್ವರಂ ಚಿತ್ತದೊಳ್
ನೆಲೆಗೊಳಿಸಿ ಶಂಭುವಂ ಬಹಿರಂಗಮಂ ಮರೆದು
ಸಲೆ ಸಮಾಧಿಯೊಳಿರ್ದನಾತನರ್ಧಾಂಗಿ ಪ್ರಖ್ಯಾತಿಯಾ ಸುರರಿಪುಗಳ
ಕಳವಳದ ಮೊರೆಗೇಳ್ದಿದೇನೆಂದು ಬೆಸಗೊಳಲ್
ಖಳರೆಂದರೆಲೆ ತಾಯೆ ನಿರಪರಾಧಿಗಳೆಮ್ಮ
ನಳುಕದೆ ನಿರಾಯುಧರನಮರರಿರಿದಪರೆಂದು ತಮತಮಗೆ ಮೊರೆಯಿಟ್ಟರು । ೨೪

ಅದೆ ಶಕ್ರಹಸ್ತವಜ್ರಾಯುಧಂ ನೆಗಪಿ ಕಿಡಿ
ಗೆದರುತಿದೆ ವಹ್ನಿ ಪಿಡಿದುಗ್ರಖಡ್ಗಂ ಕರದೊ
ಳೊದರುತಿದೆ ಯಮನದಂಡಂ ನಿಮಿರ್ದು ನಿರುತಿಕೊಂತಂ ಕೊಸರುತಿದೆ ಕೈಯನು
ಅದೆ ವರುಣಕರಪಾಶವುರಿಲಾಗಿ ಮಾರುತನ
ಗದೆ ತೂಗುತಿದೆ ಕುಬೇರನ ಭಲ್ಲೆಯುಂ ಕೈಯ
ನೊದೆದು ಬರುತಿದೆ ಬೇಗದೊಳ್ ಸಲಹು ಸಲಹೆಂದು ಮೊರೆಯಿಟ್ಟರಾ ದೈತ್ಯರು ೨೫

ಇಂತಟ್ಟಿಬರ್ಪ ನಿರ್ಜರಭಯಕ್ಕೊಡನೊಡನೆ
ಪಿಂತಿರುಗಿ ನೋಡಿ ಕಣ್ಬಾಯ್ಬಿಡುವ ಶಿಷ್ಯರಂ
ಸಂತೈಸುತಂಜಬೇಡೆಂದಭಯವಿತ್ತು ಕ್ಷಣದೊಳ್ ದಿವ್ಯಮಂತ್ರಂಗಳ

ಎಂದು ಒಡನೆ ತಮ್ಮ ಗುರುವಿನ ಆಜ್ಞೆಗೆ ಭಯಪಟ್ಟು ಭೃಗುವಿನ ಆಶ್ರಮವನ್ನು ಹೊಕ್ಕು ಬಾಯ್ಬಿಟ್ಟು ಮೊರೆಯಿಟ್ಟರು. ೨೪. ಎಲೆ ಸಿದ್ಧರಾಮನೇ, ಕೇಳು, ಆಗ ಭೃಗುಮುನಿಯು ತನ್ನ ಮನದಲ್ಲಿ ಶಿವನನ್ನು ನೆಲೆಗೊಳಿಸಿ, ಬಹಿರಂಗವನ್ನು ಮರೆತು ವಿಶೇಷವಾದ ಸಮಾಧಿಯಲ್ಲಿ ಇದ್ದನು. ಭೃಗುವಿನ ಹೆಂಡತಿಯಾದ ಪ್ರಖ್ಯಾತಿಯು ರಾಕ್ಷಸರ ಕಳವಳದ ಆರ್ತನಾದವನ್ನು ಕೇಳಿ ಇದೇನೆಂದು ಪ್ರಶ್ನೆಮಾಡಿದಳು. ಅದಕ್ಕೆ ಆ ರಾಕ್ಷಸರು ತಾಯೆ, ನಿರಪರಾಧಿಗಳಾದ–ನಿರಾಯುಧರಾದ ನಮ್ಮನ್ನು ಹಿಂದೆ ಮುಂದೆ ನೋಡದೆ ದೇವತೆಗಳು ಕೊಲ್ಲುತ್ತಿದ್ದಾರೆ ಎಂದು ಎಲ್ಲರೂ ಒಟ್ಟಾಗಿ ಮೊರೆಯಿಟ್ಟರು. ೨೫. "ಅಲ್ಲಿ ನೋಡಿ, ಇಂದ್ರನ ಕೈಯಲ್ಲಿರುವ ವಜ್ರಾಯುಧವು ಬೆಂಕಿಯನ್ನು ಚೆಲ್ಲಿ ಎಲ್ಲೆಡೆಗೂ ಕೆದರುತ್ತಿದೆ. ಅಗ್ನಿಯು ಹಿಡಿದಿರುವ ಭಯಂಕರವಾದ ಖಡ್ಗ ಝಳಪಿಸಲ್ಪಡುತ್ತಿದೆ. ಯಮನ ಕೈಯಲ್ಲಿರುವ ದಂಡ ಮುಂದಕ್ಕೆ ಚಾಚಲ್ಪಟ್ಟಿದೆ. ನಿರುತಿಯ ಕೈಯ ಈಟಿಯು ಕೈಯಿಂದ ತಪ್ಪಿಸಿಕೊಂಡು ಹೋಗಲು ಹಾತೊರೆಯುತ್ತಿದೆ. ವರುಣನ ಕೈಯಲ್ಲಿ ಹಗ್ಗ ಉರುಲಾಗಿ ಪರಿಣಮಿಸಿದೆ. ಕುಬೇರನ ಭರ್ಜಿ ಕೈಯಿಂದ ಪುಟಿದು ಬರುತ್ತಿದೆ. ಆದುದರಿಂದ ನಮ್ಮನ್ನು ಬೇಗನೆ ಕಾಪಾಡು,ಕಾಪಾಡು" ಎಂದು ಆ ರಾಕ್ಷಸರು ಮೊರೆಯಿಟ್ಟರು. ೨೬. ಈ ರೀತಿಯಲ್ಲಿ ತಮ್ಮನ್ನು ಅಟ್ಟಿಸಿಕೊಂಡು ಬರುವ ದೇವತೆಗಳಿಗೆ ಹೆದರಿ ಮತ್ತೆ ಮತ್ತೆ ಹಿಂತಿರುಗಿ ನೋಡಿ ಕಣ್ಣು–ಬಾಯಿ ಬಿಡುವ ಶಿಷ್ಯರನ್ನು ಹೆದರಬೇಡಿರೆಂದು ಆಕೆ ಸಮಾಧಾನಮಾಡುತ್ತ ಅಭಯವನ್ನಿತ್ತು ಕೂಡಲೇ ದಿವ್ಯಮಂತ್ರ

CC-0. Jangamwadi Math Collection. Digitized by eGangotri

ಕಂತುಹರನಂ ಸ್ಮರಿಸಿ ಮಂತ್ರಿಸಲ್ ಸಕಲ ಸುರ
ಸಂತತಿಗೆ ಕರಗತಿಸ್ತಂಭಂಗಳಾಗಿರೆ ಪ
ಟಾಂತರದೊಳೆಸೆವ ಬೊಂಬೆಗಳಂತೆ ಕಣ್ಗೆಸೆದರೇನೆಂಬೆನಚ್ಚರಿಯನು ೨೬

ಅನಿತರೊಳ್ ಸುರಪನಾ ಪಿಂಗಡೆಯೊಳೈತಪ್ಪ
ವನಜಾಕ್ಷನಂ ನೋಡಿ ವಿಷ್ಣು ಕೇಳಿವಳೀಗ
ಳನುಪಮಿತ ಮಾಯಾಧಿದೇವಿಯಿವಳಿಂದೆಮ್ಮ ಕೈಕಾಲ್ಗೆ ತಡೆಯಾದುದು
ಅನುಮಾನಿಸದೆ ಚಕ್ರದಿಂದಿಟ್ಟು ಕೊಲ್ಲೆಂಬ
ದನಿ ಪಿಂಚಲವಳ ತಲೆ ಮುಂಚಿ ಬೀಳ್ವಿನಮಿಷಲ್
ಮುನಿಪ ಹಾ ಹಾಯೆಂದು ಪಲುಬೆ ಖ್ಯಾತೆಯ ಜೀವನಂ ಪೋಯ್ತು ನಿಮಿಷದೊಳಗೆ ೨೭

ಘೋಯೆಂದುದಮರಾಳಿ ಹರುಷದಿಂ ಕಂಡು ಹಾ
ಹಾಯೆಂದು ದನುಜರಡಗೆಡೆದವನಿಗೊಡನೆದ್ದು
ಬಾಯಸಂಗೈಗಳಿಂ ಬಡಿದು ಬಸುರಂ ಮೋದಿಕೊಳುತಳುತೆ ಪೊರಳುತಕಟಾ
ತಾಯೆ ಕೇಳ್ ಪಾಪಾತ್ಮರೆಮ್ಮುಮಂ ನೀನಿಂದು
ಕಾಯಲೋಸುಗಮಾಯ್ತಲಾ ಮರಣಮಾಗ ಗುರು
ಕಾಯಲೆಮಗಮರರಂ ಕೊಂದು ಸತ್ತಪೆವೆಂದು ಸಿಡಿಲಂತೆ ಗರ್ಜಿಸಿದರು ೨೮

ಗಳನ್ನುಚ್ಚರಿಸಿ ಶಿವನನ್ನು ಧ್ಯಾನಿಸಲು ತಕ್ಷಣ ಎಲ್ಲ ದೇವತಾಸಮೂಹದ ಕೈಗಳೂ ಅಲ್ಲಾಡದಂತೆ ನಿಂತುಹೋದುವು. ಚಿತ್ರಪಟದ ಬೊಂಬೆಗಳಂತೆ ಅವರೆಲ್ಲ ಕಣ್ಣಿಗೆ ಕಾಣಿಸಿದರು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೨೭. ಅಷ್ಟರಲ್ಲಿ ದೇವೇಂದ್ರನು ತನ್ನ ಹಿಂದೆ ಬರುತ್ತಿದ್ದ ವಿಷ್ಣುವನ್ನು ನೋಡಿ, "ಅಯ್ಯಾ ವಿಷ್ಣುವೆ, ಕೇಳು, ಇವಳು ಈಗ ಸಾಟಿಯಿಲ್ಲದ ಮಾಯೆಗೆ ಅಧಿದೇವತೆಯಾಗಿದ್ದಾಳೆ, ಇವಳಿಂದ ನಮ್ಮ ಕೈ ಕಾಲುಗಳಿಗೆ ತಡೆಯುಂಟಾಯಿತು, ನೀನು ಸ್ವಲ್ಪವೂ ಅನುಮಾನಪಡದೆ ಚಕ್ರವನ್ನು ಪ್ರಯೋಗಿಸಿ ಈಕೆಯನ್ನು ಕೊಲ್ಲು" ಎಂದನು. ಅವನ ಮಾತು ಮುಗಿಯುವುದರೊಳಗಾಗಿ ವಿಷ್ಣುವು ಅವಳ ತಲೆ ಬೀಳುವಂತೆ ಚಕ್ರವನ್ನು ಬಿಟ್ಟನು. ಆಗ ಪ್ರಖ್ಯಾತಿಯು ಅಯ್ಯೋ ಮುನಿಪತಿ ಎಂದು ಕೂಗುತ್ತಾ ಇರುವಷ್ಟರಲ್ಲಿಯೇ ನಿಮಿಷದಲ್ಲಿ ಅವಳ ಪ್ರಾಣ ಹೋಯಿತು. ೨೮. ದೇವತೆಗಳು ಸಂತೋಷದಿಂದ ಉಘೇ ಉಘೇ ಎಂದರು. ಇದನ್ನು ನೋಡಿ ರಾಕ್ಷಸರು ಹಾ ಹಾ ! ಎಂದರು. ನೆಲಕ್ಕೆ ಬಿದ್ದು ತಕ್ಷಣ ಮೇಲೆದ್ದು ಅಂಗೈಗಳಿಂದ ಬಾಯಿ ಬಡಿದುಕೊಂಡು ಹೊಟ್ಟೆಯನ್ನು ಹೊಡೆದುಕೊಳುತ್ತ ಅಳುತ್ತ, ಹೊರಳುತ್ತ "ಅಯ್ಯೋ ತಾಯೆ, ಕೇಳು, ಪಾಪಿಗಳಾದ ನಮ್ಮನ್ನು ನೀವು ಕಾಪಾಡಲು ಪ್ರಯತ್ನಿಸಿದಾಗ ನಿಮಗೇ ಸಾವುಂಟಾಯಿತಲ್ಲವೆ ? ಇನ್ನು ಗುರುಗಳು ಎಷ್ಟೇ ಸಿಟ್ಟಾಗಲಿ ನಾವು ದೇವತೆ

CC-0. Jangamwadi Math Collection. Digitized by eGangotri

ಪ್ರಳಯಕಾಲದ ಸಿಡಿಲ ಗರ್ಜನೆಗಳಂ ಮಿಗುವ
ಖಳಕಠೋರಧ್ವನಿಗಳಾ ಮುನಿಪಕರ್ಣಂಗ
ಳೊಳೆ ಪೊಕ್ಕು ಸರ್ವಾಂಗದೊಳ್ ತೀವಿ ಬಲಿದಿರ್ಪ ವರಸಮಾಧಿಯ ಕೀಲನು
ಅಲುಗೆ ಮಲಗಿದರೇಳ್ವ ತೆರದೆ ಕಂದೆರೆದಿದಿರೊ
ಳಳಿದ ಸತಿಯುಂ ಕಂಡು ಹಾ ತರುಣಿ ಹಾಯೆಂದು
ಹಲುಬಿದಂ ಭೃಗು ಪೆಣ್ಣಗಲ್ಕೆಯೆಂತಪ್ಪರಂ ಭ್ರಮೆಗೊಳಿಸದೇಂ ಬಿಡುವುದೆ ೨೯

ಏತೆರದೊಳಾಯ್ತುಕಟ ತರುಣಿ ನಿನಗೀ ಮೃತಂ
ಮಾತಾಡು ಮನದನ್ನೆ ನಿನ್ನನಾಂ ಬಹುದಿವಸ
ಮಿಾ ತಪಸ್ಸಿಂದಗಲ್ದಿರೆ ಮುಳಿದೆಯೋ ಬಂದೆನೇಳಬಲೆ ನೋಡೆನ್ನನು
ಕಾತರದೊಳಾಲಿಂಗನಂ ಮಾಡು ಕೂಡೆನುತು
ಮಾ ತಲೆಯನೆತ್ತಿಕೊಂಡೊಡನೆ ಮುಂಡಾಡಿ ನಾ
ನಾ ತೆರದೊಳಳಲುತಿರ್ದನು ಸತಿಯ ರೂಪ ಗುಣ ಶೀಲಂಗಳಂ ಬಣ್ಣಿಸಿ ೩೦

ಸ್ನಾನಮಂ ಮಾಡಿ ಬಂದೆಂ ಹೋಮಕೆಡೆಮಾಡ
ನೂನದೇವಾರ್ಚನಾಪರಿಕರಮನಿರಿಸು ಸು
ಜ್ಞಾನಿ ಮುನಿವರರಾಶ್ರಮಕ್ಕೆ ಬಂದಿಹರವರ್ಗರ್ಘ್ಯಪಾದ್ಯಮನೊದಗಿಸು

ಗಳನ್ನು ಕೊಂದು ಸಾಯುತ್ತೇವೆ'' ಎಂದು ಸಿಡಿಲಿನಂತೆ ಗರ್ಜಿಸಿದರು. ೨೯. ಪ್ರಳಯ ಕಾಲದ ಸಿಡಿಲಿನ ಶಬ್ದವನ್ನು ಮಿಾರಿಸುವಂತಹ ರಾಕ್ಷಸರ ಕಠೋರವಾದ ಧ್ವನಿಯು ಭೃಗುಮುನಿಯ ಕಿವಿಗಳನ್ನು ಪ್ರವೇಶಮಾಡಿ, ಅವನ ದೇಹದಲ್ಲೆಲ್ಲ ತುಂಬಿ ಅವನ ಗಾಢವಾದ ಸಮಾಧಿಯ ಕೀಲನ್ನು ಅಲುಗಾಡಿಸಲು, ಮಲಗಿದ್ದವರು ಏಳುವಂತೆ ಮುನಿಯು ಕಣ್ಣು ತೆರೆದು, ತನ್ನ ಎದುರಿನಲ್ಲಿ ಸತ್ತ ಹೆಂಡತಿಯನ್ನು ನೋಡಿ, ಹಾ ತರುಣಿ ಹಾ ! ಎಂದು ಗೋಳಾಡಿದನು. ಹೆಣ್ಣಿನ ಅಗಲಿಕೆಯು ಎಂತಹವರನ್ನೂ ಭ್ರಮೆಗೊಳಿಸದೆ ಬಿಡುತ್ತದೆಯೆ ? ೩೦. ಎಲೌ, ತರುಣಿಯೆ, ನಿನಗೆ ಈ ಸಾವು ಹೇಗೆ ಉಂಟಾಯಿತು ? ಮಾತಾಡು ಪ್ರಿಯೆ, ತಪಸ್ಸಿನ ಕಾರಣದಿಂದ ಬಹಳ ದಿವಸ ನಿನ್ನನ್ನು ಅಗಲಿದ್ದೆನೆಂದು ಸಿಟ್ಟುಗೊಂಡೆಯೊ ? ಈಗ ನಾನು ಬಂದಿದ್ದೇನೆ, ಎದ್ದು ನನ್ನನ್ನು ನೋಡು, ಕಾತರದಿಂದ ನನ್ನನ್ನು ಅಪ್ಪಿಕೊ, ನನ್ನ ಜೊತೆಯಲ್ಲಿ ಕೂಡು ಎಂದು ಹೇಳುತ್ತಾ ಅವಳ ತಲೆಯನ್ನು ಎತ್ತಿಕೊಂಡು ಮುದ್ದಿಸಿ ನಾನಾ ರೀತಿಯಲ್ಲಿ ತನ್ನ ಸತಿಯ ರೂಪ, ಗುಣ, ಶೀಲಗಳನ್ನು ವರ್ಣಿಸಿ ದುಃಖಿಸುತ್ತಿದ್ದನು. ೩೧. ನಾನೀಗ ಸ್ನಾನಮಾಡಿ ಬಂದಿದ್ದೇನೆ, ಹೋಮಕ್ಕೆ ಸಿದ್ಧಮಾಡು, ಏನೂ ಕುಂದಿಲ್ಲದಂತೆ ದೇವಪೂಜೆಗೆ ಸಾಮಗ್ರಿಗಳನ್ನು ಇಡು. ಸುಜ್ಞಾನಿಗಳಾದ ಮುನಿಶ್ರೇಷ್ಠರು ನಮ್ಮ ಆಶ್ರಮಕ್ಕೆ ಬಂದಿದ್ದಾರೆ. ಅವರಿಗೆಲ್ಲ ಅರ್ಘ್ಯಪಾದ್ಯಾದಿ

CC-0. Jangamwadi Math Collection. Digitized by eGangotri

ಏನಕಟ ಮಾತಾಡದಿಹೆ ತರುಣಿ ನಿನ್ನಿಂದ
ಮೇ ನಡೆದುದೀ ತಪಸ್ಸಿಂದುವರೆಗಂ ಮುಂದೆ
ನಾನಾವತೆರದೊಳೀಶನನೊಲಿಪೆನಬಲೆ ಪೇಳೆಂದು ಮರುಗುತ್ತಿರ್ದನು ೩೧

ಹರನೊಲವಿನಿಂದಾದ ದಿವ್ಯಮಂತ್ರದ ಪುನ
ಶ್ಚರಣೆಯಿಂ ಸಂಜೀವಿನಿಯ ಮಂತ್ರಮಂ ಪಡೆದು
ಹರುಷದಿಂ ನಿನಗೆರಗಬಪ್ಪ ನಿಜಪುತ್ರನೊಡನೇನೆಂಬೆನೀ ಕೇಡನು
ತರುಣಿ ನಿನ್ನೊಡಹುಟ್ಟಿದರ್ಗೆ ನಾನೇನೆನು
ತ್ತೊರೆವೆನೀಯಳಿವನಕಟಕಟ ಹಾ ಶಂಕರನ
ಕರುಣಮೆಳದಾಗಿಮೊಗ್ಗುಡಿಸಿತಯ್ಯೋಯೆಂದು ಭೃಗು ದುಃಖಿಸುತ್ತಿರ್ದನು ೩೨

ಇಂತು ಮೋಹಾಂಧಕಾರಂ ಕವಿಯೆ ಕಣ್ಗಾಣ
ದಂತೆ ದುಃಖಿಪ ಮುನಿಗೆ ಕೋಪಮುದಯಿಸೆ ದಿವಿಜ
ಸಂತತಿಯನುರಿಪುವೊಡಿದೇ ವೇಳೆಯೆಂದು ದೂರಂ ಚೀರಿ ಪೇಳ್ವೆವೆಂದು
ಮುಂತಡ್ಡಬಿದ್ದೆದ್ದು ಕೈಮುಗಿದು ಕೇಳ್ ಮುಕ್ತಿ
ಕಾಂತ ನಿಮ್ಮಯ ಕೆಯ್ಯೆಡೆಯ ಮಕ್ಕಳಂ ವಿಷ್ಣು
ಮುಂತಾದ ಸುರರಟ್ಟಿ ಕೊಂದರಗಣಿತದೈತ್ಯರಳಿದರೆಂದುಸಿರ್ದರಂದು ೩೩

ಗಳನ್ನು ಒದಗಿಸು. ಏಕೆ ಮಾತನಾಡದೆ ಇದ್ದೀಯೆ ? ತರುಣಿ, ನನ್ನ ಈ ತಪಸ್ಸು ಇಂದಿನ ವರೆಗೆ ನಿನ್ನಿಂದಲೇ ನಡೆಯಿತು .ಮುಂದೆ ನಾನು ಯಾವ ರೀತಿಯಲ್ಲಿ ಶಿವನನ್ನು ಒಲಿಸಿ ಕೊಳ್ಳಲಿ ಹೇಳು, ಎಂದು ಗೋಳಾಡುತ್ತಿದ್ದನು. ೩೨. ಶಿವನ ಅನುಗ್ರಹದಿಂದ ಬಂದ ದಿವ್ಯ ಮಂತ್ರವನ್ನು ಪುನರುಚ್ಚಾರಮಾಡಿ ಸಂಜೀವಿನಿಮಂತ್ರವನ್ನು ಪಡೆದು ಸಂತೋಷ ದಿಂದ ನಿನಗೆ ನಮಸ್ಕರಿಸಲು ಬರುವ ನಮ್ಮ ಮಗನಿಗೆ ಈ ಆಪತ್ತನ್ನು ಏನೆಂದು ಹೇಳಲಿ ? ತರುಣಿಯೆ, ನಿನ್ನ ಒಡಹುಟ್ಟಿದವರಿಗೆ ಈ ಸಾವನ್ನು ಏನೆಂದು ಹೇಳಲಿ ? ಅಯ್ಯೋ ! ಶಂಕರನ ಕರುಣೆಯು ಪೂರ್ಣವಾಗಿ ಉಂಟಾಗಲಿಲ್ಲ ಎಂದು ಭೃಗುಮಹರ್ಷಿ ದುಃಖಿಸು ತ್ತಿದ್ದನು, ೩೩. ಈ ರೀತಿಯಲ್ಲಿ ಮೋಹಾಂಧಕಾರವು ಕವಿದು ಮುಂದುಗಾಣದೆ ಅತಿ ಯಾಗಿ ದುಃಖಪಡುತ್ತಿರುವ ಋಷಿಗೆ ಜೊತೆಗೇ ಅತಿಯಾದ ಕೋಪ ಹುಟ್ಟಿ ದೇವತೆಗಳ ಕುಲವನ್ನೇ ಭಸ್ಮಮಾಡಲು ಇದೇ ಸರಿಯಾದ ಸಮಯ ಎಂದು ನಮ್ಮ ದೂರುಗಳನ್ನು ಚೀರಿಕೊಂಡು ಹೇಳುತ್ತೇನೆ ಎಂದು ಯೋಚಿಸಿ ರಾಕ್ಷಸರು ಆ ಮುನಿಯ ಎದುರಿಗೆ ಅಡ್ಡ ಬಿದ್ದು ಎದ್ದು ಕೈಮುಗಿದು ಈ ರೀತಿ ಹೇಳಿದರು. "ಮುಕ್ತಿಗೊಡೆಯನಾದ ಮುನಿಯೆ ಕೇಳು. ನಿಮ್ಮ ಆಶ್ರಿತರಾದ ಮಕ್ಕಳನ್ನು ವಿಷ್ಣು ಮೊದಲಾದ ದೇವತೆಗಳು ಅಟ್ಟಿಸಿಕೊಂಡು ಬಂದು ಕೊಂದರು. ಲೆಕ್ಕವಿಲ್ಲದಷ್ಟು ಮಂದಿ ರಾಕ್ಷಸರು ಸತ್ತರು" ಎಂದು ಹೇಳಿದರು.



CC-0. Jangamwadi Math Collection. Digitized by eGangotri

ಪೊಕ್ಕಲ್ಲಿ ಪೊಕ್ಕು ಬರಲೋಡಿ ನಿಮ್ಮಾಶ್ರಮಂ
ಬೊಕ್ಕು ಮೊರೆಯಿಡುತಿರಲ್ಕೀ ಮಹಾಸತಿ ಕೇಳು
ತಕ್ಕರಿಂದೆಮಗಭಯವಿತ್ತೆಮ್ಮನಟ್ಟಿಬರ್ಪಮರರಂ ಸ್ತಂಭಿಸಲ್ಕೆ
ಚೆಕ್ಕನೀಕೆಯ ಶಿರಂ ಪರಿದು ಬೀಳಲ್ಕಂಡೆ
ಪೆಕ್ಕಿಕ್ಕೆಯಿಂ ಸುರಸಮೂಹಮಿದೆ ನೋಡಿಮುನ
ಲಕ್ಕೆಯುಡಗಿತು ರೋಷಶಿಖಿ ಪೊಣ್ಮಿ ಪೊಡಕರಿಸಿ ಪರ್ಬಿದುದನೇನೆಂಬೆನು ೩೪

ಕೂಡೆ ಭುಗಿಭುಗಿಲೆನುತ್ತಿರುವ ಶಿಖಿ ಮೆಯ್ಯೊಳಗೆ
ಮೂಡಿರ್ದುದು ಸುರಚೂಣಿಯೊಳಗ್ನಿ ಜಿಹ್ವೆಯುಂ
ನೀಡಿದುದು ಕಣ್ಣಿಟ್ಟಕಡೆ ಕರಿಕುವರಿವೃತಿರ್ದುವು ವಿಷ್ಣುಸುರಪಾದ್ಯರು
ಕಾಡೊಳರೆಬೆಂದ ಕೊರಡಂತಿರ್ದರವರ್ಗಳಂ
ನೋಡಿ ಕಡುಪಾಪಿಗಳಿರಾ ಮಹಾಸತಿಗಿಂತು
ಕೇಡೆಣಿಸಿದವರಾರದಾರೆಂದು ಭೃಗುಮುನೀಶ್ವರ ಕಾಯ್ದು ಗರ್ಜಿಸಿದನು ೩೫

ಬಾಯಾರಿದರ್ ಸುರರ್ ತದ್ವಿಷ್ಣು ಕಂಪಿಸುವ
ಕಾಯದಿಂದೆಲೆ ಮುನಿಪ ಕೇಳೀ ಮಹಾಸತಿಗ
ಪಾಯಮೆನ್ನಿಂದಾಯ್ತು ನೀಂ ಪರಮಋಷಿಯೆನ್ನ ಗುಣದೋಷಮಂ ನೋಡದೆ

೩೪. "ದೇವತೆಗಳು ಎಲ್ಲಿ ಹೋದರೆ ಅಲ್ಲಿ ನಮ್ಮನ್ನು ಬೆನ್ನಟ್ಟಿಬರಲು, ನಾವು ಓಡಿ ಬಂದು ನಿಮ್ಮ ಆಶ್ರಮವನ್ನು ಪ್ರವೇಶಮಾಡಿ ನಮಗೆ ಬಂದ ವಿಪತ್ತನ್ನು ಈ ಮಹಾಸತಿಗೆ ನಿವೇದಿಸಿಕೊಳ್ಳುತ್ತಿರಲು ಅದನ್ನು ಕೇಳಿ ಅಕ್ಕರೆಯಿಂದ ಈಕೆಯು ನಮಗೆ ಅಭಯವನ್ನು ಕೊಟ್ಟು ನಮ್ಮನ್ನು ಬೆನ್ನಟ್ಟಿ ಬರುತ್ತಿದ್ದ ದೇವತೆಗಳನ್ನು ತಡೆದು ನಿಲ್ಲಿಸಿದಳು. ಆ ಕ್ಷಣವೇ ಈಕೆಯ ತಲೆಯು ಹರಿದು ಬಿದ್ದುದನ್ನು ಕಂಡೆವು. ಸಾಲು ಸಾಲಾಗಿ ದೇವತೆಗಳ ಸಮೂಹವು ಇದೆ ನೋಡಿ" ಎನ್ನಲು ಋಷಿಯ ದುಃಖವು ಅಡಗಿ ಹೋಗಿ ಕೋಪಾಗ್ನಿ ಮೇಲಕ್ಕೆ ಕಾಣಿಸಿಕೊಂಡು ಹಬ್ಬಿತು. ಅದನ್ನು ಏನೆಂದು ಹೇಳಲಿ ? ೩೫. ಭುಗಿ ಭುಗಿಲೆನ್ನುತ್ತಿರುವ ಕೋಪಾಗ್ನಿ ಅವನ ಮೈಯಲ್ಲಿ ಮೂಡಿತು. ದೇವತೆಗಳ ಸೈನ್ಯದ ಮುಂಭಾಗಕ್ಕೆ ಬೆಂಕಿ ನಾಲಗೆಯನ್ನು ಚಾಚಿತು. ಋಷಿಯು ಕಣ್ಣಾಡಿಸಿದ ಕಡೆ ಸುಟ್ಟು ಕರಿಕಾಯಿತು. ವಿಷ್ಣು ಮೊದಲಾದ ದೇವತೆಗಳು ಕಾಡಿನಲ್ಲಿ ಅತಿ ಬೆಂದ ಕೊರಡಿ ನಂತೆ ಆದರು. ಅವರನ್ನು ನೋಡಿ "ಕಡು ಪಾಪಿಗಳೇ, ಈ ಮಹಾಸತಿಗೆ ಈ ರೀತಿ ಕೇಡನ್ನು ಮಾಡಿದವರು ಅದಾರು, ಯಾರು ಎಂದು ಭೃಗುಮಹರ್ಷಿಯು ಸಿಟ್ಟಿನಿಂದ ಗರ್ಜಿಸಿದನು. ೩೬. ದೇವತೆಗಳ ಬಾಯಿ ಒಣಗಿತು. ಆ ವಿಷ್ಣು ಮೈಯೆಲ್ಲ ನಡುಗುತ್ತ "ಎಲೈ ಮುನಿಶ್ರೇಷ್ಠನೆ ಕೇಳು, ಈ ಮಹಾಸತಿಗೆ ಅಪಾಯವು ನನ್ನಿಂದ ಉಂಟಾಯಿತು, ನೀನು ಶ್ರೇಷ್ಠನಾದ ಮುನಿ. ನನ್ನ ಗುಣದೋಷಗಳನ್ನು ಲೆಕ್ಕಿಸದೆ ಈ ತಪ್ಪನ್ನು ಮನ್ನಿಸಿ

CC-0. Jangamwadi Math Collection. Digitized by eGangotri

ಕಾಯಬೇಕೀ ತಪ್ಪನೆಂದಧಿಕವಿನಯದಿಂ
ದಾ ಯತೀಶಂಗೆ ದೈನ್ಯಂಬಡಲ್ ಕೋಪಭಾ
ರಾಯಮಾನಸನಾಗಿ ಭೃಗುಮುನೀಶಂ ಮಹಾವಿಷ್ಣುಗಂದಿಂತೆಂದನು ೩೬

ಸಕಲಜಗಮಂ ಸಲಹುತಿರ್ದು ನೀಂ ಪುಣ್ಯಪಾ
ತಕಭೇದಮಱಿದು ರುದ್ರಾಕ್ಷಿಯಂ ಭಸ್ಮಧಾ
ರಕನೆ ಶಿವನೆಂದು ತಿಳಿದುಂ ನಿರಾಯುಧರ ನೀನಿರಿವುದಲ್ಲೆಂದು ಬಗೆದು
ಅಕಟಿಮ್ಮುಮಂ ಶರಣ್ಬೊಕ್ಕುದಂ ಕಂಡು ನಾ
ಚಿಕೆಯಿಲಾ ಪೆಣ್ಗೊಲೆ ಭಟರ್ಗೆಂದು ತಿಳಿದು ಹೇ
ಸಿಕೆಯಿಲ್ಲದಿನಿತುಮಂ ಕೈಗೈದೆ ಭಾಪು ಬಲ್ಲಿದರರಸನಹುದೆಂದನು ೩೭

ಇಂತೆಂದು ನುಡಿಯಲಾ ವಿಷ್ಣುವತಿಭೀತಿಯಿಂ
ಕಂತುಹರಸನ್ನಿಭನೆಯಜ್ಞಾನದಿಂ ಬಂದು
ದೆಂತಾದೊಡಂ ಕಾಯಬೇಕೆನಲ್ ಕರಮೆತ್ತಿ ಗುಡುಗುಡಿಸಿ ಕೋಪದಿಂದೆ
ಭ್ರಾಂತ ಪೋಗಜ್ಞಾನಕೃತದಿಂ ಮಮ ಪ್ರಾಣ
ಕಾಂತೆಯಂ ಕೊಂದೆಯದರಿಂ ನೀನುಮಜ್ಞಾನ
ಮಂ ತಳೆದು ಮತ್ಸ್ಯಾದಿ ದಶಜನ್ಮದಿಂದೆ ಜನಿಸೆಂದು ಮುನಿ ಶಾಪಿಸಿದನು ೩೮

ನಡುನಡುಗುತಾ ವಿಷ್ಣು ಮಾಡಿದಕೆ ಫಲವಾಯ್ತು
ಕೊಡು ವಿಶಾಪವನೆನಲ್ ಕೋಪದಿಂದಾ ಕೇಳಿ
ಸುಡುವೆನಿಲ್ಲೆಂದೆಯ್ದಿ ವಿಶ್ವರಂ ಬಲ್ಲನೆನುತೊಡನೆ ಶಿವಮಂತ್ರದಿಂದೆ

ಕಾಪಾಡಬೇಕು'' ಎಂದು ಬಹಳ ವಿನಯದಿಂದ ಮತ್ತು ದೈನ್ಯದಿಂದ ಆ ಋಷಿಯನ್ನು ಬೇಡಿಕೊಂಡನು. ಆಗ ಕೋಪಾತಿಶಯದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಭೃಗು ಮುನಿಯು ಮಹಾವಿಷ್ಣುವಿಗೆ ಅಂದು ಈ ರೀತಿ ಹೇಳಿದನು. ೩೭. ''ನೀನು ಎಲ್ಲ ಲೋಕಗಳನ್ನು ಕಾಪಾಡುತ್ತ, ಪಾಪ-ಪುಣ್ಯಗಳ ಭೇದವನ್ನು ತಿಳಿದು, ರುದ್ರಾಕ್ಷಿಯನ್ನು ಭಸ್ಮ ವನ್ನು ಧರಿಸಿದವರನ್ನು ಶಿವನೇ ಎಂದು ತಿಳಿದೂ ಸಹ ನಿರಾಯುಧರನ್ನು ಕೊಲ್ಲಬಾರ ದೆಂದು ತಿಳಿದೂ, ಅಯ್ಯೋ ! ರಾಕ್ಷಸರು ನಮಗೆ ಶರಣುಹೊಕ್ಕರೆಂಬುದನ್ನು ನೋಡಿಯೂ, ಹೆಣ್ಣನ್ನು ಕೊಲ್ಲುವುದು ವೀರರಿಗೆ ಅವಮಾನವೆಂದು ತಿಳಿದೂ ಅಸಹ್ಯ ಪಡದೆ ಇಷ್ಟನ್ನೂ ಮಾಡಿದೆ. ಭಲೆ ನೀನು ವೀರರಿಗೆ ರಾಜನೇ ಸರಿ'' ಎಂದು ಹೀಯಾಳಿಸಿ ದನು. ೩೮. ಈ ರೀತಿ ಹೇಳಲು ಆ ವಿಷ್ಣುವು ಬಹು ಅಂಜಿಕೆಯಿಂದ ''ಶಿವನಿಗೆ ಸಮಾನನಾದವನೇ ಅಜ್ಞಾನದಿಂದ ಇದೆಲ್ಲವೂ ಆಯಿತು. ಹೇಗಾದರೂ ಕಾಪಾಡ ಬೇಕು'' ಎನ್ನಲು ಆಗ ಋಷಿಯು ಅತಿಯಾದ ಕೋಪದಿಂದ ಗುಡುಗುಡಿಸಿ ಕೈಯೆತ್ತಿ, ''ಮರುಳೇ, ಹೋಗು ಅಜ್ಞಾನದಿಂದ ನನ್ನ ಪ್ರಾಣಕಾಂತೆಯನ್ನು ಕೊಂದಿರುವುದರಿಂದ ನೀನೂ ಅಜ್ಞಾನವನ್ನು ತಾಳಿ ಮೀನು ಮುಂತಾದ ಹತ್ತು ಜನ್ಮಗಳಲ್ಲಿ ಹುಟ್ಟು'' ಎಂದು ಶಾಪಕೊಟ್ಟನು. ೩೯. ವಿಷ್ಣುವು ನಡುನಡುಗುತ್ತಾ ಮಾಡಿದ ಅಕಾರ್ಯಕ್ಕೆ ಸರಿಯಾದ ಪ್ರತಿಫಲ ದೊರೆಯಿತು. ಇದಕ್ಕೆ ವಿಶಾಪವನ್ನು ಕೊಡು ಎನ್ನಲು, ಇದನ್ನು ಕೇಳಿ ಆ

CC-0. Jangamwadi Math Collection. Digitized by eGangotri

ಬಿಡದೆ ಕಲಶೋದಕಂದಳಿದವಳ ಜೀವವುಂ
ಪಡೆದನಾ ಮುನಿಯತ್ತ ಸುರರೈದಿದರ್ ಲೋಕ
ದೊಡೆಯನೆನಿಪೀಶನಂ ಕೂರ್ತು ಹರಿ ತಪಿಸಲ್ಕೆ ಮೆಚ್ಚಿ ಶಿವನಿಂತೆಂದನು ೩೯

ಬಿಡು ತಪವನೆಲೆ ವಿಷ್ಣು ಸಾಕು ನಿನ್ನಿಷ್ಟವುಂ
ಕೊಡುವೆನಾ ಬೇಡೆನಲ್ ಕೊಂಡಾಡಿ ಭಕ್ತಿಯಿಂ
ಮೃಡನೆ ಕೇಳ್ ಮತ್ಸ್ಯಾದಿಯಾಗಿ ದಶಜನ್ಮದಿಂ ಬಾರೆಂದು ಭೃಗುಮುನಿಪನು
ಕಡುಮುಳಿದು ಶಾಪವುಂ ಕೊಟ್ಟನಯ್ಯಯ್ಯೊ ನಿ
ಮ್ಮಡಿಗಳ್ಗೆ ದೂರವಹುದಲ್ಲದೆಯುಮಾನೆಂತು
ಪಡೆವೆನೀ ದಶಜನ್ಮಮಂ ಕೆಟ್ಟೆನೇನುಗತಿಯೆನಗೆಂದು ಹರಿ ನುಡಿದನು ೪೦

ಆದೊಡೇನಾಯ್ತು ನಿನ್ನಯ ಪತ್ತುಮೂರ್ತಿಯುಂ
ಮೇದಿನಿಗೆ ಹಿತಕಾರಿಯೆನಿಸುವೆಂ ತಾನೆನಲ್
ಮಾದೇವ ತನ್ಮೂರ್ತಿಯಿಂದಹಂಕರಿಸಿದೊಡೆ ಬಹುಕಾಲವಿರವೇಳ್ಪುದು
ನೀ ದಯಾಂಬುಧಿ ಪೇಳೆನಲ್ಕಹಂಕರಿಸಿದೊಡೆ
ಛೇದಿಸುವೆನಾ ರೂಪನದರ ಕುರುಪೊಂದನಾಂ
ತಾದರಿಪೆನಿಂತು ನಿನ್ನಯ ಮೂರ್ತಿಗಳನೆಂದು ಕೈಲಾಸವುಂ ಪೊಕ್ಕನು ೪೧

ಮುನಿಯು ಕೋಪದಿಂದ, ''ನಿಮ್ಮನ್ನು ಸುಡುತ್ತೇನೆ. ಇಲ್ಲಿಂದ ಹೊರಟುಹೋಗಿ. ಈಶ್ವರನು ವಿಶಾಪವನ್ನು ಬಲ್ಲನು'' ಎನ್ನುತ್ತ ತಕ್ಷಣ ಶಿವಮಂತ್ರದಿಂದ ಕಲಶದ ನೀರನ್ನು ತೆಗೆದುಕೊಂಡು ಚಿಮುಕಿಸಿ ಮೃತಳಾಗಿದ್ದ ಪತ್ನಿಯನ್ನು ಬದುಕಿಸಿದನು. ಆಕಡೆ ದೇವತೆಗಳು ಹೊರಟುಹೋದರು. ವಿಷ್ಣುವು ಲೋಕದೊಡೆಯನಾದ ಶಿವನನ್ನು ಕುರಿತು ತಪಸ್ಸು ಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಶಿವನು ಈ ರೀತಿ ಹೇಳಿದನು.
೪೦. ''ಅಯ್ಯಾ ವಿಷ್ಣುವೆ, ನೀನು ಮಾಡುತ್ತಿರುವ ತಪಸ್ಸು ಸಾಕು, ನಿಲ್ಲಿಸು, ನಿನ್ನಿಷ್ಟವೇನು ಬೇಡು. ಬೇಡಿದ್ದನ್ನು ನಾನು ಕೊಡುತ್ತೇನೆ'' ಎಂದನು. ಅವನನ್ನು ಭಕ್ತಿಯಿಂದ ಕೊಂಡಾಡುತ್ತ ''ಶಿವನೆ, ಕೇಳು. ಭೃಗುಮುನೀಶ್ವರನು ಕೋಪದಿಂದ ನನಗೆ ಮೀನು ಮೊದಲಾದ ಹತ್ತು ಜನ್ಮಗಳನ್ನು ಎತ್ತಿಬಾರೆಂದು ಶಾಪಕೊಟ್ಟನು. ಅಯ್ಯೋ ! ನಿಮ್ಮ ಪಾದಗಳಿಗೆ ನಾನು ದೂರವಾಗುತ್ತೇನೆ. ಅದೂ ಅಲ್ಲದೆ ನಾನು ಹೇಗೆ ಈ ಹತ್ತು ಜನ್ಮಗಳನ್ನು ಪಡೆಯಲಿ ? ಕೆಟ್ಟೆನು, ನನಗೇನು ಗತಿ'' ಎಂದು ವಿಷ್ಣು ಹೇಳಿದನು.
೪೧. ''ಶಾಪ ಕೊಟ್ಟರೆ ಏನಾಯಿತು ? ನಿನ್ನ ಹತ್ತು ರೂಪನ್ನು ಭೂಮಿಗೆ ಹಿತಕಾರಿ ಆಗುವಂತೆ ಮಾಡುತ್ತೇನೆ'' ಎಂದು ಶಿವನು ಹೇಳಿದನು. ಅದಕ್ಕೆ ವಿಷ್ಣುವು ''ಮಹಾದೇವನೆ, ಆ ರೂಪಗಳಲ್ಲಿ ನಾನು ಅಹಂಕಾರ ಹೊಂದಿದರೆ ಬಹುಕಾಲವಿರುವಂತೆ ಆಗಬಹುದು, ನೀನು ದಯಾಸಾಗರನು, ಮುಂದೇನು ಮಾಡಲಿ ಹೇಳು'' ಎನ್ನಲು ಶಿವನು, ''ನೀನು ಅಹಂಕರಿಸಿದ್ದೇ ಆದರೆ ಆ ರೂಪವನ್ನು ನಾಶಮಾಡಿ ಅದರ ರೂಪಗಳನ್ನು ನಾನು ಧರಿಸುತ್ತೇನೆ. ಈ ರೀತಿ ನಿನ್ನ ಶಾಪವಿಮೋಚನೆ ಮಾಡುತ್ತೇನೆ'' ಎಂದು

CC-0. Jangamwadi Math Collection. Digitized by eGangotri

ಕಾರಣಮದೀಗ ಕೇಳೆಲೆ ರಾಮ ವಿಷ್ಣುಗವ
ತಾರಮಿಾ ಪತ್ತಾದುವವರೊಳೀ ಮತ್ಸ್ಯಾವ
ತಾರಮದನೀಶ್ವರಂ ಮೊದಲೆಂದ ಕ್ರಮದೊಳೀಪರಿ ಬಂದು ಮರ್ದಿಸಿದನು
ಈ ರೀತಿಯಿಂ ಮುಂದೆ ಹರಿ ಪುಟ್ಟುವಂ ಮಹಾ
ಘೋರಜನ್ಮಂಗಳಂ ಪರಿದಪಂ ಶಿವನೆಂದು
ಮಾರಹರನಪರಾವತಾರನಾ ಚೆನ್ನಬಸವೇಶ್ವರಂ ನಿರವಿಸಿದನು ೪೨

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೪೩.

ಇಪ್ಪತ್ತೊಂದನೆಯ ಸಂಧಿ ಸಂಪೂರ್ಣ

ಕೈಲಾಸವನ್ನು ಹೊಕ್ಕನು. ೪೨. ಎಲೈ ಸಿದ್ಧರಾಮ, ಆ ಕಾರಣದಿಂದ ವಿಷ್ಣುವಿಗೆ ಹತ್ತು ಅವತಾರವಾಯಿತು. ಈಗ ಕೇಳು, ಅದರಲ್ಲಿ ಮತ್ಸ್ಯಾವತಾರ ಮೊದಲನೆಯದು. ಹಿಂದೆ ಹೇಳಿದಂತೆ ಈಶ್ವರನು ಬಂದು ಇದನ್ನು ಸಂಹರಿಸಿದನು. ಈ ರೀತಿಯಿಂದ ಮುಂದೆ ವಿಷ್ಣುವು ಮಹಾಘೋರವಾದ ಜನ್ಮಗಳನ್ನು ಧರಿಸುತ್ತಾನೆ. ಅದನ್ನು ಶಿವನು ಪರಿಹರಿಸುತ್ತಾನೆ ಎಂದು ಈಶ್ವರನ ಅಪರಾವತಾರನಾದ ಚೆನ್ನಬಸವಣ್ಣನು ನಿರೂಪಿಸಿದನು. ೪೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ಪಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೊಂದನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತೆರಡನೆಯ ಸಂಧಿ

ಸೂಚನೆ : ದೂರ್ವಾಸನಿಂದೆ ಸಿರಿಪೋಗಲಮರಾಸುರರ್
ಶರ್ವನಾಜ್ಞೆಯೊಳುದಧಿಯಂ ಮಥಿಸೆ ವಿಷ ಶಶಿಗ
ಳುರ್ವಿಜನರಂ ಕೊಲಲ್ಕಭವನೈತಂದಾಂತು ಸಕಲಜನರಂ ಪೊರೆದನು

ಉಗ್ರಶಶಿಕಾಂತಸಮವಿಗ್ರಹಾವನಿಜಾಪ
ರಗ್ರಹಕಲಾಧರ ಸಮುಗ್ರಮಹಿಮಾರ್ಣವ ವಿ
ಷಗ್ರೀವ ನಿಬಿಡಸಮುದಗ್ರಪಿಂಗಳಜಟಾಭ್ಯಗ್ರ ದುರಿತವಿಮರ್ದನ
ಉಗ್ರದಾನವಘನತರಗ್ರೀವಖಂಡನ ಕ
ರಾಗ್ರಧೃತಪಾವಕ ಶಿರೋಗ್ರಸ್ಥ ಗಂಗಾಜ
ಲಾಗ್ರದಿಂದೆಮಗೆ ಸಮುದುಗ್ರಚಿರಪದವ ನೀಂ ಕೊಡು ಸುಪಂಪಾವಲ್ಲಭ ೧

ಕೇಳಿನ್ನು ಸಿದ್ಧರಾಮೇಶ ದಿವಿಜೇಶ್ವರಂ
ಕೇಳೀವನಕೆ ಸಕಲ ದೇವಸುದತಿಯರ ಸ
ಮ್ಮೇಳದಿಂ ನಾನಾ ಪ್ರಪಂಚಿನ ವಿನೋದದೊಳ್ ಸುಖವಿರ್ದು ತೀರ್ಚಿ ಬಳಿಕ
ಘೀಳಿಡುವ ವಾದ್ಯಸಂದೋಹದಿಂ ಸಮದಶುಂ
ಡಾಲಮಸ್ತಕದೊಳಗಲಂಕರಿಸಿ ಬರ್ಪ ಸುರ
ಪಾಲಂಗೆ ಹರನಿತ್ತ ಮಂದಾರಮಾಲೆಯಂ ದೂರ್ವಾಸಮುನಿ ಕೊಟ್ಟನು ೨

ಸೂಚನೆ : ದೂರ್ವಾಸನ ಶಾಪದಿಂದ ಐಶ್ವರ್ಯವು ನಾಶವಾಗಲು ಈಶ್ವರನ ಅಪ್ಪಣೆಯಂತೆ ದೇವತೆಗಳು ಮತ್ತು ರಾಕ್ಷಸರು (ಕ್ಷೀರ) ಸಾಗರವನ್ನು ಕಡೆದರು. ಆಗ ವಿಷ ಮತ್ತು ಚಂದ್ರರು ಹುಟ್ಟಿ ಪ್ರಪಂಚದ ಜನರನ್ನು ಕೊಲ್ಲಲು ಆರಂಭಿಸಲು ಶಿವನು ಅಲ್ಲಿಗೆ ಬಂದು ಅದನ್ನು ಕೈಕೊಂಡು ಎಲ್ಲ ಜನರನ್ನೂ ರಕ್ಷಿಸಿದನು. ೧. ಭಯಂಕರನಾದವನು, ಚಂದ್ರಕಾಂತಕ್ಕೆ ಸಮನಾದ ಶರೀರಿ, ಮಂಗಳನಿಗೆ ಹಿಂದೆ ಇರತಕ್ಕವನಾದ ಚಂದ್ರನ ಕಲೆಯನ್ನು ಧರಿಸಿದವನು, ಮಹಿಮಾಸಮುದ್ರ, ನೀಲಕಂಠ, ಒತ್ತಾದ ಮನೋಹರವಾದ ಕಂದುಬಣ್ಣದ ಜಟೆಯನ್ನು ಮೇಲಿನ ಭಾಗದಲ್ಲಿ ಉಳ್ಳವನು, ಪಾಪನಾಶಕ, ಭಯಂಕರನಾದ ರಾಕ್ಷಸನ ಕುತ್ತಿಗೆಯನ್ನು ಖಂಡಿಸಿದವನು, ಅಂಗೈಯಲ್ಲಿ ಅಗ್ನಿಯನ್ನು ಧರಿಸಿದವನು, ಪಂಪಾಪತಿಯೆ, ತಲೆಯ ಮೇಲೆ ಉಳ್ಳ ಗಂಗೆಯ ನೀರಿನಿಂದ ನಮಗೆ ಮನೋಹರವಾದ, ತೀವ್ರತರವಾದ ಶಾಶ್ವತಪದವನ್ನು ನೀನು ಕೊಡು. ೨. ಸಿದ್ಧರಾಮೇಶನೆ, ಇನ್ನು ಕೇಳು, ದೇವೇಂದ್ರನು ಎಲ್ಲ ದೇವತಾಸ್ತ್ರೀಯರೊಡಗೂಡಿ ಕೇಳೀವನಕ್ಕೆ ಬಂದು, ನಾನಾ ರೀತಿಯ ವಿನೋದದಲ್ಲಿ ಸುಖದಿಂದಿದ್ದು, ಮುಗಿಸಿ ಬಳಿಕ ವಾದ್ಯಗಳು ಧ್ವನಿಗೈಯುತ್ತಿರಲು, ಅಲಂಕೃತನಾಗಿ ಮದಿಸಿದ ಐರಾವತದ ಮೇಲೆ ಕುಳಿತು ಬರುತ್ತಿದ್ದನು, ಆಗ ದೂರ್ವಾಸಮುನಿಯು ತನಗೆ ಶಿವನು ಕೊಟ್ಟ ಮಂದಾರ

CC-0. Jangamwadi Math Collection. Digitized by eGangotri

ಪರಿಯಜ ಸುರಾಸುರೇಂದ್ರಾಧ್ಯರಂ ಕೊಂಬನೇ
ಕೆರಳಿದೊಡೆ ದೂರ್ವಾಸಮುನಿಯಿತ್ತ ಮಾಲೆಯಂ
ಹರಿಯಂಕುಶದೊಳಾಂತು ಕುಂಭಿಕುಂಭಕೆ ಸುತ್ತೆ ಪರಿಮಳಕೆ ಪರಿದೆರಗುವ
ವರಚಂಚರೀಕವಂ ಸೋವುತಾ ಮಾಲೆಯಂ
ಕರಿ ನೆಲದೊಳಿಟ್ಟುದ್ದೆ ಮುನಿ ಕಂಡು ಕೋಪದಿಂ
ಹರನಿತ್ತ ಮಂದಾರಮಾಲೆಗಿದು ವಿಧಿಯೆ ಹಾ ಹಾಯೆನುತ್ತುರಿದೆದ್ದನು ೩

ಖಳನೆ ಕೇಳ್ ಕಾಮಾರಿ ತನ್ನ ಪ್ರಸಾದವೆಂ
ದೊಲಿದಿತ್ತನೆನಗದಂ ನಿನಗೀಯೆ ಗರ್ವದಿಂ
ತಳೆಯದಾ ಮಾಲೆಯಂ ಕರಿ ನೆಲದೊಳಿಟ್ಟೊರಸಿತದರಂತೆ ನಿನ್ನ ಸಿರಿಯು
ಜಲಧಿಯೊಳ್ ಕೂಡಲೆಂದುಗ್ರಕೋಪದೊಳೆ ಮುನಿ
ತಿಲಕನಾಗಳೆ ಶಪಿಸಿದಂ ನಿಮಿಷಮಾತ್ರದೊಳ್
ವಿಲಯಮಾದುದು ಸುರಪನೇಳ್ಗೆ ಪಿರಿಯರ ವಿರೋಧಂ ಸಿರಿಗೆ ಕಷ್ಟಮಲ್ತೇ ೪

ಇಂದ್ರನಾತನ ಶಾಪಮಂ ತಳೆದು ಬಳಿಕಾ ಗ
ಜೇಂದ್ರಮಸ್ತಕವನಿಳಿದೈತಂದು ಬಂದಾ ಮು
ನೀಂದ್ರನಡಿಗೆರಗಿಯೆನ್ನಯ ತಪ್ಪ ಕಾಯೆಂದು ಬಿನ್ನವಿಸೆ ಕರುಣದಿಂದೆ

ಮಾಲೆಯನ್ನು ಇಂದ್ರನಿಗೆ ಕೊಟ್ಟನು. ೩. ದೂರ್ವಾಸಮುನಿಯು ಕೋಪಗೊಂಡರೆ ವಿಷ್ಣು-ಬ್ರಹ್ಮ, ದೇವ-ದಾನವೇಶ್ವರರನ್ನು ಲಕ್ಷಿಸುತ್ತಾನೆಯೆ ? ಮುನಿ ಕೊಟ್ಟ ಮಾಲೆಯನ್ನು ದೇವೇಂದ್ರನು ಅಂಕುಶದಲ್ಲಿ ಎತ್ತಿಕೊಂಡು ಅದನ್ನು ಆನೆಯ ಕುಂಭಸ್ಥಳಕ್ಕೆ ಸುತ್ತಿದನು. ಆ ಹೂವಿನ ಪರಿಮಳಕ್ಕೆ ಬಂದು ಮುತ್ತುವ ದುಂಬಿಗಳನ್ನು ಓಡಿಸುತ್ತಾ ಆನೆಯು ಹಾರವನ್ನು ಕೆಳಕ್ಕೆ ಹಾಕಿಹೊಸಕಿತು.ಅದನ್ನು ಮುನಿಯು ನೋಡಿ ಕೋಪದಿಂದ ಈಶ್ವರನು ಕೊಟ್ಟ ಮಂದಾರಮಾಲೆಗೆ ಈ ಗತಿಯೆ ? ಅಯ್ಯೋ ! ಅಯ್ಯೋ ಎನ್ನುತ್ತ ಅತಿಕ್ರುದ್ಧನಾದನು. ೪. "ಎಲೈ ದುಷ್ಟನೆ, ಕೇಳು, ಕಾಮಾರಿಯಾದ ಶಿವನು ತನ್ನ ಪ್ರಸಾದವೆಂದು ನನಗೆ ಕರುಣಿಸಿಕೊಟ್ಟ ಮಂದಾರಮಾಲೆಯನ್ನು ನಾನು ನಿನಗೆ ಕೊಡಲು ನೀನು ಆ ಮಾಲೆಯನ್ನು ಧರಿಸಿಕೊಳ್ಳದೆ, ಗರ್ವದಿಂದ ಅದನ್ನು ಆನೆಗೆ ಕೊಟ್ಟೆ. ಅದು ಆ ಮಾಲೆಯನ್ನು ನೆಲದ ಮೇಲೆ ಒಗೆದು ಹೊಸಕಿಹಾಕಿತು, ಅದರಂತೆಯೇ ನಿನ್ನ ಐಶ್ವರ್ಯವು ನೀರಪಾಲಾಗಲಿ" ಎಂದು ಭಯಂಕರವಾದ ಕೋಪದಿಂದ ಮುನಿಶ್ರೇಷ್ಠನಾದ ದೂರ್ವಾಸನು ಆಗಲೇ ಶಾಪವನ್ನು ಕೊಟ್ಟನು. ನಿಮಿಷಮಾತ್ರದಲ್ಲಿ ದೇವೇಂದ್ರನ ಏಳಿಗೆಯೆಲ್ಲ ನಾಶವಾಯಿತು. ಹಿರಿಯರ ವಿರೋಧವನ್ನು ಕಟ್ಟಿಕೊಂಡರೆ ಐಶ್ವರ್ಯಕ್ಕೆ ಹಾನಿಯಲ್ಲವೆ ? ೫. ದೇವೇಂದ್ರನು ಮುನಿಯ ಶಾಪವನ್ನು ಪಡೆದು ಅನಂತರ ಐರಾವತದಿಂದ ಇಳಿದುಬಂದು ಋಷಿಯ ಪಾದಗಳಿಗೆ ನಮಸ್ಕಾರಮಾಡಿ ತನ್ನ ತಪ್ಪನ್ನು ಕ್ಷಮಿಸಿ ಕಾಪಾಡಬೇಕೆಂದು ವಿಜ್ಞಾಪಿಸಿಕೊಂಡನು. ಅದಕ್ಕೆ ಆ ಮುನಿಯು ಶಿವನು ನಿನಗೆ

CC-0. Jangamwadi Math Collection. Digitized by eGangotri

ಸಾಂದ್ರಸೌಭಾಗ್ಯಮಂ ಕೊಟ್ಟಪಂ ನಿನಗಾ ಘ
ಣೇಂದ್ರಭೂಷಣನೆನುತೆ ಮುನಿ ಪೋಗೆ ದುಃಖದಿನು
ಪೇಂದ್ರಾಗ್ರಜಂ ಖೇದವಾರಾಶಿಯೊಳ್ ಕೂಡಿ ಮುಳುಗಾಡಿದಂ ಕ್ಷಣದೊಳು ೫

ತಡೆಯದೈರಾವತವನೇರಲುಜ್ಜುಗಿಸೆ ಮು
ನ್ನಡಗಿದುದು ಸೇನೆ ಸರಿದುದು ದೇವಕಾಮಿನಿಯ
ರೊಡನೆ ಮೃಗತೃಷ್ಣೆಯಂತಾದುದಮರಾವತಿಯ ಸಿರಿ ಕನಸಿನಿರವಾದುದು
ಬಿಡದೀಕ್ಷಿಸುತ್ತೆ ಹರಿ ಶಿವನಂ ಕುರಿತು ತಪಂ
ದೊಡಗಿ ಮುಚ್ಚಿಸಿ ದೈನ್ಯಭಾವದಿಂ ತನಗೆ ಬಂ
ದಡಸಿದಾಪತ್ತುಮಂ ಬಿನ್ನೈಸೆ ಕೇಳ್ದೀಶ್ವರಂ ಸುರೇಶಂಗೆಂದನು ೬

ಹರಿಯಜ ಸುರಾಸುರಾದಿಗಳುಮಂ ಕೂಡಿ ನೀಂ
ಶರಧಿಯಂ ಮಥಿಸೆ ಬಪ್ಪುದು ನಿನ್ನ ಸೌಭಾಗ್ಯ
ಮಿರದೆ ರಚಿಸೆಂದು ಪೇಳ್ದೀಶ್ವರಂ ಪೋದನತ್ತಿತ್ತಲಾ ಸುರಪಾಲನು
ಹರನಾಜ್ಞೆಯಿಂದೆ ಬ್ರಹ್ಮಾಚ್ಯುತರ್ಗೀ ಹದನ
ನೊರೆಯಲವರಂದು ನಾನಾ ಸುರಸುರಾದಿಗಳ
ಕರೆಸಿಕೊಂಡವರೆಲ್ಲರುಂ ಸಹಿತ ತೀವ್ರದಿಂ ಕ್ಷೀರಾಬ್ಧಿಗೈತಂದರು ೭

ಕರಿಯಂತೆ ಘುರದಂತೆ ಪುಷ್ಕರೋದ್ಭಾಸಿತಂ
ಹರಿಯಂತೆ ವಿಧಿಯಂತೆ ಗೋಯುಕ್ತಮಧಿಕಮುಂ
ಘುರದಂತೆ ಮುಖದಂತೆ ವಾಡಬಾನ್ವಿತಮದ್ರಿಯಂತೆ ಪರಮೇಶನಂತೆ

ಅತಿ ಹೆಚ್ಚಿನ ಸೌಭಾಗ್ಯವನ್ನು ಕರುಣಿಸುತ್ತಾನೆಂದು ಹೇಳಿ ಹೊರಟುಹೋದನು, ಆ ಕ್ಷಣ ದಲ್ಲಿ ಉಪೇಂದ್ರನ ಅಣ್ಣನಾದ ದೇವೇಂದ್ರನು ದುಃಖಸಾಗರದಲ್ಲಿ ಮುಳುಗಿದನು. ೬. ಮತ್ತೆ ಐರಾವತವನ್ನು ಹತ್ತಲು ಇಂದ್ರನು ಪ್ರಯತ್ನಿಸಿದನು, ಆ ಕ್ಷಣ ಅದು ಮಾಯವಾಯಿತು. ಸೈನ್ಯವು ದೇವಕಾಮಿನಿಯರ ಜೊತೆಯಲ್ಲಿ ಬಿಸಿಲ್ಗುದುರೆಯಂತೆ ಸರಿಯಿತು. ಅಮರಾವತಿಯ ಐಶ್ವರ್ಯವು ಕನಸಿನ ಸ್ಥಿತಿಯಾಯಿತು, ಇದೆಲ್ಲವನ್ನೂ ನೋಡುತ್ತ ದೇವೇಂದ್ರನು ಈಶ್ವರನನ್ನು ಕುರಿತು ತಪಸ್ಸಿನಲ್ಲಿ ತೊಡಗಿದನು, ಶಿವನನ್ನು ಮೆಚ್ಚಿಸಿದನು. ತನಗೊದಗಿದ ತೊಂದರೆಯನ್ನು ದೀನನಾಗಿ ವಿಜ್ಞಾಪಿಸಿಕೊಂಡನು, ಅದನ್ನು ಕೇಳಿದ ಈಶ್ವರನು ದೇವೇಂದ್ರನಿಗೆ ಹೀಗೆ ಹೇಳಿದನು. ೭. ವಿಷ್ಣು, ಬ್ರಹ್ಮ, ದೇವ–ದಾನವರನ್ನು ಕೂಡಿಕೊಂಡು ನೀನು ಸಮುದ್ರವನ್ನು ಮಥನಮಾಡಿದರೆ ನಿನ್ನ ಎಲ್ಲ ಸಾಭಾಗ್ಯವೂ ಬರುತ್ತದೆ. ಕೂಡಲೆ ಅದನ್ನು ಮಾಡು ಎಂದು ಹೇಳಿ ಈಶ್ವರನು ಅತ್ತ ಹೋದನು. ಇತ್ತ ದೇವೇಂದ್ರನು ಶಿವನ ಅಪ್ಪಣೆಯಂತೆ ಬ್ರಹ್ಮ-ವಿಷ್ಣುಗಳಿಗೆ ಈ ವಿಷಯವನ್ನು ತಿಳಿಸಲು ಆಗ ಅವರೆಲ್ಲರೂ ನಾನಾ ದೇವದಾನವರನ್ನು ಕರೆಸಿ ಕೂಡಿ ಕೊಂಡು ತ್ವರೆಯಿಂದ ಕ್ಷೀರಸಮುದ್ರದ ಬಳಿಗೆ ಬಂದರು. ೮. ಸಮುದ್ರವು ಕಣ್ಣಿಗೆ ಮಂಗಳಕರವಾಗಿ ಕಾಣುತ್ತಿತ್ತು, ಹೇಗೆಂದರೆ ಆನೆ ಸೊಂಡಲಿನಿಂದ

CC-0. Jangamwadi Math Collection. Digitized by eGangotri

ವರಶಿವಾಲಂಕೃತಂ ನಿಧಿಯಂತೆ ನಿಟಿಲದಂ
ತಿರೆ ಶಂಖಶೋಭಿ ಸನ್ಮುನಿಯಂತೆ ವನವಂತೆ
ನಿರುತಮುತ್ಕಳಿಕಾಪ್ರಸಂಗಿ ತಾನೆಂದುದಧಿ ಕಂಗೆ ಮಂಗಳವಾದುದು ೮

ತೀವಿ ರಸಮಯವಾಗಿ ಸತ್ಕಾವ್ಯಮಲ್ತು ಪ್ಲವ
ಗಾವಾಸಮಾಗಿ ವನಮಲ್ತು ಸತತಂ ಬಾದು
ಸೇವಿಪ ಪಯೋಧರಸ್ಪರ್ಶಿ ತಾನಾಗಿಯುಂ ಪಲ್ಲವಕಹಸ್ತಮಲ್ತು
ಆವಗಂ ಮಕರಕರ್ಕಟಕಯುತಮಾಗಿರ್ದು
ಭಾವಿಸಲ್ ರಾಶಿಗಣಮಲ್ತು ಮೀಂಗಳ್ ಜನಿತ
ಪೀವರಗ್ರಹಮಾಗಿ ನಭಮಲ್ತುಮೆನಿಸಿ ರತ್ನಾಕರಂ ಕಂಗೆಸೆದುದು ೯

ಇಂತೆಸೆವ ದುಗ್ಧವಾರಾಶಿಯಂ ನೋಡುತ
ತ್ಯಂತಹರ್ಷಂದಳೆದು ಮಂದರಾದ್ರಿಯನೆ ಕಿ
ತ್ತಾಂತು ವಾಸುಗಿಯ ನೇಣಂ ಬಿಗಿದು ವಾಲವದನಂಗಳಂ ಪಿಡಿದುಕೊಂಡು
ಮುಂತೊಗೆದ ವಸ್ತುವಜ್ಜೋದರಂಗವರ ಸಮ
ನಂತರದೊಳೆಮಗೆ ತಮಗೆಂದು ದೇವಾಸುರರ್
ತಂತಮ್ಮೊಳಾಲೋಚಿಸುತೆ ಕಡೆವ ಸಮಯದೊಳ್ ರಾಮ ಕೇಳ್ ಕೌತುಕವನು ೧೦

ಕೂಡಿರುವಂತೆಯೂ, ಯುದ್ಧವು ಖಡ್ಗಗಳಿಂದ ಕೂಡಿರುವಂತೆಯೂ ನೀರಿನಿಂದ ಕೂಡಿ ಹೊಳೆಯುತ್ತಿತ್ತು. ವಿಷ್ಣುವು ಹಸುಗಳನ್ನು ಒಡಗೊಂಡಿರುವಂತೆಯೂ, ಬ್ರಹ್ಮನು ಸರಸ್ವತಿಯೊಡನೆ ಇರುವಂತೆಯೂ ಅಧಿಕವಾದ ಜಲದಿಂದ ಆವರಿಸಿತ್ತು. ಯುದ್ಧ ಮತ್ತು ಯಜ್ಞಶಾಲೆಯಂತೆ ಕುದುರೆ ಮತ್ತು ಬಡಬಾಗ್ನಿಯನ್ನು ಹೊಂದಿದ್ದಿತು. ಪರ್ವತವು ನದಿಯಿಂದ ಕೂಡಿರುವಂತೆಯೂ, ಶಿವನು ಸರ್ಪಾಲಂಕೃತನಾಗಿರುವಂತೆಯೂ ಸಮುದ್ರವು ನೀರಿನಿಂದ ಅಲಂಕೃತವಾಗಿತ್ತು. ನಿಧಿಯು ಶಂಖವನ್ನು ಹೊಂದಿರುವಂತೆಯೂ, ಹಣೆಯು ಮೂಳೆಯನ್ನು ಹೊಂದಿರುವಂತೆಯೂ ಶಂಖಗಳಿಂದ ಕೂಡಿತ್ತು. ಶ್ರೇಷ್ಠಮುನಿ ಕಮಂಡಲುವಿನಿಂದ ಕಾಡು ಹೂಗಳಿಂದ ಇರುವಂತೆ ತಾನು ಅಲೆಗಳನ್ನುಳ್ಳದ್ದಾಗಿ ಶೋಭಿಸುತ್ತಿತ್ತು. ೯. ನವರಸದಿಂದ ತುಂಬಿದ್ದರೂ ಒಳ್ಳೆಯ ಕಾವ್ಯವಲ್ಲ (ನೀರಿನಿಂದ) ; ಕೋತಿಗಳಿಗೆ (ಕಪ್ಪೆಗಳಿಗೆ) ಆವಾಸಸ್ಥಾನವಾದರೂ ಕಾಡಲ್ಲ, ಎಡೆಬಿಡದೆ ಸೇವಿಸುವ ತುಟಿಯ (ಮೋಡದ) ಸ್ಪರ್ಶದಿಂದ ಕೂಡಿದ್ದರೂ ವಿಟಪುರುಷನ ಹಸ್ತವಲ್ಲ. ಯಾವಾಗಲೂ ಮಕರ, ಕರ್ಕಾಟಕ (ಮೊಸಳೆ, ಏಡಿ)ಗಳಿಂದ ಕೂಡಿದ್ದರೂ ರಾಶಿಗಳ ಸಮೂಹವಲ್ಲ. ನಕ್ಷತ್ರ (ಮೀನು)ಗಳಿಂದ ಕೂಡಿದ್ದರೂ ಉನ್ನತಗ್ರಹವಾಗಿ ಆಕಾಶವಲ್ಲ ಎನ್ನಿಸಿ ಸಮುದ್ರವು ಕಣ್ಣಿಗೆ ಮನೋಹರವಾಗಿ ಕಾಣಿಸಿತು. ೧೦. ಈ ರೀತಿಯಲ್ಲಿ ಪ್ರಕಾಶಿಸುವ ಕ್ಷೀರಸಮುದ್ರವನ್ನು ನೋಡುತ್ತ ಅತ್ಯಂತ ಹರ್ಷವನ್ನು

CC-0. Jangamwadi Math Collection. Digitized by eGangotri

ಆಗಜಾಧಿಪಂಗೆ ಮುನ್ನೊಗೆವ ವಸ್ತುವನಿರದೆ
ತೆಗೆದೆವೆನ್ನದೆ ಮಿಕ್ಕ ದಿವಜಾಳಿಗೆಂದೆನಲ್
ಸೊಗಸಪ್ಪುದೇ ಮುಂತೆ ಸರ್ವರಿಗೆ ಫಣಿಪನಂದಾಯಾಸದಿಂ ಕಾರಲು
ಧಗಧಗಲ್ ದಂಧಗಲ್ ಚಿಟಿಚಿಟಿಲ್ ನಟಿನಳಿಲ್
ಭುಗಿಭುಗಿಲ್ ಭುಗಿಲೆಂದು ಪಿಡಿದ ದೇವಾಸುರರ
ಮೊಗಮನಪ್ಪಳಿಸಿ ಭೋರ್ ಭೋರೆಂಬ ರಭಸದಿಂ ವಿಷವಹ್ನಿ ಪಸರಿಸಿದುದು ೧೧

ಓಡಿದಂ ಹರಿ ಮರಾಳನ ಬೆಂಗೆವಾಯ್ದು ಕೈ
ಮಾಡಿದಂ ಕಮಲಜಂ ಖಗಪತಿಯನೇರಿ ಸಲೆ
ಯೋಡಿದುದು ಭುವನಜನಮೆಮಗಾರು ಗತಿಯೆಂದು ಪುದಿದ ವಿಷಭೀತಿಯಿಂದೆ
ಝಾಡಿಸಿದುದಖಿಳ ದಿಙ್ಮಂಡಲವನಾಗಳ
ಲ್ಲಾಡಿಸಿತು ಭೂ ಸ್ವರ್ಗ ಪಾತಾಳಲೋಕಮಂ
ಕೂಡಿಸಿತು ಸಕಲಜನರಂ ವಿಲಯಗೇಹದೊಳ್ ಕಾಳಕೂಟಂ ಕ್ಷಣದೊಳು ೧೨

ವರಮುನಿಯ ಶಾಪದಿಂ ಸಿರಿಯ ನೀಗಿದ ಮರುಳ
ಸುರಪತಿಯ ನುಡಿಗೇಳ್ದು ಸುರರಸುರರಂ ನೆರಪಿ
ಶರಧಿಯಂ ಮಥಿಸುವರೆ ಕೇಡನೆಣಿಸಿದಿರಲಾ ಪಾಪಿಗಳ್ ಭುವನಜನಕೆ

ತಳೆದು ಮಂದರಪರ್ವತವನ್ನೇ ಕಿತ್ತು ತಂದು, ವಾಸುಕಿಯನ್ನೇ ಹಗ್ಗವನ್ನಾಗಿ ಬಿಗಿದು ಅದರ ಬಾಲ ಮುಖಗಳನ್ನು ಹಿಡಿದುಕೊಂಡು,ಮೊದಲು ಹುಟ್ಟಿದ ವಸ್ತುವು ವಿಷ್ಣುವಿಗೆ, ಅದರ ಅನಂತರದ್ದು ನಮಗೆ–ತಮಗೆ ಎನ್ನುತ್ತ ದೇವ-ದಾನವರು ತಮ್ಮ ತಮ್ಮಲ್ಲಿಯೇ ಆಲೋಚಿಸುತ್ತ ಕಡೆಯುವ ಸಮಯದಲ್ಲಿ ಆದ ಕೌತುಕವನ್ನು ಕೇಳಯ್ಯ, ಸಿದ್ಧರಾಮ. ೧೧. ಬಿಡದೆ ಮೊದಲು ಹುಟ್ಟಿದ ವಸ್ತುವನ್ನು ಶಿವನಿಗಾಗಿ ತೆಗೆದೆವು ಎನ್ನದೆ ಉಳಿದ ದೇವತೆಗಳಿಗೆ ಎಂದು ಹೇಳಲು ಎಲ್ಲರಿಗೂ ಸೊಗಯಿಸುತ್ತದೆಯೆ? ಕಡೆಯುತ್ತಿದ್ದಂತೆ ವಾಸುಕಿಯು ಆಯಾಸದಿಂದ ಕಾರಿಕೊಳ್ಳಲು ಧಗಧಗಲ್ ದಂಧಗಲ್ ಚಿಟಚಿಟಿಲ್ ನಟಿನಳಿಲ್ ಭುಗಿಭುಗಿಲ್ ಭುಗಿಲೆಂದು ತನ್ನನ್ನು ಹಿಡಿದಿದ್ದ ದೇವ-ರಾಕ್ಷಸರ ಮುಖಕ್ಕೆ ಅಪ್ಪಳಿಸಲು ಭೋರ್ ಭೋರೆಂದು ರಭಸದಿಂದ ವಿಷಾಗ್ನಿ ಆವರಿಸಿತು. ೧೨. ವಿಷ್ಣು ಹಂಸದ ಬೆನ್ನನ್ನೇರಿ ಓಡಿದನು, ಬ್ರಹ್ಮ ಗರುಡನ ಮೇಲೆ ಹತ್ತಿ ಕೈಮಾಡಿದ, ಆವರಿಸಿದ ವಿಷದ ಭೀತಿಯಿಂದ ನಮಗೆ ಯಾರ ದಿಕ್ಕು ಎನ್ನುತ್ತ ಲೋಕದ ಜನ ಓಡಿತು. ಕ್ಷಣದಲ್ಲಿ ಕಾಲಕೂಟ ಸಕಲ ದಿಕ್ಕನ್ನೂ ಝಾಡಿಸಿತು, ಭೂಮಿ–ಸ್ವರ್ಗ-ಪಾತಾಳಲೋಕಗಳನ್ನು ಅಲ್ಲಾಡಿಸಿತು, ಎಲ್ಲ ಜನರನ್ನೂ ಯಮನ ಪಟ್ಟಣದಲ್ಲಿ ಒಟ್ಟುಗೂಡಿಸಿತು. ೧೩. ಮಹಾಮುನಿಯ ಶಾಪದಿಂದ ಸಂಪತ್ತನ್ನು ಕಳೆದುಕೊಂಡ ಶಿಳಿಗೇಡಿಯಾದ ಇಂದ್ರನ ಮಾತು ಕೇಳಿ ದೇವ-ದಾನವರನ್ನು ಸೇರಿಸಿ ಸಮುದ್ರವನ್ನು ಕಡೆಯುತ್ತಾರೆಯೆ ? ಪಾಪಿಗಳು ಪ್ರಪಂಚದ

CC-0. Jangamwadi Math Collection. Digitized by eGangotri

ಗರಳದುರಿಯಖಿಳ ಬ್ರಹ್ಮಾಂಡವಂ ಪರ್ವಿ ಸಂ
ಹರಿಸುತಿದೆಯಕಟಕಟ ಕಂಡು ಕಂಡಿಂತು ಪರಿ
ಹರಿಸಲಾಗದೆ ನೀವು ಸೃಷ್ಟಿರಕ್ಷಾಧಿನಾಯಕರೆಂದು ಮೊರೆಯಿಟ್ಟರು ೧೩

ಓಡಿದೊಡೆ ಬಿಡುವುದೆ॰ ಮುನಿಗುದಾಸೀನವಂ
ಮಾಡಿ ಸಿರಿಯಂ ನೀಗಿದನಿತಲ್ಲದಕಟಕಟ
ಮಾಡಿದೈ ಶಂಕರದ್ರೋಹವಂ ಕೆಡಿಸಿದೈ ಸಕಲಲೋಕದ ಜನರನು
ಆಡಲೇನಹುದು ಶಚಿಗೂಡಿ ಭೋಗಿಸು ನಿನ್ನ
ನಾಡನೆಲೆ ಖೂಳ ನೀನೆಂದು ನೋಟಕಜನವು
ದೀಡಿರಿದುದಂದು ಸುರಪನ ಗಲ್ಲವಂ ಕಾಳಕೂಟಮುರಿಪಲ್ ಜಗವನು ೧೪

ಓಡಿವರ್ ಕೆಲರಲ್ಲಿ ತಮತಮಗೆ ನಿಂದು ಮಾ
ತಾಡಿದರ್ ಕೆಲರಭವ ಸಲಹೆಂದು ಕೈಗಳಂ
ನೀಡಿದರ್ ಕೆಲರಟ್ಟಿ ಸುಡುವ ವಿಷವಹ್ನಿಯಂ ಕಾಲ್ಗೆಟ್ಟು ದಿಕ್ಕುಗಳನು
ನೋಡಿದರ್ ಕೆಲರೋಡುವಮರರಂ ಕಂಡು ಕೊರ
ಚಾಡಿದರ್ ಕೆಲರೇಳ್ದು ಬೀಳ್ದು ಬಹುಶೋಕವಂ
ಮಾಡಿದರ್ ಕೆಲರಿಂತು ಸಕಲ ಜಗವಂ ವಿಷಂ ವ್ಯಾಪಿಸಲ್ಕಾಕ್ಷಣದೊಳು ೧೫

ದೇವ ನೀನಲ್ಲದೀ ಸುರ ನರ ಭುಜಂಗರಂ
ಕಾವರಿಲ್ಲಕಟ ಕಂಠಗತಾಸುವಾದೆವ್ಮು
ನೋವಲಾಗದೆ ನಿರ್ದಯಾಲೋಕವೇಕೆ ಪಾಲಿಸು ಪಾಲಿಸೈ ನಮ್ಮನು

ಜನಕ್ಕೆ ಕೆಡುಕನ್ನು ಆಲೋಚಿಸಿದಿರಲ್ಲಾ ! ವಿಷದ ಉರಿ ಸಕಲ ಬ್ರಹ್ಮಾಂಡವನ್ನೂ ಹಬ್ಬಿ ಕೊಲ್ಲುತ್ತಿದೆ. ಅಯ್ಯಯ್ಯೋ! ಇದನ್ನು ತಿಳಿದೂ ಸೃಷ್ಟಿಗೆ-ರಕ್ಷಣೆಗೆ ಅಧಿದೈವರಾದ ನೀವು ಇದನ್ನು ಪರಿಹರಿಸಲಾಗದೆ ಎಂದು ಮೊರೆಯಿಟ್ಟರು. ೧೪. ಓಡಿಹೋದರೆ ಬಿಡುತ್ತದೆಯೆ ? ಮುನಿಗೆ ತಿರಸ್ಕಾರ ಮಾಡಿ ಐಶ್ವರ್ಯವನ್ನು ಕಳೆದುಕೊಂಡದ್ದೇ ಅಲ್ಲದೆ ಅಯ್ಯಯ್ಯೋ ! ಶಿವದ್ರೋಹ ಮಾಡಿದೆಯಲ್ಲಾ, ಸಕಲ ಲೋಕದ ಜನರನ್ನೂ ಹಾಳುಮಾಡಿದೆಯಲ್ಲ, ಮಾತನಾಡಿ ಏನು ಪ್ರಯೋಜನ ? ಎಲೈ ಖೂಳನೆ, ನಿನ್ನ ನಾಡನ್ನು ಶಚಿಯೊಡನೆ ಕೂಡಿಕೊಂಡು ನೀನು ಭೋಗಿಸು ಎನ್ನುತ್ತಾ ಕಾಲಕೂಟವು ಪ್ರಪಂಚವನ್ನೇ ದಹಿಸುತ್ತಿರಲು ಪ್ರೇಕ್ಷಕಜನ ದೇವೇಂದ್ರನ ಗಲ್ಲವನ್ನು ಬಲವಾಗಿ ತಿವಿದರು. ೧೫. ಲೋಕವೆಲ್ಲವನ್ನೂ ವಿಷ ಆವರಿಸಲು ಕೆಲವರು ಓಡಿದರು. ಮತ್ತೆ ಕೆಲವರು ಅಲ್ಲಿ ನಿಂತು ತಮ್ಮತಮ್ಮಲ್ಲಿ ಮಾತನಾಡಿದರು ಕೆಲವರು ಕೈನೀಡಿ ಕಾಪಾಡು ಎಂದು ಶಿವನನ್ನು ದೈನದಿಂದ ಪ್ರಾರ್ಥಿಸಿದರು. ಬೆನ್ನಟ್ಟಿ ಸುಡುವ ವಿಷಾಗ್ನಿಯಿಂದ ಕಾಲ್ಗೆಟ್ಟು ಕೆಲವರು ದಿಕ್ಕುಗಳನ್ನು ನೋಡಿದರು, ಓಡಿಹೋಗುತ್ತಿದ್ದ ದೇವತೆಗಳನ್ನು ನೋಡಿ ಕೆಲವರು ಚುಚ್ಚುಮಾತಾಡಿದರು. ಈ ರೀತಿ ಕೆಲವರು ಎದ್ದುಬಿದ್ದು ಬಹಳವಾಗಿ ದುಃಖಿಸಿದರು. ೧೬. ದೇವನೆ, ನೀನಲ್ಲದೆ ಈ ದೇವ-ಮಾನವ-ನಾಗರನ್ನು ಕಾಪಾಡುವವರಿಲ್ಲ, ಅಯ್ಯೋ ! ಕಂಠಗತಪ್ರಾಣ

CC-0. Jangamwadi Math Collection. Digitized by eGangotri

ಭಾವಿಸದೆ ನಿನ್ನ ಪದರಾಜೀವಯುಗಳಕ್ಕೆ
ನಾವತಿದ್ರೋಹಮಂ ಮಾಡಿದೆವು ಕ್ಷಮಿಸೆಂದು
ದೇವಕುಲವೊರಲಲ್ಕೆ ಕೇಳಿದಂ ಶಂಭು ಜಂಭಾರಿಮುಖ್ಯರ ಮೊರೆಯನು ೧೭

ನೊಂದುದು ಸಮಸ್ತ ದೇವಾಳಿ ವಿಷವಹ್ನಿಯಿಂ
ಬೆಂದುದು ಭುವನಜನಮದೀಗಳೇ ವಿಲಯಮೈ
ತಂದುದು ಜವದೊಳಾವು ಪರಿಹರಿಸದೊಡೆ ಸಕಲ ಲೋಕದಾಟಂ ಕ್ಷಣದೊಳು
ನಿಂದುದು ಸರೋಜಭವಹರಿಗಳ್ಗೆ ದುರ್ಯಶಂ
ಬಂದುದಕಟಕಟೆನುತ್ತುಮೆ ಸಹಿತ ವೃಷಪತಿಯ
ನಂದು ಧೂರ್ಜಟಿಯೇರಿ ನಡೆದನಾ ಕಾಳಕೂಟಪ್ರಚಾರವನೀಕ್ಷಿಸೆ ೧೮

ಗರಳಭಯದಿಂದೆ ಬಾಯಾರ್ವರಂ ಚೀರ್ವರಂ
ಪರಿಪರಿದು ಕಾಲ್ಗೆಟ್ಟು ಕೆಡೆವರಂ ಮಡಿವರಂ
ಗರದ ಬಿರುಹೊಯ್ಲಿಂದ ನರಳ್ವರಂ ಸುರುಳ್ವರಂ ಬಿಟ್ಟೋಡುವಾಪ್ತರ್ಕಳ
ಕರೆಕರೆದು ಬೇಸತ್ತು ಬಯ್ವರಂ ಸುಯ್ವರಂ
ಸುರಪನಂ ಶಾಪಿಸುತ್ತಳಲ್ವರಂ ಬಳಲ್ವರಂ
ಹರ ಸಲಹು ಸಲಹೆಂದುಸಿರ್ವರಂ ದೂರ್ವರಂ ಚಂದ್ರಚೂಡಂ ಕಂಡನು ೧೯

ದಿಂದ ನಮ್ಮನ್ನು ರಕ್ಷಿಸಲಾಗದೆ? ನಮ್ಮಲ್ಲಿ ನಿರ್ದಯ ದೃಷ್ಟಿ ಏಕೆ? ಕಾಪಾಡು. ನಮ್ಮನ್ನು ಕಾಪಾಡಯ್ಯಾ. ಆಲೋಚಿಸದೆ ನಿನ್ನ ಪಾದಪದ್ಮಗಳಿಗೆ ನಾವು ಬಹು ದ್ರೋಹವೆಸಗಿದೆವು. ನಮ್ಮನ್ನು ಕ್ಷಮಿಸು ಎಂದು ದೇವಕುಲ ಕೂಗುತ್ತ ಪ್ರಾರ್ಥಿಸಿತು.ದೇವೇಂದ್ರನೇ ಮೊದಲಾದವರ ಮೊರೆಯನ್ನು ಈಶ್ವರನು ಕೇಳಿದನು. ೧೭. ಸಮಸ್ತ ದೇವತೆಗಳ ಸಮೂಹ ವ್ಯಥೆಗೊಂಡಿತು. ವಿಷಾಗ್ನಿಯಿಂದ ಲೋಕದ ಜನ ಬೆಂದುಹೋಯಿತು, ಈಗಲೇ ಪ್ರಳಯ ಸಮಾಪಿಸಿತು, ಬೇಗನೆ ನಾವು ಇದನ್ನು ಪರಿಹರಿಸದಿದ್ದರೆ ಸಕಲ ಜಗತ್ತಿನ ಆಟವೂ ಕ್ಷಣದಲ್ಲಿ ನಿಂತುಹೋಗುತ್ತದೆ, ಬ್ರಹ್ಮ-ವಿಷ್ಣುಗಳಿಗೆ ಕೆಟ್ಟ ಹೆಸರು ಬಂದಿತು, ಅಯ್ಯಯ್ಯೋ ಎನ್ನುತ್ತ ಶಿವನು ಪಾರ್ವತೀಸಮೇತನಾಗಿ ನಂದಿಯನ್ನೇರಿ ಕಾಳಕೂಟವು ಹಬ್ಬಿರುವ ರೀತಿಯನ್ನು ನೋಡಲು ಹೊರಟನು. ೧೮. ವಿಷಭಯದಿಂದ ಬಾಯಿ ಒಣಗಿರುವವರನ್ನೂ, ಚೀರುವವರನ್ನೂ, ದಿಕ್ಕುದಿಕ್ಕಿಗೆ ಓಡಿ ಕಾಲ್ಗೆಟ್ಟು ಬೀಳುವವರನ್ನೂ, ಸಾಯುವವರನ್ನೂ, ವಿಷದ ರಭಸದ ಹೊಡೆತದಿಂದ ನರಳುವವರನ್ನೂ, ಮುದ್ದೆಯಾಗುವವರನ್ನೂ, ತಮ್ಮನ್ನು ಬಿಟ್ಟು ಓಡುತ್ತಿರುವ ಆಪ್ತರನ್ನೂ ಕರೆಕರೆದು ಬಳಲಿ ಬಯ್ಯುವವರನ್ನೂ, ನಿಟ್ಟುಸಿರು ಬಿಡುವವರನ್ನೂ, ದೇವೇಂದ್ರನನ್ನು ಶಪಿಸುತ್ತ ದುಂಖಿಸುವವರನ್ನೂ, ಆಯಾಸಗೊಳ್ಳುವವರನ್ನೂ,ಶಿವನೇ ಕಾಪಾಡು ಕಾಪಾಡು ಎಂದು ಹೇಳುವವ

CC-0. Jangamwadi Math Collection. Digitized by eGangotri

ಅಂಜದಿರಿ ಸುರನಿಕರವಂಜದಿರಿ ದನುಜರ್ಕ
ಳಂಜದಿರಿ ಭುವನಜನವಂಜದಿರಿ ನೋಟಕರ್
ಭುಂಜಿಸುವೆನೀ ಕಾಳಕೂಟಮಂ ನಾನೆನುತೆ ಕರವೆತ್ತಿ ಬಾರೆನಲ್ಕೆ
ಅಂಜುವ ಮಹಾಭೀತಿಯಿಂದೆ ನಿಷ್ಠುರವಾದ
ನಂಜಿರ್ದುದಭವನಂಗೈತಳದೊಳಾಕ್ಷಣಂ
ಮಂಜುಳಸುಮಣಿಪರೀಕ್ಷಕನಂತೆ ಶಿವನಿರಲ್ ಸಕಲರುಂ ನುತಿಯಿಸಿದರು ೧೯

ಇಂತನೇಕಸ್ತೋತ್ರದಿಂದೆ ಜನವಿರ್ಪ ಸಮ
ನಂತರದೊಳಭವನಂಗೈತಳದ ಗರಳಮಂ
ತಾಂ ತಡೆಯದೀಕ್ಷಿಸಲ್ ತನ್ನ ಪ್ರತಿಬಿಂಬಮೇ ವಿಷದೊಳಗೆ ಕಾಣಿಸಲ್ಕೆ
ನೀಂ ತೊಲಗೆನಲ್ ಪುಷ್ಪದತ್ತಾಭಿಧಾನಮಂ
ತಾಂ ತಳೆದು ನಿಜರೂಪಿನಿಂದಿರ್ದುದಾ ಗರಳ
ಮಂ ತಳೆದು ಪೊಡೆಗಿಳಿಪೆ ಜಗಮಳಿವುದೆಂದು ತೊಡೆದಂ ಲಸದ್ಗ್ರೀವದೆಡೆಗೆ ೨೦

ಬನ್ನಿರೈ ಹರಿಯಜರ್ ಮುಂ ಕುರಿತು ವಸ್ತುವೆಮ
ಗೆನ್ನದಿರಲಿಂತಾದುದೈ ಕೇಳಿ ನೀಂ ಮುಂದೆ
ಮುನ್ನಿನಂದದೆ ಶರಧಿಯಂ ಮಥಿಸೆ ನಿಮ್ಮಿಷ್ಟಮಹುದೆಂದು ಹರ ನುಡಿಯಲು

ರನ್ನೂ, ದೂರುವವರನ್ನೂ ಚಂದ್ರಶೇಖರನು ನೋಡಿದನು. ೧೯. ದೇವತೆಗಳ ಸಮೂಹ ಹೆದರದಿರಿ, ರಾಕ್ಷಸರು ಹೆದರಬೇಡಿ, ಲೋಕದ ಜನ ಭಯಪಡಬೇಡಿ, ಪ್ರೇಕ್ಷಕರು ಹೆದರದಿರಿ. ನಾನು ಈ ಕಾಳಕೂಟ ವಿಷವನ್ನು ನುಂಗುತ್ತೇನೆ ಎಂದು ಕೈಯೆತ್ತಿ ಬಾ ಎನ್ನಲು ಘೋರವಾದ ಆ ವಿಷವು ಮಹಾ ಭೀತಿಯಿಂದ ಅಂಜುತ್ತ ಶಿವನ ಅಂಗೈತಳದಲ್ಲಿ ಬಂದು ನೆಲಸಿತು. ಮನೋಹರವಾದ ರತ್ನವನ್ನು ಪರೀಕ್ಷಿಸುವವನಂತೆ ಶಿವನು ಇರಲು ಎಲ್ಲರೂ ಅವನನ್ನು ಸ್ತೋತ್ರಮಾಡಿದರು. ೨೦. ಈ ರೀತಿ ಅನೇಕ ಸ್ತೋತ್ರಗಳಿಂದ ಜನರು ಇರುವ ಸಮಯದಲ್ಲಿ ಶಿವನು ತನ್ನ ಅಂಗೈತಳದಲ್ಲಿ ಇದ್ದ ವಿಷವನ್ನು ನೋಡಲು ಅವನ ಪ್ರತಿಬಿಂಬವೇ ಅದರಲ್ಲಿ ಕಾಣಿಸಿತು. ನೀನು ತೊಲಗು ಎಂದು ಶಿವನು ಹೇಳಲು ಪುಷ್ಪದತ್ತ ಎಂಬ ಹೆಸರನ್ನು ಪಡೆದು ನಿಜರೂಪವನ್ನು ತಾಳಿ ನಿಂತಿದ್ದಿತು. ಆ ವಿಷವನ್ನು ಧರಿಸಿ ಭೂಮಿಗೆ ಇಳಿಸಿದರೆ ಜಗತ್ತು ನಾಶವಾಗುವುದೆಂದು ಶಿವನು ಅದನ್ನು ತನ್ನ ಪ್ರಕಾಶಿಸುವ ಕುತ್ತಿಗೆಯ ಬಳಿ ಸವರಿದನು. ೨೧. ವಿಷ್ಣು-ಬ್ರಹ್ಮರೇ ಬನ್ನಿ, ನೀವು ಈ ಮೊದಲು ಹುಟ್ಟಿದ ಪ್ರಥಮ ವಸ್ತುವು ನನಗೆಂದು ಹೇಳದೆಹೋದುದರಿಂದ ಈ ರೀತಿಯಾಯಿತು. ಕೇಳಿ, ನೀವು ಇನ್ನು ಮೊದಲಿನಂತೆಯೇ ಸಮುದ್ರವನ್ನು ಕಡೆಯಲು ನಿಮ್ಮ ಇಷ್ಟ ಪೂರೈಸುವುದು ಎಂದು ಶಿವನು ಹೇಳಿದನು. ಆಗ ಅವರು ಇನ್ನೇಕೆ ದೇವ ?

CC-0. Jangamwadi Math Collection. Digitized by eGangotri

ಇನ್ನೇಕೆ ಜೀಯ ವಿಷವೆಮ್ಮ ಮನದಿಚ್ಚೆಯಂ
ಚೆನ್ನಾಗಿ ಸಲಿಸುತಿರ್ದುದು ಸಾಕುಸಾಕೆನಲ್
ನನ್ನಿಯಿದು ಮುಂದೆ ನಾವಿಹೆವೆಂದು ಕರುಣದಿಂ ನುಡಿದು ನಿರವಯಾದನು ೨೧

ನಂಬಿದರ್ ಸಕಲ ಸುರ ನರ ಯಕ್ಷ ರಾಕ್ಷಸರ್
ತುಂಬಿದುದು ಹರ್ಷರಸಮವರಂತರಂಗದೊಳ್
ತಾಂ ಬೆದರದಹಿಪತಿಯ ಮುಖ ಪುಚ್ಛ ಭಾಗಂಗಳಂ ಮುನ್ನಿನಂತೆ ಪಿಡಿದು
ಶಂಬರಾರಿಯಪಗೆಯ ನೇಮದಿಂದೆ ವರದು
ಗ್ಧಾಂಬುಧಿಯನುರೆ ಮಥಿಸಲಾಕ್ಷಣಂ ನವಚಂದ್ರ
ಬಿಂಬಮುದಿಸಿದುದು ಶೀತಪ್ರಭೆಯೊಳಖಿಳದೇವಾಸುರರನಳವಳಿಸುತೆ ೨೨

ಕುಗ್ಗಿದುವು ಜನರ ಕೈಕಾಲ್ಗಳತಿಶೀತದಿಂ
ನೆಗ್ಗಿದುವು ಮನದಹಂಕಾರಂಗಳಾ ಕ್ಷಣಂ
ತಗ್ಗಿದುವು ದಿವಿಜರ ಮನೋರಥಂ ವಿಷದಧಿಕ ಭೀತಿಯಿನಿತಿಲ್ಲವೆಂದು
ಸಗ್ಗಿಗರ್ ದೇವನಂ ಪೊಗಳಲಾಗಳ್ ಬಂದು
ವೆಗ್ಗಳಿಪ ಶೀತಕರನೀರೆಂಟು ಭಾಗದೊಳ್
ಬಗ್ಗದೊವಲುಡಿಯನೊಂದಂ ತಳೆದು ಚಂದ್ರನಂ ನೋಡಿ ಮತ್ತಿಂತೆಂದನು ೨೩

ವಿಷವು ನಮ್ಮ ಮನದ ಇಷ್ಟವನ್ನು ಚೆನ್ನಾಗಿ ಸಲ್ಲಿಸುತ್ತಿದ್ದಿತು, ಸಾಕು ಸಾಕು ಎಂದರು. ಈಶ್ವರನು ಅವರನ್ನು ಕುರಿತು ಇನ್ನು ಮುಂದೆ ನಾವು ಇದ್ದೇವೆ ಇದು ಸತ್ಯ ಎಂದು ಕರುಣೆಯಿಂದ ಹೇಳಿ ಮಾಯವಾದನು. ೨೨. ಎಲ್ಲ ದೇವ ಮಾನವ ಯಕ್ಷ ರಾಕ್ಷಸರೂ ಇದನ್ನು ನಂಬಿದರು. ಅವರ ಅಂತರಂಗದಲ್ಲಿ ಆನಂದವು ತುಂಬಿತು. ಅವರು ಹೆದರದೆ ಆ ಸರ್ಪರಾಜನ ಮುಖ-ಬಾಲಗಳ ಭಾಗವನ್ನು ಮೊದಲಿನಂತೆಯೇ ಹಿಡಿದು ಈಶ್ವರನ ಆಜ್ಞೆಯಂತೆ ಆ ಕ್ಷೀರಸಾಗರವನ್ನು ಚೆನ್ನಾಗಿ ಕಡೆಯಲು ಆಕ್ಷಣ ಹೊಸ ಚಂದ್ರಬಿಂಬವು ತನ್ನ ಶೀತಪ್ರಭೆಯಿಂದ ಎಲ್ಲ ದೇವ-ರಾಕ್ಷಸರನ್ನೂ ಶಕ್ತಿಗುಂದಿಸುತ್ತ ಉದಯಿಸಿತು. ೨೩. ಅತಿಯಾದ ಶೀತದಿಂದ ಎಲ್ಲ ಜನರ ಕೈಕಾಲುಗಳೂ ಬಲಗುಂದಿದುವು. ಆ ಕ್ಷಣ ಮನಸ್ಸಿನ ಅಹಂಕಾರ ನಗ್ಗಿಹೋಯಿತು. ದೇವತೆಗಳ ಮನಸ್ಸಿಗೆ ಆಸೆ ಕುಸಿದುಹೋಯಿತು. ವಿಷದ ಅಧಿಕವಾದ ಭೀತಿ ಸ್ವಲ್ಪವೂ ಇಲ್ಲ ಎಂದು ದೇವತೆಗಳು ಈಶ್ವರನನ್ನು ಕೊಂಡಾಡಿದರು. ಆಗ ಹುಲಿಯ ತೊಗಲನ್ನುಟ್ಟ ಶಿವನು ಅಲ್ಲಿ ಬಂದು ಅಧಿಕವಾದ ಚಂದ್ರನ ಹದಿನಾರು ಭಾಗದಲ್ಲಿ ಒಂದು ಭಾಗವನ್ನು ತಾನು ಧರಿಸಿ ಚಂದ್ರನನ್ನು ನೋಡಿ ಮತ್ತೆ ಈ ರೀತಿ ಹೇಳಿದನು.

CC-0. Jangamwadi Math Collection. Digitized by eGangotri

ಇಂದು ನೀನಿನ್ನುಳಿದ ಕಲೆಯಿನೋಷಧಿ ದೈವ
ವೃಂದವುಂ ಪೊರೆವುತಂಬರದೊಳಗೆರಡು ಲಕ್ಷ
ಮೆಂದೆನಿಪ ಯೋಜನದೊಳಿರುವುದೆಂದಭವ ತಾಂ ಕೈಲಾಸವುಂ ಪೊಕ್ಕನು
ಅಂದು ದೇವಾಸುರರ್ ಸಂತೋಷಮನರಾಗಿ
ಮಂದರದೊಳಾರ್ಭಟಿಸಿ ಕಡೆಯಲ್ಕೆ ಪುಟ್ಟಿದುವು
ಚಂದಚಂದದ ವಸ್ತುಗಳ್ ಶಿವನ ಕರುಣವಿರಲಾವುದಘಟಿತಮೆಂಬನು ೨೪

ಸಿರಿ ದಿವಿಜಕರಿ ಕಾಮಧೇನು ಕಲ್ಪದ್ರುಮಂ
ಪರಮಚಿಂತಾರತ್ನಮಮೃತಮತಿಚಾಪಲದ
ಸುರಹಯಂ ತಾರೆ ಸುರಕಾಮಿನೀಸಂದೋಹ ಧನ್ವಂತ್ರಿ ಮುಖ್ಯರುದಿಸೆ
ಸಿರಿಯುನಬ್ಜೋದರಂ ಕೊಂಡು ಮಿಕ್ಕವನೆಲ್ಲ
ಸುರಪತಿಗೆ ಕೊಟ್ಟು ಕಳುಪುವ ಸಮಯದೊಳ್ ದೈತ್ಯ
ರುರುತರದ ಪೀಯೂಷಕಲಶಮಂ ಕದ್ದೊಯ್ದರೇನೆಂಬೆನಚ್ಚರಿಯನು ೨೫

ಕೋಡಿದುದು ಮನಮತಿಭ್ರಮೆಯಾಯ್ತು ಬುದ್ಧಿ ಬಿ
ಟ್ಟೋಡಿದುದಹಂಕಾರಮಳಲಿದುದು ಚಿತ್ತಮಿಾ
ಕೂಡಿದ ಸುರಾಳಿಯಿದನರಿದು ಹರಿ ಖಳರಿರ್ದ ವನದೊಳಗೆ ಕಾಂತೆಯಾಗಿ

೨೪. ಈಗ. ನೀನು ಇನ್ನು ಉಳಿದ ಕಲೆಗಳಿಂದ ಮೂಲಿಕೆಗಳು ಮತ್ತು ದೇವಸಮೂಹವನ್ನು ಕಾಪಾಡುತ್ತ ಆಕಾಶದಲ್ಲಿ ಎರಡು ಲಕ್ಷಯೋಜನದಲ್ಲಿರು ಎಂದು ಹೇಳಿ ಈಶ್ವರನು ಕೈಲಾಸವನ್ನು ಪ್ರವೇಶಿಸಿದನು. ಆಗ ದೇವ-ದಾನವರು ಸಂತೋಷಮನಸ್ಸಿನವರಾಗಿ ಆರ್ಭಟಿಸಿ ಮಂದರಪರ್ವತದಿಂದ ಕಡೆಯಲು ಅನೇಕ ಸೊಗಸಾದ ವಸ್ತುಗಳು ಹುಟ್ಟಿದುವು. ಶಿವನ ಕರುಣೆಯಿರಲು ಯಾವುದು ಅಸಾಧ್ಯ ಎಂದು ಚೆನ್ನಬಸವಣ್ಣನು ಹೇಳಿದನು. ೨೫. ಲಕ್ಷ್ಮಿ, ಐರಾವತ, ಕಾಮಧೇನು, ಕಲ್ಪವೃಕ್ಷ, ದಿವ್ಯರತ್ನ, ಅಮೃತ, ಅತಿಯಾದ ಚುರುಕಿನಿಂದ ಕೂಡಿದ ಉಚ್ಚೈಃಶ್ರವಸ್ಸೆಂಬ ಕುದುರೆ ಮತ್ತು ದೇವಸ್ತ್ರೀಸಮೂಹ, ಧನ್ವಂತ್ರಿ ಮೊದಲಾದವರು ಹುಟ್ಟಿದರು. ಆಗ ಲಕ್ಷ್ಮಿಯನ್ನು ವಿಷ್ಣುವು ಸ್ವೀಕರಿಸಿ ಉಳಿದುದೆಲ್ಲವನ್ನೂ ದೇವೇಂದ್ರನಿಗೆ ಕೊಟ್ಟು ಕಳಿಸುವ ಸಮಯದಲ್ಲಿ ರಾಕ್ಷಸರು ಶ್ರೇಷ್ಠವಾದ ಅಮೃತಕಳಶವನ್ನು ಕದ್ದುಕೊಂಡು ಹೋದರು. ಆಶ್ಚರ್ಯವನ್ನು ಏನೆಂದು ಹೇಳಲಿ ? ೨೬. ಅಲ್ಲಿ ಕೂಡಿದ್ದ ದೇವಸಮೂಹದ ಮನಸ್ಸು ಬೆದರಿತು, ಬುದ್ಧಿ ಅತಿಯಾಗಿ ಭ್ರಮಿಸಿತು, ಅಹಂಕಾರ ಬಿಟ್ಟು ಓಡಿತು, ವ್ಯಥೆಯುಂಟಾಯಿತು. ಇದನ್ನು ತಿಳಿದ ವಿಷ್ಣುವು ರಾಕ್ಷಸರಿದ್ದ ಕಾಡಿನಲ್ಲಿ ಸ್ತ್ರೀಯಾಗಿ ಕಾಣಿಸಿಕೊಂಡು ಸೌಂದರ್ಯ

CC-0. Jangamwadi Math Collection. Digitized by eGangotri

ಗಾಡಿಯಂ ಮೆರೆದು ದೈತ್ಯರ ಕರದ ಕಲಶಮಂ
ಕೋಡಿಯಿಂ ಕೊಂಡವರ್ಗಳ್ ಸಹಿತಮೈತಂದು
ನೀಡಿದಂ ಸಾಗರದ ತಡಿಯೊಳಮರಾಸುರರ್ಗಮೃತಕಾದಂಬರಿಗಳ ೨೬

ಹರಿಯ ಕಪಟವನರಿದು ಸೈಂಹಿಕೇಯಂ ಬಂದು
ಸುರರ ಪಙ್ತಿಯೊಳೊಲಿದು ಕುಳ್ಳಿರಲ್ ಸುಧೆಯನೀ
ಹರಿಯೆರೆಯೆ ಹರಿಹರಿಗಳಿದನರಿದು ಹರಿಗುಸುರೆ ಹರಿ ಚಕ್ರದಿಂದರಿಯಲು
ಸಿರಿ ಮುಂಡಗಳ್ ರಾಹು ಕೇತುವಾದುವು ಪೂರ್ವ
ದುರುವಿರೋಧಂ ಚಂದ್ರ ಸೂರ್ಯರ್ಗಮವರ್ಗೆಯುಂ
ಭರವಮಾದುದೀಗಳುಂ ಕೇಳೆಂದು ರಾಮಂಗೆ ಚೆನ್ನಬಸವಂ ಪೇಳ್ದನು ೨೭

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೨೮

### ಇಪ್ಪತ್ತೆರಡನೆಯ ಸಂಧಿ ಸಂಪೂರ್ಣ

ವನ್ನು ಮೆರೆದು ರಾಕ್ಷಸರ ಕೈಯಲ್ಲಿದ್ದ ಕಳಶವನ್ನು ಮೋಸದಿಂದ ತೆಗೆದುಕೊಂಡನು. ಅವರ ಜೊತೆಗೂಡಿ ಬಂದು ಸಮುದ್ರತೀರದಲ್ಲಿ ದೇವ-ರಾಕ್ಷಸರಿಗೆ ಅಮೃತ ಮತ್ತು ಸುರೆಗಳನ್ನು ನೀಡಿದನು. ೨೭. ವಿಷ್ಣುವಿನ ಮೋಸವನ್ನು ತಿಳಿದು ರಾಹುವು ಬಂದು ದೇವತೆಗಳ ಸಾಲಿನಲ್ಲಿ ಕುಳಿತಿದ್ದನು. ವಿಷ್ಣುವು ಅವನಿಗೆ ಅಮೃತವನ್ನು ಎರೆಯಲು ಸೂರ್ಯಚಂದ್ರರು ಅದನ್ನು ತಿಳಿದು ವಿಷ್ಣುವಿಗೆ ಹೇಳಿದರು. ಆಗ ವಿಷ್ಣುವು ಚಕ್ರದಿಂದ ಕತ್ತರಿಸಲು ಅವನ ತಲೆ ಮತ್ತು ದೇಹಗಳು ಬೇರೆಯಾಗಿ ರಾಹು-ಕೇತುಗಳಾದುವು. ಚಂದ್ರ ಸೂರ್ಯರಿಗೂ, ರಾಹು-ಕೇತುಗಳಿಗೂ ಆ ಹಿಂದೆ ಇದ್ದ ದ್ವೇಷವೇ ಈಗಲೂ ತುಂಬಿ ನಡೆದುಬಂದಿದೆ, ಕೇಳು ಎಂದು ಸಿದ್ಧರಾಮನಿಗೆ ಚೆನ್ನಬಸವಣ್ಣನು ಹೇಳಿದನು. ೨೮. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶನ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದ ವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರ ನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

### ಇಪ್ಪತ್ತೆರಡನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತಮೂರನೆಯ ಸಂಧಿ

ಸೂಚನೆ : ಸುರಪಾಲನಭವನಂ ಪಗೆಯನೊಲವಿಂ ಕೇಳೆ
ಹರನ ಪಣೆಗಣ್ಗಿಡಿಯೆ ಶರಧಿಗಂ ಸುತನಾಗಿ
ವರಜಲಂಧರನೆಂಬ ನಾಮದಿಂ ಸುರಪುರಕೆ ದಂಡೆತ್ತಿ ನಡೆದನಂದು

ಅಭ್ರಗಮನೇಂದ್ವಗ್ನಿವಿಭ್ರಾಜಿತಾಕ್ಷ ಲೋ
ಲಭ್ರಮರನಿಭಗರಳ ಶುಭ್ರವಿಗ್ರಹ ವಧೂ
ವಿಭ್ರಮಾಲೋಕ ದೈತ್ಯಭ್ರಷ್ಟವಿಮದವಿಪುಲಾಭ್ರಪ್ರಚಂಡಪವನ
ಅಭ್ರಾಂತರಾಳಸಂವಿಭ್ರಾಂತ ಚಾರುತರ
ಶುಭ್ರಾಂಶುಕೋಟಿಕಾಂತಿಭ್ರುತಶರೀರ ರುಚಿ
ರಭ್ರೂಲತಾಶೋಭ ಪಂಪಾವಿರೂಪಾಕ್ಷ ತೀಬ್ರದಿಂ ಸಲಹೆಮ್ಮನು ೧

ಆಲಿಸಿನ್ನೆಲೆ ಸಿದ್ಧರಾಮ ದಿವಿಜೇಶ್ವರಂ
ಭಾಳಲೋಚನನಂಘ್ರಿಪೂಜಾಫಲಾಳಿಯಿಂ
ಪಾಲಿಸುತೆ ಸುರಲೋಕವಂ ಸುಖದೊಳಿರುತಿರಲ್ ದಾಯಾದ್ಯ ಸಂಬಂಧದ
ಪಾಲಿಗೋಸುಗ ದನುಜರಂದು ಯುದ್ಧವ ಮಾಡೆ
ಕಾಳೆಗದೊಳಿವರೆಲ್ಲರಂ ಗೆಲ್ದು ಸುಖವಿರದೆ
ಕಾಲಹರನೆಡೆಗೆ ಪಗೆಯಂ ಕೇಳ್ವೆನೆಂದು ಪೊರಮಟ್ಟನತ್ಯುತ್ಸವದೊಳು ೨

ಸೂಚನೆ : ಇಂದ್ರನು ಶಿವನನ್ನು ಕುರಿತು ನನಗೊಬ್ಬ ಶತ್ರುವನ್ನು ಕೊಡು ಎಂದು ಇಷ್ಟಪಟ್ಟು ಕೇಳಿದನು. ಆಗ ಶಿವನ ಹಣೆಗಣ್ಣಿನಿಂದ ಹೊರಟ ಕಿಡಿಯೆ ಸಮುದ್ರಕ್ಕೆ ಮಗನಾಗಿ ಹುಟ್ಟಿ ಜಲಂಧರನೆಂಬ ಹೆಸರನ್ನು ಪಡೆದು, ದೇವಲೋಕಕ್ಕೆ ದಂಡೆತ್ತಿಬಂದನು. ೧. ಸೂರ್ಯ, ಚಂದ್ರ ಮತ್ತು ಹೊಳೆಹೊಳೆಯುವ ಅಗ್ನಿಯನ್ನೇ ಕಣ್ಣುಗಳನ್ನಾಗಿ ಉಳ್ಳವನು, ಜೋತುಬಿದ್ದಿರುವ ಭ್ರಮರಕ್ಕೆ ಸಮಾನವಾದ ಕಪ್ಪುಳ್ಳ ಕಂಠವುಳ್ಳವನು, ನಿರ್ಮಲವಾದ ದೇಹವುಳ್ಳವನು, ಸ್ತ್ರೀಯೆಂಬ ಭ್ರಮೆ ಬರುವಂತಹ ದರ್ಶನವುಳ್ಳವನು. ಭ್ರಷ್ಟದೈತ್ಯರ ಅತಿಯಾದ ಮದವೆಂಬ ಮೋಡವನ್ನು ಚದುರಿಸುವ ಪ್ರಚಂಡಗಾಳಿ ಯಂಥವನು, ಆಕಾಶದಲ್ಲಿ ಭ್ರಾಂತಿಯನ್ನುಂಟುಮಾಡುವ ಮನೋಹರವಾದ ಕೋಟಿ ಚಂದ್ರರ ಕಾಂತಿಯಿಂದ ಕೂಡಿದ ದೇಹವುಳ್ಳವನು, ಸುಂದರವಾದ ಬಳ್ಳಿಯಂತೆ ಕೊಂಕಾದ ಹುಬ್ಬನ್ನುಳ್ಳವನು ಆದ ಪಂಪಾವಿರೂಪಾಕ್ಷನೇ ಶೀಘ್ರವಾಗಿ ನಮ್ಮನ್ನು ಕಾಪಾಡು. ೨. ಇನ್ನು ಕೇಳಯ್ಯ ಸಿದ್ಧರಾಮ, ದೇವೇಂದ್ರನು ಶಿವನ ಪಾದಪೂಜೆಯನ್ನು ಮಾಡಿದ ಫಲದಿಂದ ದೇವಲೋಕವನ್ನು ಪಾಲಿಸುತ್ತ ಸುಖವಾಗಿದ್ದನು. ಹೀಗಿರಲು ತಮಗೆ ಬರಬೇಕಾದ ದಾಯಭಾಗಕ್ಕಾಗಿ ದಾಯಾದಿಗಳಾದ ರಾಕ್ಷಸರು ಯುದ್ಧವನ್ನು ಮಾಡಿದರು. ಆಗ ಇಂದ್ರನು ಯುದ್ಧದಲ್ಲಿ ಅವರೆಲ್ಲರನ್ನೂ ಗೆದ್ದರೂ ಕೂಡ ಸುಖವಾಗಿರದೆ ಶಿವನೆ



CC-0. Jangamwadi Math Collection. Digitized by eGangotri

ಬಂದು ಕೈಲಾಸದಾಸ್ಥಾನದೊಳ್ ಸಕಲಗಣ
ವೃಂದಸಹಿತೊಡ್ಡೋಲಗದೊಳಿರ್ಪ ಶಿವನಡಿಗೆ
ವಂದಿಸಿ ಮಹಾಭಕ್ತಿಯಿಂದೆ ಬಿನ್ನವಿಸಿದಂ ಮಕುಟತಟಹಸ್ತನಾಗಿ
ಇಂದುಶೇಖರನೆ ಕರುಣಿಸುವುದೆನ್ನೊಡನಾಂತು
ನಿಂದು ಕಾದುವ ಸಮರ್ಥನನೆನಲ್ ನಸುನಕ್ಕು
ಮುಂದರಿಯದಿಂತು ನುಡಿವರೆ ಬೇಡವೆನೆ ಸುರಪನಭವನೊಡನಿಂತೆಂದನು ೩

ಜಂಭಬಲ ನಮುಚಿ ವೃತ್ರಾದಿ ಖಳರಂ ಕದನ
ಕುಂಭಿನಿಯೊಳೋಡಿಸಿದೆನಂದಿನಿಂ ಸಮರಸಂ
ರಂಭಮೇ ಕನಸಾಯ್ತು ಸರ್ವಥಾ ನನಗೊಬ್ಬ ಶತ್ರುವಂ ಕರುಣಿಸೆನಲು
ಜಂಭಾರಿ ನುಡಿದಹಂಕಾರಮಂ ಕೇಳ್ದು ಕೋ
ಪಂ ಭರದೊಳುಬ್ಬರಿಸೆ ಸುರಪಾಲನಂ ಸುಡಲ್
ಶಂಭು ಫಾಳಾಂಬಕಜ್ವಾಲೆಯೊಳಗೊಂದು ಕಿಡಿಯಂ ಮಾಣದುಗುಳಿಸಿದನು ೪

ಸಾಕುಸಾಕೆಲೆ ಮಹಾದೇವ ದೇವೇಶ ಕರು
ಣಾಕರ ಕೃಪಾಬ್ಧಿ ಶಂಕರ ಶರ್ವ ನೀಂ ಮುನಿಯೆ
ಪಾಕಶಾಸನನದೇಂ ದಕ್ಷನೇ ಕಿಡಿಯನುಪಸಂಹರಿಸಬೇಕೆನುತ್ತೆ

ಹತ್ತಿರಕ್ಕೆ ತನಗೊಬ್ಬ ಶತ್ರುವನ್ನು ಕೇಳುತ್ತೇನೆಂದು ಉತ್ಸಾಹದಿಂದ ಹೊರಟನು. ೩. ಕೈಲಾಸದಲ್ಲಿದ್ದ ಶಿವನ ಆಸ್ಥಾನಕ್ಕೆ ಬಂದು ಎಲ್ಲ ಗಣಗಳ ಗುಂಪಿನೊಡನೆ ಒಡ್ಡೋಲಗ ದಲ್ಲಿದ್ದ ಶಿವನ ಪಾದಗಳಿಗೆ ದೇವೇಂದ್ರನು ತಲೆಬಾಗಿ ನಮಸ್ಕರಿಸಿ ಹಣೆಯ ಮೇಲೆ ಕೈಯಿಟ್ಟು ಬಹಳ ಭಕ್ತಿಯಿಂದ ಚಂದ್ರಶೇಖರನೆ, ನನ್ನನ್ನು ಎದುರಿಸಿನಿಂತು ಹೋರಾಡುವ ಸಾಮರ್ಥ್ಯವುಳ್ಳ ಶತ್ರು ಒಬ್ಬನನ್ನು ಕರುಣಿಸು ಎಂದು ಬಿನ್ನವಿಸಿದನು. ಅದಕ್ಕೆ ಶಿವನು ನಸುನಕ್ಕು ಮುಂದೇನಾಗುತ್ತದೆಂದು ತಿಳಿದುಕೊಳ್ಳದೆ ಈ ರೀತಿ ಮಾತನಾಡುತ್ತಾರೆಯೆ ? ಬೇಡ ಎನ್ನಲು ಇಂದ್ರನು ಶಿವನೊಡನೆ ಈ ರೀತಿ ಹೇಳಿದನು. ೪. ಜಂಬ, ಬಲ, ನಮುಚಿ, ವೃತ್ರರೇ ಮೊದಲಾದ ರಾಕ್ಷಸರನ್ನು ಯುದ್ಧಭೂಮಿಯಿಂದ ಓಡಿಸಿದೆ. ಆ ದಿನದಿಂದ ಯುದ್ಧೋತ್ಸಾಹವೇ ಕನಸಾಯ್ತು. ಹೇಗಾದರೂ ಮಾಡಿ ನನಗೊಬ್ಬ ಶತ್ರುವನ್ನು ಅನುಗ್ರಹಿಸು ಎಂದನು. ದೇವೇಂದ್ರನು ಆಡಿದ ಅಹಂಕಾರದ ಮಾತುಗಳನ್ನು ಕೇಳಿ ಶಿವನಿಗೆ ತೀವ್ರವಾಗಿ ಕೋಪ ತುಂಬಿಬಂದಿತು. ಅವನನ್ನು ಸುಡಲು ಶಿವನು ತನ್ನ ಹಣೆಗಣ್ಣನ್ನು ತೆರೆದು ಆ ಕಣ್ಣಿನ ಬೆಂಕಿಯ ಒಂದು ಕಿಡಿಯನ್ನು ತಡೆಯದೆ ಹೊರಗೆಬಿಟ್ಟನು. ೫. ಸಾಕು ಸಾಕಯ್ಯ, ಮಹಾದೇವ, ದೇವೇಶ, ಕರುಣಾಕರ, ಕೃಪಾಸಾಗರ, ಶಂಕರ, ಶರ್ವ ನೀನು ಕೋಪಗೊಂಡರೆ ಎದುರಿಸಲು ದೇವೇಂದ್ರನು ಶಕ್ತನೆ ? ಕಿಡಿಯನ್ನು ಉಪಸಂಹ

CC-0. Jangamwadi Math Collection. Digitized by eGangotri

ನಾಕವಾಸಿಗಳ ಗುರು ಶಿವನಡಿಗೆ ನಮಿಸೆ ಬಳಿ
ಕಾ ಕಿಡಿಯನೀಶ್ವರಂ ಹಸ್ತದೊಳ್ ಪಿಡಿದು ರ
ತ್ನಾಕರಕೆ ಬಿಸುಟಿಂದ್ರ ಶತ್ರುವಂ ಕೊಟ್ಟೆವಾಂ ಪೋಗೆನುತೆ ಬೀಳ್ಕೊಟ್ಟನು ೫

ಇತ್ತಲಮರೇಂದ್ರನಭವನನಿರದೆ ಬೀಳ್ಕೊಂಡು
ಚಿತ್ತದಾನಂದದಿಂ ಸುರಪುರಕೆ ನಡೆತಂದ
ನತ್ತಲಾ ಹರನಿಟ್ಟ ಕಿಡಿ ಬಾಲನಾಗಿ ಗಂಗಾಸಿಂಧುಸಂಗಮದೊಳು
ಬಿತ್ತರದೊಳಳುತಿರಲ್ ಶಂಖನೆಂಬಾತ್ಮಜಂ
ಸತ್ತುಪೋಗಲ್ ಸುರಪನಂ ಗೆಲ್ವ ಕುವರನಂ
ಪೆತ್ತಪೆನೆನುತ್ತೆ ಶಿವನಂ ಕುರಿತು ತಪಿಸುತ್ತೆ ಶರಧಿಸುತನಂ ಕಂಡನು ೬

ಹರುಷದಿಂದಾ ಶಿಶುವನೆತ್ತಿ ತೊಡೆಯೊಳಗಿರಿಸೆ
ಸರಸಿಜಭವಾಂಡವೊಡೆವಂತೆ ಶಿಶು ಕೂಗಲಾ
ಸರದ ಬಳಿವಿಡಿದೆಲ್ಲಿಯದು ಬೊಬ್ಬೆಯೆನುತಜಂ ಬಾಲನಿರ್ದಲ್ಲಿಗೈದೆ
ಪರಮೇಷ್ಠಿಯಂ ಕಂಡು ನಮಿಸಿ ಮತ್ತನುಜಂಗೆ
ಕರುಣದಿಂ ಪೆಸರಿಟ್ಟು ಜಗದೊಳಾರಿಂದಲುಂ
ಮರಣಮಾಗದೊಲು ವರವೀವುದೆಂದಜನ ಕಯ್ಗಿತ್ತು ಸುತನಂ ಕೊಟ್ಟನು ೭

ರಿಸಬೇಕು ಎನ್ನುತ್ತ ದೇವತೆಗಳ ಗುರುವಾದ ಬೃಹಸ್ಪತಿಯು ಶಿವನ ಪಾದಕ್ಕೆ ನಮಸ್ಕರಿಸಿದನು. ಅನಂತರ ಆ ಕಿಡಿಯನ್ನು ಈಶ್ವರನು ತನ್ನ ಕೈಯಲ್ಲಿ ಹಿಡಿದು ಸಮುದ್ರಕ್ಕೆ ಎಸೆದನು. ಇಂದ್ರ, ನಿನಗೆ ಶತ್ರುವನ್ನು ನಾವು ಕೊಟ್ಟೆವು, ಹೋಗು ಎಂದು ಕಳಿಸಿದನು. ೬. ಈ ಕಡೆಯಲ್ಲಿ ದೇವೇಂದ್ರನು ಶಿವನಿಂದ ಬೀಳ್ಕೊಂಡು ಸಂತೋಷಚಿತ್ತನಾಗಿ ಅಮರಾವತಿಗೆ ಬಂದನು. ಆ ಕಡೆಯಲ್ಲಿ ಈಶ್ವರನು ಬಿಟ್ಟ ಬೆಂಕಿಯ ಕಿಡಿಯು ಬಾಲಕನಾಗಿ ಗಂಗಾ-ಸಾಗರಗಳ ಸಂಗಮದಲ್ಲಿ ಜೋರಾಗಿ ಅಳುತ್ತಿರಲು,ಶಂಖನೆಂಬ ತನ್ನ ಮಗ ಸತ್ತುಹೋಗಲು ದೇವೇಂದ್ರನನ್ನು ಗೆಲ್ಲುವ ಸಾಮರ್ಥ್ಯವುಳ್ಳ ಮಗನನ್ನು ಪಡೆಯುವುದಾಗಿ ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದ ಸಮುದ್ರನು ಮಗುವನ್ನು ನೋಡಿದನು. ೭. ಸಮುದ್ರನು ಸಂತೋಷದಿಂದ ಆ ಮಗುವನ್ನೆತ್ತಿ ತೊಡೆಯ ಮೇಲೆ ಇರಿಸಿಕೊಳ್ಳಲು ಬ್ರಹ್ಮಾಂಡವೇ ಒಡೆದುಹೋಗುವಂತೆ ಮಗು ಕೂಗಿತು. ಆ ಧ್ವನಿಯನ್ನು ಹಿಂಬಾಲಿಸಿ ಈ ಶಬ್ದ ಎಲ್ಲಿಯದು ಎಂದು ಬ್ರಹ್ಮನು ಬಾಲಕನಿದ್ದಲ್ಲಿಗೆ ಬಂದನು. ಅವನನ್ನು ಕಂಡು ಸಮುದ್ರ ರಾಜನು ನಮಸ್ಕರಿಸಿ ತನ್ನ ಮಗನಿಗೆ ಕರುಣೆಯಿಂದ ಹೆಸರಿಟ್ಟು ಜಗತ್ತಿನಲ್ಲಿ ಯಾರಿಂದಲೂ ಮರಣವಾಗದಂತೆ ವರವನ್ನು ಕೊಡಬೇಕೆಂದು ಬೇಡಿ ಬ್ರಹ್ಮನ ಕೈಯಲ್ಲಿ ಮಗನನ್ನು

CC-0. Jangamwadi Math Collection. Digitized by eGangotri

ಸರಸಿಜಭವಂ ಶರಧಿಜಾತನಂ ತೊಡೆಯ ಮೇ
ಲಿರಿಸಿಕೊಂಡವನ ಭದ್ರಾಕಾರವಂ ನೋಡು
ತಿರಲಜನ ಗಡ್ಡಮಂ ತೂಗಲ್ಕೆ ಕಡುನೊಂದು ಕಣ್ಣನೀರವನ ಮೇಲೆ
ಸುರಿಯಲಾಯಾಸದಿಂ ಬಿಡಿಸಿಕೊಂಡೆಂಬನೆಲೆ
ಶರಧಿ ಕೇಳಿವನೆನ್ನ ಕಂಗಳ ಜಲಂಗಳಂ
ಧರಿಸಿದ ನಿಮಿತ್ತದಿಂ ವರಜಲಂಧರನಿವಂ ಸಾಮಾನ್ಯನಲ್ಲೆಂದನು ೮

ಆವನಿಂದೀತಂಗೆ ಜನನಮುವನಿಂದಲೇ
ಸಾವು ಪೊಸಕೈದುವಿಂದಲ್ಲದುಳಿದೀ ಕ್ಷುದ್ರ
ದೇವಾಸುರೋರಗ ನರಾಳಿಯಿಂದಳಿಯಬೇಡೆಂದು ವರಮಂ ಪಾಲಿಸಿ
ಆ ವೇಳೆಯೊಳ್ ಶುಕ್ರನಿಂದಸುರರಾಜನೆಂ
ಬೀ ವಿಮಲ ನಾಮದಿಂ ಪಟ್ಟಮಂ ರಚಿಸಿ ರಾ
ಜೀವಪೀಠಂ ಪೋದನತ್ತಲಿತ್ತಲ್ ದಿನದಿನಕ್ಕಿವಂ ವರ್ಧಿಸಿದನು ೯

ಶುಕ್ರನೀತಂಗೆ ಕ್ರೌಂಚನ ಮಗಳ್ ವೃಂದೆಯಂ
ಶಕ್ರವಿಭವದೆ ಮದುವೆಯಂ ಮಾಡಿದಂ ಮಹಾ
ವಿಕ್ರಮಾನ್ವಿತನಾಗಿ ಜಾಲಂಧರಾಹ್ವಯದ ಬಲುರಾಜಧಾನಿಯೊಳಗೆ

ಕೊಟ್ಟನು. ೮. ಬ್ರಹ್ಮನು ಸಮುದ್ರನ ಮಗನನ್ನು ತೊಡೆಯಮೇಲೆ ಇರಿಸಿಕೊಂಡು ಅವನ ಸುಂದರವಾದ ಆಕಾರವನ್ನು ನೋಡುತ್ತಾ ಇದ್ದನು. ಆಗ ಮಗುವು ಬ್ರಹ್ಮನ ಗಡ್ಡವನ್ನು ಹಿಡಿದು ಎಳೆಯಲು, ಬ್ರಹ್ಮನಿಗೆ ಬಹಳ ನೋವಾಗಿ ಕಣ್ಣಿನಿಂದ ನೀರುಬಂದು ಮಗುವಿನ ಮೇಲೆ ಬಿದ್ದಿತು. ಬಹಳ ಕಷ್ಟದಿಂದ ಬ್ರಹ್ಮನು ಗಡ್ಡವನ್ನು ಬಿಡಿಸಿಕೊಂಡು -ಎಲೈ ಸಮುದ್ರನೇ, ಕೇಳು, ಇವನು ನನ್ನ ಕಣ್ಣಿನ ನೀರನ್ನು ಧರಿಸಿದ್ದಾನೆ. ಆ ಕಾರಣದಿಂದ ಇವನ ಹೆಸರು ಜಲಂಧರ ಎಂದು ಪ್ರಸಿದ್ಧವಾಗುತ್ತದೆ. ಇವನು ಸಾಮಾನ್ಯನಲ್ಲ ಎಂದನು. ೯. ಯಾರಿಂದ ಈತನಿಗೆ ಜನನವಾಯಿತೋ ಅವನಿಂದಲೇ ಈತನಿಗೆ ಸಾವು. ಹೊಸ ಆಯುಧದಿಂದ ಅಲ್ಲದೆ ಉಳಿದ ಈ ಸಾಮಾನ್ಯರಾದ ದೇವ, ದಾನವ, ನಾಗ, ಮನುಷ್ಯರಿಂದ ಸಾವು ಬರದಿರಲಿ ಎಂದು ವರವನ್ನು ಕೊಟ್ಟನು. ಅಕ್ಷಣವೇ ಶುಕ್ರಾಚಾರ್ಯನಿಂದ ಅಸುರರಾಜನೆಂಬ ಶ್ರೇಷ್ಠವಾದ ಹೆಸರಿನಿಂದ ಪಟ್ಟವನ್ನು ಕಟ್ಟಿಸಿ ಬ್ರಹ್ಮನು ಅತ್ತಕಡೆ ಹೊರಟುಹೋಗಲು ಇತ್ತಕಡೆ ದಿನದಿನಕ್ಕೆ ಈತನು ಅಭಿವೃದ್ಧಿ ಹೊಂದುತ್ತಿದ್ದನು. ೧೦. ಶುಕ್ರನು ಈತನಿಗೆ ಕ್ರೌಂಚನ ಮಗಳಾದ ವೃಂದೆಯನ್ನು ಇಂದ್ರವೈಭವದಿಂದ ಮದುವೆ ಮಾಡಿಸಿದನು. ಜಲಂಧರನು ಮಹಾಪೌರುಷದಿಂದ ಕೂಡಿ ಜಾಲಂಧರವೆಂಬ ರಾಜಧಾನಿಯನ್ನು ನಿರ್ಮಿಸಿ, ತಮ್ಮ ವೈಭವವನ್ನು ಕಳೆದು

CC-0. Jangamwadi Math Collection. Digitized by eGangotri

ವಕ್ರವೈಭವರಾಗಿ ಗಿರಿಯೊಳಡಗಿರ್ದಸುರ
ಚಕ್ರಮಂ ಕರೆಸಿ ಕಾಣಿಸಿಕೊಳುತೆ ವೃಂದೆಯೊಡ
ನೀ ಕ್ರಮದೊಳತಿವಿನೋದಂಗಳಿಂ ಖಳರಾಜನಿರುತಿರ್ದಸಂತ್ಸವದೊಳು ೧೦

ಆಲಿಸೈ ಸಿದ್ಧರಾಮೇಶ ಸುಖಮಿರುತಸುರ
ಪಾಲಕ ಜಲಂಧರಂ ಲೀಲೆಯಿಂ ತನ್ನ ವರ
ಜಾಲಂಧರಾಖ್ಯಪುರದೊಳಗಿರುತ್ತೊಂದು ದಿನವೋಲಗದೊಳೊಪ್ಪುತಿರಲು
ಲೀಲೆಯಿಂದಸುರಗುರು ಬಲಗಡೆಯೊಳಿರೆ ಬಂಧು
ಜಾಲಮಿರೆ ಹಿಂದೆಸೆಯೊಳಖಿಳರಾಕ್ಷಸಸುಭಟ
ರೋಲಗಕೆ ಬರುತಿರ್ದರದ್ಭುತಾಕಾರದಿಂ ಪೇಳ್ವುದೇನಚ್ಚರಿಯನು ೧೧

ಪೊಳೆವ ಕೆಮ್ಮೀಸೆಗಳ ಕಾರೊಡಲ ಕೆಂಗಣ್ಣ
ಬಳೆದ ಭುಜದುಬ್ಬುಗಳ ಸಲೆ ಮುಸುಡ ಕೊಬ್ಬುಗಳ
ತಳೆದ ಕೈದುಗಳ ಜುಂಜುರುದಲೆಯ ಬರಸಿಡಿಲ ಜಂಗುಳಿಯ ಗರ್ಜನೆಗಳ
ಥಳಥಳಿಪ ಕೋರೆದಾಡೆಗಳ ಕರ್ಕಶರೋಮ
ದಳವಟ್ಟ ಬಿರುದುಹಾಹೆಗಳ ಮಣಿಮುಕುಟದೊ
ಬ್ಬುಳಿಯ ಬೆಳಗಿನ ಬಿರಿಸುನಡೆಯ ರಾಕ್ಷಸಸುಭಟರೋಲಗಕೆ ಬರುತಿರ್ದರು ೧೨

ಕೊಂಡು ಗಿರಿಗಳಲ್ಲಿ ಅಡಗಿದ್ದ ರಾಕ್ಷಸರ ಸಮೂಹವನ್ನು ಕರೆಸಿ ಸಂದರ್ಶನವಿತ್ತು. ಈ ರೀತಿಯಾಗಿ ವೃಂದೆಯೊಡನೆ ವಿನೋದದಿಂದ ಆ ದಾನವರಾಜನು ಸಂಭ್ರಮದಿಂದಿರುತ್ತಿದ್ದನು. ೧೧. ಕೇಳಯ್ಯ, ಸಿದ್ಧರಾಮೇಶ, ತನ್ನ ರಾಜಧಾನಿಯಾದ ಜಾಲಂಧರಾಖ್ಯಪುರದಲ್ಲಿ ದಾನವರಾಜನಾದ ಜಲಂಧರನು ವೈಭವದಿಂದ ಸುಖವಾಗಿರುತ್ತಿರಲು ಒಂದು ದಿನ ರಾಜಸಭೆಯಲ್ಲಿ ಕಂಗೊಳಿಸುತ್ತಲಿದ್ದನು. ಅವನ ಬಲಗಡೆಯಲ್ಲಿ ಅಸುರಗುರುವಾದ ಶುಕ್ರಾಚಾರ್ಯನಿದ್ದನು. ಬಂಧುಬಾಂಧವರು ಹಿಂದುಗಡೆಯಿದ್ದರು. ರಾಕ್ಷಸವೀರರು ಭಯಂಕರಾಕಾರದಿಂದ ಸಭೆಗೆ ಬರುತ್ತಿದ್ದರು. ೧೨. ಅವರ ಕೆಂಪಾದ ಮೀಸೆಗಳು ಹೊಳೆಯುತ್ತಿದ್ದುವು. ಶರೀರ ಕಪ್ಪಾಗಿದ್ದಿತು, ಕಣ್ಣುಗಳು ಕೆಂಪಾಗಿದ್ದುವು, ಬಲಿಷ್ಠವಾದ ಭುಜದ ಉಬ್ಬುಗಳು ಇದ್ದುವು, ಮುಖ ಕೊಬ್ಬಿದ್ದಿತು, ಆಯುಧಗಳನ್ನು ಹಿಡಿದಿದ್ದರು, ತಲೆಯು ಗುಂಗುರುಕೂದಲಿನಿಂದ ಕೂಡಿದ್ದಿತು, ಬರಸಿಡಿಲಿನಂತಹ ಸಮೂಹ ಗರ್ಜಿಸುವಂತಿದ್ದಿತು. ಅವರ ಕೋರೆದಾಡೆಗಳು ಥಳಥಳನೆ ಹೊಳೆಯುತ್ತಿದ್ದುವು, ಕೂದಲುಗಳು ಒರಟಾಗಿದ್ದುವು, ಬಿರುದುಗಳ ಗೊಂಬೆಗಳನ್ನು ಧರಿಸಿದ್ದರು. ಮಣಿಖಚಿತವಾದ ಕಿರೀಟಗಳ ಸಮೂಹದಿಂದ ಹೊರಟ ಕಾಂತಿಯಿಂದ ಕೂಡಿ ವೇಗವಾದ ನಡಗೆಯಿಂದ ರಾಕ್ಷಸ

CC-0. Jangamwadi Math Collection. Digitized by eGangotri

ಶ್ವೇತದಂತಂ ಸುಪಾರ್ಶ್ವಂ ಪ್ರಜಂಘಂ ಮಯಂ
ನೀತಿವಂತಂ ವಿಪ್ರಜಿತು ವಿರೂಪಾಕ್ಷಂ ಮ
ಹಾತಿಬಲವಿದ್ರಾವಣಂ ಮಹಾನಾಭಂ ಪುಲೋಮಂ ಮರೀಚಿ ಮದಿರಂ
ಕೇತುವುಂ ಜರ್ಝರಂ ವಾಮನಂ ಗಜಶಿರಂ
ಕೇತುವೀರ್ಯಂ ನಮುಚಿ ಮುಂತಾದ ಖಲನೃಪ
ವ್ರಾತಮೈತರುತಿರ್ದುದಾ ಜಲಂಧರನೋಲಗಕ್ಕೆ ಬಹುಭೀಕರದೊಳು ೧೩

ಅರಿಬಲಪ್ರಳಯಪ್ರಚಂಡನುಂ ಚಂಡನುಂ
ಧುರವಿಜಯಘನತಟಿತ್ಕೇತುವುಂ ಕೇತುವುಂ
ಪರಮವಿಕ್ರಮನಾ ನಿಶುಂಭನುಂ ಶುಂಭನುಂ ಮಧುಮತ್ತ ಧೂಮ್ರಾಕ್ಷರು
ಗುರುಭೀಷಣಾಂಗಪ್ರಹೇತಿಯುಂ ಹೇತಿಯುಂ
ಸುರಬಲಾಹಕ*ದೀರ್ಘಬಾಹುವುಂ ಬಾಹುವುಂ
ದುರುಳದಾನವ ಖಡ್ಗರೋಮನುಂ ಭೀಮನುಂ ಖಳನೋಲಗಕೆ ಬಂದರು ೧೪

ಕಾಲನ ಮಹಾಕಾಲದಂಡಮಂ ಸೆಳೆವ ಲಯ
ಕಾಲಭೈರವನ ದಾಡೆಯನುಗಿವ ಕೋಪದಿಂ
ಕಾಲಮೃತ್ಯುವಿನ ಗಂಟಲನರಿವ ಗಿರಿಗಳಂ ಕಿತ್ತು ತಿರಿಕಲ್ಲಾಡುವ

ಸುಭಟರು ರಾಜಸಭೆಗೆ ಬರುತ್ತಿದ್ದರು. ೧೩. ಜಲಂಧರನ ಆಸ್ಥಾನಕ್ಕೆ ಶ್ವೇತದಂತ, ಸುಪಾರ್ಶ್ವ, ಪ್ರಜಂಘ, ಮಯ, ನೀತಿವಂತ, ವಿಪ್ರಜಿತು, ವಿರೂಪಾಕ್ಷ, ಮಹಾಅತಿಬಲ, ವಿದ್ರಾವಣ, ಮಹಾನಾಭ, ಪುಲೋಮ, ಮರೀಚಿ, ಮದಿರ, ಕೇತು, ಜರ್ಝರ, ವಾಮನ, ಗಜಶಿರ, ಕೇತುವೀರ್ಯ, ನಮುಚಿ ಮುಂತಾದ ರಾಕ್ಷಸರಾಜರ ಸಮೂಹವು ಬಹು ಭಯವನ್ನುಂಟುಮಾಡುವ ರೀತಿಯಲ್ಲಿ ಜಲಂಧರನ ಆಸ್ಥಾನಕ್ಕೆ ಬರುತ್ತಿದ್ದಿತು. ೧೪. ಶತ್ರುಗಳ ಸಮೂಹಕ್ಕೆ ಪ್ರಳಯದಂತಹ ಪ್ರಚಂಡನಾದ ಚಂಡನು ಬಂದನು. ಧುರವಿಜಯ ನಾದ ಮಿಂಚಿನ ಪ್ರಭೆಯುಳ್ಳ ಘನ, ಕೇತು, ಪರಮ ವಿಕ್ರಮಶಾಲಿಯಾದ ನಿಶುಂಭ, ಶುಂಭ, ಮಧುಮತ್ತ, ಧೂಮ್ರಾಕ್ಷ, ಮಹಾಭಯಂಕರವಾದ ದೇಹವುಳ್ಳ ಪ್ರಹೇತಿ, ಹೇತಿ, ಮೇರುಪರ್ವತದಂತೆ ದೀರ್ಘವಾದ ಬಾಹುವುಳ್ಳ ಬಾಹು, ದುರುಳ ದಾನವನಾದ ಖಡ್ಗರೋಮ, ಭೀಮ ಇವರೆಲ್ಲರೂ ರಾಕ್ಷಸನ ಓಲಗಕ್ಕೆ ಬಂದರು. ೧೫. ಯಮನ ಮಹಾ ಕಾಲದಂಡವನ್ನು ಸೆಳೆಯುವ, ಪ್ರಳಯಕಾಲದ ಭೈರವನ ಕೋರೆದಾಡೆಯನ್ನು ಹೊರಸೆಳೆಯುವ, ಕೋಪದಿಂದ ಕಾಲಯಮನ ಗಂಟಲನ್ನು ಸೀಳುವ, ಬೆಟ್ಟಗಳನ್ನು ಕಿತ್ತು ಕವಣೆಯ ಕಲ್ಲುಗಳನ್ನಾಗಿ ಆಡುವ, ಪ್ರಳಯಕಾಲದ ಮೇಘಗಳಿಂದ ಉಂಟಾಗುವ

---

* ಬಲಾಹಕ–ಪರ್ವತ, ಸುರಬಲಾಹಕ–ಮೇರುಪರ್ವತ

CC-0. Jangamwadi Math Collection. Digitized by eGangotri

ಕಾಲಮೇಘದ ಸಿಡಿಲ ತೊಡಿಗೆಯಿಂ ಸಲೆ ತೊಡುವ
ಕಾಲದೊಳ್ ಪ್ರಳಯಂಗಳಂ ಮಾಳ್ಪ ಭೀಕರದ
ಕಾಲರಾಕ್ಷಸರೈದೆ ಸಂದಣಿಸಿ ನಿಂದಿರ್ದರೇನೆಂಬೆನಚ್ಚರಿಯನು ೧೫

ಇಂತು ಖಳರಾಜನೊಡ್ಡೋಲಗದೊಳಿರ್ಪ ಸಮ
ನಂತರದೊಳತುಳಭಯಭಕ್ತಿಯಿಂದಾ ಕ್ಷಣಂ
ಮುಂತಿರ್ಪ ರಾಹುಕೇತುಗಳನೀಕ್ಷಿಸಿ ಮಹಾವಿಸ್ಮಯಸ್ವಾಂತನಾಗಿ
ಇಂತಿದೇನೊಂದು ತನುವೆರಡಾದ ಕಾರಣಮಿ
ದಂ ತಿಳಿಯೆ ಪೇಳೆಂದು ಶುಕ್ರನ ಮೊಗಂ ನೋಡೆ
ದಂತರುಚಿ ಭಿತ್ತಿಯನಲಂಕರಿಸೆ ಪೇಳ್ದನವದಿರ ಪೂರ್ವಸಂಗತಿಯನು ೧೬

ಕೇಳಾದೊಡೆಲೆ ಜಲಂಧರ ಪಿಂತೆ ದಿವಿಜಕುಲ
ಪಾಲಕಂ ಸಕಲದೇವಾಸುರರ್ವೆರಸಿ ಘನ
ಲೀಲೆಯಿಂ ಶರಧಿಯಂ ಮಥಿಸೆ ಸುರತರು ದಿವಿಜಮಣಿ ದಿವಿಜಧೇನುವೆಂಬ
ಮೇಲಾದ ವಸ್ತುಗಳ್ವೆರಸಿ ಸುಧೆಯುದಿಸೆ ಲ
ಕ್ಷ್ಮೀಲೋಲನಾ ಸುಧೆಯನಮರಾಸುರವ್ರಜಕೆ
ಕೌಳಿಕದೊಳೆರೆಯೆ ಶಶಿರವಿಯು ಕೊಂಡೆಯದೆ ತಲೆಯರಿಯಲಿಂತಾಯ್ತೆಂದನು ೧೭

ಕೇಳಿ ಗುಡುಗುಡಿಸಿ ಕೋಪಾಗ್ನಿಸ್ಫುಲಿಂಗಪ್ರ
ಲೋಲಭೀಷಣನಯನಸಮ್ಮಿಳಿತ ಗುರುತರಕ
ರಾಳಮುಖನಾಗಿ ನುಡಿದಂ ನಮ್ಮ ತಂದೆಯಂ ಮಥಿಸಿ ನಾನಾ ವಸ್ತುವ

ಸಿಡಿಲನ್ನೇ ಉಡುಗೆಗಳನ್ನಾಗಿ ತೊಡುವ, ಅಕಾಲದಲ್ಲಿ ಪ್ರಳಯವನ್ನುಂಟು ಮಾಡುವ, ಭಯಂಕರರಾದ ಕಾಳರಕ್ಕಸರು ಗುಂಪುಗೂಡಿ ನಿಂತಿದ್ದರು. ೧೬. ಈ ರೀತಿಯಲ್ಲಿ ರಾಕ್ಷಸ ರಾಜ ಜಲಂಧರನು ಒಡ್ಡೋಲಗದಲ್ಲಿರುವಾಗ ಬಹಳ ಭಯಭಕ್ತಿಯಿಂದ ಮುಂದೆ ನಿಂತಿದ್ದ ರಾಹು-ಕೇತುಗಳನ್ನು ಅವನು ನೋಡಿ ಬಹಳ ಆಶ್ಚರ್ಯವನ್ನು ಹೊಂದಿದವನಾಗಿ, ಇದೇನು ಒಂದೇ ದೇಹ ಎರಡಾದ ಕಾರಣವನ್ನು ನನಗೆ ತಿಳಿಯಹೇಳಿ ಎಂದು ಶುಕ್ರಾಚಾರ್ಯನ ಮುಖವನ್ನು ನೋಡಲು, ಶುಕ್ರನು ದಂತಕಾಂತಿಯು ಗೋಡೆಗಳನ್ನು ಬೆಳಗಿ ಅಲಂಕರಿಸುತ್ತಿರಲು ಅವರ (ರಾಹು-ಕೇತುಗಳ) ಪೂರ್ವ ಸಂಗತಿಯನ್ನು ಹೇಳಿದನು. ೧೭. ಎಲೈ ಜಲಂಧರನೇ ಕೇಳು, ಹಿಂದೆ ದೇವೇಂದ್ರನು ಎಲ್ಲ ದೇವದಾನವರ ಜೊತೆಗೂಡಿ ಮಹಾವೈಭವದಿಂದ ಸಮುದ್ರವನ್ನು ಕಡೆದನು. ಆಗ ಕಲ್ಪತರು, ದಿವಿಜಮಣಿ ಮತ್ತು ಕಾಮಧೇನುವೆಂಬ ಶ್ರೇಷ್ಠವಾದ ವಸ್ತುಗಳ ಜೊತೆಯಲ್ಲಿ ಅಮೃತವು ಹುಟ್ಟಿತು. ವಿಷ್ಣುವು ಆ ಅಮೃತವನ್ನು ದೇವತೆಗಳ ಮತ್ತು ರಾಕ್ಷಸರ ಸಮೂಹಕ್ಕೆ ವಂಚನೆಯಿಂದ ಸುರಿದನು. ಚಂದ್ರ ಸೂರ್ಯರ ಚಾಡಿಯ ಮಾತಿನಂತೆ ತಲೆಯನ್ನು ಕತ್ತರಿಸಲು ಈ ರೀತಿಯಾಯಿತು' ಎಂದನು. ೧೮. ಈ ಸಂಗತಿಯನ್ನು ಕೇಳಿ ಜಲಂಧರನು ರೋಷದಿಂದ ಗುಡುಗುಡಿಸುತ್ತ ಕೋಪವೆಂಬ ಬೆಂಕಿಯ ಕಿಡಿಯಿಂದ ನಡುಗುತ್ತಿರುವ ಉಗ್ರವಾದ

CC-0. Jangamwadi Math Collection. Digitized by eGangotri

ಖೂಳನೊಯ್ದನೆ ತನ್ನ ಬಸಿರನುಗಿದಾಂ ಕರುಳ
ಜಾಲಮಂ ರಣಭೂತಕುಣಿಸುವೆಂ ಬಲವೈದ
ವೇಳೆನುತೆ ಗರ್ಜಿಸುತ್ತಿರ್ಪ ಖಳರಾಜನೊಡನಸುರಗುರುವಿಂತೆಂದನು ೧೮

ಸಾಮಮುಂ ಭೇದಮುಂ ದಾನಮುಂ ದಂಡಮುಂ
ಭೂಮಿಪತಿಗಳ ನೀತಿ ಕೇಳ್ ಚರರನಟ್ಟಿ ಸು
ತ್ರಾಮನಂ ವಸ್ತುವಂ ಬೇಡಿಸುವುದೀಯದೊಡೆ ದಂಡದಿಂ ಕೊಂಬುದೆನಲು
ಆ ಮಾತ ಕೇಳಿ ಚರನೊರ್ವನಂ ಕರೆದು ನೀಂ
ತಾಮಸವ ಮಾಡದಿಂದ್ರನ ಬಳಿಗೆ ಪೋಗಿಯೆ
ಮ್ಮಾ ಮಹಾವಸ್ತುವಂ ಕೊಟ್ಟೆಮ್ಮ ಕಂಡು ಬದುಕೆಂದುಸಿರು ಪೋಗೆಂದನು ೧೯

ಚರನಸುರರಾಜನಂ ಬೀಳ್ಕೊಂಡು ಬೇಗದಿಂ
ಸುರಪುರಕೆ ನಡೆತಂದು ಬಾಗಿಲೊಳ್ ತಡೆದರಂ
ಸರಕುಮಾಡದೆ ಪೊಕ್ಕು ಸುರಪನಾಸ್ಥಾನಕ್ಕೆ ಬರಲವನ ದಿಟ್ಟತನವ
ಸುರಮಂತ್ರಿ ಕಂಡು ನೀನಾರದೂತಂ ನಮ್ಮ
ಪುರಕದೇಂ ಕಾರಣಂ ಬಂದೆ ಕಳುಹಿದರಾರು
ನಿರುತದಿಂ ಪೇಳೆಂದು ಬೆಸಗೊಳಲ್ಕಾಗಳಾ ಖಳನ ಚರನಿಂತೆಂದನು ೨೦

ಕಣ್ಣುಗಳಿಂದ ಕೂಡಿದ ಅತ್ಯಂತ ಕರಾಳವಾದ ಮುಖವುಳ್ಳವನಾಗಿ ಈ ರೀತಿ ಹೇಳಿದನು– ನಮ್ಮ ತಂದೆಯ (ಸಮುದ್ರರಾಜ)ನ್ನು ಕಡೆದು (ಜನಿಸಿದ) ನಾನಾ ರೀತಿಯ ವಸ್ತುಗಳನ್ನು ದುಷ್ಟನು ತೆಗೆದುಕೊಂಡು ಹೋದನೆ ? ಅವನ ಹೊಟ್ಟೆಯನ್ನು ನಾನು ಬಗಿದು ಕರುಳ ಮಾಲೆಗಳನ್ನು ರಣಪಿಶಾಚಿಗಳಿಗೆ ಉಣಿಸುತ್ತೇನೆ, ಸೈನ್ಯವನ್ನು ಹೊರಡುವಂತೆ ಹೇಳು-ಎನ್ನುತ್ತ ಗರ್ಜಿಸಿದ. ಆ ದಾನವರಾಜನನ್ನು ಕುರಿತು ಶುಕ್ರಾಚಾರ್ಯನು ಈ ರೀತಿ ಹೇಳಿದನು. ೧೯. ಸಾಮ, ಭೇದ, ದಾನ, ದಂಡ ಎಂಬುವುದು ರಾಜರಿಗೆ ನೀತಿ, ದೂತರನ್ನು ಕಳುಹಿಸಿ ವಸ್ತುಗಳನ್ನು ಕೊಡಲು ಇಂದ್ರನನ್ನು ಕೇಳುವುದು, ಅವನು ಕೊಡದಿದ್ದರೆ ದಂಡನೀತಿಯಿಂದ ಕಸಿದುಕೊಳ್ಳುವುದು ಎಂದನು. ಈ ಮಾತುಗಳನ್ನು ಕೇಳಿ ಸೇವಕನೊಬ್ಬನನ್ನು ಕರೆದು–ನೀನು ತಡಮಾಡದೆ ಇಂದ್ರನ ಬಳಿಗೆ ಹೋಗಿ ನಮ್ಮ ಆ ಮಹಾವಸ್ತುಗಳನ್ನು ಕೊಟ್ಟು ನಮ್ಮನ್ನು ನೋಡಿ ಬದುಕುವಂತೆ ಹೇಳು ಹೋಗು-ಎಂದನು. ೨೦. ಸೇವಕನು ಜಲಂಧರನಿಂದ ಬೀಳ್ಕೊಂಡು ವೇಗವಾಗಿ ಅಮರಾವತಿಗೆ ಬಂದು, ಬಾಗಿಲಲ್ಲಿ ತಡೆದವರನ್ನು ಲಕ್ಷಿಸದೆ ಒಳಗೆ ಪ್ರವೇಶಿಸಿದನು. ಹೀಗೆ ದೇವೇಂದ್ರನ ಆಸ್ಥಾನಕ್ಕೆ ಬಂದ ಅವನ ಧೈರ್ಯವನ್ನು ಸುರಮಂತ್ರಿಯಾದ ಬೃಹಸ್ಪತಿಯು ಗಮನಿಸಿ,– ನೀನು ಯಾರ ದೂತ ? ನಮ್ಮ ನಗರಕ್ಕೆ ಏನು ಕಾರಣದಿಂದ ಬಂದೆ ? ನಿನ್ನನ್ನು ಕಳುಹಿಸಿದವರು ಯಾರು? ಸತ್ಯವಾಗಿ ಹೇಳು–ಎಂದು ಕೇಳಲು ಆ ರಾಕ್ಷಸನ ಚಾರನು ಹೀಗೆಂದನು.

CC-0. Jangamwadi Math Collection. Digitized by eGangotri

ಸಕಲ ಸುರವಾರ್ಧಿವಡಬಂ ದಿವಿಜಕುಲಶರಭ
ನಿಕರಭೇರುಂಡನಸುರೇಂದ್ರಮಸ್ತಕದ ಮಾ
ಣಿಕ ಜಲಂಧರನ ದೂತಂ ಪಿಂತೆಯೆಮ್ಮಾಳ್ದನಯ್ಯನಂ ಬಿಡದೆ ಮಥಿಸಿ
ಪ್ರಕಟತರ ವಸ್ತುಗಳನೊಯ್ದಿರಿ ಗಡಸುರನಾ
ಯಕನವಂ ಬೇಡಲಟ್ಟಿದನೆನ್ನನೀವುದೇ
ಯುಕುತಿಯಲ್ಲದೊಡೆ ರಣಸನ್ನಾಹವಾಗಿಮೆನೆ ದಿವಿಜಗುರುವಿಂತೆಂದನು ೨೧

ದೂರ್ವಾಸಮುನಿವರು ಕೊಟ್ಟ ಶಾಪದೊಳೀ ಸು
ಪರ್ವರಾಜನ ವಸ್ತುಗಳ ಶರಧಿಯೊಳ್ ಕೂಡೆ
ಶರ್ವನಾಜ್ಞೆಯೊಳದಂ ಮಥಿಸಿ ತತ್ವಸ್ತುವಂ ತಂದೆವಾಂ ಪೆರರೊಡವೆಯು
ಪಾರ್ವನೇ ಸುರರಾಜನೆನೆ ಕೇಳ್ದು ಕಲಹವಂ
ನಿರ್ವಹಿಸಲಾಪಿರೇ ಮದ್ವಸ್ತುವಂ ಕೊಟ್ಟು
ಸರ್ವಥಾ ಕಂಡು ಬದುಕುವುದೆಂದು ಸಾರಿ ಬಂದೊಡೆಯನೊಡನಿಂತೆಂದನು ೨೨

ಜೀಯ ನೀವೆಂದಂತೆ ನಾಂ ಪೋಗಿ ನಿರ್ಜರರ
ರಾಯನಾ ವಸ್ತುವಂ ಬೇಡಲಿಂದೆಮಗೆ ಪ
ರ್ಯಾಯಮಂ ನುಡಿದನಲ್ಲದೆ ಕೊಟ್ಟು ಕೊಂಬ ಮಾತಿನಿತಿಲ್ಲಮೆಂದೆನಲ್ಕೆ

೨೧. ದೇವತೆಗಳೆಂಬ ಸಮುದ್ರಕ್ಕೆ ಬಡಬಾನಲ ; ದೇವತೆಗಳ ಕುಲವೆಂಬ ಶರಭ ಸಮೂಹಕ್ಕೆ ಗಂಡಬೇರುಂಡ ; ಅಸುರೇಂದ್ರರೆಲ್ಲರ ತಲೆಮಣಿಯಾಗಿರುವ ಜಲಂಧರನ ದೂತ ನಾನು. ಹಿಂದೆ ನಮ್ಮ ಒಡೆಯನ ತಂದೆ (ಸಮುದ್ರ) ಯನ್ನು ಕಡೆದಿರಿ. ಆಗ ಹುಟ್ಟಿದ ವಸ್ತುಗಳನ್ನೆಲ್ಲ ತೆಗೆದುಕೊಂಡು ಹೋದಿರಲ್ಲವೆ. ಈಗ ರಾಕ್ಷಸರ ನಾಯಕನಾದ ಅವನು ಆ ವಸ್ತುಗಳನ್ನು ಕೇಳಲು ನನ್ನನ್ನು ಕಳಿಸಿದ್ದಾನೆ. ಅದನ್ನು ಕೊಡುವುದೇ ಸರಿಯಾದ ದಾರಿ. ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧರಾಗಿರಿ ಎಂದು ಹೇಳಿದನು. ಅದನ್ನು ಕೇಳಿ ದೇವಗುರುವಾದ ಬೃಹಸ್ಪತಿ ಈ ರೀತಿ ಹೇಳಿದನು. ೨೨. ದೂರ್ವಾಸಮುನಿಗಳು ಕೊಟ್ಟ ಶಾಪದಿಂದ ಈ ದೇವೇಂದ್ರನ ವಸ್ತುಗಳು ಸಮುದ್ರದಲ್ಲಿ ಸೇರಿಹೋದುವು. ಆಗ ಈಶ್ವರನ ಆಜ್ಞೆಯಿಂದ ಸಮುದ್ರವನ್ನು ಕಡೆದು ಅವುಗಳನ್ನು ನಾವು ತಂದೆವು. ಹಾಗಲ್ಲದೆ ಬೇರೆಯವರ ಒಡವೆಗೆ ಈ ದೇವತೆಗಳ ರಾಜನು ಆಸೆಪಡುತ್ತಾನೆಯೆ—ಎಂದನು. ಅದನ್ನು ಕೇಳಿ ನಿಮ್ಮಿಂದ ಯುದ್ಧವನ್ನು ನಿರ್ವಹಿಸಲು ಸಾಧ್ಯವೆ ? ಆ ಮಹಾವಸ್ತುಗಳನ್ನು ಕೊಟ್ಟು ಬದುಕಿಕೊಳ್ಳಿ ಎಂದು ಹೇಳಿ ತನ್ನ ಯಜಮಾನನ ಹತ್ತಿರಕ್ಕೆ ಬಂದು ಆ ದೂತನು ಈ ರೀತಿ ಹೇಳಿದನು. ೨೩. ಸ್ವಾಮಿ, ನೀವು ಹೇಳಿದಂತೆ ನಾನು ಹೋಗಿ ದೇವೇಂದ್ರನನ್ನು ಆ ವಸ್ತುಗಳನ್ನು ಬೇಡಲು, ಅವನು ನಮಗೆ ಬದಲು ಮಾತನ್ನು ಆಡಿದನೇ ವಿನಾ ಕೊಡುವ ತೆಗೆದು

CC-0. Jangamwadi Math Collection. Digitized by eGangotri

ಕಾಯದೊಳ್ ಭುಗಿಭುಗಿಸೆ ಕೋಪಾಗ್ನಿ ಪರ್ಬಿಪೂ
ರಾಯವಾಗಲ್ಕವಂ ಕರೆಕರೆ ಸಮಸ್ತ ಖಳ
ನಾಯಕರನೀಗ ಪ್ರಸ್ಥಾನಭೇರಿಯ ಪೊಯ್ಸುವೆಂದವಂ ನೇಮಿಸಿದನು ೨೩

ಸಂಧಿ ಮುರಿದುದು ತೊಲಗಿ ತೊಲಗಿ ದಿವಿಜರ್ ವೈರಿ
ಗಂಧೇಭಹರ್ಯಕ್ಷನೈತಹಂ ಪರರಾಜ
ಸಿಂಧುವಾಡಬನಿದಕೊ ಬಂದನಾಶಾಧಿಪರ್ ಬಿಟ್ಟೋಡಿ ಕಂಡಕಡೆಗೆ
ಕಂಧರವನುಳಿಪಿಕೊಳ್ಳೆನುತೆ ಸಾರುವ ತೆರದೆ
ಧಂಧಳಂ ಧಳಧಳ ಧಳೆಂಬ ಭೀಷಣದಿಂ ಜ
ಲಂಧರಪ್ರಸ್ಥಾನಭೂರಿಭೇರೀರವಂ ಪೊಣ್ಮಿತು ಜಗತ್ತ್ರಯದೊಳು ೨೪

ವಾಜಿಗಳನಿರದೆ ಪಲ್ಲಣಿಸಿದರ್ ಮತ್ತಗಜ
ರಾಜಿಗಂ ರಂಚಿಕೆಯನಿಕ್ಕಿದರ್ ತೇರ್ಗಳುಮ
ನೋಜೆಯಿಂ ಪಣ್ಣಿದರ್ ಜೋಡುಸೀಸಕವಿಕ್ಕಿ ಕಾಲಾಳ್ಗಳನುವಾದರು
ರಾಜಿಸುವ ಬಹುವಿಧದ ವಾದ್ಯಂಗಳಾರ್ಭಟೆಗೆ
ಮೂಜಗಂ ತಲ್ಲಣಿಸಿತಾಕ್ಷಣದೊಳಸುರಕುಲ
ರಾಜನತಿಸಂಭ್ರಮದೆ ತನ್ನ ಗುರುವಿತ್ತ ಸುಮುಹೂರ್ತದೊಳ್ ಪೊರಮಟ್ಟನು ೨೫

ಕೊಳ್ಳುವ ಮಾತುಗಳನ್ನು ಆಡಲೇ ಇಲ್ಲ—ಎನ್ನಲು ಜಲಂಧರನಿಗೆ ದೇಹದಲ್ಲಿ ಕೋಪಾಗ್ನಿ ಭುಗಿಭುಗಿಲೆಂದು ಹಬ್ಬಿ ಹೆಚ್ಚಾಯಿತು. ಅವನು ಸಮಸ್ತ ರಾಕ್ಷಸನಾಯಕರನ್ನೂ ಕೂಡಲೆ ಕರೆ, ಯುದ್ಧಭೇರಿಯನ್ನು ಮೊಳಗಿಸು ಎಂದು ಆಜ್ಞಾಪಿಸಿದನು. ೨೪. ಸಂಧಾನವು ಮುರಿದುಹೋಯಿತು. ದೇವತೆಗಳೇ ತೊಲಗಿಹೋಗಿ, ವೈರಿಗಳೆಂಬ ಮದ್ದಾನೆಗಳಿಗೆ ಸಿಂಹದೋಪಾದಿಯಲ್ಲಿರುವ ಜಲಂಧರನು ಬರುತ್ತಿದ್ದಾನೆ. ಶತ್ರುರಾಜರೆಂಬ ಸಮುದ್ರಕ್ಕೆ ಬಡಬಾನಲನು ಇದೋ ಬಂದನು. ದಿಕ್ಪಾಲಕರೇ ಸಿಕ್ಕ ಸಿಕ್ಕೆಡೆಗೆ ಬಿಟ್ಟು ಓಡಿ. ನಿಮ್ಮ (ಕುತ್ತಿಗೆ) ತಲೆಗಳನ್ನುಳಿಸಿಕೊಳ್ಳಿ ಎಂದು ಸಾರಿ ಹೇಳುವ ರೀತಿಯಲ್ಲಿ ಧಂಧಳಂ ಧಳ ಧಳ ಧಳೆಂದು ಭಯಂಕರವಾದ ರೀತಿಯಲ್ಲಿ ಜಲಂಧರನ ಭಾರಿ ಪ್ರಮಾಣದ ಯುದ್ಧಭೇರಿಯ ಶಬ್ದವು ಮೂರು ಲೋಕದಲ್ಲಿಯೂ ಮೊಳಗಿತು. ೨೫. ತಡಮಾಡದೆ ಕುದುರೆಗಳಿಗೆ ಜೀನನ್ನು ಹಾಕಿ ಸಿದ್ಧಗೊಳಿಸಿದರು. ಮದಿಸಿದ ಆನೆಗಳ ಸಮೂಹಕ್ಕೆ ಅಂಬಾರಿಯನ್ನು ಹಾಕಿದರು. ರಥಗಳನ್ನು ಸಾಲುಸಾಲಾಗಿ ಸಜ್ಜುಗೊಳಿಸಿದರು. ಕಾಲಾಳುಗಳು ಜೋಡು ಮತ್ತು ಶಿರಸ್ತ್ರಾಣಗಳನ್ನು ಹಾಕಿಕೊಂಡು ಸಿದ್ಧರಾದರು. ಕಂಗೊಳಿಸುವ ಅನೇಕ ವಿಧವಾದ ವಾದ್ಯಗಳು ಆರ್ಭಟಿಸಿದ ಶಬ್ದಕ್ಕೆ ಮೂರು ಲೋಕಗಳೂ ತಲ್ಲಣಿಸಿದುವು. ಆಗ ಜಲಂಧರನು ಬಹಳ ಸಂಭ್ರಮದಿಂದ ತನ್ನ ಗುರುವು ಹೇಳಿದ ಒಳ್ಳೆಯ ಮುಹೂರ್ತ

CC-0. Jangamwadi Math Collection. Digitized by eGangotri

ಭಟರ ಹೂಂಕೃತಿ ಗಜದ ಬೃಂಹಿತಂ ವಾಜಿಗಳ
ಪಟುಹೇಷಿತಂ ತೇರ ಚೀತ್ಕೃತಂ ವೀರಕರ
ಘಟಿತ ಶಸ್ತ್ರದ ಖಣಿಖಟಿಲ್‌ಧ್ವನಿ ಮದೇಭಘಂಟಾರವಂ ತುರಗಚಯದ
ತುಟಿಯಿನುಣ್ಮುವ ಕಡಿಯಣದ ಖಣಖಣಧ್ವಾನ
ಮಟನದ ರಥಾಶ್ವಖುರಪುಟ ಘುರುಘುರುಸ್ವನಂ
ಪಟಹ ತಮ್ಮಟ ಢಕ್ಕೆಗಳ ರವಂ ಬ್ರಹ್ಮಾಂಡಘಟಮಸಲ್ಲಾಡಿಸಿದುದು ೨೬

ರಾಮ ಕೇಳಯ್ದು ಪದ್ಮಂ ವರೂಥಂ ಸಮದ
ಸಾಮಜಂ ನೂರುಪದ್ಮಂ ವಾಯುವೇಗ ನಿ
ಸ್ಸೀಮವಾಜಿಗಳುಂ ಸಹಸ್ರಪದ್ಮಂ ಶತಸಹಸ್ರಪದ್ಮಂ ಸುಭಟರು
ಈ ಮಹಾಗಣನೆಯೊಳವನ ಸೇನೆಯಿಂತಪ್ಪ
ಭೀಮರೂಪಿನ ದೈತ್ಯನಾಯಕರ್ ಸಂಗರೋ
ದ್ದಾಮರೇ ಶತಕೋಟಿಪದ್ಮಂಗಳೊಡನೆ ರಕ್ಕಸರಾಯನೈತಂದನು ೨೭

ಒಡನೆ ನಡೆದುದು ಜಲಂಧರನ ತೂಕದ ದೈತ್ಯ
ರೆಡಬಲದೆ ಕರಿತುರಗರಥಪದಾತಿಗಳ ಮಂ
ಗಡದೊಳಾರ್ಭಟಿಪ ವಂದಿಗಳ ಕಳಕಳದ ಬಗೆಬಗೆಯ ವಾದ್ಯಧ್ವನಿಗಳ

ದಲ್ಲಿ ಯುದ್ಧಕ್ಕೆ ಹೊರಟನು. ೨೬. ಭಟರ ಹೂಂಕಾರವೂ ಆನೆಗಳ ಘರ್ಜನೆಯೂ ಕುದುರೆಗಳ ಹೇಷಾರವ, ರಥಗಳ ಚೀತ್ಕಾರ, ವೀರ ಸೈನಿಕರು ಹಿಡಿದಿದ್ದ ಶಸ್ತ್ರಾಸ್ತ್ರಗಳ ಖಣಿ ಖಟಿಲ್ ಎಂಬ ಧ್ವನಿ, ಮದಿಸಿದ ಆನೆಗಳ ಕುತ್ತಿಗೆಯಲ್ಲಿರುವ ಕಡಿವಾಣದ ಖಣ ಖಣ ಗಂಟೆಗಳ ಶಬ್ದ, ಕುದುರೆಗಳ ತುಟಿಗಳಿಂದ ಹೊರಡುತ್ತಿರುವ ಖಣಖಣ ಎಂಬ ಶಬ್ದ, ತಿರುಗಾಡುತ್ತಿರುವ ರಥಗಳಿಗೆ ಹೂಡಿದ ಕುದುರೆಗಳ ಗೊರಸಿನ ಘುರುಘುರು ಶಬ್ದ ಮತ್ತು ಭೇರಿ, ತಮಟೆ, ಡಕ್ಕೆಗಳ ಧ್ವನಿಗಳು ಬ್ರಹ್ಮಾಂಡವನ್ನೇ ನಡುಗಿಸುತ್ತಿದ್ದುವು. ೨೭. ಎಲೈ ಸಿದ್ಧರಾಮನೆ ಕೇಳು, ಐದು ಪದ್ಮಗಳ ಸಂಖ್ಯೆಯ ರಥಗಳಿದ್ದುವು. ಸಿದ್ಧಪಡಿಸಿದ ಆನೆಗಳ ಸಂಖ್ಯೆ ನೂರು ಪದ್ಮಗಳು. ಗಾಳಿಯ ವೇಗದಲ್ಲೂ ಹೋಗುವುವರಲ್ಲಿ ಸಾಮರ್ಥ್ಯವುಳ್ಳ ಕುದುರೆಗಳು ಒಂದು ಸಹಸ್ರ ಪದ್ಮಗಳು. ಸೈನಿಕರು ನೂರು ಸಾವಿರ ಪದ್ಮಗಳು. ಈ ಸಂಖ್ಯೆಯಲ್ಲಿ ಅವನ ಸೈನ್ಯವಿದ್ದಿತು. ಇಂತಹ ಭಯಂಕರರೂಪದ ಯುದ್ಧಪ್ರವೀಣರಾದ ರಾಕ್ಷಸರ ನಾಯಕರೇ ಸಾವಿರ ಕೋಟಿ ಪದ್ಮಗಳಷ್ಟಿದ್ದರು. ಇಂಥ ಭಾರಿ ಸೇನೆಯೊಡನೆ ಜಲಂಧರನು ಬಂದನು. ೨೮. ಅವನ ಜೊತೆಯಲ್ಲಿ ಅವನಷ್ಟೆ ಬಲಶಾಲಿಗಳಾದ ರಾಕ್ಷಸರಿದ್ದರು. ಎಡ ಬಲದಲ್ಲಿ ಆನೆ–ಕುದುರೆ–ಕಾಲಾಳುಗಳ ಗುಂಪು ಆರ್ಭಟಿಸುತ್ತಿದ್ದುವು. ಹೊಗಳುಭಟ್ಟರ ಕಳಕಳಧ್ವನಿ, ನಾನಾ ರೀತಿಯ

CC-0. Jangamwadi Math Collection. Digitized by eGangotri

ಗಡಬಡೆಯೊಳಖಿಳಬ್ರಹ್ಮಾಂಡಂಗಳೋಳಿಯಿಂ
ದೊಡೆಯದಿರದೆನೆ ಭೂಮಿಯುಂ ಪೊತ್ತ ಗಜರಾಜಿ
ಯುಡುಗದಿರದೆನೆ ಫಣಿಪನಡಗದಿರದೆನೆ ಕೂರ್ಮನೊಡೆಯದಿರದೆನೆ ಭರದೊಳು ೨೮

ಎತ್ತಲುಂ ಪುದಿದರುಣರಜಮಯುಂ ಗಜಮಯುಂ
ಸುತ್ತಲುಂ ದೈತ್ಯಪ್ರಚಯಮಯುಂ ಹಯಮಯುಂ
ಮುತ್ತಿರ್ದ ಛತ್ರಚಾಮರಮಯುಂ ಸ್ವರಮಯುಂ ನೆಗಳ್ದ ನಾನಾ ವಾದ್ಯದ
ಬಿತ್ತರದೊಳಿಹ ರಥವ್ರಜಮಯುಂ ಧ್ವಜಮಯುಂ
ಪೊತ್ತ ಕತ್ತಿಗಳ ದೀಧಿತಿಮಯುಂ ಖತಿಮಯುಂ
ಎತ್ತಿ ಬಹ ಸಕಲ ಪರಿಕರಮಯುಂ ಶರಮಯುಂ ದೈತ್ಯನ ಮಹಾಬಲದೊಳು ೨೯

ಬತ್ತಿದುದು ಸಾಗರವ್ರಾತಮಹಿಪನ ಕೊರಲ್
ಕುತ್ತಿದುದು ಕೂರ್ಮಕರ್ಪರಮಿರದೆ ಬೇಗ ನು
ಗ್ಗೊತ್ತಿದುದು ಜಡಿವ ನಾನಾ ವಾದ್ಯನಿಸ್ವನಂ ಬ್ರಹ್ಮಾಂಡದೆಲ್ಲೆಡೆಯೊಳು
ಸುತ್ತಿದುದು ವೈರಿಭೂಪಾಲರಂ ಭೀತಿ ಜೊ
ಬತ್ತಿದುದು ನಾಕಿಗರ ಗಡಿಯ ಠಾಣೆಯ ಮಾನ
ಮೆತ್ತಿದುದು ಸುರಪುರಕೆ ಕಲಿಜಲಂಧರನ ಸೇನಾಸಮೂಹಂ ನಡೆಯಲು ೩೦

ವಾದ್ಯಗಳ ಧ್ವನಿಯು ಗಲಾಟೆ, ಇವೆಲ್ಲವೂ ಸೇರಿ ಅಖಿಲ ಬ್ರಹ್ಮಾಂಡವನ್ನೇ ಹೋಳಾಗಿ ಒಡೆಯದೆ ಇರುವುದಿಲ್ಲ ಎಂಬಂತೆ ಇತ್ತು. ಭೂಮಿಯನ್ನು ಹೊತ್ತಿರುವ ದಿಗ್ಗಜಗಳ ಸಮೂಹ ಕುಗ್ಗದೆ ಇರುವುದಿಲ್ಲ, ಆದಿಶೇಷನು ಅಡಗದೆ ಇರುವುದಿಲ್ಲ, ಭೂಮಿಯನ್ನು ಹೊತ್ತ ಕೂರ್ಮನ ಬೆನ್ನು ಸೀಳಿಹೋಗದೆ ಇರುವುದಿಲ್ಲ ಎಂಬುವಂತೆ ಸೈನ್ಯ ವೇಗವಾಗಿ ನಡೆಯಿತು. ೨೯. ಎಲ್ಲೆಲ್ಲಿಯೂ ಕೆಂಧೂಳು ತುಂಬಿದ್ದಿತು. ಆನೆಗಳ ಮಯವಾಗಿತ್ತು. ಸುತ್ತಲೂ ರಾಕ್ಷಸರ ಗುಂಪಿನಿಂದ ತುಂಬಿದ್ದಿತು. ಕುದುರೆಗಳ ಮಯವಾಗಿದ್ದಿತ್ತು. ಛತ್ರಿ ಚಾಮರಗಳೇ ಮುತ್ತಿಕೊಂಡಿದ್ದುವು. ಎಲ್ಲೆಲ್ಲಿಯೂ ನಾನಾ ವಾದ್ಯಗಳ ಶಬ್ದವು ತುಂಬಿದ್ದಿತು. ವಿಸ್ತಾರವಾಗಿದ್ದ ರಥಗಳ ಸಮೂಹವಿತ್ತು. ಧ್ವಜಗಳು ತುಂಬಿದ್ದುವು. ಸೈನಿಕರು ಹೊತ್ತುಕೊಂಡಿದ್ದ ಕತ್ತಿಗಳ ಕಾಂತಿಯಿಂದ ಆ ಪ್ರದೇಶವು ತುಂಬಿದ್ದಿತು. ಆ ಸೈನ್ಯವೆಲ್ಲ ಕೋಪದಿಂದ ಕೂಡಿದ್ದಿತು. ಆ ಪ್ರದೇಶ ದಂಡೆತ್ತಿಬರುವವರ ಗುಂಪಿನಿಂದ ಕೂಡಿದ್ದಿತು. ಆ ರಾಕ್ಷಸನ ದೊಡ್ಡ ಸೈನ್ಯದಲ್ಲಿ ಬಾಣಗಳೇ ತುಂಬಿದ್ದುವು. ೩೦. ದೇವಲೋಕಕ್ಕೆ ಪರಾಕ್ರಮಿಯಾದ ಜಲಂಧರನ ಸೈನ್ಯವು ಹೊರಡಲು ಸಪ್ತ ಸಮುದ್ರಗಳೂ ಬತ್ತಿಹೋದುವು. ಆದಿಶೇಷನ ಕೊರಳು ಕುಗ್ಗಿಹೋಯಿತು. ಆಮೆಯ ಬೆನ್ನಚಿಪ್ಪು ಬೇಗನೆ ನೆಗ್ಗಿಹೋಯಿತು. ಬಾರಿಸುತ್ತಿರುವ ಅನೇಕ ವಾದ್ಯಗಳ ಶಬ್ದ ಬ್ರಹ್ಮಾಂಡದ ಎಲ್ಲ ಕಡೆಯೂ ತುಂಬಿ ಹೋಯಿತು. ಹೆದರಿಕೆ ಎಂಬುದು ಶತ್ರುರಾಜರ ಬೆನ್ನು ಹತ್ತಿತು. ಸ್ವರ್ಗವಾಸಿಗಳ ಗಡೀ

CC-0. Jangamwadi Math Collection. Digitized by eGangotri

ಕಂಡವರನುಚಿತದಿಂ ಮನ್ನಿಸುತೆ ಸಲೆ ಭಯಂ
ಗೊಂಡರ್ಗೆ ನಂಬುಗೆಯನೀವುತ್ತೆ ಮಲೆತರಂ
ದಿಂಡುದರಿವುತ್ತಮಿದಿರಾದ ದುರ್ಗಂಗಳಂ ಧೂಳಿಗೋಂಟೆಗಳ ಕೊಂಡು
ಪೆಂಡಿರಂ ವಸ್ತುಗಳ ತಂಡಂಗಳಂ ಸೂರೆ
ಗೊಂಡು ತದ್ಭೂಪರಂ ದಂಡಿಸಿಯೆ ಪಿಡಿದು ಪ್ರ
ಚಂಡಖಳನಾಯಕನ ದಂಡು ನಡೆದುದು ಸುರರನಂಡಲೆವ ತವಕದಿಂದೆ ೩೧

ದಾಳಿಯಿಟ್ಟುದು ದಿಕ್ಕುದಿಕ್ಕಿಗಂದಸುರಬಲ
ಜಾಲ ಮಘವನ ಸಲಿಲದುರ್ಗಂಗಳಂ ಬಿಡದೆ
ಕೋಳ ಕೊಂಡರ್ ನಾಡೆ ಸೆರೆತುರುಗಳಂ ಕೊಟ್ಟು ಬಹುಭಯಂಗೊಂಡು ಕೂಡೆ
ಗೂಳೆಯಂ ಬಂದುದಮರಾವತಿಗೆ ತಾನದಂ
ಕೇಳಿ ಖಳರಾಜನೈತಪ್ಪುದಂ ಚಿತ್ತದೊಳ್
ತಾಳಿ ಘನರೋಷಮಂ ಕಂಗಳೊಳ್ ಕಿಡಿಗೆದರಿ ಸುರಪಾಲನಾ ಕ್ಷಣದೊಳು ೩೨

ಕರೆಸಿದಂ ಸಕಲ ದಿಕ್ಪಾಲ ಕಿನ್ನರ ಯಕ್ಷ
ಗರುಡ ಗಂಧರ್ವ ಸಾಧ್ಯೋರಗ ಪಿಶಾಚ ಕಿಂ
ಪುರುಷ ರಾಕ್ಷಸ ಸಿದ್ಧ ಗುಹ್ಯಕಾಪ್ಸರರೆಂಬ ಸಕಲ ಲೋಕಾಧಿಪರನು
ಕರಿ ತುರಗ ರಥ ಪದಾತಿಗಳ ಸಂದಣಿಯಿಂದೆ
ಸುರಪುರಕೆ ಬರಲಿಂದ್ರನಾಗಲಾ ಕಲಿಜಲಂ
ಧರನ ಕೂಪಣ ಕಲಹ ಕೇಳಿಮೆನಲಾ ಕ್ಷಣಂ ಸಂಭ್ರಮದೆ ಪೊರಮಟ್ಟನು ೩೩

ಪ್ರದೇಶದ ಘನತೆಯು ನಾಶವಾಯಿತು. ೩೧. ಬಂದು ನೋಡಿದವರನ್ನು ಉಚಿತವಾಗಿ ಮನ್ನಿಸಿದನು. ಬಹಳವಾಗಿ ಹೆದರಿದವರಿಗೆ ಧೈರ್ಯವನ್ನು ಹೇಳಿದನು. ಪ್ರತಿಭಟಿಸಿದವರ ಗರ್ವವನ್ನು ದಿಂಡುರುಳಿಸಿದನು. ಎದುರುಸಿಕ್ಕಿದ ಕೋಟೆಗಳನ್ನು ಧೂಳೀಪಟ ಮಾಡಿದನು. ದೇವತೆಗಳ ಹೆಂಡಿರನ್ನೂ ಅಲ್ಲಿ ಸಿಕ್ಕ ವಸ್ತುಗಳ ಸಮೂಹವನ್ನೂ ಸೂರೆ ಗೊಂಡನು. ಆ ರಾಜರನ್ನು ಶಿಕ್ಷಿಸಿ ಹಿಡಿದನು. ಈ ರೀತಿ ಆ ಪ್ರಚಂಡನಾದ ರಾಕ್ಷಸ ರಾಜನ ಸೈನ್ಯ ದೇವತೆಗಳನ್ನು ಪೀಡಿಸುವ ಉತ್ಸಾಹದಿಂದ ಹೊರಟಿತು. ೩೨. ಅಂದು ದಿಕ್ಕುದಿಕ್ಕಿಗೆ ರಾಕ್ಷಸರಾಜನ ಸೈನ್ಯಸಮೂಹ ದಾಳಿ ಮಾಡಿತು. ದೇವೇಂದ್ರನ ಕೋಟೆ ಗಳನ್ನು ಸುಲಿಗೆ ಮಾಡಿತು.ಸೆರೆಸಿಕ್ಕಿದ ಗುಂಪುಗಳನ್ನೂ ದನಗಳನ್ನೂ ಅಲ್ಲಿಯೆ ಬಿಟ್ಟು ಭಯ ದಿಂದ ದೇವೇಂದ್ರನ ಸೈನ್ಯ ಓಡಿ ರಾಜಧಾನಿಯಾದ ಅಮರಾವತಿಗೆ ವಲಸೆಹೋಯಿತು. ದೇವೇಂದ್ರನು ಅಸುರರಾಜನು ಬರುತ್ತಿರುವುದನ್ನು ಕೇಳಿ ಮನಸ್ಸಿನಲ್ಲಿ ಬಹಳವಾದ ರೋಷವನ್ನು ತಾಳಿದನು, ಕಣ್ಣುಗಳಲ್ಲಿ ಕಿಡಿಕಾರಿದನು. ಆಕ್ಷಣದಲ್ಲಿ, ೩೩. ಎಲ್ಲ ದಿಕ್ಪಾಲಕರು ಯಕ್ಷ, ಗರುಡ, ಕಿನ್ನರ, ಗಂಧರ್ವ, ಸಾಧ್ಯ, ಉರಗ, ಪಿಶಾಚ, ಕಿಂಪುರುಷ, ರಾಕ್ಷಸ, ಸಿದ್ಧ, ಗುಹ್ಯಕ, ಅಪ್ಸರ ಎಂಬ ಸಕಲ ಲೋಕದ ಒಡೆಯರನ್ನು ಕರೆಸಿದನು. ಆನೆ, ಕುದುರೆ, ರಥ, ಕಾಲಾಳುಗಳು, ಇವುಗಳ ಗುಂಪಿನಿಂದ ಇವರೆಲ್ಲರೂ ಅಮರಾವತಿಗೆ

CC-0. Jangamwadi Math Collection. Digitized by eGangotri

ಆನೆಗಳ್ಗೆಕ್ಕು ರಂಚಿಕೆಗಳಂ ತುರಗಪ್ರ
ತಾನಮುಂ ಹಲ್ಲಣಿಸು ತೇರ್ಗಳಂ ಪೂಡು ತಾ
ತಾ ನೀಡು ಜೋಡುಸೀಸಕ ಬಾಹುರಕ್ಕೆ ಚಲ್ಲಣಗಳಂ ಬೇಗದಿಂದ
ನೀನಯ್ದು ತಾನಯ್ದು ಪರಶು ಗದೆ ಮುಸಲಾಸಿ
ಧೇನುಗಳನೀ ಪುರದ ಬಾಹೆಗೆ ಜಲಂಧರನ
ಸೇನೆ ಬಂದುದು ತಡೆಯದೇಳೆಂಬ ಗಜಬಜಂ ತುಂಬಿತಮರಾವತಿಯೊಳು ೩೪

ಅಸಮದಾನವನ ಸೇನಾಸಮುದ್ರಂ ತನ್ನ
ಮುಸುಕಲೈತರೆ ಕಂಡು ಪುರವನಿತೆ ಸೇನೆಯುಂ
ಬೆಸಲಾದಳೋ ಪೇಳೆನಲ್ಕೆ ತಮ್ಮಟ ಭೇರಿ ಡೌಡೆಗಳ ರಭಸದಿಂದೆ
ಅಸಿ ಪರಶು ತೋಮರ ಕಠಾರಿ ಮುದ್ಗರ ಕುಂತ
ಮುಸಲ ಭಲ್ಲೆಯ ಪಿಂಡಿವಾಳಂಗಳಂ ತಳೆದು
ಮುಸಕದಿಂದೈದಿದರ್ ಪಟುಭಟರ್ ಪುರಮನಗಣಿತಕೋಟಿಸಂಖ್ಯೆಯಿಂದೆ ೩೫

ಭೂರಿಭೇರಿಗಳ ರಭಸದ ಮಂದಿಜನದ ಗಂ
ಭೀರಘೋಷದ ಬಳಸಿ ಜೀಯೆಂಬ ಮುನಿಮುನಿಗ
ಳೋರಣದ ಕೈಗೊಡುವ ದಿಕ್ಪಾಲಕರ ಪರಕೆಗೊಡುವ ಮುತ್ತೃಧ್ವಾನದ

ಬಂದರು. ಆಗ ಇಂದ್ರನು ಶೂರನಾದ ಜಲಂಧರನ ಜೊತೆಯಲ್ಲಿ ಯುದ್ಧಮಾಡಬೇಕು ಏಳಿ ಎಂದ ತಕ್ಷಣವೇ ಸಡಗರದಿಂದ ಹೊರಟನು. ೩೪. ಆನೆಗಳ ಮೇಲೆ ಅಂಬಾರಿಗಳನ್ನು ಕಟ್ಟು, ಕುದುರೆಗಳಿಗೆ ಜೀನುಹಾಕಿ ಸಿದ್ಧಪಡಿಸು, ರಥಗಳನ್ನು ಹೂಡು, ಜೋಡು, ಟೊಪ್ಪಿಗೆಗಳನ್ನೂ, ಭುಜಕೀರ್ತಿಗಳನ್ನೂ, ಚಲ್ಲಣಗಳನ್ನೂ ಬೇಗ ಬೇಗ ನೀಡು. ಕೊಡಲಿ, ಗದೆ, ಒನಕೆ, ಕತ್ತಿ, ಧೇನುಕಾಯುಧಗಳನ್ನು ನೀನು ಮುಂದೆ-ನಾನು ಮುಂದೆ ಎಂದು ತೆಗೆದುಕೋ, ಪಟ್ಟಣದ ಹೊರವಲಯಕ್ಕೆ ಜಲಂಧರನ ಸೈನ್ಯ ಬಂದಿದೆ, ತಡೆಯದೆ ಏಳು ಎಂಬ ಗಲಿಬಿಲಿ ಶಬ್ದವು ಅಮರಾವತಿಯಲ್ಲಿ ತುಂಬಿತು. ೩೫. ಅಸಮಾನ ಪರಾಕ್ರಮಿಯಾದ ರಾಕ್ಷಸನ ಸೇನಾಸಮುದ್ರವು ತನ್ನನ್ನು ಮುತ್ತುವುದಕ್ಕೆ ಬರುತ್ತಿರುವುದನ್ನು ಪುರವನಿತೆಯು ನೋಡಿ ಸೈನ್ಯವನ್ನು ತಾನೇ ಹೆತ್ತಳೋ ಹೇಳು ಎನ್ನುವಂತೆ ತಮ್ಮಟೆ, ಭೇರಿ,ಸಣ್ಣಡೊಳ್ಳುಗಳ ಭೋರ್ಗರೆತದಿಂದ ಪರಾಕ್ರಮಿಗಳಾದ ಸೈನಿಕರು ಕತ್ತಿ, ಕೊಡಲಿ,ಭರ್ಜಿ, ಕಠಾರಿ, ಗದೆ, ಮತ್ತೊಂದು ರೀತಿಯ ಭರ್ಜಿ, ಒನಕೆ, ಮುಸಲ, ಭಲ್ಲೆ, ಪಿಂಡಿವಾಳ ಮುಂತಾದುವುಗಳನ್ನು ಹಿಡಿದುಕೊಂಡು ಅಬ್ಬರದಿಂದ ಲೆಕ್ಕವಿಲ್ಲದಷ್ಟು ಕೋಟಿಸಂಖ್ಯೆಯಲ್ಲಿ ಪಟ್ಟಣದಿಂದ ಹೊರಟರು. ೩೬. ಭಯಂಕರವಾದ ಭೇರಿಗಳು ರಭಸವಾಗಿ ಶಬ್ದಮಾಡುತ್ತಿದ್ದುವು. ಹೊಗಳುಭಟರು ಘೋಷಿಸುತ್ತಿದ್ದರು. ಶ್ರೇಷ್ಠವಾದ ಮುನಿಗಳು ಸ್ವಾಮಿ ಎಂದು ಸುತ್ತಲೂ ಬಳಸಿಕೊಂಡಿದ್ದರು. ದಿಕ್ಪಾಲಕರು ಅಚ್ಚುಕಟ್ಟಾಗಿ ಪರಾಕು ಹೇಳುತ್ತಿದ್ದರು,

CC-0. Jangamwadi Math Collection. Digitized by eGangotri

ಚಾರುಚಾಮರ ಛತ್ರನಿಚಯದಾಡಂಬರದ
ಸಾರವೈಭವದ ಸಂಭ್ರಮದಿಂದೆ ದಿವಿಜಮದ
ವಾರಣಮನೇರಿ ನಡೆದಂ ರಣಕೆ ದೇವೇಂದ್ರನತುಳಸಂಪನ್ಮಾನದಿಂದೆ ೩೬

ಜಾತವೇದಂ ತಗರನಂತಕಂ ಕೋಣನಂ
ಯಾತುಧಾನಂ ಮನುಜನಂ ಪಾಶಿ ಮಕರಮಂ
ವಾತನೇಣನನೀಶಸಖನಶ್ವರತ್ನಮುಮನೀಶಾನನುಂ ವೃಷಭನ
ಪ್ರೀತಿಯಿಂದೇರೆ ಸುರ ನರ ಗರುಡ ಗಂಧರ್ವ
ಜಾತಮುಂ ನಿಜವಾಹನಮನೇರಿ ಮುಂದಸಂ
ಖ್ಯಾತಬಲವೆರಸಿ ದೇವೇಂದ್ರನಿಕ್ಕೆಲದೊಳಗೆ ನಡೆಗೊಂಡುದೇವೇಳ್ಗೆಯಿಂ ೩೭

ಬಿಗಿದ ರಂಜಕೆಯ ಘಂಟಾರವದ ಘನಪತಾ
ಕೆಗಳ ಚಂಚತ್ಕರದ ಗಜರಾಜಿ ಪಲ್ಲಣದ
ಮೊಗರಂಬಗಳ ಪಕ್ಕರಕ್ಕೆಗಳ ಕಡಿಯಣದ ವಾಜಿಗಳ್ ವಜ್ರಾಂಗಿಯ
ಮಿಗೆ ಬಾಹುರಕ್ಕೆಗಳ ಸೀಸಕದ ಕೈಯ ಕೈ
ದುಗಳ ಕಾಲಾಳಂಬುದುಂಬಿ ಸಾರಥಿಯ ಚಾ
ರಿಗೆ ಬರ್ಪ ಚಿನ್ನದ ವರೂಥಂಗಳೈದಿದುವು ಸುರಸೈನ್ಯಮೆಲ್ಲೆಡೆಯೊಳಂ ೩೮

ಬಂದು ದಿವಿಜೇಶ್ವರಂ ಸಕಲ ಸುರನಾಯಕರ
ಸಂದಣಿಯ ಸಂರಂಭದಿಂದಲಮರಾವತಿಯ
ಮುಂದಣ ವಿಶಾಲಮಾಗಿರ್ದ ಬಯಲೊಳ್ ಬಹಳ ಸನ್ನಾಹವಾಗಿ ನಿಂದು

ಮಂತ್ರಗಳಿಂದ ಹರಸುತ್ತಿದ್ದರು. ಮನೋಹರವಾದ ಚಾಮರ-ಛತ್ರಗಳ ಸಮೂಹದಿಂದ, ಆಡಂಬರದ ಎಲ್ಲ ವೈಭವದಿಂದ, ಸಂಭ್ರಮದಿಂದ ದೇವೇಂದ್ರನು ಮದಿಸಿದ ಐರಾವತವನ್ನು ಏರಿಕೊಂಡು ಆನಂದದಿಂದ ಯುದ್ಧಭೂಮಿಗೆ ಹೊರಟನು. ೩೬. ಅಗ್ನಿಯು ಟಗರನ್ನೂ, ಯಮನು ಕೋಣವನ್ನೂ, ರಾಕ್ಷಸನು ಮನುಷ್ಯನನ್ನೂ, ವರುಣನು ಮೊಸಳೆಯನ್ನೂ. ವಾಯುವು ಜಿಂಕೆಯನ್ನೂ, ಕುಬೇರನು ಉತ್ತಮವಾದ ಕುದುರೆಯನ್ನೂ, ಈಶಾನನು ವೃಷಭನನ್ನೂ ಏರಿದರು. ಸುರ, ನರ. ಗರುಡ, ಗಂಧರ್ವರ ಸಮೂಹಗಳು ತಮ್ಮ ತಮ್ಮ ವಾಹನಗಳನ್ನು ಹತ್ತಿ ಅಸಂಖ್ಯಾತ ಸೈನ್ಯದಿಂದ ಕೂಡಿ ದೇವೇಂದ್ರನ ಎರಡು ಕಡೆಗಳಲ್ಲಿಯೂ ನಡೆಯುತ್ತಿದ್ದಿತು. ೩೭. ಆನೆಗಳ ಸಮೂಹಕ್ಕೆ ಅಂಬಾರಿಗಳನ್ನು ಬಿಗಿದಿದ್ದರು. ಅದಕ್ಕೆ ಕಟ್ಟಿದ ಗಂಟೆಗಳು ಧ್ವನಿಮಾಡುತ್ತಿದ್ದುವು. ಮೇಲೆ ಕಟ್ಟಿದ್ದ ಬಾವುಟಗಳು ಹಾರಾಡುತ್ತಿದ್ದುವು. ಕುದುರೆಗಳಿಗೆ ಜೀನು ಹಾಕಿದ್ದರು. ಮುಖಕ್ಕೆ ಹಾಕುವ ಗೌಸು, ಪಕ್ಕದ ರಕ್ಕೆಗಳು, ಕಡಿವಾಣ, ವಜ್ರಕವಚ, ವಿಶೇಷವಾದ ಭುಜಕೀರ್ತಿ, ತಲೆಯ ಟೊಪ್ಪಿಗೆ ಧರಿಸಿದ ಕಾಲಾಳುಗಳು ಕೈಯಲ್ಲಿ ಆಯುಧಗಳನ್ನು ಹಿಡಿದಿದ್ದರು. ಬಾಣಗಳನ್ನು ತುಂಬಿಕೊಂಡು ಸಾರಥಿಯು ನಡೆಸಿದ ಕಡೆಗೆ ಬರುತ್ತಿದ್ದ ಚಿನ್ನದ ರಥಗಳಿಂದ ಕೂಡಿದ ದೇವಸೈನ್ಯವು ಎಲ್ಲ ಕಡೆಯೂ ಕಾಣಿಸುತ್ತಿದ್ದಿತು. ೩೮. ದೇವೇಂದ್ರನು ಎಲ್ಲ ದೇವ ನಾಯಕರ-ಸಮೂಹದೊಡನೆ ಉತ್ಸಾಹದಿಂದ ಬಂದು ಅಮರಾವತಿಯ ಮುಂದಿನ ವಿಶಾಲ

CC-0. Jangamwadi Math Collection. Digitized by eGangotri

ಹಿಂದುಮುಂದೆಡಬಲದೊಳೆಲ್ಲಿಯುಂ ನೆರೆದ ಬಲ
ವೃಂದಮಂ ನೋಡಿ ವಿಸ್ಮಿತನಾಗಿಯಿದರೊಡನೆ
ನಿಂದು ಕಾದುವ ವೀರನಾವನೆನುತೊಡ್ಡಿದಂ ಘೌಜನತಿವಿಸ್ತರದೊಳು ೩೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೦

### ಇಪ್ಪತ್ತಮೂರನೆಯ ಸಂಧಿ ಸಂಪೂರ್ಣ

ವಾಗಿದ್ದ ಬಯಲಲ್ಲಿ ಎಲ್ಲ ರೀತಿಯಲ್ಲೂ ಬಹು ಸನ್ನದ್ಧನಾಗಿ ನಿಂತನು. ತನ್ನ ಹಿಂದೆ ಮುಂದೆ ಎಡ-ಬಲ ಎಲ್ಲೆಲ್ಲಿಯೂ ಸೇರಿದ್ದ ಸೈನ್ಯಸಮೂಹವನ್ನು ನೋಡಿ ವಿಸ್ಮಿತನಾಗಿ ಇದರ ಜೊತೆಯಲ್ಲಿ ಸರಿಸಮನಾಗಿ ನಿಂತು ಹೊರಾಡುವ ವೀರನು ಯಾವನಿದ್ದಾನೆ ಎಂದು ಸೈನ್ಯವನ್ನು ಅತಿವಿಸ್ತಾರವಾಗಿ ಒಡ್ಡಿದನು. ೪೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥ ವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

### ಇಪ್ಪತ್ತಮೂರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತನಾಲ್ಕನೆಯ ಸಂಧಿ

ಸೂಚನೆ : ಸ್ವರ್ಗದರಸಿನ ಕೂಡೆ ಕಾದಿ ಖಳರಾಜನಾ
ದುರ್ಗಮಂ ಸೆಳೆದುಕೊಂಡಾ ಕ್ಷಣಂ ದಿಕ್ಪಾಲ
ವರ್ಗಮಂ ಬೆಂಬತ್ತಲೋಡಿ ವಿಧಿಸಹಿತ ವೈಕುಂಠಮಂ ಪೊಕ್ಕರಾಗ

ಎರಗದ ವಿರೋಧಿಖಳರೆರೆಯರಂ ಸಮರದೊಳ್
ತರಿದು ಸುರರಾಲಯದೊಳಿರೆ ಮಹಾಲಕ್ಷ್ಮಿಯಂ
ಸೆರೆಗೈದು ಭಕ್ತರ್ಗೆ ನೆರತೆಯಿಂ ಕರುಣಮಂ ಕರೆದು ಕರೆದಂ ಮಾಣದೆ
ಪರಿದಲೆಯ ಕೈಯ ಬೊಬ್ಬಿರಿವ ರುಂಡದ ಕೊರಳ
ಪೆರೆಯ ಸೂಡಿದ ಮೈಯ ವಿರುಪ ಮರಿವಾವುಗಳ
ತುರುಗಲಿಂದೊಪ್ಪುತಿಪ ಕರಿಗೊರಲ ಪಂಪಾವಿರೂಪಾಕ್ಷ ಸಲಹೆಮ್ಮನು ೧

ವಿವರಿಸುವೆನಾಲಿಸಿನ್ನೆಲೆ ರಾಮ ಬಳಿಕಲಾ
ದಿವಿಜೇಂದ್ರನತುಳಸನ್ನಾಹದಿಂ ಬರುತಿರಲ್
ತವೆಕಾಣಿಸಿತು ಜಲಂಧರನ ಸೈನಿಕವತ್ತಲದ್ಭುತಾಕಾರವಾಗಿ
ಜವನ ಜಂಗುಳಿಯಂತೆ ಮಿಳ್ತುವಿನ ಪಡೆಯಂತೆ
ಶಿವನ ಕಣ್ಣುರಿಯಂತೆ ಭೈರವನ ಬಿಲದಂತೆ
ತವಕಿಸುವ ಸಿಡಿಲ ಮಂಗಡದಂತೆ ಬರುತಿರ್ದುದೇನೆಂಬೆನಚ್ಚರಿಯನು ೨

ಸೂಚನೆ : ದೇವೇಂದ್ರನ ಜೊತೆಯಲ್ಲಿ ರಾಕ್ಷಸರಾಜನಾದ ಜಲಂಧರನು ಯುದ್ಧ ಮಾಡಿ ಆ ದುರ್ಗವನ್ನು ವಶಪಡಿಸಿಕೊಂಡು, ಆ ಕ್ಷಣ ದಿಕ್ಪಾಲಕರ ಸಮೂಹವನ್ನು ಬೆನ್ನಟ್ಟಿದನು. ಆಗ ಅವರು ಓಡಿ ಬ್ರಹ್ಮನ ಸಹಿತ ವೈಕುಂಠವನ್ನು ಹೊಕ್ಕರು. ೧. ಶರಣಾಗತರಾದ ಶತ್ರುಗಳಾದ ರಾಕ್ಷಸನಾಯಕರನ್ನು ಯುದ್ಧದಲ್ಲಿ ತರಿದು ದೇವತೆಗಳ ಮನೆಯಲ್ಲಿ ಮಹಾಲಕ್ಷ್ಮಿಯನ್ನು ಸೆರೆಮಾಡಿ, ಭಕ್ತರಿಗೆ ನೆರವು ಮತ್ತು ಕರುಣೆಯನ್ನು ಹರಿಸಿ, ಅಲ್ಲಿಗೂ ತಡೆಯದೆ ಬ್ರಹ್ಮನ ತಲೆಯನ್ನು ಕೈಯಲ್ಲಿ ಹಿಡಿದ, ಬೊಬ್ಬಿರಿವ ರುಂಡವನ್ನು ಕೊರಳಿನಲ್ಲಿ ಹಾರವಾಗಿ ಧರಿಸಿರುವ, ಬಾಲಚಂದ್ರನನ್ನು ಧರಿಸಿರುವ ಮರಿ ಹಾವುಗಳ ಸಮೂಹದಿಂದ ಕಂಗೊಳಿಸುವ ದೇಹವುಳ್ಳ ಕಪ್ಪುಕೊರಲನಾದ ಪಂಪಾ ವಿರೂಪಾಕ್ಷನೇ ನಮ್ಮನ್ನು ಕಾಪಾಡು. ೨. ಮುಂದೆ ವಿವರಿಸುತ್ತೇನೆ ಕೇಳಯ್ಯ, ಸಿದ್ಧರಾಮ. ಆನಂತರ ಆ ದೇವೇಂದ್ರನು ಯುದ್ಧಕ್ಕೆ ಬಹಳ ಸಜ್ಜು ಮಾಡಿಕೊಂಡು ಬರುತ್ತಿರಲು ಆಗ ಜಲಂಧರನ ಸೈನ್ಯವು ಅತ್ತಕಡೆಯಲ್ಲಿ ಅದ್ಭುತಾಕಾರವಾಗಿ ಕಾಣಿಸಿತು. ಯಮನ ಸಮೂಹದಂತೆ, ಮೃತ್ಯುವಿನ ಸೈನ್ಯದಂತೆ, ಶಿವನ ಕಣ್ಣಿನ ಉರಿಯಂತೆ, ಕಾಲಭೈರವನ ಬಿಲದಂತೆ, ಆತುರದಿಂದ ಕೂಡಿದ ಸಿಡಿಲ ಸಮೂಹದಂತೆ ಅದು ಬರುತ್ತಾ ಇದ್ದಿತು.



CC-0. Jangamwadi Math Collection. Digitized by eGangotri

ಭೋರ್ಗರೆದುವಿರ್ಬಲದ ವಾದ್ಯಂಗಳುಭಯ ಸುಭ
ಟರ್ಗಳಾರ್ಭಟಿಸಿ ತೋಳ್ವೊಯ್ದು ಪಟುಭಟವಾಜಿ
ವರ್ಗಮಂ ರಾವುತರಡ್ಡಾಡಿದರ್ ತೀಡಿದರ್ ಬಿಲ್ಲವರ್ ಸಿಂಜಿನಿಯುಮಂ
ತೇರ್ಗಳಗ್ರದ ಪಟಂ ಕೈವೀಸಿ ಕಾಳೆಗದ
ವರ್ಗಳಂ ಕರೆವಂತೆ ಚರಿಸಿದುವು ತತ್ಕ್ಷಣಂ
ಸ್ವರ್ಗದರಸಿನ ಜಲಂಧರನ ಸೇನೆಗಳೊಂದನೊಂದು ಸಂಧಿಸುವಾಗಳು ೩

ಗಗನಚುಂಬಿತಸಧ್ವಜಾಳಿಗಳ ಧೂಳಿಗಳ
ಝಗಝಗಿಪ ಕಾಂಚನರಥಾವಳಿಯ ಗಾವಳಿಯ
ಮಿಗುವ ತುರಗವ್ರಜದ ಸಂದಣಿಯ ಗೊಂದಣಿಯ ಕರಿಘಟೆಯ ಭರವಸಗಳ
ವಿಗಡ ಪಟುಭಟಮನದ ಖಾತಿಗಳ ಹೇತಿಗಳ
ಮಿಗೆ ಮೊರೆವ ಬಹುವಿಧದ ಭೇರಿಗಳ ಭೂರಿಗಳ
ಬಗೆಬಗೆಯ ಛತ್ರಚಮರಾಳಿಗಳ ಪಾಳಿಗಳ ಬಲಮೆರಳ್ ಕಣ್ಗೆಸೆದುವು ೪

ಭೋರೆಂದುವಖಿಳಸುರದುಂದುಭಿಗಳೊರಲ್ವ ಕಹ
ಳಾರವಂ ಪರ್ಬಿದುದು ಬಲಯುಗದ ಕೆಂದೂಳ್ಗೆ
ಹೋರಾಟವಾಯ್ತನಂತರಮುಭಯಭಟರ ನಿಷ್ಠುರದೃಷ್ಟಿಗಳ್ ಪೊಣರ್ದುವು

ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೩. ಆ ಕ್ಷಣ ಜಲಂಧರನ ಸೇನೆಯೂ ದೇವೇಂದ್ರನ ಸೈನ್ಯವೂ ಒಂದನ್ನೊಂದು ತಾಗುವಾಗ ಎರಡು ಕಡೆಯ ಸೈನ್ಯದ ವಾದ್ಯಗಳೂ ಮೊಳಗಿದವು. ಉಭಯಪಕ್ಷದ ಸೈನಿಕರು ಆರ್ಭಟಿಸಿ ತೋಳು ತಟ್ಟಿದರು. ಶೂರಸೈನಿಕರ ಮತ್ತು ಕುದುರೆಗಳ ಗುಂಪುಗಳಲ್ಲಿ ರಾವುತರು ಸುಳಿದಾಡಿದರು. ಬಿಲ್ಲುಗಾರರು ಬಿಲ್ಲಿನ ಹಗ್ಗವನ್ನು ತೀಡಿದರು. ರಥಗಳ ಮೇಲ್ಭಾಗದ ಬಾವುಟಗಳು ಕಾಳಗದವರನ್ನು ಕೈಬೀಸಿ ಕರೆವಂತೆಚಲಿಸಿದವು. ೪. ಆಕಾಶವನ್ನು ಮುತ್ತಿಡುವ ಬಾವುಟಗಳ ಸಮೂಹ ಮತ್ತು ಎದ್ದ ಧೂಳು, ಹೊಳೆಯುವ ಚಿನ್ನದ ರಥದ ಸಮೂಹದ ಶಬ್ದವನ್ನು ಮೀರುವಂತೆ ಒಟ್ಟುಗೂಡುವ ಕುದುರೆಗಳ ಗುಂಪು, ಭರವಸೆಯಿಂದ ಕೂಡಿದ ಮದದಾನೆಗಳ ಗುಂಪು, ವಿಕ್ರಮಶಾಲಿಗಳಾದ ದೀರ ಭಟರ ಮನಸ್ಸಿನ ಕೋಪವೆಂಬ ಕಿರಣಗಳಿಂದ ಹೆಚ್ಚಾಗಿ ಶಬ್ದಮಾಡುವ ನಾನಾ ಬಗೆಯ ಭೇರಿಗಳ ಧ್ವನಿಗಳಿಂದ, ವಿಧವಿಧವಾದ ಛತ್ರಿ-ಚಾಮರಗಳ ಗುಂಪಿನ ಸಾಲುಗಳಿಂದ ಆ ಎರಡು ಬಲಗಳೂ ಕಣ್ಣಿಗೆ ಮನೋಹರವಾಗಿ ಕಂಡವು. ೫. ಎಲ್ಲ ದೇವದುಂದುಭಿಗಳ ಗಟ್ಟಿಯಾದ ಶಬ್ದ, ಒರಲುತ್ತಿರುವ ಕಹಳೆಯ ಶಬ್ದ ಎಲ್ಲ ಕಡೆಗೂ ಹಬ್ಬಿತು. ಎರಡು ಸೈನ್ಯದಿಂದಲೂ ಎದ್ದ ಕೆಂದೂಳಿಗೇ ಹೋರಾಟವಾಯಿತು. ಅನಂತರ ಉಭಯ ಸೇನೆಯ ಸೈನಿಕರ ನಿಷ್ಠುರವಾದ ದೃಷ್ಟಿಗಳು ಸೇರಿ ಹೋರಾಡಿದುವು. ಸೈನ್ಯದ

CC-0. Jangamwadi Math Collection. Digitized by eGangotri

ಸೇರಿ ತಿವಿದಾಡಿದರ್ ಚೂಣಿಗರ್ ಬಲ್ಲಿಹ ಕ
ಠಾರಿ ಕಕ್ಕಡ ಪರಶು ಮುಖ್ಯಾಯುಧಂಗಳಿಂ
ಭಾರಿಯಾಹವಮಾಯ್ತು ದೇವಾಸುರರ್ಗಾಗಳೇನೆಂಬೆನಚ್ಚರಿಯನು ೫

ಕಡಿ ಕೊಚ್ಚು ತಿವಿ ತಾಗು ಕೂಗು ಬೊಬ್ಬಿರಿಯೆಲುವ
ನುಡಿ ಕೆಡೆಪು ಕರುಳನುಗಿ ಬಸಿರ ಬಗಿಯುರುಬು ತೋಳ್
ಪೊಡೆಯೊತ್ತು ಮುತ್ತು ಕುತ್ತಡಸು ಬಯ್ ಪೊಯ್ ನೂಂಕುತೌಂಕು ಸೀಳ್ ತಡೆಯೆನುತ್ತೆ
ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ
ಬಡಿದಾಡಿದರ್ ಮೂದಲೆಯ ಮಾತಿನಿಂದ ಬಾಯ್
ಬಡಿದಾಡಿದರ್ ಸುರಾಸುರರ ಚೂಣಿಯ ಸುಭಟರೇನೆಂಬೆನದ್ಭುತವನು ೬

ತರಿವರಿರಿವರ್ ಕೊಯ್ವರೊತ್ತುವರ್ ಮುತ್ತುವರ್
ಕೊರೆವರುಡಿವರ್ ಕಡಿವರುಬ್ಬುವರ್ ಕೊಬ್ಬುವರ್
ಮುರಿವರೇಳ್ವರ್ ಬೀಳ್ವರುರುಬುವರ್ ಪರುಬುವರ್ ಕರುಬುವರ್ ಸಾಹಸವನು
ಮರೆವರಸೆವರ್ ಕುಸಿವರಳ್ಕುವರ್ ಬಳ್ಕುವರ್
ತೊರೆವರಂಗವನೊತ್ತಿ ನೂಂಕುವರ್ ತಾಂಕುವರ್
ಕುರಿದರಿಯ ಮಾಡಿ ಪೊಯ್ದಾಡುವರ್ ಮಾಡುವರ್ ಪೌರುಷವನುಭಯಭಟರು ೭

ಮುಂಭಾಗದಲ್ಲಿದ್ದವರು ಭರ್ಜಿ, ಕಠಾರಿ, ಖಡ್ಗ, ದೊಡ್ಡ ಕೊಡಲಿಗಳಿಂದ ಪರಸ್ಪರ ತಿವಿದಾಡಿದರು. ದೇವ-ದಾನವರಿಗೆ ಭಯಂಕರವಾದ ಯುದ್ಧವಾಯಿತು. ಆಶ್ಚರ್ಯವನ್ನು ಏನೆಂದು ಹೇಳಲಿ? ೬. ದೇವಾಸುರಸೈನ್ಯದ ಮುಂಚೂಣಿಯ ವೀರಭಟರು ಕಡಿ, ಕೊಚ್ಚು, ತಿವಿ, ಮೇಲೆಬೀಳು, ಕೂಗು, ಅಬ್ಬರಿಸು, ಎಲುಬನ್ನು ಪುಡಿಮಾಡು, ಕೆಡವು, ಕರುಳನ್ನು ಸೀಳು, ಹೊಟ್ಟೆಯನ್ನು ಬಗಿ, ಹಲ್ಲೆ ಮಾಡು, ತೋಳನ್ನು ಕತ್ತರಿಸು, ಮುತ್ತಿಗೆ ಹಾಕು, ಮೇಲೆ ಬಿದ್ದು ಜಜ್ಜು, ಬಯ್ಯಿ, ಹೊಡೆ, ನೂಕು, ಅಪ್ಪಂಕು, ಸೀಳು, ಓಡುತ್ತಿರುವವರನ್ನು ತಡೆ ಎನ್ನುತ್ತಾ ಕಡಿದಾಡಿದರು. ಕತ್ತಿ ಆಯುಧ ಗದೆಗಳಿಂದ ಹೊಡೆದಾಡಿದರು. ಮೂದಲಿಕೆಯ ಮಾತುಗಳಿಂದ ಬೈದಾಡಿದರು. ಈ ಅದ್ಭುತವನ್ನು ಏನೆಂದು ಹೇಳಲಿ? ೭. ಎರಡೂ ಕಡೆಯ ಪಟುಭಟರು ತರಿದು ಹಾಕುವರು, ಇರಿಯುವರು, ಕೊಯ್ಯುವರು, ಒತ್ತುವರು, ಮುತ್ತಿಗೆ ಹಾಕುವರು, ಕೊರೆಯುವರು, ಜಜ್ಜುವರು, ಕಡಿಯುವರು, ಉಬ್ಬುವರು, ಕೊಬ್ಬುವರು, ಬಾಗಿಸುವರು, ಮೇಲೇಳುವರು, ಕೆಳಗೆ ಬೀಳುವರು, ರಭಸದಿಂದ ಮೇಲೆ ಬೀಳುವರು, ಅಡ್ಡಗಟ್ಟುವರು. ಹೊಟ್ಟೆಕಿಚ್ಚು ಪಡುವರು, ಸಾಹಸವನ್ನು ಮೆರೆದು ಬೀಗುವರು, ಕುಸಿದುಬೀಳುವರು, ಹಿಂದೆಗೆಯುವರು, ಬಾಗುವರು, ತಿರಸ್ಕರಿಸುವರು, ದೇಹವನ್ನು ಒತ್ತಿನೂಕುವರು, ಮೇಲೆ ಬೀಳುವರು,

CC-0. Jangamwadi Math Collection. Digitized by eGangotri

ಪೋಳ್ದರಂಗಂಗಳಂ ಮೂದಲೆಯ ನುಡಿಗಳಂ
ಕೇಳ್ದರೊಬ್ಬೊಬ್ಬರಂ ಮೆಟ್ಟಿ ಸರಿಸೀಳಾಗಿ
ಸೀಳ್ದರಿಟ್ಟಣಿಸಿದರ್ ತಣಿಸಿದರ್ ಭೂತಮಂ ಬಹಳ ಕೋಪಾಂಬುಧಿಯೊಳು
ಆಳ್ದರಿರಿದೇರ್ಗಳತಿವೇದನೆಗೆ ಮುಸಕಮಂ
ತಾಳ್ದರಿದಿರಾದವರ ತಲೆಗಳಂ ತಂದು ತ
ಮ್ಮಾಳ್ದಂಗೆ ಸಲೆ ನಿವಾಳಿಸಿದರುಭಯದ ಸುಭಟರೇನೆಂಬೆನಾಕ್ಷಣದೊಳು ೮

ವಾರ್ಧಿಗಳ ಬಲ್ದೆರೆಗಳೊಂದೊಂದನಣೆವಂತೆ
ದುರ್ಧರದ ರಾವುತರಿರಿದಾಡಿದರ್ ಪಟುವೈರಿ
ನಿರ್ಧೂತರೆನಿಪ ಜೋದರ್ಕಳಂಕುಶವಿಕ್ಕಿ ಪೋರಿಸಿದರಾನೆಗಳನು
ಮಾರ್ದನಿಯ ಮುಸಕದಿಂ ರಥಿಕರೊತ್ತಿದರಾ ಧ
ನುರ್ಧರರ್ ಮೂದಲಿಸುತಿಸುವ ಕೈಚಳಕಮಂ
ನಿರ್ಧರಿಸಲರಿದೆಂಬ ಹದನಾದುದಾಕ್ಷಣದೊಳೇನೆಂಬೆನಚ್ಚರಿಯನು ೯

ಸರ್ಬಸನ್ನಾಹದಿಂ ನೂಂಕಿದುದು ಸುರರ ಚಾ
ತುರ್ಬಲಂ ಖಂಡೆಯಂಗಳ ಖಣಿಕಟಿಲ್ವನಂ
ಪರ್ಬಿದುದು ದಿಕ್ತಟಂಗಳೊಳಾನೆಗಾನೆ ಕುದುರೆಗೆ ಕುದುರೆ ತೇರ್ಗೆ ತೇರು

ಕುರಿದರಿದು ಹೊಡೆದಾಡುವರು, ಸಾಹಸವನ್ನು ತೋರುವರು. ೮. ಎರಡೂ ಸೈನ್ಯದ ವೀರಭಟರು ಎದುರಾಳಿಗಳ ದೇಹದ ಅಂಗಾಂಗಗಳನ್ನು ಎರಡು ಹೋಳಾಗಿ ಸೀಳಿದರು. ಪರಸ್ಪರ ಮೂದಲಿಕೆಯ ಮಾತುಗಳನ್ನು ಕೇಳಿದರು. ಒಬ್ಬೊಬ್ಬರನ್ನೂ ತುಳಿದು ಸಮ ಸಮನಾಗಿ ಸೀಳಿ ರಾಶಿಹಾಕಿದರು. ಭೂತಗಳನ್ನು ತಣಿಸಿದರು, ಅತಿಯಾದ ಕೋಪವೆಂಬ ಸಮುದ್ರದಲ್ಲಿ ಮುಳುಗಿದರು. ಇರಿತದಿಂದ ಉಂಟಾದ ಗಾಯಗಳ ನೋವಿಗೆ ಕೆರಳಿದರು. ಎದುರುಬಿದ್ದವರ ತಲೆಗಳನ್ನು ತರಿದು ತಮ್ಮ ನಾಯಕರಿಗೆ ನಿವಾಳಿಸಿದರು. ೯. ಸಮುದ್ರದ ದೊಡ್ಡ ಅಲೆಗಳು ಒಂದನ್ನೊಂದು ಅಪ್ಪಳಿಸುವಂತೆ ಶೂರರಾದ ಕುದುರೆ ಸವಾರರು ಒಬ್ಬರನ್ನು ಒಬ್ಬರು ತಿವಿದಾಡಿದರು. ಶೂರರಾದ ವೈರಿಗಳನ್ನೂ ನಾಶ ಪಡಿಸಬಲ್ಲ ಯೋಧರು ಅಂಕುಶದಿಂದ ತಿವಿದು ಒಂದರೊಡನೊಂದು ಆನೆಗಳನ್ನು ಹೋರಾಡಿಸಿದರು. ಪ್ರತಿಯಾಗಿ ಅಬ್ಬರಿಸಿ ರಥಿಕರು ಪರಸ್ಪರ ತಗುಲಿದರು. ಬಿಲ್ಗಾರರು ಒಬ್ಬರನ್ನೊಬ್ಬರು ಮೂದಲಿಸುತ್ತ ಬಾಣಪ್ರಯೋಗಿಸುವ ಕೈಚಳಕವನ್ನು ನಿರ್ಧರಿಸ ಲಸಾಧ್ಯವೆಂಬಂತಹ ಪರಿಸ್ಥಿತಿ ಆ ಕ್ಷಣದಲ್ಲಿ ಉಂಟಾಯಿತು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೧೦. ಸರ್ವಸಿದ್ಧತೆಯಿಂದಲೂ ದೇವತೆಗಳ ಚತುರ್ಬಲವೂ ರಾಕ್ಷಸರನ್ನು ಹಿಂದಟ್ಟಿತು. ಕತ್ತಿಗಳ ಖಣಿ ಕಟಿಲ್ ಎಂಬ ಧ್ವನಿ ದಿಕ್ತಟಗಳಲ್ಲಿಯೂ ಹಬ್ಬಿತು, ಆನೆಗೆ ಆನೆ, ಕುದುರೆಗೆ ಕುದುರೆ, ತೇರಿಗೆ ತೇರು, ಗರ್ವದಿಂದ ಸುಭಟರ ಜೊತೆಗೆ

CC-0. Jangamwadi Math Collection. Digitized by eGangotri

ಗರ್ಬದಿಂ ಸುಭಟರ್ಗೆ ಸುಭಟರ್ಕಳಿದಿರಾಗಿ
ಯೊರ್ಬರೊರ್ಬರ್ ಸೆಣಸೆ ಸುರಸುಭಟರಿರಿತಕ್ಕೆ
ಮಾರ್ಬಲದ ಚೂಣಿ ಮುರಿದೋಡಿ ಕೂಡಿತು ಜಲಂಧರದೈತ್ಯನರೆನೆಲೆಯನು ೧೦

ಪಿಂತಿರುಗಿ ಕಾದಿದರನಿರಿವುತುಂ ತರಿವುತುಂ
ದಂತಿ ತುರಗಂಗಳಂ ಪಿಡಿವುತುಂ ಜಡಿವುತುಂ
ಮುಂತಳರ್ವ ಭಟರನರೆಯಟ್ಟುತುಂ ಕುಟ್ಟುತುಂ ಮೆಟ್ಟುತುಂ ಪೆರ್ವೆಣನನು
ಅಂತರಿಸದುರುಬಿ ತಲೆವೊಯ್ಯುತುಂ ಬಯ್ಯುತುಂ
ತಂತಮ್ಮ ವೀರಮಂ ಮೆರೆವುತುಂ ಬೆರೆವುತುಂ
ಭ್ರಾಂತಿಬಡಿಸಿದರಾಗ ರಾಗದಿಂ ಬೇಗದಿಂ ಸುರಭಟರ್ ಪರಭಟರನು ೧೧

ಖಂಡಮಯಮೆತ್ತಲುಂ ಮುರಿಮುರಿದು ಬಿದ್ದ ಕೋ
ದಂಡಮಯಮೆತ್ತಲುಂ ಕುಣಿಕುಣಿವ ಮರುಳ ಬ
ಲ್ತಂಡಮಯಮೆತ್ತಲುಂ ಸುತ್ತಲುಂ ಪರಿವ ರಕ್ತಾಂಬುವಿನೊಳೋಲಾಡುತೆ
ರುಂಡಮಯಮೆತ್ತಲುಂ ಕಡಿಕಡಿದು ಕೆಡೆದ ತಲೆ
ತಂಡಮಯಮೆತ್ತಲುಂ ತುಂಡಾದ ಘನಗದಾ
ದಂಡಮಯಮೆತ್ತಲುಂ ತಾನೆನಿಸಿ ರಣರಂಗಮಿರ್ದುದತಿಭೀಕರದೊಳು ೧೨

ರಕ್ತಪ್ರವಾಹವಾದುದು ರಣಂ ಸಾಹಸವಿ
ರಕ್ತರಾದರ್ ಖಳನ ಚೂಣಿಗರ್ ಸುರಕರವಿ
ಮುಕ್ತ ಬಾಣೋರಗನ ಬಾಯ್ಗೆ ತುತ್ತಾದುದರಿಭಟರ ಜೀವಾನಿಲಚಯಂ

ಸುಭಟರು ಒಬ್ಬರೊಡನೊಬ್ಬರು ಪ್ರತಿಭಟಿಸಿ ಹೋರಾಡಿದರು. ಆಗ ದೇವತೆಗಳ ಇರಿತಕ್ಕೆ ರಾಕ್ಷಸರ ಸೈನ್ಯದ ಮುಂಭಾಗವು ದಿಕ್ಕಾಪಾಲಾಗಿ ಹಿಮ್ಮೆಟ್ಟಿ ಜಲಂಧರನ ಸೈನ್ಯದ ಹಿಂಭಾಗದಲ್ಲಿದ್ದ ಸೈನ್ಯದೊಡನೆ ಕೂಡಿಕೊಂಡಿತು. ೧೧. ಹಿಂತಿರುಗಿ ಹೋರಾಡಿದವರನ್ನು ಇರಿಯುತ್ತ, ತರಿಯುತ್ತ, ಆನೆ ಕುದುರೆಗಳನ್ನು ಹಿಡಿದು ಹೊಡೆಯುತ್ತ, ಮುಂದೆ ಹೋಗುತ್ತಿರುವ ಭಟರನ್ನು ಓಡಿಸಿಕೊಂಡು ಹೋಗಿ ಕುಟ್ಟಿದರು, ಹೆಣದ ರಾಶಿಯನ್ನು ತುಳಿದರು, ತಡಮಾಡದೆ ಮೇಲೆಬಿದ್ದು ತಲೆಕಡಿದು ಬೈದರು, ತಮ್ಮ ತಮ್ಮ ಶೌರ್ಯವನ್ನು ಮೆರೆದರು. ಬೇಗನೆ ಆಸಕ್ತಿಯಿಂದ ಬೆರೆಯುತ್ತ ಸುರಸೈನಿಕರು ಶತ್ರು ಸೈನಿಕರಿಗೆ ಭ್ರಾಂತಿಯನ್ನುಂಟುಮಾಡಿದರು. ೧೨. ಎಲ್ಲೆಲ್ಲಿಯೂ ಮಾಂಸಖಂಡ ತುಂಬಿತ್ತು. ಮುರಿದುಬಿದ್ದ ಬಿಲ್ಲುಗಳು ತುಂಬಿದ್ದುವು. ಎಲ್ಲ ಕಡೆಯೂ ಕುಣಿದಾಡುವ ಪಿಶಾಚಿಗಳ ದೊಡ್ಡ ಗುಂಪಿತ್ತು. ಸುತ್ತಲೂ ಹರಿಯುವ ರಕ್ತಜಲದಲ್ಲಿ ತೇಲುತ್ತಿದ್ದ ರುಂಡಗಳು ತುಂಬಿದ್ದುವು. ಕಡಿಕಡಿದು ಬಿದ್ದ ತಲೆಗಳ ಸಮೂಹವೇ ಎಲ್ಲೆಲ್ಲಿಯೂ ಇದ್ದಿತು. ಮುರಿದುಬಿದ್ದ ದೊಡ್ಡ ಗದೆಗಳಿಂದ ಯುದ್ಧರಂಗ ತುಂಬಿಹೋಗಿದ್ದಿತು. ಇವೆಲ್ಲವುಗಳಿಂದ ತುಂಬಿ ಯುದ್ಧರಂಗವು ಬಹು ಭೀಕರವಾಗಿತ್ತು. ೧೩. ಯುದ್ಧ ಭೂಮಿ ರಕ್ತದ ಪ್ರವಾಹದಿಂದ ತುಂಬಿತು. ಜಲಂಧರ ರಾಕ್ಷಸನ ಸೈನ್ಯದ ಮುಂಭಾಗದ

CC-0. Jangamwadi Math Collection. Digitized by eGangotri

ಶಕ್ತಿಯುಡಿದುವು ಖಳರ ಕಾಯದೊಳ್ ಬಹುಕೋಪ
ರಕ್ತೇಕ್ಷಣಂ ಶುಂಭದಾನವಂ ಕಂಡು ಕರ
ಯುಕ್ತಭೀಷಣವಾದ ಖಂಡೆಯವನುರೆ ಜಡಿದು ಕೈವೀಸಿದಂ ಬಲವನು ೧೩

ನಡೆ ಜಂಭ ನೂಂಕೆಲೆ ನಿಶುಂಭ ಮುಂಬರಿ ಚಂಡ
ತುಡುಕು ನೀನೆಲೆ ಖಡ್ಗರೋಮ ತೋರಿಸು ನಿನ್ನ
ಕಡುಪನೆಲೆ ವಾಮನ ವಿರೂಪಾಕ್ಷ ಕೈದೋರ್ಪು ಲೋಮ ಬಲ್ಪೇನಾದುದು
ಮಿಡುಕದಿಹರೇ ದೀರ್ಘಬಾಹು ನಿಲ್ವರೆ ಮದಿರ
ತಡೆವರೇ ನೀಂ ಕಾಲನೇಮಿ ಸತ್ತ್ವವನೆಲ್ಲಿ
ಮಡಗಿದಿರಿ ಭಟರೆನುತೆ ಮೂದಲಿಸಿದಂ ಖಳನ ಸೇನಾನಿ ಶುಂಭನೆಂದು ೧೪

ಮೊಳಗಿದುವು ಸಕಲ ವಾದ್ಯಂಗಳಾರ್ಭಟಿಸಿದರ್
ಖಳರೊರಲ್ದುವು ಕಹಳೆ ಮಿಂಚಿದವು ಕತ್ತಿಗಳ್
ಸಲೆ ನೂಂಕಿದುವು ಕುದುರೆಗಳ್ ಕರಿಗಳೊತ್ತಿದುವು ಪಟುಭಟರ್ ಮುಂಬರಿದರು
ಖಳನಾಯಕರ್ ಕುಬುಬೆನುತ್ತಾರಿ ಬೊಬ್ಬಿರಿದು
ಮುಳಿದು ನಿಜವಾಹನಂಗಳನುರುಬಿ ನಡೆಸಿದರ್
ಕೊಳುಗುಳದ ಭಾಷಣವನೇನೆಂದು ಬಣ್ಣಿಸುವೆನೆತೆ ರಾಮ ಕೇಳೆಂದನು ೧೫

ಭಟರು ಯುದ್ಧಾಸಕ್ತಿಯನ್ನು ಕಳೆದುಕೊಂಡರು. ದೇವತೆಗಳು ಬಿಟ್ಟ ಬಾಣವೆಂಬ ಹಾವುಗಳ ಬಾಯಿಗೆ ಶತ್ರುಸೈನಿಕರ ಪ್ರಾಣವೆಂಬ ಗಾಳಿಯು ಆಹಾರವಾಯಿತು. ರಾಕ್ಷಸರ ದೇಹದಲ್ಲಿ ಶಕ್ತಿ ಉಡುಗಿತು. ಇದನ್ನು ಬಹಳ ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಶುಂಭದಾನವನು ನೋಡಿ ಕೈಯಲ್ಲಿದ್ದ ಭಯಂಕರವಾದ ಕತ್ತಿಯನ್ನು ಝಳಪಿಸುತ್ತ ಕೈಬೀಸಿ ತನ್ನ ಸೈನಿಕರನ್ನು ಕರೆದನು. ೧೪. ಜಂಭನೇ ನಡಿ, ಎಲೆ ನಿಶುಂಭನೇ ಮುನ್ನುಗ್ಗು. ಎಲೈ ಚಂಡನೇ ಮುಂದುವರಿ, ಖಡ್ಗರೋಮನೆ ಶತ್ರುವನ್ನು ಜಾಗ್ರತೆ ಹಿಡಿ. ವಾಮನ ನಿನ್ನ ಸಾಮರ್ಥ್ಯವನ್ನು ತೋರಿಸು. ವಿರೂಪಾಕ್ಷನೇ ನಿನ್ನ ಕೈಚಳಕವನ್ನು ತೋರಿಸು. ಲೋಮ, ನಿನ್ನ ಸಾಮರ್ಥ್ಯವೇನಾಯಿತು ? ಎಲೆ ದೀರ್ಘ ಬಾಹು, ಆವೇಶಗೊಳ್ಳದಿರುತ್ತಾರೆಯೆ ? ಸುಮ್ಮನೆ ನಿಲ್ಲುತ್ತಾರೆಯೆ, ಮದಿರ ? ಎಲೈ ಕಾಲನೇಮಿ, ಸಾವಕಾಶ ಮಾಡಬಹುದೇ ? ಭಟರೆ ನಿಮ್ಮ ಪೌರುಷವನ್ನು ಎಲ್ಲಿಟ್ಟಿರಿ? ಎಂದು ರಾಕ್ಷಸರ ಸೇನಾಧಿಪತಿಯಾದ ಶುಂಭನು ಮೂದಲಿಸಿದನು. ೧೫. ಎಲ್ಲ ವಾದ್ಯ ಗಳೂ ಶಬ್ದಮಾಡಿದವು. ರಾಕ್ಷಸರೆಲ್ಲರೂ ಆರ್ಭಟಿಸಿದರು. ಕಹಳೆಗಳು ಕೂಗಿದವು. ಕತ್ತಿಗಳು ಹೊಳೆದವು, ಕುದುರೆಗಳು ಮುಂದೆ ನಡೆದವು. ಆನೆಗಳು ಮುಂದೆ ಸಾಗಿದುವು. ಶೂರ ಸೈನಿಕರು ಮುಂದುವರಿದರು. ರಾಕ್ಷಸನಾಯಕರು ಕುಬುಬು ಎನ್ನುತ್ತ ಅರಚಿ, ಅಬ್ಬರಿಸಿ ಕೋಪಗೊಂಡು ತಮ್ಮ ವಾಹನಗಳನ್ನು ವೇಗವಾಗಿ ನಡೆಸಿದರು. ಯುದ್ಧದ

CC-0. Jangamwadi Math Collection. Digitized by eGangotri

ಖೋಯೆಂದು ಖಳನ ಪಡೆ ನಡೆವುದಂ ಕಂಡಿಂದ್ರ
ನೋಯೆಂದು ಬೊಬ್ಬಿರಿದು ಕೆಲಬಲದ ಸಕಲಸುರ
ನಾಯಕರನೈದೆ ಕೈವೀಸಿದಂ ಸೂಸಿದಂ ಮೊದಲೆಯ ಮಾತುಗಳನು
ಬಾಯ ಬೊಬ್ಬೆಗಳ ತೋಳ್ವೊಯ್ಲ ಪಟುಭಟರ ಸಮು
ದಾಯದೊಡನಗ್ನಿ ಯಮ ನೈಋತ್ಯ ಜಲಧಿಪತಿ
ವಾಯು ಧನದಾದಿಗಳ್ ನೂಂಕಿದರ್ ಭರವಸದೊಳೇನೆಂಬೆನಚ್ಚರಿಯನು ೧೬

ಸುರಪನಂ ಶುಂಭನಗ್ನಿಯ ನಿಶುಂಭಂ ದಂಡ
ಧರನನಾ ವಾಮನಂ ನಿಋುತಿಯಂ ಮದಿರನುರೆ
ಶರಧಿಪತಿಯಂ ದೀರ್ಘಬಾಹು ಪವಮಾನನಂ ಖಡ್ಗರೋಮಂ ಧನದನ
ದುರುಳಪ್ರಚಂಡನೀಶಾನನಂ ಚಂಡನಿಂ
ತಿರದೆ ಮೊದಲಿಸಿ ಸಮ್ಮುಖವಾಗಿ ತುಳ್ಕಿದರ್
ಶರವರುಷಮಂ ನಭೋಂಗಣವೆತ್ತ ದೆಸೆಯೆತ್ತ ಸುರಧರಣಿಯೆತ್ತಲೆನಲು ೧೭

ಕೊಚ್ಚುವರ್ ಪೊಸಮಸೆಯ ಸರಳ್ಗಳಿಂದೆಸುಗೆಯಂ
ಮೆಚ್ಚುವರ್ ಹೃದಯದಲಿ ಕೋಪಮಂ ಕಣ್ಗಳೊಳ್
ಬಿಚ್ಚುವರ್ ಕಣೆಕಣೆಗಳೆಸುಗೆಗಳ ಮಸಕದಿಂ ಬೃಂದಾರಕರ ನೆಲವನು

ಭೀಕರತೆಯನ್ನು ಏನೆಂದು ವರ್ಣಿಸಲಿ, ರಾಮ, ಕೇಳು ಎಂದನು. ೧೬. ಖೊ ಎಂದು ರಾಕ್ಷಸನ ಸೈನ್ಯ ಮುಂದೆ ನಡೆಯಿತು. ಇದನ್ನು ಇಂದ್ರನು ನೋಡಿ ಓ ಎಂದು ಬೊಬ್ಬಿರಿದನು. ಅಕ್ಕ ಪಕ್ಕದಲ್ಲಿದ್ದ ಎಲ್ಲ ದೇವನಾಯಕರನ್ನೂ ಕೈಬೀಸಿ ಕರೆದನು. ಮೊದಲಿಕೆ ಮಾತುಗಳನ್ನು ಆಡಿದನು. ಬಾಯಿಂದ ಅರಚುವ, ತೋಳ್ತಟ್ಟುವ, ಯುದ್ಧವೀರರ ಗುಂಪಿನೊಡನೆ ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ ಮುಂತಾದವರು ವಿಶ್ವಾಸದಿಂದ ಮುಂದೆ ನುಗ್ಗಿದರು. ೧೭. ದೇವೇಂದ್ರನನ್ನು ಶುಂಭನು, ಅಗ್ನಿಯನ್ನು ನಿಶುಂಭನು, ಯಮನನ್ನು ವಾಮನನು, ನಿರುತಿಯನ್ನು ಮದಿರನು, ವರುಣನನ್ನು ದೀರ್ಘಬಾಹುವು, ವಾಯುವನ್ನು ಖಡ್ಗರೋಮನು, ಕುಬೇರನನ್ನು ದುರುಳಪ್ರಚಂಡನು, ಈಶಾನನನ್ನು ಚಂಡನು, ಪರಸ್ಪರ ತಡೆಯದಂತೆ ಮೊದಲಿಸಿ ಎದುರೆದುರಾಗಿ ಆಕಾಶವೆಲ್ಲಿ, ದಿಕ್ಕಾವುದು, ಸ್ವರ್ಗಭೂಮಿಯಾವುದು ಎನ್ನುವಂತೆ ಬಾಣಗಳ ಮಳೆಗರೆದರು. ೧೮. ಹೊಸದಾಗಿ ಮಸೆದ ಬಾಣಗಳಿಂದ ಕೊಚ್ಚುತ್ತಿದ್ದರು, ಬಾಣಪ್ರಯೋಗವನ್ನು ಮನಸ್ಸಿನಲ್ಲಿಯೇ ಮೆಚ್ಚುತ್ತಿದ್ದರು, ಕಣ್ಣುಗಳಲ್ಲಿ ಕೋಪವನ್ನು ಕಾರುತ್ತಿದ್ದರು. ದೇವತೆಗಳ ಭೂಮಿಯನ್ನು ಬಾಣಗಳ ರಭಸವಾದ ಪ್ರಯೋಗದಿಂದ ಮುಚ್ಚುತ್ತಿದ್ದರು. ಎಡಬಲಭಾಗಗಳಲ್ಲಿ ವಿಜೃಂಭಿ

CC-0. Jangamwadi Math Collection. Digitized by eGangotri

ಮುಚ್ಚುವರ್ ಬಲನೆಡನೊಳುರುಬುತಿಹ ಸುಭಟರಂ
ಪಚ್ಚುವರ್ ಭೂತವೇತಾಳಜನಕೀ ಪರಿಯೊ
ಳೆಚ್ಚಾಡಿದರ್ ಸುರೇಂದ್ರಾದಿ ಸುರನಾಯಕರ್ ಖಳನಾಯಕರ್ ಧುರದೊಳು ೧೮

ಅಸಿಗಳಿಂದೊರ್ಮೆ ಕುಂತದೊಳೊರ್ಮೆ ನೆಗಳ್ದ ಪ
ಟ್ಟಿಸಗಳಿಂದೊರ್ಮೆ ಗದೆಗಳೊಳೊರ್ಮೆ ಘನತರದ
ಮುಸಲಂಗಳಿಂದೊರ್ಮೆ ಮುದ್ಗರದಿನೊರ್ಮೊರ್ಮೆ ಸುರಗಿಯಿಂದೊರ್ಮೆಯೊರ್ಮೆ
ಅಸಮಸಂಗ್ರಾಮದೊಳಗಿಂತುಭಯನಾಯಕರ್
ಮಸಕದಿಂ ಪೊಯ್ದಾಡಿದರ್ ಬಿಡದೆ ಪೊಕ್ಕು ರ
ಕ್ಕಸರಿರಿಯೆ ತರಹರಿಸಲಾರದಾಶಾಧಿಪರ್ ಬೆಂಗೊಟ್ಟರಾಕ್ಷಣದೊಳು ೧೯

ಸುರಪನೋಡಿದನಗ್ನಿ ಸಾಗಿದಂ ಪ್ರೇತಪತಿ
ತೆರಳ್ದನಾ ನೈರುತ್ಯನಡಗಿದಂ ಜಲಧಿಪಂ
ಮುರಿದನನಿಲಂ ಸರಿದನಭವಮಿತ್ರಂ ನೊಂದನೀಶಾನನಳವಳಿದನು
ಉರವಣಿಸಿ ದೈತ್ಯನಾಯಕರೋಡುವಮರರಂ
ಬೆರೆಸಿವರ್ ದೊರೆಗಳೇ ಬೆನ್ನೀಯೆ ಚತುರಂಗ
ಮಿರದೆ ತೆಗೆದೋಡುತಿರ್ದುದು ಕೆಟ್ಟುಬಿಟ್ಟು ಕುಟ್ಟುವ ದೈತ್ಯಭಟರುರುಬೆಗೆ ೨೦

ಬಿರುಗಾಳಿ ಬೀಸಿದೊಡೆ ನೊರಜುವಿಂಡದಕಾಂತು
ಮುರಿಯದಿಹುದೇ ನಿಮಿಷಮಾತ್ರದೊಳ್ ಸುರಸೇನೆ
ಹರಿಹಂಚುವಟ್ಟು ತಾಯ್ಗಂ ಮಕ್ಕಳಾಗದೊಂದೇ ಬಾರಿ ಬೆನ್ನಿತ್ತುದು

ಸುತ್ತಿದ್ದ ಶೂರಭಟರನ್ನು ಭೂತಬೇತಾಳಗಳಿಗೆ ಹಂಚುತ್ತಿದ್ದರು. ಈ ರೀತಿ ದೇವೇಂದ್ರ ಮೊದಲಾದ ದೇವನಾಯಕರೂ ಮತ್ತುರಾಕ್ಷಸನಾಯಕರೂ ಯುದ್ಧದಲ್ಲಿ ಹೋರಾಡಿದರು. ೧೯. ಕತ್ತಿಗಳಿಂದ ಒಂದು ಬಾರಿ, ಭರ್ಜಿಗಳಿಂದ ಒಮ್ಮೆ, ಈಟಿಗಳಿಂದ ಒಂದು ಸಾರಿ, ಗದೆಗಳಿಂದ ಇನ್ನೊಂದು ಸಾರಿ, ಶ್ರೇಷ್ಠತರವಾದ ಒನಕೆಗಳಿಂದ ಒಂದು ಸಾರಿ,ಒಂದು ರೀತಿಯ ಗದೆಗಳಿಂದ ಒಂದೊಂದು ಬಾರಿ, ಕಠಾರಿಗಳಿಂದ ಒಂದು ಬಾರಿ ಈ ರೀತಿ ಎರಡೂ ಕಡೆಯ ನಾಯಕರೂ ಹೋಲಿಸಲಾಗದಂತಹ ಯುದ್ಧದಲ್ಲಿ ಅಬ್ಬರದಿಂದ ಹೊಡೆದಾಡಿದರು. ರಾಕ್ಷಸರು ತಡೆಯದೆ ಅವರನ್ನು ಇರಿಯಲು ದಿಕ್ಪಾಲಕರು ತಡೆಯಲಾಗದೆ ಆ ಕ್ಷಣದಲ್ಲಿ ಪಲಾಯನಮಾಡಿದರು. ೨೦. ದೇವೇಂದ್ರನು ಓಡಿದನು, ಅಗ್ನಿ ಹೊರಟುಹೋದನು,ಯಮನು ಹೊರಟುಹೋದನು, ನಿರುತಿಯು ಬಚ್ಚಿಟ್ಟುಕೊಂಡನು, ವರುಣನು ಹಿಂದಿರುಗಿದನು, ವಾಯುವು ಹಿಂದೆ ಸರಿದನು, ಕುಬೇರನು ನೊಂದನು, ಈಶಾನನು ಬಲಗುಂದಿದನು. ವೇಗದಿಂದ ಓಡುತ್ತಿರುವ ದೇವತೆಗಳನ್ನು ರಾಕ್ಷಸನಾಯಕರು ರಭಸದಿಂದ ಬೆನ್ನಟ್ಟಿದರು. ತಮ್ಮ ದೊರೆಗಳೇ ಹಿಮ್ಮೆಟ್ಟಲು ಹೊಡೆಯುವ ರಾಕ್ಷಸರ ಆವೇಶಕ್ಕೆ ಚತುರಂಗಸೈನ್ಯವು ನಿಲ್ಲಲಾರದೆ ಚೆಲ್ಲಾಪಿಲ್ಲಿಯಾಗಿ ಓಡಿಹೋಯಿತು. ೨೧. ಬಿರುಗಾಳಿ ಬೀಸಿದಾಗ ಸಣ್ಣಸಣ್ಣ ಸೊಳ್ಳೆಗಳ ಗುಂಪು ಎದುರಾದರೆ ಚದುರದೆ ಇರುತ್ತದೆಯೇ? ಒಂದು ನಿಮಿಷದಲ್ಲಿ ದೇವತೆ

CC-0. Jangamwadi Math Collection. Digitized by eGangotri

ಇರಿ ಕಡಿ ಪೊರಳ್ಚು ಸೋಲ್ತರ್ ದಿವಿಜರೆನುತಾರ್ದು
ಸರಿಗರಕ್ಕಸರಾನೆಕುದುರೆಸಹಿತೊತ್ತಿ ಕುರಿ
ಪರಿಮಾಡಿ ಬಿಡದೆ ಬೆಂಬತ್ತಿದರ್ ಸಾಹಸವೊಳೇನೆಂಬೆನದ್ಭುತವನು ೨೧

ಕಡಿದರೋಡುವ ಭಟರ ಬೆಂಬತ್ತಿ ತಮತಮಗೆ
ಪಿಡಿದರ್ ತುರಂಗಗಜರಾಜಿಯಂ ಪಂಥಮಂ
ನುಡಿದರಿರದೊತ್ತಿದರ್ ಮುತ್ತಿದರ್ ಕುತ್ತಿದರ್ ಮೆತ್ತಿದರ್ ಮೈಗಂಬನು
ಉಡಿದರಾಂತವರ ಬಗ್ಗರಿಗಳಂ ದಾನವರ್
ಕುಡಿದರರುಣಾಂಬುವಂ ಶಾಕಿನಿಯರೀ ಸುರರ್
ಮಡಿದರಂದೋಡಿದರ್ ಕೋಡಿದರ್ ಬಾಡಿದರ್ ನೀಡಿದರ್ ಕೈದುಗಳನು ೨೨

ಶಿರವರಿಯಲೆತ್ತಿದ ಕರಾಗ್ರಮಂ ಕಂಡು ಪಲ್
ಗಿರಿವುತಂ ಖಡ್ಗಧಾರೆಗೆ ಬೆದರಿ ತಂತಮ್ಮ
ಕರವನೊಡ್ಡುತೆ ಕಾಲ್ಗೆ ಬೀಳುತಂ ಪಲ್ಗಚ್ಚಿ ದೈನ್ಯವಚನಂಗಳಿಂದೆ
ಶಿರವನುಳುಹಯ್ಯ ನಿಮ್ಮಯ ಬಸಿರ ಬಂದೆವೆಮ
ಗೊರೆವುದಾಳ್ಗೆಲಸಮಂ ಮಾಳ್ಪೆವೆಂದುಸಿರಿ ಮೈ
ಗರವುತಿರ್ದರ್ ಮಡಿದ ಗಜಹಯಂಗಳ ಮರೆಯೊಳಳವಳಿದು ದಿವಿಜಭಟರು ೨೩

ಗಳ ಸೈನ್ಯ ಪರಿಹಂಚಾಗಿ ತಾಯಿಗೆ ತಕ್ಕ ಮಕ್ಕಳೆನಿಸದೆ ಒಂದೇ ಬಾರಿಗೆ ಬೆನ್ನು ಕೊಟ್ಟೋಡಿತು.ದೇವತೆಗಳು ಸೋತರು. ಅವರನ್ನು ತಿವಿ,ಕಡಿ,ಹೊರಳಿಸು ಎನ್ನುತ್ತ ಸರಿಸಮಾನರಾದ ರಾಕ್ಷಸರು ಅಬ್ಬರಿಸಿ ಆನೆ ಕುದುರೆಗಳ ಸಹಿತ ತಾಗುತ್ತ ಕೊಲ್ಲುತ್ತ ಅವರನ್ನು ಬಿಡದಂತೆ ಸಾಹಸದಿಂದ ಹಿಂಬಾಲಿಸಿದರು. ಆ ಅದ್ಭುತವನ್ನು ಏನೆಂದುಹೇಳಲಿ? ೨೨. ಓಡಿ ಹೋಗುತ್ತಿರುವ ಸೈನಿಕರನ್ನು ಹಿಂಬಾಲಿಸಿ ಕಡಿದುಹಾಕಿದರು. ಕುದುರೆ ಮತ್ತು ಆನೆಗಳನ್ನುತಮ್ಮತಮ್ಮಲ್ಲಿ ಹಿಡಿದುಕೊಂಡರು, ಪ್ರತಿಜ್ಞೆಯನ್ನು ಮಾಡಿದರು, ನೂಕಿದರು, ಮುತ್ತಿದರು, ಚುಚ್ಚಿದರು, ಶರೀರಕ್ಕೆ ಬಾಣವನ್ನು ನಾಟಿದರು. ರಾಕ್ಷಸರು ಎದುರಾದವರ ಎದೆಗೂಡಿನ ಮೂಳೆಯನ್ನು ಮುರಿದರು. ಶಾಕಿನಿಯರು ರಕ್ತವನ್ನು ಕುಡಿದರು. ಈ ದೇವತೆಗಳು ಸತ್ತರು, ಓಡಿಹೋದರು, ಸೋತರು, ಬಾಡಿಹೋದರು, ಆಯುಧಗಳನ್ನು ಅಲ್ಲಿಯೇ ಬಿಟ್ಟರು. ೨೩. ಕುತ್ತಿಗೆಯನ್ನು ಕಡಿಯಲು ಎತ್ತಿದ ಕತ್ತಿಯನ್ನು ನೋಡಿ ಹಲ್ಲನ್ನು ಕಿರಿಯುತ್ತಾ, ಕತ್ತಿಯ ಬಾಯಿಗೆ ಹೆದರಿ ತಮ್ಮ ತಮ್ಮ ಕೈಗಳನ್ನು ಅಡ್ಡ ಹಿಡಿಯುತ್ತಾ, ಕಾಲಿಗೆ ಬೀಳುತ್ತಾ ಹಲ್ಲನ್ನು ಕಚ್ಚಿಕೊಂಡು, ದೈನ್ಯದ ಮಾತುಗಳನ್ನು ಆಡುತ್ತ, ನಮ್ಮ ತಲೆಯನ್ನು ಉಳಿಸಿರಯ್ಯ, ನಿಮ್ಮ ಹೊಟ್ಟೆಯಲ್ಲಿ ಮಕ್ಕಳಾಗಿ ಹುಟ್ಟುತ್ತೇವೆ. ನಮಗೆ ಆಳುಗಳ ಕೆಲಸವನ್ನು ಹೇಳಿ ಮಾಡುತ್ತೇವೆ ಎಂದು ಹೇಳುತ್ತಾ ದೇವಸೈನಿಕರು ಸತ್ತುಹೋದ ಕುದುರೆ ಮತ್ತು ಆನೆಗಳ ಮರೆಯಲ್ಲಿ ಬಲಗುಂದಿ ಬಿಚ್ಚಿಟ್ಟುಕೊಳ್ಳು

CC-0. Jangamwadi Math Collection. Digitized by eGangotri

ಮೊರೆವ ಬೊಬ್ಬೆಗೆ ರಾವ್ತರಂ ಬಿಸುಟು ವಾಜಿಗಳ್
ಪರಿದಾಡಿದುವು ಮಾವ್ತರಂ ಕೆಡಪಿಯಾನೆಗಳ್
ತಿರುಗುತಿರ್ದುವು ಬಂದು ಬಿದ್ದರಮರಾವತಿಯ ಪೇರಗಳನಮರಭಟರು
ಪುರದ ಪೆರ್ಬಾಗಿಲೊಳ್ ಕರಿತುರುಗಪದಹತಿಯೊ
ಳರೆವುತಿರ್ದುದು ಸುರಪದಾತಿ ಖಳಚತುರಂಗ
ಮುರವಣಿಸಿ ತುಳಿದಿರಿದುಕೊಂಡು ಬರುತಿರ್ದುದದನೇನೆಂಬೆನದ್ಭುತವನು ೨೪

ಬಾಗಿಲೊಳ್ ಪೊಗುವೊಡಸದಳಮಾಗಿ ಹರಣಮಂ
ನೀಗಿದರ್ ಕೆಲಬರಿರಿದಾಡಿ ನೋಡುವೆವೆಂದು
ತಾಗಿದರ್ ಕೆಲಬರಾ ನಗರದಾಳ್ವೇರಿಯೊಳ್ ನೋಡುತಿಹ ಬಾಲೆಯರನು
ಬೇಗನೆಮ್ಮಂ ಸೇದಿಕೊಳ್ಳಿಮೆಂದವರ್ಗೆ ತಲೆ
ವಾಗಿದರ್ ಕೆಲರರಿಗಳುರುಬಿ ಬರೆ ಕಂಡು ಪೆ
ರ್ಬಾಗಿಲ್ಗಳಂ ಬೇಗ ಮುದ್ರಿಸಿದರಾ ಸಮಯದೊಳ್ ದೈತ್ಯರುರವಣಿಸಲು ೨೫

ಪೆರ್ಬಾಗಿಲಂ ಬಂಧಿಸಲ್ಕೆ ಪೊರಬಿದ್ದರಂ
ಗರ್ಬದಿಂದಿರಿದು ತಲೆಯುರಿದುದು ಜಲಂಧರನ
ಸರ್ಬಸೇನಾಸಮುದ್ರಂ ಶುಂಭನಾಜ್ಞೆಯಿಂ ಕೋಟೆಯಂ ಪತ್ತುತಿರಲು
ಕೊರ್ಬಿನಿಂ ದಿಕ್ಪಾಲರಾಳ್ವೇರಿಯಂ ಪತ್ತು
ತೊಬ್ಬರೊಬ್ಬರ ಪಚಾರಿಸುತಾಗ ದಾನವರ
ಪೆರ್ಬಲವ ಕಡಿದಿಳಿಪುತಿರಲಸುರರುರುಬಿದರದೇನೆಂಬೆನಚ್ಚರಿಯನು ೨೬

ತ್ತಿದ್ದರು. ೨೪. ಅವರ ಆರ್ತಧ್ವನಿಗೆ ಹೆದರಿ ರಾವುತರನ್ನು ಕೆಳಕ್ಕೆ ಕೆಡವಿ ಕುದುರೆಗಳು ಓಡಿದವು, ಆನೆಗಳು ಮಾವುತರನ್ನು ಕೆಡವಿ ತಿರುಗಾಡುತ್ತಿದ್ದುವು. ಅಮರಾವತಿಯ ದೊಡ್ಡದಾದ ಕಂದಕದಲ್ಲಿ ದೇವಸೈನಿಕರು ಬಂದು ಬಿದ್ದರು. ದೇವತೆಗಳ ಕಾಲಾಳು ಸೈನ್ಯವು ಹೆಬ್ಬಾಗಿಲ ಬಳಿ ಆನೆ ಕುದುರೆಗಳ ಕಾಲ ತುಳಿತಕ್ಕೆ ಸಿಕ್ಕಿ ನುಚ್ಚುನೂರಾಗು ತ್ತಿದ್ದಿತು. ರಾಕ್ಷಸರ ಚತುರಂಗ ಸೇನೆ ವಿಜೃಂಭಿಸುತ್ತ ಅವರನ್ನು ತುಳಿದು ತಿವಿದುಕೊಂಡು ಬರುತ್ತಿದ್ದಿತು. ಆ ಅದ್ಭುತವನ್ನು ಏನೆಂದು ಹೇಳಲಿ? ೨೫. ಆ ಸಮಯದಲ್ಲಿ ರಾಕ್ಷಸರು ವಿಜೃಂಭಿಸಲು ಬಾಗಿಲಿನಲ್ಲಿ ಹೋಗುವುದು ಕಷ್ಟವಾಗಿ ಅನೇಕರು ಪ್ರಾಣವನ್ನು ಕಳೆದು ಕೊಂಡರು. ಕೆಲವರು ಹೋರಾಡಿ ನೋಡೋಣವೆಂದು ಮೇಲೆ ಬಿದ್ದರು. ಕೆಲವರು ಆ ಪಟ್ಟಣದ ಕೋಟೆಯ ಗೋಡೆಯ ಮೇಲೆ ನೋಡುತ್ತಿದ್ದ ಹೆಂಗಸರಿಗೆ ತಮ್ಮನ್ನು ಬೇಗನೆ ಮೇಲಕ್ಕೆ ಎಳೆದುಕೊಳ್ಳುವಂತೆ ಹೇಳುತ್ತಾ ತಲೆಬಾಗಿ ಬೇಡಿದರು. ಕೆಲವರು ಶತ್ರುಗಳು ಹಲ್ಲೆಮಾಡಲು ಬರುವುದನ್ನು ನೋಡಿ ದೊಡ್ಡ ಬಾಗಿಲುಗಳನ್ನು ಬೇಗನೆ ಹಾಕಿದರು. ೨೬. ಹೆಬ್ಬಾಗಿಲನ್ನು ಬಂಧಿಸಲು ಹೊರಗೆ ಬಿದ್ದವರ ಹೊಟ್ಟೆಯಲ್ಲಿ ತಿವಿದು ತಲೆ ಗಳನ್ನು ತರಿದು, ಜಲಂಧರನ ಸೈನ್ಯವು ಶುಂಭನ ಆಜ್ಞೆಯಂತೆ ಕೋಟೆಯನ್ನು ಹತ್ತುತ್ತಿರಲು ಕೊಬ್ಬಿನಿಂದ ದಿಕ್ಪಾಲಕರು ಕೋಟೆಯ ಗೋಡೆಯನ್ನು ಹತ್ತಿ ಒಬ್ಬರನ್ನು ಒಬ್ಬರು ಮೂದಲಿಸುತ್ತ ರಾಕ್ಷಸರ ದೊಡ್ಡ ಸೈನ್ಯವನ್ನು ಕಡಿದು ಕೆಡವುತ್ತಿರಲು ಆಗ

CC-0. Jangamwadi Math Collection. Digitized by eGangotri

ಹರಿಗೆ ಬಲುಹಗ್ನಿಗಳಲುರಿ ಯಮಗುಬ್ಬಸಂ
ನಿರುತಿಗತಿಸಂಕಟಮುಗುಳ್ನೀರ್ ಜಲೇಶಂಗೆ
ಮರುತಂಗೆ ತಲ್ಲಣಂ ಯಕ್ಷಪತಿಗಾಸರೀಶಾನಂಗೆ ಬೆಟ್ಟಿತಾಯ್ತು
ಪುರದೊಳಗೆ ಪೊರಗೆ ದೇವಾಸುರರೊಳಳಿವರ್ಗೆ
ಪರಿಗಣನೆಯೆಲ್ಲಿಯದು ದಾನವರ್ ತಮತಮಗೆ
ಪರಿಪರಿದು ಮುತ್ತಿದರ್ ಪತ್ತಿದರ್ ಕೋಂಟೆಯಂ ನಿಲ್ಲದತಿಸಾಹಸದೊಳು ೨೭

ಕೊಡೆ ಗಜಬಜಮಾಯ್ತು ಮನೆಮನೆಯ ಕದಗಳಂ
ಪೂಡಿದರ್ ಮೆಯ್ಯ ಬಂಗಾರಗಳನುಗಿದು ಮರೆ
ಮಾಡಿದರ್ ಕೈವೆರಳ್ಗಳನೊತ್ತಿಕೊಳುತೆ ಕಳವಳಿಸಿದರ್ ಕಾಮಿನಿಯರು
ಬೇಡಕಳುಹಿದರವರ ವಸ್ತುವಂ ಕೊಡದಿಂತು
ಮಾಡಬಹುದೇ ಪಾಪಿ ದೇವೇಂದ್ರ ತಾನೆಲ್ಲಿ
ನೋಡುತಿರ್ಪನೊ ಕೆಟ್ಟೆವೆನುತೆ ಪುರಜನಮಳಲುತಿರ್ಪ ಸಮನಂತರದೊಳು ೨೮

ಕಂಡರಲ್ಲಲ್ಲಿ ದೊರೆಗಳ್ ವರುಣದಿಕ್ಕಿನೊಳ್
ದಿಂಡುದರಿವಸುರರಂ ಕೋಂಟೆ ಪೋದುದೆನುತ್ತೆ
ಖಂಡೆಯಂಗಳ ಕಿತ್ತು ಬಾಯ್ವೊಯ್ದು ಬೊಬ್ಬಿರಿದು ಪರಿದರಿರಿ ಕಡಿಯೆನುತ್ತೆ

ರಾಕ್ಷಸರು ರಭಸದಿಂದ ಮೇಲೆ ಬಿದ್ದರು. ೨೭. ದೇವೇಂದ್ರನಿಗೆ ಬಲಾತ್ಕಾರ, ಅಗ್ನಿಗೆ ದುಃಖದ ಉರಿ. ಯಮನಿಗೆ ಮೇಲುಬ್ಬಸ, ನಿರುತಿಗೆ ಸಂಕಟ, ವರುಣನಿಗೆ ಗುಟುಕುನೀರು, ಮರುತನಿಗೆ ತಲ್ಲಣ, ಕುಬೇರನಿಗೆ ಬಳಲಿಕೆ, ಈಶಾನನಿಗೆ ಕಠಿಣವಾದ ಕೆಲಸ ಉಂಟಾಯಿತು. ಪಟ್ಟಣದ ಒಳಗೆ ಮತ್ತು ಹೊರಗೆ ದೇವತೆಗಳಲ್ಲಿ ಮತ್ತು ರಾಕ್ಷಸರಲ್ಲಿ ಸಾಯುವವರಿಗೆ ಲೆಕ್ಕವೇ ಇಲ್ಲ. ಆದರೂ ರಾಕ್ಷಸರು ತಡೆಯದೆ ಅತಿ ಸಾಹಸದಿಂದ ಓಡಾಡುತ್ತ ಕೋಟೆಯನ್ನು ಮುತ್ತಿದರು ಹತ್ತಿದರು. ೨೮. ತಕ್ಷಣ ಗಲಿಬಿಲಿಯುಂಟಾಯಿತು. ಪ್ರತಿಯೊಂದು ಮನೆಯ ಬಾಗಿಲನ್ನೂ ಹಾಕಿದರು. ಸ್ತ್ರೀಯರು ಮೈಮೇಲಿದ್ದ ಬಂಗಾರದ ಒಡವೆಗಳನ್ನು ತೆಗೆದು ಮುಚ್ಚಿಟ್ಟರು, ಬೆರಳುಗಳನ್ನು ಮುರಿಯುತ್ತ ಕಳವಳಿಸಿದರು. ರಾಕ್ಷಸರು ತಮ್ಮ ವಸ್ತುವನ್ನು ಬೇಡಲು ಕಳುಹಿಸಿದರೆ, ಆ ಪಾಪಿಯಾದ ದೇವೇಂದ್ರ ಅವನ್ನು ಕೊಡದೆ ಈ ರೀತಿ ಮಾಡಬಹುದೇ? ಎಲ್ಲಿ ನೋಡುತ್ತಿದ್ದಾನೆಯೋ? ನಾವು ಕೆಟ್ಟುಹೋದೆವು ಎನ್ನುತ್ತ ಪಟ್ಟಣದ ಜನರು ವ್ಯಥೆಪಡುತ್ತಿರುವ ವೇಳೆಯಲ್ಲಿ ೨೯. ಪಶ್ಚಿಮ ದಿಕ್ಕಿನಲ್ಲಿ ದೇವತೆಗಳನ್ನು ಕಡಿದು ಹಾಕುತ್ತಿದ್ದ ರಾಕ್ಷಸರನ್ನು ದೊರೆಗಳು ನೋಡಿದರು, ಕೋಟೆ ಕೈಬಿಟ್ಟು ಹೋಯಿತು ಎನ್ನುತ್ತ ಕತ್ತಿಗಳನ್ನು ಕಿತ್ತು ಬಾಯಿ

CC-0. Jangamwadi Math Collection. Digitized by eGangotri

ಕಂಡುದಿಲ್ಲವೆ ಜೀಯ ಪಡುಗಡೆಯ ಕೋಂಟೆಯುಂ
ಕೊಂಡರವರೆಂದು ಸುರರುಲಿಯೆ ಖತಿಯಿಂದಲಾ
ಖಂಡಲಂ ಬಿಟ್ಟ ಸೂಟಿಯೊಳೈದಿದುಂ ನೆರೆದ ಮಂತ್ರಿಗಳ ಗಡಣದಿಂದೆ ೨೯

ಕಿತ್ತಾಯುಧದೊಳಿಂದ್ರ ಮುಖ್ಯದಿಕ್ಪಾಲಕರ್
ಕುತ್ತಿದರ್ ಕುಸುರಿದರಿದರ್ ತಿವಿದರೊಂದೆಸೆಯೊ
ಳೊತ್ತಿದರ್ ಸುರಭಟರ್ ಪಟುಭಟರ ಮುಂದಲೆಯ ಪಿಡಿದು ಘನಮುಷ್ಟಿಯಿಂದೆ
ನೆತ್ತಿಯಂ ಬಿಡಿದರುರೆ ಕೂರಂಬಿನಿಂ ಮೆಯ್ಯ
ಮೆತ್ತಿದರ್ ಬಹಳಭಂಗಂಬಡೆದು ಕದನಮಂ
ನಿತ್ತರಿಸಲಾರದಾಳ್ವೇರಿಯಿಂ ಕೆಡೆದರಗಳೊಳಗಾಗಲಸುರಭಟರು ೩೦

ಅನಿತರೊಳ್ ದಿನಪನಪರಾಂಬುನಿಧಿಗೈದಿದಂ
ದನುಜೇಂದ್ರನತ್ತ ಸೇನಾಸಮುದ್ರಂ ಬೆರಸಿ
ಘನವಿಭವದಿಂ ಸುತ್ತ ಪಾಳಯವನಿಳಿದನಿತ್ತಲ್ ಪುರದೊಳಮರೇಂದ್ರನು
ಮನದ ದುಮ್ಮಾನದಿಂ ದಿಕ್ಪಾಲಕರ್ ವೆರಸಿ
ಮನೆಗೆ ಬಂದೇಕಾಂತಭವನದೊಳ್ ಕುಳ್ಳಿರ್ದು
ತನಗೆ ಕಾಳೆಗದ ಸಂಕಟವನಮರಾಚಾರ್ಯನೊಡನಾಗಳಿಂತೆಂದನು ೩೧

ಬಡಿಮುಕೊಂಡು ಗಟ್ಟಿಯಾಗಿ ಅಬ್ಬರಿಸಿ, ಕಡಿದುಹಾಕು ಎನ್ನುತ್ತಾ ಮುಂದುವರಿದರು. ಪಶ್ಚಿಮ ದಿಕ್ಕಿನ ಕೋಟೆಯನ್ನು ಅವರು ಸ್ವಾಧೀನಪಡಿಸಿಕೊಂಡರು ಕಾಣುವುದಿಲ್ಲವೇ, ದೇವ, ಎನ್ನುತ್ತ ದೇವತೆಗಳು ಹೇಳಲು,ಅದನ್ನು ಕೇಳಿ ಕೋಪದಿಂದ ಇಂದ್ರನು ಎಲ್ಲ ಕೆಲಸಗಳನ್ನೂ ಬಿಟ್ಟು ಕೂಡಲೆ ಮಂತ್ರಿಗಳ ಸಮೂಹದೊಡನೆ ಹೊರಟನು. ೩೦. ಒರೆಯಿಂದ ಕಿತ್ತ ಆಯುಧಗಳಿಂದ ಇಂದ್ರನೇ ಮುಂತಾದ ದಿಕ್ಪಾಲಕರುಚುಚ್ಚಿದರು.ಸಣ್ಣ ಸಣ್ಣಗೆ ಕೊಚ್ಚಿದರು, ತಿವಿದರು, ಒಂದು ಕಡೆ ನೂಕಿದರು, ದೇವಸೈನಿಕರು ರಾಕ್ಷಸಸೈನಿಕರ ಮುಂದಲೆಯನ್ನು ಹಿಡಿದುಕೊಂಡು ನೆತ್ತಿಯಮೇಲೆ ಮುಷ್ಟಿಯಿಂದ ಗುದ್ದಿರರು. ಚೂಪಾದ ಬಾಣಗಳನ್ನು ಮೈಯಲ್ಲಿ ನಾಟಿದರು. ಆಗ ರಾಕ್ಷಸಸೈನಿಕರು ಬಹಳವಾಗಿ ಸೋತು ಅವಮಾನ ಹೊಂದಿ ಪಾರಾಗಲು ಸಾಧ್ಯವಿಲ್ಲದೆ ಕೋಟೆಯ ಗೋಡೆಯಿಂದ ಕಂದಕಕ್ಕೆ ಉರುಳಿದರು. ೩೧. ಅಷ್ಟರಲ್ಲಿ ಸೂರ್ಯನು ಮುಳುಗಿದನು. ಜಲಂಧರನು ಅತ್ತಕಡೆ ತನ್ನ ಅಪಾರ ಸೈನ್ಯವನ್ನು ಕೂಡಿಕೊಂಡು ಬಹಳ ವೈಭವದಿಂದ ಕೋಟೆಯ ಸುತ್ತ ಪಾಳಯವನ್ನು ಬಿಟ್ಟನು. ಈ ಕಡೆಯಲ್ಲಿ ಪಟ್ಟಣದಲ್ಲಿ ದೇವೇಂದ್ರನು ಮನಸ್ಸಿನ ಬೇಗುದಿಯಿಂದ ದಿಕ್ಪಾಲಕರನ್ನು ಕೂಡಿಕೊಂಡು ಮನೆಗೆ ಬಂದು, ಏಕಾಂತಭವನದಲ್ಲಿ ಕುಳಿತುಕೊಂಡು ತನಗೆ ಆದ ಯುದ್ಧಸಂಕಟವನ್ನು ದೇವಗುರುವಾದ ಬೃಹಸ್ಪತಿಯೊಡನೆ ಈ ರೀತಿ

CC-0. Jangamwadi Math Collection. Digitized by eGangotri

ದುರ್ಗವಿದು ಸಾಮಾನ್ಯವೇಯಿದಂ ಕಾಯ್ದಿಹ ಭ
ಟರ್ಕಳೇನಲ್ಲರೇ ಸಂಗರದ ಪರಿಕರದ
ವರ್ಗವಿಲ್ಲವೆ ಶಿವಶಿವಿಂತಪ್ಪುದಂ ನಿಮಿಷಮಾತ್ರದೊಳ್ ಕೊಂದರವರು
ಭರ್ಗನ ಕಟಾಕ್ಷದಿಂದುಳಿದುದಲ್ಲದೆ ಖಳಭ
ಟರ್ಗಳಂ ಕಡಿದಿಳಿಪಲೆಮ್ಮಳವೆಯಿನ್ನಿಹುದು
ಮಾರ್ಗಮಲ್ತುದಯದೊಳಗವರುರುಬೆ ತರಹರಿಸಬಾರದಿನ್ನೆಂತೆಂದನು ೩೨

ಲೇಸನಾಡಿದೆ ಸುರಪ ಇನ್ನಿರಲ್ ಖಳರಿಂವೆ
ಘಾಸಿಯಾಗದೆ ಮಾಣೆವೀ ವಸ್ತುವಾಹನ
ಕ್ಕಾಸೆ ಮಾಡದೆ ಸತ್ಯಲೋಕಕ್ಕೈದುವುದುಚಿತವೆಂದು ಗುರುವಾಡಲೊಪ್ಪಿ
ವಾಸವಾದ್ಯಖಿಳದಿವಿಜರ್ ತಮ್ಮ ನಿಜರಾಣಿ
ವಾಸಸಹಿತಜನೆಡೆಗೆ ಬರೆ ಕಂಡು ವಿಧಿ ಪೀತ
ವಾಸನಲ್ಲಿಗೆ ಕರೆದುತಂದು ಬಿನ್ನವಿಸಿದಂ ನಿಜಕಾರ್ಯಸಂಗತಿಯನು ೩೩

ಖಳಜಲಂಧರನೆಂಬವಂ ಪೆರ್ಚಿ ಸ್ವರ್ಗವಂ
ಸೆಳೆದುಕೊಂಡಮರರಿರ್ದೆಡೆಯ ಭೇದಿಸಲೆಮ್ಮ
ಬಳಿಗೆ ಬರಲಿಲ್ಲಿಗೊಡಗೊಂಡು ಬಂದೆಂ ಸುರರ ಕಾವುದೆನೆ ಹರಿ ಮನದೊಳು

ಹೇಳಿಕೊಂಡನು. ೩೨. ಈ ಕೋಟೆಯು ಸಾಮಾನ್ಯವಾದುದೇ ? ಇದನ್ನು ಕಾಯುತ್ತಿರುವ ಭಟರು ಅಲ್ಲರೇ ? ಯುದ್ಧದ ಸಾಮಗ್ರಿಗಳಿಗೇನು ಕೊರತೆಯೇ ? ಶಿವಶಿವಾ ಇವೆಲ್ಲವನ್ನೂ ನಿಮಿಷಮಾತ್ರದಲ್ಲಿ ಶತ್ರುಗಳು ಹಾಳುಮಾಡಿದರು. ಶಿವನ ಕೃಪೆಯಿಂದ ಈ ದಿವಸ ಉಳಿದುಕೊಂಡೆವು. ಇಲ್ಲದಿದ್ದರೆ ರಾಕ್ಷಸಭಟರನ್ನು ಕಡಿದುರುಳಿಸಲು ನಮ್ಮಿಂದ ಸಾಧ್ಯವೇ? ಇನ್ನು ಇಲ್ಲಿರುವುದು ಸರಿಯಲ್ಲ. ಬೆಳಗಾದರೆ ಅವರ ಉರುಬನ್ನು ನಾವು ತಡೆಯಲಾರೆವು ಎಂದನು. ೩೩. ಎಲೈ ದೇವೇಂದ್ರನೇ, ಸರಿಯಾದ ಮಾತನ್ನೇ ಹೇಳಿದೆ. ಇನ್ನು ಇಲ್ಲಿಯೇ ಇದ್ದರೆ ರಾಕ್ಷಸರಿಂದ ತೊಂದರೆಯಾಗದೆ ಇರುವುದಿಲ್ಲ. ಈ ವಸ್ತುವಾಹನಗಳಿಗೆ ಆಸೆಪಡದೆ ಸತ್ಯಲೋಕಕ್ಕೆ ಹೋಗುವುದೇ ಒಳ್ಳೆಯದು ಎಂದು ಗುರುವು ಹೇಳಿದನು. ಅದಕ್ಕೆ ಒಪ್ಪಿ ಇಂದ್ರನೇ ಮೊದಲಾದ ಎಲ್ಲ ದೇವತೆಗಳೂ ತಮ್ಮ ತಮ್ಮ ರಾಣಿವಾಸ ಸಹಿತ ಬ್ರಹ್ಮನ ಬಳಿಗೆ ಬರಲು ಅವರನ್ನು ನೋಡಿ ಬ್ರಹ್ಮನು ಎಲ್ಲರನ್ನೂ ಕರೆದುಕೊಂಡು ವಿಷ್ಣುವಲ್ಲಿಗೆ ಬಂದು ತಾವು ಬಂದ ವಿಷಯವನ್ನು ಬಿನ್ನವಿಸಿಕೊಂಡನು. ೩೪. ಜಲಂಧರನೆಂಬ ರಾಕ್ಷಸನು ಕೊಟ್ಟ ಸ್ವರ್ಗವನ್ನು ಆಕ್ರಮಿಸಿಕೊಂಡು ದೇವತೆಗಳಿದ್ದ ಜಾಗವನ್ನು ಹೊಕ್ಕನು. ಆದುದರಿಂದ ಇವರೆಲ್ಲ ನನ್ನ ಬಳಿಗೆ ಬಂದರು. ಅವರನ್ನೂ ಕರೆದುಕೊಂಡು ನಾನು ನಿನ್ನ

CC-0. Jangamwadi Math Collection. Digitized by eGangotri

ತಿಳಿದಂ ಜಲಂಧರಂ ಹರನಲ್ಲದುಳಿದರಿಂ
ದಳಿವನಲ್ಲೆಂದು ನಿರ್ಧರಿಸಿ ದೂರಂ ಕೇಳ್ದು
ತಳುವುದಲ್ತೆಂದು ಹರಿ ಸಕಲಸನ್ನಾಹಮಾಗಿರಲಿತ್ತಲಸುರೇಂದ್ರನು ೩೪

ಕಾಳೆಗಕೆ ಸಂಹರಿಸಿಕೊಂಡರಸುರರ್ ಮೊರೆವ
ಕಾಳೆಗಳ ಸನ್ನೆಯಿಂ ಪಣ್ಣಿದಿಭ ಹಯ ವರೂ
ಥಾಳಿಗಳ್ ನಡೆದುವಾ ಸಮಯದೊಳ್ ಚರನೊರ್ವನಸುರಪತಿಯೆಡೆಗೆ ಬಂದು
ಪೇಳಲೇನಮರರ್ ಪಲಾಯಸಂಗೈದರೆನೆ
ಕೇಳಿ ಸಂತೋಷದಿಂ ನಿಜಬಲಂವೆರಸಿ ಖಳ
ಪಾಲನಮರಾವತಿಯ ಪುರದ ಸಿರಿಯಂ ನೋಡುತೊಳಪೊಕ್ಕು ಬರುತಿರ್ದನು ೩೫

ತರತರದ ಬಾಗಿಲ್ಗಳೋರಣದ ತೋರಣದ
ಪರಿವಿಡಿಯೊಳೆಸೆವ ಸೌಧಾಳಿಗಳ ಪಾಳಿಗಳ
ಪರಿಖಚಿತ ರತ್ನಗೃಹವೀಥಿಗಳ ವೀಥಿಗಳ ಸಂದಣಿಯ ಪೌರಜನದ
ಚರಿಸುವ ಪುರಂಧ್ರಿಯರ ನೋಟಗಳ ಬೇಟಗಳ
ಪರಿರಂಜಿಪಖಿಳ ಗಜರಾಜಿಗಳ ವಾಜಿಗಳ
ಪರಿಪರಿಯ ಚೆಲ್ವುಗಳ ಸೊಂಪುಗಳ ಪೆಂಪುಗಳ ಸಂಭ್ರಮಂ ಕಣ್ಗೆಸೆದುದು ೩೬

ಬಳಿಗೆ ಬಂದೆ. ಈ ದೇವತೆಗಳನ್ನು ಕಾಪಾಡಬೇಕು ಎನ್ನಲು, ವಿಷ್ಣುವು ಮನಸ್ಸಿನಲ್ಲಿಯೇ ಯೋಚಿಸಿ ಜಲಂಧರನು ಶಿವನಿಂದಲ್ಲದೆ ಬೇರಾರಿಂದಲೂ ಸಾಯುವವನಲ್ಲ ಎಂದು ನಿರ್ಧರಿಸಿ, ಅವರ ದೂರನ್ನು ಕೇಳಿ, ತಡಮಾಡುವುದು ಒಳ್ಳೆಯದಲ್ಲವೆಂದು, ಸಕಲ ಸಿದ್ಧತೆಗಳನ್ನೂ ಮಾಡಿಕೊಂಡಿರಲು, ಇತ್ತ ಜಲಂಧರನು ೩೫. ರಾಕ್ಷಸರು ಸೂರ್ಯೋದಯದಲ್ಲಿ ಎದ್ದು ಯುದ್ಧಕ್ಕೆ ಸನ್ನದ್ಧರಾದರು. ಮೊರೆಯುತ್ತಿರುವ ಕಹಳೆಗಳ ಸಂಜ್ಞೆಯಿಂದ ಸಜ್ಜು ಮಾಡಿದ ಆನೆ, ಕುದುರೆ, ರಥಗಳ ಸಮೂಹಗಳು ಯುದ್ಧಕ್ಕೆ ನಡೆದರು. ಆಗ ಜಲಂಧರನ ಬಳಿಗೆ ಒಬ್ಬ ಸೇವಕನು ಬಂದು, ಏನು ಹೇಳಲಿ, ದೇವತೆಗಳು ಪಲಾಯನ ಮಾಡಿದರು ಎನ್ನಲು ಅದನ್ನು ಕೇಳಿ ಖಳರಾಜನಾದ ಜಲಂಧರನು ಬಹಳ ಸಂತೋಷಗೊಂಡು ತನ್ನ ಸೈನ್ಯದೊಡಗೂಡಿ ಪ್ರವೇಶಿಸಿ ಅಮರಾವತಿಯ ಪಟ್ಟಣದ ಸಂಪತ್ತನ್ನು ನೋಡುತ್ತಾ ಬರುತ್ತಿದ್ದನು. ೩೬. ನಾನಾ ರೀತಿಯ ಅಚ್ಚುಕಟ್ಟಾದ ಬಾಗಿಲುಗಳು ತೋರಣಗಳು, ಕ್ರಮವಾಗಿ ಕಾಣುವ ಸೌಧಗಳ ಸಾಲುಗಳು, ರತ್ನಖಚಿತವಾಗಿದ್ದ ಮನೆಗಳು ಮತ್ತು ಬೀದಿಗಳು, ಬೀದಿಗಳಲ್ಲಿ ಸೇರಿದ್ದ ಪುರಜನರ ಸಂದಣಿ, ಓಡಾಡುತ್ತಿದ್ದ ಸ್ತ್ರೀಯರ ಸುಖಾಪೇಕ್ಷೆಯ ನೋಟಗಳು, ಶೋಭಿಸುವ ಆನೆ ಮತ್ತು ಕುದುರೆಗಳ ಸಮೂಹದ ನಾನಾ ರೀತಿಯ ಸೊಬಗು, ಸೌಂದರ್ಯ ಮತ್ತು ಹೆಚ್ಚಳದ

CC-0. Jangamwadi Math Collection. Digitized by eGangotri

ಆದರದೊಳಾ ಪುರದ ಸೊಬಗ ನೋಡುತೆ ರಾಜ
ಬೀದಿಯೊಳ್ ಬಂದು ಖಳಪತಿ ಸುಧರ್ಮೆಯೊಳತಿವಿ
ನೋದದಿಂ ಕುಳ್ಳಿರ್ದು ಪ್ರಜೆಗಳಂ ಕರೆಸಿ ಕಾಣಿಸಿಕೊಂಡು ಶುಂಭಗಂದು
ಮೋದದಿಂದಂ ಪಟ್ಟಮಂ ಕಟ್ಟಿಯಗ್ನಿ ಮುಖ
ತಾದ ದಿಕ್ಪಾಲಕರ ದುರ್ಗಂಗಳೆಲ್ಲಮಂ
ಭೇದಿಸುತ್ತವಕೆ ಠಾಣೆಯನಿಟ್ಟು ಹರಿಯ ವಸ್ತುಗಳಂ ವಿಚಾರಿಸಿದನು ೩೭

ಚರರಾಗ ಬಿನ್ನವಿಸಿದರ್ ಜೀಯ ಸುರಪತಿಯು
ಪರಮವಸ್ತುಗಳೆಲ್ಲಮಿದೆಕೊ ಚಿಂತಾಮಣಿಯ
ನಿರದೊಯ್ದರೆಂದುಸಿರೆ ಕಲಿಜಲಂಧರನೆತ್ತ ಪೋದನೆಂದುಮ್ಮಳಿಸಲು
ಕರಕಮಂಡಲು ದಂಡ ಕಾವಿ ಕಾಷಾಂಬರಂ
ಪರಿರಂಜಿಸಲ್ ಶುಭ್ರಜೀಮೂತಮಿಳಿಗಿಳಿವ
ಪರಿಯಂತೆ ನಾರದಂ ಕಲಿಜಲಂಧರನ ಮುಂದಿಳಿದನಾಕಾಶದಿಂದೆ ೩೮

ಏಳ್ದು ಸಿಂಹಾಸನದಿನಾ ಮುನಿಯ ಚರಣದೊಳ್
ಬೀಳ್ದೊಡಾಶೀರ್ವಾದಪೂರ್ವಕಂ ನೆಗಪಿ ಖಳ
ರಾಳ್ದನರ್ಧಾಸನದೊಳೊಲ್ದು ಕುಳ್ಳಿರ್ದು ನಿನಗೇತಕೀ ಚಿಂತೆಯೆನಲು

ಸಂಭ್ರಮ ಕಣ್ಣಿಗೆ ಕಾಣಿಸಿತು. ೩೭. ಆದರದಿಂದ ಆ ಪಟ್ಟಣದ ಸೌಂದರ್ಯವನ್ನು ನೋಡುತ್ತ ರಾಜಬೀದಿಯಲ್ಲಿ ಬಂದು ಜಲಂಧರನು ದೇವತೆಗಳ ಸಭೆಯಾದ ಸುಧರ್ಮದಲ್ಲಿ ಸಂತೋಷದಿಂದ ಕುಳಿತು ಪ್ರಜೆಗಳನ್ನು ಕರೆಸಿಕೊಂಡು ಅವರಿಗೆ ಸಂದರ್ಶನವಿತ್ತು, ಶುಂಭನಿಗೆ ಬಹಳ ಆನಂದದಿಂದ ಪಟ್ಟವನ್ನು ಕಟ್ಟಿ, ಅಗ್ನಿ ಮುಂತಾದ ದಿಕ್ಪಾಲಕರ ದುರ್ಗಗಳನ್ನು ಒಡೆಯುತ್ತ ಅವಕ್ಕೆ ಕಾವಲು ಹಾಕಿ, ದೇವೇಂದ್ರನ ವಸ್ತುಗಳನ್ನು ಕುರಿತು ವಿಚಾರಿಸಿದನು. ೩೮. ಆಗ ಸೇವಕರು, ಸ್ವಾಮಿಯೆ, ಇದೊ ದೇವೇಂದ್ರನು ಎಲ್ಲ ಉತ್ತಮ ವಸ್ತುಗಳನ್ನೂ ಬಿಟ್ಟುಹೋಗಿದ್ದಾನೆ. ಆದರೆ ಚಿಂತಾಮಣಿಯನ್ನು ಮಾತ್ರ ತೆಗೆದುಕೊಂಡು ಹೋಗಿದ್ದಾನೆ ಎಂದು ಹೇಳಲು ಆಗ ಶೂರನಾದ ಜಲಂಧರನು ಅವನು (ಇಂದ್ರನು) ಎಲ್ಲಿ ಹೋದನು ಎಂದು ಕೋಪಾವಿಷ್ಟನಾಗಲು, ಆಗ ಕೈಯಲ್ಲಿ ಕಮಂಡಲ, ದಂಡ, ಕಾವಿ ಮತ್ತು ಕಾಷಾಯಾಂಬರದಿಂದ ಶೋಭಿಸುತ್ತ ನಾರದನು ಶುಭ್ರವಾದ ಮೋಡವು ಭೂಮಿಗೆ ಇಳಿಯುವ ಹಾಗೆ ಕಲಿ ಜಲಂಧರನ ಮುಂದೆ ಆಕಾಶದಿಂದ ಇಳಿದನು. ೩೯. ಜಲಂಧರನು ಸಿಂಹಾಸನದಿಂದ ಮೇಲೆದ್ದು ಋಷಿಯ ಪಾದಕ್ಕೆ ನಮಸ್ಕರಿಸಲು ನಾರದನು ಅವನನ್ನು ಆಶೀರ್ವಾದಪೂರ್ವಕವಾಗಿ ಮೇಲಕ್ಕೆತ್ತಿ. ರಾಕ್ಷಸರಾಜನ ಅರ್ಧಾಸನದಲ್ಲಿ ಕುಳಿತು ನಿನಗೇತಕ್ಕೆ ಈ ಚಿಂತೆ ಎಂದು ವಿಚಾರಿಸಿದನು. ಜಲಂಧರನು ನೀವು

CC-0. Jangamwadi Math Collection. Digitized by eGangotri

ಕೇಳ್ದುದಿಲ್ಲವೆ ದಿವಿಜಮಣಿವೆರಸಿ ಸುರಪಂ ತೆ
ರಳ್ದನಾವಲ್ಲಿಗೆಂದರಿಯೆಮೆನೆ ನಾರದಂ
ಪೇಳ್ದನಾ ವೈಕುಂಠದೊಳಗಿಂದ್ರಮುಖ್ಯ ಸುರನಿವಹಮಂ ಕಂಡೆನೆಂದು ೩೯

ಆ ನುಡಿಗೆ ಗುಡುಗುಡಿಸುತಿಂದ್ರನಂ ಹಿಂದಿಕ್ಕಿ
ತಾನೆಮ್ಮ ಸೆಣಸಿ ಬಾಳ್ದಪನೆ ಹರಿಯೆಂದೊಡನೆ
ದಾನವಾಧೀಶ್ವರಂ ಕೂಡು ಮಾಡಿಸಿ ತೆರಳ್ದಂ ಮಹಾವೇಗದಿಂದೆ
ಸೇನೆ ನಡೆದುದು ವಿಷ್ಣುಲೋಕಮಾರ್ಗಂಬಿಡದ
ದೇನೆಂಬೆನೈ ರಾಮ ಸಕಲಸನ್ನಾಹದಿಂ
ದಾನವಾರಿಯ ಪುರಸಮೀಪಕ್ಕೆ ಬಂದನದನೇನೆಂಬೆನಚ್ಚರಿಯನು ೪೦

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನವರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೧

## ಇಪ್ಪತ್ತನಾಲ್ಕನೆಯ ಸಂಧಿ ಸಂಪೂರ್ಣ

ಕೇಳಲಿಲ್ಲವೆ ? ಚಿಂತಾಮಣಿಯೊಂದಿಗೆ ದೇವೇಂದ್ರನು ಹೊರಟುಹೋಗಿದ್ದಾನೆ. ಎಲ್ಲಿಗೆ ಹೋದನೆಂದು ತಿಳಿಯದು ಎಂದನು. ಅದಕ್ಕೆ ನಾರದನು ವೈಕುಂಠದಲ್ಲಿ ಇಂದ್ರನೇ ಮುಂತಾದ ದೇವತಾಸಮೂಹವನ್ನು ನೋಡಿದೆನೆಂದು ಹೇಳಿದನು. ೪೦. ಆ ಮಾತಿಗೆ ಜಲಂಧರನು ಗರ್ಜಿಸುತ್ತ, ದೇವೇಂದ್ರನನ್ನು ಹಿಂದಿಟ್ಟುಕೊಂಡು ನಮ್ಮೊಡನೆ ಹೋರಾಡಿ ವಿಷ್ಣುವು ಬಾಳುತ್ತಾನೆಯೆ ? ಎಂದು ಹೇಳಿ ತಕ್ಷಣ ತನ್ನ ಸೇನೆಯನ್ನು ಹೊರಡಿಸಿದನು. ಸೈನ್ಯವು ಬಹಳ ವೇಗದಿಂದ ವಿಷ್ಣುಲೋಕದ ಮಾರ್ಗವಾಗಿ ನಡೆಯಿತು, ಏನು ಹೇಳಲಯ್ಯ, ಸಿದ್ಧರಾಮ— ಎಲ್ಲ ರೀತಿಯಲ್ಲಿಯೂ ಸಜ್ಜು ಮಾಡಿಕೊಂಡ ರಾಕ್ಷಸನು ವಿಷ್ಣುವಿನ ಪಟ್ಟಣದ ಸಮೀಪಕ್ಕೆ ಬಂದನು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೪೧. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿ ದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವ ತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತನಾಲ್ಕನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತೈದನೆಯ ಸಂಧಿ

ಸೂಚನೆ : ವರಜಲಂಧರನೊಡನೆ ಹರಿಯಜೇಂದ್ರಾದ್ಯರುಂ
ಧುರದೊಳಿದಿರಾಗಲವರೆಲ್ಲರಂ ತನ್ನ ನಿಜ
ಪುರಕೆ ಪಿಡಿತಂದು ಸೆರೆಯಿಟ್ಟಖಿಳಲೋಕಂಗಳಂ ಪಾಲಿಸುತ್ತಿರ್ದನು

ಗರಳಗಳ ಪರಮಬಳ ವರಸೋಮಧರ ಭೀಮ
ದುರಿತಹರ ಶರಣಪರ ಗಿರಿಚಾಪ ಹರತಾಪ
ಮುರಮಥನ ನುತಕಥನ ಸುರರಕ್ಷ ನತಪಕ್ಷ ಖಲದಕ್ಷಯಾಗಶಿಕ್ಷ
ಪುರವಿಜಯ ನುತವಿಜಯ ಹರಿಭೂಷ ಜಿತದೋಷ
ಗಿರಿಜೇಶ ಭವಪಾಶಹರ ಹರ ವಿರೂಪಾಕ್ಷ ನಿರಪೇಕ್ಷ ಸಲಹೆಮ್ಮನು ೧

ಕೇಳ್ದನೀ ವಾರ್ತೆಯಂ ಹರಿ ಮಹಾಕೋಪಮಂ
ತಾಳ್ದನಂದಖಿಳಸೇನಾತತಿಗೆ ಪಯಣಮಂ
ಪೇಳ್ದನಾಗಳ್ ಸಿಂಹಪೀಠದಿಂ ಹರಿಯಜೇಂದ್ರಾದಿಗಳ ಗಡಣದಿಂದೆ
ಏಳ್ದು ನಡೆದಂ ಸಮರಭರನಾಗಿ ಬಳಿಯೊಳ್ ತೆ
ರಳ್ದುದಿಭ ಹಯ ರಥ ಪದಾತಿ ಬಹುಕೋಟಿ ಸುರ
ರಾಳ್ದನ ಭಟಪ್ರತತಿ ಬೊಮ್ಮನ ಚತುರ್ಬಲಂ ಸಂಗರಕೆ ಸಂಭ್ರಮದೊಳು ೨

ಸೂಚನೆ : ಜಲಂಧರನ ಜೊತೆಯಲ್ಲಿ ವಿಷ್ಣು, ಬ್ರಹ್ಮ, ಇಂದ್ರ ಮೊದಲಾದವರು ಯುದ್ಧದಲ್ಲಿ ಎದುರಾಗಲು ಅವರೆಲ್ಲರನ್ನೂ ತನ್ನ ರಾಜಧಾನಿಗೆ ಹಿಡಿದುತಂದು ಸೆರೆಯಿಟ್ಟು ಎಲ್ಲ ಲೋಕಗಳನ್ನೂ ಆಳುತ್ತಿದ್ದನು. ೧. ವಿಷಕಂಠ, ಅತ್ಯಂತ ಬಲಶಾಲಿ, ಚಂದ್ರಶೇಖರ, ಭೀಮ (ಶಿವ), ಪಾಪವನ್ನು ಹರಿಸುವವನು, ಶರಣರ ಪಕ್ಷಪಾತಿ, ಪರ್ವತವನ್ನೇ ಬಾಣವಾಗಿ ಉಳ್ಳವ, ತಾಪವನ್ನು ಪರಿಹರಿಸುವವನು, ವಿಷ್ಣುವಿನಿಂದ ಹೊಗಳಿಸಿಕೊಳ್ಳುವವನು, ದೇವತೆಗಳನ್ನು ರಕ್ಷಿಸುವವನು, ಶರಣಾಗತರ ಪಕ್ಷಪಾತಿ, ದುಷ್ಟನಾದ ದಕ್ಷನ ಯಾಗವನ್ನು ನಾಶಮಾಡಿದವನು, ತ್ರಿಪುರವಿಜಯ, ಸ್ತುತ್ಯರ್ಹವಾದ ವಿಜಯವುಳ್ಳವನು. ಸರ್ಪಭೂಷಣ, ದೋಷವನ್ನು ಗೆದ್ದವನು, ಆನೆಯ ಚರ್ಮವನ್ನು ಧರಿಸಿದವನು, ದುಷ್ಟರನ್ನು ನಾಶಮಾಡುವವನು, ಮೃದುವಾಗಿ ಮಾತನಾಡುವವನು, ಶಿವಗಣಗಳನ್ನು ಪೋಷಿಸುವವನು, ಗಿರಿಜಾಪತಿ, ಸಂಸಾರಬಂಧನವನ್ನು ನಾಶಮಾಡುವವನು, ಶಿವ, ವಿರೂಪಾಕ್ಷ, ನಿರಪೇಕ್ಷನೆ ನಮ್ಮನ್ನು ಕಾಪಾಡು. ೨. ಈ ಮಾತನ್ನು ವಿಷ್ಣುವು ಕೇಳಿ ಮಹಾಕೋಪವನ್ನು ತಾಳಿದನು. ಸಮಸ್ತ ಸೇನಾಸಮೂಹಕ್ಕೂ ಪ್ರಯಾಣ ಮಾಡಲು ಅಪ್ಪಣೆ ಮಾಡಿ, ದೇವೇಂದ್ರ ಮತ್ತು ಬ್ರಹ್ಮರುಗಳ ಸಮೇತ ಸಿಂಹಾಸನದಿಂದೆದ್ದು ಯುದ್ಧದಲ್ಲಿ ಉತ್ಸಾಹಗೊಂಡವನಾಗಿ ನಡೆದನು. ಅವರೊಡನೆಯೆ ಆನೆ,



CC-0. Jangamwadi Math Collection. Digitized by eGangotri

ಆನೆಗಳಸಂಖ್ಯಾತಮೈದಿದುವು ತುರಗಸಂ
ತಾನಂಗಳಗಣಿತಂ ನಡೆದುವಿನಿಬರ ಮಹಾ
ಸೇನೆಗಳ್ ಗಮಿಸಿದುವನೇಕಂಗಳನುಪಮ ವರೂಥಾಳಿ ಕವಲಿತಂದು
ಏನೆಂಬೆನೀ ಹರಿಯ ಸಮರಭರಮಂ ಕೇಳ್ದು
ದಾನವಾಧೀಶ್ವರಂ ರೋಷಭೀಷಣನಾಗಿ
ತಾನಿರದೆ ವೈಕುಂಠಪುರಕತಿಸಮೀಪದೊಳ್ ಬರುತಿರ್ದನಾ ಕ್ಷಣದೊಳು ೩

ಸಂಧಿಸಿದುದಿರ್ಬಲಂ ಘನಶರಧಿಶರಧಿಗಳ್
ಸಂಧಿಸುವ ಮಾಳ್ಕೆಯಿಂ ಪಟುತರದ ಗಿರಿಗಿರಿಗ
ಳೊಂದಾಗುವಂತುಭಯ ಸೈನಿಕದ ಚೂಣಿಗರ್ ತಾಗಿದರ್ ಭರವಸದೊಳು
ಒಂದೆಸೆಯೊಳೆಚ್ಚಾಡಿದರ್ ಬಿಲ್ಲವರ್ ಮತ್ತ
ಮೊಂದೆಸೆಯೊಳಿರಿದಾಡಿದರ್ ಸಬಳದವರಿಂತು
ಮುಂದುವರಿದಿರಿದಾಡಿ ಮಡಿವುತಿರ್ದರ್ ಪೇಳಲೇನಂದಿನಾಹವವನು ೪

ಕುದುರೆಗಳ್ ಕುದುರೆಗಳೊಳೊತ್ತಿದುವು ಮುತ್ತಿದುವು
ಮದಗಜವನಾನೆಗಳ್ ತಾಂಕಿದುವು ನೂಂಕಿದುವು
ಪದಚರರ್ ಪದಚರರೊಳುರುಬಿದರ್ ತರುಬಿದರ್ ನಾನಾಯುಧಂಗಳಿಂದೆ

ಕುದುರೆ, ರಥ, ಕಾಲಾಳುಗಳೂ ಅನೇಕ ಕೋಟಿ ಸಂಖ್ಯೆಯಲ್ಲಿ ದೇವೇಂದ್ರ ಮತ್ತು ಬ್ರಹ್ಮರುಗಳ ಚತುರ್ಬಲವೂ ಸಂಭ್ರಮದಿಂದ ಯುದ್ಧಕ್ಕೆ ಹೊರಟುವು. ೩. ಅಸಂಖ್ಯಾತ ವಾದ ಆನೆಗಳು ಹೊರಟವು, ಅಗಣಿತವಾದ ಕುದುರೆಗಳ ಸಮೂಹ ಹೊರಟಿತು. ಹೀಗೆ ಇವರೆಲ್ಲರ ದೊಡ್ಡ ಸೈನ್ಯವೂ ಹೊರಟಿತು, ಹೋಲಿಕೆಗಸಾಧ್ಯವಾದ ರಥಗಳ ಸಮೂಹ ಮುಂದೆ ಸರಿಯಿತು. ವಿಷ್ಣುವಿನ ಯುದ್ಧೋತ್ಸಾಹವನ್ನು ಏನೆಂದು ಹೇಳಲಿ ? ಇದನ್ನು ಕೇಳಿ ಜಲಂಧರನು ರೋಷಭೀಷಣನಾಗಿ ವೈಕುಂಠಪಟ್ಟಣದ ತೀರ ಸಮೀಪಕ್ಕೆ ಬರುತ್ತಿದ್ದನು. ೪. ಮಹಾ ಸಮುದ್ರಗಳು ಒಂದನ್ನೊಂದು ಸಂಧಿಸುವಂತೆ ಎರಡು ಸೈನ್ಯವೂ ಸಂಧಿಸಿದುವು. ದೊಡ್ಡದೊಡ್ಡ ಪರ್ವತಗಳು ಒಂದಾಗಿ ಸೇರುವಂತೆ ಎರಡು ಸೈನ್ಯದ ಮುಂಚೂಣಿಯವರೂ ಒಂದೆಡೆ ಭರವಸೆಯಿಂದ ಮೇಲೆ ಬಿದ್ದರು. ಒಂದು ಕಡೆಯಲ್ಲಿ ಬಿಲ್ಲಾಳ್ಗಳು ಒಬ್ಬರ ಮೇಲೊಬ್ಬರು ಬಾಣಪ್ರಯೋಗ ಮಾಡಿದರು. ಮತ್ತೊಂದು ಕಡೆ ಈಟಿಯುಳ್ಳವರು ಮುಂದೆ ಹೋಗಿ ಇರಿದಾಡಿ ಸಾಯುತ್ತಿದ್ದರು. ಆ ದಿನದ ಯುದ್ಧದ ಸಂಗತಿಯನ್ನು ಏನೆಂದು ಹೇಳುವುದು ? ೫ ಕುದುರೆಗಳನ್ನು ಕುದುರೆಗಳು ಒತ್ತಿ ಮುತ್ತಿದುವು. ಮದಿಸಿದ ಆನೆಗಳನ್ನು ಆನೆಗಳು ತಾಗಿ, ನೂಕಿದುವು. ಕಾಲಾಳ್ಗಳು ಕಾಲಾಳ್ಗಳ ಜೊತೆಯಲ್ಲಿ ಮೇಲೆಬಿದ್ದು ನಾನಾ ಆಯುಧಗಳಿಂದ ಎದುರಿಸಿದರು. ರಥಿಕರು ಪರಾಕ್ರಮದಿಂದ

CC-0. Jangamwadi Math Collection. Digitized by eGangotri

ಅದಟಿನಿಂ ರಥಿಕರೆಚ್ಚಾಡಿದರ್ ಮಾಡಿದರ್
ಸದಮದದ ಸಮರಮಂ ರಾವುತರ್ ಮಾವುತರ್
ಸದೆದಾಡಿದರ್ ಹತಾಪತಿಗಳಿಂ ಖತಿಗಳಿಂದುಭಯಬಲವೇನೆಂಬೆನು ೫

ಆರಿವರ್ ದಿವಿಜನಾಯಕರೊ ಶಿವಶಿವ ಮಹಾ
ವೀರರ್ಕೈ ತಪ್ಪಲ್ಲ ತಮ್ಮ ನಗರದ ಸೂಳೆ
ಗೇರಿಯೊಳ್ ಪಂಥಮಂ ನುಡಿದು ನಿಲ್ಲದೆ ಬಂದ ಮೂಗುಮಾರಿಗಳಿವರಲಾ
ವಾರಿಜಾಕ್ಷನೆ ನಿಮ್ಮ ಹಿಂದಿಕ್ಕಿಕೊಂಬಂ ವಿ
ಕಾರಿಗಳ ಕರುಳ್ಗಳಂ ತೆಗೆಯೆನುತೆ ವಿವಿಧ ಪ್ರ
ಹಾರದಿಂ ಮೂದಲಿಸಿ ಸವರಿದರ್ ದಿವಿಜರಂ ದನುಜರತಿಕೋಪದಿಂದೆ ೬

ಕಳ್ಗುಡಿಹುತನದಿಂದೆ ಬಗುಳ್ದೊಡೆಲವೆಲವೊ ಕ
ಟ್ಬಾಳ್ಗಳೇ ಕಾಳೆಗಕೆ ನೀವೀಗ ಪೇರೊಡಲ.
ಸೀಳ್ಗಳಂ ರಣಭೂತವೇತಾಳಸಂಕುಲಕೆ ಬಡಿಸುವೆವು ನಿಲ್ಲಿಮೆನುತೆ
ಬಾಳ್ಗಳಂ ಝಳಪಿಸುತೆ ಸುರಭಟರ್ ದನುಜರು
ಪ್ಪೋಳ್ಗಳೆಮಕೊಂಡು ಬರುತಿರೆ ಕಂಡು ಪದಹತಿಯು
ದ್ದೂಳ್ಗಳಿನನಂ ಮುಸುಕೆ ಶುಂಭ ಧೂಮ್ರಾಕ್ಷಾದಿ ಖಳಭಟರ್ ಮುಂಕೊಂಡರು ೭

ಬಾಣಗಳನ್ನು ಪ್ರಯೋಗಿಸುತ್ತ ಹೋರಾಡಿದರು. ರಾಹುತರು ಮದೋನ್ಮತ್ತರಾಗಿ ಯುದ್ಧಮಾಡಿದರು. ಮಾವುತರು ಕೈಕೈ ಮಿಲಾಯಿಸಿ ಬಡಿದಾಡಿದರು. ಹೀಗೆ ಎರಡು ಸೈನ್ಯವೂ ಬಹುರೋಷಾವೇಶದಿಂದ ಯುದ್ಧಮಾಡಿತು. ೬. ಯಾರಿವರು ದೇವತೆಗಳ ಒಡೆಯರೋ ! ಶಿವಶಿವಾ ! ಇವರು ಖಂಡಿತವಾಗಿಯೂ ಮಹಾವೀರರೇ ಹೌದು. ತಮ್ಮ ಪಟ್ಟಣದಲ್ಲಿರುವ ಸೂಳೆಗೇರಿಯಲ್ಲಿ ಪ್ರತಿಜ್ಞೆಯ ಮಾತನ್ನಾಡಿ ಬಂದ ಮೂಗುಮಾರಿ ಗಳಿವರಲ್ಲವೆ ? ನಿಮ್ಮನ್ನು ರಕ್ಷಿಸುವವನೇ ವಿಷ್ಣು ! ಈ ವಿಕಾರಿಗಳ ಕರುಳುಗಳನ್ನು ಹೊರಕ್ಕೆ ತೆಗೆ ಎನ್ನುತ್ತ ನಾನಾ ರೀತಿಯ ಹೊಡೆತದಿಂದ ಮೂದಲಿಸಿ ದೇವತೆಗಳನ್ನು ರಾಕ್ಷಸರು ಬಹಳ ಕೋಪದಿಂದ ತರಿದರು. ೭. ಎಲವೆಲವೊ ಹೆಂಡ ಕುಡಿದು ಮಾತ ನಾಡಿದ ಮಾತ್ರಕ್ಕೆ ಯುದ್ಧದಲ್ಲಿ ನೀವು ಪರಾಕ್ರಮಿಗಳೆನಿಸಿಕೊಳ್ಳುತ್ತೀರೊ ? ನಿಮ್ಮ ದೊಡ್ಡ ಹೊಟ್ಟೆಯ ಸೀಳುಗಳನ್ನು ರಣಭೂತ ಭೇತಾಳ ಸಮೂಹಕ್ಕೆ ಬಡಿಸುತ್ತೇವೆ. ನಿಲ್ಲಿ ಎನ್ನುತ್ತಾ, ಕತ್ತಿಗಳನ್ನು ಝಳಪಿಸುತ್ತಾ ದೇವಸೈನಿಕರು ರಾಕ್ಷಸರನ್ನು ಸೀಳಿ ಹಾಕುತ್ತಾ ಬರುತ್ತಿರಲು ಪಾದಘಾತದಿಂದ ಮೇಲೆದ್ದ ಧೂಳು ಸೂರ್ಯನನ್ನು ಮರೆ ಮಾಡಲು, ಅದನ್ನು ನೋಡಿ ಶುಂಭ, ಧೂಮ್ರಾಕ್ಷ ಮೊದಲಾದ ರಾಕ್ಷಸಭಟರು

CC-0. Jangamwadi Math Collection. Digitized by eGangotri

ರಾಕ್ಷಸರ ಸೇನೆಯೊಳ್ ದೊರೆದೊರೆಗಳೈದುವುದ
ನೀಕ್ಷಿಸುತೆ ದಿವಿಜನಾಯಕರತುಳರೋಷತಾ
ಮ್ರಾಕ್ಷರಾ ಜೋಣಗರ ಪಿಂದಿಕ್ಕಿ ಖಳಪತಿಗಳಂ ತಡೆದು ಬೊಬ್ಬಿರಿವುತೆ
ಅಕ್ಷಿಗಚ್ಚರಿಯೆಂದೆನಲ್ಕಮಾಹವಲಕ್ಷ್ಯ
ಲಕ್ಷಣ ಮಹಾಸ್ತ್ರಂಗಳಿಂದೆಸೆವುತಿರಲಾಗ
ಲಕ್ಷೀಣಸತ್ತ್ವರೆಚ್ಚಾಡಿದರ್ ದೇವಾಸುರರ್ ಘೋರಸಂಗರದೊಳು ೮

ತಡೆವರುರುಬುವರೊರ್ಮೆ ಸೈರಿಸದೆ ಪಿಂದಕಡಿ
ಯಿಡುವರೋರೊರ್ಮೆಯೊತ್ತುವರೊರ್ಮೆ ರಿಪುಗಳಂ
ಕಡಿವರೋರೊರ್ಮೆ ತಾಗುವರೊರ್ಮೆ ತವಕಿಸುವರೊರ್ಮೆ ಸೈರಿಸುವರೊರ್ಮೆ
ಬಿಡದೆ ಜರೆವರದೊರ್ಮೆ ಬಿಂಕದಿಂ ಮಸಗಿ ಬೊ
ಬ್ಬಿಡುವರೋರೊರ್ಮೆ ಬೀಗುವರೊರ್ಮೆ ಪಂಥವಂ
ನುಡಿವರೋರೊರ್ಮೆ ಖತಿಮಸಗಿ ಕಾದುವರೊರ್ಮೆ ದೇವಾಸುರರ್ ಧುರದೊಳು ೯

ಕರದ ಖಂಡೆಯದ ಭೀಕರಭಟರ್ ಮೂದಲಿಸಿ
ಕರೆಕರೆದು ಪಗೆಗಳಂ ಕರಚಮತ್ಕಾರದಿಂ
ಕರಮುರುಬಿ ತರುಬಿ ಪೊಕ್ಕರವರಿಸದಿರಿದಿರಿದು ಕರಚರಣವಂ ಖಂಡಿಸೆ

ಮುಂದಕ್ಕೆ ಬಂದರು, ೮. ರಾಕ್ಷಸರ ಸೈನ್ಯದಲ್ಲಿ ದೊಡ್ಡದೊಡ್ಡ ನಾಯಕರು ಮುಂದೆ ಬರುವುದನ್ನು ದೇವನಾಯಕರು ನೋಡಿ, ಅತಿಯಾದ ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಮುಂಭಾಗದಲ್ಲಿದ್ದ ಸೈನಿಕರನ್ನು ಅವರು ಹಿಂದಕ್ಕೆ ಹಾಕಿ, ರಾಕ್ಷಸನಾಯಕರನ್ನು ತಡೆದು ಆರ್ಭಟಿಸಿದರು. ನೋಡಲು ಆಶ್ಚರ್ಯವೆನ್ನುವಂತೆ ಯುದ್ಧದಲ್ಲಿ ಮಹಾ ಅಸ್ತ್ರ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ತಮ್ಮ ಸತ್ವವನ್ನು ಕಳೆದುಕೊಳ್ಳದ ದೇವಾಸುರರು ಭಯಂಕರವಾದ ಯುದ್ಧದಲ್ಲಿ ಹೋರಾಡುತ್ತಿದ್ದರು. ೯. ಯುದ್ಧದಲ್ಲಿ ದೇವದಾನವರು ಎದುರಾಳಿಗಳನ್ನು ತಡೆಯುವರು, ಮೇಲೆ ಬೀಳುವರು, ಒಂದೊಂದು ಬಾರಿ ತಡೆಯಲಾರದೆ ಹಿಂದಕ್ಕೆ ಬರುವರು. ಶತ್ರುಗಳನ್ನು ತಾಗುವರು. ಒಮ್ಮೊಮ್ಮೆ ಕಡಿದುಹಾಕುವರು, ಎದುರಿಸುವರು, ಮತ್ತೊಮ್ಮೆ ಮೇಲೆ ಬೀಳಲು ಆತುರಪಡುವರು, ಎದುರಾಳಿಗಳ ಹೊಡೆತವನ್ನು ಸಹಿಸುವರು, ಒಂದೇಸಮನೆ ಮೂದಲಿಸುವರು, ಒಮ್ಮೆ ಬೀಗುತ್ತ ಮೇಲೆ ಬಿದ್ದು ಆರ್ಭಟಿಸುವರು, ಉಬ್ಬುವರು, ಶಪಥ ಮಾಡುವರು, ಬಹಳ ಕೋಪದಿಂದ ಹೋರಾಡುವರು. ೧೦. ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದ ಭಯಂಕರರಾದ ಸೈನಿಕರು ಹಂಗಿಸಿ, ಯುದ್ಧಕ್ಕೆ ಕರೆಯುತ್ತ ಶತ್ರುಗಳನ್ನು ಕೈಚಳಕದಿಂದ ಭೀಕರವಾಗಿ ಪ್ರತಿಭಟಿಸಿ ಮೇಲೆ ಬಿದ್ದು ಅಲಕ್ಷಿಸದೆ ಇರಿಯುತ್ತ ಕೈಕಾಲುಗಳನ್ನು ಕತ್ತರಿಸಲು ಪ್ರಾಣದಾಸೆಯನ್ನು

CC-0. Jangamwadi Math Collection. Digitized by eGangotri

ಹರಣದಾಸೆಯನುಳಿದು ಪರಿದೋಡುವಹಿತವೋ
ಹರದೊಳಗೆ ಬೇಹಬೇಹರರ್ಕೈದೆ ಸೆಣಸಿ ಸಂ
ಹರಣಕಾಲದ ಕಾಲಹರನ ಕೋಪದೊಳಿರಿವ ಹರಹನೇಂಬಣ್ಣಿಸುವೆನು ೧೦

ಇರಿವ ದನಿ ತರಿವ ಕೋಳಾಹಳಂ ಪಗೆಗಳಂ
ಮುರಿವ ಬೊಬ್ಬಾಟವೊತ್ತುವ ಕಡುಪು ಮೂದಲೆಗೆ
ಮುರುಕಿಸುವ ಬುದ್ಧಿ ವಂಚಿಪ ಲಾಗು ತವಕಿಸುವ ಚಿತ್ತವಾರ್ಭಟಿಸುವದಟು
ಮೆರೆದುದಮರಾಸುರರ ಥಟ್ಟಿನೊಳ್ ಬಿಡದೆ ಕುರಿ
ದರಿವ ಪೆಣಗಳ ಮೂಳೆಗಳ ಬಸೆಯು ಮಿದುಳ ಜುರು
ಜುರಿಪ ಪೊಸನೆತ್ತರಿನ ಪೊಳೆಯನಲ್ಲದೆ ಕಾಣೆನಾ ರಣಾಂಗಣದೆಡೆಯೊಳು ೧೧

ಕೋಟೆಯೊಳಗಿರ್ದು ಕಾದುವೊಡಂಜಿ ನಡುವಿರುಳ್
ಕೋಟಲೆಯೊಳೋಡಿದವರಿದಿರಾಗಿ ಖಳರ ಪೊಯ್
ದಾಟವುಂ ಸೈರಿಸದೆ ಬೆಂಗೊಟ್ಟರಮರರಿಂದ್ರಂ ಕಾಣುತೆಮ್ಮ ಭಟರ
ಓಟಮುಂ ಕಂಡಿರೇ ಕವಿವ ದಾನವರ ಬೊ
ಬ್ಬಾಟಮುಂ ಕಂಡಿರೇ ನೀವೆನಲ್ ಮಾಧವಂ
ತೋಟಿಯುಂ ದನುಜೇಂದ್ರನೊಡನೆಸಗಬೇಕೆನುತೆ ನೂಕಿದಂ ಮಣಿರಥವನು ೧೨

ತೊರೆದು ಚೆಲ್ಲಾಪಿಲ್ಲಿಯಾಗಿ ಓಡುತ್ತಿರುವ ಶತ್ರುಸೈನ್ಯದಲ್ಲಿ, ಗುಪ್ತಸೈನಿಕರು ತಮ್ಮೊಳಗೇ ಹೋರಾಡಿ ಶಿವನ ರೀತಿಯಲ್ಲಿ ಸಿಟ್ಟುಗೊಂಡು ಇರಿಯುವ ವ್ಯಾಪ್ತಿಯನ್ನು ಏನೆಂದು ವರ್ಣಿಸಲಿ ? ೧೧. ತಿವಿಯುವ ಶಬ್ದ, ತರಿಯುವ ಕೋಲಾಹಲ, ಶತ್ರುಗಳನ್ನು ಮುರಿದುಹಾಕುವ ಆರ್ಭಟ, ಪ್ರತಿಭಟಿಸುವ ಸಾಮರ್ಥ್ಯ, ಅಣಕಕ್ಕೆ ತೊಡಗುವ ಕೊಂಕುಬುದ್ಧಿ, ವಂಚಿಸುವ ಕೌಶಲ್ಯ, ತವಕಗೊಳ್ಳುವ ಮನಸ್ಸು, ಆರ್ಭಟಿಸುವ ಸಾಮರ್ಥ್ಯ, ಈ ಎಲ್ಲ ಗುಣಗಳೂ ದೇವ–ದಾನವರ ಸೈನ್ಯದಲ್ಲಿ ಕಾಣುತ್ತಿದ್ದುವು. ಕೊಲೆಗೀಡಾದ ಹೆಣಗಳ ಮೂಳೆಗಳ ಕೊಬ್ಬು ಮಿದುಳು, ಜುರುಜುರು ಹರಿಯುವ ಹೊಸ ರಕ್ತದ ಹೊಳೆಯನ್ನಲ್ಲದೆ ಆ ಯುದ್ಧರಂಗದಲ್ಲಿ ಇನ್ನೇನನ್ನೂ ಕಾಣಲಾಗುವುದಿಲ್ಲ. ೧೨. ಕೋಟೆಯ ಒಳಗೇ ಇದ್ದು ಯುದ್ಧ ಮಾಡಲು ಹೆದರಿ, ನಡುರಾತ್ರಿಯಲ್ಲಿ ಕಷ್ಟದಿಂದ ಓಡಿಹೋದ ದೇವತೆಗಳು ಪ್ರತಿಭಟಿಸಿ ರಾಕ್ಷಸರ ಹೊಡೆತವನ್ನು ತಾಳದೆ ಹಿಂದೆ ಸರಿದರು. ಅದನ್ನು ನೋಡಿದ ಇಂದ್ರನು ನಮ್ಮ ಸೈನಿಕರು ಓಡುತ್ತಿರುವುದನ್ನು ನೋಡಿದಿರಾ ? ಮುತ್ತುತ್ತಿರುವ ರಾಕ್ಷಸರ ಕೂಗಾಟವನ್ನು ನೋಡಿದಿರಾ ? ಎನ್ನಲು ವಿಷ್ಣುವು ಜಲಂಧರನ ಜೊತೆಯಲ್ಲಿ ಯುದ್ಧ ಮಾಡಬೇಕೆನ್ನುತ್ತ

CC-0. Jangamwadi Math Collection. Digitized by eGangotri

ಬಿಡುಗಣ್ಣರಾಳ್ಗಳಂ ಪಿಂತಿಕ್ಕಿ ದನುಜಾರಿ
ನಡೆವುದಂ ಕಂಡು ಕಾದುವ ದೈತ್ಯನಾಯಕರ್
ಸಡೆದೋಡಿ ಕಲಿಜಲಂಧರನ ಮರೆಯಂ ಪೊಗಲ್ಕವನಾಕ್ಷಣಂ ಕನಲ್ದು
ನುಡಿದನೀತಂ ವಿಷ್ಣುವೇ ಎಮ್ಮೊಳಿಂದು ತಾಂ
ತೊಡರಲ್ಕೆತರ್ಪನೋ ಲೇಸೆನುತೆ ಚಾಪಮಂ
ಮಿಡಿದು ರಥಮಂ ನಡಸೆ ಶಾರ್ಙ್ಗಮಂ ಜೇಗೈದು ಕಮಲಾಕ್ಷನಿಂತೆಂದನು ೧೩

ಈಸುದಿನಮೆಮ್ಮೊಡನೆ ಕಾಳೆಗದೊಳಿದಿರಾಗಿ
ಗಾಸಿಯಾಗದ ದೈತ್ಯರಿಲ್ಲ ದನುಜಾರಿಯೆಂ
ಬೀ ಸಘಾಟದ ಪೆಸರನರಿದು ನೀಂ ಬಂದುದಜ್ಞಾನಕೃತಕವೊ ಸಹಜವೋ
ಹೂಸಕವನಾಡದಿರ್ ನಿನ್ನ ಪೆಸರಾವುದಾ
ವಾಸವಾವೆಡೆ ಪೇಳ್ವುದೆನೆ ದನುಜಪತಿ ಮಂದ
ಹಾಸದಿಂ ನುಡಿದನಬುಜಾಯತಾಂಬಕನೆಂದ ಮಾತಿಗಿದಿರುತ್ತರವನು ೧೪

ದಾನವಾರಾತಿಯೆಂದೆಂಬ ಗುಣನಾಮದಿಂ
ನೀನಿರ್ಪುದಂ ಕೇಳ್ದದಂ ಬಿಡಿಪ ಭರವಸದೆ
ನಾನೈದಿದೆಂ ಜಲಂಧರನೆಂಬುದೆನ್ನ ಪೆಸರಾ ಸಂಜ್ಞೆ ಮತ್ಪತ್ತನಂ

ತನ್ನ ರತ್ನಖಚಿತವಾದ ರಥವನ್ನು ಮುಂದಕ್ಕೆ ನಡೆಸಿದನು. ೧೩. ದೇವಸೈನಿಕರನ್ನು ಹಿಂದೆ ಬಿಟ್ಟುಕೊಂಡು ವಿಷ್ಣುವು ಬರುವುದನ್ನು ನೋಡಿ ಯುದ್ಧ ಮಾಡುತ್ತಿದ್ದ ರಾಕ್ಷಸ ನಾಯಕರು ಹೆದರಿ ಓಡಿ ಶೂರನಾದ ಜಲಂಧರನ ಮೊರೆಹೊಕ್ಕರು. ಅವನು ಆಕ್ಷಣ ಕೋಪದಿಂದ–ಈತನು ವಿಷ್ಣುವೇ ? ನಮ್ಮ ಜೊತೆಯಲ್ಲಿ ತಾನು ಇಂದು ಯುದ್ಧ ಮಾಡಲು ಬರುತ್ತಿದ್ದಾನೆಯೋ ಒಳ್ಳೆಯದು–ಎನ್ನುತ್ತ ಬಿಲ್ಲನ್ನು ಮಿಡಿದು ರಥವನ್ನು ನಡೆಸಲು ವಿಷ್ಣುವು ಶಾರ್ಙ್ಗವೆಂಬ ತನ್ನ ಬಿಲ್ಲನ್ನು ಧ್ವನಿ ಮಾಡಿ ಈರೀತಿ ಹೇಳಿದನು: ೧೪. ಈವರೆಗೆ ನಮ್ಮ ಜೊತೆಗೆ ಯುದ್ಧದಲ್ಲಿ ಪ್ರತಿಭಟಿಸಿ ಹಾನಿಗೊಳ್ಳದ ರಾಕ್ಷಸರಿಲ್ಲ. ದುನುಜಾರಿ ಎಂಬ ಈ ದರ್ಪದಿಂದ ಕೂಡಿದ ಹೆಸರನ್ನು ತಿಳಿದು ನೀನು ಇಲ್ಲಿಗೆ ಬಂದುದು ನಿನ್ನ ಅಜ್ಞಾನದ ಕೆಲಸವೊ ! ಸಹಜವಾದುದೊ? ಸುಳ್ಳು ಹೇಳಬೇಡ. ನಿನ್ನ ಹೆಸರೇನು? ನಿನ್ನ ವಾಸಸ್ಥಳ ಯಾವುದು ಹೇಳು ಎನ್ನಲು ಜಲಂಧರನು ನಸುನಗೆಯಿಂದ ವಿಷ್ಣುವಿನ ಮಾತಿಗೆ ಉತ್ತರವನ್ನು ಹೇಳಿದನು. ೧೫. ದಾನವಾರಿ ಎಂಬ ಹೆಸರಿನಿಂದ ನೀನಿರುವುದನ್ನು ಕೇಳಿ ಆ ಹೆಸರನ್ನು ಬಿಡಿಸುವ ನಂಬಿಕೆಯಿಂದ ನಾನು ಬಂದೆ. ನನ್ನ ಹೆಸರು ಜಲಂಧರ ನೆಂದು. ನನ್ನ ಪಟ್ಟಣಕ್ಕೂ ಅದೇ ಹೆಸರು. ಈ ದೇವೇಂದ್ರನನ್ನು ಬೆಂಬಲಿಸಿದ ನಿನ್ನ

CC-0. Jangamwadi Math Collection. Digitized by eGangotri

ಈ ನಿಲಿಂಪೇಶನಂ ಹಿಂದಿಕ್ಕಿಕೊಂಡ ರುಜೆ
ಗಾನರೆವೆನೌಷಧಿಯನೆನುತೆ ಹತ್ತಂಬಿನಿಂ
ದಾನವಾರಿಯನೆಸೆಯುಲೆಡೆಯೊಳವನಡಗಡಿದು ಕಾಮಪಿತನಿಂತೆಂದನು ೧೫

ಆರ್ಗಿನಿತು ಗುಣಮುಂಟು ನಿನ್ನಂತೆ ಬಡಸುರರ
ದುರ್ಗಮಂ ಕೊಂಡವರನಟ್ಟಿದೊಡೆ ನೀಂ ಜಗದೊ
ಳರ್ಗಳನೆ ಪಾಡಬನ ಮೇಲೆ ಕವಿದೈತರ್ಪ ಕಡಲವೊಲ್ ನಿನ್ನ ಬರವು
ಮಾರ್ಗಮಲ್ಲರಿಯದೈತಂದೊಡೇಂ ನಾಂ ತೊಟ್ಟ
ಮಾರ್ಗಣಮನಿಳಿಪುವೆಂ ಪೋಗು ಪೋಗದೊಡೆ ಕೆ
ನ್ನೀರ್ಗಳೋಕುಳಿಗೆ ಸಂವರಿಸಿಕೊಳ್ಳೆನುತ್ತೈದು ಬಾಣದಿಂ ಪರಿಯೆಚ್ಚನು ೧೬

ನೊಂದನಸುರಂ ಗಾಯದಿಂ ಗಾಯದಿಂ ನೊಂದ
ಪಂದಿಯಂತಾರ್ಭಟಿಸಿ ಚಾಪದಿಂದಂಬುಗಳ
ನಂದವಂ ಪಸರಿಸಿದನುಬ್ಬಿನಿಂದೊಂದೆರಳ್ ಮೂರು ನಾಲ್ಕಯ್ದುನೂರು
ಮುಂದೆ ಸಾಸಿರ ಲಕ್ಷ ಕೋಟಿಸಂಖ್ಯೆಗಳೊಳರ
ವಿಂದನಾಭನನೆಚ್ಚನಾತನೀ ಪರಿಗಣನೆ
ಗೊಂದೆರಳ್ಮಡಿಯಧಿಕವೆಂಬಂತೆ ಕರೆದನಂಬಿನಮಳೆಯನಾ ಕ್ಷಣದೊಳು ೧೭

ಕವಿದುವಿಟ್ಟಣಿಸಿದುವು ನೂಂಕಿದುವು ತಾಂಕಿದುವು
ಜವಗೆಡಿಸಿ ಸೇನೆಯಂ ಮುತ್ತಿದುವು ಕುತ್ತಿದುವು
ರವಿರಥತುರಂಗಮಂ ಚುರ್ಚಿದುವು ಕರ್ಚಿದುವು ತಮತಮಗೆ ತಾರಕೆಯನು

ರೋಗಕ್ಕೆ ಮದ್ದನ್ನು ಅರೆಯುತ್ತೇನೆ ಎನ್ನುತ್ತ ವಿಷ್ಣುವಿನ ಮೇಲೆ ಹತ್ತು ಬಾಣವನ್ನು ಬಿಡಲು ಮಧ್ಯದಲ್ಲಿಯೇ ಆ ಬಾಣಗಳನ್ನು ಕಡಿದು ವಿಷ್ಣುವು ಈ ರೀತಿ ಹೇಳಿದನು. ೧೬. ಇಷ್ಟು ಶಕ್ತಿ ಯಾರಿಗಿದೆ ? ನಿನ್ನಂತೆ ಬಡದೇವತೆಗಳ ಕೋಟೆಯನ್ನು ಗೆದ್ದು ಅವರನ್ನು ಓಡಿಸಿದ ಮಾತ್ರಕ್ಕೆ ನೀನು ಜಗತ್ತಿನಲ್ಲಿ ಶ್ರೇಷ್ಠನೆ ? ಬಡಬಾಗ್ನಿಯ ಮೇಲೆ ಕವಿದು ಬರುವ ಸಮುದ್ರದಂತೆ ನೀನು ಬಂದುದು ಸರಿಯಾದ ರೀತಿಯಲ್ಲ. ತಿಳಿಯದೆ ಬಂದ ಮಾತ್ರಕ್ಕೆ ಏನು ? ನಾನು ತೊಟ್ಟ ಬಾಣವನ್ನು ಇಳಿಸುತ್ತೇನೆ, ಹೋಗು. ಹೋಗದಿದ್ದರೆ ರಕ್ತದ ಓಕುಳಿಗೆ ಸಿದ್ಧನಾಗು ಎನ್ನುತ್ತ ಐದು ಬಾಣಗಳಿಂದ ವಿಷ್ಣುವು ಹೊಡೆದನು. ೧೭. ರಾಕ್ಷಸನು ಗಾಯದಿಂದ ನೊಂದು ಹೋದನು. ಗಾಯಗೊಂಡು ನೊಂದ ಹಂದಿಯಂತೆ ಅಬ್ಬರಿಸಿ ಅವನು ಬಿಲ್ಲಿನಿಂದ ಬಾಣಗಳನ್ನು ಹರಡಿದನು, ಉತ್ಸಾಹದಿಂದ ಒಂದು; ಎರಡು, ಮೂರು, ನಾಲ್ಕು, ಐದು ನೂರು, ಇನ್ನೂ ಮುಂದೆ ಸಾವಿರ, ಲಕ್ಷ, ಕೋಟಿ ಸಂಖ್ಯೆಯಲ್ಲಿ ವಿಷ್ಣುವನ್ನು ಬಾಣಗಳಿಂದ ಹೊಡೆದನು. ವಿಷ್ಣುವು ಆಕ್ಷಣದಲ್ಲಿ ಇದಕ್ಕೆರಡರಷ್ಟು ಹೆಚ್ಚು ಎನ್ನುವಂತೆ ಬಾಣದ ಮಳೆಯನ್ನು ಸುರಿಸಿದನು. ೧೮. ಕವಿದುವು, ಗುಂಪಾಗಿ ಬಿದ್ದುವು, ನೂಕಿದುವು, ತಾಗಿದುವು, ಸೈನ್ಯವನ್ನು ಅಧೈರ್ಯಗೊಳಿಸಿ ಮುತ್ತಿದುವು. ಚುಚ್ಚಿದುವು, ಸೂರ್ಯನ ರಥ ಮತ್ತು ಕುದುರೆಗಳನ್ನು ಚುಚ್ಚಿದುವು, ಹೋಗಿ ನಕ್ಷತ್ರ

CC-0. Jangamwadi Math Collection. Digitized by eGangotri

ಭವಣೆಯಿಂದಂಬರದೊಳುರ್ಬಿದುವು ಪರ್ಬಿದುವು
ಭುವನಂಗಳನಿತರೊಳ್ ಪತ್ತಿದುವು ಸುತ್ತಿದುವು
ಹವಣಿಸುವೊಡರಿದೆನಿಸಿ ಕೆಡಪಿದುವು ಮಡುಪಿದುವು ಸುಭಟರಂ ಬಾಣಂಗಳು ೧೮

ಎಚ್ಚಂಬನೊಡನೊಡನೆ ಕತ್ತರಿಸುವರ್ ಬಳಿ
ಕ್ಕೆಚ್ಚು ಬೊಬ್ಬಿರಿವರೋರೊರ್ವರ ರಥಂಗಳಂ
ಕೊಚ್ಚುವರ್ ಪೊಸರಥದೊಳ್ಳೆದುವರ್ ಗಾಯದಿಂ ಮೂರ್ಛಿಪರ್ ಚೇತರಿಪರು
ನುಚ್ಚುನುರ್ಗಾಯ್ವರಶ್ವಧ್ವಜವನೊರ್ವೊರ್ವೆ
ಪೆಚ್ಚುವರ್ ಗಾಯಗಾಯಕೆ ರಣಾವೇಶದಿಂ
ನಿಚ್ಚಟದ ಕಲಿಗಳೆಚ್ಚಾಡಿದರ್ ಹರಿ ಜಲಂಧರರಂದು ಸಂಗರದೊಳು ೧೯

ವಿಕ್ರಮದೊಳಸುರನೆಸೆವಂ ತಚ್ಛರಂಗಳಂ
ಚಕ್ರಿ ಕತ್ತರಿಸುತೆಸುವಂ ಹರಿಯ ಬಾಣಮನ
ಸುಕ್ರಮದೊಳಾ ಖಳಂ ತರಿದಿಸುವನಾಗಳೇ ಖಂಡಿಸುವನಬುಜಾಕ್ಷನು
ಈ ಕ್ರಮದೊಳೆಚ್ಚಾಡುತಿರಲೊಂದು ಬಾಣದಿನ
ತಿಕ್ರಮಿಸಿ ಹರಿಯಿಸಲ್ ದನುಜನಂದಾಕಾಶ
ಚಕ್ರದೊಳ್ ರಥವೆರಸಿ ಪಾರಿದಂ ಕೀರಿದಂ ಕೋಪದಿಂ ಬೊಬ್ಬಿರಿವುತೆ ೨೦

ಗಳನ್ನು ಕಚ್ಚಿದುವು, ದಿಗ್ಭ್ರಮೆಗೊಳಿಸಿ ಆಕಾಶದಲ್ಲಿ ಸುತ್ತಿದುವು, ಉರುಬಿದುವು, ಹಬ್ಬಿದುವು, ಸಮಸ್ತ ಲೋಕಗಳಲ್ಲಿಯೂ ಹತ್ತಿದುವು,ಸುತ್ತಿದುವು, ಸಿದ್ಧಮಾಡಿಕೊಳ್ಳಲು ಅವಕಾಶವಿಲ್ಲದಂತೆ ಬಾಣಗಳು ವೀರರಾದ ಸೈನಿಕರನ್ನು ಕೆಡವಿ ಸಾಯಿಸಿದುವು. ೧೯. ಬಿಟ್ಟ ಬಾಣಗಳನ್ನು ಅಲ್ಲಲ್ಲಿಯೇ ತುಂಡರಿಸುವರು.ಮತ್ತೆ ಬಾಣ ಬಿಟ್ಟು ಆರ್ಭಟಿಸುವರು. ಒಬ್ಬರೊಬ್ಬರ ರಥಗಳನ್ನು ಕತ್ತರಿಸುವರು. ಹೊಸ ರಥಗಳಲ್ಲಿ ಬರುವರು. ಗಾಯಗಳಿಂದ ಮೂರ್ಛೆಹೊಂದುವರು. ಮತ್ತೆ ಚೇತರಿಸಿಕೊಳ್ಳುವರು. ಕುದುರೆ ಮತ್ತು ಧ್ವಜಗಳನ್ನು ನುಚ್ಚುನೂರು ಮಾಡುವರು. ಒಮ್ಮೊಮ್ಮೆ ಗಾಯಗಳಿಂದ ಉಬ್ಬುವರು. ನಿಜವಾಗಿಯೂ ಪರಾಕ್ರಮಶಾಲಿಗಳಾದ ವಿಷ್ಣು ಮತ್ತು ಜಲಂಧರರು ಯುದ್ಧದಲ್ಲಿ ಆವೇಶಗೊಂಡು ಬಾಣಗಳಿಂದ ಹೋರಾಡಿದರು. ೨೦. ಪರಾಕ್ರಮದಿಂದ ರಾಕ್ಷಸನು ಬಾಣದಿಂದ ಹೊಡೆಯುವನು. ಆ ಬಾಣಗಳನ್ನು ವಿಷ್ಣುವು ಬಾಣಗಳನ್ನು ಬಿಟ್ಟು ಕತ್ತರಿಸುವನು. ಅದೇ ರೀತಿ ವಿಷ್ಣುವಿನ ಬಾಣಗಳನ್ನು ಜಲಂಧರನು ಬಾಣ ಪ್ರಯೋಗಿಸಿ ತರಿದುಹಾಕುವನು. ಆಗಲೇ ವಿಷ್ಣುವು ಅದನ್ನು ಕತ್ತರಿಸುವನು. ಈ ರೀತಿಯಲ್ಲಿ ಹೊಡೆದಾಡುತ್ತಿರಲು ಒಂದು ಬಾಣದಿಂದ ಅತಿಕ್ರಮಿಸಿ ವಿಷ್ಣು ಹೊಡೆಯಲು ರಾಕ್ಷಸನು ಕೋಪದಿಂದ ಕೂಗಿ

CC-0. Jangamwadi Math Collection. Digitized by eGangotri

ಸಾಹಸಮನೇನೆಂಬೆನಾಗಸಕಡರ್ದು ಮು
ತ್ತಾ ಹರಿಯನಸುರನೊಂದಂಬಿನಿಂದೆಸೆಯೆ ಬಳಿ
ಕೀ ಹರಿ ವರೂಥಮಂ ಬೆರಸಿ ಗಗನಕ್ಕೈದಲೊರ್ವರುಂ ಧರೆಗಿಳಿಯದೆ
ಆ ಪೊಳೆವ ತೇರ್ ಮಿಂಚು ಬಿಲ್ಲದನಿ ಮೊಳಗವರ
ದೇಹರುಚಿಗಳ್ ಪ್ರಳಯಮೇಘಮೆನಲೆಸೆವ ಸರ
ಳೂಹಿಸಲ್ ಕಡೆಗಾಲಮಳೆಯಾಗಲೆಚ್ಚಾಡುತಿರ್ದರದನೇವೇಳ್ವೆನು ೨೧

ಅಂಬರದೊಳೊಮ್ಮೊಮ್ಮೆ ಕಾದುವರ್ ಧರೆಗಿಳಿವು
ತಂ ಬಿಡದೆ ಸೆಣಸುವರ್ ಧರೆಯೊಳೊರ್ವರ್ ಗಗನ
ಮಂ ಬಲಿವರೊರ್ವರಿರದೆಚ್ಚಾಡುವರ್ ಧರೆಯೊಳಿರದೆಸುವರೊಮ್ಮೆಯೊಮ್ಮೆ
ಎಂಬುದೇನಾ ಜಲಂಧರನತುಳ ರೋಷದಿಂ
ದಂ ಬಳಿಕೆ ಮೂಡಿಗೆಯೊಳಾಯ್ದುರಸಿ ಪಾವಕಕ
ಳಂಬಮಂ ಪೂಡಿ ತೆಗೆದೆಚ್ಚನೀರೇಳ್ಜಗಂ ಶಿಖಿಯ ಸವಿದುತ್ತಾಗಲು ೨೨

ಎರಡು ಬಲದಾಸ್ಯಮುಂ ಕಂದಿದುವು ಕುಂದಿದುವು
ಕರಿತುರಗಮುರಿಯೊಳೊಕ್ಕಾಡಿದುವು ಬಾಡಿದುವು
ಹರಿವ ತೇರ್ಗಳ್ ಸೀದು ಮುಗ್ಗಿದುವು ತಗ್ಗಿದುವು ಪಟುಭಟರ ಧೈರ್ಯಂಗಳು

ಅಬ್ಬರಿಸಿ ರಥದೊಡನೆ ಆಕಾಶಮಂಡಲಕ್ಕೆ ಹಾರಿ ಕಿರುಚಿದನು. ೨೧. ಜಲಂಧರನ ಸಾಹಸವನ್ನು ಏನೆಂದು ಹೇಳಲಿ. ಆಕಾಶಕ್ಕೆ ಏರಿ ವಿಷ್ಣುವನ್ನು ಒಂದು ಬಾಣದಿಂದ ಹೊಡೆದನು. ಆಗ ವಿಷ್ಣುವು ರಥದೊಡನೆ ಆಕಾಶಕ್ಕೆ ಹಾರಿದನು. ಆ ಹೊಳೆಯುವ ರಥವೇ ಮಿಂಚು, ಬಿಲ್ಲಿನ ಶಬ್ದವೇ ಗುಡುಗು, ಅವರ ದೇಹದ ಕಾಂತಿಯೇ ಪ್ರಳಯ ಕಾಲದ ಮೋಡಗಳು ಎನ್ನುವಂತೆ, ಊಹೆಮಾಡಲು ಬಾಣಗಳೇ ಪ್ರಳಯಕಾಲದ ಮಳೆ ಎನ್ನುವಂತೆ, ಭೂಮಿಗೆ ಇಳಿಯದೆಯೇ ಹೊಡೆದಾಡುತ್ತಿದ್ದರು. ೨೨. ಒಂದೊಂದು ಸಾರಿ ಆಕಾಶದಲ್ಲಿ ಹೋರಾಡುವರು. ಭೂಮಿಗೆ ಇಳಿಯುತ್ತಾ ಒಬ್ಬೊಬ್ಬರು ಬಿಡದೆ ಯುದ್ಧ ಮಾಡುವರು. ಒಬ್ಬರು ಆಕಾಶವನ್ನು ತುಂಬಿ ಬಾಣದಿಂದ ಹೊಡೆದಾಡುವರು. ಇನ್ನೊಬ್ಬರು ಭೂಮಿಯಲ್ಲಿ ಒಮ್ಮೆ ನಿಂತು ಬಾಣಪ್ರಯೋಗ ಮಾಡುತ್ತಿದ್ದರು. ಹೇಳುವುದೇನು ? ಆ ಜಲಂಧರನು ಅತಿಯಾದ ಕೋಪದಿಂದ ಮತ್ತೆ ಬತ್ತಳಿಕೆಯಿಂದ ಆಯ್ದು ಹುಡುಕಿ ಆಗ್ನೇಯಾಸ್ತ್ರವನ್ನು ತೆಗೆದು ಹೂಡಿ ಏಳು ಲೋಕವೂ ಅಗ್ನಿಗೆ ಆಹುತಿ ಯಾಗಲು ತೆಗೆದುಬಿಟ್ಟನು. ೨೩. ಎರಡು ಸೇನೆಯ ಸೈನಿಕರ ಮುಖಗಳು ಕಂದಿದುವು, ಕುಂದಿದುವು. ಆನೆ ಕುದುರೆಗಳು ಬೆಂಕಿಯಲ್ಲಿ ಹೊಕ್ಕು ಯುದ್ಧಮಾಡಿ ಬಾಡಿದುವು. ಚಲಿಸುವ ರಥಗಳು ಬೆಂದು ನಾಶವಾದುವು. ಶೂರ ಸೈನಿಕರ ಧೈರ್ಯ ಕುಂದಿತು.

CC-0. Jangamwadi Math Collection. Digitized by eGangotri

ಸುರರ ಹರುಷಂಗಳುಂ ಸಾಗಿದುವು ಬಾಗಿದುವು
ಕರದಾಯುಧಂಗಳುಂ ಕರಗಿದುವು ಕೊರಗಿದುವು
ಹರಿಗೆ ಹಲಗೆಗಳುರಿದು ಪಾರಿದುವು ಕೀರಿದುವು ಸೆಕಳೆಯಿಂ ಭೂತಂಗಳು ೨೨.

ಕಂಡು ಜಲಂಧರನ ಚಾಪದಿಂದೈತರ್ಪ
ಚಂಡಶಿಖಿಬಾಣಮಂ ಶರಧಿಯಿಂದುಗಿದು ಕೋ
ದಂಡದೊಳ್ ತೊಡಿಸಿ ವರುಣಾಸ್ತ್ರಮಂ ನಿಜಸೇನೆಗಭಯಕರಮಂ ತೋರುತೆ
ಪುಂಡರೀಕಾಕ್ಷನಿಸೆ ತುಂಬಿದುದು ವಾರಿ ರಣ
ಮಂಡಲದೊಳೆಲ್ಲಿಯುಂ ನೀರಾಟವಾಡಿದುದು
ಶುಂಡಾಲತುರಗಸಂದೋಹಂಗಳಾಕ್ಷಣಂ ಪೇಳಲೇನಚ್ಚರಿಯುನು ೨೪

ಕೆರಳ್ದುರಗಬಾಣದಿಂ ಖಳನಿಸಲ್ ಮಾಧವಂ
ಗರುಡಾಸ್ತ್ರದಿಂ ತರಿದನದ್ರಿಬಾಣದಿನಿಸಲ್
ವರವಜ್ರವಿಶಿಖದಿಂ ಖಂಡಿಸಿದನಿನಕಳಂಬದಿನಂಧಕಾರಶರಮಂ
ಪರಿಹರಿಸಿದಂ ಹರಿ ಬಳಾಹಕಾಸ್ತ್ರದಿನಿಸಲ್
ಮರುದಸ್ತ್ರದಿಂದದಂ ತೊಲಗಿಸಿ ಜಲಂಧರನ
ಕರದ ಕಾರ್ಮುಕವನಿಕ್ಕಡಿಮಾಡಿ ಸೂತ ರಥ ತುರಗಂಗಳಂ ಕಡಿದನು ೨೫

ತುರಗ ರಥ ಸಾರಥಿಗಳಂ ತುಂಡಿಸಲ್ ಕೋಪ
ಭರಿತಮಾನಸನಾಗಿ ಕಾಯ್ದ ಕೇಸರಿಯಂತೆ
ಭರದಿನಾರ್ಭಟಿಸಿ ದೇವಾಸುರರ್ ಬೆರಗಾಗಿ ನೋಡುತಿರೆ ಪಾಯ್ದು ಹರಿಯ

ದೇವತೆಗಳ ಸಂತೋಷ ಓಡಿಹೋಯಿತು. ಕೈಯಲ್ಲಿ ಹಿಡಿದಿದ್ದ ಆಯುಧಗಳು ಮಂಕಾಗಿ ಕೊರಗಿದುವು. ಡಾಲು ಮತ್ತು ಗುರಾಣಿಗಳು ಉರಿದು ಕರಗಿ ಸಣ್ಣದಾದುವು. ಬೆಂಕಿಯು ಶಾಖದಿಂದ ಭೂತಗಳು ಆರಚಿದುವು, ಓಡಿದುವು. ೨೪. ಜಲಂಧರನ ಬಿಲ್ಲಿನಿಂದ ಹೊರಟು ಬರುತ್ತಿರುವ ಭಯಂಕರವಾದ ಆಗ್ನೇಯಾಸ್ತ್ರವನ್ನು ಹರಿಯು ನೋಡಿ, ಬತ್ತಳಿಕೆಯಿಂದ ವಾರುಣಾಸ್ತ್ರವನ್ನು ತೆಗೆದು ಬಿಲ್ಲಿಗೆ ಹೂಡಿ ತನ್ನ ಸೈನ್ಯಕ್ಕೆ ಅಭಯಹಸ್ತವನ್ನು ತೋರುತ್ತ ವಿಷ್ಣುವು ಆ ವಾರುಣಾಸ್ತ್ರವನ್ನು ಬಿಡಲು ಯುದ್ಧಭೂಮಿಯೆಲ್ಲ ನೀರಿನಿಂದ ತುಂಬಿತು. ಆ ಕ್ಷಣ ಆನೆ ಕುದುರೆಗಳ ಸಮೂಹಗಳೆಲ್ಲ ನೀರಾಟವಾಡಿದುವು. ಆಶ್ಚರ್ಯ ವನ್ನು ಏನು ಹೇಳಲಿ ? ೨೫. ರಾಕ್ಷಸನು ಕೋಪಗೊಂಡು ಸರ್ಪಾಸ್ತ್ರವನ್ನು ಬಿಡಲು ವಿಷ್ಣುವು ಗರುಡಾಸ್ತ್ರದಿಂದ ಅದನ್ನು ತರಿದನು. ಪರ್ವತಾಸ್ತ್ರವನ್ನು ಪ್ರಯೋಗಿಸಲು ವಜ್ರಾಸ್ತ್ರದಿಂದ ತುಂಡರಿಸಿದನು. ಅಂಧಕಾರಾಸ್ತ್ರವನ್ನು ವಿಷ್ಣು ಸೂರ್ಯಾಸ್ತ್ರದಿಂದ ಸಂಹಾರ ಮಾಡಿದನು. ಮೇಘಾಸ್ತ್ರವನ್ನು ವಾಯುವ್ಯಾಸ್ತ್ರದಿಂದ ತೊಲಗಿಸಿ, ಜಲಂಧರನ ಕೈಯಲ್ಲಿದ್ದ ಬಿಲ್ಲನ್ನು ಎರಡಾಗಿ ಕತ್ತರಿಸಿ ಸಾರಥಿ ರಥ ಮತ್ತು ಕುದುರೆಗಳನ್ನು ಕಡಿದುಹಾಕಿದನು. ೨೬. ವಿಷ್ಣುವು ತನ್ನ ಕುದುರೆ ರಥ ಸಾರಥಿಗಳನ್ನು ನಾಶಪಡಿಸಲು, ಜಲಂಧರನು ಕೋಪ ದಿಂದ ಕೆರಳಿದ ಸಿಂಹದಂತೆ ಗಟ್ಟಿಯಾಗಿ ಆರ್ಭಟಿಸಿ, ದೇವದಾನವರು ಬೆರಗಾಗಿ ನೋಡು

CC-0. Jangamwadi Math Collection. Digitized by eGangotri

ವರವರೂಥವನೆತ್ತಿ ಕರಯುಗಳದಿಂ ನಭಕೆ
ತಿರುಪಿಟ್ಟ ನಿಡುಬೊಗರೆಯಂತೆ ಹರಿ ನಭದಿಂದೆ
ಧರೆಗಿಳಿದು ಪೊಸರಥದೊಳೈತರಲ್ ಮಗುಳಿಟ್ಟು ಖಳನಿರವೆ ಬೊಬ್ಬಿರಿದನು ೨೬

ಆದರ್ವನೀ ಹರಿಯೊಂದು ತೇರನಪುರಂ ಕನ
ಲ್ದಿಡುವನದನಿಂತುಟಿಪ್ಪತ್ತೊಂದು ಸೂಳ್ವರಂ
ಬಿಡದಣ್ಣೆಕಲ್ಲಾಡುವಂತುಟಂ ಮಾಲೆಗಳನೊದಗಿ ನಿಂದಾಡುವಂತೆ
ಇಡುವ ಬಿಡುವುರುಚಮತ್ಕೃತಿ ನೋಡುತಿರ್ಪೆರಡು
ಪಡೆಗಗೋಚರಮೆನಲ್ ಕೂಡೆ ಕಮಲಾಂಬಕಂ
ಕಡುನೊಂದು ಕೌಮೋದಕೀಗದೆಯ ತುಡುಕುತುರೆ ಖಳಪತಿಯೊಳಿಂತೆಂದನು ೨೭

ಭಾರಣೆಯ ವಿದ್ಯೆಯಂ ಸಮರದೊಳ್ ತೋರಿದೊಡೆ
ಧೀರರೇಂ ಮೆಚ್ಚುವರೆ ಮಧುಕೈಟಭಾದ್ಯಖಿಳ
ವೀರರಂ ಸವೆದುದೀ ಗದೆಯಿದರ ಸವಿಯ ನೀನೊಮ್ಮೆಯುಂ ಕಂಡರಿಯಲಾ
ಪಾರವೆಡಬಲವನುನ್ನತ ಗದಾದಂಡದಿಂ
ದೀ ರಣದೊಳಿದಿರಾಗು ಕಾಣಬಹುದುಭಯ ಪ್ರ
ಹಾರಪ್ರವೀಣತೆಯನೆನುತೆ ಹರಿ ನುಡಿಯಲಾ ಖಳನಿರವೆ ಗದೆಗೊಂಡನು ೨೮

ತ್ತಿರಲು ಮುನ್ನುಗ್ಗಿ ವಿಷ್ಣುವಿನ ಶ್ರೇಷ್ಠವಾದ ರಥವನ್ನು ಎರಡು ಕೈಗಳಿಂದಲೂ ಎತ್ತಿ ಬುಗುರಿಯಂತೆ ತಿರುಗಿಸಿ ಆಕಾಶಕ್ಕೆ ಎಸೆದನು. ವಿಷ್ಣು ಆಕಾಶದಿಂದ ಭೂಮಿಗೆ ಇಳಿದು ಹೊಸರಥವನ್ನು ಹತ್ತಿ ಬರಲು ಜಲಂಧರನು ಮತ್ತೆ ಅದೇ ರೀತಿ ಎಸೆದು ಬೊಬ್ಬಿರಿದನು.
೨೭. ಈ ರೀತಿ ವಿಷ್ಣು ತೇರೊಂದನ್ನು ಹತ್ತುವನು, ರಾಕ್ಷಸನು ಕೋಪದಿಂದ ಅದನ್ನು ಎಸೆಯುವನು, ಹೀಗೆ ಇಪ್ಪತ್ತೊಂದು ಬಾರಿ ಬಿಡದೆ, ಆಣೆಕಲ್ಲುಗಳನ್ನು ಸರಮಾಲೆಗಳಿಂದ ಕೂಡಿ ಆಡುವಂತೆ ಇಡುವ-ಬಿಡುವ ಅತಿಯಾದ ಚಮತ್ಕಾರ ನೋಡುತ್ತಿರುವ ಎರಡು ಸೈನ್ಯಕ್ಕೂ ಅಗೋಚರವೆನ್ನುವಂತೆ ಆಗಲು, ವಿಷ್ಣುವು ಅತಿಯಾಗಿ ವ್ಯಥೆಗೊಂಡು ಕೌಮೋದಕಿ ಎಂಬ ತನ್ನ ಗದೆಯನ್ನು ಹಿಡಿದು ರಾಕ್ಷಸರಾಜನೊಡನೆ ಹೀಗೆ ಹೇಳಿದನು.
೨೮. ಅಧಿಕವಾದ ವಿದ್ಯೆಯನ್ನು ಯುದ್ಧದಲ್ಲಿ ತೋರಿಸಿದರೆ ಧೀರರು ಮೆಚ್ಚುತ್ತಾರೆಯೆ ? ಮಧುಕೈಟಭ ಮುಂತಾದ ಎಲ್ಲ ವೀರರನ್ನೂ ಈ ಗದೆ ನಾಶ ಮಾಡಿತು. ಇದರ ರುಚಿಯನ್ನು ನೀನು ಒಂದು ಬಾರಿಯೂ ನೋಡಿ ತಿಳಿದಿಲ್ಲವಲ್ಲವೆ ? ಏನನ್ನೂ ಆಲಿಸದೆ (ಗಮನಿಸದೆ) ಉನ್ನತವಾದ ಗದೆಯನ್ನು ಹಿಡಿದು ಈ ಯುದ್ಧದಲ್ಲಿ ಎದುರಾಗು. ಇಬ್ಬರ ಹೊಡೆತದ ಪ್ರವೀಣತೆಯನ್ನು ನೋಡಬಹುದು ಎಂದು ವಿಷ್ಣು ಹೇಳಲು ಆ ರಾಕ್ಷಸನು

CC-0. Jangamwadi Math Collection. Digitized by eGangotri

ಕಸ್ತೂರಿಕಾ ಸುಕುಂಕುಮವಾದಿಯಾಗಿಹ ಸ
ಮಸ್ತ ಪರಿಮಳದ ನೊಸಲಿಟ್ಟು ಮುಖಕಮಲವಿ
ನ್ಯಸ್ತಕರ್ಪೂರತಾಂಬೂಲಶೋಭಿತರಾಗಿ ನಿಜಗದೆಗಳಂ ತಿರುಪುತೆ
ಮಸ್ತಕದ ಮಣಿಮಕುಟದೊಲಹುಗಳ ಭೂಷಣಗ
ಭಸ್ತಿಗಳ ಹರಿಜಲಂಧರರಾಗ ರಾಗದಿಂ
ವಿಸ್ತೀರ್ಣವಾದ ರಣರಂಗದೊಳ್ ನೋಳ್ಪರ್ಗೆ ಬೀರಿದರ್ ಕೌತುಕವನು ೨೯

ಉಡಿ ನಡುವುರಂ ಪಾರ್ಶ್ವಮೆಸೆವ ತೋಳ್ ಕೌಂಕುಳಂ
ಮುಡುಹು ಕೊರಲಾನನಂ ಚಾರುಮಣಿಮಕುಟಂಗ
ಳೆಡೆಯೊಳಾಡಿದುವುಭಯವೀರರ ಗದಾದಂಡಯುಗಳಂಗಳಾ ಕ್ಷಣದೊಳು
ಅಡಗಿದಾವೇಶಮುಬ್ಬರಿಪ ಮುದದೊಡನೆ ಮೈ
ಗೊಡದ ವಂಚನೆ ಪೊಯ್ವ ಕೈಚಳಕಗಳ ನೋಳ್ಪ
ಪಡೆಯೆರಡಕಾಶ್ಚರ್ಯಮಂ ಮಾಡಿ ಪೊಯ್ದಾಡಿದರ್ ಕಲಿಗಳಾಹವದೊಳು ೩೦

ಇಂತು ನಾನಾ ಕುಶಲದೊಳ್ ಗದಾಯುದ್ಧದಿಂ
ದಂ ತನಗೆ ಗೆಲುವುಗಾಣದೆ ಮಹಾವಿಷ್ಣುವತಿ
ಚಿಂತಿಸುತೆ ಕಲಿಜಲಂಧರನೊಳೆಂದಂ ಗದೆಗಳೇಕೆ ಭುಜಸತ್ತ್ವದಿಂದೆ

ತಡೆಯದೆ ಗದೆಯನ್ನು ಕೈಗೆ ತೆಗೆದುಕೊಂಡನು. ೨೯. ಕಸ್ತೂರಿ, ಕಾಚು, ಕುಂಕುಮ ಮೊದಲಾದ ಎಲ್ಲ ಪರಿಮಳಗಳಿಂದ ಮುಖಗಳಿಗೆ ತಿಲಕವನ್ನಿಟ್ಟು ಅಲಂಕೃತರಾಗಿದ್ದರು. ಕರ್ಪೂರ ವೀಳ್ಯಗಳನ್ನು ಹಾಕಿಕೊಂಡು ಶೋಭಿತರಾಗಿ ತಮ್ಮ ಗದೆಗಳನ್ನು ತಿರುಗಿಸುತ್ತ ಇದ್ದರು. ಮಣಿಕಿರೀಟವನ್ನು ಧರಿಸಿದ್ದ ತಲೆಗಳನ್ನು ತೂಗುತ್ತ, ಕಾಂತಿಯಿಂದ ರಂಜಿಸುವ ಆಭರಣಗಳನ್ನು ಧರಿಸಿದ ವಿಷ್ಣು ಮತ್ತು ಜಲಂಧರರು ಆಸಕ್ತರಾಗಿ ದೊಡ್ಡದಾಗಿದ್ದ ಯುದ್ಧಭೂಮಿಯಲ್ಲಿ ನೋಡುವವರಿಗೆ ಕುತೂಹಲವನ್ನುಂಟುಮಾಡಿದರು. ೩೦. ಇಬ್ಬರು ವೀರರ ಗದೆಗಳೂ ಮಡಿಲು, ಸೊಂಟ, ಎದೆ, ಪಕ್ಕೆ, ತೋಳು, ಕಂಕುಳು, ಹೆಗಲು, ಕೊರಳು, ಮುಖ, ಮನೋಹರವಾದ ಮಣಿಕಿರೀಟ ಮುಂತಾದ ಕಡೆಗಳಲ್ಲಿ ಬಿಡದೆ ಆ ಕ್ಷಣದಲ್ಲಿ ಆಡಿದುವು, ಆವೇಶ ಅಡಗಿತು, ಉತ್ಸಾಹ ಹೆಚ್ಚಾಯಿತು, ಗದೆಯ ಏಟಿನಿಂದ ದೇಹವನ್ನು ತಪ್ಪಿಸಿಕೊಳ್ಳುವ ವಂಚನೆ, ಹೊಡೆಯುವ ಕೈಚಳಕದಿಂದ ನೋಡುತ್ತಿರುವ ಎರಡು ಸೈನ್ಯಕ್ಕೂ ಆಶ್ಚರ್ಯವನ್ನು ಉಂಟು ಮಾಡಿ ಆ ಇಬ್ಬರು ಶೂರರೂ ಯುದ್ಧದಲ್ಲಿ ಹೋರಾಡಿದರು. ೩೧. ಈ ರೀತಿ ನಾನಾ ಚಾತುರ್ಯದಿಂದಲೂ ಗದಾಯುದ್ಧದಲ್ಲಿ ತನಗೆ ಗೆಲುವು ಉಂಟಾಗದೆ ಇರಲು ಮಹಾ ವಿಷ್ಣುವು ಅತಿಯಾದ ಚಿಂತೆಗೆ ಒಳಗಾಗಿ, ಶೂರನಾದ ಜಲಂಧರನೊಡನೆ ಈ ರೀತಿ ಹೇಳಿದನು—ಗದೆಗಳು ಏತಕ್ಕೆ, ಭುಜಬಲದಿಂದ

CC-0. Jangamwadi Math Collection. Digitized by eGangotri

ನಿಂತು ನೀಂ ಮಲ್ಲಗಾಳೆಗದೊಳೆಸಗಿದಿರಾಗ
ಲಂತಾಗ ಕಾಣಬಹುದೆನೆ ಖಳಂ ನಸುನಗುತೆ
ತಾಂ ತಡೆಯದಾ ಗದೆಯನುಳಿದು ತೋಳ್ಕೊಯ್ಯುತಂ ಪೊಡೆಯಲರಗಿಂತೆಂದನು ೩೧

ಪಕ್ಷಿವಾಹನ ವ್ಯಥಾಮುಷ್ಟಿಯುದ್ಧದೊಳು ಕಾ
ಲಕ್ಷೇಪವೇಕೆ ಬಾರೆನುತೆ ಬೊಬ್ಬಿರಿದು ಕಮ
ಲಾಕ್ಷಂಗೆ ಕೈಗೊಟ್ಟನಸುರಪತಿ ದಿಗ್ಗಜಂ ದಿಗ್ಗಜಗೆ ಕೈಗೊಡುವೊಲು
ಕಕ್ಷ ಕಂಧರ ಭುಜದ್ವಯ ಪಾರ್ಶ್ವ ಕಟಿ ಮಧ್ಯ
ವಕ್ಷಸ್ಸು ಜಾನು ಜಂಘೋರು ಗುಲ್ಫಾಂಘ್ರಿಗಳೊ
ಳಾ ಕ್ಷಣಂ ಪಿಡಿವ ಬಿಡಿಸುವ ಬಿನ್ನಣಂಗಳವರಿರ್ವರೊಳ್ ಸೊಗಯಿಸಿದುವು ೩೨

ಸಿಕ್ಕುವಂ ಹರಿಯೊರ್ಮೆಯೊರ್ಮೆ ಖಳಪತಿ ಹರಿಯ
ಡೊಕ್ಕರಕ್ಕೊಳಗಪ್ಪನೊರ್ಮೆ ವಂಚಿಸುತುವೊಳ
ಪೊಕ್ಕು ಹರಿಯಂ ಪಿಡಿವನೊರ್ಮೆ ಕಮಲಾಂಬಕಂ ಚಿಮ್ಮಿ ಕಡುಲಾಗಿನಿಂದೆ
ಮಿಕ್ಕು ತಪ್ಪುವನೊರ್ಮೆ ಮಿಂಚು ಪೊಳೆವಂದದಿಂ
ರಕ್ಕಸಂ ಜುಣುಗುವಂ ಪೇಳಲೇನಿರ್ವರ ಬ
ಲಕ್ಕಿರ್ವರುರವಣೆಗೆಯಿರ್ವರ ಚಮತ್ಕಾರಕಿರ್ವರೇ ಸಾಟಿಯೆನಲು ೩೩

ಕರವಲಯದಿಂದೆ ಬಂಧಿಸುವ ತಳಹತ್ತದಿಂ
ದುರವಣಿಪ ಮಿಗಿದುವಂಗುಲದಿನೊತ್ತುವ ಮೇಲೆ
ವರಶಿರೋವಲಯದಿಂ ಸಿಲ್ಕಿಪರ್ ತೋರಹತ್ತದೆ ತವಕದಿಂ ಪಿಡಿವರು

ನಿಂತು ನೀನು ಮಲ್ಲಯುದ್ಧದಲ್ಲಿ ನನ್ನನ್ನು ಎದುರಿಸು, ಆಗ ನೋಡಬಹುದು ಎನ್ನಲು ರಾಕ್ಷಸನು ನಸುನಗುತ್ತ ತಡೆಯದೆ ಗದೆಯನ್ನು ಬಿಟ್ಟು ತೋಳನ್ನು ತಟ್ಟುತ್ತ ವಿಷ್ಣುವನ್ನು ಕುರಿತು ಹೀಗೆ ಹೇಳಿದನು. ೩೨. ಪಕ್ಷಿವಾಹನ ಮುಷ್ಟಿಯುದ್ಧದಲ್ಲಿ ವ್ಯರ್ಥವಾಗಿ ಕಾಲ ಕಳೆಯುವುದೇಕೆ, ಬಾ ಎನ್ನುತ್ತ ಆರ್ಭಟಿಸಿ ದಿಗ್ಗಜಕ್ಕೆ ದಿಗ್ಗಜವು ಎರಗಿದಂತೆ ಜಲಂಧರನು ವಿಷ್ಣುವಿನ ಮೇಲೆರಗಿದನು. ಕಂಕುಳು, ಕುತ್ತಿಗೆ, ಎರಡೂ ಭುಜ, ಪಕ್ಕೆ, ಸೊಂಟದಮಧ್ಯೆ, ಎದೆ, ಮೊಣಕಾಲು, ಕೆಳತೊಡೆ. ತೊಡೆ, ಹೆಜ್ಜೆ ಮತ್ತು ಕಾಲುಗಳಿಂದ ಹಿಡಿಯುವ ಬಿಡಿಸಿ ಕೊಳ್ಳುವ ಚಾತುರ್ಯವು ಅವರಿಬ್ಬರಲ್ಲಿ ರಂಜಿಸಿತು. ೩೩. ವಿಷ್ಣು ಒಂದು ಸಾರಿ ಜಲಂಧರನಿಗೆ ಸಿಗುವನು,ಒಂದು ಸಾರಿ ಜಲಂಧರ ವಿಷ್ಣುವಿನ ಹೊಡೆತಕ್ಕೆ ಒಳಗಾಗುವನು. ಮೋಸಮಾಡಿ ಒಳಹೊಕ್ಕು ವಿಷ್ಣುವನ್ನು ಹಿಡಿಯುವನು. ವಿಷ್ಣು ಒಂದು ಬಾರಿ ಬಲು ಚಳಕದಿಂದ ಚಿಮ್ಮಿ ತಪ್ಪಿಸಿಕೊಳ್ಳುವನು, ಮಿಂಚು ಹೊಳೆಯುವ ರೀತಿಯಲ್ಲಿ ಒಂದುಬಾರಿ ಜಲಂಧರನು ಹಿಂದಕ್ಕೆಜಾರುವನು.ಅವರಿಬ್ಬರ ಬಲಕ್ಕೆ ಅವರಿಬ್ಬರ ಆರ್ಭಟಕ್ಕೆ ಅವರಿಬ್ಬರ ಚಮತ್ಕಾರಕ್ಕೆ ಅವರವರೇ ಸಾಟಿ ಎನ್ನಲು ಮತ್ತೇನು ಹೇಳಲಾದೀತು. ೩೪. ಕೈಗಳಿಂದ ಬಂಧಿಸುವರು, ಅಂಗೈಯಿಂದ ಸಡಗರಿಸುವರು,ಬೆರಳಿನಿಂದ ಬಲವಾಗಿ ಒತ್ತುವರು, ಶ್ರೇಷ್ಠ ವಾದ ತಲೆಯ ಭಾಗದಿಂದ ಸಿಕ್ಕಿಸುವರು, ದೊಡ್ಡ ಕೈಗಳಿಂದ ತವಕದಿಂದ ಹಿಡಿಯುವರು·

CC-0. Jangamwadi Math Collection. Digitized by eGangotri

ಉರಗಬಂಧನದಿಂದವೊತ್ತುವ ಸಘಾಟವಮಾ
ಹರಿಜಲಂಧರರೊಳತಿಪಿರಿದಾಗೆ ಖಳನಿರದೆ
ಹರಿಯನೊಳಪೊಕ್ಕು ಪಿಡಿದಂ ತನ್ನ ಭುಜಸತ್ತ್ವದಿಂವಲದನೇನೆಂಬೆನು ೩೪

ಬೀಸಿ ಬಿಡೆ ಮಾಧವಂ ಭೂತಳಕೆ ಬಿದ್ದು ಮಿಗೆ
ಗಾಸಿಯಾದಂ ದೇಹಬಲವಿಳಿದುದುರೆ ಮನದ
ವಾಸಿ ಪಯ್ಸರವಾಯ್ತು ಗೆಲ್ವಾಸೆಯಡಗಿತಾಲಸ್ಯವೆಡೆಗೊಂಡುದಾಗ
ವಾಸವಾದ್ಯಮರತತಿಯಳ್ಕುತಿರ್ದುದು ಪೀತ
ವಾಸನೊಂದಾನೊಂದುಪಾಯದಿಂದಂ ಮುಂದ
ಹಾಸದಿಂದಾ ಕಲಿಜಲಂಧರನ ಕೂಡೆ ವಿನಯೋಕ್ತಿಯಿಂದಿಂತೆಂದನು ೩೫

ಮೆಚ್ಚಿದೆಂ ದೈತ್ಯಪತಿ ನಿನ್ನಯ ಪರಾಕ್ರಮಕೆ
ನಿಚ್ಚಟದ ವರವದೇಂ ಕೇಳೆನೆ ಖಳಂ ನಗುತೆ
ಕುಚ್ಚಿತದೆ ಗರುಡ ಮಧುಕೈಟಭಾದ್ಯರ ಗೆಲ್ದ ತೆರನಲ್ಲವೀಗ ನೀನು
ಮುಚ್ಚಿದೊಡೆ ಲೇಸು ನಿನ್ನರಸಿಸಹಿತಂ ಮನೆಯೊ
ಳೊಚ್ಚತಂ ಬಂದು ಸೆರೆಯಿರಿಮೆನಲ್ ಕೇಳ್ದು ಬಳಿ
ಕಚ್ಚುತಂ ಖಳನಿವಂ ಬಿಡುವನಲ್ಲೆಂದು ನಿರ್ಧರಿಸಿದಂ ಮನದೊಳಂದು ೩೬

ಇಂತೆಂದು ಕಲಿಜಲಂಧರನೆಂದ ಮಾತಿಗಾ
ಕಂತುಪಿತ ಕಮಲೆಯರ್ ಕೈಕೊಂಡು ಖಳನ ರಥ
ಮಂ ತಡೆಯದೇರಿದರ್ ಕಮಲಾಸನೇಂದ್ರಾದಿ ಸಕಲ ವೃಂದಾರಕರನು

ಸರ್ಪಬಂಧನದಿಂದ ಒತ್ತುವ ಸಾಮರ್ಥ್ಯವು ವಿಷ್ಣು ಮತ್ತು ಜಲಂಧರರಲ್ಲಿ ಬಹು ಹೆಚ್ಚಾಗಲು ರಾಕ್ಷಸನು ತಡೆಯದೆ ಒಳಹೊಕ್ಕು ತನ್ನ ಭುಜಬಲದಿಂದ ವಿಷ್ಣುವನ್ನು ಹಿಡಿದನು. ಅದನ್ನು ಏನೆಂದು ಹೇಳಲಿ ? ೩೫. ಬೀಸಿ ಎಸೆಯಲು ವಿಷ್ಣುವು ಭೂಮಿಯ ಮೇಲೆ ಬಿದ್ದು ಹೆಚ್ಚಾಗಿ ಹಿಂಸೆಗೊಳಗಾದನು. ದೇಹಬಲ ಕುಗ್ಗಿತು. ಹೋರಾಟದ ಮನೋಭಾವವು ಹಿಮ್ಮೆಟ್ಟಿತು, ಗೆಲ್ಲುವ ಆಸೆ ಅಡಗಿಹೋಯಿತು, ಆಗ ದಣಿವು ಉಂಟಾಯಿತು. ದೇವೇಂದ್ರ ಮೊದಲಾದ ದೇವತಾಸಮೂಹಕ್ಕೆ ಭಯ ಉಂಟಾಯಿತು. ಆಗ ವಿಷ್ಣುವು ಒಂದು ಉಪಾಯದಿಂದ ನಸುನಗುತ್ತ ವೀರ ಜಲಂಧರನೊಡನೆ ವಿನಯವಾದ ಮಾತುಗಳಿಂದ ಹೀಗೆ ಹೇಳಿದನು. ೩೬. ರಾಕ್ಷಸರಾಜನೆ, ನಿನ್ನ ಪರಾಕ್ರಮಕ್ಕೆ ಮೆಚ್ಚಿಕೊಂಡೆನು. ನಿನ್ನ ಮನಸ್ಸಿನಲ್ಲಿರುವ ವರವೇನು, ಅದನ್ನು ಕೇಳು ಎನ್ನಲು ರಾಕ್ಷಸನು ನಗುತ್ತ ಕೀಳಾದ ರೀತಿಯಲ್ಲಿ ಗರುಡ, ಮಧುಕೈಟಭ ಮೊದಲಾದವರನ್ನು ಗೆದ್ದ ರೀತಿಯಲ್ಲ ಇದು. ಈಗ ನೀನು ಮೆಚ್ಚಿರುವುದಾದರೆ ಒಳ್ಳೆಯದು. ನಿನ್ನ ಪತ್ನಿಯ ಸಮೇತ ನೆಮ್ಮದಿಯಿಂದ ಬಂದು ನಮ್ಮ ಮನೆಯಲ್ಲಿ ಸೆರೆಯಲ್ಲಿರು—ಎಂದುದನ್ನು ವಿಷ್ಣುವು ಕೇಳಿ, ಈ ರಾಕ್ಷಸನು ಬಿಡುವವನಲ್ಲ ಎಂದು ಮನಸ್ಸಿನಲ್ಲಿ ನಿರ್ಧರಿಸಿದನು. ೩೭. ಈ ರೀತಿ ಹೇಳಿದ ವೀರ ಜಲಂಧರನ ಮಾತಿಗೆ ವಿಷ್ಣು ಮತ್ತು ಲಕ್ಷ್ಮಿಯರು ಒಪ್ಪಿ ತಕ್ಷಣ ರಾಕ್ಷಸನ ರಥವನ್ನು

CC-0. Jangamwadi Math Collection. Digitized by eGangotri

ಸಂತೋಷದಿಂ ಪಿಡಿದುಕೊಂಡು ಜಯದುಬ್ಬಿನಿಂ
ತಾಂ ತಿರುಗಿದಂ ತನ್ನ ಪಟ್ಟಣಕೆ ನಾನಾ ದಿ
ಗಂತಮುಂ ವಾದ್ಯರವವಮಳ್ಳಿರಿಯೆ ನಿಖಿಳಸೇನಾತತಿಯು ಗಡಣದಿಂದೆ ೩೭

ಗುಡಿತೋರಣದ ರಚನೆಯಿಂದೊಡನೆ ಕಳಸಕ
ನ್ನಡಿವಿಡಿದ ಬಾಲೆಯರ ಸಾಲ್ಗಳಿಂದರಮನೆಗೆ
ಸಡಗರದೊಳೈತಂದು ಸಿರಿವೆರಸಿ ಹರಿಯನೊಂದರಮನೆಯೊಳಿರಿಸಿ ಬಳಿಕೆ
ಬಿಡದೆ ಶತಕೋಟಿ ರಾಕ್ಷಸರ ಕಾವಲನಿಕ್ಕಿ
ಜಡಜಭವ ದಿವಿಜೇಂದ್ರ ಮುಖ್ಯಸುರರಂ ಕರೆದು
ನುಡಿದನೆಲ್ಲರುಮೆನ್ನ ಸೇವೆಯಂ ಮಾಡಿಕೊಂಡಿರಿಮೆನಲ್ ಕೈಕೊಂಡರು ೩೮

ಕಮಲಜಂ ಮಂತ್ರಾಕ್ಷತೆಯನೀವನಸುರಂಗೆ
ಸುಮನೋಧಿಪತಿಮುಖ್ಯ ಸಕಲ ಬೃಂದಾರಕರ್
ತಮತಮಗೆ ಪೇಳ್ದೊಳಿಗಂಗಳಂ ಮಾಡಿಕೊಂಡಾ ಖಳನ ಚಿತ್ತವರಿದು
ಕ್ರಮದೊಳಿರ್ಪರ್ ಶಿವನ ಕೈಲಾಸವೊಂದಲ್ಲ
ದಮರಾರಿ ಮಿಕ್ಕ ಭೂ ಸ್ವರ್ಗ ಪಾತಾಳಲೋ
ಕವನೆಲ್ಲಮಂ ವಶಂಗೆಯ್ದು ಸಕಲೈಶ್ವರ್ಯದಿಂದೆ ಬಾಳುತ್ತಿರ್ದನು ೩೯

ಇಂತು ಮೂರರ್ಬುದಾಬ್ದಂ ಸಕಲ ಲೋಕಮಂ
ಚಿಂತೆಯಿಲ್ಲದೆ ಪಾಲಿಸುತ್ತಿರಲ್ ಸಕಲ ಸುರ
ಸಂತತಿಗಳತಿಚಿಂತೆಯಿಂದೆ ಹರಿಯಜರೊಳೊಂದಿನ ಗುಪ್ತದಿಂ ಯೋಚಿಸಿ

ಹತ್ತಿದರು. ಬ್ರಹ್ಮ ಇಂದ್ರ ಮೊದಲಾದ ಸಕಲ ದೇವತೆಗಳನ್ನೂ ಸೆರೆಹಿಡಿದುಕೊಂಡು ವಿಜಯದ ಉತ್ಸಾಹದಿಂದ, ಸಕಲ ಸೈನ್ಯಸಮೂಹದೊಡಗೂಡಿ, ವಾದ್ಯಗಳ ಶಬ್ದವು ದಿಗಂತಗಳನ್ನು ವ್ಯಾಪಿಸಲು, ತನ್ನ ಪಟ್ಟಣಕ್ಕೆ ಹಿಂದಿರುಗಿದನು. ೩೮. ಧ್ವಜ ತೋರಣ ಗಳ ಅಲಂಕಾರದಿಂದ, ಕಲಶ–ಕನ್ನಡಿ ಹಿಡಿದ ಬಾಲೆಯರ ಸಾಲುಗಳಿಂದ ಅರಮನೆಗೆ ಸಂಭ್ರಮದಿಂದ ಬಂದು, ಲಕ್ಷ್ಮೀಸಮೇತನಾಗಿ ವಿಷ್ಣುವನ್ನು ಒಂದು ಅರಮನೆಯಲ್ಲಿ ಇರಿಸಿದನು. ಅನಂತರ ನೂರು ಕೋಟಿ ರಾಕ್ಷಸರನ್ನು ಅವರಿದ್ದ ಅರಮನೆಗೆ ಕಾವಲಾಗಿ ಇಟ್ಟು, ಬ್ರಹ್ಮ ದೇವೇಂದ್ರನೇ ಮುಂತಾದ ಪ್ರಮುಖ ದೇವತೆಗಳನ್ನು ಕರೆದು ನೀವೆಲ್ಲರೂ ನನ್ನ ಸೇವೆಯನ್ನು ಮಾಡಿಕೊಂಡಿರಿ ಎಂದನು. ಅವರು ಹಾಗೆಯೇ ಮಾಡಿದರು. ೩೯. ಬ್ರಹ್ಮನು (ರಾಕ್ಷಸನಿಗೆ) ಜಲಂಧರನಿಗೆ ಮಂತ್ರಾಕ್ಷತೆಯನ್ನು ಕೊಡುತ್ತಾನೆ. ದೇವೇಂದ್ರನೇ ಮೊದಲಾದ ದೇವತೆಗಳೆಲ್ಲ ತಮತಮಗೆ ಹೇಳಿದ ಸೇವೆಗಳನ್ನು ಮಾಡಿಕೊಂಡು ಜಲಂಧರನ ಮನಸ್ಸನ್ನು ತಿಳಿದುಕೊಂಡು ಸರಿಯಾಗಿದ್ದಾರೆ. ಶಿವನ ಕೈಲಾಸವೊಂದನ್ನು ಬಿಟ್ಟು ಜಲಂಧರನು ಮಿಕ್ಕ ಭೂ, ಸ್ವರ್ಗ, ಪಾತಾಳಲೋಕಗಳೆಲ್ಲವನ್ನೂ ವಶಮಾಡಿಕೊಂಡು ಸಕಲ ಸಂಪತ್ತಿನಿಂದ ಕೂಡಿ ಬಾಳುತ್ತಿದ್ದನು. ೪೦. ಈ ರೀತಿಯಲ್ಲಿ ಜಲಂಧರನು ಮೂರು ಅರ್ಬುದ ವರ್ಷಗಳವರೆಗೆ ಎಲ್ಲ ಲೋಕಗಳನ್ನೂ ಚಿಂತೆ ಇಲ್ಲದೆ ಆಳುತ್ತಿರಲು,

CC-0. Jangamwadi Math Collection. Digitized by eGangotri

ಏತು ತಾಳ್ದಪೆವೀತನಾಳಿಯುಮನೈಶ್ವರ್ಯ
ಸೇತುವಂ ಕಾಣೆವೆಲ್ಲರ್ ಪೋಗಿ ಪೇಳ್ವೆವಾ
ನಾಥನಾತನುಂ ಪರಿಯದೊಡೆ ಮರಣಮೇ ಶರಣ್ಯಮೆಮಗೆಂದರು ೪೦

ಈ ತೆರದೊಳಜಹರೀಂದ್ರಾದಿಗಳ್ ತಮ್ಮೊಳಗೆ
ಮಾತಾಡಿಕೊಂಡೊಂದಿನಂ ರಾತ್ರಿಯೊಳ್ ಸುರ
ವ್ರಾತಮುಂ ಬೆರಸಿ ರಕ್ಕಸರರಿಯದಂತತಿರಹಸ್ಯದಿಂದೈದೆ ಬಂದು
ಸಾತಿಶಯಮಾದ ಕೈಲಾಸಾದ್ರಿಯಂ ಪೊಕ್ಕು
ಭೂತನಾಥಂಗೆ ಸಾಷ್ಟಾಂಗದಿಂದೆರಗಲತಿ
ಪ್ರೀತಿಯಿಂದಭವನವರಂ ನೋಡಿ ಬಂದುದೇನೆನುತೆ ಹರಿಯಂ ಕೇಳ್ದನು ೪೧

ಎಲೆ ಮಹಾದೇವ ಬಿನ್ನಪವನವಧರಿಸೊರ್ವ
ಖಳ ಜಲಂಧರನೆಂಬವಂ ಪೆರ್ಚಿ ನಾವಿರ್ದ
ಪೊಳಲ್ಗಳಂ ಬಿಡದೆ ಸಾಧಿಸಿ ಸಮಸ್ತರನಿರದೆ ಪಿಡಿದುಕೊಂಡೊಯ್ದು ತನ್ನ
ನಿಳಯದೊಳ್ ಸೆರೆಗೆಯ್ಯೆ ಬಿಟ್ಟೋಡಿ ಶಿವ ನಿಮ್ಮ
ಬಳಿಗೆ ಬಂದೆವು ಕಾವುದೆಂದು ಬಿನ್ನವಿಸಲ್ಕೆ
ತಿಳಿದಾ ಜಲಂಧರನ ಸಂಹರಿಪೆವಂಜಬೇಡೆಂದು ನಂಬುಗೆಯಿತ್ತನು ೪೨

ದೇವತೆಗಳೆಲ್ಲರೂ ಅತಿಯಾದ ಚಿಂತೆಯಿಂದ ವಿಷ್ಣು–ಬ್ರಹ್ಮರ ಜೊತೆಯಲ್ಲಿ ಒಮ್ಮೆ ಗುಪ್ತವಾಗಿ ಸಮಾಲೋಚನೆ ನಡೆಸಿ ಇವನ ಪೀಡೆಯನ್ನು ನಾವು ಹೇಗೆ ಸಹಿಸುವುದು ? ಇವನ ಸಂಪತ್ತಿಗೆ ಕೊನೆಯನ್ನೇ ಕಾಣೆವಲ್ಲ, ನಾವೆಲ್ಲರೂ ಹೋಗಿ ಈಶ್ವರನ ಕೂಡೆ ಈ ವಿಷಯವನ್ನು ಹೇಳುತ್ತೇವೆ. ಆತನಿಂದಲೂ ಈ ಕಷ್ಟ ಪರಿಹಾರವಾಗದಿದ್ದರೆ ನಮಗೆ ಮರಣವೇ ಶರಣು ಎಂದರು. ೪೧. ಈ ರೀತಿಯಲ್ಲಿ ಬ್ರಹ್ಮ–ವಿಷ್ಣುಗಳು ತಮ್ಮ ತಮ್ಮೊಳಗೆ ಮಾತನಾಡಿಕೊಂಡು ಒಂದು ದಿನ ರಾತ್ರಿಯಲ್ಲಿ ದೇವತೆಗಳ ಸಮೂಹದೊಡನೆ, ರಾಕ್ಷಸರಿಗೆ ತಿಳಿಯದಂತೆ ಅತಿರಹಸ್ಯದಿಂದ ಹೊರಟುಬಂದು, ಅತಿಶಯವಾದ ಕೈಲಾಸಪರ್ವತವನ್ನು ಪ್ರವೇಶಿಸಿ, ಶಿವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಶಿವನು ಅವರನ್ನು ಬಹಳ ಪ್ರೀತಿಯಿಂದ ನೋಡಿ, ಏನು ಬಂದಿರಿ ಎಂದು ವಿಷ್ಣುವನ್ನು ಕೇಳಿದನು. ೪೨. ಎಲೈ ಮಹಾದೇವನೆ, ನಮ್ಮ ವಿಜ್ಞಾಪನೆಯನ್ನು ಲಾಲಿಸು. ಜಲಂಧರನೆಂಬ ದುಷ್ಟ ರಾಕ್ಷಸನು ಕೊಬ್ಬಿ, ನಾವಿದ್ದ ನಗರಗಳನ್ನು ವಶಮಾಡಿಕೊಂಡು ನಮ್ಮೆಲ್ಲರನ್ನು ಬಿಡದಂತೆ ಕೈಸೆರೆ ಹಿಡಿದುಕೊಂಡು ಹೋಗಿ ಅವನ ಅರಮನೆಯಲ್ಲಿ ಬಂಧಿಸಿದನು. ಅಲ್ಲಿಂದ ತಪ್ಪಿಸಿಕೊಂಡು ನಿಮ್ಮ ಬಳಿಗೆ ಓಡಿಬಂದಿದ್ದೇವೆ. ನೀವು ಕಾಪಾಡಬೇಕು ಎಂದು ವಿಜ್ಞಾಪಿಸಲು, ಅದನ್ನು ತಿಳಿದು ಶಿವನು ಜಲಂಧರನನ್ನು ಸಂಹರಿಸುತ್ತೇನೆ.

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೩

ಇಪ್ಪತ್ತೈದನೆಯ ಸಂಧಿ ಸಂಪೂರ್ಣ

ಹೆದರಬೇಡಿ ಎಂದು ಭರವಸೆಯನ್ನು ಕೊಟ್ಟನು. ೪೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೈದನೆಯ ಸಂಧಿ ಮುಗಿಯಿತು



CC-0. Jangamwadi Math Collection. Digitized by eGangotri

ಎಂತು ತಾಳ್ದಪೆವೀತನಲೆಯುನಿವನೈಶ್ವರ್ಯ
ಕಂತಮುಂ ಕಾಣೆವೆಲ್ಲರ್ ಪೋಗಿ ಪೇಳ್ವೆವಾ
ಕಂತುಹರಗಾತನಿಂ ಪರಿಯದೊಡೆ ಮರಣಮೇ ಮೌಳ್ಯಧನಮೆಮಗೆಂದರು ೪೦

ಈ ತೆರದೊಳಜಹರೀಂದ್ರಾದಿಗಳ್ ತಮ್ಮೊಳಗೆ
ಮಾತಾಡಿಕೊಂಡೊಂದಿನಂ ರಾತ್ರಿಯೊಳ್ ಸುರ
ವ್ರಾತಮುಂ ಬೆರಸಿ ರಕ್ಕಸರರಿಯದಂತತಿರಹಸ್ಯದಿಂದ್ಯೆದೆ ಬಂದು
ಸಾತಿಶಯಮಾದ ಕೈಲಾಸಾದ್ರಿಯಂ ಪೊಕ್ಕು
ಭೂತನಾಥಂಗೆ ಸಾಷ್ಟಾಂಗದಿಂದೆರಗಲತಿ
ಪ್ರೀತಿಯಿಂದಭವನವರಂ ನೋಡಿ ಬಂದುದೇನೆನುತೆ ಹರಿಯಂ ಕೇಳ್ದನು ೪೧

ಎಲೆ ಮಹಾದೇವ ಬಿನ್ನಪವನವಧರಿಸೊರ್ವ
ಖಳ ಜಲಂಧರನೆಂಬವಂ ಪೆರ್ಚಿ ನಾವಿರ್ದ
ಪೊಳಲ್ಗಳಂ ಬಿಡದೆ ಸಾಧಿಸಿ ಸಮಸ್ತರನಿರದೆ ಪಿಡಿದುಕೊಂಡೊಯ್ದು ತನ್ನಾ
ನಿಳಯದೊಳ್ ಸೆರೆಗೆಯ್ಯೆ ಬಿಟ್ಟೋಡಿ ಶಿವ ನಿಮ್ಮ
ಬಳಿಗೆ ಬಂದೆವು ಕಾವುದೆಂದು ಬಿನ್ನವಿಸಲ್ಕೆ
ತಿಳಿದಾ ಜಲಂಧರನ ಸಂಹರಿಪೆವಂಜಬೇಡೆಂದು ನಂಬುಗೆಯಿತ್ತನು ೪೨

ದೇವತೆಗಳೆಲ್ಲರೂ ಅತಿಯಾದ ಚಿಂತೆಯಿಂದ ವಿಷ್ಣು–ಬ್ರಹ್ಮರ ಜೊತೆಯಲ್ಲಿ ಒಮ್ಮೆ ಗುಪ್ತವಾಗಿ ಸಮಾಲೋಚನೆ ನಡೆಸಿ ಇವನ ಪೀಡೆಯನ್ನು ನಾವು ಹೇಗೆ ಸಹಿಸುವುದು ? ಇವನ ಸಂಪತ್ತಿಗೆ ಕೊನೆಯನ್ನೇ ಕಾಣೆವಲ್ಲ, ನಾವೆಲ್ಲರೂ ಹೋಗಿ ಈಶ್ವರನ ಕೂಡೆ ಈ ವಿಷಯವನ್ನು ಹೇಳುತ್ತೇವೆ. ಆತನಿಂದಲೂ ಈ ಕಷ್ಟ ಪರಿಹಾರವಾಗದಿದ್ದರೆ ನಮಗೆ ಮರಣವೇ ಶರಣು ಎಂದರು. ೪೧. ಈ ರೀತಿಯಲ್ಲಿ ಬ್ರಹ್ಮ–ವಿಷ್ಣುಗಳು ತಮ್ಮ ತಮ್ಮೊಳಗೆ ಮಾತನಾಡಿಕೊಂಡು ಒಂದು ದಿನ ರಾತ್ರಿಯಲ್ಲಿ ದೇವತೆಗಳ ಸಮೂಹದೊಡನೆ, ರಾಕ್ಷಸರಿಗೆ ತಿಳಿಯದಂತೆ ಅತಿರಹಸ್ಯದಿಂದ ಹೊರಟುಬಂದು, ಅತಿಶಯವಾದ ಕೈಲಾಸಪರ್ವತವನ್ನು ಪ್ರವೇಶಿಸಿ, ಶಿವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಶಿವನು ಅವರನ್ನು ಬಹಳ ಪ್ರೀತಿಯಿಂದ ನೋಡಿ, ಏನು ಬಂದಿರಿ ಎಂದು ವಿಷ್ಣುವನ್ನು ಕೇಳಿದನು. ೪೨. ಎಲೈ ಮಹಾದೇವನೆ, ನಮ್ಮ ವಿಜ್ಞಾಪನೆಯನ್ನು ಲಾಲಿಸು. ಜಲಂಧರನೆಂಬ ಒಬ್ಬ ದುಷ್ಟ ರಾಕ್ಷಸನು ಕೊಬ್ಬಿ ನಾವಿದ್ದ ನಗರಗಳನ್ನು ವಶಮಾಡಿಕೊಂಡು ನಮ್ಮೆಲ್ಲರನ್ನೂ ಬಿಡದಂತೆ ಕೈಸೆರೆ ಹಿಡಿದುಕೊಂಡು ಹೋಗಿ ಅವನ ಅರಮನೆಯಲ್ಲಿ ಬಂಧಿಸಿಡಲು, ಅಲ್ಲಿಂದ ತಪ್ಪಿಸಿಕೊಂಡು ನಿಮ್ಮ ಬಳಿಗೆ ಓಡಿಬಂದಿದ್ದೇವೆ, ನೀವು ಕಾಪಾಡಬೇಕು ಎಂದು ವಿಜ್ಞಾಪಿಸಲು, ಅದನ್ನು ತಿಳಿದು ಶಿವನು ಜಲಂಧರನನ್ನು ಸಂಹರಿಸುತ್ತೇನೆ,

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಿಮಂ ಸಕಲಭೋಗಮುನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೩.

ಇಪ್ಪತ್ತೈದನೆಯ ಸಂಧಿ ಸಂಪೂರ್ಣ

ಹೆದರಬೇಡಿ ಎಂದು ಭರವಸೆಯನ್ನು ಕೊಟ್ಟನು. ೪೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೈದನೆಯ ಸಂಧಿ ಮುಗಿಯಿತು



CC-0. Jangamwadi Math Collection. Digitized by eGangotri

# ಇಪ್ಪತ್ತಾರನೆಯ ಸಂಧಿ

ಸೂಚನೆ : ವರಜಲಂಧರನತುಳಗರ್ವದಿಂ ಕೈಲಾಸ
ಪುರಕೆ ದಾಳಿಯನಿಡೆ ಶಿವಂ ಕೇಳ್ದು ಕೋಪದಿಂ
ಧುರದೊಳಾತನ ಶಿರವನರಿದವನ ಜೀವಮಂ ಪಣೆಗಣ್ಣೊಳಡಗಿಸಿದನು

ಶಕ್ರಪಂಕಜಜಾತ ಚಕ್ರಧರವಿನುತಪಾ
ದಾಕ್ರಾಂತಲೋಕ ಘನವಿಕ್ರಮಾಮ್ನಾಯವ್ಯ
ತಿಕ್ರಮಚರಿತ್ರ ದಕ್ಷಕ್ರತುವಿನಾಶ ವಿಲಯಕ್ರೋಧ ವರವಿನೋದ
ಚಕ್ರಿಪ್ರಜಾಭರಣ ಶಕ್ರಭವವರದ ಸ
ಮ್ಯಕ್ಕೃಪಾಪಾಂಗ ಲೀಲಾಕ್ರಮವಿಲಾಸ ಖಳ
ಶುಕ್ರಶಿಷ್ಯ ಪ್ರಳಯಶುಕ್ರ ಪಂಪಾವಿರೂಪಾಕ್ಷ ಸಲಹಾನತರನು ೧

ರಾಮ ಕೇಳಿತ್ತಲ್ ಜಲಂಧರಂ ಮರುದಿನಂ
ರಾಮಣೀಯಾಸ್ಥಾನದೊಳ್ ಸಕಲ ರಾಕ್ಷಸ
ಸ್ತೋಮವೆರಸೋಲಗದೊಳಿರುತಿರ್ದು ಕೂಡೆ ನಿರ್ಜರರ ಸುಳಿವಂ ಕಾಣದೆ
ಭೀಮರೂಪಾಗಿ ದೂತರನಟ್ಟಲವರರಿದು
ತಾಮರಸನಯನಜೇಂದ್ರಾದಿ ಸುರರಿರುತಿರ್ಪ
ಧಾಮಂಗಳೆಲ್ಲಮುಂ ಶೂನ್ಯಮೆನೆ ಕೇಳ್ದು ಗುಡುಗುಡಿಸಿದಂ ಖಳರಾಜನು ೨

ಸೂಚನೆ : ಪರಾಕ್ರಮಿಯಾದ ಜಲಂಧರನು ಬಹಳ ಗರ್ವದಿಂದ ಕೈಲಾಸಪುರಕ್ಕೆ ದಾಳಿಯಿಟ್ಟನು. ಅದನ್ನು ಕೇಳಿದ ಶಿವನು ಕೋಪದಿಂದ, ಯುದ್ಧದಲ್ಲಿ ಅವನ ತಲೆಯನ್ನು ಕತ್ತರಿಸಿ, ಅವನ ಜೀವನವನ್ನು ತನ್ನ ಹಣೆಗಣ್ಣಿನಲ್ಲಿ ಅಡಗಿಸಿದನು. ೧. ದೇವೇಂದ್ರ, ಬ್ರಹ್ಮ, ವಿಷ್ಣು ಇವರಿಂದ ಹೊಗಳಿಸಿಕೊಳ್ಳುವ ಪಾದದಿಂದ ಸಕಲ ಲೋಕಗಳನ್ನೂ ಆಕ್ರಮಿಸಿರುವ ವಿಕ್ರಮಶಾಲಿ, ವೇದಾತೀತ, ದಕ್ಷನ ಯಜ್ಞವನ್ನು ನಾಶಮಾಡಿದವನು, ಪ್ರಳಯಕೋಪಿ, ವಿನೋದಶಾಲಿ, ಸರ್ಪಭೂಷಣ, ಅರ್ಜುನನಿಗೆ ವರವನ್ನು ಕೊಟ್ಟವನು, ಎಲ್ಲರಲ್ಲಿಯೂ ಪರಮ ಕೃಪಾದೃಷ್ಟಿಯುಳ್ಳವನು, ಲೀಲಾವಿನೋದಿ, ಶುಕ್ರಾಚಾರ್ಯನ ಶಿಷ್ಯರಾದ ರಾಕ್ಷಸರಿಗೆ ಪ್ರಳಯಕಾಲದ ಅಗ್ನಿಯಂತಹವನು ಆದ ಪಂಪಾವಿರೂಪಾಕ್ಷನೇ ನಮಸ್ಕರಿಸಿದವರನ್ನು ಕಾಪಾಡು. ೨. ಸಿದ್ಧರಾಮನೇ ಕೇಳು, ಇತ್ತಲಾಗಿ ಜಲಂಧರನು ಮಾರನೆಯ ದಿನ ಮನೋಹರವಾದ ಆಸ್ಥಾನದಲ್ಲಿ ಎಲ್ಲ ರಾಕ್ಷಸರ ಸಮೇತ ಓಲಗ ಗೊಡುತ್ತಿದ್ದು, ಅಲ್ಲಿ ದೇವತೆಗಳ ಸುಳಿವೇ ಕಾಣದೆ ಕೋಪದಿಂದ ಭಯಂಕರನಾಗಿ ಸೇವಕರನ್ನು ಕಳಿಸಿದನು. ಅವರು ಹುಡುಕಿಬಂದು ವಿಷ್ಣುವೇ ಮೊದಲಾದ ದೇವತೆ ಗಳೆಲ್ಲರ ಅರಮನೆಗಳೂ ಖಾಲಿಯಿದೆ ಎಂದು ಹೇಳಿದರು. ಅದನ್ನು ಕೇಳಿ ರಾಕ್ಷಸ

CC-0. Jangamwadi Math Collection. Digitized by eGangotri

ನಾಕ ನರಲೋಕ ಪಾತಾಳಂಗಳೆನ್ನಾಜ್ಞೆ
ಯಾ ಕಪಟದಿವಿಜರಂ ಮರೆವೊಗಿಸಿಕೊಂಬೆನಿಂ
ಬಾಕೆವಾಳರನೊರ್ವರಂ ಕಾಣೆನಿವರೆತ್ತ ಪೋದರೆಂದಸುರಗುರುವ
ಆ ಕಲಿಜಲಂಧರಂ ಬೆಸಗೊಳಲ್ಕೆಲೆ ಮರುಳೆ
ಲೋಕನಾಯಕನನಾ ಸಕಲಬ್ರಹ್ಮಾಂಡಗ
ರ್ಭೀಕರನ ಶಿವನ ಶಂಕರನ ಮರೆವೊಕ್ಕರೆನೆ ದೈತ್ಯಪತಿಯುರಿದೆದ್ದನು ೩

ಸೋಜಿಗವನಾಲಿಸಿದೆನೀಗ ನಾನಾ ಲೋಕ
ರಾಜಿಗಧಿಪತಿಯೊಬ್ಬನುಂಟೆಂಬ ಸುದ್ದಿಯಂ
ಮಾಜುವರೆಯಾನಲ್ಲದಿನ್ನೊಬ್ಬ ಲೋಕನಾಯಕರುಂಟೆಯೆಂದಿನ್ನೆಗಂ
ಆಜಿಯಂ ಮಾಣ್ದಿರ್ದೆನೈಸೆ ಬರಲಖಿಳ ಕರಿ
ವಾಜಿ ರಥ ಭಟರೆನುತೆ ಸಿಂಹಪೀಠದಿನಸುರ
ರಾಜನೆದ್ದಂ ಹರವಿರೋಧಮನುಚಿತಮೆಂಬ ಗುರುವಚನಮಂ ಬಗೆಯದೆ ೪

ದಾಳಿಯಿಟ್ಟುದು ರಜತಶೈಲಕಂದಸುರಜನ
ಪಾಲಕನ ದಂಡು ತದ್ವಾರ್ತೆಯಂ ಕೇಳ್ದೊಡನೆ
ಗೂಳೆಯಂ ತೆಗೆದುದಲ್ಲಿಯ ಜನಂ ಕೈಲಾಸಕಾಗಿ ಬಹುಬೇಗದಿಂದೆ

ರಾಜನು ಸಿಟ್ಟಿನಿಂದ ಗುಡುಗಿದನು. ೩. ಸ್ವರ್ಗ—ಮರ್ತ್ಯ—ಪಾತಾಳಗಳು ನನ್ನ ಆಜ್ಞೆಯಂತೆ ನಡೆಯುತ್ತವೆ. ಆ ಕಪಟಿಗಳಾದ ದೇವತೆಗಳನ್ನು ಮರೆಹೊಗಿಸಿ ರಕ್ಷಿಸುತ್ತೇನೆಂಬ ಶೂರರೊಬ್ಬರನ್ನು ಕಾಣೆ. ಇವರೆಲ್ಲ ಎಲ್ಲಿ ಹೋದರು ಎಂದು ತನ್ನ ಗುರುವನ್ನು ಶೂರ ಜಲಂಧರನು ಕೇಳಲು ಅವರು, ಅಯ್ಯೋ ಹುಚ್ಚ, ಲೋಕನಾಯಕನಾದ ಎಲ್ಲ ಬ್ರಹ್ಮಾಂಡಗಳನ್ನೂ ತನ್ನ ಗರ್ಭದಲ್ಲಿ ಇಟ್ಟುಕೊಂಡಿರುವವನಾದ ಶಿವನ, ಶಂಕರನ ಮರೆ ಹೊಕ್ಕಿದ್ದಾರೆ ಎಂದು ಹೇಳಲು ರಾಕ್ಷಸರಾಜನು ಸಿಟ್ಟಿನಿಂದ ಉರಿದೆದ್ದನು. ೪. ಆಶ್ಚರ್ಯದ ವಿಷಯವನ್ನು ಇಂದು ಕೇಳಿದಂತಾಯಿತು. ಎಲ್ಲ ಲೋಕಗಳ ಸಮೂಹಕ್ಕೂ ಯಜಮಾನ ಒಬ್ಬನುಂಟೆಂಬ ವಿಷಯವನ್ನು ನನ್ನಿಂದ ಮರೆಮಾಚುತ್ತಾರೆಯೆ ? ನಾನಲ್ಲದೆ ಇನ್ನೊಬ್ಬ ಯಜಮಾನನಿಲ್ಲವೆಂದು ತಿಳಿದುಕೊಂಡು ಯುದ್ಧವನ್ನು ನಿಲ್ಲಿಸಿದ್ದೇನಲ್ಲವೆ ? ಎಲ್ಲ ಆನೆ, ಕುದುರೆ, ರಥ ಮತ್ತು ಭಟರೂ ಬರಲಿ ಎನ್ನುತ್ತಾ ಸಿಂಹಾಸನದಿಂದ ಜಲಂಧರನು ಶಿವನ ವಿರೋಧ ಸರಿಯಲ್ಲ ಎಂಬ ಗುರುವಿನ ಮಾತನ್ನು ಲಕ್ಷಿಸದೆ ಮೇಲೆದ್ದನು. ೫. ಕೈಲಾಸಪರ್ವತಕ್ಕೆ ರಾಕ್ಷಸೇಂದ್ರನಾದ ಜಲಂಧರನ ಸೈನ್ಯ ದಾಳಿಯಿಟ್ಟಿತು. ಆ ಸಮಾಚಾರವನ್ನು ಕೇಳಿದ ಕೂಡಲೆ ಅಲ್ಲಿಯ ಜನ ತ್ವರಿತವಾಗಿ ಕೈಲಾಸದ ಕಡೆಗೆ

CC-0. Jangamwadi Math Collection. Digitized by eGangotri

ಆಲಿಸಿದನಿವರ ದೂರಂ ಜಲಂಧರನೊಡನೆ
ಕಾಳೆಗಂ ನಿಮಗೆಂದು ಶಂಕರಂ ನಂದಿಯೊಳ್
ಪೇಳಲಾತಂ ಹರನ ಕಟಕದೊಳ್ ಪೊಯ್ಸಿದಂ ಡಂಗುರವನಾ ಕ್ಷಣದೊಳು ೫

ಎಲೆ ಸಿದ್ಧರಾಮ ಕೇಳಾಕ್ಷಣಂ ಶಂಕರಂ
ಕಲಹಸನ್ನಾಹಮಂ ಕೈಕೊಂಡು ಬಲನೆಡದೊ
ಳುಲಿವ ವೇದಾವಳಿಯ ಘೋಷದಿಂ ವೃಷಪತಿಯನೇರೆ ಗಣಕುಲವಾಗಳು
ಬಳಸಿ ಬರಲಜಸುರೇಂದ್ರಾದಿಗಳ್ ತಂತಮ್ಮ
ಬಲವೆರಸಿ ಬೆನ್ನೊಳೈತರೆ ವಾದ್ಯಘೋಷಣದ
ಕಳಕಳಂ ದಿಙ್ಮಂಡಲದೊಳಿಡಿಯೆ ಶಂಭು ಕೈಲಾಸಗಿರಿಯಿಂದಿಳಿದನು ೬

ದಿಕ್ಕರಿಗಳಂತೈದುತಿರ್ಪಾನೆಗಳ ಘಟೆಗೆ
ಲೆಕ್ಕವಿಲ್ಲಂಬರಕೆ ಚುಂಬಿಸುವ ಪೊಸಪೊನ್ನ
ಪಕ್ಕರಕ್ಕೆಯ ಹಯಾಳಿಗೆ ಗಣನೆಯಿಲ್ಲವುನ್ನತಮಣಿರಥಪ್ರತತಿಯ
ತಕ್ಕಿಗಳ್ಗವಧಿ ಮುನ್ನಿಲ್ಲ ಕಡುಗಲಿಪಾಯ್ದ
ಳಕ್ಕೆ ಕಡೆಯಿಲ್ಲ ದೊರೆದೊರೆಗಳೆನಿಬರೊ ಪೇಳ
ಲಕ್ಕುಮೇ ಶಿವಶಿವಾ ವಾದ್ಯನಿರ್ಘೋಷಕೆ ಜಗಜ್ಜನಂ ಕಿವುಡಾದುದು ೭

ತರತರದೊಳೈದುತಿರ್ಪಾನೆಗಳ ಸೇನೆಗಳ
ಪರಿಪರಿವ ಪಟುವರರೂಥಾಳಿಗಳ ಪಾಳಿಗಳ
ಕರಧೃತಾಯುಧತತಿಯ ಕಾಲಾಳ ಮೇಲಾಳ ಸಂದಣಿಯ ಸನ್ನಾಹದ

ವಲಸೆಹೋದರು. ಶಿವನು ಅವರ ದೂರನ್ನು ಕೇಳಿ ಜಲಂಧರನೊಡನೆ ನಮಗೆ ಯುದ್ಧ ಒದಗಿದೆ ಎಂದು ನಂದಿಗೆ ಹೇಳಲು ಅವನು ಆಕ್ಷಣದಲ್ಲಿ ಶಿವನ ಸೈನ್ಯದಲ್ಲಿ ಡಂಗುರವನ್ನು ಹೊಡೆಸಿದನು. ೬. ಎಲೈ ಸಿದ್ಧರಾಮ, ಕೇಳು, ತಕ್ಷಣವೇ ಶಿವನು ಯುದ್ಧಸನ್ನಾಹ ವನ್ನು ಮಾಡಿದನು. ಬಲ ಎಡಗಳಲ್ಲಿ ವೇದಘೋಷ ಕೇಳಿಬರುತ್ತಿರಲು ಅವನು ನಂದಿಯನ್ನು ಹತ್ತಿಕೊಂಡು, ಶಿವಗಣಗಳಿಂದ ಬಳಸಿ, ಬ್ರಹ್ಮ ದೇವೇಂದ್ರ ಮೊದ ಲಾದವರು ತಮ್ಮ ಸೈನ್ಯದೊಡನೆ ಅವನ ಹಿಂದೆ ಬರುತ್ತಿರಲು, ರಣವಾದ್ಯಗಳ ಕಳ ಕಳ ಶಬ್ದವು ದಿಕ್ಕು ದಿಕ್ಕುಗಳನ್ನು ವ್ಯಾಪಿಸಿರಲು ಶಿವನು ಕೈಲಾಸಪರ್ವತದಿಂದ ಇಳಿದನು. ೭. ದಿಗ್ಗಜಗಳಂತೆ ಬರುತ್ತಿರುವ ಆನೆಗಳ ಗುಂಪಿಗೆ ಲೆಕ್ಕವಿಲ್ಲ. ಆಕಾಶವನ್ನು ಮುತ್ತುವ ಹೊಸ ಬಂಗಾರದ ಜೀನುಗಳಿಂದ ಕೂಡಿದ ಕುದುರೆಗಳಿಗೆ ಗಣನೆಯಿಲ್ಲ, ಶ್ರೇಷ್ಠವಾದ ರತ್ನಖಚಿತ ರಥಗಳ ಸಮೂಹಕ್ಕೆ ಕೊನೆಮೊದಲೇ ಇಲ್ಲ. ಕಡುಗಲಿಗಳಾದ ಕಾಲಾಳುಗಳ ಸೈನ್ಯಕ್ಕೆ ಕೊನೆಯಿಲ್ಲ. ರಾಜರು ಎಷ್ಟು ಜನರಿದ್ದಾರೆ ಎಂದು ಹೇಳಲು ಸಾಧ್ಯವೆ ! ಶಿವ ಶಿವಾ, ವಾದ್ಯದ ಶಬ್ದಕ್ಕೆ ಪ್ರಪಂಚದ ಜನರ ಕಿವಿ ಕಿವುಡಾಯಿತು. ೮. ನಾನಾ ರೀತಿಯಲ್ಲಿ ಬರುತ್ತಿರುವ ಆನೆಯ ಸೈನ್ಯಗಳ, ಹರಿದಾಡುತ್ತಿರುವ ಶ್ರೇಷ್ಠವಾದ ರಥಗಳ ಸಮೂಹಗಳ, ಕೈಯಲ್ಲಿ ಆಯುಧಗಳನ್ನು ಹಿಡಿದು ಸಜ್ಜಾದ ಕಾಲಾಳು ಮೇಲಾಳುಗಳ

CC-0. Jangamwadi Math Collection. Digitized by eGangotri

ಮರುತುಚ್ಚಲಧ್ವಜಪಟಾವಳಿಯ ಗಾವಳಿಯ
ಯಿರವೆ ಡಾಳಿಪ ಚಮರದೊತ್ತುಗಳ ಜೊತ್ತುಗಳ
ಧುರವನೈದುವ ಸುಭಟರುಬ್ಬುಗಳ ಕೊಬ್ಬುಗಳ ಸಂಭ್ರಮಂ ಕಣ್ಗೆಸೆದುದು ೮

ನುತಪುಂಡರೀಕ ವಿಲಸಿತವಾಗಿ ಕೊಳನಲ್ಲ
ಮತುಳಪತ್ರವಿರಾಜವಾಗಿ ಮರನಲ್ಲ ವಿ
ಶ್ರುತಸೋಮಮಂಗಳಬುಧಾನ್ವಿತಂ ತಾನಾಗಿಯಾಕಾಶವಲಯಮಲ್ಲ
ಧೃತಖಡ್ಗಸಂತಾನವಾಗಿಯುಂ ನಾಡೆ ಪ
ರ್ವತಮಲ್ಲ ಕೇತುರಂಜಿತಮುಂ ಗ್ರಹಾಂತ್ಯಮ
ಲ್ಲತಿಘನಸ್ಯಂದನಾನ್ವಿತವಾಗಿ ವನಮಲ್ಲಮೆನಿಸಿ ಪಡೆ ನಡೆಗೊಂಡುದು ೯

ಡಾಳಿಸುವ ವಿವಿಧ ಚಮರಾಳಿಯಿಂ ಪಾಳಿಯಿಂ
ಸಾಲ ಸೀಗುರಿಗಳೊಲೆದಾಟದಿಂ ಘಾಟದಿಂ
ಕಾಳೆಗಳ ಬಿರುದನಿಗಳೆಸಕದಿಂ ಮಸಕದಿಂ ಸೂತರ ಪೊಗಳ್ಕೆಯಿಂದೆ
ಮೇಲೆತ್ತಿದಮಳಾತಪತ್ರದಿಂ ಛತ್ರದಿಂ
ವ್ಯಾಲೋಲಖಡ್ಗಗಳ ಡಾಳದಿಂ ಮೇಳದಿಂ
ಘೀಳಿಡುವ ಬಹುವಿಧದ ವಾದ್ಯದಿಂ ಚೋದ್ಯದಿಂ ಪಡೆ ಪಡೆಪಿನಿಂ ನಡೆದುದು ೧೦

ಸಮೂಹ, ಗಾಳಿಗೆ ಹಾರಾಡುತ್ತಿರುವ ಧ್ವಜಗಳ ಸಮೂಹಗಳು,ಬೀಸುತ್ತಿದ್ದ ಚಾಮರಗಳ ಸಾಲುಗಳು, ಯುದ್ಧಕ್ಕೆ ತೆರಳುವ ಉತ್ಸಾಹಿಗಳೂ ಗರ್ವದಿಂದ ಕೂಡಿದವರೂ ಆದ ಶೂರ ಸೈನಿಕರ ಸಂಭ್ರಮಗಳು ಕಣ್ಣಿಗೆ ಮನೋಹರವಾಗಿ ಕಾಣಿಸಿತು. ೯. ಪುಂಡರೀಕದಿಂದ ಶೋಭಿಸುತ್ತಿದ್ದರೂ ಕೊಳವಲ್ಲ (ಆನೆ, ಕಮಲ), ಪತ್ರಗಳಿಂದ ಕಂಗೊಳಿಸುತ್ತಿದ್ದರೂ ಮರವಲ್ಲ (ವಾಹನ, ಮರ), ಪ್ರಸಿದ್ಧರಾದ ಚಂದ್ರ ಮಂಗಳ ಬುಧರಿಂದ ಕೂಡಿದ್ದರೂ ಆಕಾಶಮಂಡಲವಲ್ಲ, ಖಡ್ಗಸಮೂಹದಿಂದ ಕೂಡಿದ್ದರೂ ಪರ್ವತವಲ್ಲ (ಖಡ್ಗಮೃಗ,ಕತ್ತಿ), ಕೇತುವಿನಿಂದ ರಂಜಿಸುತ್ತಿದ್ದರೂ ಗ್ರಹಗಳ ಕೊನೆಯಲ್ಲ (ಕೇತುಗ್ರಹ, ಧ್ವಜ), ಘನಸ್ಪಂದನದಿಂದ ಕೂಡಿದ್ದರೂ ವನವಲ್ಲ (ರಥ, ಮೋಡದಿಂದ ಸುರಿಯುವ ನೀರು) ಎನ್ನುವಂತೆ ಸೈನ್ಯವು ಮುಂದೆ ನಡೆಯುತ್ತಿತ್ತು. ೧೦. ಬೀಸುವ ನಾನಾ ವಿಧವಾದ ಚಾಮರಗಳ ಸಮೂಹದಿಂದ, ಸಾಲಾಗಿ ಮತ್ತೊಂದು ರೀತಿಯ ಚಾಮರಗಳ ಒಲೆದಾಟದಿಂದ, ಕಹಳೆಗಳ ಅತಿಯಾದ ಬಿರುಸುಧ್ವನಿಯ ಅಬ್ಬರದಿಂದ, ವಂದಿಮಾಗಧರ ಹೊಗಳಿಕೆಯಿಂದ, ಮೇಲಕ್ಕೆತ್ತಿದ ಮಂಗಳಕರವಾದ ಬೆಳ್ಗೊಡೆ ಮತ್ತು ಛತ್ರಿಯಿಂದ, ತೂಗಾಡುವ ಕತ್ತಿಗಳ ದಟ್ಟವಾದ ಹೊಳಪಿನಿಂದ, ಭಯಂಕರವಾಗಿ ಶಬ್ದ ಮಾಡುವ ನಾನಾ ವಿಧವಾದ ವಿಸ್ಮಯಕರವಾದ ವಾದ್ಯಗಳಿಂದ ಕೂಡಿದ ಸೈನ್ಯ ಠೀವಿಯಿಂದ

CC-0. Jangamwadi Math Collection. Digitized by eGangotri

ಧರಣಿ ಜಿಗಿದುದು ಗಜಂಗಳ್ ಕುಗ್ಗಿದುವು ಫಣೀ
ಶ್ವರನ ಪೆಡೆಗಳ್ ಮಣಿದುವಾದಿಕೂರ್ಮ೦ ನಸಿದ
ಸರಸಿಜಭವಾಂಡಖರ್ಪರವಮುರೆ ಕರ್ಚಿದಂ ಬ್ರಹ್ಮಾಂಡವಿಃರದೊಲೆದುದು
ಭರದೊಳುಚ್ಚೈದ್ದ ಕೆಂದೂಳಿಗಳ್ ಧ್ರುವಲೋಕ
ಪರಿಯಂತಮೊತ್ತಿದುವು ಶಿವಶಿವಾ ಶಿವಬಲದ
ಭರವಸವನೇನೆಂಬೆನೈ ಸಿದ್ಧರಾಮ ಕೇಳಚ್ಚರಿಯನಾಕ್ಷಣದೊಳು ೧೧

ಆರ್ಪುಗಳಬಹುದು ಹರಸೈನ್ಯಮೀ ಪರಿಯೊಳ್ ಪೊ
ಡರ್ಪಿನಿಂದ್ಯತರುತ್ತಿರ್ದುದತ್ತಲ್ ಖಳಂ
ಸರ್ಪಭೂಷಣನ ಬಲಕಿದಿರಾಗಿ ನಡೆತರಲ್ ಕಾಣಿಸಿದುವಿರ್ಬಲಗಳು
ಮಾರ್ಪಡೆಯನೀಕ್ಷಿಸಿದ ಮಾತ್ರದಿಂ ಬಿಡದಾರಿ
ದರ್ಪಟುಭಟರ್ ಶರಧಿಘೋಷದಿಂ ರಣಕೊದಗಿ
ಬರ್ಪ ಜೂಣಿಗರ ಕೋಲಾಹಲಂ ಮಸಗಿತದನೇನೆಂಬೆನದ್ಭುತವನು ೧೨

ಮುಂಚಿದುವು ಮನಮನಂಗಳ್ ದೃಷ್ಟಿದೃಷ್ಟಿಗಳ್
ಪಿಂಚಿದುವು ಕರದ ಕರವಾಳಂಗಳಾಕ್ಷಣಂ
ಮಿಂಚಿದುವು ಖಾತಿಯುಬ್ಬರಿಸಿದುವು ಭರವಸದೊಳೈದುತಿಹ ಪದಚರರ್ಗೆ

(ದರ್ಪ) ನಡೆಯಿತು. ೧೧. ಭೂಮಿಯು ಎಗರಿತು, ದಿಗ್ಗಜಗಳು ಕುಗ್ಗಿದುವು, ಆದಿ ಶೇಷನ ಹೆಡೆಗಳು ಬಗ್ಗಿದುವು, ಆದಿಕೂರ್ಮ ಸೊರಗಿದನು. ಬ್ರಹ್ಮಾಂಡದ ಚಿಪ್ಪನ್ನು ಬಲ ವಾಗಿ ಕಚ್ಚಿಕೊಂಡಿತು. ಬ್ರಹ್ಮಾಂಡವು ತೂಗಾಡಿತು. ರಭಸವಾಗಿ ಮೇಲಕ್ಕೆದ್ದ ಕೆಂಪಾದ ಧೂಳು ಧ್ರುವಲೋಕದವರೆಗೂ ಹರಡಿತು. ಶಿವ ಶಿವಾ, ಶಿವನ ಸೈನ್ಯದ ಉತ್ಸಾಹವನ್ನು ಏನು ಹೇಳಲಿ ? ಸಿದ್ಧರಾಮ ಆ ಕ್ಷಣದಲ್ಲಾದ ಆಶ್ಚರ್ಯವನ್ನು ಕೇಳು. ೧೨. ಇದನ್ನು ಹೊಗಳಲು ಯಾರಿಂದ ಸಾಧ್ಯ ? ಶಿವನ ಸೈನ್ಯ ಈ ರೀತಿಯಲ್ಲಿ ಪರಾಕ್ರಮದಿಂದ ಬರು ತ್ತಿದ್ದಿತು. ಅತ್ತಕಡೆ ಜಲಂಧರನು ಹರನ ಸೈನ್ಯಕ್ಕೆ ಎದುರಾಗಿ ಬರಲು ಎರಡು ಕಡೆಯ ಸೈನ್ಯಗಳೂ ಒಂದಕ್ಕೊಂದು ಕಾಣಿಸಿದುವು. ಎದುರುಗಡೆಯ ಸೈನ್ಯವನ್ನು ನೋಡಿದ ಕೂಡಲೆ ಶೂರರಾದ ಸೈನಿಕರು ಆರ್ಭಟಿಸಿದರು. ಸಮುದ್ರಘೋಷದಂತೆ ಯುದ್ಧಕ್ಕೆ ಒದಗಿ ಬರುವ ಸೈನ್ಯದ ಮುಂದಿನ ಸಾಲುಗಳಲ್ಲಿ ಕೋಲಾಹಲ ಉಂಟಾಯಿತು. ಆ ಅದ್ಭುತವನ್ನು ಏನೆಂದು ಹೇಳಲಿ ? ೧೩. ಉತ್ಸಾಹದಿಂದ ಬರುತ್ತಿರುವ ಕಾಲಾಳುಗಳ ಮನಸ್ಸುಗಳು ಮುಂದಾದುವು. ಒಬ್ಬರೊಬ್ಬರ ನೋಟ ಹಿಂದಾದುವು. ಕೈಯಲ್ಲಿದ್ದ ಕತ್ತಿಗಳು ಹೊಳೆದುವು. ಕೋಪವು ಹೆಚ್ಚಾಯಿತು, ಎರಡು ಸೈನ್ಯದ ಮುಂಭಾಗ

CC-0. Jangamwadi Math Collection. Digitized by eGangotri

ಆಂಚಿತದ ಪಲ್ಲಣದ ಗಮಕದಿಂ ಪೊಳಕಿದುವು
ಪಂಚಧಾರಾಪ್ರೌಢವಾಜಿಗಳ್ ತವಕದೆ ಪ
ಳಂಚಿದುವು ಕಾಲ್ವೇಗದಾನೆಗಳ್ ಬಲಯುಗದ ಚೂಳಿ ಸಂಧಿಸುವಾಗಳು ೧೩

ಘೀಳಿಟ್ಟುವಖಿಳವಾದ್ಯಂಗಳದ್ಭುತರವದೆ
ಕಾಳೆಗಳ್ ಕೂಗಿದುವು ಗಜ ಹಯ ರಥಧ್ವನಿಗ
ಳೇಳಿಸಿದುವೊರಲ್ವ ವಾದ್ಯಧ್ವನಿಗಳನಿತುರವಮುಂ ಭಟರ ಹೂಂಕೃತಿಯೊಳು
ಕೀಳೆನಿಸಿದುವು ರಣದೊಳುಭಯವೀರರ್ ಮಹಾ
ಕೋಳಾಹಳದೊಳಿರದೆ ಸೇರಿ ಕೂರಲಗಿನಿಂ
ತೂಳುವೆದ್ದಿರಿದಾಡುತಿರ್ದರತಿಖಾತಿಯಿಂ ಪೇಳಲೇನದ್ಭುತವನು ೧೪

ಮುಟ್ಟಿ ಮುಂದಲೆಗಳಂ ತುಡುಕುವರ್ ಮಿಡುಕುವರ್
ಜಟ್ಟಿಯಂತೊಳಪೊಕ್ಕು ತಬ್ಬುವರ್ ಕೊಬ್ಬುವರ್
ಸಿಟ್ಟಿನಿಂದಣೆದು ಕೈಯಿಕ್ಕುವರ್ ಸಿಕ್ಕುವರ್ ಕಾಯದೊಳ್ ಸಾಯಕವನು
ಅಟ್ಟಿ ರಿಪುಸುಭಟರಂ ಕೆಡೆಪುವರ್ ಮಡಿಪುವರ್
ಕುಟ್ಟಿ ತಲೆಗಳ ಗಗನಕೆತ್ತುವರ್ ಮುತ್ತುವರ್
ನಿಟ್ಟಿಸುವೊಡರಿದೆನಿಸಿ ಕಾದುವರ್ ಮೋದುವರ್ ಪಟುಸುಭಟರಿರ್ಬಲದೊಳು ೧೫

ಸಂಧಿಸುವಾಗ ಹೊಳೆಯುವ ಜೀನಿನ ಓಲಾಟದಿಂದ ಐದು ಗತಿಗಳಲ್ಲಿ ಪ್ರವೀಣತೆಯನ್ನು ಪಡೆದಿದ್ದ ಕುದುರೆಗಳು ಕಾಣಿಸಿಕೊಂಡುವು. ವೇಗವಾಗಿ ಹೋಗುವ ಆನೆಗಳು ತವಕದಿಂದ ಒಂದನ್ನೊಂದು ತಾಗಿದುವು. ೧೪. ಎಲ್ಲ ವಾದ್ಯಗಳು ಶಬ್ದ ಮಾಡಿದುವು. ಬಹಳ ದೊಡ್ಡ ಶಬ್ದದಿಂದ ಕಹಳೆಗಳು ಕೂಗಿದುವು. ಆನೆ, ಕುದುರೆ, ಮತ್ತು ರಥಗಳ ಧ್ವನಿ ಈ ವಾದ್ಯಗಳ ಧ್ವನಿಯನ್ನು ಮೀರಿಸಿದುವು. ಈ ಎಲ್ಲದರ ಶಬ್ದವನ್ನೂ ಭಟರ ಹೂಂಕಾರ ಶಬ್ದ ಮೀರಿಸಿತು. ಎರಡು ಕಡೆಯ ವೀರರೂ ಯುದ್ಧದಲ್ಲಿ ಬಹಳ ಕೋಲಾಹಲದಿಂದ ಕೂಡಿ ಅತಿಯಾದ ಕೋಪದಿಂದ ಮೇಲೆಬಿದ್ದು ಹರಿತವಾದ ಕತ್ತಿಗಳಿಂದ ಇರಿದಾಡಿದರು. ೧೫. ಎರಡು ಕಡೆಯ ಸೈನ್ಯದಲ್ಲಿ ಶೂರರಾದ ಭಟರು ಆವೇಶಯುಕ್ತರಾಗಿ ಮುಂದಲೆಗಳನ್ನು ಮುಟ್ಟಿ ಗಟ್ಟಿಯಾಗಿ ಹಿಡಿಯುವರು, ಜಟ್ಟಿಗಳಂತೆ ಒಳಹೊಕ್ಕು ತಬ್ಬಿಕೊಳ್ಳುವರು, ಗರ್ವಿಸುವರು, ಸಿಟ್ಟಿನಿಂದ ತಿವಿದು ಪರಾಕ್ರಮವನ್ನು ತೋರಿಸುವರು, ಶರೀರದಲ್ಲಿ ಬಾಣಗಳನ್ನು ಹೂಳುವರು, ಶತ್ರುಸೈನಿಕರನ್ನು ಅಟ್ಟಿಸಿಕೊಂಡು ಹೋಗಿ ಕೆಳಕ್ಕೆ ಕೆಡವಿ ಸಾಯಿಸುವರು. ತಲೆಗಳನ್ನು ಕತ್ತರಿಸಿ ಮೇಲಕ್ಕೆ ಎತ್ತುವರು, ಸುತ್ತುವರಿಯುವರು, ನೋಡಲಸಾಧ್ಯವೆನ್ನುವಂತೆ ಯುದ್ಧ ಮಾಡುವರು, ಹೊಡೆದಾಡುವರು.

CC-0. Jangamwadi Math Collection. Digitized by eGangotri

ಪೇಳ್ವೊಡಚ್ಚರಿಯಾಯ್ತು ಚೂಣಿಗರ ಕೊಳುಗುಳಂ
ತೋಳ್ವೊಯ್ಲು ತುಟಿವೆರಳ ಬೊಬ್ಬೆಗಳ ರಿಪುಗಳಂ
ಸೀಳ್ವ ಸಡಗರದ ಕೋಳಾಹಳದ ಮೂದಲೆಯ ಮಾತುಗಳ ಪೊಸಮುಳಿಸಿನ
ಏಳ್ವ ಬೀಳ್ವುರುಬುವೊತ್ತುವ ತನುಕ್ಷತಗಳಂ
ತಾಳ್ವ ತವಕಿಸುವ ತಟ್ಟುಚ್ಚಿದ ಸರಂಗಳಂ
ಕೀಳ್ವ ಕೋಳಂ ಕೊಂಬ ಸಂಭ್ರಮವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು ೧೬

ಇರ್ತಂಡದೊಳ್ ಚೂಳಿ ಪೊಯ್ದಾಡಿ ಮಡಿಯೆ ಸಂ
ವರ್ತಸಾಗರದಂತೆ ಕರಿ ತುರಗ ರಥ ಪಟುಭ
ಟರ್ತಡೆಯದೆರಡು ಬಲದಿಂದೆ ನೂಂಕಿದರತುಳಕೋಳಾಹಳದ ರಭಸದೆ
ಆರ್ತಡೆಯಬಹುದೆಂಬ ಪೆರ್ಮೆಯಿಂ ತಾಗಿದುವು
ತೇರ್ತೇರೊಳಶ್ವಮಶ್ವದೊಳಾನೆಯಾನೆಯೊಳ್
ಧೂರ್ತತ್ವದಿಂ ಭಟರ್ ಭಟರೊಡನೆ ಸೆಣಸಿದರ್ ನಾನಾ ಪ್ರಕಾರದಿಂದೆ ೧೭

ತಿವಿದರೊತ್ತರಿಸಿದರ್ ನೂಂಕಿದರ್ ತಾಂಕಿದರ್
ಕವಿದರಿಟ್ಟಣಿಸಿದರ್ ಮುತ್ತಿದರ್ ಕುತ್ತಿದರ್
ಜವದೊಳಿರಿದಾಡಿದರ್ ಮುಳ್ಗಿದರ್ ತಳ್ಗಿದರ್ ಸಂಗರಾವೇಶದಿಂದೆ

೧೬. ಮುಂಚೂಣಿಯ ಸೈನಿಕರ ಯುದ್ಧವನ್ನು ವರ್ಣಿಸಲು ಆಶ್ಚರ್ಯವುಂಟಾಯಿತು. ತೋಳು ತಟ್ಟುವ ಶಬ್ದ, ಅಬ್ಬರಿಸುವ ಧ್ವನಿ, ಶತ್ರುಗಳನ್ನು ಕಡಿದುಹಾಕುವ ಸಡಗರದ ಕೋಲಾಹಲ, ಮೂದಲಿಸುವ ಮಾತುಗಳು, ಹೊಸಕೋಪ, ಏಳುವ, ಕೆಳಕ್ಕೆ ಬೀಳುವ, ಮೇಲೆ ಬೀಳುವ, ಒತ್ತಿಕೊಂಡು ಬರುವ, ದೇಹದ ಗಾಯದ ನೋವುಗಳನ್ನು ಸಹಿಸಿಕೊಳ್ಳುವ, ತವಕಪಡುವ, ದೇಹಕ್ಕೆ ಅಂಟಿಕೊಂಡಿದ್ದ ಬಾಣಗಳನ್ನು ಕೀಳುವ, ಸುಲಿಗೆ ಮಾಡುವ ಸಂಭ್ರಮವನ್ನು ಎರಡು ಕಡೆಯ ಸೈನ್ಯವೂ ಬಿಡದೆ ನೋಡುತ್ತಿದ್ದಿತು. ೧೭. ಎರಡು ಕಡೆಯಲ್ಲಿಯೂ ಸೈನ್ಯದ ಮುಂಭಾಗ ಹೋರಾಡಿ ಸಾಯಲು, ಪ್ರಳಯ ಕಾಲದ ಸಮುದ್ರದಂತೆ ಎರಡು ಸೈನ್ಯದ ಆನೆ, ಕುದುರೆ, ರಥ, ಕಾಲಾಳುಗಳು ತಡೆಯದೆ, ಬಹಳ ಕೋಲಾಹಲದಿಂದ ರಭಸವಾಗಿ ತಾಗಿದರು. ನಮ್ಮನ್ನು ಯಾರು ತಡೆಯಲು ಸಾಧ್ಯ ಎಂಬ ಗರ್ವದಿಂದ ರಥಕ್ಕೆ ರಥ, ಕುದುರೆಗೆ ಕುದುರೆ, ಆನೆಗಳ ಜೊತೆಯಲ್ಲಿ ಆನೆಗಳು, ದುಷ್ಟತನದಿಂದ ಕಾಲಾಳುಗಳೊಡನೆ ಕಾಲಾಳುಗಳು ನಾನಾರೀತಿಯಲ್ಲಿ ಯುದ್ಧ ಮಾಡಿದರು. ೧೮. ತಿವಿದರು, ಒತ್ತರಿಸಿದರು, ನೂಕಿದರು, ತಾಗಿದರು, ಮೇಲೆ ಕವಿದರು, ತಿವಿದಾಡಿದರು, ಗುಂಪಾಗಿ ಮುತ್ತಿದರು, ಚುಚ್ಚಿದರು, ವೇಗವಾಗಿ ತಿವಿದಾಡಿದರು, ಕೆಳಕ್ಕೆ ಬಿದ್ದರು, ಧೈರ್ಯಗುಂದಿದರು, ಯುದ್ಧಾವೇಶದಿಂದ ಭಂಗಿಸಿ ಸೈನ್ಯದಲ್ಲಿ

CC-0. Jangamwadi Math Collection. Digitized by eGangotri

ಅವಗಡಿಸಿ ಪೊಕ್ಕು ಪೊಯ್ದಾಡಿದರ್ ಕೋಡಿದರ್
ನವರುಧಿರಧಾರೆಯೊಳ್ ಮುಳುಕಿದರ್ ಪೊಳಕಿದರ್
ತವಕದಿಂ ತಲೆಗಳಂ ಕುಟ್ಟಿದರ್ ಮೆಟ್ಟಿದರ್ ಬಿದ್ದಟ್ಟೆಗಳ ಪಿಂಡನು ೧೮

ಮುರಿವುದಸುರರ ಸೇನೆಯೊರ್ಮೆ ದಿವಿಜರ ದಳಂ
ಪೆರದೆಗೆವುದೊರ್ಮೆ ಪಡಿಬಲಿಸಿ ನೂಂಕುವುದೊರ್ಮೆ
ಪೊರಿಗೆಯಿಂ ಸುರಬಲಂ ಬೆನ್ನೀವುದಮರಾಳಿಗಳ ಸೈನಿಕಂ ಭರದೊಳು
ಇರಿತಮುರಿತದೊಳಿಂತುಟುರ್ಬಲದ ಸುಭಟರೊಳ್
ಕುರಿದರಿಯುಲುರೆ ಜೋಲ್ವ ಖಂಡಗಳ ಮುಂಡಗಳ
ಮುರಿಮೂಳೆವಿಂಡುಗಳ ಪೊಸಬಗೆಯ ಜೊಂಡುಗಳ ರೌಕುಳಂ ಕಂಗೆಸೆದುದು ೧೯

ಮತ್ತೆ ನೂಂಕಿತು ಹರಿಯಜೇಂದ್ರಾದಿ ದಿಕ್ಪಾಲ
ರೊತ್ತರಿಸಿ ಸಕಲ ಸನ್ನಾಹದಿಂ ದೈತ್ಯರಂ
ಕತ್ತರಿಸಿ ಕಡಿದಿರಿದು ತರಿದುರುಬುತಿರಲಂದು ದನುಜರತಿಭೀತಿಯಿಂದೆ
ನಿತ್ತರಿಸಿ ನಿಲಲಾರದೋಡುತಿರೆ ಸುರರು ಬೆಂ
ಬತ್ತಿ ಖೋಯೆಂದಾರ್ದು ಸಂಹರಿಸುತಿರಲಸುರ
ರೊತ್ತಾಯದಿಂದೆ ದೊರೆದೊರೆಗಳೇ ಮುಂಕೊಂಡು ನಡೆದರತಿಖಾತಿಯಿಂದೆ ೨೦

ಹೊಕ್ಕು ಹೊಡೆದಾಡಿದರು. ಧೈರ್ಯಗುಂದಿದರು, ಹೊಸ ರಕ್ತದ ಪ್ರವಾಹದಲ್ಲಿ ಮುಳುಗಿದರು, ಜಗಿದರು, ತವಕದಿಂದ ತಲೆಗಳನ್ನು ಕತ್ತರಿಸಿದರು, ತಲೆ ಕಳೆದುಕೊಂಡು ನೆಲಕ್ಕೆ ಬಿದ್ದ ದೇಹಗಳನ್ನು ತುಳಿದರು. ೧೯. ಒಂದು ಬಾರಿ ರಾಕ್ಷಸರ ಸೈನ್ಯ ಹಿಂತಿರುಗಿಸುತ್ತದೆ, ದೇವತೆಗಳ ಸೈನ್ಯ ಒಂದು ಬಾರಿ ಹಿಂದೆಗೆಯುತ್ತದೆ. ಒಂದು ಸಾರಿ ಅಡ್ಡಗಟ್ಟಿ ದೇವತೆಗಳ ಸೈನ್ಯ ಹಿಂದಕ್ಕೆ ನೂಕುವುದು, ಮತ್ತೊಂದು ಬಾರಿ ದೇವತೆಗಳ ಸೈನ್ಯ ಬೇಗ ಬೆನ್ನು ತೋರಿಸಿ ಓಡಿಹೋಗುವುದು. ತಿವಿತ ಮುರಿತದ ಈ ರೀತಿ ಎರಡೂ ಕಡೆಯ ಸೈನ್ಯದಲ್ಲಿ ಸೈನಿಕರು ಹತರಾಗಲು ಜೋತಾಡುವ ಮಾಂಸಖಂಡಗಳಿಂದ ಕೂಡಿದ ದೇಹಗಳ, ಮುರಿದುಹೋದ ಮೂಳೆಗಳ ರಾಶಿಯ ಹೊಸರೀತಿಯ ಪಾಚಿಗಳ ಹೆಚ್ಚಳವು ಕಣ್ಣಿಗೆ ಕಾಣಿಸಿತು. ೨೦. ಸೈನ್ಯ ಮತ್ತೆ ನೂಕಿತು. ವಿಷ್ಣು, ಬ್ರಹ್ಮ, ಇಂದ್ರ ಮುಂತಾದ ದಿಕ್ಪಾಲಕರು ಒತ್ತರಿಸಿ ಎಲ್ಲ ಸನ್ನಾಹದಿಂದ ರಾಕ್ಷಸರನ್ನು ಕತ್ತರಿಸಿ, ಕಡಿದು, ತಿವಿದು. ತರಿದು ಮೇಲೆ ಬೀಳುತ್ತಿರಲು, ರಾಕ್ಷಸರು ಅತಿಯಾದ ಹೆದರಿಕೆಯಿಂದ ತಡೆದು ನಿಲ್ಲಲಾರದೆ ಓಡುತ್ತಿರಲು, ದೇವತೆಗಳು ಅಟ್ಟಿಸಿಕೊಂಡು ಹೋಗಿ ಬೋ ಎಂದು ಅಬ್ಬರಿಸಿ ಅವರನ್ನು ಕೊಲ್ಲುತ್ತಿದ್ದರು. ಆಗ ರಾಕ್ಷಸರ ಒತ್ತಾಯದಿಂದ ನಾಯಕರೇ

CC-0. Jangamwadi Math Collection. Digitized by eGangotri

ವಾಮನ ವಿರೂಪಾಕ್ಷ ಜಂಭ ಗಜಶಿರ ಖಡ್ಗ
ರೋಮ ವಿದ್ರಾವಣ ನಿಶುಂಭ ತಾರಕ ಕಾಲ
ನೇಮಿ ಜರ್ಝರ ಶಂಖುಶಿರ ವಜ್ರನಾಭ ಖರ ಮುರ ಶುಂಭರಾದಿಯಾದ
ಭೀಮರೂಪಸುರನಾಯಕರೆ ಬರೆ ನೋಡಿ ಸು
ತ್ರಾಮಹರಿಯಜಮುಖ್ಯ ಸುರರೋಡುತಿರೆ ಕಂಡು
ಕಾಮಹರನಿರದೊಡನೆ ಹರಗಣಕೆ ಸೆಲವಿಕ್ಕೆ ಮುಂಕೊಂಡರಾಕ್ಷಣದೊಳು ೨೧

ವರನಂದಿ ಮಾಕಾಳ ಕಾಲಹರ ಕಂಕಾಳ
ಧರ ಸೂರ್ಯಪಾತ ರೇಣುಕ ಭೈರವಾದಿಗಳ್
ಕರದ ಕಾರ್ಮುಕದ ಠಂಕಾರದಿಂ ಮೂಜಗಂ ತಲ್ಲಣಿಸೆ ಕೋಪದಿಂದೆ
ಸರಳ್ಗಳಂ ಕರೆವುತೈತರೆ ದಾನವರ ಬಲದ
ನೆರೆದ ದೊದ್ದೆಗರಾನಲರಿಯದೋಡಲ್ ಕಂಡು
ದುರುಳಬಲ ಶುಂಭ ಧೂಮ್ರಾಕ್ಷ ವೃತ್ರಾದಿಗಳ್ ಕೈಕೊಂಡರಾಹವವನು ೨೨

ಜಂಭನಂ ತಡೆದುಗ್ರನೆಚ್ಚಂ ವೃಷೇಶ್ವರಂ
ಶುಂಭನಂ ತೊಡಕಿದಂ ಭೈರವಂ ಕೆರಳ್ದಾ ನಿ
ಶುಂಭನಂ ತಾಗಿದಂ ವೃತ್ರಂಗೆ ದಂಡಧರನಿದಿರಾಗಿ ಕೋಲ್ಗರೆದನು

ಮುಂದಾಗಿ ಬಲು ಕುಪಿತರಾಗಿ ಹೊರಟರು. ೨೧. ವಾಮನ, ವಿರೂಪಾಕ್ಷ, ಜಂಭ, ಗಜಶಿರ, ಖಡ್ಗರೋಮ, ವಿದ್ರಾವಣ, ನಿಶುಂಭ, ತಾರಕ, ಕಾಲನೇಮಿ, ಜರ್ಝರ, ಶಂಖು, ಶಿರ, ವಜ್ರನಾಭ, ಖರ, ಮುರ, ಶುಂಭ ಮೊದಲಾದ ಭಯಂಕರ ರೂಪದ ರಾಕ್ಷಸ ನಾಯಕರೇ ಬಂದುದನ್ನು ನೋಡಿ ದೇವೇಂದ್ರ, ವಿಷ್ಣು, ಬ್ರಹ್ಮ ಮೊದಲಾದ ಪ್ರಮುಖ ದೇವತೆಗಳು ಓಡುತ್ತಿರಲು ಅದನ್ನು ಕಂಡು ಶಿವನು ಕೂಡಲೆ ತನ್ನ ಗಣಗಳಿಗೆ ಮುಂದೆ ಚಲಿಸಲು ಅಪ್ಪಣೆ ಮಾಡಿದನು. ಆ ತಕ್ಷಣ ಅವರೆಲ್ಲರೂ ಮುನ್ನುಗ್ಗಿದರು. ೨೨. ಶ್ರೇಷ್ಠನಾದ ನಂದಿ, ಮಹಾಕಾಳ, ಕಾಲಹರ, ಕಂಕಾಳಧರ, ಸೂರ್ಯಪಾತ, ರೇಣುಕ, ಭೈರವ, ಇವರೆಲ್ಲರ ಕೈಯ ಬಿಲ್ಲಿನ ಝೇಂಕಾರ ಶಬ್ದದಿಂದ ಮೂರು ಲೋಕಗಳೂ ತಲ್ಲಣಿಸುವಂತೆ ಕೋಪದಿಂದ ಅವರೆಲ್ಲರೂ ಬಾಣಗಳನ್ನು ಬಿಡುತ್ತ ಬಂದರು. ಆಗ ರಾಕ್ಷಸಸೈನ್ಯದಲ್ಲಿ ನೆರೆದಿದ್ದ ಸೈನಿಕರ ಗುಂಪು ಎದುರಿಸಲಾರದೆ ಓಡಿತು. ಅದನ್ನು ನೋಡಿದ ದುಷ್ಟರಾದ ಶುಂಭ, ಧೂಮ್ರಾಕ್ಷ, ವೃತ್ರಾದಿಗಳು ಯುದ್ಧವನ್ನು ಕೈಕೊಂಡರು. ೨೩. ಉಗ್ರನು ಜಂಭನನ್ನು ತಡೆದು ಬಾಣ ಪ್ರಯೋಗಿಸಿದನು. ವೃಷಭನು ಶುಂಭನೊಡನೆ ಯುದ್ಧದಲ್ಲಿ ತೊಡಗಿದನು. ಭೈರವನು ಕೋಪಗೊಂಡು ನಿಶುಂಭನನ್ನು ಎದುರಿಸಿದನು. ವೃತ್ರನಿಗೆ

CC-0. Jangamwadi Math Collection. Digitized by eGangotri

ಕುಂಭಂಗೆ ಮಾರಾಂತು ಕಾಲಹರನೆಚ್ಚಂ ನಿ
ಕುಂಭಗಂ ಕಂಕಾಳಧರನೈದೆ ಸೆಣಸಿದಂ
ಶುಂಭ ನಂದೀಶರ್ಗೆ ಕಾಳೆಗಂ ಬಲಿದುದದನೇನೆಂಬೆನದ್ಭುತವನು ೨೩

ಆದುದಂದಲ್ಲಿ ಸಮರಾಂಗವಿರ್ಬೆರಳಿಂದೆ
ಸೇದುವಂಬಿನ ಕಣ್ಣ ಕಿಡಿಯ ಗರ್ಜಿಪ ಸಿಂಹ
ನಾದದ ಸಘೋರಬದ್ಧಭ್ರುಕುಟಿಮುಖದಲುಷ್ಣಶ್ವಾಸದುಬ್ಬರಗಳ
ಸ್ವೇದಬಿಂದುಪ್ರತಾನಾನ್ವಿತಾಂಗದ ರಣಾ
ಮೋದಚಿತ್ತದ ಕರಚಮತ್ಕೃತಿಯ ವಿಜಯಸಂ
ಪಾದಿಗಳ್ ನಂದಿ ಶುಂಭಾಸುರರ್ ಧುರದೊಳೆಚ್ಚಾಡಿದರ್ ಗಾಢದಿಂದೆ ೨೪

ಶರಕೆ ಶರವದಟಿಗದಟಾವೇಶಕಾವೇಶ
ವಿರದೆ ಗಾಯಕೆ ಗಾಯಮಗ್ಗಳಿಕೆಗಗ್ಗಳಿಕೆ
ಕರಚಮತ್ಕಾರಕೆ ಚಮತ್ಕಾರಮಾರ್ಬಟೆಗೆಯಾರ್ಬಟೆ ತುಳಿಲ್ಗೆ ತುಳಿಲು
ಭರಕೆ ಭರವೊಸನೆ ಮೂಸಲೆಗೆ ಮೂದಲೆಗಳುಂ
ಸರಿಯಾಗೆ ನಂದೀಶ ಶುಂಭಾಸುರರ್ ಮಹಾ
ಧುರದೊಳೆಚ್ಚಾಡಿದರ್ ಕೈಗುಂದದಾಕ್ಷಣಂ ಪೇಳಲೇನಚ್ಚರಿಯನು ೨೫

ಎಸುವರೆಚ್ಚಂಬುಗಳನೋರೊರ್ವರಿರದೆ ಖಂ
ಡಿಸುವರೊಡನಿಸುವರೈದುವ ಸರಳನಾಗ ಛೇ
ದಿಸುವರಾವೇಶದಿಂ ಕೂಗುವರ್ ಬೀಗುವರ್ ಕಣೆಕಣೆಯ ಸೋಂಕಿನಿಂದೆ

ದಂಡಧರನು ಎದುರಾಗಿ ಬಾಣ ಪ್ರಯೋಗಿಸಿದನು. ಕುಂಭನನ್ನು ಪ್ರತಿಭಟಿಸಿ ಕಾಲ ಹರನು ಬಾಣಗರೆದನು. ನಿಕುಂಭನೊಡನೆ ಕಂಕಾಳಧರನು ಸೆಣಸಾಡಿದನು. ಶುಂಭ ಮತ್ತು ನಂದೀಶರಿಗೆ ಘೋರ ಯುದ್ಧವಾಯಿತು. ೨೪. ಅಲ್ಲಿ ಅಂದು ಯುದ್ಧವು ನಡೆಯಿತು. ಎರಡು ಬೆರಳಿನಿಂದಲೂ ಎಳೆದುಬಿಡುವ ಬಾಣಗಳ ಕಿಡಿಕಾರುವ ಕಣ್ಣಿನ, ಸಿಂಹದಂತೆ ಗರ್ಜಿಸುವ ಭಯಂಕರವಾದ ಗಂಟಿಕ್ಕಿದ ಹುಬ್ಬುಗಳುಳ್ಳ, ಮುಖ ಬಿಸಿಯಾದ ಏದುಸಿರು ಬೆವರಹನಿಯ ಸಮೂಹದಿಂದ ಕೂಡಿದ ದೇಹದ, ಯುದ್ಧೋತ್ಸಾಹದಿಂದ ಕೂಡಿದ ಮನಸ್ಸು, ಕೈಚಳಕ ಇವುಗಳಿಂದ ಕೂಡಿ ಜಯವನ್ನು ಸಂಪಾದಿಸಲೋಸುಗ ನಂದಿ ಶುಂಭಾ ಸುರರು ಯುದ್ಧದಲ್ಲಿ ಭೀಕರವಾಗಿ ಹೋರಾಡಿದರು. ೨೫. ಬಾಣಕ್ಕೆ ಪ್ರತಿಬಾಣ, ಸಾಮರ್ಥ್ಯಕ್ಕೆ ಸಾಮರ್ಥ್ಯ, ಯುದ್ಧಾವೇಶಕ್ಕೆ ಆವೇಶ, ಗಾಯಗಳಿಗೆ ಗಾಯ, ದೊಡ್ಡಸ್ತಿಕೆಗೆ ದೊಡ್ಡಸ್ತಿಕೆ, ಕೈಚಳಕಕ್ಕೆ ಕೈಚಳಕ, ಆರ್ಭಟಕ್ಕೆ ಆರ್ಭಟ, ಪರಾಕ್ರಮಕ್ಕೆ ಪರಾಕ್ರಮ, ರಭಸಕ್ಕೆ ರಭಸ, ನಿಂದೆಗೆ ನಿಂದೆ ಇವೆಲ್ಲವೂ ಸಮನಾಗಿರಲು ನಂದೀಶ ಶುಂಭಾಸುರರು ಮಹಾಯುದ್ಧದಲ್ಲಿ ಸೋಲದಂತೆ ಹೋರಾಡಿದರು. ಆ ಆಶ್ಚರ್ಯವನ್ನು ಏನು ಹೇಳಲಿ ? ೨೬. ಯುದ್ಧದಲ್ಲಿ ಬಾಣಪ್ರಯೋಗಿಸುವರು. ಪ್ರಯೋಗಿಸಿದ ಬಾಣ ಗಳನ್ನು ಒಬ್ಬೊಬ್ಬರೂ ಇರದೆ ತುಂಡರಿಸುವರು. ತಕ್ಷಣವೇ ಬಾಣ ಬಿಡುವರು.

CC-0. Jangamwadi Math Collection. Digitized by eGangotri

ಮುಸಗಿ ಬೊಬ್ಬಿರಿವರಿರಿದೊತ್ತುವರ್ ಬಿಲ್ಗಳಂ
ಕುಸುರಿದರಿವರ್ ಕುಬುಬೆನುತ್ತಾರಿಕೊಂಡು ಕ
ಟ್ಟೆಸಕದಿಂ ಪೊಸಬಿಲ್ಲನಾನುವರ್ ತೊಡುವರವರಂಬುಗಳನಾಹವದೊಳು ೨೬

ಕಡಿವ ಕಣೆಗಳ್ಗೆ ಗಡಿಯಿಲ್ಲ ಗಗನಾಂಗಣದೊ
ಳಡಿವಂಬುಗಳ್ಗೆ ಮಿತಿಯಿಲ್ಲ ಭಟರವಯವವ
ನುಡಿವ ಶರತತಿಗವಧಿಯಿಲ್ಲ ಮಾರಾಂತ ರಿಪುಗಳ ಲಲಾಟದ ಲಿಪಿಯನು
ತೊಡೆವ ಬಾಣಕೆ ಲೆಕ್ಕಮಿಲ್ಲಂ ದಿಗಂತದೊಳ್
ಕೆಡೆವ ರಿಪುಚಯಕೆ ಪವಣಿಲ್ಲ ಪಾತಾಳಕ್ಕೆ
ನಡೆವ ಸರಳ್ಗಂತಮಿಲ್ಲೆನೆ ಬಾಣಮಯಮಾಯ್ತು ಮೂಜಗಂ ನಿಮಿಷದೊಳಗೆ ೨೭

ರವಿಗೆ ಸ್ವರ್ಭಾನು ಪುಷ್ಕರಕೆ ಕಾದಂಬಿನೀ
ನಿವಹಮಬ್ಧಿಗೆ ಸೇತು ಪಾತಾಳಕಂ ಗರುಡ
ಮುವನಿರುಹತತಿಗೆ ಪೊಸಪೊದರೊಪ್ಪುವದ್ರಿಸಂಕುಲಕೆ ಘನತರದ ವಜ್ರ
ಭುವಿಗಂಧಕಾರಮಾಹವದೊಳಗೆ ಸೆಣಸುತಿಪ
ವಿವಿಧ ಸುಭಟರ ಮೈಗೆ ಜೋಡೆನಿಸಿ ಸುತ್ತಲುಂ
ಕವಿದುವಾ ಪಟುಭಟರ ಬಾಣಂಗಳೆಲ್ಲಾ ದಿಗಂತದೊಳ್ ಚೋದ್ಯದಿಂದೆ ೨೮

ಬರುತ್ತಿರುವ ಬಾಣವನ್ನು ಮಧ್ಯದಲ್ಲಿಯೇ ಕತ್ತರಿಸುವರು. ಆವೇಶದಿಂದ ಕೂಗುವರು. ಬೀಗುವರು. ಬಾಣ-ಬಾಣಗಳ ಸೋಂಕುವಿಕೆಯಿಂದ ಕೆರಳಿ ಬೊಬ್ಬೆ ಹಾಕುವರು, ತಿವಿದು ಒತ್ತುವರು, ಬಿಲ್ಲುಗಳನ್ನು ತುಂಡರಿಸುವರು. ಕುಬುಬೆನ್ನುತ್ತ ಕೂಗಿ ಅತಿಯಾದ ಪರಾಕ್ರಮದಿಂದ ಹೊಸ ಬಿಲ್ಲನ್ನು ತೆಗೆದುಕೊಂಡು ಅದಕ್ಕೆ ಬಾಣವನ್ನು ಮತ್ತೆ ಹೂಡುವರು. ೨೭. ಕಡಿದುಹಾಕುವ ಬಾಣಗಳಿಗೆ ಮಿತಿಯಿಲ್ಲ, ಆಕಾಶದಲ್ಲಿ ತುಂಬಿ ಕೊಳ್ಳುವ ಬಾಣಗಳಿಗೆ ಲೆಕ್ಕವಿಲ್ಲ. ಸೈನಿಕರ ದೇಹದಲ್ಲಿ ನಾಟಿಕೊಳ್ಳುವ ಬಾಣಗಳಿಗೆ ಮೇರೆಯಿಲ್ಲ. ಪ್ರತಿಭಟಿಸುವ ಶತ್ರುಗಳ ಹಣೆಯಬರಹವನ್ನು ತೊಡೆದುಹಾಕುವ ಬಾಣಕ್ಕೆ ಲೆಕ್ಕವಿಲ್ಲ. ದಿಗಂತದಲ್ಲಿ ಉರುಳುವ ಶತ್ರುಸಮೂಹಕ್ಕೆ ಮಿತಿಯಿಲ್ಲ. ಪಾತಾಳ ಲೋಕವನ್ನು ಹೊಗುವ ಬಾಣಕ್ಕೆ ಕೊನೆಯಿಲ್ಲ ಎನ್ನುವಂತೆ ಮೂರು ಲೋಕ ಗಳೂ ಒಂದು ನಿಮಿಷದೊಳಗೆ ಬಾಣಮಯವಾಯಿತು. ೨೮. ಸೂರ್ಯನಿಗೆ ರಾಹು, ಕಮಲಕ್ಕೆ ಮೋಡಗಳ ಸಮೂಹ, ಸಮುದ್ರಕ್ಕೆ ಸೇತುವೆ, ಪಾತಾಳಕ್ಕೆ ಗರುಡ, ಮರಗಳ ಸಮೂಹಕ್ಕೆ ಹೊಸದಾದ ಪೊದರುಗಳು, ಪರ್ವತಗಳ ಸಮೂಹಕ್ಕೆ ಶ್ರೇಷ್ಠ ವಾದ ವಜ್ರಾಯುಧ (ಸಿಡಿಲು), ಭೂಮಿಗೆ ಕತ್ತಲು—ಈ ಎಲ್ಲವೂ ಯುದ್ಧದಲ್ಲಿ ಹೋರಾಡುತ್ತಿರುವ ನಾನಾ ಶೂರಭಟರ ಶರೀರಕ್ಕೆ ಸಮವೆನ್ನುವಂತೆ ಆ ಸೈನಿಕರು ಬಿಟ್ಟ ಬಾಣಗಳು ದಿಗಂತಗಳಲ್ಲೆಲ್ಲಾ ವಿಸ್ಮಯವನ್ನುಂಟುಮಾಡುವ ರೀತಿಯಲ್ಲಿ

CC-0. Jangamwadi Math Collection. Digitized by eGangotri

ಎಲೆ ಸಿದ್ಧರಾಮ ಕೇಳ್ ಶುಂಭ ನಂದೀಶರ್ಗೆ
ಕಲಹದಾವೇಶಮುಬ್ಬರಿಸಿ ಕರಕಲಿತಮಂ
ದಲಿತ ಕಾರ್ಮುಕರೊಬ್ಬರೊಬ್ಬರಂ ಜಯಿಸುವಭಿಲಾಷೆಯಿಂ ಕೂರ್ಗಣೆಗಳ
ಬಳಿಸಲಿಸಿ ಬೀರುವಂ ದೈತ್ಯನಾ ಬಾಣಮಂ
ಸಲೆ ಸವರಿ ಬಿಸುಡುವಂ ವೃಷಭನಸುರಂ ಮತ್ತೆ
ಹೊಳೆವ ಹೊಂಬರಹದಂಬುಗಳಿಂದೆಸೆ ಕಡಿದಂ ವೃಷರಾಜನಾ ಕ್ಷಣದೊಳು ೨೯

ಚಾಪಮಂ ಕಡಿದನುಡಿದಂ ತೇರನಾ ಹಯದ
ರೂಪಮಂ ಛಿದ್ರಿಸಿದನಾ ಸೂತನಂ ತರಿದು
ಕೋಪಮಂ ತಾಳ್ದು ಸೀಗುರಿ ಛತ್ರ ಚಾಮರ ಪತಾಕೆಗಳ ತಡೆಗಡಿದನು
ತಾಪಮಂ ತೋರಿದಂ ಶುಂಭನೊಳ್ ತದ್ರಣಾ
ಟೋಪಮಂ ನೋಡಿ ವಿಸ್ಮಿತನಾಗಿ ದಾನವಂ
ಪಾಪಮಂ ಭಾವಿಸದೆ ಕೆಟ್ಟು ಮುರಿದೋಡಿದಂ ಭೀತಿಯಿಂದೇನೆಂಬೆನು ೩೦

ಪೇಳಲೇನಚ್ಚರಿಯನಿಂತುಭಯನಾಯಕರ್
ಕಾಳೆಗದೊಳೆಚ್ಚಾಡೆ ವೃಷಭಾದಿ ಪಟುಭಟರ
ಕೋಳಾಹಳವನಾಂತು ಸೈರಿಸದೆ ಮುರಿದರೊಂದೇ ಚಾರಿ ದೊರೆದೊರೆಗಳು

ತುಂಬಿದುವು. ೨೯. ಎಲೈ ಸಿದ್ಧರಾಮನೇ ಕೇಳು, ಶುಂಭ ಮತ್ತು ನಂದೀಶರಿಗೆ ಯುದ್ಧಾವೇಶ ಹೆಚ್ಚಿತು. ಒಬ್ಬರನ್ನೊಬ್ಬರು ಜಯಿಸುವ ಆಸೆಯಿಂದ ಕೈಯಲ್ಲಿದ್ದ ಬಿಲ್ಲುಗಳಿಗೆ ಬಾಣಗಳನ್ನು ಹೂಡಿ ಶುಂಭಾಸುರನು ಬಿಡುವನು. ನಂದೀಶನು ಅದನ್ನು ಕತ್ತರಿಸಿ ಬಿಸುಡುವನು. ಮತ್ತೆ ರಾಕ್ಷಸನು ಚಿನ್ನದ ಬರಹದಿಂದ ಹೊಳೆಯುತ್ತಿರುವ ಬಾಣವನ್ನು ಬಿಡಲು ಆ ಕ್ಷಣದಲ್ಲಿ ನಂದಿಯು ಅದನ್ನು ಕಡಿದುಹಾಕಿದನು. ೩೦. ಬಿಲ್ಲನ್ನು ಕಡಿದು ಹಾಕಿದನು. ತೇರನ್ನು ಮುರಿದು ಹಾಕಿದನು. ಕುದುರೆಯನ್ನು ಛಿದ್ರ ಮಾಡಿದನು. ಸಾರಥಿಯನ್ನು ಕತ್ತರಿಸಿ ಹಾಕಿದನು. ಕೋಪಗೊಂಡು ಕೊಡೆ, ಚಾಮರ, ಬಾವುಟಗಳನ್ನು ತುಂಡರಿಸಿದನು. ಶುಂಭನಿಗೆ ಯುದ್ಧದ ಬೇಗೆಯನ್ನು ತೋರಿದನು. ಅವನ ಯುದ್ಧಾವೇಶವನ್ನು ನೋಡಿ ರಾಕ್ಷಸನು ವಿಸ್ಮಿತನಾಗಿ ಮುಂದೆ ಬರುವ ಪಾಪವನ್ನು ಲೆಕ್ಕಿಸದೆ ಹೆದರಿ ಯುದ್ಧವನ್ನು ಬಿಟ್ಟು ಹಿಂದಿರುಗಿ ಓಡಿದನು. ೩೧. ಆಶ್ಚರ್ಯವನ್ನು ಏನೆಂದು ಹೇಳಲಿ. ಈ ರೀತಿ ಎರಡು ಕಡೆಯ ನಾಯಕರೂ ಯುದ್ಧದಲ್ಲಿ ಬಾಣಪ್ರಯೋಗಮಾಡಿ ಹೋರಾಡಲು, ವೃಷಭ ಮುಂತಾದ ಶೂರ ಸೈನಿಕರ ಪರಾಕ್ರಮವನ್ನು ಎದುರಿಸಿ ಸೈರಿಸಲಾರದೆ ದೊಡ್ಡ ದೊಡ್ಡ ನಾಯಕರು ಒಂದೇ

CC-0. Jangamwadi Math Collection. Digitized by eGangotri

ಭಾಳಲೋಚನನ ಭಟರಿರದೆ ಬೆಂಬತ್ತಿದರ್
ತೂಳದಿಂದಾಕರ್ಣಪರ್ಯಂತ ಸೇದಿದ ಕ
ರಾಳಸ್ಫುಲಿಂಗಸಂಗತಬಾಣನಿಚಯದಿಂದೇನೆಂಬೆನಚ್ಚರಿಯನು ೩೧

ತೋಳಂಗಳಂ ಕಂಡು ಕೆಟ್ಟೋಡುತಿಹ ಕುರಿಯ
ಜಾಳಮೋ ಶಿವಶಿವಾ ಪಸಿದು ಮುಂಬರಿವ ಶಾ
ರ್ದೂಲಂಗಳಂ ಕಾಣುತಳವಳಿದು ಪೋಪ ಮೃಗನಿಚಯಮೋ ಪೇಳೆನಲ್ಕೆ
ಕಾಳರಕ್ಕಸರೋಡಿ ಪೋಗಿ ಖಳನರೆನೆಲೆಯ
ಮೇಲೆ ಬೀಳಲ್ ಕಂಡು ಕಲಿಜಲಂಧರನತಿಕ
ರಾಳಬದ್ಧಭ್ರುಕುಟಿಮುಖನಾಗಿ ನಡೆದನಹಿತರ ಮೇಲೆ ಖಾತಿಯಿಂದೆ ೩೨

ಏನನೆಂಬೆನು ಜಲಂಧರನ ಕೈಸನ್ನೆಯಿಂ
ಸೇನೆ ನೂಂಕಿತು ವಡಬನಂ ಮುಸುಕುವಂಭೋನಿ
ಧಾನಮೆನೆ ಸಮರಸಂರಂಭದಿಂ ವೃಷಭಾದಿ ಸಕಲ ಪಟುಭಟರ ಮೇಲೆ
ಆನಲಸದಳವಾಯ್ತು ಮೆಲ್ಲನೋಸರಿಸಿದುದು
ಸೇನೆ ಶಿವಭಟರ ದನುಜೇಶ್ವರಂ ಕಿಂಚಿದನು
ಮಾನವಿಲ್ಲದೆ ಶಿವನ ಬಲದ ಮೇಲೊತ್ತಿ ನಡೆಯಲ್ ಕಂಡು ಪರನಾಗಳು ೩೩

ಬಾರಿಗೆ ಹಿಮ್ಮೆಟ್ಟಿ ಓಡಿದರು. ಉತ್ಸಾಹದಿಂದ ಕಿವಿಯವರೆಗೆ ಎಳೆದ, ಕರಾಳವಾದ ಬೆಂಕಿಯಿಂದ ಕೂಡಿದ, ಬಾಣಗಳ ಸಮೂಹದಿಂದ ಕೂಡಿದ ಶಿವನ ಸೈನಿಕರು ಬಿಡದೆ ಅವರನ್ನು ಬೆನ್ನಟ್ಟಿದರು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೩೨.- ತೋಳ ಗಳನ್ನು ನೋಡಿ ದಿಕ್ಕೆಟ್ಟು ಓಡುತ್ತಿರುವ ಕುರಿಗಳ ಸಮೂಹವೊ, ಶಿವ ಶಿವಾ, ಹಸಿದು ಮುಂದೆ ನುಗ್ಗುತ್ತಿರುವ ಶಾರ್ದೂಲಗಳನ್ನು ಕಂಡು ಧೈರ್ಯಗುಂದಿ ಹೋಗುತ್ತಿರುವ ಜಿಂಕೆಗಳ ಸಮೂಹವೊ ಹೇಳು ಎಂಬಂತೆ ಕ್ರೂರ ರಾಕ್ಷಸರು ಓಡಿಹೋಗಿ ಜಲಂಧರನ ಸೈನ್ಯದ ಹಿಂದುಗಡೆಯಲ್ಲಿ ಬಿದ್ದರು. ಅದನ್ನು ನೋಡಿ ಶೂರನಾದ ಜಲಂಧರನು ಭಯಂಕರವಾದ ಹುಬ್ಬುಗಂಟಿಕ್ಕಿದ ಮುಖದಿಂದ ಕೂಡಿದವನಾಗಿ ಕೋಪದಿಂದ ಶತ್ರುಗಳ ಮೇಲೆ ಬಿದ್ದನು. ೩೩. ಏನು ಹೇಳಲಿ, ಜಲಂಧರನ ಕೈಸನ್ನೆ ಮಾತ್ರದಿಂದಲೇ ಬಡಬಾಗ್ನಿಯನ್ನು ಮುತ್ತುವ ಸಮುದ್ರವೆನ್ನುವಂತೆ ವೃಷಭ ಮುಂತಾದ ಎಲ್ಲ ಶೂರ ಸೈನಿಕರ ಮೇಲೆ ಸೈನ್ಯವು ರಣೋತ್ಸಾಹದಿಂದ ನುಗ್ಗಿತು. ಅದನ್ನು ತಾಳಲು ಅಸಾಧ್ಯ ವಾಯಿತು. ಶಿವಭಟರ ಸೈನ್ಯ ಮೆಲ್ಲನೆ ಹಿಂದೆ ಸರಿಯಿತು. ಜಲಂಧರನು ಸ್ವಲ್ಪವೂ ಹಿಂದೆ ಮುಂದೆ ನೋಡದೆ ಶಿವನ ಸೈನ್ಯದ ಮೇಲೆ ಮುಸುಕಿ ನಡೆಯಲು ಅದನ್ನು

CC-0. Jangamwadi Math Collection. Digitized by eGangotri

ಮೆಲ್ಲನೆ ಪಿನಾಕಮಂ ಕೊಂಡು ನಸುನಗುತುಮಾ
ವಲ್ಲಭಂ ಬಾಣವೊಂದರೊಳೆಚ್ಚು ತುರಗಂಗ
ಳೆಲ್ಲಮಂ ಕಡಿದು ಕರಿಗಳನುಡಿದು ತೇರ್ಗಳಂ ಮುರಿದು ಕಾಲಾಳ ತರಿದು
ಖುಲ್ಲದನುಜರೊಳರೆಬರಂ ಕೊಂದು ಕೆಲಬರಂ
ನಿಲ್ಲದೋಡಿಸಿ ಕೆಲಂಬರ್ಗೆ ಮೂರ್ಛೆಯನಿತ್ತು
ಸಲ್ಲೀಲೆಯಿಂದಿಂದ್ರಜಾಲದೊಡ್ಡಣೆಯಂತೆ ಖಳಬಲವ ಬರಿಕೆಯ್ದನು ೩೪

ಸೇನೆಯಳಿಯಲ್ ಕಂಡು ಗುಡುಗುಡಿಸಿ ಖಾತಿಯಿಂ
ದಾನವೇಶಂ ತನ್ನ ರಥವನೀಶನ ಪೊರೆಗೆ
ತಾನಿರದೆ ನೂಂಕಿ ಘನತರದ ಕೋದಂಡಮಂ ಕೊಂಡು ಕಡುಮುಳಿಸಿನಿಂದೆ
ಜ್ಯಾನಾದಮಂ ಮಾಡಿ ಬೊಬ್ಬಿರಿದು ಮಾತಾಡು
ನೀನೇ ಮಹೇಶನೆಂಬಾತನೆಂದೆನುತಲನು
ಮಾನಮಿಲ್ಲದೆ ಸರಳಸಾರಮಂ ಕರೆದನದನೇನೆಂಬೆನಚ್ಚರಿಯನು ೩೫

ನೋಡಿದಂ ದಾನವೇಶ್ವರನ ಬಾಣಂಗಳಂ
ಮಾಡಿದಂ ಚಿತ್ರಮಂ ಮತ್ತೊಂದು ಬಾಣಮಂ
ಪೂಡಿದಂ ಸುತ್ತಲುಂ ಕವಿವ ಶರಸಮಿತಿಯಂ ಖಂಡಿಸಲ್ ಖಳರಾಜನು

ಆ ಶಿವನು ನೋಡಿ ಆಗ ೩೪. ಮೆಲ್ಲನೆ ಶಿವನು ತನ್ನ ಪಿನಾಕಧನುವನ್ನು ತೆಗೆದು ಕೊಂಡು ನಸುನಗುತ್ತ ಬಾಣವೊಂದನ್ನು ಬಿಟ್ಟು, ಕುದುರೆಗಳನ್ನು ಕಡಿದು, ಆನೆಗಳನ್ನು ಚೂರು ಮಾಡಿ, ರಥಗಳನ್ನು ಮುರಿದು, ಕಾಲಾಳುಗಳನ್ನು ತರಿದುಹಾಕಿ, ದುಷ್ಟ ರಾಕ್ಷಸರಲ್ಲಿ ಅರ್ಧದಷ್ಟು ಜನರನ್ನು ಕೊಂದು ಕೆಲವರನ್ನು ನಿಲ್ಲದಂತೆ ಓಡಿಸಿತು, ಕೆಲವರಿಗೆ ಮೂರ್ಛೆಯನ್ನುಂಟುಮಾಡಿತು. ಈ ರೀತಿ ಶಿವನು ವಿನೋದದಿಂದ ಇಂದ್ರಜಾಲವನ್ನು ಒಡ್ಡಿದಂತೆ ರಾಕ್ಷಸರ ಸೈನ್ಯವನ್ನು ಬರಿದುಮಾಡಿದನು. ೩೫. ಈ ರೀತಿ ಸೈನ್ಯವು ನಾಶವಾಗಲು ಅದನ್ನು ನೋಡಿ ಗುಡುಗುಡಿಸುತ್ತಾ ಕೋಪದಿಂದ ಜಲಂಧರನು ತನ್ನ ರಥವನ್ನು ಈಶ್ವರನ ಹತ್ತಿರಕ್ಕೆ ನಡೆಸಿಕೊಂಡು ಹೋದನು. ಶ್ರೇಷ್ಠತರವಾದ ಬಿಲ್ಲನ್ನು ತೆಗೆದುಕೊಂಡು ಅತಿಯಾದ ಕೋಪದಿಂದ ಬಿಲ್ಲಿನ ಹೆದೆಯನ್ನು ಎಳೆದು ಝೇಂಕಾರ ಮಾಡಿ ಆರ್ಭಟಿಸಿದನು. ನೀನೇಯೊ ಶಿವನೆಂಬುವನು ? ಮಾತಾಡು ಎನ್ನುತ್ತಾ ಖಚಿತವಾದ ಮನಸ್ಸಿನಿಂದ ಬಾಣಗಳ ಮಳೆಯನ್ನು ಕರೆದನು. ಆ ಆಶ್ಚರ್ಯ ವನ್ನು ಏನೆಂದು ಹೇಳಲಿ. ೩೬. ಜಲಂಧರನು ಹೂಡಿದ ಬಾಣಗಳನ್ನು ಶಿವನು ನೋಡಿ ಒಂದು ಚಮತ್ಕಾರವನ್ನು ಮಾಡಿದನು. ಮತ್ತೊಂದು ಬಾಣವನ್ನು ಬಿಲ್ಲಿಗೆ ಹೂಡಿ ಸುತ್ತಲೂ ಮುತ್ತುತ್ತಿರುವ ಬಾಣಸಮೂಹಗಳನ್ನು ಕತ್ತರಿಸಲು ಜಲಂಧರನು

CC-0. Jangamwadi Math Collection. Digitized by eGangotri

ಕೋಡಿದಂ ಚಿತ್ತದೊಳ್ ಶಂಕರನ ಕೂಡೆ ಮಾ
ತಾಡಿದಂ ಮಚ್ಚರವನಿನ್ನೊಮ್ಮೆ ಕಡಿಯೆನುತೆ
ತೋಡಿದಂ ಬತ್ತಳಿಕೆಯಿಂದಂಬುಗಳನಾಗಳೇನೆಂಬೆನದ್ಭುತವನು ೩೭

ಮತ್ತೆ ಕವಿದುದು ಬಾಣವಾರ್ಧಿ ದಿಗ್ಭಿತ್ತಿಯಂ
ಕೆತ್ತುವಂಬರದೊಳಗೆ ತುಂಬಿದುವು ಗಿರಿಗಳಂ
ಮುತ್ತಿದುವು ಸಪ್ತಶರನಿಧಿಗಳಂ ಪೂಳ್ದುವು ಧರಾತಲವನೊಡೆಬಗಿದುವು
ಚಿತ್ತಜಾರಾತಿಯಿಕ್ಷಿಸಿ ತಲೆಯನಲ್ಲಾಡಿ
ಚಿತ್ತದೊಳ್ ಕಡುಮಚ್ಚಿ ಖಳಪತಿಯ ಕಣೆಗಳಂ
ಕತ್ತರಿಸಿ ಕರುಣಾಕಟಾಕ್ಷದಿಂದಾತಂಗೆ ನಿಜಮೂರ್ತಿಯಂ ತೋರ್ದನು ೩೭

ಕಂಡನಸುರಂ ತನ್ನ ಹೃತ್ಕಮಲದೊಳಗಿರ್ಪ
ಖಂಡಚಿನ್ಮಯನನಿದಿರಿಟ್ಟು ಮಿಗೆ ಸಾಷ್ಟಾಂಗ
ದಂಡಪ್ರಣಾಮಮಂ ಮಾಡಿ ಕೊಂಡಾಡಿದಂ ಭಯಭರಿತಭಕ್ತಿಯಿಂದೆ
ಪುಂಡರೀಕಾಕ್ಷ ಕಮಲಜ ಮುಖ್ಯ ಸುರಮಕುಟ
ಮಂಡಿತಪದಾಬ್ಜ ಗಿರಿಜಾಧವ ಮಹಾದೇವ
ಖಂಡೇಂದುಮೌಳಿ ಕಾಯೆನುತೆ ಮುಗುಳೆರಗಿದಂ ದನುಜಪತಿಯಳ್ಕರಿಂದೆ ೩೮

ಮನಸ್ಸಿನಲ್ಲಿಯೇ ಸೆಡೆತು ನನ್ನ ಬಾಣವನ್ನು ಮತ್ತೊಮ್ಮೆ ಕಡಿದುಹಾಕು ಎಂದು ಶಿವನಿಗೆ ಹೇಳಿ ತನ್ನ ಬತ್ತಳಿಕೆಯಿಂದ ಬಾಣಗಳ ಮಳೆಗರೆದನು. ಆ ಅದ್ಭುತವನ್ನು ಏನೆಂದು ಹೇಳಲಿ. ೩೭. ಮತ್ತೆ ಬಾಣಗಳ ಸಾಗರವು ದಿಗಂತವನ್ನು ಮುಸುಕಿತು, ಕಂಪಿಸುವ ಆಕಾಶದೊಳಗೆ ತುಂಬಿದುವು, ಪರ್ವತಗಳನ್ನು ಮುತ್ತಿದುವು, ಸಪ್ತ ಸಮುದ್ರಗಳನ್ನು ತುಂಬಿದುವು, ಭೂಮಿಯನ್ನು ಬಗಿದುಹಾಕಿದುವು. ಇದನ್ನು ನೋಡಿ ಮದನಹರನಾದ ಶಿವನು ತಲೆಯನ್ನಲ್ಲಾಡಿಸಿ ಮನಸ್ಸಿನಲ್ಲಿಯೆ ಮೆಚ್ಚಿಕೊಂಡು ಜಲಂಧರನ ಬಾಣಗಳನ್ನು ಕತ್ತರಿಸಿ ಕರುಣಾದೃಷ್ಟಿಯಿಂದ ಅವನಿಗೆ ತನ್ನ ನಿಜಸ್ವರೂಪವನ್ನು ತೋರಿದನು. ೩೮. ಆಗ ರಾಕ್ಷಸನು ತನ್ನ ಹೃದಯಕಮಲದಲ್ಲಿ ಹುದುಗಿರುವ ಪರಶಿವನ ಅಖಂಡ ಚಿನ್ಮಯಮೂರ್ತಿಯನ್ನು ತನ್ನ ಎದುರಿನಲ್ಲಿಯೇ ನೋಡಿ, ಸಾಷ್ಟಾಂಗ ನಮಸ್ಕಾರ ಮಾಡಿ ಭಯಭರಿತ ಭಕ್ತಿಯಿಂದ ಕೊಂಡಾಡಿದನು. ವಿಷ್ಣು, ಬ್ರಹ್ಮ, ದೇವೇಂದ್ರಾದಿ ಪ್ರಮುಖರಾದ ದೇವತೆಗಳ ರತ್ನಕಿರೀಟಗಳನ್ನು ಧರಿಸಿದ ಶಿರಗಳು ಮಂಡಿಸಲ್ಪಟ್ಟ ಪಾದಕಮಲಗಳುಳ್ಳ ಉಮಾಪತಿಯೆ, ಮಹಾದೇವ, ಚಂದ್ರ ಶೇಖರನೇ, ಕಾಪಾಡು ಎನ್ನುತ್ತಾ ಭಕ್ತಿಯಿಂದ ಜಲಂಧರನು ನಮಸ್ಕರಿಸಿದನು.

CC-0. Jangamwadi Math Collection. Digitized by eGangotri

ಮೆಚ್ಚಿದೆಂ ಮಗನೆ ನಿನ್ನಯ ಭಕ್ತಿಗಾನಿರದೆ
ಬೆಚ್ಚದಿಂ ಬೇಳ್ಪುದುಸಿರೆಂದೀಶ್ವರಂ ನುಡಿಯೆ
ಸಚ್ಚಿದಾನಂದಸ್ವರೂಪ ನಿನ್ನೊಳ್ ಗರ್ವದಿಂ ಕಾದಿದೆನ್ನೊಡಲನು
ಬಿಚ್ಚಿ ಬಸುಟೀಗಳೆನ್ನಾತ್ಮಮಂ ನಿನ್ನೊಳಗೆ
ಬೆಚ್ಚುಕೊಳ್ಳೆಂದು ದನುಜೇಶ್ವರಂ ಬಿನ್ನವಿಸ
ಲಚ್ಚರಿಯೊಳಭವನಾತಂಗೆ ಸಾಯುಜ್ಯಮಂ ಪಾಲಿಸಲ್ಕನುವಾದನು ೩೯

ಕರುಣದೊಳೆ ಪಾದದಂಗುಷ್ಠದಿಂ ಚಕ್ರಮಂ
ಬರೆದು ನಯನತ್ರಯದೊಳೀಕ್ಷಿಸಲ್ಕದಕಾಗ
ತರಣಿಚಂದ್ರರ್ ಮೊಳೆಗಳಗ್ನಿಯೇ ಪಟ್ಟಿಯಾಯ್ತಾ ಚಕ್ರಮಂ ರುದ್ರನು
ಕರದೊಳಗೆ ಪಿಡಿದಾ ಜಲಂಧರನ ಕಂಧರದ
ಸರಿಸಕಿಡಲರಿದುದುಜ್ವಲಿಸುವಾತ್ಮಜ್ಯೋತಿ
ಬೆರಸಿದುದು ಹರನ ಪಣೆಗಣ್ಣ ಪಾವಕನೊಡನೆ ಪೇಳಲೇನಚ್ಚರಿಯುಸು ೪೦

ಸುರಿದುದೀಶ್ವರನ ಮಂಡೆಯ ಮೇಲೆ ನವಕುಸುಮ
ವರುಷವಾಗಳ್ ದೇವದುಂದುಭಿಗಳುಂ ಮೊಳಗೆ
ಹರಿಯಜೇಂದ್ರಾದಿ ವೃಂದಾರಕರ್ ಶಂಕರನ ಪದಕೆರಗಿ ಭಕ್ತಿಯಿಂದೆ

೩೯. ಮಗನೆ, ನಿನ್ನ ಭಕ್ತಿಗೆ ನಾನು ಮೆಚ್ಚಿದ್ದೇನೆ, ಹೆದರದೆ ಬೇಕಾದ್ದನ್ನು ಕೇಳು ಎಂದು ಈಶ್ವರನು ಹೇಳಲು, ಜಲಂಧರನು—ಸಚ್ಚಿದಾನಂದಸ್ವರೂಪನೇ, ನಿನ್ನ ಜೊತೆಯಲ್ಲಿ ಗರ್ವದಿಂದ ಯುದ್ಧ ಮಾಡಿದ ನನ್ನ ಶರೀರವನ್ನು ಸೀಳಿ ಬಿಸುಟು ನನ್ನಾತ್ಮವನ್ನು ನಿನ್ನಲ್ಲಿ ಐಕ್ಯಮಾಡಿಕೊ ಎಂದು ಬಿನ್ನವಿಸಿಕೊಂಡನು. ಶಿವನು ವಿಸ್ಮಯದಿಂದ ಆತನಿಗೆ ಸಾಯುಜ್ಯವನ್ನು ಕರುಣಿಸಲು ಅನುವಾದನು. ೪೦. ಕರುಣೆಯಿಂದ ಕಾಲಿನ ಹೆಬ್ಬೆರಳಿನಿಂದ ಚಕ್ರವನ್ನು ಬರೆದು, ಅದನ್ನು ಮೂರು ಕಣ್ಣುಗಳಿಂದಲೂ ನೋಡಿದನು. ಆಗ ಸೂರ್ಯ ಚಂದ್ರರು ಮೊಳೆಗಳಾದರು, ಅಗ್ನಿಯೇ ಪಟ್ಟಿಯಾದನು. ಆ ಚಕ್ರವನ್ನು ಶಿವನು ಕೈಯಲ್ಲಿ ಹಿಡಿದುಕೊಂಡು ಆ ಜಲಂಧರನ ಕುತ್ತಿಗೆಯ ಹತ್ತಿರಕ್ಕೆ ಇಟ್ಟನು. ಅದು ಅವನ ಕುತ್ತಿಗೆಯನ್ನು ಕತ್ತರಿಸಿತು. ಆಗ ಪ್ರಜ್ವಲಿಸುತ್ತಿದ್ದ ಅವನ ಆತ್ಮಜ್ಯೋತಿ ಶಿವನ ಹಣೆಗಣ್ಣಿನ ಅಗ್ನಿಯೊಡನೆ ಒಂದಾಗಿ ಸೇರಿತು. ಆಶ್ಚರ್ಯವನ್ನು ಏನೆಂದು ಹೇಳಲಿ. ೪೧. ಆಗ ಈಶ್ವರನ ತಲೆಯ ಮೇಲೆ ಹೊಸ ಹೂಗಳ ಮಳೆಗರೆಯಿತು. ದೇವದುಂದುಭಿಗಳು ಮೊಳಗಿದವು. ವಿಷ್ಣು, ಬ್ರಹ್ಮ, ಇಂದ್ರ, ಮೊದಲಾದ ದೇವತೆಗಳು ಶಂಕರನ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸಿದರು. ಪುಣ್ಯಕರವಾದ ವೇದಮಂತ್ರ



CC-0. Jangamwadi Math Collection. Digitized by eGangotri

ಪರಮಶ್ರುತಿಮಂತ್ರದಿಂ ಕೊಂಡಾಡಿ ಸೆರೆಗಳಂ
ಪರಿಹರಿಸಿ ರಕ್ಷಿಸಿದೆಯೆಮ್ಮನೆಲೆ ಕಾರುಣ್ಯ
ಶರಧಿ ನೀನೆನುತೆ ಪುನರಪಿ ಪೊಗಳುತಿರ್ದುದು ಸುರವ್ರಜಂ ಭಕ್ತಿಯಿಂದೆ ೪೧

ಕೊಂಡಾಡುವಜಹರೀಂದ್ರಾದಿ ಸುರನಿಕರವಂ
ಕಂಡು ಕಾರುಣ್ಯದಿಂ ಸಂತೈಸಿ ಸುರಮಕುಟ
ಮಂಡಿತಪದಾಬ್ಜನವರವರ ಲೋಕಂಗಳ್ಗೆ ಬೀಳ್ಕೊಟ್ಟು ಲೀಲೆಯಿಂದೆ
ತಂಡತಂಡದ ಗಣಂಗಳ್ವೆರಸಿ ಬಂದು ಗಿರಿ
ಮಂಡನವೆನಿಪ್ಪ ಕೈಲಾಸಗಿರಿಯಗ್ರದು
ದ್ದಂಡರಾಜಾಲಯದೊಳೊಪ್ಪಿದಂ ಪಂಪಾವಿರೂಪಾಕ್ಷನಳ್ತಿಯಿಂದೆ ೪೨

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೩

ಇಪ್ಪತ್ತಾರನೆಯ ಸಂಧಿ ಸಂಪೂರ್ಣ

ದಿಂದ ಅವನನ್ನು ಕೊಂಡಾಡಿದರು. ಎಲೈ ಕರುಣಾಸಾಗರನೆ ನಮ್ಮನ್ನು ನೀನು ಬಂಧನ ದಿಂದ ಬಿಡಿಸಿ ರಕ್ಷಿಸಿದೆ ಎನ್ನುತ್ತ ದೇವಸಮೂಹವು ಪುನಃ ಪುನಃ ಭಕ್ತಿಯಿಂದ ಹೊಗಳುತ್ತಿದ್ದಿತು. ೪೨. ದೇವತೆಗಳ ಕಿರೀಟದಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳ ಶಿವನು ತನ್ನನ್ನು ಹೊಗಳುತ್ತಿರುವ ಬ್ರಹ್ಮ-ವಿಷ್ಣು ಮುಂತಾದ ದೇವತೆಗಳ ಸಮೂಹ ವನ್ನು ನೋಡಿ, ಕರುಣೆಯಿಂದ ಅವರನ್ನು ಸಂತೈಸಿ,ಅವರವರ ಲೋಕಗಳಿಗೆ ಅವರವರನ್ನು ಕಳುಹಿಸಿಕೊಟ್ಟು, ಗುಂಪು ಗುಂಪಾದ ತನ್ನ ಗಣಗಳ ಜೊತೆಯಲ್ಲಿ ಲೀಲೆಯಿಂದ ಹೊರಟು ಬಂದು, ಗಿರಿಗಳಿಗೆ ಅಲಂಕಾರಪ್ರಾಯವೆನಿಸುವ ಕೈಲಾಸಪರ್ವತದ ತುದಿಯಲ್ಲಿದ್ದ ಭವ್ಯವಾದ ಅರಮನೆಯಲ್ಲಿ ಪಂಪಾವಿರೂಪಾಕ್ಷನು ಪ್ರೀತಿಯಿಂದ ಕಂಗೊಳಿಸುತ್ತಿದ್ದನು. ೪೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖ ಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತಾರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತೇಳನೆಯ ಸಂಧಿ

ಸೂಚನೆ : ಪರಶಿವನ ಕುರಿತು ಹರಿ ತಪದೊಳಿರಲಾಗ ಪು
ಕರನೊಲಿದು ಚಕ್ರಮಂ ಕೊಟ್ಟನಾ ಕಥೆಯನಾ
ದರದಿಂದೆ ಕೇಳೆಂದು ಸಿದ್ಧರಾಮಂಗೊಲಿದು ಚೆನ್ನಬಸವಂ ಪೇಳ್ದನು

ಅಷ್ಟಾಂಗಯೋಗಸಂತುಷ್ಟ ಶುಕ ಶೌನಕ ವ
ಸಿಷ್ಠಾದಿ ಸಕಲ ಮುನಿಶ್ರೇಷ್ಠ ಸಮುದಯಮನೋ
ಭೀಷ್ಟದಾಯಕ ಸುರಜ್ಯೇಷ್ಠಮುಖ ಸುಮನಸಾಧಿಷ್ಠಿತಪದಾಬ್ಜಯುಗಳ
ದುಷ್ಟರಾವಣದನುಜದೃಷ್ಟಿಹೀನಾಸುರೋ
ತ್ಕೃಷ್ಟ ಜೀವಾನಿಲಾಕೃಷ್ಟಭುಜ ನಿಜಕೃಪಾ
ದೃಷ್ಟಿಯಿಂ ನೋಡಿ ಸಂತುಷ್ಟಿಬಡಿಸೆನ್ನ ಗಿರಿಜೋಷ್ಠಚುಂಬನವಿಲಾಸ ೧

ಆಲಿಸೈ ಸಿದ್ಧರಾಮೇಶ ಕೆಲಕಾಲದಿಂ
ಮೇಲೆ ಲಕ್ಷ್ಮೀವರಂ ತಾ ಚಕ್ರಮಂ ಕೊರ್ತು
ಭಾಳಾಕ್ಷನಂ ಮುಚ್ಚಿಸುವೆನೆಂದು ತೊಡಗಿದಂ ತಪವನತಿನಿಷ್ಠೆಯಿಂದೆ
ಪೇಳಲೇನುಗ್ರತರತಪಕೊಲ್ದು ಶಂಕರಂ
ಲೀಲೆಯಿಂದೈತಂದು ಮುಚ್ಚಿದೆಂ ವರವದೇಂ
ಕೇಳಂಜಬೇಡವೆನಲಚ್ಯುತಂ ಕಣ್ದೆರೆದು ನಮಿಸಿ ಬಳಿಕಿಂತೆಂದನು ೨

ಸೂಚನೆ : ವಿಷ್ಣು ಶಿವನನ್ನು ಕುರಿತು ತಪಸ್ಸು ಮಾಡುತ್ತಿರಲು ಶಿವನು ಮೆಚ್ಚಿ ಚಕ್ರವನ್ನು ಕೊಟ್ಟ ಆ ಕಥೆಯನ್ನು ಆಸಕ್ತಿಯಿಂದ ಕೇಳು ಎಂದು ಚೆನ್ನಬಸವಣ್ಣನು ಪ್ರೀತಿಯಿಂದ ಸಿದ್ಧರಾಮನಿಗೆ ಹೇಳಿದನು. ೧. ಅಷ್ಟಾಂಗಯೋಗದಿಂದ ಸಂತೃಪ್ತಿಯನ್ನು ಪಡೆದವನು, ಶುಕ, ಶಾನಕ, ವಸಿಷ್ಠ ಮೊದಲಾದ ಎಲ್ಲ ಶ್ರೇಷ್ಠ ಋಷಿಗಳ ಸಮೂಹದ ಮನದ ಇಷ್ಟಾರ್ಥಗಳನ್ನು ಪೂರೈಸುವವನು, ದೇವೇಂದ್ರನೇ ಮೊದಲಾದ ಮುಖ್ಯ ದೇವತೆಗಳಿಂದ ನೆಲೆಗೊಳಿಸಲ್ಪಟ್ಟ ಪಾದಕಮಲಗಳುಳ್ಳವನು, ದುಷ್ಟರಾಕ್ಷಸನಾದ ರಾವಣ ಮತ್ತು ಅಂಧಕಾಸುರ ಮೊದಲಾದವರ ಶ್ರೇಷ್ಠವಾದ ಪ್ರಾಣವಾಯುವನ್ನು ಆಕರ್ಷಿಸಿದಂತಹ ಭುಜವುಳ್ಳವ, ಗಿರಿಜೆಯ ತುಟಿಗಳನ್ನು ಚುಂಬಿಸುವುದರಲ್ಲಿ ಆನಂದ ಪಡೆಯುವ ಶಿವನೆ ನಮ್ಮನ್ನು ಕೃಪಾದೃಷ್ಟಿಯಿಂದ ನೋಡಿ ತೃಪ್ತಿಗೊಳಿಸು, ೨. ಕೇಳಯ್ಯ ಸಿದ್ಧರಾಮೇಶ, ಸ್ವಲ್ಪಕಾಲದ ನಂತರ ವಿಷ್ಣುವು ಚಕ್ರವನ್ನು ಬಯಸಿ ಪರಮೇಶ್ವರನನ್ನು ಮೆಚ್ಚಿಸುತ್ತೆನೆಂದು ಅತಿನಿಷ್ಠೆಯಿಂದ ತಪಸ್ಸನ್ನು ಆಚರಿಸಿದನು. ಅವನ ಉಗ್ರತರವಾದ ತಪಸ್ಸಿಗೆ ಒಲಿದು ಶಂಕರನು ಸಂತೋಷದಿಂದ ಬಂದು ನಾನು ಮೆಚ್ಚಿದ್ದೇನೆ, ವರವೇನು ಬೇಕು, ಹೆದರದೆ ಕೇಳು ಎಂದನು. ಆಗ ವಿಷ್ಣುವು ಕಣ್ಣು

CC-0. Jangamwadi Math Collection. Digitized by eGangotri

ಎಲೆ ಮಹಾದೇವ ನಿನ್ನಾಜ್ಞೆಯಿಂ ಲೋಕಮಂ
ಸಲಹುತಿರಲೊಬ್ಬೊಬ್ಬ ಖಳರುದಿಸಿ ಲೋಕಮಂ
ಕೊಲುತಿರ್ಪರಿದಕೆ ತಾನೇಗುವೆಂ ತವೆ ಕರದ ಚಕ್ರಮಂ ಪಾಲಿಸಿದೊಡೆ
ತಲೆಯನರಿವೆಂ ದುಷ್ಟರಾದವರನೆಂದೆನಲ್
ಜಲಜನಾಭಂಗೆ ಚಕ್ರಮನಿತ್ತು ತನ್ನ ನಿಜ
ನಿಲಯಕ್ಕೈದಿದನಭವನತ್ತಲಾ ವಿಷ್ಣು ನಿಜಲೋಕದೊಳ್ ಸುಖಮಿರ್ದನು ೩

ಪರಶಿವನ ಕರುಣದಿಂ ಚಕ್ರಮಂ ಪಡೆದು ಮುರ
ಹರನಖಿಳಲೋಕಮಂ ರಕ್ಷಿಸುತೆ ದುಷ್ಟರುಮ
ನಿರದೆ ಶಿಕ್ಷಿಸುತಿರಲ್ ಕೆಲಕಾಲದಿಂ ಮೇಲೆ ಕ್ಷುಪನೆಂಬ ಹರಿಭಕ್ತನು
ವರಮುನಿದಧೀಚಿಯೊಳ್ ಲೆತ್ತವಾಡುತ್ತೆ ನೀಂ
ಹರಿಭಕ್ತನಾಗು ಸೋಲ್ದೊಡೆ ಮುನಿಪ ನಾಂ ಸೋಲೆ
ಹರಭಕ್ತನಾದಪೆಂ ಕೇಳೆಂದು ನುಡಿದಾಡಿ ಸೋಲ್ತನಾ ಕ್ಷುಪಭೂಪನು ೪

ಇಂತು ನೀಂ ಮೂರುಸೂಳೊಳ್ ಸೋಲ್ತ ಬಳಿಕೀಗ
ಕಂತುಹರಭಕ್ತನಾಗೆನಲವಂ ನೂಂಕಿಸಲ್
ತಾಂ ತಪದೊಳೀಶನಿಂ ವಜ್ರಕಾಯವ ಪಡೆದು ಬಂದರಸನೊಡನೆ ಕಾದಿ
ಮುತೆ ಕವಿವವನ ಚತುರಂಗಮಂ ಮರ್ದಿಸಿ ಲ
ಯಾಂತಕನ ಮುಳಿಸಿನಿಂದಾತನಂ ಬೆನ್ನಟ್ಟೆ
ಕಂತುಪಿತನಾತನಂ ಮರೆವೊಗಿಸಿಕೊಂಡು ಮುನಿಯೊಡನೆ ಯುದ್ಧಂಗೈದನು ೫

ತೆರೆದು ನಮಸ್ಕಾರ ಮಾಡಿ ಈ ರೀತಿ ಹೇಳಿದನು. ೩. ಎಲೈ ಮಹಾದೇವ, ನಿನ್ನ ಅಪ್ಪಣೆಯ ಪ್ರಕಾರ ನಾನು ಲೋಕಗಳನ್ನು ಪಾಲಿಸುತ್ತಿರಲು ಆಗಾಗ ಒಬ್ಬೊಬ್ಬ ರಾಕ್ಷಸರು ಹುಟ್ಟಿ ಲೋಕವನ್ನು ನಾಶಮಾಡುತ್ತಿರುತ್ತಾರೆ. ಇದಕ್ಕೆ ನಾನೇನು ಮಾಡಲಿ. ನಿನ್ನ ಕೈಯಲ್ಲಿರುವ ಚಕ್ರವನ್ನು ನನಗೆ ಅನುಗ್ರಹಿಸಿದರೆ ದುಷ್ಟರಾದ ಅವರ ತಲೆಗಳನ್ನು ಕತ್ತರಿಸುತ್ತೇನೆ ಎಂದು ಹೇಳಲು ಆಗ ಶಿವನು ವಿಷ್ಣುವಿಗೆ ಚಕ್ರವನ್ನು ಕೊಟ್ಟು ತನ್ನ ಲೋಕಕ್ಕೆ ಹೋದನು. ಇತ್ತ ವಿಷ್ಣುವು ತನ್ನ ಲೋಕದಲ್ಲಿ ಸುಖದಿಂದಿದ್ದನು. ೪. ಪರಶಿವನ ಅನುಗ್ರಹದಿಂದ ಚಕ್ರವನ್ನು ಪಡೆದುಕೊಂಡ ವಿಷ್ಣುವು ಎಲ್ಲ ಲೋಕ ಗಳನ್ನೂ ಕಾಪಾಡುತ್ತ ದುಷ್ಟರನ್ನು ಶಿಕ್ಷಿಸುತ್ತಿದ್ದನು. ಕೆಲ ಕಾಲಾನಂತರ ಕ್ಷುಪ ಎಂಬ ಹರಿಭಕ್ತನು ಮುನಿಶ್ರೇಷ್ಠನಾದ ದಧೀಚಿಯ ಜೊತೆಯಲ್ಲಿ ಪಗಡೆಯಾಟವನ್ನು ಆಡುತ್ತ ಎಲೈ ಋಷಿಯೇ ನೀನು ಸೋತರೆ ಹರಿಭಕ್ತನಾಗು, ನಾನು ಸೋತರೆ ಶಿವಭಕ್ತನಾಗು ತ್ತೇನೆ ಎಂದು ಹೇಳಿ, ಆಡಿ ಕ್ಷುಪರಾಜನು ಸೋತುಹೋದನು. ೫. ಹೀಗೆ ನೀನು ಮೂರುಸಾರಿ ಸೋತನಂತರ ಈಗ ಶಿವಭಕ್ತನಾಗು ಎಂದು ದಧೀಚಿಋಷಿಯು ಹೇಳಿದನು. ಆಗ ಆ ರಾಜನು ಅವನನ್ನು ಹೊರಕ್ಕೆ ನೂಕಿಸಿದನು. ಅವನು (ದಧೀಚಿಯು)ತಪಸ್ಸುಮಾಡಿ ಈಶ್ವರನನ್ನು ಮೆಚ್ಚಿಸಿ ವಜ್ರದೇಹವನ್ನು ಪಡೆದು ಬಂದು ರಾಜನೊಡನೆ ಯುದ್ಧಮಾಡಿ ಮೇಲೆ ಬೀಳುವ ಅವನ ಚತುರಂಗಸೈನ್ಯವನ್ನು ನಾಶಮಾಡಿ ಪ್ರಳಯಕಾಲದ ಶಿವನಂತೆ

CC-0. Jangamwadi Math Collection. Digitized by eGangotri

ಪಲವಾಯುಧಂಗಳಿಂ ಕಾದಿ ಹರಿ ಮುನಿಪನಂ
ಗೆಲಲರಿಯದೆಸೆವ ಚಕ್ರದಿನಿಡಲ್ ಮುನಿ ಪಾಣಿ
ತಳದಿನಾ ಚಕ್ರಮಂ ಪಿಡಿದೊರೆಸಿ ಚೂರ್ಣೀಕೃತಂ ಮಾಡೆ ಹರಿಯ ಶಕ್ತಿ
ಬಳಿವಿಡಿದು ಪೋಗೆ ಹರಿಯೆರ್ದೆಯನೀತಂ ಪಾದ
ತಳದಿಂದಲೊದೆಯೆ ಶ್ರೀವತ್ಸಲಾಂಛನನೆಂಬ
ಬಲುವೆಸರನಾಂತು ಕ್ಷುಪನಂ ಶೈವಭಕ್ತನಂ ಮಾಡಿಸಿದನಬ್ಜಾಕ್ಷನು ೬

ಪ್ರತಿದಿನಂ ಸಾಹಸ್ರಕಮಲಂಗಳಿಂದುಮಾ
ಪತಿಯನರ್ಚಿಸಲೊಂದಿನಂ ಶಿವಂ ತನ್ಮನದ
ಧೃತಿಯನೀಕ್ಷಿಸಲೆಂದು ಸಾವಿರದೊಳೊಂದು ಪಂಕೇಜದಲರಂ ಕುಂದಿಸೆ
ಅತಿಶಯಸುಭಕ್ತಿಯಿಂ ತನ್ನ ಬಲಗಣ್ಣನಂ
ದತುಳಲಿಂಗಕೆ ಸಮರ್ಪಿಸೆ ಮೆಚ್ಚಿ ಪಾರ್ವತೀ
ಪತಿ ಪುನಶ್ಚಕ್ರಮಂ ಕೊಟ್ಟು ಕಮಲಾಕ್ಷನೊಡನಿಂತೆಂದನಾಕ್ಷಣದೊಳು ೭

ಮದನಪಿತ ಕೇಳಾದೊಡೆನ್ನ ಭಕ್ತವ್ರಜದ
ಹೃದಯದೊಳಗಿರ್ಪೆನನವರತಮಾ ಭಕ್ತರೇ
ಸದಮಲಪ್ರಾಣವೆನಗೆನ್ನ ಮುದ್ರಾಂಕಿತರ ಮೇಲೊಮ್ಮೆಯುಂ ಚಕ್ರವ

ಕೋಪಗೊಂಡು ಅವನನ್ನು ಅಟ್ಟಿಸಿಕೊಂಡು ಹೋದನು. ಆಗ ವಿಷ್ಣುವು ರಾಜನಿಗೆ ಅಭಯವಿತ್ತು ಆ ಋಷಿಯ ಜೊತೆಯಲ್ಲಿ ಯುದ್ಧ ಮಾಡಿದನು. ೬. ಅನೇಕ ವಿಧವಾದ ಆಯುಧಗಳಿಂದ ವಿಷ್ಣುವು ಯುದ್ಧಮಾಡಿದರೂ ಋಷಿಯನ್ನು ಗೆಲ್ಲಲಾಗಲಿಲ್ಲ. ಆಗ ಪ್ರಭೆಯಿಂದ ಹೊಳೆಯುತ್ತಿದ್ದ ತನ್ನ ಚಕ್ರವನ್ನು ಅವನ ಮೇಲೆ ಪ್ರಯೋಗಿಸಿದನು. ಆ ಋಷಿಯು ಅದನ್ನು ಅಂಗೈಯಲ್ಲಿ ಹಿಡಿದು ಒತ್ತಿ ಪುಡಿ ಪುಡಿ ಮಾಡಿದನು. ಆ ಚಕ್ರದ ಜೊತೆಯಲ್ಲಿಯೇ ವಿಷ್ಣುವಿನ ಶಕ್ತಿಯೂ ಕುಂದಿಹೋಯಿತು. ದಧೀಚಿಋಷಿಯು ಹರಿಯ ಎದೆಯನ್ನು ತನ್ನ ಅಂಗಾಲಿನಿಂದ ಒದ್ದನು. ಆಗ ವಿಷ್ಣುವು ಶ್ರೀವತ್ಸಲಾಂಛನ ಎಂಬ ಪ್ರಸಿದ್ಧವಾದ ಹೆಸರನ್ನು ಹೊಂದಿ ಕ್ಷುಪನನ್ನು ಶಿವಭಕ್ತನನ್ನಾಗಿ ಮಾಡಿದನು. ೭. ಪ್ರತಿನಿತ್ಯವೂ ವಿಷ್ಣುವು ಸಾವಿರ ಕಮಲದ ಹೂಗಳಿಂದ ಶಿವನನ್ನು ಪೂಜಿಸುತ್ತಿದ್ದನು. ಒಂದುದಿನ ಶಿವನು ಅವನ ಮನಸ್ಸಿನ ಧೃಢತೆಯನ್ನು ನೋಡಬೇಕೆಂದು ಸಾವಿರದಲ್ಲಿ ಒಂದು ಕಮಲದ ಹೂವನ್ನು ನಾಶಮಾಡಿದನು. ಆಗ ವಿಷ್ಣುವು ಅತಿಶಯವಾದ ಮತ್ತು ಶುದ್ಧವಾದ ಭಕ್ತಿಯಿಂದ ತನ್ನ ಬಲಗಣ್ಣನ್ನೇ ಶಿವಲಿಂಗಕ್ಕೆ ಸಮರ್ಪಿಸಿದನು. ಅದನ್ನು ಮೆಚ್ಚಿ ಪಾರ್ವತೀಪತಿಯಾದ ಶಿವನು ಆ ಚಕ್ರವನ್ನು ಪುನಃ ವಿಷ್ಣುವಿಗೆ ಕೊಟ್ಟು ಅವನನ್ನು ಕುರಿತು ಹೀಗೆ ಹೇಳಿದನು. ೮. ವಿಷ್ಣುವೇ ಕೇಳು, ನನ್ನ ಭಕ್ತಸಮೂಹದ ಹೃದಯದಲ್ಲಿ ನಾನು ಯಾವಾಗಲೂ ಇರುತ್ತೇನೆ. ಆ ಭಕ್ತರೇ ನನಗೆ ಶ್ರೇಷ್ಠವಾದ ಪ್ರಾಣಸಮಾನರು. ಶಿವಮುದ್ರಾಂಕಿತರಾದ ಭಕ್ತರ ಮೇಲೆ ಒಂದು ಬಾರಿಯೂ ಚಕ್ರ

CC-0. Jangamwadi Math Collection. Digitized by eGangotri

ವಿದಿತಂ ಪ್ರಯೋಗಿಸದಿರೆಂದು ನೇಮಿಸಿ ಶಿವಂ
ಮುದದೊಳಾ ವಿಷ್ಣುವಂ ಬೀಳ್ಕೊಟ್ಟು ಕೈಲಾಸ
ಸದನಮಂ ಪೊಕ್ಕು ಗಿರಿಜಾತೆಯೊಡಗೂಡಿ ಸುಖದಿಂದಿರ್ದಂ ವಿರೂಪಾಕ್ಷನು ೮

ಇದು ಸಕಲ ವೀರಮಾಹೇಶ್ವರರ ಸದ್ವಿಮಲ
ಹೃದಯಾಬ್ಜಮಿತ್ರನುರುಷಟ್‌ಸ್ಥಲಬ್ರಹ್ಮವೆಂ
ಬುದಧಿವರ್ಧನ ಸೋಮನೆನಿಪ ಗುರುಸಿದ್ಧವೀರೇಶ್ವರನ ಕರಜಾತನು
ಸದಮಲಜ್ಞಾನಿ ಸಕಲಾಗಮಪುರಾಣಕೋ
ವಿದನೆನಿಪ ವಿರುಪಾಕ್ಷಪಂಡಿತಾರಾಧ್ಯನತಿ
ಮುದದೆ ಪೇಳ್ದೀ ಚೆನ್ನಬಸವಪೌರಾಣಸತ್ಕಥೆಯೊಳೆರಡನೆಯ ಕಾಂಡಂ ೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ವಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೧೦

**ಇಪ್ಪತ್ತೇಳನೆಯ ಸಂಧಿ ಸಂಪೂರ್ಣ**

**ದ್ವಿತೀಯ ಕಾಂಡ ಸಮಾಪ್ತ**

ವನ್ನು ತಿಳಿದೂ ಪ್ರಯೋಗಿಸಬೇಡ ಎಂದು ಆಜ್ಞೆ ಮಾಡಿ ವಿರೂಪಾಕ್ಷನು ಸಂತೋಷ ದಿಂದ ವಿಷ್ಣುವನ್ನು ಬೀಳ್ಕೊಟ್ಟು ತಾನು ಕೈಲಾಸಪರ್ವತವನ್ನು ಸೇರಿ ಗಿರಿಜೆಯ ಜೊತೆಯಲ್ಲಿ ಸುಖದಿಂದಿದ್ದನು. ೯. ಎಲ್ಲ ವೀರಮಾಹೇಶ್ವರರ ನಿರ್ಮಲ ಹೃದಯ ಕಮಲಗಳಿಗೆ ಸೂರ್ಯನೂ ಶ್ರೇಷ್ಠವಾದ ಷಟ್ಸ್ಥಲಬ್ರಹ್ಮನೆಂಬ ಸಮುದ್ರವನ್ನು ಸಂತೋಷದಿಂದ ಹೆಚ್ಚಿಸುವ ಚಂದ್ರನೂ ಆದ ಗುರು ಸಿದ್ಧವೀರೇಶ್ವರರ ಶಿಷ್ಯನೂ ನಿರ್ಮಲಜ್ಞಾನಿಯೂ ಎಲ್ಲ ಆಗಮ ಪುರಾಣಗಳಲ್ಲಿ ವಿದ್ವಾಂಸನೂ ಆದ ವಿರೂಪಾಕ್ಷ ಪಂಡಿತನು ಅತ್ಯಾನಂದದಿಂದ ಹೇಳಿದ ಈ ಚೆನ್ನಬಸವ ಪುರಾಣವೆಂಬ ಪುಣ್ಯಕತೆಯಲ್ಲಿ ಇದು ಎರಡನೆಯ ಕಾಂಡವು. ೧೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವೇಶ್ವರನ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ. ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ. ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೇಳನೆಯ ಸಂಧಿ ಮುಗಿಯಿತು

**ಎರಡನೆಯ ಕಾಂಡ ಸಮಾಪ್ತ**

CC-0. Jangamwadi Math Collection. Digitized by eGangotri

## ತೃತೀಯ ಕಾಂಡ

# ಇಪ್ಪತ್ತೆಂಟನೆಯ ಸಂಧಿ

ಸೂಚನೆ : ಪಿರಿದೆನಿಪಗಸ್ತ್ಯಮುನಿಶಾಪದಿಂ ಗಂಧರ್ವ
ನುರುಗಜಾಸುರನಾಗಿ ಹರಿಯಜೇಂದ್ರಾದ್ಯರಂ
ಧುರದೊಳೋಡಿಸಲಭವನಾ ಗಜಾಸುರನ ಸಂಹರಿಸಿದಂ ಲೀಲೆಯಿಂದೆ

ಸರಸಗುಣಧಾಮನಂ ಸೋಮನಂ ಭೀಮನಂ
ಕರಧೃತವಿಶೂಲನಂ ಲೀಲನಂ ಪಾಲನಂ
ಕರಿಚರ್ಮಧಾರನಂ ವೀರನಂ ಶೂರನಂ ಜಿತಮಾರನಂ ಧೀರನಂ
ಸುರಶೈಲಚಾಪನಂ ಗೋಪನಂ ಶ್ರೀಪನಂ
ನಿರುತಂ ಸಕಾಂತನಂ ಕಾಂತನಂ ಶಾಂತನಂ
ದುರಿತಹರದಕ್ಷನಂ ರಕ್ಷನಂ ವರವಿರೂಪಾಕ್ಷನಂ ಸ್ತುತಿಯಿಸುವೆನು ೧

ಆಲಿಸಿನ್ನೆಲೆ ರಾಮ ಪೂರ್ವದೊಳಗಸ್ತ್ಯಮುನಿ
ಪಾಲಕಂ ಕಾವೇರಿಯಾದಿಯೊಳ್ ತಪಿಸುತ್ತೆ
ಲೀಲೆಯಿಂದಿರಲೊರ್ವ ಗಂಧರ್ವನಾಗಸದೊಳೊಪ್ಪುವ ವಿಮಾನದೊಳಗೆ
ಮೇಳದಿಂದೈದುತ್ತೆ ಮುನಿಪನಂ ಕಂಡು ಹಾ
ಸ್ಯಾಲಾಪದಿಂ ಸತಿಯ ಮುಡಿಯ ಪೂವಿಂದಿಡಲ್
ಮೇಲನೀಕ್ಷಿಸಿ ಮುನೀಶಂ ಕೆರಳ್ದೆತ್ತಿದ ಕರಾಗ್ರದಿಂದಿಂತೆಂದನು ೨

ಸೂಚನೆ: ಅಗಸ್ತ್ಯಮುನಿಯು ಕೊಟ್ಟ ಮಹಾಶಾಪದಿಂದ ಗಂಧರ್ವನು ಗಜಾಸುರನಾಗಿ ಹುಟ್ಟಿ ವಿಷ್ಣು,ಬ್ರಹ್ಮ, ಇಂದ್ರಾದಿಗಳನ್ನು ಯುದ್ಧದಲ್ಲಿ ಹಿಮ್ಮೆಟ್ಟಿಸಲು ಶಿವನು ವಿಲಾಸದಿಂದ ಲೀಲಾಜಾಲವಾಗಿ ಆಗಜಾಸುರನನ್ನು ಸಂಹರಿಸಿದನು. ೧. ಸರಸವಾದ ಗುಣಗಳಿಗೆ ತೌರುಮನೆಯಂತಹವನನ್ನು,ಉಮಾಸಹಿತನಾದವನನ್ನು,ಪರಮೇಶ್ವರನನ್ನು,ಕೈಯಲ್ಲಿ ಶೂಲವನ್ನು ಹಿಡಿದಿರುವವನನ್ನು, ಲೀಲಾವಿನೋದಿಯನ್ನು, ಪಾಲಿಸುವವನನ್ನು, ಆನೆಯ ಚರ್ಮವನ್ನು ಧರಿಸಿರುವವನನ್ನು, ವೀರನನ್ನು, ಶೂರನನ್ನು, ಮದನಧ್ವಂಸಿಯನ್ನು, ಧೀರನನ್ನು, ಮೇರುಪರ್ವತವನ್ನೇ ಬಿಲ್ಲಾಗಿ ಉಳ್ಳವನನ್ನು, ಮಹೇಶ್ವರನನ್ನು, ಶಂಕರನನ್ನು, ಯಾವಾಗಲೂ ಗಿರಿಜಾಸಮೇತನಾಗಿರುವವನನ್ನು, ಒಡೆಯನನ್ನು, ಶಾಂತಸ್ವರೂಪಿಯನ್ನು,ಪಾಪಗಳನ್ನು ಪರಿಹರಿಸುವ ಸಾಮರ್ಥ್ಯವುಳ್ಳವನನ್ನು, ರಕ್ಷಿಸುವವನನ್ನು, ಶ್ರೇಷ್ಠನಾದ ವಿರೂಪಾಕ್ಷನನ್ನು ಸ್ತೋತ್ರಮಾಡುತ್ತೇನೆ. ೨. ಇನ್ನು ಕೇಳಯ್ಯ ಸಿದ್ಧರಾಮಣ್ಣ, ಹಿಂದೆ ಶ್ರೇಷ್ಠನಾದ ಅಗಸ್ತ್ಯಋಷಿಯು ಕಾವೇರೀನದಿಯ ಮೂಲದಲ್ಲಿ ತಪಸ್ಸನ್ನು ಮಾಡುತ್ತಲಿರಲು ಒಬ್ಬ ಗಂಧರ್ವನು ಆಕಾಶದಲ್ಲಿ ವಿಮಾನದಲ್ಲಿ ಸಂಭ್ರಮದಲ್ಲಿ ಬರುತ್ತ ಆ ಮುನಿಯನ್ನು ನೋಡಿ ಹಾಸ್ಯ ಮಾಡುತ್ತ, ತನ್ನ ಹೆಂಡತಿಯ ಮುಡಿಯಲ್ಲಿದ್ದ ಹೂವಿನಿಂದ ಮುನಿಯನ್ನು ಹೊಡೆದನು, ಋಷಿಯು ಮೇಲೆ ನೋಡಿ ಬಹುಕೋಪ

CC-0. Jangamwadi Math Collection. Digitized by eGangotri

ಮತ್ತತ್ವದಿಂದೆನ್ನನಿಟ್ಟೆಲಾ ನೀಂ ಮದೋ
ನ್ಮತ್ತತೆಯನುಳ್ಳದ್ಭುತಾಕೃತಿಯ ನಾನಾ ಜ
ಗತ್ತುಗಳನ್ನೆದೆ ಸಂಹರಿಪ ದುರ್ಗಜವಾಗಿ ಜನಿಸೆನುತೆ ಶಾಪವಿಾಯೆ
ಚಿತ್ತದುಮ್ಮಳದಿಂದೆ ಋಷಿಯಡಿಗೆ ಮಣಿದು ಮುನಿ
ಪೋತ್ತಮನೆ ಶಾಪಮಂ ಮಾಣಿಸೆನೆ ನೀನಿಂತಿ
ರುತ್ತಾರ್ಗೆಯುಂ ಸಾಧ್ಯಮಲ್ಲದಿರು ಶಿವನಿಂದೆ ಮುಕ್ತನಪೆ ಪೋಗೆಂದನು ೩

ಬಡವನೇ ಮುನಿ ಶಾಪವಿತ್ತ ಮಾತ್ರದೊಳಾಗ
ಳಡಗಿತೇರಿದ ವಿಮಾನಂ ಸಮಿಾಪದೊಳಿರ್ದ
ಮಡದಿಯೇನಾದಳೋ ಶಿವಶಿವ ಮಹಾದ್ಭುತಾಕೃತಿಯ ಗಜರೂಪಕವನು
ಪಡೆದನಾ ಕ್ಷಣದೊಳಾತನ ಕರಾಳರೂಪಮಾ
ದೊಡಲ ಪೆರ್ಮೆಯನದಂತಿಂತೆಂದು ನಿಶ್ಚಯಿಸಿ
ನುಡಿಯಲಳವೇ ಭಗಣಪಂಕ್ತಿಯುರಗೆಜ್ಜೆವೋಲ್ ಕಂಗೆಸೆದುವೇನೆಂಬೆನು ೪

ಪುಷ್ಕರವನುರೆನೀಡಿ ಬರತೆಗೆಯೆ ಸಾಗರಚ
ತುಷ್ಕದ ಜಲಂ ಸುರ್ರನೇರುವುದು ಹಸ್ತಮಂ
ಪುಷ್ಕರಕ್ಕೆತ್ತಿಯುಸಿರಂ ಬಿಡಲ್ ಬ್ರಹ್ಮಾಸನಾಂಬುಜಂ ಕಂಪಿಸುವುದು

ಗೊಂಡು ಕೈಗಳನ್ನೆತ್ತಿ ಈ ರೀತಿ ಹೇಳಿದನು. ೩. ಗರ್ವದಿಂದ ನನ್ನನ್ನು ಹೊಡೆದೆ ಯಲ್ಲವೇ? ನೀನು ಮದಿಸಿದ ಉನ್ಮತ್ತಸ್ವಭಾವವುಳ್ಳ ಭಯಂಕರಾಕಾರವಾದ ಎಲ್ಲ ಜಗತ್ತುಗಳನ್ನು ಸಂಪೂರ್ಣವಾಗಿ ನಾಶಮಾಡುವ ದುಷ್ಟ ಆನೆಯಾಗಿ ಜನಿಸು-ಎಂದು ಶಾಪಕೊಟ್ಟನು, ಗಂಧರ್ವನು ಮನಸ್ಸಿನ ದುಃಖದಿಂದ ಋಷಿಯ ಪಾದಗಳಿಗೆ ನಮಸ್ಕರಿಸಿ 'ಋಷಿಶ್ರೇಷ್ಠನೇ ಶಾಪವನ್ನು ತಡೆ' ಎನ್ನಲು, ಋಷಿಯು ನೀನು ಈ ರೀತಿ ಯಾರಿಂದಲೂ ಜಯಿಸಲು ಸಾಧ್ಯವಿಲ್ಲದಂತೆ ಇರು, ಆಗ ಈಶ್ವರನಿಂದ ಶಾಪವಿಮುಕ್ತನಾಗುತ್ತೀಯೆ ಹೋಗು ಎಂದನು. ೪, ಋಷಿಯು ಸಾಮಾನ್ಯನೇ! ಶಾಪವನ್ನು ಕೊಟ್ಟ ಕೂಡಲೇ ಆಕಾಶದಲ್ಲಿದ್ದ ವಿಮಾನವು ಅದೃಶ್ಯವಾಯಿತು, ಪಕ್ಕದೊಳಿದ್ದ ಅವನ ಹೆಂಡತಿಯು ಏನಾದಳೊ ಏನೊ? ಶಿವಶಿವಾ! ಗಂಧರ್ವನು ಆ ತಕ್ಷಣ ಮಹಾ ಅದ್ಭುತವಾದ ಆಕೃತಿಯನ್ನುಳ್ಳ ಆನೆಯ ರೂಪವನ್ನು ಪಡೆದನು. ಆತನ ಕರಾಳರೂಪದ ಶರೀರದ ಹೆಚ್ಚಳವನ್ನು ಆರೀತಿ—ಈರೀತಿ ಎಂದು ನಿಶ್ಚಯಿಸಿ ಹೇಳಲು ಸಾಧ್ಯವೇ? ನಕ್ಷತ್ರಗಳ ಸಾಲು ಅದರ ಗೆಜ್ಜೆಗಳ ರೀತಿಯಲ್ಲಿ ಕಣ್ಣಿಗೆ ಮನೋಹರವಾಗಿ ಕಾಣಿಸಿದವು. ೫. ತನ್ನ ಸೊಂಡಿಲ ತುದಿಯನ್ನು ನೀಡಿ ಸೇದಿಕೊಳ್ಳಲು ನಾಲ್ಕು ಸಮುದ್ರಗಳ ನೀರೂ ಅದರ ಬಾಯೊಳಕ್ಕೆ ಸುರ್ರನೆ ಬಂದು ತುಂಬುವುದು, ಸೊಂಡಿಲನ್ನು ಆಕಾಶಕ್ಕೆ ಎತ್ತಿ ಉಸಿರನ್ನು

CC-0. Jangamwadi Math Collection. Digitized by eGangotri

ಪುಷ್ಕರಾಪ್ತೇಂದುಬಿಂಬಂಗಳಂ ತದ್ಗಜದ
ನಿಷ್ಕಳಂಕಿನ ಘಂಟೆಯಾದುವೆಡೆಯಾಟದಿಂ
ಪುಷ್ಕರಭವಾಂಡವೊಲೆದಾಡುತಿರ್ದುದು ಪೇಳಲೇನದರ ವಿಸ್ಮಯವನು ೫

ಪಾದಂಗಳವನಿಮಂಡಲಕೆ ಬಹುದುಃಖಮಂ
ಪಾದಂಗಳುಚ್ಚಬೃಂಹಿತನಾದಮಮರಪ್ರ
ಮಾದಮುನ್ನತಕರಂ ಭೀಕರಂ ದಂತಂಗಳಖಿಳಲೋಕಾಂತಂಗಳು
ಆದುವಾ ಪುಷ್ಕರಂ ದುಷ್ಕರಂ ಮಿಗೆ ದೊಡ್ಡಿ
ತಾದ ಕುಂಭಸ್ಥಳಂ ಭೀಕರಸ್ಥಳವೆನ
ಲ್ಕಾ ದುಷ್ಟಗಜದದ್ಭುತಾಕೃತಿಯು ಬಣ್ಣಿಸುವೊಡಹಿಪತಿಗೆ ಸಾಧ್ಯಮಲ್ತು ೬

ಕೊಳದಂತೆ ಪುಷ್ಕರೋದ್ಭಾಸಿತಂ ಸದ್ವಿಪ್ರ
ಕುಲದಂತೆ ದಾನಧಾರಾಗ್ರಾಹಿ ವಿಮಲಕುರು
ಬಲದಂತೆ ಗುರುಕರ್ಣಪಾತಜವಿಭೀಕರಂ ಹಿಮಕಿರಣಬಿಂಬದಂತೆ
ಕಲಿತಕರರಾಜಿತಂ ಸಲೆ ವಾಸುದೇವನೊಲ್
ಬಲಯುತಂ ತಾನೆನಿಸಿ ಸಂತತಂ ಗುರುತರದ
ಕಲಿಗಜಾಸುರನದ್ಭುತಾಕೃತಿ ಜಗತ್ರಯಕೆ ಬೀರಿದುದು ವಿಸ್ಮಯವನು ೭

ಬಿಡಲು ಬ್ರಹ್ಮನ ಪೀಠವಾದ ಕಮಲವು ನಡುಗುವುದು. ಸೂರ್ಯ ಚಂದ್ರರ ಬಿಂಬಗಳೆರಡೂ ಆ ಆನೆಗೆ ಕಟ್ಟಿದ ಗಂಟೆಯಾದುವು. ಅದರ ಓಡಾಟಕ್ಕೆ ಬ್ರಹ್ಮಾಂಡವೇ ತೂಗಾಡುತ್ತಿತ್ತು. ಅದರ ವಿಸ್ಮಯವನ್ನು ಏನು ಹೇಳಲಿ. ೬. ಅದರ ಪಾದಗಳು ಭೂಮಿಗೆ ಬಹು ದುಃಖವನ್ನುಂಟುಮಾಡುತ್ತಿದ್ದವು. ಅದರ ಭಯಂಕರವಾದ ಘೀಳಿಡುವ ಶಬ್ದ ದೇವತೆಗಳಿಗೆ ಪ್ರಮಾದಕರವಾಯಿತು, ದೊಡ್ಡ ಮತ್ತು ಭೀಕರವಾದ ದಂತಗಳು ಸಕಲ ಲೋಕಗಳಿಗೂ ಅಂತ್ಯಕಾಲದಂತೆ ಆಯಿತು. ಆದರೆ ಸೊಂಡಿಲು ಕಠಿಣವಾದುದು. ದೊಡ್ಡದಾದ ಕುಂಭಸ್ಥಳ ಭೀಕರವಾದ ಜಾಗ ಎನ್ನಲು ಆ ದುಷ್ಟ ಆನೆಯ ಅದ್ಭುತವಾದ ಆಕಾರವನ್ನು ಬಣ್ಣಿಸಲು ಆದಿಶೇಷನಿಗೂ ಸಾಧ್ಯವಿಲ್ಲ. ೭. ಕೊಳವು ಹೇಗೆ ಕಮಲಗಳಿಂದ ಕಂಗೊಳಿಸುತ್ತದೆಯೊ ಅದೇ ರೀತಿ ಇದೂ ಸೊಂಡಿಲಿನಿಂದ ಶೋಭಿಸುವುದು. ಶ್ರೇಷ್ಠನಾದ ಬ್ರಾಹ್ಮಣಕುಲವು ಯಾವಾಗಲೂ ಹೇಗೆ ಧಾರಾಕಾರವಾಗಿ ದಾನದ ನೀರನ್ನು ಹೊಂದಿರುತ್ತದೆಯೋ ಅದೇ ರೀತಿ ಮದ ಜಲಧಾರೆಯಿಂದ ಕೂಡಿದ್ದು. ಶ್ರೇಷ್ಠವಾದ ಕುರುವಂಶದ ಸೈನ್ಯದಲ್ಲಿ ಹೇಗೆ ಅಸಾಧಾರಣ ವ್ಯಕ್ತಿಗಳಿಂದ ದ್ರೋಣ,ಕರ್ಣ,ಭೀಷ್ಮರುಗಳಿದ್ದರೊ ಅದೇ ರೀತಿ ಇದೂ ಸಹ ತನ್ನ ಅಗಲವೂ ಶಕ್ತಿಯುತವೂ ಆದ ಕಿವಿಗಳಲ್ಲಿ ಭಯಂಕರವಾದ ಗಾಳಿಯನ್ನು ಪಡೆದಿತ್ತು. ಚಂದ್ರ ಹೇಗೆ ಕಿರಣಗಳ ಸಮೂಹದಿಂದ ಕೂಡಿ ಬೆಳಗುತ್ತಾನೆಯೊ ಅದೇ ರೀತಿ ಇದೂ ಬಲವಾದ ಸೊಂಡಿಲುಳ್ಳದ್ದು. ಕೃಷ್ಣನು ಬಲರಾಮನ ಜೊತೆಯಲ್ಲಿರುವಂತೆ ತಾನು ಬಲಶಾಲಿಯಾದುದು ಎನ್ನುವಂತೆ ಯಾವಾಗಲೂ ಭಯಂಕರವಾದ ಕಲಿ ಗಜಾಸುರನ ಭೀಕರಾ

CC-0. Jangamwadi Math Collection. Digitized by eGangotri

ಇರದೆ ನೋಡುವ ನೋಟಮಖಿಳಜನರ್ಗಳ ಕಾಟ
ಮರಿದೆನಿಸುವೆಡೆಯಾಟಮವನಿವಧುಗೆರ್ಡೆಯಾಟ
ಕರಜಾತಸೀಕರಂ ಪರಸುಭಟಭೀಕರಂ ಸುಳಿವು ಪ್ರಾಣಗಳಿಗಳಿವು
ಸುರಿವ ಘನಮದಧಾರೆ ಸುರಿವ ಸುರಜನಕ್ಕಸಿಧಾರೆ
ಧರೆಯೊಳೆಳಲುವ ಬಾಲಮಘಟಿತ ಕರವಾಲ
ಮುರುಕರ್ಣಭವವಾತಮಮರತತಿ ಭಯಜಾತಮೆಸೆ ಗಜಾಸುರನೆಸೆದನು ೮

ನೋಡಲಮ್ಮುವರಿಲ್ಲ ಕರಿಯೊಡನೆ ನಿಂದು ಪೊ
ಯ್ದಾಡಲಮ್ಮುವರಿಲ್ಲ ತದ್ದುಷ್ಟನಲೆಗೆ ಮಾ
ತಾಡಲಮ್ಮುವರಿಲ್ಲ ಸ್ವರ್ಗಮರ್ತ್ಯಾದಿ ಲೋಕಾದಿಲೋಕಂಗಳೊಳಗೆ
ಕೋಡದವರಿಲ್ಲ ಮಾರಾಂತು ನಿಜತನುವನೀ
ಡಾಡದವರಿಲ್ಲ ಸರ್ವಸ್ವಮಂ ಬಿಟ್ಟು ಕೆ
ಟ್ಟೋಡದವರಿಲ್ಲ ವಿಕ್ರಮದ ಸಿರಿಯಂ ಬಣ್ಣಿಸಲ್ಕರಿದು ಕರಿದನುಜನ ೯

ನಿಗ್ಗವದೊಳೀಡಿರಿಯೆ ಕುಲಪರ್ವತಂಗಳುಂ
ನುಗ್ಗುನುಸಿಯಪ್ಪುವು ಕರೋದ್ಭೂತ ವಾತದಿಂ
ಸಗ್ಗ ಮೊದಲಾದ ಮೇಲಣ ಲೋಕವಿತತಿಯುಂ ಮಾಲೆಗಳ ಚೆಂಡಿನಂತೆ

ಕೃತಿಯು ಮೂರು ಲೋಕಕ್ಕೂ ವಿಸ್ಮಯವನ್ನುಂಟುಮಾಡಿತು. ೮. ಅದರ ದೃಷ್ಟಿ ಎಲ್ಲ ಜನಗಳಿಗೂ ಕಾಟ, ಅದರ ತಿರುಗಾಟ ಭೂವನಿತೆಗೆ ಎದೆ ನಡುಗಾಟ, ಸೊಂಡಿಲಿನಿಂದ ಹೊರಸೂಸುತ್ತಿದ್ದ ತುಂತುರುಹನಿ ಶತ್ರುಸೈನಿಕರಿಗೆ ಭಯಂಕರ, ಅದರ ಸುಳಿದಾಟ ಪ್ರಾಣಗಳಿಗೆ ಸಾವು, ಸುರಿಯುತ್ತಿರುವ ಮದಜಲಧಾರೆ ದೇವತೆಗಳಿಗೆ ಕತ್ತಿಯ ಅಲಗು, ಭೂಮಿಯಲ್ಲಿ ತೂಗಾಡುವ ಬಾಲ ಸಾಧಿಸಲಶಕ್ಯವಾದ ಕತ್ತಿ, ದೊಡ್ಡದಾದ ಕಿವಿಯಿಂದ ಬರುವ ಗಾಳಿ ದೇವಸಮೂಹಕ್ಕೆ ಭಯಾವಹ ಎನ್ನುವಂತೆ ಗಜಾಸುರನು ಕಾಣಿಸಿದನು. ೯. ಅದನ್ನು ನೋಡುವ ಸಾಮರ್ಥ್ಯವುಳ್ಳವರಿಲ್ಲ. ನಿಂತು ಆನೆಯೊಡನೆ ಯುದ್ಧ ಮಾಡುವ ಎದೆಗಾರರಿಲ್ಲ. ಆ ದುಷ್ಟನ ಅಲೆದಾಟಕ್ಕೆ ಮಾತನಾಡಿ ಅಡ್ಡಿಬರುವ ಧೈರ್ಯ ವುಳ್ಳವರಿಲ್ಲ. ಸ್ವರ್ಗ, ಭೂಮಿ ಮುಂತಾದ ಲೋಕಗಳಲ್ಲಿ ಅದಕ್ಕೆ ಭಯಪಡದವರಿಲ್ಲ. ಪ್ರತಿ ಭಟಿಸಿ ತಮ್ಮ ದೇಹವನ್ನು ಚೆಲ್ಲದವರಿಲ್ಲ. ಎಲ್ಲವನ್ನೂ ಬಿಟ್ಟು ಕಂಗೆಟ್ಟು ಓಡದವರಿಲ್ಲ. ಆ ಗಜಾಸುರನ ಪರಾಕ್ರಮದ ವೈಭವವನ್ನು ವರ್ಣಿಸುವುದು ಅಸಾಧ್ಯ. ೧೦. ಆನೆಯು ಕೋರೆದಾಡೆಗಳಿಂದ ಬಲವಾಗಿ ತಿವಿಯಲು ಕುಲಪರ್ವತಗಳು ನುಗ್ಗುನುಸಿಯಾಗುವುವು. ಸೊಂಡಿಲಿನಿಂದ ಹೊರಟ ಜೋರಾದ ಗಾಳಿಯಿಂದ ಸ್ವರ್ಗ ಮೊದಲಾದ ಮೇಲಿನ ಲೋಕ ಗಳು ಹಾರಗಳಲ್ಲಿರುವ ಚೆಂಡಿನಂತೆ ಒಟ್ಟೊಟ್ಟಾಗಿ ಮೇಲೆ ಹಾರಿ ಕೆಳಗೆ ಬೀಳುತ್ತಿದ್ದುವು.

CC-0. Jangamwadi Math Collection. Digitized by eGangotri

ಒಗ್ಗಿನಿಂದುತ್ಪತನಪಾತತೆಯುಲಿರ್ದುವಿದ
ರಗ್ಗಳಿಯುತನವನಾರ್ ಪೇಳ್ದಪರ್ ಮೂಜಗಂ
ವೆಗ್ಗಳದ ಭಯರಸದೊಳೋಲಾಡುತಿರ್ದುವದನೇನೆಂಬೆನಚ್ಚರಿಯನು ೧೦

ಗರ್ಜನೆಯ ದನಿಗೆಯನ್ಯಪ್ರಾಣಿಸಂಕುಲಂ
ನಿರ್ಜೀವವಾಯ್ತು ಪಾದಪ್ರಹಾರಂಗಳಿಂ
ಗುರ್ಜುಗೊಂಡಂ ಫಣಿಪ ನಗ್ಗಿದುವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ
ನಿರ್ಜರಪುರಂ ಸರಕುದೆಗೆದುಳಿದ ಲೋಕತತಿ
ವರ್ಜಿತ ಸಮಸ್ತಜನವಾಯ್ತುಕಟ ಧರೆಯೊಳಿದ
ನಾರ್ಜಯಿಸಿದಪರೆಂದು ಮೂಜಗಂ ತಲ್ಲಣಿಸುತಿರ್ದುದದನೇನೆಂಬೆನು ೧೧

ಭಗ್ನವಾಯ್ತುಡಕಿಲ್ ಜಗದ್ವ್ರಜಂ ಬಹುಭೀತಿ
ಲಗ್ನವಾಯ್ತಲ್ಲಿಯ ಜನಂಗಳ್ಗೆ ಸುರಪಾಲ
ಕಾಗ್ನಿ ಯಮ ನಿರುತಿ ವರುಣಾನಿಲ ಕುಬೇರ ಹರರೇನಾದರೋ ಭರದೊಳು
ದಿಗ್ನಾಗವಿತತಿ ಗೋಣ್ ಕುಸಿದು ನಸಿದುದಕದೊಳ್
ಮಗ್ನವಾದುವು ಗಜದ ಶೌರ್ಯವಂ ಬಣ್ಣಿಪೊಡೆ
ವಾಗ್ನಾಗರಾಜರ್ಗಗೋಚರಮದೇನೆಂಬೆನದರದ್ಭುತಾಕೃತಿಯನು ೧೨

ಆಕಸ್ಮಿಕದೊಳಾದ ದುಷ್ಟಗಜದಕಟಕಟ
ಲೋಕಂಗಳಂ ತಿಂದು ತೇಗುತಿದೆ ಶಿವಶಿವ ಪಿ
ನಾಕಿಯೇನಾದನೋ ಹರಿಯೆತ್ತ ಪೋದನೋ ಬೊಮ್ಮಂಗದೇನಾದುದೋ

ಇದರ ಅತಿಶಯವಾದ ಸಾಮರ್ಥ್ಯವನ್ನು ಹೇಳಲು ಯಾರಿಗೆ ಸಾಧ್ಯ? ಮೂರು ಲೋಕಗಳೂ ಅತಿಯಾದ ಭಯದಿಂದ ತೂಗಾಡುತ್ತಿದ್ದುವು. ಆ ಆಶ್ಚರ್ಯವನ್ನು ಏನೆಂದು ಹೇಳಲಿ? ೧೧. ಅದರ ಘೀಳಿಡುವಿಕೆಯ ಶಬ್ದಕ್ಕೆ ಅನ್ಯಪ್ರಾಣಿಗಳ ಸಮೂಹ ಜೀವ ಬಿಡುತ್ತಿದ್ದುವು. ಪಾದಗಳ ಹೊಡೆತದಿಂದ ಆದಿಶೇಷ ಗಾಸಿಗೊಂಡ, ದಿಗ್ಗಜಗಳು ನೆಗ್ಗಿಹೋದುವು, ಆದಿ ಕೂರ್ಮನ ಅಂಗಗಳು ಜಜ್ಜಿಹೋದುವು, ದೇವಲೋಕ ವಲಸೆಹೋಯಿತು, ಉಳಿದ ಲೋಕಗಳು ನಿರ್ಜನವಾದುವು. ಅಯ್ಯೋ ಲೋಕದಲ್ಲಿ ಇದನ್ನು ಜಯಿಸುವವರು ಯಾರಿದ್ದಾರೆ ಎಂದು ಮೂರು ಲೋಕಗಳೂ ತಲ್ಲಣಿಸುತ್ತಿದ್ದುವು. ಇದನ್ನು ಏನೆಂದು ಹೇಳಲಿ? ೧೨. ರಾಶಿರಾಶಿಯಾಗಿದ್ದ ಲೋಕದ ಸಮೂಹ ಅಸ್ತವ್ಯಸ್ತವಾಯಿತು. ಅಲ್ಲಿಯ ಜನಗಳಿಗೆ ಬಹುಭೀತಿಯುಂಟಾಯಿತು. ದೇವೇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನರು ಏನಾದರೊ! ದಿಗ್ಗಜಗಳ ಸಮೂಹದ ಕುತ್ತಿಗೆ ಕುಸಿದು ನಾಶವಾಗಿ ಸಮುದ್ರದಲ್ಲಿ ಮುಳುಗಿಹೋದುವು. ಆನೆಯ ಶೌರ್ಯವನ್ನು ವರ್ಣಿಸುವುದಕ್ಕೆ ಆದಿಶೇಷರಿಗೂ ಮಾತುಗಳು ಸಾಲವು. ಅದರ ಅದ್ಭುತಾಕೃತಿಯನ್ನು ಏನೆಂದು ವರ್ಣಿಸಲಿ? ೧೩. ಆಕಸ್ಮಿಕವಾಗಿ ಹುಟ್ಟಿದ ಈ ದುಷ್ಟ ಆನೆ ಅಯ್ಯಯ್ಯೊ! ಲೋಕಗಳನ್ನೆಲ್ಲವನ್ನೂ ತಿಂದು ತೇಗುತ್ತಿದೆ. ಶಿವಶಿವಾ, ಈಶ್ವರನೇನಾದನೊ? ವಿಷ್ಣುವು

CC-0. Jangamwadi Math Collection. Digitized by eGangotri

ಲೋಕಕರ್ತೃಗಳೆಂಬ ಮಾತುಗಳ್ ತಮಗಿನ್ನ
ದೇಕೆ ಸಾಕೆನುತೆ ನಾನಾಜನಂ ಭೀತಿಯಿಂ
ವ್ಯಾಕುಲಾಂತಃಕರಣರಾಗಿ ಚಿಂತಿಸುತಿರ್ದುದೇನೆಂಬೆನಚ್ಚರಿಯನು ೧೩

ದುರುಳನೆನಿಸುವ ಗಜಾಸುರನಲೆಗೆ ಕಂಗೆಟ್ಟು
ಸುರಪಮುಖ್ಯಾಮರಕದಂಬಕಂ ಬಂದು ಪಂ
ಕರುಹಭವ ಕಮಲಾಂಬಕರ್ಗೆ ದೂರಲ್ಕವರ್ ನಿಜಸೇನೆವೆರಸಿ ಬಂದು
ಕರಿಯೊಡನನಂತಕಾಲಂ ಕಾದಿ ಗೆಲ್ವ ಬಗೆ
ಯರಿದಾಗಿ ಸೈನ್ಯಮಂ ನೀಗಿ ಕಡುನೊಂದು ಶಂ
ಕರನೆಡೆಗೆ ಸರ್ವರುಂ ಬಂದು ಬಿನ್ನವಿಸಿದರ್ ನಿಟಿಲತಟಹಸ್ತರಾಗಿ ೧೪

ಆಲಿಸು ಮಹಾದೇವ ಖಳಗಜಾಸುರನೆಂಬ
ಕಾಳರಕ್ಕಸನಿರದೆ ಪೆರ್ಚಿಯೆಮ್ಮೆಲ್ಲರುಂ
ಕಾಳೆಗದೊಳೋಡಿಸಿ ಸಮಸ್ತ ಲೋಕಂಗಳಂ ಸಂಹರಿಪನೆಂದೆನಲ್ಕೆ
ಕೇಳಿ ಕರುಣದೊಳಂಜಬೇಡೆಂದು ಸಂತಯಿಸಿ
ಭಾಳಾಂಬಕಂ ವೃಷೇಂದ್ರನನೇರಿ ಸಕಲ ಗಣ
ಜಾಲವೊಡನೈತರಲ್ ಕೈಲಾಸಗಿರಿಯಿಂದೆ ಪೊರಮಟ್ಟನಾ ಕ್ಷಣದೊಳು ೧೫

ಹರಿಯ ವಾಹಿನಿಯಜನ ಸೈನಿಕಂ ಸುರಕುಲೇ
ಶ್ವರನ ಚತುರಂಗಮಾಶಾವರರ ಸೇನಾಬ್ಧಿ
ಗರುಡ ಗಂಧರ್ವ ಕಿನ್ನರ ಯಕ್ಷ ರಾಕ್ಷಸರ ಘನತರಬಲಾಂಬುಧಿಗಳು

ಎಲ್ಲಿ ಹೋದನೊ? ಬ್ರಹ್ಮನಿಗೆ ಅದೇನಾಯಿತೋ? ಲೋಕಕರ್ತೃಗಳು ಎಂಬ ಮಾತುಗಳು ಇವರಿಗೆ ಇನ್ನೇಕೆ? ಸಾಕು ಎನ್ನುತ್ತ ನಾನಾ ಜನರು ಭಯದಿಂದ ಮನಸ್ಸಿನಲ್ಲಿ ವ್ಯಾಕುಲಗೊಂಡು ಚಿಂತಿಸುತ್ತಿದ್ದರು. ೧೪. ದುಷ್ಟನಾದ ಗಜಾಸುರನ ಹಾವಳಿಗೆ ಕಂಗೆಟ್ಟು ದೇವೇಂದ್ರ ಮೊದಲಾದ ಮುಖ್ಯದೇವತೆಗಳ ಸಮೂಹವು ವಿಷ್ಣು ಮತ್ತು ಬ್ರಹ್ಮರ ಬಳಿ ಬಂದು ದೂರಿಕೊಂಡಿತು. ಆಗ ಅವರು ತಮ್ಮ ಸೈನ್ಯದೊಡಗೂಡಿ ಬಂದು ಆನೆಯೊಡನೆ ದೀರ್ಘ ಕಾಲದವರೆಗೆ ಯುದ್ಧಮಾಡಿದರು. ಆದರೂ ಅದನ್ನು ಗೆಲ್ಲುವ ರೀತಿ ತಿಳಿಯದೆ ತಮ್ಮ ಸೈನ್ಯವನ್ನೆಲ್ಲ ಕಳೆದುಕೊಂಡು, ಬಹಳವಾಗಿ ನೊಂದು ಎಲ್ಲರೂ ಶಂಕರನ ಬಳಿಗೆ ಬಂದು (ಹಣೆಯಲ್ಲಿ ಕೈಯಿಟ್ಟು) ಕೈಮುಗಿದು ವಿಜ್ಞಾಪಿಸಿಕೊಂಡರು. ೧೫. ಮಹಾದೇವನೇ ಕೇಳು, ಕ್ರೂರನಾದ ಗಜಾಸುರನೆಂಬ ರಾಕ್ಷಸನು ಕೊಬ್ಬಿ ನಮ್ಮೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿ ಎಲ್ಲ ಲೋಕಗಳನ್ನೂ ನಾಶ ಮಾಡುತ್ತಿದ್ದಾನೆ ಎನ್ನಲು, ಅದನ್ನು ಕೇಳಿ ಫಾಲನೇತ್ರನು ಕರುಣೆಯಿಂದ ಹೆದರಬೇಡಿ ಎಂದು ಸಮಾಧಾನಗೊಳಿಸಿ ನಂದಿಯನ್ನು ಏರಿ ಸಮಸ್ತ ಗಣ ಸಮೂಹವು ಒಡನೆ ಬರಲು, ಕೂಡಲೇ ಕೈಲಾಸಪರ್ವತದಿಂದ ಹೊರಟನು, ೧೬. ವಿಷ್ಣುವಿನ ಸೈನ್ಯ, ಬ್ರಹ್ಮನ ಸೈನ್ಯ, ದೇವೇಂದ್ರನ ಚತುರಂಗಬಲ, ದಿಕ್ಪಾಲಕರ ಸೇನಾಸಮುದ್ರ. ಗರುಡ, ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸರ ದೊಡ್ಡ ಸೇನಾ

CC-0. Jangamwadi Math Collection. Digitized by eGangotri

ಪರಭೂತಗಣ ರುದ್ರಗಣಕುಲದ ಪಡೆಗಳ
ಚ್ಚರಿಯಿಂದೆ ಶಂಕರನ ಹಿಂದು ಮುಂದೆಡಬಲದೊ
ಳಿರದೆ ಬರುತಿರ್ದುವು ಗಜಾಸುರನ ಹವಣೇ ಮಹಾಪ್ರಳಯಮಪ್ಪುದೆನಲು ೧೬

ಆ ನೆಗಳ್ಗೆಣಿಕೆಯೋ ಭಾರದಿಂ ಭೂತಳಕೆ
ಬೇನೆ ಮಸಗಿತು ಕುದುರೆಗಳ್ಗದೇಂ ಗಣನೆಯೋ
ನಾನಾ ದಿಗಂತಮಂ ತುಂಬಿದುವು ತೇರ್ಗೆ ತಾನವಧಿಯೋ ಧರೆಯನಾಂತ
ಆನೆಗಳ್ ಭರಕೆ ಕೊಂಬೂರಿದುವು ಸುಭಟಪ್ರ
ತಾನಕ್ಕೆ ಗಡಿಯೆ ಪದರಜದಿಂದೆ ಪಿರಿದೆನಿಪ
ಬಾನೆಡೆಯನೆಲ್ಲಮಂ ತುಂಬಿದುವು ಶಿವಶಿವಾ ಪೇಳಲೇಂ ವಿಸ್ಮಯವನು ೧೭

ಬೇರೆ ಬೇರತುಳಬಲನಿವಹದೊಳ್ ನಿರ್ಭರವೆ
ಚೀರುತಿಹ ಕಾಳೆಗಳ ಪೊಡೆವ ಭೇರಿಧ್ವನಿಗೆ
ಗಾರಾಯ್ತು ಪಂಕಜಭವಾಂಡಮಾಲಿಸಿದಂ ಗಜಾಸುರಂ ತದ್ಧ್ವನಿಯನು
ಮೂರುಲೋಕಂ ನಡುಗುವಂತೆ ಪೆರ್ದನಿಯಿಂದೆ
ಕೀರಿ ಶುಂಡಾಗ್ರದಿಂ ಧರೆಯನಪ್ಪಳಿಸುತ್ತೆ
ವಿಾರಿ ನಡೆದಂ ಹರನ ಸೇನಾಸಮುದ್ರಕಿದಿರಾಗಿ ಖಳನದಟನಿಂದೆ ೧೮

ನೀಲಾದ್ರಿ ಬೇಗದಿಂದಿರದೆ ಘನತರದ ಕೈ
ಕಾಲಾಂತು ಬಂದಪುದೊ ಶಿವಶಿವಾ ಸಂವರ್ತ
ಕಾಲದ ಮಹಾಂಧಕಾರಂ ಗಜಾಕೃತಿಯಾಗಿ ಬರ್ಪುದೋ ಪೇಳೆನಲ್ಕೆ

ಸಮೂಹಗಳು, ಶ್ರೇಷ್ಠವಾದ ಭೂತಗಣ, ರುದ್ರಗಣಗಳ ಪಡೆಗಳು ಆಶ್ಚರ್ಯದಿಂದ ಶಿವನ ಹಿಂದೆ–ಮುಂದೆ, ಎಡ–ಬಲಗಳಲ್ಲಿ ಮಹಾಪ್ರಳಯವೇ ಆಗುವುದು ಎನ್ನು ವಂತೆ ಬರುತ್ತಿದ್ದುವು. ೧೭. ಆನೆಗಳಿಗೆ ಲೆಕ್ಕವೇ ? ಅವುಗಳ ಭಾರದಿಂದ ಭೂಮಿಗೆ ನೋವುಂಟಾಯಿತು. ಕುದುರೆಗಳಿಗೆ ತಾನೆ ಲೆಕ್ಕವೇ? ನಾನಾ ದಿಕ್ಕುಗಳನ್ನು ತುಂಬಿದುವು, ತೇರುಗಳಿಗೆ ಕೊನೆಯೋ? ದಿಗ್ಗಜಗಳು ಅವುಗಳ ಭಾರಕ್ಕೆ ಕೋರೆ ದಾಡೆಗಳನ್ನು ನೆಲಕ್ಕೆ ಊರಿದುವು. ವೀರಸೈನಿಕರ ಸಮೂಹಕ್ಕೆ ಮಿತಿಯುಂಟೆ ? ಅವರ ಕಾಲಿನ ಧೂಳಿನಿಂದ ವಿಶಾಲವಾದ ಆಕಾಶವೆಲ್ಲವೂ ತುಂಬಿತು. ಶಿವಶಿವಾ ಆ ವಿಸ್ಮಯವನ್ನು ಏನೆಂದು ಹೇಳಲಿ? ೧೮. ಬೇರೆಬೇರೆಯಾದ ದೊಡ್ಡ ಸೈನ್ಯ ಸಮೂಹದಲ್ಲಿ ರಭಸದಿಂದ ಅಬ್ಬರಿಸುತ್ತಿರುವ ಕಹಳೆಗಳ, ಹೊಡೆಯುವ ಭೇರಿಗಳ ಧ್ವನಿಗೆ ಬ್ರಹ್ಮಾಂಡವು ಗಾಸಿಹೊಂದಿತು. ಗಜಾಸುರನು ಆ ಧ್ವನಿಯನ್ನು ಕೇಳಿ ಮೂರು ಲೋಕ ಗಳೂ ನಡುಗುವಂತೆ ಎತ್ತರದ ಧ್ವನಿಯಿಂದ ಅರಚಿ, ಸೊಂಡಿಲತುದಿಯಿಂದ ನೆಲವನ್ನು ಅಪ್ಪಳಿಸುತ್ತ ಪರಾಕ್ರಮದಿಂದ ಶಿವನ ಸೇನಾಸಮುದ್ರಕ್ಕೆ ಎದುರಾಗಿ ನಡೆದನು. ೧೯. ನೀಲಪರ್ವತವೇ ತಡೆಯದೆ ವೇಗವಾಗಿ ದೊಡ್ಡ ದೊಡ್ಡ ಕೈಕಾಲುಗಳನ್ನು ಪಡೆದು ಬರುತ್ತಿದೆಯೊ,ಶಿವಶಿವಾ! ಪ್ರಳಯಕಾಲದ ಘೋರವಾದ ಅಂಧಕಾರವೇ ಆನೆಯ

CC-0. Jangamwadi Math Collection. Digitized by eGangotri

ಶೂಲಿಯ ಬಲಾಂಬುಧಿಯ ಮುಂಗಡೆಯ ಸಕಲ ಸುರ
ಜಾಲವೆರ್ದೆಯೊಡೆಯೆ ಬೃಂಹಿತರವಂಗೆಯ್ಯುತೆ ಕ
ರಾಳರೋಷಶ್ವಾಸಕಂಪಿತ ಜಗತ್ರಯಂ ಬರುತಿರ್ದನದ್ಭುತದೊಳು ೧೯

ದಾರಿಯೊಳಗಿದಿರಾಂತ ಘನತರದ ಪರ್ವತದ
ಬೇರನುಗಿದೆತ್ತುತೆ ಕರಾಗ್ರದಿಂದೊಡ್ಡಿದ ಮ
ಹೀರುಹಂಗಳನಿರದೆ ಮುರಿದು ಗಗನಾಂಗಣಕೆ ಸಾಲಿಡುತೆ ಗುಂಡುಶಿಲೆಯ
ಓರಂತೆ ಪಿಡಿದು ದೆಸೆದೆಸೆಗೆ ಬೀರುತೆ ಗಜರಿ
ಭೋರಿಡುತೆ ಧೂಳ್ಗಳಂ ಮೊಗೆಮೊಗೆದು ಚೆಲ್ಲುತೆ ಮ
ಹಾರಣಾರಂಭಲಂಪಟಸುರರ ಪರಿಪದೊಳ್ ಮುಳುಗಿದಂ ಖಳರಾಜನು ೨೦

ಇರದೆ ಹಸ್ತಾಗ್ರದಿಂ ತೆಗೆದಿಡುವ ಗುಂಡುಗಳ್
ಪರಿಕಿಸಲ್ ವಾರಿಕಲ್ ಕಣ್ಗಳೇ ಮಿಂಚುಗಳ್
ಗುರುತರಮಹಾದಂತಯುಗಳಮೆ ಸಿಡಿಲ್ಗಳಾ ಶೀಕರಮೆ ತುಂತುರ್ಗಳು
ಸುರಿವ ಮದಧಾರೆಗಳ್ ಮಳೆ ಕರ್ಣತಾಳಭವ
ಮರುತಂ ಪ್ರಚಂಡಪ್ರಭಂಜನನೆನಲ್ ದುಷ್ಟ
ಕರಿ ವಿಲಯಕಾಲದ ಮಹಾಮೇಘದಂತೆ ಗರ್ಜಿಸುತೆ ನಡೆತರುತಿರ್ದನು ೨೧

ರೂಪನ್ನು ತಾಳಿ ಬರುತ್ತಿದೆಯೋ ಹೇಳು ಎನ್ನುವಂತೆ ಈಶ್ವರನ ಸೈನ್ಯದ ಮುಂಭಾಗದಲ್ಲಿದ್ದ ಸಕಲ ದೇವತೆಗಳ ಸಮೂಹದ ಎದೆ ಒಡೆದುಹೋಗುವಂತೆ ಘೀಳಿಡುತ್ತ, ಮಹಾ ಭಯಂಕರ ರೋಷದಿಂದ ತನ್ನ ಉಸಿರಾಟದಿಂದಲೇ ಮೂರು ಲೋಕಗಳನ್ನೂ ಅಲ್ಲಾಡುವಂತೆ ಮಾಡುತ್ತ ಗಜಾಸುರನು ಅದ್ಭುತವಾಗಿ ಬರುತ್ತಿದ್ದನು. ೨೦. ಯುದ್ಧಾರಂಭದ ಉತ್ಸಾಹದಲ್ಲಿದ್ದ ದೇವತೆಗಳ ಎದುರಿನಲ್ಲಿ ದಾರಿಯಲ್ಲಿ ಎದುರಾದ ದೊಡ್ಡದೊಡ್ಡ ಪರ್ವತಗಳ ಬೇರನ್ನು ಬಗೆದು ಮೇಲಕ್ಕೆ ಎತ್ತುತ್ತ, ಸೊಂಡಿಲಿನಿಂದ ಸಿಕ್ಕ ಸಿಕ್ಕ ಮರಗಳನ್ನು ಮುರಿದು ಆಕಾಶಕ್ಕೆ ಎಸೆಯುತ್ತಾ, ದೊಡ್ಡ ದೊಡ್ಡ ಕಲ್ಲುಗಳನ್ನು ಒಂದರಿಂದೊಂದರಂತೆ ಹಿಡಿದು ದಿಕ್ಕುದಿಕ್ಕಿಗೆ ಬೀರುತ್ತ,ಗಜರಿ ಗರ್ಜಿಸುತ್ತಾ ಧೂಳನ್ನು ಮೊಗೆಮೊಗೆದು ಚೆಲ್ಲುತ್ತ ರಾಕ್ಷಸರಾಜನಾದ ಗಜಾಸುರನು ದೇವತೆಗಳ ಎದುರಲ್ಲಿ ಕಾಣಿಸಿಕೊಂಡನು. ೨೧. ಒಂದೇ ಸಮನೆ ಸೊಂಡಿಲಿನ ತುದಿಯಿಂದ ಬಿಸಾಡುತ್ತಿದ್ದ ಗುಂಡುಗಳೇ ಆಲಿಕಲ್ಲುಗಳು, ಅದರ ಕಣ್ಣುಗಳೇ ಮಿಂಚುಗಳು, ದೊಡ್ಡದಾದ ಕೋರೆದಾಡೆಗಳೇ ಸಿಡಿಲುಗಳು, ಸೊಂಡಿಲಿನಿಂದ ಹೊರಡುವ ನೀರಹನಿಗಳೇ ತುಂತುರುಗಳು, ನೆತ್ತಿಯ ಮೇಲಿನಿಂದ ಹರಿಯುವ ಮದಧಾರೆಯೇ ಮಳೆ, ಕಿವಿಯ ಬೀಸುವಿಕೆಯಿಂದ ಹುಟ್ಟುವ ಗಾಳಿಯೇ ಪ್ರಚಂಡವಾದ ಬಿರುಗಾಳಿ ಎನ್ನುವಂತೆ ದುಷ್ಟನಾದ ಗಜರಾಜನು ಪ್ರಳಯಕಾಲದ ಮಹಾ

CC-0. Jangamwadi Math Collection. Digitized by eGangotri

ಎಲೆಲೆ ಲೋಕಂಗಳಂ ತಿಂದು ತೇಗಿದ ಮಹಾ
ಕಲಿ ಗಜಾಸುರನೀತನೇ ಮಹಾದೇವ ಹೊ
ಕ್ಕಳಿಯದಿರಿ ಪಂದೆಗಳ್ ಪಿಂದಿರುಗಿ ಸುಭಟರಂಜದೆ ಮುಂದುವರಿವುದೆನುತೆ
ಜಲಜಭವ ಹರಿ ಸುರೇಂದ್ರಾದಿಗಳ್ ತಮ್ಮ ನಿಜ
ಬಲವೆರಸಿ ಮುತ್ತಿದರ್ ಖಾತಿಯಿಂ ವಡಬನಂ
ಜಲಧಿಯ ಜಲಂ ಮುತ್ತುವಂತೆ ಕೋಳಾಹಳದೊಳೇನೆಂಬೆನಚ್ಚರಿಯನು ೨೨

ಒಂದು ದಿಕ್ಕಿನೊಳಸಿ ಮುಸುಂಡಿಗಳ ತಿವಿಗಳ
ತ್ತೊಂದು ದೆಸೆಯೊಳ್ ಸಬಳ ಗದೆಗಳ ಪೊಯಿಲ್ ಮೇಣ
ದೊಂದು ದೆಸೆಯೊಳ್ ಪರಶುಗಳ ಕಡಿತವೊಂದು ದೆಸೆಯೊಳ್ ಶಿಲಾವರುಷಂಗಳು
ಹಿಂದುಮುಂದೆಡಬಲದೊಳೆಲ್ಲಿಯುಂ ಬಾಣಂಗ
ಳಿಂದೆ ಮುಸುಕುತೆ ಭಟರ್ ಬೊಬ್ಬಿರಿದರಾಗ ಕ
ಣ್ಗಿಂದವಾದುದು ಗಜಂ ಬೆತ್ತಗಳ್ ಬೆಳೆದದ್ರಿಯಂತೆ ಘನ ಸಂಗರದೊಳು ೨೩

ಚಿತ್ರವಾಯ್ತೆಲೆ ಸಿದ್ಧರಾಮ ನೋಡಲ್ ನಿಮಿಷ
ಮಾತ್ರದೊಳ್ ಮುತ್ತಿದ ಭಟರ್ಗಳಂ ಮುರಿದು ಶತ
ಪತ್ರಂಗಳಂ ಚಿಗುಳಿದುಳಿದು ಗಜರಾಜಿಯಂ ದಿಂಡುರುಳ್ಚಿಸಿ ತೇರ್ಗಳಂ

ಮೋಡದಂತೆ ಗರ್ಜಿಸುತ್ತ ಬರುತ್ತಿದ್ದನು. ೨೨. ಎಲಎಲಾ,ಲೋಕಗಳನ್ನು ತಿಂದು ತೇಗಿದ ಮಹಾಶೂರನಾದ ಗಜಾಸುರನಿವನೇ ? ಮಹಾದೇವ, ಅವನನ್ನು ಎದುರಿಸಿ ಸಾಯದಿರಿ. ಹೇಡಿಗಳು ಹಿಂದಿರುಗಿ ; ಶೂರರಾದ ಭಟರು ಹೆದರದೆ ಮುಂದೆ ಹೋಗತಕ್ಕದ್ದು ಎನ್ನುತ್ತ ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದವರು ತಮ್ಮ ತಮ್ಮ ಸೈನ್ಯದೊಡಗೂಡಿ ಕೋಲಾಹಲದಿಂದ, ಕೋಪದಿಂದ ಬಡಬಾಗ್ನಿಯನ್ನು ಸಮುದ್ರದ ನೀರು ಮುತ್ತುವಂತೆ ಮುತ್ತಿದರು. ೨೩. ಒಂದು ದಿಕ್ಕಿನಿಂದ ಕತ್ತಿ ಮತ್ತು ಮುಸುಂಡಿ ಆಯುಧಗಳ ತಿವಿತ, ಮತ್ತೊಂದು ಕಡೆಯಿಂದ ಭರ್ಜಿ, ಗದೆಗಳ ಹೊಡೆತ, ಅಲ್ಲದೆ ಮತ್ತೊಂದು ಕಡೆಯಲ್ಲಿ ಗಂಡುಗೊಡಲಿಗಳ ಕಡಿತ, ಬೇರೊಂದು ಕಡೆಯಿಂದ ಕಲ್ಲುಗಳ ಸುರಿಮಳೆ, ಹಿಂದೆ-ಮುಂದೆ-ಎಡ-ಬಲ ಎಲ್ಲ ಕಡೆಯಲ್ಲಿಯೂ ಬಾಣಗಳಿಂದ ಕವಿಯುತ್ತ ಭಟರು ಬೊಬ್ಬೆ ಹಾಕಿದರು. ಆ ಮಹಾಯುದ್ಧದಲ್ಲಿ ಗಜಾಸುರನು ಬಿದಿರು ಬೆಳೆದ ಬೆಟ್ಟದಂತೆ ಕಾಣಿಸುತ್ತಿತ್ತು. ೨೪. ಸಿದ್ಧರಾಮ, ನೋಡಲು ವಿಚಿತ್ರವಾಯಿತು. ನಿಮಿಷಮಾತ್ರದಲ್ಲಿ ತನ್ನನ್ನು ಮುತ್ತಿದ ಭಟರನ್ನು ಮುರಿದು ಹೊರಳಾಡುವಂತೆ, ನೂರಾರು ವಾಹನಗಳನ್ನು ನುಚ್ಚಾಗುವಂತೆ ತುಳಿದು, ಆನೆಗಳ ಸಮೂಹವನ್ನು ಹೊರಳಾಡುವಂತೆ ಉರುಳಿಸಿ, ತೇರುಗಳನ್ನು

CC-0. Jangamwadi Math Collection. Digitized by eGangotri

ಛತ್ರ ಚಮರಾಳಿಗಳ್ವೆರಸಿ ನಿಟ್ಟೊರಸಿ ಶತ
ಪತ್ರಭವ ಹರಿ ಸುರೇಂದ್ರರ ಭರದೊಳಂ ಜೀವ
ಮಾತ್ರಮುಳಿಯದ ಹಾಗೆ ಸವರಿದುದು ಸುಭಟರಂ ಮತ್ತಗಜವೇನೆಂಬೆನು ೨೪

ಮರಳಿ ಕವಿದುದು ಸೇನೆ ಮುಂಜು ಬಲ್ವೆಟ್ಟವುಂ
ಪರಿವೇಷ್ಟಿಪಂದದಿಂ ಶಾತಶರಸಂದೋಹ
ಶರಧಿಯುಂ ಕವಿಸಿದರ್ ತಿವಿಸಿದರ್ ಮುದ್ಗರ ಕಠಾರಿ ಶೂಲಂಗಳಿಂದೆ
ಭರಿಕೆಯ್ಯೊಳಡಸಿ ಕುದುರೆಯ ಹಿಂಡುಹಿಂಡನಿ
ಟ್ಟೊರಸಿ ತೇರ್ಗಳ ನುಚ್ಚುನುರಿ ಮಾಡಿಯಾನೆಗಳ
ನಿರದೆ ತಿವಿತಿವಿದು ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು ೨೫

ಇರದಿರಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್
ಭರಿಕ್ಕೈಯಪೆಟ್ಟಿನಿಂದಳ್ಕುವರ್ ಬಳ್ಕುವರ್
ಚರಣಂಗಳಿಂದರೆಯೆ ಸುಕ್ಕುವರ್ ಕಕ್ಕುವರ್ ಮೂಗಿನಿಂ ಶೋಣಿತವನು
ಭರದೆ ಬೆಂಬತ್ತೆ ಬಿಟ್ಟೋಡುವರ್ ಕೋಡುವರ್
ಮರಗೊಂಬಿನಿಂ ಬಡಿಯಲಡಗುವರ್ ನಡುಗುವರ್
ಕರಿಯಿಂತು ಸದೆದುದು ವಿಘಾತಿಯಿಂ ಖಾತಿಯಿಂ ಮುತ್ತಿದ ಭಟವ್ರಜವನು ೨೬

ಹರಿ ಕೆರಳ್ದಂ ಮುಳಿದನಬ್ಜಜಂ ರೋಷಮುಂ
ಧರಿಸಿದಂ ದೇವೇಂದ್ರನಾಶಾಧಿಪರ್ ಕೋಪ
ಭರಿತಮಾನಸರಾದರುಬ್ಬೆದ್ದರಾ ಗರುಡ ಗಂಧರ್ವಬಲದ ಭಟರು

ಛತ್ರಚಾಮರಗಳ ಸಮೇತ ಸಂಪೂರ್ಣವಾಗಿ ಒರೆಸಿಹಾಕಿತು. ಬ್ರಹ್ಮ, ವಿಷ್ಣು,ದೇವೇಂದ್ರರ ಜೀವಮಾತ್ರ ಉಳಿಯುವಂತೆ ಆ ಮದಿಸಿದ ಆನೆಯು ಭಟರನ್ನು ರಭಸದಿಂದ ನಾಶ ಮಾಡಿತು. ೨೫. ಮತ್ತೆ ಸೇನೆಯು ಗಜಾಸುರನನ್ನು ದೊಡ್ಡ ಬೆಟ್ಟವನ್ನು ಮಂಜು ಮುಸುಕುವಂತೆ ಮುಸುಕಿ, ಹರಿತವಾದ ಬಾಣಗಳ ಸಮುದ್ರವನ್ನು ಕವಿಸಿದರು. ಕೊಂತ, ಕಠಾರಿ, ಶೂಲಗಳಿಂದ ತಿವಿಸಿದರು. ಗಜಾಸುರನು ಬರಿಯ ಸೊಂಡಿಲಿನಿಂದಲೇ ಕುದುರೆಯ ಹಿಂಡು-ಹಿಂಡುಗಳನ್ನೇ ನಾಶಮಾಡಿದನು, ರಥಗಳನ್ನು ನುಚ್ಚುನೂರಾಗಿಸಿದನು, ಆನೆಗಳನ್ನು ತಿವಿದು ಯುದ್ಧದಲ್ಲಿ ಚೆಂಡಾಟವಾಡುತ್ತಿದ್ದನು. ೨೬. ಮತ್ತೆ ಸುಮ್ಮನಿರದೆ ಕೋರೆದಾಡೆಯಿಂದ ತಿವಿಯಲು ಕಂಗೆಟ್ಟು ಧೈರ್ಯಗೆಟ್ಟು ಕೆಳಗೆ ಬೀಳುವರು, ಸೊಂಡಿಲಿನ ಪೆಟ್ಟಿನಿಂದ ಹೆದರುವರು, ನಡುಗುವರು. ಕಾಲಿನಿಂದ ತೀಡಲು ಜಜ್ಜಿಹೋಗುವರು. ಮೂಗಿನಿಂದ ರಕ್ತವನ್ನು ಕಾರುವರು. ರಭಸದಿಂದ ಬೆನ್ನುಹತ್ತಿದಾಗ ಯುದ್ಧರಂಗವನ್ನು ಬಿಟ್ಟು, ಹೆದರಿ ಓಡುವರು. ಮರದ ಕೊಂಬೆಯಿಂದ ಬಡಿದಾಗ ನಡುಗಿ ಮರೆಯಾಗುವರು. ತನ್ನನ್ನು ಮುತ್ತಿದ ಭಟರ ಸಮೂಹವನ್ನು ಆನೆಯು ಈ ರೀತಿ ಕೋಪದಿಂದ ಹೊಡೆದು ಸದೆಬಡಿಯಿತು. ೨೭. ವಿಷ್ಣುವು ಕೆರಳಿದನು. ಬ್ರಹ್ಮನು ಕೋಪಗೊಂಡನು. ದೇವೇಂದ್ರನು ರೋಷಭರಿತನಾದನು. ದಿಕ್ಪಾಲಕರು ಮನಸ್ಸಿನಲ್ಲಿ ಕೋಪವನ್ನು ತಾಳಿದರು. ಗರುಡ-

CC-0. Jangamwadi Math Collection. Digitized by eGangotri

ನಿರುತವಿಾ ಕಣೆಯುದೊಳ್ ಕಲಿ ಗಜಾಸುರನುರವ
ನೆರಡು ತುಂಡಾಗಿ ಸೀಳದೊಡೇಕೆ ಕೈಗಳೊಳ್
ಧರಿಸಿದಾಯುಧವೆಂದು ಮುತ್ತಿದರ್ ಪಟುಭಟರ್ ಪೇಳಲೇನಚ್ಚರಿಯುನು ೨೭

ವೀರರಿಂತೊಂದೊಂದು ದೆಸೆಗಳೊಳ್ ಮುತ್ತಿ ಪ್ರ
ಹಾರಿಸಿದರೆನಿತಸ್ತ್ರಮುಂಟನಿತರಿಂದೆ ಗಂ
ಭೀರಭೇರಿಗಳ ಜಂಬಕ ಢಕ್ಕೆ ಡೌಡೆಗಳ ನಿಸ್ಸಾಳದಾರ್ಭಟೆಯೊಳು
ವಾರಿಜಭವಾಂಡಮುಳವಳಿಯೆ ಮೂಜಗದ ಸಂ
ಹಾರಕಾಲವೊ ಮಹಾದೇವ ಸೋಜಿಗವೆನಲ್
ವಾರಣಾಸುರನನಿರಿದರ್ ಭಟರ್ ತಮತಮಗೆ ಪೇಳಲೇಂ ವಿಸ್ಮಯವನು ೨೮

ಸುರಪಾಗ್ನಿ ಯಮ ನಿರುತಿ ವರುಣ ವಾಯು ಕುಬೇರ
ಹರರೆಂಬ ಸಕಲ ದಿಕ್ಪಾಲಕರ ಬೆನ್ನಟ್ಟಿ
ಚರಣಂಗಳಂ ಪಿಡಿದು ತತ್ತದ್ದಿಗಂತಕೀಡಾಡಿದುದು ಮಿಕ್ಕಮರರಂ
ಕರಜಾತವಾಯುವಿಂ ದಿವಕೆ ತೂರಿದುದು ಪಂ
ಕರುಹಭವನಂ ತುಡುಕಿ ಸತ್ಯಲೋಕದೊಳೆ ಸುಖಿ
ಯಿರು ನೀನೆನುತ್ತೆ ಬೀರಿದುದಿದೇಂ ಶಿಕ್ಷಾಸಮರ್ಥನೋ ಮೂಜಗದೊಳು ೨೯

ಕುದುರೆ ಬರುದೊರೆಯಾಯ್ತು ಕರಿಯ ಹಿಂಪಡಗಿದುದು
ತ್ರಿದಶರುರೆ ದಿಕ್ಕಿಗೊಬ್ಬೊಬ್ಬರಾದರ್ ವೀರ
ರದಟು ಕೊಳ್ಳದು ಮುಗ್ಗುರೆ ಪೂತೆನುತೆ ಪುಂಖಾನುಪುಂಖದಿಂ ಕಣೆಗರೆವುತೆ

ಗಂಧರ್ವಸೇನೆಯ ಭಟರು ಕೂಗಾಡಿದರು. ನಿಜವಾಗಿ ಈ ಯುದ್ಧದಲ್ಲಿ ಶೂರಗಜಾಸುರನ ಎದೆಯನ್ನು ಎರಡು ಹೋಳಾಗಿ ಸೀಳದಿದ್ದರೆ ಕೈಗಳಲ್ಲಿ ಹಿಡಿದಿರುವ ಶಸ್ತ್ರಗಳು ವ್ಯರ್ಥ ಎಂದು ಶೂರಭಟರು ಗಜಾಸುರನನ್ನು ಮುತ್ತಿದರು. ೨೮. ಶೂರರು ಈ ರೀತಿ ಬೇರೆ ಬೇರೆ ಕಡೆಯಿಂದ ಮುತ್ತಿಗೆ ಹಾಕಿ ಎಷ್ಟು ಬಗೆಯ ಶಸ್ತ್ರಗಳಿವೆಯೊ ಅಷ್ಟರಿಂದಲೂ ಹೊಡೆದರು. ಭಯಂಕರವಾದ ಭೇರಿಗಳ, ಡೊಳ್ಳು, ಡಕ್ಕೆ, ಸಣ್ಣ ನಗಾರಿ, ತಮಟೆಗಳ ಆರ್ಭಟದಿಂದ ಬ್ರಹ್ಮಾಂಡವು ತಲ್ಲಣಿಸಲು ತ್ರಿಲೋಕದ ವಿನಾಶಕಾಲವೊ ! ಮಹಾದೇವ, ಇದು ಸೋಜಿಗ ಎನ್ನುವಂತೆ ಎಲ್ಲ ಭಟರೂ ಗಜಾಸುರನನ್ನು ತಿವಿದರು. ೨೯. ದೇವೇಂದ್ರ, ಅಗ್ನಿ, ಯಮ, ನೈರುತ್ಯ, ವರುಣ, ವಾಯು, ಕುಬೇರ, ಈಶಾನ ಎಂಬ ಎಲ್ಲ ದಿಕ್ಪಾಲಕರನ್ನೂ ಬೆನ್ನಟ್ಟಿ ಕಾಲುಗಳನ್ನು ಹಿಡಿದು ಅವರವರ ದಿಕ್ಕಿಗೆ ಎಸೆಯಿತು. ಮಿಕ್ಕ ದೇವತೆಗಳನ್ನು ಸೊಂಡಿಲಿನ ಬೀಸುವಿಕೆಯಿಂದ ಹುಟ್ಟಿದ ಗಾಳಿಯಲ್ಲಿ ಆಕಾಶಕ್ಕೆ ತೂರಿತು. ಬ್ರಹ್ಮನನ್ನು ಹಿಡಿದು ಸತ್ಯಲೋಕದಲ್ಲಿ ನೀನು ಸುಖವಾಗಿರು ಎನ್ನುವಂತೆ ಬೀಸಿ ಎಸೆಯಿತು. ಮೂರು ಲೋಕಗಳಲ್ಲಿಯೂ ಇದು ಎಂಥ ಶಿಕ್ಷಣಸಾಮರ್ಥ್ಯವನ್ನು ಪೊಂದಿದೆ. ೩೦. ಕುದುರೆಗಳು ಬರಡಾದುವು. ಆನೆಗಳ ಹಿಂಡು ತಗ್ಗಿಹೋಯಿತು. ದಿಕ್ಪಾಲಕರು ಒಂದೊಂದು ದಿಕ್ಕಿಗೆ ಒಬ್ಬೊಬ್ಬರಾದರು. ಶೂರರ ಸಾಮರ್ಥ್ಯ ವ್ಯರ್ಥ



CC-0. Jangamwadi Math Collection. Digitized by eGangotri

ಮದನಪಿತನೆಸೆವ ಕಾಂಚನರಥದೊಳಡ್ಡೈಸೆ
ಬಿದುಗೆರಪ ರಾಹುವಿನ ಮಾಳ್ಕೆಯಿಂ ರಥದ ಬಳಿ
ಗೊದಗಿ ಪಿಡಿದಪ್ಪಳಿಸೆ ಕೆಲಸಿಡಿದು ಮಾಧವಂ ಗದೆಗೊಂಡು ಬೊಬ್ಬಿರಿದನು ೩೦

ಹರಿ ಬಳಿಕ ಸಿಂಹನಾದಂಗೈದು ಗದೆಯಿಂದೆ
ಕರಿಯ ಮಸ್ತಕವನಪ್ಪಳಿಸಲಾ ಘಾಯಮಂ
ಸರಕುಮಾಡದೆ ಪರಿದು ಬೆನ್ನಟ್ಟಿ ಕೆಲವಡಿಯೊಳಾತನಂ ತುಡುಕಿ ಪಿಡಿಯೆ
ಸರಸಿಜಾಕ್ಷಂ ಜುಣುಗಿಯುರದೊಳಂಡಿಸಿ ನಿಂದು
ಭರದಿ ಬೊಬ್ಬಿರಿಯುಲಾಲಿಸುತೆ ಕೆಲವೆಡೆಗಳಂ
ಪರಿವುತ್ತೆ ನಿಲುತೆ ಮೊರೆವುತೆ ಸರೋಜಾಂಬಕನ ಸುಳಿವನಾಲಿಸುತಿರ್ದುದು ೩೧

ಸುರರ್ಗವಾ ವಿಧಿಯಾಯ್ತು ಪಂಕರುಹಸಂಭವಂ
ಕರಿಯಿಟ್ಟುದೇ ಪುಣ್ಯಮಾಗಿ ಪೋದಂ ರಮಾ
ವರನಿದರ ಮಧ್ಯದೊಳ್ ಸಿಕ್ಕಿದಂ ಕೆಟ್ಟೆವೆನುತಖಿಳಲೋಕದ ಜನರ್ಗಳು
ಹರನ ಮೊರೆಹೊಕ್ಕು ಮೊರೆಯಿಡೆ ಕರುಣದಿಂ ಮಹೇ
ಶ್ವರನಾ ಪಿನಾಕಮಂ ಕೊಂಡು ಜೇವೊಡೆದು ನಿ
ಷ್ಠುರಬಾಣಮಂ ಪೂಡಿ ನೋಟಿದಂ ಕರುಣಾಕಟಾಕ್ಷದಿಂ ಖಳಪತಿಯನು ೩೨

ವಾಯಿತು. ವಿಷ್ಣುವು ಪ್ರಕಾಶಿಸುವ ಚಿನ್ನದ ರಥದಲ್ಲಿ ಬಂದು ಅಡ್ಡಗಟ್ಟಿ ಭಲೆ, ಭೇಷ್ ಎನ್ನುತ್ತ ಒಂದೇ ಸಮನೆ ಬಾಣದ ಮಳೆ ಕರೆಯಲು. ಚಂದ್ರನನ್ನು ನುಂಗುವ ರಾಹುವಿನ ರೀತಿಯಲ್ಲಿ ಆನೆಯು ರಥದ ಬಳಿಗೆ ಬಂದು ಅದನ್ನು ಹಿಡಿದು ಅಪ್ಪಳಿಸಲು, ವಿಷ್ಣುವು ಪಕ್ಕಕ್ಕೆ ಹಾರಿ ಗದೆಯನ್ನು ತೆಗೆದುಕೊಂಡು ಆರ್ಭಟಿಸಿದನು. ೩೧. ವಿಷ್ಣುವು ಬಳಿಕ ಸಿಂಹನಾದ ಮಾಡಿ ಗದೆಯಿಂದ ಆನೆಯ ಕುಂಭಸ್ಥಳವನ್ನು ಅಪ್ಪಳಿಸಿದನು. ಆದರಿಂದಾದ ಘಾಯವನ್ನು ಆನೆಯು ಲಕ್ಷ್ಯಮಾಡದೆ ಮುಂದುವರಿದು ಅವನ ಬೆನ್ನಟ್ಟಿ ಕೆಲವೇ ಹೆಜ್ಜೆಗಳ ಅಂತರದಲ್ಲಿ ಅವನನ್ನು ಬಲವಾಗಿ ಹಿಡಿಯಿತು. ವಿಷ್ಣುವು ಹಿಂಜರಿಯುತ್ತಾ ಅದರ ಎದೆಯ ಭಾಗವನ್ನು ಆಶ್ರಯಿಸಿ ನಿಂತು ಜೋರಾಗಿ ಬೊಬ್ಬೆ ಹಾಕಿದನು. ಆನೆಯು ಆ ಶಬ್ದವನ್ನು ಕಿವಿಗೊಟ್ಟು ಕೇಳುತ್ತ ಅತ್ತ ಇತ್ತ ಹರಿದಾಡುತ್ತ, ನಿಲ್ಲುತ್ತ, ಘೀಳಿಡುತ್ತ ವಿಷ್ಣುವಿನ ಸುಳಿವನ್ನು ಕೇಳುತ್ತಿತ್ತು. ೩೨. ದೇವತೆಗಳಿಗೆ ಆ ಗತಿಯಾಯ್ತು. ಬ್ರಹ್ಮ ನನ್ನು ಆನೆಯು ಎಸೆದುದೇ ಅವನ ಪುಣ್ಯವಾಗಿ ಹೋದ. ವಿಷ್ಣುವು ಅದರ ಮಧ್ಯದಲ್ಲಿ ಸಿಕ್ಕಿಹೋದ. ನಾವೆಲ್ಲ ಕೆಟ್ಟುಹೋದೆವು ಎಂದು ಎಲ್ಲ ಲೋಕದ ಜನರೂ ಶಿವನನ್ನು ಆಶ್ರಯಿಸಿ ಮೊರೆಯಿಟ್ಟರು. ಆಗ ಕರುಣೆಯಿಂದ ಶಿವನು ಆ ಪಿನಾಕಧನುವನ್ನು ತೆಗೆದು ಕೊಂಡು ಠೇಂಕಾರ ಮಾಡಿ ಕ್ರೂರವಾದ ಬಾಣವನ್ನು ಹೂಡಿ ಕರುಣಾಕಟಾಕ್ಷದಿಂದ

CC-0. Jangamwadi Math Collection. Digitized by eGangotri

ನೋಡಿ ದಿವ್ಯಾಸ್ತ್ರದಿಂದೆಸೆಯೆ ಗಜಮಸ್ತಕಂ
ಕೂಡೆ ಪರಿದುದು ಮುಂದಮಿಳೆಯೊಳಡೆಗೆಡದುದಿದ
ನೋಡಿ ಸಂತೋಷಮಯಸಾಗರದೊಳದ್ದುದು ಜಗಜ್ಜನಂ ತತ್‌ಕ್ಷಣದೊಳು
ಮಾಡಿದುತ್ಸವದಿಂದೆ ಗಂಧರ್ವಪತಿ ಚಂದ್ರ
ಚೂಡನ ಪದಂಗಳ್ಗೆ ನಮಿಸಿ ಮತ್ತನುವಿನೊಳ್
ನಾಡೆ ನೀನೊಂದು ಕುರುಪಂ ಧರಿಸಬೇಕೆಂದು ನುತಿಸಿದಂ ಭಕ್ತಿಯಿಂದೆ ೩೩.

ಕರಿಚರ್ಮಮಂ ತೆಗೆದು ಪೊದ್ದು ಗಂಧರ್ವನಂ
ಕರೆದು ಗಣಪದವಿಯಂ ಕೊಟ್ಟು ದೇವರ್ಕಳಂ
ಕರುಣದಿಂ ಸಂತಯಿಸಿ ಗಜಮಸ್ತಕವನಾಂತು ಲೀಲೆಯಿಂದಂ ನಟಿಸುತೆ
ಹರುಷದಿಂ ಕೈಲಾಸದರಮನೆಗೆ ನಡೆತರಲ್
ಗಿರಿಸುತೆಯ ಮೈದಿಗುರಿನಿಂದಾದ ನಂದನಂ
ಹರನ ತಡೆಯಲ್ ಖಡ್ಗದಿಂದೆ ತಲೆಯರಿದು ಸಭಕಟ್ಟು ಶಿವನೊಳಪೊಕ್ಕನು ೩೪

ಸುತನಳಿದ ಸುದ್ದಿಯಂ ಕೇಳ್ದು ಕಡುನೊಂದು ಗಿರಿ
ಸುತೆ ಹರನ ಕೂಡೆ ಮುನಿದಿರೆ ದೇವಿ ನಿನ್ನ ನಿಜ
ಸುತನಿರವ ನೋಡು ಬಾರೆನುತ ಕರೆತಂದಾ ಗಜಾಸುರನ ಮಸ್ತಕವನು

ಗಜಾಸುರನನ್ನು ನೋಡಿದನು. ೩೩. ಈ ರೀತಿ ನೋಡಿ ದಿವ್ಯಾಸ್ತ್ರವನ್ನು ಪ್ರಯೋಗಿಸಿದ ತಕ್ಷಣ ಆನೆಯ ತಲೆಯು ತುಂಡರಿಸಿತು. ಶರೀರವು ಭೂಮಿಯ ಮೇಲೆ ಬಿತ್ತು. ಇದನ್ನು ನೋಡಿ ತಕ್ಷಣ ಜಗತ್ತಿನ ಜನರೆಲ್ಲ ಸಂತೋಷಸಾಗರದಲ್ಲಿ ಮುಳುಗಿ ತೇಲಾಡಿದರು. ಅತ್ಯುತ್ಸಾಹದಿಂದ ಗಂಧರ್ವರಾಜನು ಶಿವನ ಪಾದಗಳಿಗೆ ನಮಸ್ಕಾರ ಮಾಡಿ ಸರಿಯಾದ ರೀತಿಯಲ್ಲಿ ನನ್ನದೊಂದು ಗುರುತನ್ನು ನೀನು ಧರಿಸಬೇಕು ಎಂದು ಭಕ್ತಿಯಿಂದ ಪ್ರಾರ್ಥಿಸಿದನು. ೩೪. ಶಿವನು ಆನೆಯ ಚರ್ಮವನ್ನು ತೆಗೆದುಕೊಂಡು ತಾನು ಹೊದೆದುಕೊಂಡನು. ಆ ಗಂಧರ್ವನನ್ನು ಕರೆದು ಅವನಿಗೆ ಗಣಪದವಿಯನ್ನು ಕೊಟ್ಟನು. ದೇವತೆಗಳನ್ನು ಕರುಣದಿಂದ ಸಂತೈಸಿದನು. ಗಜದ ತಲೆಯನ್ನು ಹಿಡಿದುಕೊಂಡು ಲೀಲೆಯಿಂದ ನರ್ತನ ಮಾಡುತ್ತ, ಸಂತೋಷದಿಂದ ಕೈಲಾಸಕ್ಕೆ ಹೋದನು. ಅಲ್ಲಿ ಪಾರ್ವತಿಯು ತನ್ನ ಮೈಗೆ ಲೇಪಿಸಿದ್ದ ಗಂಧದಿಂದ ಮೂಡಿದ ಮಗನು (ವಿಘ್ನೇಶ್ವರ) ಶಿವನನ್ನು ತಡೆದನು. ಶಿವನು ಕತ್ತಿಯಿಂದ ಅವನ ತಲೆಯನ್ನು ಕತ್ತರಿಸಿ ಆಕಾಶಕ್ಕೆ ಬಿಸುಟು ಒಳಕ್ಕೆ ಪ್ರವೇಶಮಾಡಿದನು, ೩೫. ಮಗನು ಸತ್ತ ಸುದ್ದಿಯನ್ನು ಕೇಳಿದ ಪಾರ್ವತಿಗೆ ಬಹಳ ಸಂಕಟವಾಗಿ ಶಿವನ ಮೇಲೆ ಕೋಪಗೊಂಡಳು. ಅವನು ದೇವಿ, ನಿನ್ನ ಮಗನ ಸ್ಥಿತಿಯನ್ನು ನೋಡು ಬಾ ಎಂದು ಅವಳನ್ನು ಕರೆತಂದು ಗಜಾಸುರನ ತಲೆಯನ್ನು ಬೇಗನೆ ಆ

CC-0. Jangamwadi Math Collection. Digitized by eGangotri

ಅತಿವೇಗದಿಂ ಮುಂಡಕೊಂದಿಸಲ್ ಪ್ರಾಣಮಾ
ರುತನೈದೆ ತೀವಿದುದು ತದ್ರೂಪಮಂ ಕಂಡು
ಮತುಳತರ ಖಿನ್ನಮಾನಸೆಯಾದ ಪಾರ್ವತಿಗೆ ಪರಮೇಶನಿಂತೆಂದನು ೩೫

ರೂಪಿದು ವಿಕಾರಮಾಯ್ತೆಂದು ಗಿರಿಜಾತೆ ಸಂ
ತಾಪಮಂ ತಾಳದಿರೆನುತ್ತಿಭಮುಖಂಗೆ ಗಾ
ಣಾಪತ್ಯಮಂ ಕೊಟ್ಟು ನಿನ್ನ ಭಜಿಸಿದರಿಷ್ಟಮಹುದೆಂದು ವರವನಿತ್ತು
ಓಪಳ ಮನಕ್ಕೆ ಹರುಷವನಿತ್ತು ತೋರ್ಪ ಲ
ಕ್ಷ್ಮೀಪತಿಮುಖಾಮರರ ಬೀಳ್ಕೊಟ್ಟು ಮುದದಿಂ ವಿ
ರೂಪಾಕ್ಷನೊಪ್ಪಿದಂ ಕೈಲಾಸಶಿಖರದರಮನೆಯೊಳ್ ವಿಲಾಸದಿಂದೆ ೩೬

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೩೭

ಇಪ್ಪತ್ತೆಂಟನೆಯ ಸಂಧಿ ಸಂಪೂರ್ಣ

ಮುಂಡಕ್ಕೆ ಕೂಡಿಸಿದನು. ಕೂಡಲೆ ಪ್ರಾಣವಾಯುವು ತುಂಬಿಕೊಂಡಿತು. ಆ ರೂಪವನ್ನು ನೋಡಿ ನೊಂದುಕೊಂಡ ಪಾರ್ವತಿಯನ್ನು ಕುರಿತು ಪರಶಿವನು ಈ ರೀತಿ ಹೇಳಿದನು. ೩೬. ಗಿರಿಜೆ, ಇವನ ರೂಪವು ವಿಕಾರವಾಯ್ತೆಂದು ವ್ಯಥೆಪಡಬೇಡ ಎಂದು ಗಜ ಮುಖನಿಗೆ ಗಣಗಳ ಒಡೆತನವನ್ನು ಕೊಟ್ಟು, ನಿನ್ನನ್ನು ಪ್ರಾರ್ಥಿಸಿದವರ ಇಷ್ಟವು ಕೈಗೂಡಲಿ ಎಂದು ವರವನ್ನಿತ್ತು. ಪ್ರಿಯೆಯ ಮನಸ್ಸಿಗೆ ಸಂತೋಷ ಉಂಟುಮಾಡಿದನು. ಅಲ್ಲಿದ್ದ ವಿಷ್ಣು ಮೊದಲಾದ ಮುಖ್ಯ ದೇವತೆಗಳನ್ನು ಕಳುಹಿಸಿ ಸಂತೋಷದಿಂದ ವಿರೂಪಾಕ್ಷನು ಕೈಲಾಸಶಿಖರದ ತನ್ನ ಅರಮನೆಯಲ್ಲಿ ವಿಲಾಸದಿಂದ ಇದ್ದನು. ೩೭. ಈ ರೀತಿಯಲ್ಲಿ ಶೋಭಿಸುವ ಚೆನ್ನಬಸವಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೆಂಟನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಇಪ್ಪತ್ತೊಂಬತ್ತನೆಯ ಸಂಧಿ

ಸೂಚನೆ : ಶಿವಲೋಕವಿಸ್ತಾರವಂ ಶಿವಸ್ಥಾನವಂ
ಶಿವನ ರಾಜ್ಯಕ್ರಮವನೆಲ್ಲವಂ ವಿಸ್ತರಿಸಿ
ಶಿವನ ಸುಜ್ಞಾನರೂಪಂ ಚೆನ್ನಬಸವನಾ ಸಿದ್ಧರಾಮಂಗೊರೆದನು

ಅಣಿಯರಿಂ ಕೈಲಾಸಮಂದಿರದೊಳೊಪ್ಪುತಿಹ
ಮಣಿಮಯದ ಸೆಜ್ಜೆಯೊಳ್ ರತಿಗೈದು ಮಿಗೆ ತಮಂ
ಗಣದ ಲೀಲಾಸರೋವರದೊಳ್ ತೃಷಾರ್ತೆಯಂಜುಳಿಯೊಳಗೆ ಜಲಮನೆತ್ತಿ
ಮಣಿದು ಮಣಿದೀಕ್ಷಿಸುತ ಬಿಡುತ ಮೊಗದೀಕ್ಷಿಸು
ತ್ತೆಣಿಕೆಗೊಳುತಿಹ ಹಿಮಗಿರೀಂದ್ರಜಾಘನಮುಗ್ಧ
ಗುಣಕೆ ನಸುನಕ್ಕು ತಲೆವಾಗಿಸುವ ಪಂಪಾವಿರೂಪಾಕ್ಷ ಸಲಹೆಮ್ಮನು ೧

ಏಕಚಿತ್ತದೊಳಾಲಿಸೈ ರಾಮ ಬ್ರಹ್ಮಾಂಡ
ಮೇ ಕನಕಮಯ ಶಿವಾಲಯಮದರ ತುದಿಯೆ ಮು
ಕ್ತಾಕಾರ ಕಲಶವಿರ್ಪಂತೆ ಶುದ್ಧಸ್ಫಟಿಕಸಂಕಾಶದಿಂದೆ ಶಿವನ
ಲೋಕವಿರ್ಪುದು ಸಕಲ ಬ್ರಹ್ಮಾಂಡಸತ್ಫಲಾ
ನೀಕಕ್ಕೆ ಕಲ್ಪತರುವೆನಲಖಿಳ ವೇದಾದ್ಯ
ನೇಕ ತರ್ಕಂಗಳ್ಗೆ ನಿಲುಕದಪ್ರತಿಮಹಾಮಹಿಮದೊಳದೇನೆಂಬೆನು ೨

ಸೂಚನೆ : ಶಿವಲೋಕದ ವಿಸ್ತಾರವನ್ನೂ ಶಿವನ ನೆಲೆಯನ್ನೂ ಶಿವನ ರಾಜ್ಯಭಾರ ಕ್ರಮವೆಲ್ಲವನ್ನೂ ವಿಸ್ತರಿಸಿ, ಶಿವನ ಸುಜ್ಞಾನಸ್ವರೂಪವನ್ನೂ ಸಿದ್ಧರಾಮನಿಗೆ ಚೆನ್ನ ಬಸವಣ್ಣನು ವಿವರವಾಗಿ ತಿಳಿಸಿದನು. ೧. ಕೈಲಾಸಮಂದಿರದಲ್ಲಿ ಅತಿಶಯವಾಗಿ ಶೋಭಿಸುತ್ತಿದ್ದ ಮಣಿಮಯವಾದ ಹಾಸಿಗೆಯಲ್ಲಿ ರತಿಕ್ರೀಡೆಯಾಡಿ ಅನಂತರ ಬಾಯಾರಿಕೆ ಯಿಂದ ಆ ಅಂಗಣದಲ್ಲಿದ್ದ ಮನೋಹರವಾದ ಸರೋವರದಲ್ಲಿ ಬೊಗಸೆಯಿಂದ ನೀರನ್ನು ಎತ್ತಿಕೊಂಡು ಬಗ್ಗಿ ಬಗ್ಗಿ ನೋಡುತ್ತ, ಮತ್ತೆ ನೀರನ್ನು ಕೆಳಕ್ಕೆ ಬಿಡುತ್ತ, ಮತ್ತೆ ತೆಗೆದು ಕೊಂಡು ನೋಡುತ್ತ ಆಲೋಚಿಸುತ್ತಿರುವ[1] ಪಾರ್ವತಿಯ ಅತಿಶಯವಾದ ಮುಗ್ಧ ಸ್ವಭಾವಕ್ಕೆ ನಸುನಕ್ಕು ತಲೆಬಾಗಿಸುವ ಪಂಪಾವಿರೂಪಾಕ್ಷನೇ ನಮ್ಮನ್ನು ಕಾಪಾಡು. ೨. ದೃಢಮನಸ್ಸಿನಿಂದ ಕೇಳಯ್ಯ ಸಿದ್ಧರಾಮ, ಬ್ರಹ್ಮಾಂಡವೇ ಬಂಗಾರಮಯವಾದ ಶಿವಾ ಲಯ, ಅದರ ತುದಿಯೆ ಮುತ್ತಿನ ಆಕಾರದ ಕಲಶವಿದ್ದ ಹಾಗೆ, ಶಿವನಲೋಕವು ನಿರ್ಮಲ ವಾದ ಸ್ಫಟಿಕದಂತೆ ಹೊಳೆಯುತ್ತಿದೆ. ಎಲ್ಲ ಬ್ರಹ್ಮಾಂಡಗಳ ಉತ್ತಮವಾದ ಫಲಗಳ ಸಮೂಹಕ್ಕೆ ಅದು ಕಲ್ಪತರು ಮತ್ತು ಎಲ್ಲ ವೇದ ಮೊದಲಾದ ತರ್ಕಗಳಿಗೆ ನಿಲುಕದಂತೆ

[1] ಬೊಗಸೆಯಲ್ಲಿರುವುದು ನೀರೋ ಅಥವಾ ಚೆಲ್ಲಿದ ಮಣಿಗಳೋ ಎಂದು ಸಂದೇಹ.

CC-0. Jangamwadi Math Collection. Digitized by eGangotri

ಇಂತೆಸೆವ ಶಿವಲೋಕಮುಂತಧಿಕ ಪುರರೂಪ
ಮಂ ತಳೆದು ಕೋಟಿ ಮೂವತ್ತೆರಡು ಯೋಜನಾ
ದ್ಯಂತದಳವಿಯೊಳನಿತು ವಿಸ್ತರದೊಳತುಳ ಜ್ಯೋತಿರ್ಮಯದ ಕೋಟೆಯಿಂದೆ
ಸಂತತ ಪರಬ್ರಹ್ಮಪೂರ್ಣ ಸತ್ಕೋಶಗೃಹ
ದಂತೆಂಟುಬಾಗಿಲ್ಗಳಿಂದಲ್ಲಿಗಲ್ಲಿಗೆ ಕೃ
ತಾಂತಾಂತಕಾರದಷ್ಟಭೈರವರ ಕಾಪಿಂ ಕಂಗೆ ಚೆಲ್ವಾದುದು ೩.

ಕನಕಾರುಣಂ ರಕ್ತಪೀತ ನೀಲೋದ್ರತ್ನ
ಘನ ಹೇಮವರ್ಣಕಾಯಂಗಳಿಂ ಹಂಸಾಜ
ಘನಕೇಕಿ ನಾಗಾರಿ ಮಹಿಷ ವಾರಣ ಕಾಕ ಗಿರಿಕವಾಹಂಗಳಿಂದೆ
ವಿನುತಗುಣ ನೇತ್ರಮಂ ಚಂಡ ಕ್ರೋಧೋನ್ಮತ್ತ
ನನಯ ಕಾಪಾಲಿ ಭೀಷಣ ಮಹಾಸಂಹಾರ
ರೆನಿಪ ಪೆಸರಿನ ಭೈರವರ್ ಚತುರ್ಭುಜ ತ್ರಿನೇತ್ರಂಗಳಿಂ ಕ್ರಮತಪ್ಪದೆ ೪

ಆರಯಲ್ ಬ್ರಾಹ್ಮಿಮಾಹೇಶ್ವರಿ ಸಘೋರ ಕೌ
ಮಾರಿ ವೈಷ್ಣವಿಯತುಳ ವಾರಾಹಿ ಮಾಹೇಂದ್ರಿ
ಯೋರಂತೆ ಚಾಮುಂಡಿ ಕಾಳಿಯೆಂದೆಂಬ ಶಕ್ತಿಗಳ ಸಮ್ಮೇಳದಿಂದೆ

ಮಹಾಮಹಿಮೆಯಿಂದ ಅದರ ಶಿಖರದಲ್ಲಿ ಕಂಗೊಳಿಸುತ್ತಿದ್ದಿತು. ೩. ಈ ರೀತಿ ಕಂಗೊಳಿಸುವ ಶಿವಲೋಕ ಉತ್ತಮ ನಗರರೂಪವನ್ನು ಧರಿಸಿ ಮೂವತ್ತೆರಡು ಕೋಟಿ ಯೋಜನದ ಅಳತೆಯಷ್ಟು ವಿಸ್ತಾರವಾಗಿದೆ. ಅದು ಬಹಳ ಪ್ರಕಾಶಮಾನವಾದ ಕೋಟೆಯಿಂದ ಕೂಡಿದೆ. ಯಾವಾಗಲೂ ಪರಬ್ರಹ್ಮ ಪೂರ್ಣ ಸತ್ಕೋಶ ಗೃಹದಂತೆ ಇದೆ.ಅದಕ್ಕೆ ಎಂಟು ಬಾಗಿಲುಗಳಿವೆ. ಆಯಾ ಬಾಗಿಲಿನಲ್ಲಿ ಶಿವಸ್ವರೂಪಿಗಳಾದ ಎಂಟು ಜನ ಭೈರವರು ಕಾವಲಿನಿಂದ ನೋಡಲು ಚೆಲುವಾಗಿದ್ದಿತು. ೪. ಬಂಗಾರ, ಅರುಣ, ರಕ್ತ, ಹಳದಿ, ನೀಲಿ, ರತ್ನ, ಕಪ್ಪು ಮತ್ತು ಹೇಮ ಮುಂತಾದ ಬಣ್ಣದ ದೇಹಗಳನ್ನು ಹೊಂದಿ, ಹಂಸ, ಹೋತ, ನವಿಲು, ಸಿಂಹ, ಕೋಣ, ಆನೆ, ಕಾಗೆ, ಇಲಿಗಳನ್ನು ವಾಹನವಾಗಿ ಉಳ್ಳ ಗುಣಶೀಲರಾದ ನೇತ್ರಮ, ಚಂಡ, ಕ್ರೋಧ, ಉನ್ಮತ್ತ, ಅನಯ, ಕಾಪಾಲಿ, ಭೀಷಣ, ಮಹಾಸಂಹಾರ ಎನ್ನುವ ಹೆಸರಿನ ಭೈರವರು ನಾಲ್ಕು ಭುಜ ಮೂರು ಕಣ್ಣುಗಳುಳ್ಳವರಾಗಿ, ೫. ಯೋಚಿಸಲು ಕ್ರಮವಾಗಿ ಬ್ರಾಹ್ಮಿ, ಮಹೇಶ್ವರಿ, ಘೋರಳಾದ ಕೌಮಾರಿ, ವೈಷ್ಣವಿ, ವಾರಾಹಿ, ಮಹೇಂದ್ರಿ, ಚಾಮುಂಡಿ, ಕಾಳಿ ಮುಂತಾದ ಶಕ್ತಿಗಳೊಡನೆ ಕೂಡಿದ್ದರು. ಒಬ್ಬೊಬ್ಬ ಭೈರವನಿಗೂ ಇಪ್ಪತ್ತು ಕೋಟಿ ಪರಿವಾರವಿತ್ತು.

CC-0. Jangamwadi Math Collection. Digitized by eGangotri

ಓರೊರ್ವ ಭೈರವರ್ಗಿಪ್ಪತ್ತು ಕೋಟಿ ಪರಿ
ವಾರವೆಸೆಯಲ್ ಮಹಾವಿಭವದಿಂ ಶಿವಪುರ
ದ್ವಾರಂಗಳೆಂಟು ಪೂರ್ವಾದಿಯಾಗಿರಲಲ್ಲಿ ಕಾದಿರ್ಪರುತ್ಸವದೊಳು ೫

ಈ ಪರಿಯೊಳೆಂಟು ಬಾಗಿಲ್ಗಳಿಂದೊಪ್ಪುತಿ
ರ್ಪಾ ಪುರದ ಶಶಿಸೂರ್ಯವೀಥಿಗಳ್ ಲಕ್ಷಮುರೆ
ಗೋಪುರಂಗಳನುಳ್ಳ ವಾಟಂಗಳಗಣಿತಂ ಗೃಹಮಸಂಖ್ಯಾತಂಗಳು
ಪಾಪರಹಿತರ್ ಕೇರಿಗೊಬ್ಬೊಬ್ಬ ಗಣಪರ್ ವಿ
ರೂಪಾಕ್ಷನಾಜ್ಞೆಯಿಂದತುಳ ಬಲವೆರಸಿ ಪ್ರ
ತಾಪದಿಂ ಕಾದಿರ್ಪರನುದಿನಂ ತಮತಮಗೆ ಬಹಳ ಸುಯಿಧಾನದಿಂದೆ ೬

ನಿಷ್ಕಾಮಿಗಳ್ ನಿಗಮಸುಪ್ರೇಮಿಗಳ್ ನಾಡೆ
ದುಷ್ಕರ್ಮನಿರ್ಜಿತರ್ ಮಾಯಾಪ್ರವರ್ಜಿತರ್
ನಿಷ್ಕಂಪಚಿತ್ತರುಂ ನತಸತ್ಯವೃತ್ತರಘನಾಶರಮೃತರ್ ಶ್ರೀಶರು
*[1]ದುಷ್ಕದೂರರ್ ಸುಗುಣಪೂರರತಿನಿಪುಣರ್ ಶಿ
ರಷ್ಕರೋಟೀಧರನಭಕ್ತರವ್ಯಕ್ತರುರೆ
ಕಿಷ್ಕಿಂದವಾಗಿರಲ್ ತತ್ಪುರಂ ಸುಕೃತಂಗಳಿಹ ಬೀಡಿನಂತೆಸೆದುದು ೭

ಹೀಗೆ ಶಿವಪುರದ ಪೂರ್ವದಿಕ್ಕಿನಿಂದ ಹಿಡಿದು ಎಂಟು ದಿಕ್ಕಿನ ಬಾಗಿಲುಗಳನ್ನೂ ಮಹಾ ವೈಭವದಿಂದ ಆ ಅಷ್ಟ ಭೈರವರು ಉತ್ಸಾಹದಿಂದ ಕಾಯುತ್ತಿರುವರು. ೬. ಈ ರೀತಿಯಲ್ಲಿ ಎಂಟು ಬಾಗಿಲುಗಳಿಂದ ಶೋಭಿಸುತ್ತಿದ್ದ ಆ ಪಟ್ಟಣದಲ್ಲಿ ಚಂದ್ರ-ಸೂರ್ಯ ವೀಧಿಗಳು ಲಕ್ಷ ಸಂಖ್ಯೆಯಲ್ಲಿದ್ದುವು. ಗೋಪುರಗಳನ್ನುಳ್ಳ ಒಳಾಂಗಣಗಳಿಗೆ ಲೆಕ್ಕವಿಲ್ಲ. ಮನೆಗಳೂ ಅಸಂಖ್ಯಾತ.ಒಂದೊಂದು ಬೀದಿಗೆ ಒಬ್ಬೊಬ್ಬರು ಪಾಪರಹಿತರಾದ ಗಣಪರು. ದೊಡ್ಡ ಸೈನ್ಯದಿಂದ ಕೂಡಿ ಅತಿಶಯ ಪರಾಕ್ರಮದಿಂದ ಶಿವನ ಆಜ್ಞೆಯಂತೆ ಅನವರತವೂ ಎಚ್ಚರಿಕೆಯಿಂದ ರಕ್ಷಿಸುತ್ತಿದ್ದರು. ೭. ಅವರೆಲ್ಲರೂ ಪ್ರತಿಫಲಾಪೇಕ್ಷೆಯಿಲ್ಲದವರು, ಅತಿ ಯಾದ ವೇದಾಸಕ್ತರು, ದುಷ್ಕರ್ಮಗಳನ್ನು ಗೆದ್ದವರು, ಮಾಯೆಗೆ ಸಿಲುಕದವರು, ಧೃಢಮನಸ್ಸಿನವರು, ಸತ್ಯಕ್ಕೆ ತಲೆಬಾಗುವವರು, ಪಾಪನಾಶಿಗಳು, ಮೃತ್ಯುವಿಲ್ಲದವರು, ಸಂಪದ್ಭರಿತರು, ಕೆಟ್ಟ ಕೆಲಸದಿಂದ ದೂರವಾದವರು, ಸುಗುಣಗಳಿಂದ ತುಂಬಿದವರು, ಮಹಾ ನಿಪುಣರು, ಶಿರೋಮಾಲಾಧರನಾದ ಶಿವನ ಭಕ್ತರು, ಅವ್ಯಕ್ತರು. ಇಂಥವರಿಂದ

*[1] ದುಃಷ್–ದುಷ್ಟವಾದ, ಕ= ಮನಸ್ಸುಳ್ಳವರು.

CC-0. Jangamwadi Math Collection. Digitized by eGangotri

ಗೋತ್ರಂಗಳೊಳ್ ಮೆರೆವ ಕನಕಾದ್ರಿಯಂತೆ ನ
ಕ್ಷತ್ರಂಗಳೊಳ್ ಮೆರೆವ ಪೂರ್ಣಶಶಿಯಂತಖಿಳ
ಚಿತ್ರಮಣಿಮಧ್ಯಚಿಂತಾರತ್ನದಂತೆ ಪುಣ್ಯಗ್ರಹಂಗಳ ನಡುವಣ
ಮಿತ್ರಮಂಡಲದಂತೆ ಸುಕ್ಷೇತ್ರದೊಳ್ಕಾಶಿ
ಚೇತ್ರದಂತಖಿಳ ಗಣಗೃಹಗಳಾ ನಡುವೆ ಶಿಖಿ
ನೇತ್ರನರಮನೆಯಯ್ದು ಕೋಟಿ ಯೋಜನದ ವಿಸ್ತೀರ್ಣದಿಂದೊಪ್ಪಿರ್ದುದು ೮

ಬಳಿಕಲಾ ಭವನಮಂ ಬಳಸಿ ಕಡುಚೆಲ್ವಿನಿಂ
ಥಳಥಳಿಸಿ ಪೊಳೆವ ಪಳುಕಿನ ನೀಲರೂಪದಿಂ
ಬಳೆದು ಶಿವತತ್ತ್ವಮಿರ್ಪುದು ದಶಸಹಸ್ರಯೋಜನದುನ್ನತಿಯೊಳದಕ್ಕೆ
ಕಳಕಳಪ ರನ್ನದೆನೆ ಶತಯೋಜನಂಗಳಿಂ
ಬಳತೆ ಭಕ್ತಿಜ್ಞಾನ ಪರಮ ವೈರಾಗ್ಯ ನಿ
ರ್ಮಳ ಮುಕ್ತಿಗಳೆ ನಾಲ್ಕು ಬಾಗಿಲಾಗಿರಲಭವನಂತಃಪುರಂ ಮೆರೆದುದು ೯

ಸಿಂಗರದೊಳಾ ಸುರಪ ಯಮ ವರುಣ ಧನಪ ದಿ
ಕ್ಕಿಂಗಮರ್ದ ಕನಕ ಹರಿನೀಲ ಮೌಕ್ತಿಕ ಮಾಣಿ
ಕಂಗಳೊಳ್ಬೆಳಗಿನಿಂ ಋಗ್ಯಜುಃ ಸಾಮವೇದಾಥರ್ವಣಾಖ್ಯಂಗಳೇ
ತುಂಗತರ ಲಕ್ಷಯೋಜನದುದ್ದದಿಂ ಗೋಪು
ರಂಗಳಾಕೃತಿಯೊಳಿರೆ ನಂದಿಯುಂ ವೀರಭ
ದ್ರಂ ಗರುವ ಮಾಕಾಳ ನೀಲಲೋಹಿತರಲ್ಲಿ ಕಾಯ್ದುಕೊಂಡಿರುತಿರ್ಪರು ೧೦

ಆ ಪಟ್ಟಣ ಕಿಕ್ಕಿರಿದು ಪುಣ್ಯದ ಬೀಡಿನಂತೆ ಶೋಭಿಸುತ್ತಿತ್ತು. ೮. ಪರ್ವತಗಳ ಮಧ್ಯ ದಲ್ಲಿ ಪ್ರಕಾಶಿಸುವ ಕನಕಾದ್ರಿಯಂತೆ, ನಕ್ಷತ್ರಗಳ ಮಧ್ಯೆ ಶೋಭಿಸುವ ಪೂರ್ಣಚಂದ್ರ ನಂತೆ, ವಿಚಿತ್ರವಾದ ರತ್ನಗಳ ಮಧ್ಯದಲ್ಲಿ ಬೆಳಗುವ ಚಿಂತಾಮಣಿಯಂತೆ, ಪುಣ್ಯಗ್ರಹಗಳ ನಡುವೆ ಇರುವ ಸೂರ್ಯಮಂಡಲದಂತೆ, ಪುಣ್ಯಕ್ಷೇತ್ರಗಳಲ್ಲಿ ಕಾಶಿಕ್ಷೇತ್ರದಂತೆ, ಎಲ್ಲ ಶಿವಗಣಗಳ ಮನೆಗಳ ನಡುವೆ, ಪಾವಕನೇತ್ರನಾದ ಪರಶಿವನ ಅರಮನೆಯು ಐದು ಕೋಟಿ ಯೋಜನ ವಿಸ್ತಾರದಿಂದ ವೈಭವದಿಂದ ಮೆರೆಯುತ್ತಿದ್ದಿತು. ೯. ಆ ಅರಮನೆಗೆ ಶಿವತತ್ವವು ಅತಿಚೆಲುವಾಗಿ ಥಳಥಳಿಸುತ್ತ ಹೊಳೆಯುವ ನೀಲಸ್ಫಟಿಕದಿಂದ ರಚಿಸಿ ಹತ್ತುಸಾವಿರ ಯೋಜನ ವಿಸ್ತಾರವಾಗಿದ್ದ ಕೋಟೆಯಂತಿತ್ತು. ಭಕ್ತಿ, ಜ್ಞಾನ, ಪರಮ ವೈರಾಗ್ಯ, ನಿರ್ಮಲ ಮುಕ್ತಿಗಳೇ ಅದರ ನೂರು ಯೋಜನದಳತೆಯ ಚಿನ್ನದ ನಾಲ್ಕು ಬಾಗಿಲುಗಳುಳ್ಳ ಈಶ್ವರನ ಅಂತಃಪುರವು ಮನೋಹರವಾಗಿತ್ತು. ೧೦. ಶೃಂಗಾರದಿಂದ ಆ (ಇಂದ್ರ, ಯಮ, ವರುಣ, ಕುಬೇರ) ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರದಿಕ್ಕುಗಳಲ್ಲಿ ಋಕ್, ಯಜುರ, ಸಾಮ, ಅಥರ್ವಣ ವೇದಗಳೇ ಬಂಗಾರ, ನೀಲಿ, ಮುತ್ತು, ಮಾಣಿಕ್ಯ ಗಳ ಬೆಳಕಿನಿಂದ ಲಕ್ಷ ಯೋಜನದುದ್ದವಾಗಿ ರಚಿಸಿದ ಎತ್ತರವಾದ ಗೋಪುರಗಳು. ಆ ಕೋಟೆಯ ಮಹಾದ್ವಾರಗಳನ್ನು ನಂದಿ, ವೀರಭದ್ರ, ಮಹಾಕಾಳ, ನೀಲಲೋಹಿತ ಇವರು

CC-0. Jangamwadi Math Collection. Digitized by eGangotri

ಅಂತನಿಬರಾ ಚತುರ್ದ್ವಾರಂಗಳೊಳ್ ವೇತ್ರ
ವಾಂತು ಹರಿಯಜಮುಖ್ಯರಂ ನಿಲಿಸಿ ಮತ್ತುಮಾ
ಕಾಂತ ನೇಮಂಗೊಂಡು ಪೋಗಿ ಪೊತಮಡಿಪ ವಿನಿಯೋಗಂಗಳಿಂದಿರ್ಪರು
ಅಂತಃಪುರಗೃಹಾಕಾರದಿಂದತುಳ ವೇ
ದಾಂತವಿರ್ಪುದು ಬೇರೆ ಕೋಟಿಯೋಜನದಳತೆ
ಯಿಂ ತಳೆದು ಪತ್ರ್ರಣವಮೇ ಶಿವಸಭಾಸ್ಥಳಾಕಾರವಾಗಿರುತಿರ್ಪುದು ೧೧

ಆ ಹರನ ಸಭೆಯ ಬೆಳಗಿನ ಮುಂದೆ ಕಂಗೊಳಿಪ
ಸಾಹಸ್ರ ಕೋಟಿರವಿಗಳ ತಳಪ ವದನಂಗ
ಳೂಹಿಸಲ್ ಪಳೆಗಂಚುಗನ್ನಡಿಯೊಲಿಪ್ಪುವಾ ಕೃಷ್ಣರ ಮಹಾಕಾಳಿಯ
ದೇಹಂಗಳೈದೆ ಪಲ್ಲಟಿಪ್ರುವಚ್ಚರಿಯುದರ
ಮಾಹಾತ್ಮೆಯಿಂ ನೋಡಲಖಿಳ ಬ್ರಹ್ಮಾಂಡಂಗ
ಳೀ ಹಾಲಕಡಲೊಳಗೆ ಪ್ರತಿಬಿಂಬಿಸುವ ಕುಕ್ಕುಟಾಂಡಂಗಳೆನಲೆಸೆದುವು ೧೨

ಈ ಪ್ರಕಾರದ ಸಭಾಮಧ್ಯದೊಳಗಭವಂಗೆ
ಸುಪ್ರತಾಪಂಗೆ ಸುಲಭಂಗೆ ಸಂಸಾರಬಂ
ಧಪ್ರವಿಧ್ವಂಸಂಗೆ ಹಂಸಂಗೆ ಲಕ್ಷಯೋಜನದ ವಿಸ್ತೀರ್ಣಮೆಸೆಯೆ
ಸುಪ್ರಭೆಯೊಳಪ್ಪ ಮಹದೈಶ್ವರ್ಯಮಂ ನೋಡ
ಲಪ್ರತಿಯ ಚರಣಂಗಳೆಂಟೆನಿಸಿ ತೋರೆ ಮು
ಕ್ತಿಪ್ರತಿಷ್ಠಿತ ಸಿಂಹವಿಷ್ಟರಂ ಕಣ್ಣಪ್ರಣ್ಯದ ಬೆಳಸಿನಂತಿರ್ಪುದು ೧೩

ಕಾಮುಕೊಂಡಿದ್ದಾರೆ. ೧೧. ಈ ರೀತಿಯಲ್ಲಿ ಅವರೆಲ್ಲರೂ ನಾಲ್ಕು ಬಾಗಿಲುಗಳಲ್ಲಿಯೂ ಬೆತ್ತವನ್ನು ಹಿಡಿದು ವಿಷ್ಣು, ಬ್ರಹ್ಮ ಮುಂತಾದವರನ್ನು ತಡೆದು ನಿಲ್ಲಿಸುತ್ತಿದ್ದರು. ಮತ್ತೆ ಶಿವನ ಅಪ್ಪಣೆಯಂತೆ ಹೋಗಿ ಅವರನ್ನು ಒಳಕ್ಕೆ ಕಳಿಸುವ ಊಳಿಗವನ್ನು ಮಾಡುತ್ತಿದ್ದರು. ಶ್ರೇಷ್ಠವಾದ ವೇದಾಂತವು ಅಂತಃಪುರದ ಆಕಾರದಲ್ಲಿರುವುದು ಕೋಟಿ ಯೋಜನದಳತೆಯಲ್ಲಿ ಓಂಕಾರವೇ ಶಿವನ ಸಭಾಸ್ಥಾನದ ಆಕಾರವಾಗಿದ್ದಿತು. ೧೨. ಊಹಿಸುವುದಾದರೆ ಆ ಶಿವನ ಸಭೆಯ ಬೆಳಕಿನ ಮುಂದೆ ಕಂಗೊಳಿಸುವ ಸಾವಿರ ಕೋಟಿ ಸೂರ್ಯರ ಹೊಳೆಯುವ ಮುಖಗಳೂ ಹಳೆಯ ಕಂಚಿನ ಕನ್ನಡಿಯಂತೆ ಕಾಣುವುವು. ಆ ವಿಷ್ಣುವಿನ ತುಂಬುಗಪ್ಪುದೇಹ ಚೆನ್ನಾಗಿ ಮಾರ್ಪಾಟಾಗುವುದು. ಅದರ ಮಹಾತ್ಮೆ ಆಶ್ಚರ್ಯದಾಯಕ. ಸಕಲ ಬ್ರಹ್ಮಾಂಡಗಳೇ ಹಾಲಿನ ಸಮುದ್ರದೊಳಗೆ ಪ್ರತಿಬಿಂಬಿಸುವ ಕೋಳಿಯ ಮೊಟ್ಟೆಯಂತೆ ತೋರುತ್ತಿದ್ದುವು. ೧೩. ಆ ಸಭಾಮಧ್ಯದಲ್ಲಿ ಶಿವನಿಗೆ, ಪ್ರತಾಪಶಾಲಿಗೆ, ಸುಲಭಸಾಧ್ಯನಿಗೆ, ಭವಬಂಧನವನ್ನು ಹರಿಸುವವನಿಗೆ, ಮೋಕ್ಷದಾಯಕನಾದ ಪರಮಾತ್ಮನಿಗೆ ಪ್ರಕಾಶಮಾನವಾದ ಎಂಟು ಮಹದೈಶ್ವರ್ಯಗಳೇ ಕಾಲುಗಳಾಗಿ ಮುಕ್ತಿಪ್ರತಿಷ್ಠಿತವಾದ ಲಕ್ಷ ಯೋಜನ ವಿಸ್ತಾರವಾದ ಸಿಂಹಾಸನವು ನೋಡು

CC-0. Jangamwadi Math Collection. Digitized by eGangotri

ತನ್ಮಹಾಪೀಠದ ಸುಖಾಸನದ ಮೇಲೆ ಗಿರಿ
ಜೋನ್ಮನಃಕುಮುದಚಂದ್ರಂ ಚಂದ್ರಶೇಖರಂ
ಸನ್ಮುನಿಸ್ತೋತ್ರಪಾತ್ರಂ ತ್ರಿಣೇತ್ರಂ ಭಕ್ತವತ್ಸಲಂ ಬ್ರಹ್ಮಾದ್ಯರ
ಹೃನ್ಮಧ್ಯಶೋಭಿತಾಂಗಂ ಮಂಗಳಂ ವಿವ
ಸ್ವನ್ಮಂಗಲಾನೀಕಕೋಟಿಪ್ರಕಾಶಂ ಜ
ಸನ್ಮಹಾಜನನ ಸ್ಥಿತಿ ಪ್ರಳಯಕಾರಣ ವಿರೂಪಾಕ್ಷನೊಪ್ಪಿರ್ದನು ೧೪

ತೊಳಪ ಮುತ್ತಿನ ಮಾಣಿಕದ ಹೊನ್ನ ನೀಲದೊ
ಳ್ವೆಳಗಿನಿಂ ಪಶ್ಚಿಮೋತ್ತರ ಪೂರ್ವ ದಕ್ಷಿಣಂ
ಗಳೊಳೆ ಸದ್ಯೋಜಾತಮುಂ ವಾಮದೇವಮುಂ ತತ್ಪುರುಷಮೆಸೆವಘೋರಂ
ಪೊಳೆವುತಿರಲವರಗ್ರದೊಳ್ ಸ್ಫಟಿಕವರ್ಣದಿಂ
ತೊಳಗುವೀಶಾನ್ಯಮುಖಮಿರೆ ತನ್ಮುಖಂಗಳಂ
ಬಳಸಿ ತನ್ನಾಮ ಪುರುಷರ್ ಪಂಚವದನದಿಂ ತನ್ಮಂತ್ರದಿಂ ನುತಿಪರು ೧೫

ಇಂತೆಸೆವ ಪಂಚಾಸ್ಯ ಪಂಚದಶನಯನಂಗ
ಳಿಂ ತೋರ್ಪ ದಶಭುಜ ವಿಷಗ್ರೀವ ಗಜಚರ್ಮ
ದಿಂ ತಳೆದ ತಲೆಮಾಲೆಗಳ ಸಾಲ್ಗಳಿಂ ಚಂದ್ರಕಾಂತಮಯತೇಜದಿಂದ

ವವರ ಕಣ್ಣಿನ ಪುಣ್ಯದ ಬೆಳೆಯಂತೆ ತೋರುತ್ತಿದ್ದಿತು. ೧೪. ಆ ಮಹಾಪೀಠದ ಸುಖಾಸನದ ಮೇಲೆ ಪಾರ್ವತಿಯ ಮನಸ್ಸೆಂಬ ನೈದಿಲೆಗೆ ಚಂದ್ರನಾದ ಚಂದ್ರಶೇಖರನು, ಶ್ರೇಷ್ಠಋಷಿಗಳ ಸ್ತೋತ್ರಕ್ಕೆ ಪಾತ್ರನಾದ ಮುಕ್ಕಣ್ಣನು, ಭಕ್ತವತ್ಸಲನು, ಬ್ರಹ್ಮ ಮುಂತಾದವರ ಹೃದಯಮಧ್ಯದಲ್ಲಿ ಶೋಭಿಸುವವನೂ, ಮಂಗಳಕರನೂ, ವಿಶೇಷ ಮಂಗಳದಾಯಕನಾದ ಕೋಟಿ ಸೂರ್ಯ (?) ಪ್ರಕಾಶನೂ, ಜಗತ್ತಿನ ಸೃಷ್ಟಿ-ಸ್ಥಿತಿ-ಲಯ ಗಳಿಗೆ ಕಾರಣನೂ ಆದ ವಿರೂಪಾಕ್ಷನು ಮಂಡಿಸಿ ಶೋಭಿಸುತ್ತಿದ್ದನು. ೧೫. ಹೊಳೆಯುವ ಮುತ್ತು, ಮಾಣಿಕ್ಯ, ಹೊನ್ನು, ನೀಲ ಇವುಗಳ ಬೆಳಕಿನಿಂದ ಅನುಕ್ರಮವಾಗಿ ಪಶ್ಚಿಮ, ಉತ್ತರ, ಪೂರ್ವ, ದಕ್ಷಿಣದಿಕ್ಕುಗಳಲ್ಲಿ ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ ಎಂಬ ಮುಖಗಳು ಹೊಳೆಯುತ್ತಿರಲು, ಅವುಗಳ ಮೇಲ್ಭಾಗದಲ್ಲಿ ಸ್ಫಟಿಕ ವರ್ಣದಿಂದ ಬೆಳಗುವ ಈಶಾನಮುಖವು ಇತ್ತು. ಈ ಪಂಚಮುಖಗಳನ್ನು ಬಳಸಿ ಆಯಾ ಹೆಸರಿನ ಪುರುಷರು ಐದು ಮುಖಗಳಿಂದ ಆಯಾ ಮಂತ್ರಗಳಿಂದ ಸ್ತುತಿಸುವರು. ೧೬. ಈ ರೀತಿಯಾಗಿ ಪ್ರಕಾಶಿಸುವ ಐದು ಮುಖಗಳಿಂದಲೂ, ಹದಿನೈದು ಕಣ್ಣುಗಳಿಂದಲೂ, ದಶಭುಜ, ವಿಷಕಂಠ, ಗಜಚರ್ಮಗಳಿಂದಲೂ, ಧರಿಸಿದ್ದ ರುಂಡಮಾಲೆಗಳ ಸಾಲಿ ನಿಂದಲೂ, ಚಂದ್ರಕಾಂತಶಿಲೆಯ ಪ್ರಕಾಶದಿಂದಲೂ, ಕಾಮನನ್ನು ಸುಟ್ಟು ಬೂದಿಯನ್ನು

CC-0. Jangamwadi Math Collection. Digitized by eGangotri

ಕಂತುಭಸ್ಮೋದ್ಧೂಳಿತಾಂಗದಿಂ ಲಲಿತಫಣಿ
ಸಂತತಿಯ ವಿಲಸಿತಾಭರಣದಿಂದೊಪ್ಪಿದನ
ನಂತದೇವರ ದೇವನಖಿಳ ಸುರರಕ್ಷಂ ವಿರೂಪಾಕ್ಷನೋಲಗದೊಳು ೧೭

ಶಂಭು ವಾಮಾರ್ಧಪೀಠದೊಳೊಪ್ಪಿದಳ್ ದೈತ್ಯ
ಕುಂಭಿಕುಂಭಸ್ಥಳದಳತ್ ಸಿಂಹಯಾನೆ ತ
ತ್ತ್ವಾಂಬುಧಿಗಳಧಿದೇವಿ ದೇವಾಳಿಸುತೆ ಕಾಳಿ ಕಾಳಾಭ್ರ ತೀಬ್ರವರ್ಣೆ
ಜಂಭಾರಿನುತೆ ಜಗತ್ಪಾವನತೆ ದಕ್ಷಸುತೆ
ತಾಂ ಭಕ್ತವತ್ಸಲೆ ಸುನಿಶ್ಚಲೆ ಮಹಾವಿಭವ
ದಿಂ ಭವಾನಿ ಸ್ಯಾಮಫಣಿವೇಣಿ ಶರ್ವಾಣಿ ಶಂಕರನ ರಾಣಿಯುಂದು ೧೭

ಶಕ್ತಿಸತಿಯರ ತಂಡತಂಡಂಗಳಿಂದೀಶ
ಭಕ್ತಿಸತಿಯರ ಮೊತ್ತಮೊತ್ತಂಗಳಿಂದಂ ವಿ
ರಕ್ತಸತಿಯರ ನೆರವಿನೆರವಿಯಿಂ ರುದ್ರಕನ್ಯೆಯರ ಸಾಲ್ ಸಾಲ್ಗಳಿಂದೆ
ಉಕ್ತಿಸತಿಯರ ಪಙ್ತಿಪಙ್ತಿಯಿಂ ದುರಿತನಿ
ರ್ಮುಕ್ತ ಸತಿಯರ್ಕಳೆಕ್ಕೆಕ್ಕೆಯಿಂ ಸ್ವರ್ಗಸಂ
ಯುಕ್ತಸತಿಯರ ಬಳಗಬಳಗವೋಲೈಸೆ ಶಿವನರಸಿಯಿಂತೆಸೆದಿರ್ದಳು ೧೮

ಧರಿಸಿದ ದೇಹದಿಂದಲೂ, ಹೊಳೆಯುವ ಸರ್ಪಗಳ ಸಮೂಹವನ್ನೇ ಆಭರಣಗಳನ್ನಾಗಿ ಧರಿಸಿದ, ಸಕಲ ದೇವರದೇವನಾದ, ಎಲ್ಲ ದೇವತೆಗಳ ರಕ್ಷಕನೂ ಆದ ವಿರೂಪಾಕ್ಷನು ಸಭಾಸ್ಥಾನದಲ್ಲಿ ಮಂಡಿಸಿದ್ದನು. ೧೭. ಈಶ್ವರನೊಡನೆ ಸಿಂಹಾಸನದ ಎಡ ಅರ್ಧ ಭಾಗದಲ್ಲಿ ರಾಕ್ಷಸರೆಂಬ ಆನೆಯ ಕುಂಭಸ್ಥಳವನ್ನು ಸೀಳುವ ಸಿಂಹವನ್ನು ವಾಹನವಾಗಿ ಉಳ್ಳವಳೂ, ಸಕಲತತ್ತ್ವಗಳೆಂಬ ಸಾಗರಕ್ಕೆ ಅಧಿದೇವತೆಗಳ ಸಮೂಹದಿಂದ ಸ್ತುತಿಸಲ್ಪಡುವವಳೂ,ಕಾಳಿ,ಕಪ್ಪಾದ ಮೋಡದಂತೆ ತೀವ್ರವಾದ ಬಣ್ಣವುಳ್ಳವಳೂ,ದೇವೇಂದ್ರನಿಂದ ಹೊಗಳಿಸಿಕೊಳ್ಳುವವಳೂ, ಜಗತ್ಪಾವನೆ, ದಕ್ಷನ ಮಗಳೂ, ಭಕ್ತವತ್ಸಲಳೂ, ನಿಶ್ಚಲ ಮನೋಭಾವವುಳ್ಳವಳೂ ಭವಾನಿಯೂ, ನಾಗವೇಣಿಯೂ, ಶರ್ವಾಣಿಯೂ, ಶಿವನ ಪತ್ನಿಯೂ ಆದ ಪಾರ್ವತಿಯು ಮಹಾವೈಭವದಿಂದ ಕುಳಿತಿದ್ದಳು. ೧೮. ಶಕ್ತಿ ದೇವತೆಯರು ತಂಡತಂಡವಾಗಿ, ಈಶ್ವರಭಕ್ತರ ಪತ್ನಿಯರು ಮೊತ್ತ ಮೊತ್ತವಾಗಿ ವಿರಕ್ತಸ್ತ್ರೀಯರು ಗುಂಪು ಗುಂಪಾಗಿ, ರುದ್ರಕನ್ಯೆಯರು ಸಾಲು ಸಾಲಾಗಿ, ಸರಸ್ವತಿಯರು ಪಂಕ್ತಿ ಪಂಕ್ತಿಯಾಗಿ, ಪಾಪಮುಕ್ತರಾದ ಸ್ತ್ರೀಯರು ಒತ್ತೊತ್ತಾಗಿ, ದೇವತಾಸ್ತ್ರೀಯರು ಬಳಗ ಬಳಗವಾಗಿ ಸೇವಿಸುತ್ತಿರಲು ಶಿವನರಸಿ ಪಾರ್ವತಿಯು ಶೋಭಿಸುತ್ತಿದ್ದಳು.

CC-0. Jangamwadi Math Collection. Digitized by eGangotri

ನೀಲವರ್ಣರ್ ಸುಪೀತಾಂಬರಧರರ್ ಕುಂಡ
ಲಾಲಂಕೃತರ್ ಕೋಮಲಾಂಗರಾ ಕೌಸ್ತುಭರ್
ಶ್ರೀಲತಾಂಗೀವಕ್ಷರುರುಶಂಖ ಗದೆ ಚಕ್ರ ಶಾರ್ಙ್ಗಸಂಯುಕ್ತವಾದ
ಲೋಲಚಾತುರ್ಭುಜರ್ ಮಣಿಮಯಕಿರೀಟರ್ ಮ
ನೋಲಕ್ಷಕಾಸ್ತ್ರಜನಕರ್ ಸರಸಿಜಾಂಬಕರ್
ಪೇಳಲೇಂ ಗರುಡವಾಹನರೀಶವಾಮದೊಳ್ ವಿಷ್ಣುಕೋಟಿಗಳೆಸೆದರು ೧೯

ವಾಣೀವರರ್ ಹಂಸವಾಹನರ್ ನಿಖಿಳಗೀ
ರ್ವಾಣಜನಕರ್ ಕಮಂಡಲದಂಡಮಾಲಿಕಾ
ಪಾಣಿಗಳ್ ಸಕಲ ವೇದಜ್ಞರಬುಜೋದ್ಭವರ್ ಕೋಟಿಬ್ರಹ್ಮಾಂಡಂಗಳ
ಪ್ರಾಣಿಗಳ ಸೃಜಿಪ ಕರ್ತರ್ ಮಹಾಪ್ರೌಢಿಕೆಯು
ಕೇಣಿಗಾರರ್ ಚತುರ್ವದನರೊತ್ತೊತ್ತೆಯಿಂ
ಸ್ಥಾಣುವಿನ ಬಲದ ಕಡೆಯೊಳ್ ಬ್ರಹ್ಮಕೋಟಿಗಳ್ ಕಣ್ಗೆಸೆದರೇನೆಂಬೆನು ೨೦

ಆ ಬ್ರಹ್ಮನೊತ್ತಿಗರ್ ಭಸಿತಸಂಪತ್ತಿಗರ್
ತೀಬ್ರತೇಜರ್ ಜಟಾವಿಭ್ರಾಜರಖಿಳದೇ
ವಬ್ರಾತಪೂಜಿತರ್ ಮುಕ್ತ್ಯಂಗನಾಯುತರ್ ಶಿವಜಪಿತಜಿಹ್ವಾಗ್ರರು

೧೯. ನೀಲಿಬಣ್ಣದಿಂದ ಕೂಡಿದ, ಪೀತಾಂಬರಧಾರಿಗಳಾದ, ಕರ್ಣಕುಂಡಲದಿಂದ ಅಲಂಕೃತವಾದ, ಕೋಮಲವಾದ ಅಂಗವುಳ್ಳ, ಕೌಸ್ತುಭಮಣಿಯನ್ನು ಧರಿಸಿದ, ಹೃದಯದಲ್ಲಿ ಲಕ್ಷ್ಮಿಯನ್ನು ಧರಿಸಿದ, ಶ್ರೇಷ್ಠವಾದ ಶಂಖ, ಗದೆ, ಚಕ್ರ, ಶಾರ್ಙ್ಗ ಬಿಲ್ಲುಗಳಿಂದ ಕೂಡಿ, ತೂಗಾಡುವ ನಾಲ್ಕು ಭುಜಗಳನ್ನುಳ್ಳ ಮಣಿಖಚಿತ ಕಿರೀಟವನ್ನು ಧರಿಸಿದ, ಮನ್ಮಥರ ಜನಕರಾದ, ಕಮಲದಂತಹ ಕಣ್ಣುಳ್ಳ, ಗರುಡನನ್ನು ವಾಹನವಾಗಿ ಉಳ್ಳ ಕೋಟಿ ವಿಷ್ಣುಗಳು ಶಿವನ ಎಡಭಾಗದಲ್ಲಿ ಪ್ರಕಾಶಿಸುತ್ತಿದ್ದರು. ೨೦. ಸರಸ್ವತಿಯರ ಪತಿಗಳು, ಹಂಸವನ್ನು ವಾಹನವಾಗಿ ಉಳ್ಳವರು, ಸಕಲ ದೇವತೆಗಳಿಗೂ ಜನಕರು, ಕಮಂಡಲ, ದಂಡ, ಜಪಮಾಲೆಯನ್ನು ಕೈಯಲ್ಲಿ ಹಿಡಿದವರು, ಸಲಕ ವೇದಪಾರಂಗತರು, ಕಮಲಭವರು, ಕೋಟಿ ಬ್ರಹ್ಮಾಂಡಗಳ ಪ್ರಾಣಿಗಳನ್ನು ಸೃಷ್ಟಿ ಮಾಡುವವರು, ಮಹಾ ಪ್ರೌಢಿಮೆ (ಜ್ಞಾನ) ಚತುರರು, ನಾಲ್ಕು ಮುಖವುಳ್ಳವರು ಆದ ಕೋಟಿ ಬ್ರಹ್ಮರುಗಳು ಶಿವನ ಬಲಗಡೆಯಲ್ಲಿ ಕಂಗೊಳಿಸುತ್ತಿದ್ದರು. ೨೧. ಭಸ್ಮವನ್ನು ಧರಿಸಿದವರೂ, ಮಹಾತೇಜಸ್ಸನ್ನುಳ್ಳವರೂ, ಜಟೆಯಿಂದ ಶೋಭಿಸುವವರೂ, ಸಕಲ ದೇವ ಸಮೂಹದಿಂದ ಪೂಜಿಸಲ್ಪಡುವವರೂ, ಮುಕ್ತಿಸ್ತ್ರೀಯಿಂದ ಕೂಡಿದವರೂ.

CC-0. Jangamwadi Math Collection. Digitized by eGangotri

ಸುಬ್ರತಾಚಾರಕರ್ ಪ್ರತಿಗಳವಿಚಾರಕರ್
ಸುಬ್ರಹ್ಮಬೋಧಕರ್ ಜ್ಞಾನಸಾಧಕರುಜ್ಞ
ಣಭ್ರಾಜಕಾರಿಗಳ್ ದುರಿತಸಂಹಾರಿಗಳನಂತ ಮುನಿವರರೆಸೆದರು ೨೧

ಕೆಂಜೆಡೆಯನೆಳೆವೆರೆಯನಾಂತೈದುಮುಖದವರ್
ಕುಂಜರಾಜಿನದವರ್ ಭಸಿತಲೇಪರ್ ಪಿರಿದು
ರಂಜಿಪ ತ್ರಿಶೂಲಾದಿಗಳನಾಂತ ದಶಭುಜದವರ್ ವೃಷಭವಾಹರ್ಕಳು
ನಂಜುಗೊರಳರ್ ನಾಡೆ ಪದಿನೈದುಕಣ್ಣವರ್
ಮಂಜುಳಸ್ಫಟಿಕತೇಜರ್ ಪ್ರಳಯಕರ್ತುಗಳ್
ತಾಂ ಜಗತ್ಪತಿ ವಿರೂಪಾಕ್ಷನಿದಿರೊಳ್ ರುದ್ರಕೋಟಿಗಳ್ ಕಣ್ಗೆಸೆದರು ೨೨

ವರಮಹಿಮ ನಂದೀಶ ಭೃಂಗೀಶ ವೀರೇಶ
ಕರಿವದನ ಸೇನಾನಿ ನೀಲಲೋಹಿತ ಮುಂಡ
ಧರ ಮಹಾಕಾಳ ಗಜಕರ್ಣ ಘಂಟಾಕರ್ಣ ಗೋಕರ್ಣ ಶಂಕುಕರ್ಣ
ಸುರಗಿರಿವಿಪಾತನ ವಿರೂಪಾಕ್ಷ ನಿಶ್ಶಂಕ
ಗರುಡಪಕ್ಷಚ್ಛೇದ ಗಗನಾಂಗ ಧೂಮಾಂಗ
ಪರಮಕೂಷ್ಮಾಂಡರೊಬ್ಬೊಬ್ಬರಯ್ನೂರ್ಪದ್ಮಬಲವೆರಸಿ ರಂಜಿಸಿದರು ೨೩

ಯಾವಾಗಲೂ ನಾಲಗೆಯಲ್ಲಿ ಶಿವನ ನಾಮವನ್ನೇ ಜಪಿಸುವವರೂ, ಉತ್ತಮವ್ರತವನ್ನು ಪಾಲಿಸುವವರೂ, ವೇದಸಮೂಹದ ವಿಚಾರವನ್ನೇ ಕುರಿತು ಚಿಂತಿಸುವವರೂ, ಶ್ರೇಷ್ಠವಾದ ಬ್ರಹ್ಮಜ್ಞಾನವನ್ನು ಬೋಧಿಸುವವರೂ, ಜ್ಞಾನಸಾಧಕರೂ, ಶ್ರೇಷ್ಠಗಣಸಮೂಹ ಕಾಂತಿಯುಕ್ತರೂ, ಪಾಪಸಂಹಾರಿಗಳೂ ಆದ ಅನೇಕ ಋಷಿಶ್ರೇಷ್ಠರು ಆ ಬ್ರಹ್ಮರುಗಳ ಪಕ್ಕದಲ್ಲಿ ಪ್ರಕಾಶಿಸುತ್ತಿದ್ದರು. ೨೨. ಕೆಂಜಡೆ ಮತ್ತು ಬಾಲಚಂದ್ರನನ್ನು ಹೊಂದಿದ ಐದು ಮುಖವುಳ್ಳವರೂ, ಗಜಚರ್ಮವನ್ನು ಧರಿಸಿದವರೂ, ಭಸ್ಮವನ್ನು ಲೇಪಿಸಿಕೊಂಡವರೂ,ರಂಜಿಸುವ ತ್ರಿಶೂಲವೇ ಮುಂತಾದುವುಗಳನ್ನು ಹಿಡಿದ ಹತ್ತು ಭುಜಗಳುಳ್ಳವರೂ, ವೃಷಭವಾಹನರೂ,ವಿಷಕಂಠರೂ ಹದಿನೈದು ಕಣ್ಣುಳ್ಳವರೂ, ಶುಭ್ರವಾದ ಸ್ಫಟಿಕಶಿಲೆಯಂಥ ಪ್ರಕಾಶವುಳ್ಳವರೂ, ಪ್ರಳಯಕಾರಕರೂ ಆದ ಕೋಟಿ ರುದ್ರರು ಆ ಜಗತ್ಪತಿಯಾದ ವಿರೂಪಾಕ್ಷನ ಎದುರಿನಲ್ಲಿ ಕಾಣಿಸಿಕೊಂಡರು. ೨೩. ಶ್ರೇಷ್ಠ ಮಹಿಮೆಯುಳ್ಳ ನಂದೀಶ, ಭೃಂಗೀಶ, ವೀರೇಶ, ಕರಿವದನ, ಷಣ್ಮುಖ, ನೀಲಲೋಹಿತ, ಮುಂಡಧರ, ಮಹಾಕಾಳ, ಗಜಕರ್ಣ, ಘಂಟಾಕರ್ಣ, ಗೋಕರ್ಣ, ಶಂಕುಕರ್ಣ, ಸುರಗಿರಿವಿಪಾತನ, ವಿರೂಪಾಕ್ಷ, ನಿಶ್ಶಂಕ, ಗರುಡಪಕ್ಷಚ್ಛೇದ, ಗಗನಾಂಗ, ಧೂಮಾಂಗ, ಕೂಷ್ಮಾಂಡರು ಒಬ್ಬೊಬ್ಬರೂ ಐನೂರು ಪದ್ಮದಷ್ಟು ಸೈನ್ಯದೊಡಗೂಡಿ

CC-0. Jangamwadi Math Collection. Digitized by eGangotri

ಪರ್ವತಾಭರಣ ವಿಕಟಾಂಗ ಭೈರವ ನಿತ್ಯ
ಸರ್ವಸಂಹಾರ ಮಣಿಭೂಷಣ ಸಹಸ್ರಮುಖ
ಸರ್ವಪಾತನ ಮಹಾಭದ್ರ ಘಂಟಾಕಾಲ ವಿಶ್ವತೋಮುಖ ಕರಾಳ
ಸರ್ವಜ್ಞ ವಿಂಧ್ಯಪಾತನ ವಿಜೃಂಭಣರೂಪ
ಸರ್ವಕಂಪನ ಚಂಡಕೀರ್ತಿ ಕಂಕಾಳಧರ
ಸರ್ವಾತ್ಮರೊಬ್ಬೊಬ್ಬರಿಪ್ಪತ್ತು ಪದ್ಮಬಲವೆರಸಿ ಕಣ್ಗೆಸೆದಿರ್ದರು ೨೪

ಕಾಲಮರ್ದನ ವಜ್ರಕಾಯ ರುಂಡಾಭರಣ
ಕೋಲಾಹಲೋತ್ತುಂಗ ಸಾಗರಾಪೋಶನ ಕ
ಪಾಲಧರ ವಡಬಾಗ್ನಿತಿಲಕ ಪ್ರಚಂಡ ಬಹುವರ್ಣ ಧೂರ್ಜಟಿ ನಿಷ್ಕಳ
ಕಾಳಕಂಧರ ಮೇಘವಾಹನ ಮಹಾಸೇನ
ಭಾಳಲೋಚನ ಮಹಾಕಾಯೋಗ್ರರೂಪ ಘನ
ಕಾಳಮೇಘಾದಿ ಭಟರೊಬ್ಬೊಬ್ಬರರುವತ್ತು ಪದ್ಮಸೇನೆಯೊಳೆಸೆದರು ೨೫

ಸೋಮಪಾತನ ಸೂರ್ಯಪಾತನಂಡಾಭರಣ
ಧೂಮಕೇತು ಸಹಸ್ರಕರ್ಣ ಸಾಹಸ್ರಭುಜ
ಕಾಮಾಂಗದಹನ ದೈತ್ಯಾಂತಕ ತ್ರಿಭುವನಾಂತಕ ವಿಧಿಶಿರಶ್ಛೇದನ
ಆ ಮಹಾದಿಗ್ವಾರಣಾಹಾರಿ ರೇಣುಕ ಮ
ಹಾಮಹಿಮ ದಾರುಕ ಸುನಾದ ದಿಕ್ಪಾಲಹರ
ಭೀಮಕಾಯಾದಿಗಣರಂದು ಶತಕೋಟಿಸೈನಿಕವೆರಸಿ ರಾಜಿಸಿದರು ೨೬

ರಂಜಿಸುತ್ತಿದ್ದರು. ೨೪. ಪರ್ವತಾಭರಣ, ವಿಕಟಾಂಗ, ಭೈರವ, ನಿತ್ಯ, ಸರ್ವಸಂಹಾರ, ಮಣಿಭೂಷಣ, ಸಹಸ್ರಮುಖ, ಸರ್ವಪಾತನ, ಮಹಾಭದ್ರ, ಘಂಟಾಕಾಲ, ವಿಶ್ವತೋಮುಖ, ಕರಾಳ, ಸರ್ವಜ್ಞ ವಿಂಧ್ಯಪಾತನ, ವಿಜೃಂಭಣರೂಪ, ಸರ್ವಕಂಪನ, ಚಂಡಕೀರ್ತಿ, ಕಂಕಾಳಧರ, ಸರ್ವಾತ್ಮರು ಒಬ್ಬೊಬ್ಬರೂ ಇಪ್ಪತ್ತು ಪದ್ಮದಳತೆಯ ಸೈನ್ಯದಿಂದ ಕೂಡಿ ಅಲ್ಲಿದ್ದರು. ೨೫. ಕಾಲಮರ್ದನ, ವಜ್ರಕಾಯ, ರುಂಡಾಭರಣ, ಕೋಲಾಹಲೋತ್ತುಂಗ, ಸಾಗರಾಪೋಶನ, ಕಪಾಲಧರ, ವಡಬಾಗ್ನಿತಿಲಕ, ಪ್ರಚಂಡ, ಬಹುವರ್ಣ, ಧೂರ್ಜಟಿ, ನಿಷ್ಕಳ, ಕಾಳಕಂಧರ, ಮೇಘವಾಹನ, ಮಹಾಸೇನ, ಭಾಳಲೋಚನ, ಮಹಾಕಾಯ, ಉಗ್ರರೂಪ, ಘನಕಾಳಮೇಘರೇ ಮೊದಲಾದ ಭಟರು ಒಬ್ಬೊಬ್ಬರೂ ಅರವತ್ತು ಪದ್ಮದಷ್ಟು ಸೈನ್ಯದಿಂದ ಕೂಡಿದ್ದರು. ೨೬. ಸೋಮಪಾತನ, ಸೂರ್ಯಪಾತನ, ಅಂಡಾಭರಣ, ಧೂಮಕೇತು, ಸಹಸ್ರಕರ್ಣ, ಸಹಸ್ರಭುಜ, ಕಾಮಾಂಗದಹನ, ದೈತ್ಯಾಂತರ, ತ್ರಿಭುವನಾಂತಕ, ವಿಧಿಶಿರಶ್ಛೇದನ, ಮಹಾದಿಗ್ವಾರಣಾಹಾರಿ, ರೇಣುಕ, ಮಹಾಮಹಿಮ, ದಾರುಕ, ಸುನಾದ, ದಿಕ್ಪಾಲಹರ, ಭೀಮಕಾಯ ಮೊದಲಾದ ಗಣಗಳು

CC-0. Jangamwadi Math Collection. Digitized by eGangotri

ನಕ್ಷತ್ರಕೃಂತನ ಮಹಾಕೇಶ ಶತಸಹ
ಸ್ರಾಕ್ಷ ಬ್ರಹ್ಮಾಂಡಭೇದನ ವಿರೂಪಾಂಗಾರ
ಭಕ್ಷಣ ಮಹಾದಂಷ್ಟ್ರ ಲಲಿತಾಂಗ ಪಾದಮುಖ ಮೇಘಮುಖ ವಿಶ್ವಮಾಲಿ
ದಕ್ಷಮರ್ದನ ವಜ್ರದಂತ ನಿಜಬಲಬ್ರಹ್ಮ
ಭಕ್ಷಣ ಧನಂಜಯ ಮಹಾಬಾಹು ಸುಮನಸ ಮ
ಹಾಕ್ಷೇತ್ರಪಾಲರೊಬ್ಬೊಬ್ಬರೇಳ್ನೂರ್ಪದ್ಮಸೇನೆಯೊಡನಿರಲೆಸೆದರು ೨೭

ದಂಡಧಾರಂ ದಂಡಬಾಹುವಂತಾ ಸುಪ್ರ
ಚಂಡಾರ್ಚಿ ದಂಡನಾಥಂ ಪ್ರಚಂಡಂ ಮದೋ
ದ್ದಂಡ ದೀರ್ಘಾನನರಿವರ್ ಬೇರೆ ಬೇರೆ ಪತ್ತರ್ಬುದಕ್ಕೊಡೆಯರೆನಿಸಿ
ಖಂಡಪರಶುವಿನ ದಕ್ಷಿಣ ಭಾಗದೊಳ್ ಮಸಂ
ಗೊಂಡು ಪಾಶುಪತಾಸ್ತ್ರಮೇ ದಿವ್ಯರೂಪಾಗಿ
ಕೊಂಡಾಡುತಭವನಂ ಬೆಸನನುರೆ ಬೇಡುತಿರ್ಪುದು ಪೇಳಲೇನೆಂಬೆನು ೨೮

ಸಲೆ ವಾಮದೇವರುಂ ಜೇಷ್ಠರುಂ ಶ್ರೇಷ್ಠರುಂ
ಕಲವಿಕರಣರುಮೆಸೆವ ಕೆಲರುಂ ನಿಧಾನಿಸಲ್
ಬಲರುಂ ಬಲಪ್ರಮಥರುಂ ಮನೋನ್ಮನರುಂ ಮಹಾಸರ್ವಭೂತದಮರುಂ
ತಿಳಿಯಲೀ ರುದ್ರಗಣಮೆಸೆವಸಂಖ್ಯಾತಗಣ
ಕುಲಕಧಿಪರಾಗಿ ತತ್ತನ್ನಾಮಶಕ್ತಿಗಳ್
ತೊಳಗುತಿರೆ ವಿಭವದಿಂದೀಶನೋಲಗದೊಳಗೆ ಭಕ್ತಿಯಿಂದಿರುತಿರ್ದರು ೨೯

ನೂರು ಕೋಟಿ ಸೈನಿಕರಿಂದ ಕೂಡಿ ಪ್ರಕಾಶಿಸಿದರು. ೨೭. ನಕ್ಷತ್ರಕೃಂತನ, ಮಹಾಕೇಶ, ಶತಸಹಸ್ರಾಕ್ಷ, ಬ್ರಹ್ಮಾಂಡಭೇದನ, ವಿರೂಪ, ಅಂಗಾರಭಕ್ಷಣ, ಮಹಾದಂಷ್ಟ್ರ, ಲಲಿತಾಂಗ, ಪಾದಮುಖ, ಮೇಘಮುಖ, ವಿಶ್ವಮಾಲಿ, ದಕ್ಷಮರ್ದನ, ವಜ್ರದಂತ, ನಿಜಬಲ, ಬ್ರಹ್ಮಭಕ್ಷಣ, ಧನಂಜಯ, ಮಹಾಬಾಹು, ಸುಮನಸ, ಮಹಾಕ್ಷೇತ್ರಪಾಲರು ಒಬ್ಬೊಬ್ಬರೂ ಏಳ್ನೂರು ಪದ್ಮದಳತೆಯ ಸೇನೆಯೊಡನೆ ಕೂಡಿ ಪ್ರಕಾಶಿಸುತ್ತಿದ್ದರು. ೨೮. ದಂಡಧಾರ, ದಂಡಬಾಹು, ಹಾಗೆಯೇ ಸುಪ್ರಚಂಡಾರ್ಚಿ, ದಂಡನಾಥ, ಪ್ರಚಂಡ, ಮದೋದ್ದಂಡ, ದೀರ್ಘಾನನ ಇವರುಗಳೂ ಬೇರೆ ಬೇರೆಯಾಗಿ ಹತ್ತು ಅರ್ಬುದ ಸೈನ್ಯಕ್ಕೆ ಒಡೆಯರಾಗಿ ಶಿವನ ಬಲಭಾಗದಲ್ಲಿ ಕುಳಿತಿದ್ದರು. ಪಾಶುಪತಾಸ್ತ್ರವೇ ದಿವ್ಯ ರೂಪವನ್ನು ಧರಿಸಿ ಶಿವನನ್ನು ಕೊಂಡಾಡುತ್ತ ಅವನ ಅಪ್ಪಣೆಯನ್ನು ಬೇಡುತ್ತಿದ್ದಿತು. ಅದನ್ನು ಏನೆಂದು ಹೇಳಲಿ. ೨೯. ಅಲ್ಲಿ ಪ್ರಕಾಶಿಸುತ್ತಿದ್ದ ಇನ್ನು ಕೆಲವರು (ಯಾರೆಂದರೆ) ಶ್ರೇಷ್ಠರಾದ ವಾಮದೇವರು, ಜೇಷ್ಠರು, ಶ್ರೇಷ್ಠರು, ಕಲವಿಕರಣರು, ಬಲರು, ಬಲ ಪ್ರಮಥರು, ಮನೋನ್ಮನರು, ಮಹಾಸರ್ವ ಭೂತದಮನರು–ಈ ರುದ್ರಗಣಗಳು ಅಸಂಖ್ಯಾತ ಗಣಸಮೂಹಕ್ಕೆ ಒಡೆಯರಾಗಿ ತಮ್ಮ ತಮ್ಮ ನಾಮಶಕ್ತಿಗಳೇ ಪ್ರಕಾಶಿಸು

CC-0. Jangamwadi Math Collection. Digitized by eGangotri

ಬಳಿಕಾ ತ್ರಿಶೂಲಿಕುಲಿಶರ್ ಮಯೂರಾಸ್ಯರ್ಗೆ
ಬಲವಿರ್ಪುದರುವತ್ತು ಪದ್ಮಮೋರೊರ್ವರ್ಗೆ
ಕೆಲದೊಳಂತಷ್ಟವಸುಗಳ್ ನವಗ್ರಹರುಮೇಕಾದಶಮಹಾರುದ್ರರು
ತೊಳಪ ದ್ವಾದಶರವಿಗಳಾ ಚತುರ್ದಶಮನುಗ
ಳೊಲವಿನಿಂದೆಕ್ಕೆಕ್ಕೆಯಿಂ ಕೋಟಿ ಕೋಟಿ ಕಂ
ಗೊಳಿಸಲೀಶ್ವರ ಮಹಾಸ್ಥಾನಮಂ ಬಣ್ಣಿಸಲ್ ಫಣಿಪಂಗಸಾಧ್ಯಮಾಯ್ತು ೩೦

ಆ ಹರಿ ಸಮೀಪದೊಳ್ ವಜ್ರಾಯುಧರ್ ತೊಳಪ
ಸಾಹಸ್ರಲೋಚನರ್ ಹಸ್ತಿವಾಹನರಾ ಸು
ಧಾಹಾರಿಗಳ್ ವಿಭವಯುತರಿಂದ್ರಕೋಟಿಗಳ್ ಕಂಗೆಸೆಯಲಾ ಕೆಲದೊಳು
ಊಹಿಸಲ್ ಶಿಖಿ ಕಾಲ ನಿರುತಿ ವರುಣ ಸಮೀರ
ರಾ ಹರಸಖೇಶಾನರೆಂಬ ದಿಕ್ಪಾಲಸಂ
ದೋಹವಿರ್ಪುದು ಕೋಟಿಕೋಟಿಗಳ ಗಣನೆಯಿಂದೇನೆಂಬೆನಚ್ಚರಿಯನು ೩೧

ಸುರ ನರೋರಗರಸುರ ಸಿದ್ಧ ವಿದ್ಯಾಧರರ್
ಗರುಡ ಗಂಧರ್ವ ಕಿನ್ನರ ಗುಹ್ಯಕಾಳಿ ಕಿಂ
ಪುರುಷರ್ ಪಿಶಾಚರಪ್ಸರಸರ್ಕಳೊಗ್ಗಿನಿಂ ಕೋಟಿಕೋಟಿಗಳೆಸೆಯಲು
ಗಿರಿಗಳೊಳ್ ತರುಗಳೊಳ್ ಮೃಗಪಕ್ಷಿಜಾತಿಯೊಳ್
ಪರಿಪರಿಯ ಜೀವಜಾಲಂಗಳೊಳ್ ಮುಖ್ಯಮ
ಪ್ಸರಸುಗಳ್ ಕೋಟಿಕೋಟಿಗಳೊಪ್ಪುತಿರ್ದರದನೇನೆಂಬೆನಚ್ಚರಿಯನು ೩೨

ತ್ತಿರಲು ಈಶ್ವರನ ಓಲಗದಲ್ಲಿ ವೈಭವ, ಭಕ್ತಿಯಿಂದ ಇರುತ್ತಿದ್ದರು. ೩೦. ಬಳಿಕ ಆ ತ್ರಿಶೂಲಿ, ಕುಲಿಶರಿಗೆ, ಮಯೂರಮುಖರಿಗೆ, ಒಬ್ಬೊಬ್ಬರಿಗೂ ಅರವತ್ತು ಪದ್ಮದಷ್ಟು ಸೇನೆ ಇರುವುದು. ಕೋಟಿ ಕೋಟಿ ಅಷ್ಟವಸುಗಳು, ನವಗ್ರಹರು, ಏಕಾದಶ ಮಹಾ ರುದ್ರರು, ಹೊಳೆಯುವ ದ್ವಾದಶ ಸೂರ್ಯರು, ಚತುರ್ದಶ ಮನುಗಳು ಪ್ರೀತಿಯಿಂದ ಗುಂಪು ಗುಂಪಾಗಿ ಅವರ ಪಕ್ಕದಲ್ಲಿದ್ದರು. ಈಶ್ವರನ ಮಹಾಸ್ಥಾನವನ್ನು ವರ್ಣಿಸಲು ಆದಿಶೇಷನಿಗೂ ಅಸಾಧ್ಯವಾಯಿತು. ೩೧. ಆ ಹರಿಯ ಸಮೀಪದಲ್ಲಿ ವಜ್ರಾಯುಧ ಹಿಡಿದು, ಹೊಳೆಯುವ ಸಾವಿರ ಕಣ್ಣುಗಳಿಂದ, ಆನೆಯನ್ನು ಏರಿ, ಅಮೃತವನ್ನು ಸೇವಿಸಿದ, ವೈಭವದಿಂದ ಕೂಡಿದ ಕೋಟಿ ಇಂದ್ರರು ಕಾಣಿಸುತ್ತಿದ್ದರು. ಮತ್ತೊಂದು ಪಕ್ಕದಲ್ಲಿ ಅಗ್ನಿ, ಯಮ, ನಿರುತಿ, ವರುಣ, ವಾಯು, ಆ ಕುಬೇರ, ಈಶಾನರೆಂಬ ದಿಕ್ಪಾಲಕಸಮೂಹ ಕೋಟಿ–ಕೋಟಿ ಲೆಕ್ಕದಲ್ಲಿ ಇದ್ದಿತು. ೩೨. ಸುರ, ನರ, ಉರಗ, ಅಸುರ, ಸಿದ್ಧ, ವಿದ್ಯಾಧರ, ಗರುಡ, ಗಂಧರ್ವ, ಕಿನ್ನರ, ಗುಹ್ಯಕಸಮೂಹ, ಕಿಂಪುರುಷರು, ಪಿಶಾಚರು, ಅಪ್ಸರಸರು ಗುಂಪಾಗಿ ಕೋಟಿ ಕೋಟಿ ಸಂಖ್ಯೆಯಲ್ಲಿದ್ದರು. ಬೆಟ್ಟಗಳಲ್ಲಿ, ಮರಗಳಲ್ಲಿ, ಮೃಗ–ಪಕ್ಷಿ ಜಾತಿಗಳಲ್ಲಿ, ನಾನಾ ರೀತಿಯ ಜೀವಜಾಲಗಳಲ್ಲಿ

CC-0. Jangamwadi Math Collection. Digitized by eGangotri

ಕೇಳ್ಗೆಣೋದ್ಧಾಮ ನೀಂ ಸಿದ್ಧರಾಮೇಶ ಶಿವ
ನೇಳ್ಗೆಯಂ ತನ್ಮಹಾರುದ್ರಗಣಭರಮನೀ
ನಾಳ್ಗಳರಸುಗಳ ಬಿಣ್ಪಂ ಶಿವನ ಸಭೆಯಲ್ಲದಾವಲೋಕಂದಳೆದೊಡಂ
ಮುಳ್ಗಿಬೀಳವೆ ಸಕಲದಿಗ್ಗಜಂಗಳ್ ಧರಣಿ
ತಳ್ಗದೇಂ ಶೇಷಂ ಸುರುಳ್ವನೇ ಕಮಠಮಂ
ನುಗ್ಗುನುಸಿಯಾಗದುಳಿವನೆ ಶಿವಮಹಾತ್ಮೆ ಬಣ್ಣಿಸಲಾರವಶಮೆಂದನು ೩೩

ಇಂತಖಿಳವಿಭವದಿಂದೀಶನೊಪ್ಪಿರ್ದಪನ
ನಂತಲೋಕಾಧಿಪತಿಗಳ್ಗೆ ಗುರುವೆನಿಸುತವ
ರುಂ ತಮ್ಮ ರಾಜ್ಯಂಗಳಂ ಕ್ರಮದೊಳಾಳ್ವಂತೆ ಕರುಣದಿಂ ನೇಮವಿತ್ತು
ಸಂತಸದಿ ಚಕ್ರವರ್ತಿತ್ವಮಂ ಧರಿಸಿ ಮಾ
ಕಾಂತಮುಖ್ಯರ್ ತಳೆದ ಸಕಲ ವಿನಿಯೋಗಂಗ
ಳಂತರದುನಾ ಸಿದ್ಧರಾಮನೊಳ್ ಚೆನ್ನಬಸವೇಶಂ ನಿರೂಪಿಸಿದನು ೩೪

ಎಂಬುದೇಂ ಪ್ರಣವಮೇ ಸಿಂಹಾಸನಂ ಲೋಕ
ದಂಬಿಕೆಯೆ ರಾಣಿವಾಸಂ ಚಂದ್ರಸರ್ಪಮೆ
ದೆಂಬಿವೇ ಭೂಷಣಂ ಭಸಿತಮೆ ಸುಗಂಧಮಾ ಹಸ್ತಿಚರ್ಮಮೆ ಸುವಸ್ತ್ರಂ

ಮುಖ್ಯರಾದ ರಾಜರುಗಳು ಕೋಟಿ ಕೋಟಿ ಸಂಖ್ಯೆಯಲ್ಲಿ ಕುಳಿತಿದ್ದರು. ೩೩. ಶ್ರೇಷ್ಠ ಗುಣಗಳಿಗೆ ಪ್ರಸಿದ್ಧನಾದ ಸಿದ್ಧರಾಮನೇ, ಶಿವನ ವೈಭವವನ್ನು ಕೇಳು. ಆ ಮಹಾರುದ್ರ ಗಣಗಳ ರಭಸ, ನಾಡ ಅರಸರ ವೈಭವವನ್ನು ಶಿವನ ಸಭೆಯಲ್ಲದೆ ಬೇರೆ ಯಾವ ಲೋಕವಾದರೂ ಧರಿಸಿದ್ದರೆ ಎಲ್ಲ ದಿಗ್ಗಜಗಳೂ ಮುಗ್ಗರಿಸಿ ಬೀಳದಿರುತ್ತವೆಯೇ ? ಭೂಮಿಯು ತಗ್ಗದೆ? ಆದಿಶೇಷ ಮುರುಟಿಹೋಗದಿರುವನೆ? ಆದಿಕೂರ್ಮನು ನುಗ್ಗುನುಸಿಯಾಗದೆ ಉಳಿಯುವನೆ ? ಶಿವನ ಮಹಿಮೆಯನ್ನು ಬಣ್ಣಿಸಲು ಯಾರಿಂದ ಸಾಧ್ಯ ? ಎಂದನು. ೩೪. ಈ ರೀತಿ ಎಲ್ಲ ವೈಭವದಿಂದ ಈಶ್ವರನು ಶೋಭಿಸುತ್ತಿದ್ದನು. ಅವನ ಎಲ್ಲ ಲೋಕದ ಅಧಿಪತಿಗಳಿಗೆ ಗುರುವಾಗಿ ಅವರೆಲ್ಲ ತಮ್ಮ ರಾಜ್ಯಗಳನ್ನು ಕ್ರಮವಾಗಿ ಆಳುವಂತೆ ಕರುಣೆಯಿಂದ ನಿಯಮವಿತ್ತು, ಸಂತೋಷದಿಂದ ಚಕ್ರವರ್ತಿಪಟ್ಟವನ್ನು ಧರಿಸಿ, ವಿಷ್ಣು ಮುಂತಾದ ಮುಖ್ಯರು ಹೊಂದಿದ್ದ ಎಲ್ಲ ಬೇರೆ ಬೇರೆ ಅಧಿಕಾರದ ಸಂಗತಿಯನ್ನು ಸಿದ್ಧರಾಮನಿಗೆ ಚೆನ್ನಬಸವೇಶನು ನಿರೂಪಿಸಿದನು. ೩೫. ಹೇಳುವುದೇನಿದೆ ? ಓಂಕಾರವೇ ಸಿಂಹಾಸನ, ಸಕಲ ಲೋಕಕ್ಕೂ ತಾಯಿಯಾದ ಪಾರ್ವತಿಯೇ ಪಟ್ಟದರಾಣಿ, ಚಂದ್ರ–ಸರ್ಪಗಳೇ ಆಭರಣಗಳು, ವಿಭೂತಿಯೇ ಸುಗಂಧ, ಆನೆಯ



CC-0. Jangamwadi Math Collection. Digitized by eGangotri

ಉಂಬುವೇ ಮೋಕ್ಷಾಶನಂ ನಾಡೆ ತತ್ತ್ವರಸ
ದಂಬುಲಂ ಕೇಳ್ವುದೆಲ್ಲಂ ಬ್ರಹ್ಮಗರ್ಭಿತಸು
ಕಂಬಳಾಶ್ವತ ಗಾನಮೆನಲಭವನಿಂತಪ್ಪಭೋಗದೊಳ್ ವರ್ತಿಸುವನು ೩೫

ಷಣ್ಮುಖಂ ಯುವರಾಜಪಟ್ಟದ ಸುತಂ ಹಸ್ತಿ
ರಾಣ್ಮುಖಂ ಶಿವಗಣಕೆ ದಳವಾಯ್ ನೃಕೇಸರಿ
ದ್ವಿಣ್ಮಹಾದುಷ್ಟನಿಗ್ರಹ ಶಿಷ್ಟಪ್ರತಿಪಾಲನಂ ಮಾಳ್ಪ ಕರ್ತೃ ವಿಶ್ವ
ಸೃಣ್ಮುಖ್ಯಸೃಷ್ಟಿಕರ್ತರ್ ನಾಡೆ ಸಾಹಸ್ರ
ತ್ವಿಣ್ಮಹಾಜ್ಯೋತಿಷಮುನಂದು ಪೇಳ್ವರ್ ಯಕ್ಷ
ರಾಣ್ಮಿತ್ರರೆನಲೆಸೆವ ರಾಜವಿಭವಂ ಮನೋಹರಮಾದುದಾ ಶೂಲಿಯಾ ೩೬

ಸಿರಿಯರಸನೊಪ್ಪುವ ಶಿರಃಪ್ರಧಾನಂ ನಾಡೆ
ಸರಸಿಜಾಂಡಂಗಳೇ ದೇಶಂಗಳಾ ರಜತ
ಗಿರಿ ಮೇರುಪರ್ವತಂ ಮಂದರಾದ್ರಿಗಳೆ ದುರ್ಗಂಗಳ್ ಮಹಾಧರ್ಮಮೇ
ಪರಿವಿಡಿಯ ಭಂಡಾರವೊಪ್ಪುವ ಗಣಂಗಳೇ
ಪರಿವಾರಮಪ್ರತಿಜ್ಞಾನಬಲಮೇ ತನ್ನ
ವರಭುಜಬಲಂಗಳೆನಲೀಶ್ವರಂ ಸಪ್ತಾಂಗದೊಳ್ ಕಣ್ಗೆ ಚೆಲ್ವಾದನು ೩೭

ನಂದಿಮಾಕಾಳರೇ ವೇತ್ರಧಾರರ್ ಮಹಾ
ಮಂದಿಗಳ್ ಶ್ರುತಿಕೋಟಿಗಳ್ ಸುರಸ್ತ್ರೀಯರೇ
ನಿಂದು ನಟಿಪರ್ ಭೃಂಗಿಯೇ ಹಾಸ್ಯಕರ್ತೃ ಸುರಗುರುವೆ ತತ್ಪುರೋಹಿತಂ

ಚರ್ಮವೇ ಉತ್ತಮ ವಸ್ತ್ರಗಳು, ಊಟ ಮಾಡುವ ಆಹಾರವೇ ಮೋಕ್ಷ, ತತ್ತ್ವರಸವೇ ತಾಂಬೂಲ, ಅವನು ಕೇಳುವುದೆಲ್ಲ ಬ್ರಹ್ಮನ ಮಕ್ಕಳಾದ ಕಂಬಳ–ಅಶ್ವತರ ಗಾನ ಎನ್ನಲು ಶಿವನು ಈ ರೀತಿ ಅಷ್ಟಭೋಗದಿಂದ ಕೂಡಿದ್ದನು. ೩೬. ಷಣ್ಮುಖನೇ ಯುವರಾಜಪಟ್ಟದ ಮಗ, ಗಣೇಶನೇ ಶಿವಗಣಗಳಿಗೆ ಸೇನಾನಾಯಕ, ವಿಷ್ಣು (ವೀರಭದ್ರ) ಮಹಾದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಕಾಪಾಡುವವನು, ಬ್ರಹ್ಮನೇ ಜಗತ್ತನ್ನು ಸೃಷ್ಟಿಸುವವನು, ಸೂರ್ಯನೇ ಮಹಾಜ್ಯೋತಿಷಿಯಾಗಿರಲು, ಕುಬೇರನೇ ಸ್ನೇಹಿತನಾಗಿರಲು ಆ ಶೂಲಿಯ ರಾಜವೈಭವ ಮನೋಹರವಾಯಿತು. ೩೭. ವಿಷ್ಣುವೇ ಪ್ರಧಾನಮಂತ್ರಿ, ವಿಶೇಷವಾದ ಬ್ರಹ್ಮಾಂಡಗಳೇ ದೇಶಗಳು, ಹಿಮಾಲಯ, ಮೇರುಪರ್ವತ ಮಂದರಪರ್ವತಗಳೇ ದುರ್ಗಗಳು, ಮಹಾಧರ್ಮವೇ ಕ್ರಮವಾಗಿ ರಾಜಭಂಡಾರ, ಶೋಭಿಸುವ ಶಿವಗಣಗಳೇ ಪರಿವಾರ, ಅಪ್ರತಿಮ ಜ್ಞಾನಬಲವೇ ತನ್ನವರ ಭುಜಬಲವೆನ್ನಲು ಈ ರೀತಿಯ ಸಪ್ತಾಂಗದಿಂದ ಕೂಡಿದ ಶಿವನು ಸೌಂದರ್ಯದಿಂದ ಶೋಭಿಸುತ್ತಿದ್ದನು. ೩೮. ನಂದಿ ಮಾಕಾಳರೇ ದಂಡ ಹಿಡಿಯುವವರು, ಶ್ರುತಿಸಮೂಹಗಳೇ ಸ್ತುತಿಸುವ ವಂದಿಗಳು, ದೇವಸ್ತ್ರೀಯರೇ ನರ್ತಕಿಯರು, ಭೃಂಗಿಯೇ

CC-0. Jangamwadi Math Collection. Digitized by eGangotri

ಸಂದ ಭಕ್ತರ್ ನಂಟರಾ ಶಿಲ್ಪಿ ವಿಶ್ವಕ
ರ್ಮಂ ದಯಾನಿಧಿ ಕರಣಿಕರ್ ಚಿತ್ರಗುಪ್ತರುಂ
ಮುಂದೆ ಸುಜ್ಞಾನಿಗಳ್ ಸಂಧಿವಿಗ್ರಹರಿಂತು ವಿನಿಯೋಗದವರೆಸೆದರು ೩೮

ಸುತ್ರಾಮನೇ ಧವಳಚಮರಧಾರಂ ವೀತಿ
ಹೋತ್ರನೇ ಸೂಪಕಾರಂ ವರುಣನಮಳಜಲ
ಪಾತ್ರಧಾರಂ ಗಂಧವಾಹಂ ಸುತಾಲವೃಂತಂಬಿಡಿವಮಿಾಶಾನನ
ಮಿತ್ರನೇ ತಾಂಬೂಲಮಿಾವಮಂ ದಿನಮಣಿಯು
ಪುತ್ರನೇ ಪಾಪಪುಣ್ಯವಿಚಾರಕಂ ನೆಗಳ್ದ
ರಾತ್ರೀಚರನೆ ಪಾದುಕಾಧಾರನೆನೆ ಶಿವಂ ವೈಭವದೊಳಿರುತಿರ್ದನು ೩೯

ವತ್ಸರಂ ಋತು ಮಾಸ ನಕ್ಷತ್ರ ತಿಥಿಗಳ್ ಜ
ಗತ್ಸಮಯಮರಿದು ನಾನಾ ಜೀವಿಗಳ್ಗೆ ಸಂ
ಪತ್ಸೌಖ್ಯವಪ್ಪಂತು ಸಕಲಫಲಮಂ ಪಯಿರನಿಕ್ಕುವ ಮಹಾಪ್ರಜೆಗಳು
ಸತ್ಸುಧಾಕಿರಣನುಂ ಜೀಮೂತತತಿಯುಂ ವಿ
ಯತ್ಸಿಂಧುಗಳ್ ತತ್ಫಲಂಗಳಂ ರಕ್ಷಿಸುವ
ರುತ್ಸವದೊಳಾ ಲೋಕಪಾಲರೆಲ್ಲರ್ ಮಣಿಹಗಾರರೀಶಂಗೆಂದನು ೪೦

ದಿಗ್ಗಜಂಗಳ ನೆರವಿಯುಚ್ಚೈಃಶ್ರವಾಳಿಗಳ
ಮೊಗ್ಗರಂ ಪುಷ್ಪಕಾರೂಢ ಸುರಪಟುಭಟರ್ಗ
ಳೊಗ್ಗು ಕಿನ್ನರ ಸುರ ನರೋರಗ ಪದಾತಿಗಳ್ ಚತುರಂಗಬಲಮಾಗಲು

ಹಾಸ್ಯಗಾರ, ಬೃಹಸ್ಪತಿಯೇ ಪುರೋಹಿತ, ಶಿವಭಕ್ತರೇ ನೆಂಟರು, ದಯಾನಿಧಿಯಾದ ವಿಶ್ವಕರ್ಮನೇ ಶಿಲ್ಪಿ, ಚಿತ್ರಗುಪ್ತರೇ ಕರಣಿಕರು, ಸುಜ್ಞಾನಿಗಳೇ ಸಂಧಿವಿಗ್ರಹಿಗಳು ಎನ್ನಲು ಊಳಿಗದವರು ಅಲ್ಲಿದ್ದರು. ೩೯. ದೇವೇಂದ್ರನೇ ಬಿಳಿಯ ಚಾಮರಧಾರಿ, ಅಗ್ನಿಯೇ ಅಡಿಗೆಯವನು, ವರುಣನೇ ನೀರನ್ನು ತರುವವನು, ವಾಯುವೇ ಓಲೆಗರಿಯ ಬೀಸಣಿಗೆಯಿಂದ ಗಾಳಿಹಾಕುವವನು, ಕುಬೇರನೇ ತಾಂಬೂಲ ಕೊಡುವವನು, ಯಮನೇ ಪಾಪ–ಪುಣ್ಯಗಳನ್ನು ವಿಚಾರಿಸುವವನು, ನಿರುತಿಯೇ ಪಾದುಕೆಗಳನ್ನು ಹಿಡಿಯುವವನು ಎನ್ನಲು ಶಿವನು ವೈಭವದಿಂದ ಇರುತ್ತಿದ್ದನು. ೪೦. ವರ್ಷ, ಋತುಗಳು, ತಿಂಗಳುಗಳು, ನಕ್ಷತ್ರಗಳು, ತಿಥಿಗಳೇ ಜಗತ್ತಿಗೆ ಬೇಕಾದ ಸಮಯವನ್ನು ತಿಳಿದು ನಾನಾ ಜೀವಿಗಳಿಗೆ ಸಂಪತ್ತು ಸುಖ ಉಂಟಾಗುವಂತೆ ಎಲ್ಲ ಫಲಗಳನ್ನೂ ಬೆಳೆಗಳನ್ನೂ ಕೊಡುವ ಮಹಾಪ್ರಜೆ ಗಳು,ಚಂದ್ರ, ಮೋಡ, ದೇವನದಿಗಳು ಆ ಬೆಳೆಗಳನ್ನು ಉತ್ಸಾಹದಿಂದ ರಕ್ಷಿಸುವ ಲೋಕ ಪಾಲಕರು. ಇವರೆಲ್ಲ ಈಶ್ವರನ ಕಾರ್ಯಭಾರ ನಡೆಸುವವರು. ೪೧. ದಿಗ್ಗಜಗಳ ಸಮೂಹ, ಉಚ್ಚೈಃಶ್ರವಗಳ ಗುಂಪು, ಪುಷ್ಪಕವಿಮಾನದಲ್ಲಿ ಕುಳಿತಿರುವ ಶೂರರಾದ ದೇವಭಟರ ಜಂಗುಳಿ, ಕಿನ್ನರ, ಸುರ, ನರ, ಉರಗ ಮುಂತಾದ ಪದಾತಿಗಳೇ ಚತುರಂಗ

CC-0. Jangamwadi Math Collection. Digitized by eGangotri

ಸಗ್ಗವೆಟ್ಟೆಸೆವ ಬಿಲ್ ಪಾಶುಪತಮಂಬು ಸ
ಮ್ಮಗ್ಗೋವ ವಾಹಂ ತ್ರಿಶೂಲಮಾಯುಧವೆನಲ್
ಬಗ್ಗದೊವಲುಡಿಗನೀರೇಳ್ಭುವನದೊಡೆಯನೆಸೆದಂ ರಾಜವಿಭವದಿಂದೆ ೪೧

ಸರ್ಪಿರ್ ದಧೀಕ್ಷು ದುಗ್ಧ ಕ್ಷಾರವಾರ್ಧಿಗಳ್
ದರ್ಪಕಧ್ವಂಸಿಯುಗ್ರಾಣದ ಗೃಹಂಗಳೆನೆ
ತೋರ್ಪೇಳು ದ್ವೀಪಗಳೆ ವೈಹಾಳಿಯಾ ಬಯಲ್ ಸ್ವಾದುಜಲವಾರ್ಧಿ ಪರನ
ಕೂರ್ಪ ಕ್ರೀಡಾಸರಸಿ ರೋಹಣಾದ್ರಿಯೆ ರತ್ನ
ವಿರ್ಪ ಭಂಡಾರಮಾ ಸುರಧೇನುಸಂಚಯಂ
ಸರ್ಪಭೂಷಣನ ತುರುವಟ್ಟಿಯೆನೆ ಚೆನ್ನಾದುದರಸುತನಮಂದೀಶನ ೪೨

ಅಷ್ಟಮದಮುದಿತ ಸಪ್ತವ್ಯಸನಮುಂ ಮಹಾ
ದುಷ್ಟಷಡ್ವರ್ಗಮುಂ ಪಂಚೇಂದ್ರಿಯಂಗಳ್ ಚ
ತುಷ್ಟಯ ಮಹಾಕರಣಮಿವು ರಾಜಚೋರ ದುರ್ಜನಮಿವರ ಕೂಡಿಕೊಂಡು
ಕಷ್ಟಮಂ ಮಾಳ್ಪಾ ಜಗಚ್ಛತ್ರು ಮನಸಿಜ
ಭ್ರಷ್ಟನಂ ಗೆಲ್ವವೊಲ್ ಶೈವಮಂ ತತ್ತ್ವಸ
ನ್ನಿಷ್ಠೆ ತಲ್ಲೋಕಂಗಳೊಳ್ ಪ್ರವರ್ತಿಸಲೀಶನರಸುಗೆಯ್ಯುತ್ತಿರ್ದನು ೪೩

ಈ ರಾಜವಿಭವಂಗಳಂ ತಾನೆ ಧರಿಸಿ ಮ
ತ್ತಾ ರಾಜಶೇಖರಂ ಸಕಲ ಬ್ರಹ್ಮಾಂಡದೊಳ್
ರಾರಾಜಿಪಖಿಳ ಲೋಕಂಗಳೊಳ್ ಚರಿಪ ನಾನಾ ಪುರುಷನಿಕರಂಗಳಂ

ಸೈನ್ಯವಾಗಿರಲು, ಮೇರುಪರ್ವತವೇ ಬಿಲ್ಲು, ಪಾಶುಪತವೇ ಬಾಣ, ಕಾಮನಬಿಲ್ಲು ತ್ರಿಶೂಲ ಆಯುಧಗಳಾಗಲು, ಸಕಲಲೋಕಕ್ಕೂ ಒಡೆಯನಾದ ವ್ಯಾಘ್ರಚರ್ಮಧರನಾದ ಈಶ್ವರನು ರಾಜವೈಭವದಿಂದ ಪ್ರಕಾಶಿಸಿದನು. ೪೨. ತುಪ್ಪ, ದಧಿ, ಇಕ್ಷು, ದುಗ್ಧ, ಕ್ಷಾರಸಮುದ್ರಗಳೇ ಮದನಧ್ವಂಸಿಯಾದ ಈಶ್ವರನ ಉಗ್ರಾಣ, ಕಾಣುವ ಏಳು ದ್ವೀಪಗಳೇ ವೈಹಾಳಿಯ ಬಯಲು, ಸಿಹಿನೀರಿನ ಸಮುದ್ರವೇ ಶಿವನ ಪ್ರಿಯವಾದ ಕ್ರೀಡಾಸರೋವರ, ರೋಹಣಾದ್ರಿಯೇ ರತ್ನಗಳು ಇರುವ ಭಂಡಾರ, ಕಾಮಧೇನುಗಳ ಸಮೂಹವೇ ಪನ್ನಗಭೂಷಣನಾದ ಶಿವನ ತುರುಗಳ ಹಟ್ಟಿ ಎನ್ನಲು ಶಿವನ ರಾಜ್ಯಭಾರ ಚೆನ್ನಾಗಿದ್ದಿತು. ೪೩. ಅಷ್ಟಮದ, ಹರ್ಷದಾಯಕವಾದ ಸಪ್ತವ್ಯಸನ, ಮಹಾ ದುಷ್ಟರಾದ ಅರಿಷಡ್ವರ್ಗ, ಪಂಚೇಂದ್ರಿಯ, ಕರಣಚತುಷ್ಟಯಗಳೆಂಬ ದೊಡ್ಡ ಕಳ್ಳರು ಮತ್ತು ದುರ್ಜನರು ಇವರನ್ನು ಸೇರಿಕೊಂಡು ಕಷ್ಟವನ್ನುಂಟುಮಾಡುವ ಜಗತ್ತಿನ ಶತ್ರುವಾದ ಭ್ರಷ್ಟನಾದ ಮನ್ಮಥನನ್ನು ಗೆಲ್ಲುವಂತೆ ಶಿವತತ್ವನಿಷ್ಠೆ ಆ ಲೋಕಗಳಲ್ಲಿ ಪ್ರವರ್ತಿಸುವಂತೆ ಈಶ್ವರನು ರಾಜ್ಯಭಾರ ಮಾಡುತ್ತಿದ್ದನು. ೪೪. ಈ ಎಲ್ಲ ರಾಜ ವೈಭವವನ್ನು ಈಶ್ವರನು ತಾನೆ ಹೊಂದಿ ಮತ್ತೆ ಈ ಸಕಲ ಬ್ರಹ್ಮಾಂಡದಲ್ಲಿಯೂ ಪ್ರಕಾಶಿಸುವ ಎಲ್ಲ ಲೋಕಗಳಲ್ಲಿಯೂ ಸಂಚರಿಸುವ ನಾನಾರೀತಿಯ ಪುರುಷಸಮೂಹ

CC-0. Jangamwadi Math Collection. Digitized by eGangotri

ಶ್ರೀರಾಜಿಯಂ ನಿಖಿಳ ತರುಲತಾತತಿಗಳಂ
ಗೋರಾಜಿಮುಖ್ಯಪಶುವರ್ಗಂಗಳಂ ಪಾಲಿ
ಪಾ ರಾಜರಂ ಬೇರೆ ಬೇರೆ ನಿಯಮಿಸಿಯವರಿನೋಲಯಿಸಿಕೊಳುತಿರ್ದನು ೪೪

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೪೫

## ಇಪ್ಪತ್ತೊಂಬತ್ತನೆಯ ಸಂಧಿ ಸಂಪೂರ್ಣ

ಗಳನ್ನೂ, ಸಂಪತ್ತಿನ ಸಮೂಹಗಳನ್ನೂ, ಸಕಲ ತರುಲತೆಗಳ ಸಮೂಹಗಳನ್ನೂ, ಗೋ ಸಮೂಹ ಮುಂತಾದ ಮುಖ್ಯ ಪಶುವರ್ಗಗಳನ್ನೂ ಪಾಲಿಸುವ ರಾಜರನ್ನು ಪ್ರತ್ಯೇಕವಾಗಿ ನೇಮಿಸಿ ಅವರೆಲ್ಲರಿಂದ ತಾನು ಸೇವೆಗೊಳ್ಳುತ್ತಲಿದ್ದನು. ೪೫. ಈ ರೀತಿಯಲ್ಲಿ ಶ್ರೇಷ್ಠ ವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ ವಾಚನ ಮಾಡಿದವರಿಗೆ ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಇಪ್ಪತ್ತೊಂಬತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತನೆಯ ಸಂಧಿ

ಸೂಚನೆ : ದಕ್ಷನೀಶ್ವರನಿಂದುದಾಸೀನವಾಗಿ ಕಮ
ಲಾಕ್ಷಾದಿಗಳ್ವೆರಸಿ ಯಾಗಮಂ ಮಾಡುತಿರೆ
ದಕ್ಷಸುತೆ ಬಂದು ಪತಿನಿಂದೆಯಂ ಕೇಳಿ ಯೋಗಾಗ್ನಿಗಿತ್ತಳ್ ತನುವನು

ಸಾರಗುಣಗಣ ಸುರೋದ್ಧಾರ ಸತ್ಕೀರ್ತಿವಿ
ಸ್ತಾರ ಖಳದಕ್ಷಸಂಹಾರ ಮಂದರತಟವಿ
ಹಾರ ಸನ್ಮೋಹನಾಕಾರ ನಾನಾಸ್ತ್ರಚಯಧಾರ ಕಾರುಣ್ಯಪೂರ
ಮಾರಘನದರ್ಪಾಂಧಕಾರಪರಿಹಾರ ವರ
ಶೂರ ಬ್ರಹ್ಮಾಂಡದಾಧಾರ ಪಂಪಾಪುರಾ
ಗಾರ ಪಾಲಿಸು ನತರನೋರಂತೆ ಶ್ರೀವಿರೂಪಾಕ್ಷ ಘೋರಾಘಶಿಕ್ಷ ೧

ಎಲೆ ಸಿದ್ಧರಾಮೇಶ ಕೇಳ್ ದಕ್ಷನಂದು ತ
ನ್ನಳಿಯಂದಿರಂ ಮಕ್ಕಳಂ ನೋಳ್ಪೆನೆಂದು ಮನ
ದೊಲವಿನಿಂದವರವರ ಪಟ್ಟಣಕೆ ನಡೆತರಲ್ಕೇಳುತತಿಸಂಭ್ರಮದೊಳು
ಪೊಳಲ್ಗಳಂ ಸಿಂಗರಿಸಿ ಕಳಸ ಕನ್ನಡಿವಿಡಿದ
ಲಲನೆಯರ್ ಸಹಿತ ಸಂಭ್ರಮದಿಂದಿದಿರ್ಗೊಂಡು
ನಿಳಯಮಂ ಪೊಗಿಸಿ ಸಿಂಹಾಸನದೊಳಿರಿಸಿ ಪೂಜಿಸಿದರತಿಭಕ್ತಿಯಿಂದೆ ೨

ಸೂಚನೆ : ದಕ್ಷಬ್ರಹ್ಮನು ಈಶ್ವರನಿಂದ ಕಡೆಗಣಿಸಿದವನಾಗಿ ವಿಷ್ಣು ಮೊದಲಾದವರನ್ನು ಕೂಡಿಕೊಂಡು ಯಾಗವನ್ನು ಮಾಡುತ್ತಿರಲು ದಕ್ಷನ ಮಗಳು ಬಂದು ತನ್ನ ಗಂಡನನಿಂದೆಯನ್ನು ಕೇಳಿ ಯೋಗಾಗ್ನಿಗೆ ತನ್ನ ಶರೀರವನ್ನು ಅರ್ಪಿಸಿಕೊಂಡಳು. ೧. ಶ್ರೇಷ್ಠಗುಣಸಮೂಹವುಳ್ಳವನು, ದೇವತೆಗಳನ್ನುದ್ಧರಿಸುವವನು,ವಿಶಾಲವಾದ ಸತ್ಕೀರ್ತಿಯುಳ್ಳವನು, ದುಷ್ಟನಾದ ದಕ್ಷನನ್ನು ಸಂಹರಿಸಿದವನು, ಮಂದರಪರ್ವತದ ತಪ್ಪಲಿನಲ್ಲಿ ವಿಹರಿಸುವವನು,ಆಕರ್ಷಕವಾದ ಆಕಾರವುಳ್ಳವನು, ನಾನಾ ರೀತಿಯ ಅಸ್ತ್ರಸಮೂಹವನ್ನು ಧರಿಸಿರುವವನು, ಕರುಣಾಶಾಲಿ, ಮನ್ಮಥನ ದರ್ಪವೆಂಬ ಕತ್ತಲೆಯನ್ನು ಪರಿಹರಿಸಿದವನು, ಮಹಾಶೂರ, ಬ್ರಹ್ಮಾಂಡಕ್ಕೆ ಆಧಾರವಾದವನು, ಪಂಪಾಪುರದಲ್ಲಿ ನೆಲೆಸಿರುವವನು, ಘೋರವಾದ ಪಾಪವನ್ನು ಹೋಗಲಾಡಿಸುವವನು ಆದ ಶ್ರೀ ವಿರೂಪಾಕ್ಷನೇ ಶರಣಾಗತರನ್ನು ರಕ್ಷಿಸು. ೨. ಎಲೈ ಸಿದ್ಧರಾಮೇಶ, ಕೇಳು ; ದಕ್ಷನು ತನ್ನ ಅಳಿಯಂದಿರನ್ನು, ಮಕ್ಕಳನ್ನು ನೋಡಬೇಕೆಂಬ ಮನದ ಪ್ರೀತಿಯಿಂದ ಅವರವರ ಪಟ್ಟಣಕ್ಕೆ ಬಂದ ಸುದ್ದಿಯನ್ನು ಕೇಳಿ, ಆಗ ಅವರೆಲ್ಲರೂ ಅತಿಯಾದ ಸಂಭ್ರಮದಿಂದ ಪಟ್ಟಣವನ್ನೆಲ್ಲ ಶೃಂಗರಿಸಿ, ಕಲಶಕನ್ನಡಿ ಹಿಡಿದ ಸ್ತ್ರೀಯರ ಸಮೇತ ಅವನನ್ನು ಸಂಭ್ರಮ

CC-0. Jangamwadi Math Collection. Digitized by eGangotri

ಬರವನಾಲಿಸುತುಬ್ಬಿ ಪರಿತೋಷಜಲವಾಗ
ಲೆರಡು ಕಣ್ಗೊನೆಯೊಳೊಸರಿದಿರ್ವಂದು ವಂದಿಸಿದ
ವರತನೂಭವೆಯರಂ ಸೆಳೆದು ಬಿಗಿದಪ್ಪಿ ತಂದಖಿಳವಸ್ತುಗಳನಿತ್ತು
ಕರುಣದಿಂದವರವರ ಮನೆಗಳೊಳ್ ಕೆಲದಿವಸ
ಮಿರುತಿರುತ್ತಳಿಯರಿತ್ತುಡುಗೊರೆಗಳಂ ಕೊಂಡು
ಪರಮಸಂತೋಷದಿಂ ನೆನೆದನಾ ದಕ್ಷನೆರ್ದೆಯೊಳಗೊಂದು ಯೋಚನೆಯನು ೩

ಏನೆಂಬೆನೀಯಳಿಯರೀ ಮಕ್ಕಳಿಂದೆ ನಾ
ನಾನಂದಮಂ ಪಡೆದೆನಿನ್ನೊರ್ವಸುತೆ ಮಹಾ
ಮಾನಿನಿ ಮಹಾದೇವನರ್ಧಾಂಗಿಯಾಗಿರ್ಪಳವರ ಬಳಿಗಾಂ ಪೋಗಲು
ನಾನಾವಿಧೋಪಚಾರಂ ಮಾಡದಿರರೆಂದು
ಸಾನುರಾಗದೆ ದಕ್ಷನೈತರಲ್ ಕಾಣಿಸಿತ
ನೂನಸೌಭಾಗ್ಯಲಕ್ಷ್ಮೀನಿವಾಸನವೆನಿಪ ಶಿವಲೋಕಮವನಿದಿರೊಳು ೪

ಸಕಲ ಸುಕೃತಂಗಳ ಬೆಳೆಯು ಪೊಸಕೊಠಾರವೋ
ಸಕಲ ನಿಗಮಾಗಮ ಪುರಾಣಾರ್ಥದಾಲಯವೊ
ಸಕಲ ಯೋಗಾನಂದಸಂದೋಹದಾಗರವೊ ಸಕಲ ಪುಣ್ಯದ ಸದನವೋ

ದಿಂದ ಎದುರುಗೊಂಡು, ಅರಮನೆಗೆ ಕರೆದುಕೊಂಡು ಹೋಗಿ, ಸಿಂಹಾಸನದ ಮೇಲೆ ಕೂರಿಸಿ, ಬಹಳ ಭಕ್ತಿಯಿಂದ ಪೂಜೆ ಮಾಡಿದರು. ೩. ತಂದೆಯು ಬಂದುದನ್ನು ಕೇಳಿ ಸಂತೋಷದಿಂದ ಉಬ್ಬಿ ಎರಡು ಕಣ್ಣುಗಳ ಕೊನೆಯಲ್ಲಿಯೂ ಹರ್ಷಾಶ್ರುವನ್ನು ಸುರಿಸುತ್ತ, ತನ್ನನ್ನು ಎದುರುಗೊಂಡು ನಮಸ್ಕರಿಸಿದ ಹೆಣ್ಣುಮಕ್ಕಳನ್ನು ಸೆಳೆದುಕೊಂಡು ಬಿಗಿಯಾಗಿ ಅಪ್ಪಿಕೊಂಡು, ತಾನು ತಂದ ಎಲ್ಲ ವಸ್ತುಗಳನ್ನೂ ಕೊಟ್ಟು, ಕರುಣೆಯಿಂದ ಅವರ ಮನೆಗಳಲ್ಲಿ ಕೆಲವು ದಿವಸ ಇರುತ್ತ, ಅಳಿಯಂದಿರು ಕೊಟ್ಟ ಉಡುಗೊರೆಗಳನ್ನು ತೆಗೆದುಕೊಂಡು, ಬಹಳ ಸಂತೋಷದಿಂದ ದಕ್ಷನು ಮನಸ್ಸಿನಲ್ಲಿ ಒಂದು ಆಲೋಚನೆಯನ್ನು ಮಾಡಿದನು. ೪. ಏನು ಹೇಳಲಿ, ಈ ಅಳಿಯಂದಿರು-ಮಕ್ಕಳಿಂದ ನಾನು ಆನಂದವನ್ನು ಪಡೆದೆ. ಇನ್ನೊಬ್ಬ ಮಹಾಮಾನಿನಿಯಾದ ಮಗಳು ಈಶ್ವರನ ಅರ್ಧಾಂಗಿಯಾಗಿರುವಳು. ಅವರ ಬಳಿಗೆ ನಾನು ಹೋದರೆ ನಾನಾ ವಿಧವಾದ ಉಪಚಾರಗಳನ್ನು ಮಾಡದೆ ಇರುವುದಿಲ್ಲ ಎಂದು ಪ್ರೀತಿಯಿಂದ ದಕ್ಷನು ಬರಲು ಹೋಲಿಕೆಗಸಾಧ್ಯವಾದ ಸೌಭಾಗ್ಯಲಕ್ಷ್ಮಿಯ ಆವಾಸಸ್ಥಾನವೆನಿಸಿದ ಶಿವಲೋಕವು ಎದುರಿನಲ್ಲಿ ಕಾಣಿಸಿತು. ೫. ಎಲ್ಲ ಪುಣ್ಯ ಮತ್ತು ಪವಿತ್ರಕಾರ್ಯಗಳೆಂಬ ಬೆಳೆಯನ್ನು ತುಂಬಿದ್ದ ಉಗ್ರಾಣವೊ! ಎಲ್ಲ ವೇದಾಗಮ ಪುರಾಣಾರ್ಥಗಳ ಮನೆಯೊ! ಎಲ್ಲ ಯೋಗಾನಂದ ಸಮೂಹದ ವಾಸ

CC-0. Jangamwadi Math Collection. Digitized by eGangotri

ಸಕಲ ಮುನಿನಾಥರ ತಪಃಫಲದ ನೆಲೆವನೆಯೊ
ಸಕಲ ತಾರಾಗ್ರಹಾಗ್ನಿಗಳ ತೇಜೋಗ್ರಹವೊ
ಸಕಲ ನಿಷ್ಕಲತತ್ತ್ವದ ಮನೆಯೋಯೆನಲೆಸೆವ ಶಿವಲೋಕಕ್ಕೈತಂದನು ೫

ಬಿಳಿಯಾನೆಗಳ ಪಙ್ತಿ ತಗರ ಸಂದಣಿ ಕೋಣ
ಗಳ್ಗ ನೆರವಿ ನಿರುತಿವಾಹನರ ವೃಂದಂ ನೆಗ
ಳ್ಗಳ ಸಾಲ್ ಕುರಂಗಸಮುದಯಮಶ್ವರಾಜಿ ವೃಷಭವ್ರಜಂ ಪುಷ್ಪಕಾಳಿ
ಪೊಳೆವಂಚೆವಿಂಡು ಗರುಡೋತ್ಕರಂ ಪುರಬಹಿ
ರ್ವಳಯದೊಳಗೆಲ್ಲಿಯುಂ ತೀವಿರಲ್ ಕಂಡು ತ
ನ್ನಳಿಯನೈಶ್ವರ್ಯಮಂ ಪೊಗಳುತಾ ದಕ್ಷನಾಶ್ಚರ್ಯಮಾನಸನಾದನು ೬

ಎಲ್ಲೆಲ್ಲಿ ನೋಡಲೈಮೊಗ ಹತ್ತು ತೋಳಿನವ
ರೆಲ್ಲೆಲ್ಲಿ ನೋಡಲರೆವೆರೆವಳೆದ ಜಡೆದಲೆಯು
ರೆಲ್ಲೆಲ್ಲಿ ನೋಡಲುರಿಯಂ ಪಣೆಯೊಣಟ್ಟಜಕಪಾಲಮಂ ಪಿಡಿದೆಸೆವರು
ಎಲ್ಲೆಲ್ಲಿ ನೋಡಲಾನೆಯ ತೊಗಲಿನುಡಿಗೆಯುವ
ರೆಲ್ಲೆಲ್ಲಿ ನೋಡಲಹಿಕಟಕ ಕುಂಡಲಧಾರ
ರೆಲ್ಲೆಲ್ಲಿ ನೋಡಲರೆವೆಣ್ಣರೆಸೆದಿರ್ದರಾ ಪುರದೊಳೇನೆಂಬೆನು ೭

ಸಾರೂಪ್ಯದವರ ಘನತರದ ಸಂಪದದ ವಿ
ಸ್ತಾರಮಂ ನೋಡುತ್ತೆ ಬರೆ ಕಾಣಿಸಿತು ಶಿವಾ
ಗಾರು ವಿಮಲಮೋಕ್ಷಲಕ್ಷ್ಮಿಯಾನನಸರೋರುಹದಂತೆ ರಮ್ಯಮಾಗಿ

ಸ್ಥಳವೋ! ಎಲ್ಲ ಪುಣ್ಯಗಳಿಗೂ ಮನೆಯೊ! ಎಲ್ಲ ಋಷಿಶ್ರೇಷ್ಠರ ತಪಸ್ಸಿನ ಫಲದ ತೌರು ಮನೆಯೊ ! ಎಲ್ಲ ನಕ್ಷತ್ರ, ಗ್ರಹ, ಅಗ್ನಿಗಳ ತೇಜೋಗ್ರಹವೊ! ಎಲ್ಲ ನಿಷ್ಕಲ ತತ್ತ್ವದ ಮನೆಯೊ ಎನ್ನುವಂತೆ ಕಾಣುವ ಶಿವಲೋಕಕ್ಕೆ ಬಂದನು. ೬. ಬಿಳಿ ಆನೆಗಳ ಸಾಲು, ಟಗರುಗಳ ಗುಂಪು, ಕೋಣಗಳ ಸಮೂಹ, ಮನುಷ್ಯರ ಗುಂಪು, ಮೊಸಳೆಗಳ ಸಾಲು, ಜಿಂಕೆಗಳ ಸಮುದಾಯ, ಕುದುರೆಗಳ ಸಮೂಹ, ಹೋರಿಗಳ ಗುಂಪು, ವಿಮಾನಗಳ ಸಮೂಹ, ಹಂಸಗಳ ಹಿಂಡು, ಗರುಡಪಕ್ಷಿಗಳ ಸಮೂಹ ಊರಿನ ಹೊರಭಾಗದಲ್ಲಿ ಎಲ್ಲೆಲ್ಲಿಯೂ ತುಂಬಿದ್ದುದನ್ನು ನೋಡಿ ತನ್ನ ಅಳಿಯನ ಐಶ್ವರ್ಯವನ್ನು ಹೊಗಳುತ್ತ ದಕ್ಷನು ಮನಸ್ಸಿನಲ್ಲಿ ಆಶ್ಚರ್ಯ ತಳೆದವನಾದನು. ೭. ಆ ಪಟ್ಟಣದಲ್ಲಿ ಎಲ್ಲೆಲ್ಲಿ ನೋಡಿದರೂ ಐದು ಮುಖದವರು, ಹತ್ತು ತೋಳಿನವರು, ಚಂದ್ರನನ್ನು ಧರಿಸಿದ ಜಟೆಯುಳ್ಳವರು, ಹಣೆಗಣ್ಣುಳ್ಳವರು, ಬ್ರಹ್ಮನ ತಲೆಬುರುಡೆಯನ್ನು ಹಿಡಿದಿರುವವರು, ಆನೆಯ ಚರ್ಮವನ್ನು ಧರಿಸಿರುವವರು, ಹಾವಿನ ಕಡಗ ಕುಂಡಲಗಳನ್ನು ಧರಿಸಿದವರು, ಅರ್ಧನಾರೀಶ್ವರರೇ ಕಾಣಿಸುತ್ತಿದ್ದರು. ೮. ಸಾರೂಪ್ಯದವರ ಅತುಳ ಸಂಪತ್ತಿನ ವಿಸ್ತಾರವನ್ನು ನೋಡುತ್ತ ಬರುತ್ತಿರಲು ಮಂಗಳವಾದ ಮೋಕ್ಷಲಕ್ಷ್ಮಿಯ ಮುಖಕಮಲದಂತೆ

CC-0. Jangamwadi Math Collection. Digitized by eGangotri

ದ್ವಾರದ ಬಹಿರ್ಭಾಗದೊಳ್ ಸಮಯಮಂ ಪಡೆಯ
ದೋರಣಿಸಿ ನಿಂದ ಮನುಮುನಿಗಳ ನಿರೀಕ್ಷಿಸು
ತ್ತೋರಂತೆ ದಾಕ್ಷಾಯಣೀಪಿತಂ ಪುಷ್ಪಕವನಿಳಿದು ನಡೆದೊಳಪೊಕ್ಕನು ೮

ತಡೆವರೆಲ್ಲಂತರಂತರದ ಬಾಗಿಲೊಳಿವಂ
ಮೃಡನರಸಿಯಯ್ಯನೆಂದರಿದು ಸಂತಸದಿಂದೆ
ನಡೆದು ಬರೆಬರೆ ಮುಂದೆ ಕಾಣಿಸಿತ್ತೋಲಗದ ಶಾಲೆ ಕಡುರಮ್ಯವಾಗಿ
ಇಡಿದಿರ್ದ ವೇದ ವೇದಾಂತಮಂತ್ರಂಗಳು
ಗ್ಗಡಣೆಯ ಮಹಾಪ್ರಣವದಂತೆ ಹರಿ ಮೊದಲಾದ
ಬಿಡುಗಣ್ಣರೋಲಗದ ನಡುವೆ ಜಸವೆತ್ತ ದೇವರದೇವನಿರೆ ಕಂಡನು ೯

ಸಿದ್ಧರಾಮೇಶ ಕೇಳಭವನೋಲಗಶಾಲೆ
ಯುದ್ದ ಶತಲಕ್ಷಯೋಜನದಗಲವನಿತು ಪ್ರ
ಸಿದ್ಧವಲ್ಲಿನ ಕೋಟಿ ಶಶಿಕೋಟಿಯಿಂ ಶಿವಂ ಚಿತ್ತಾನುರಾಗದಿಂದೆ
ಉದ್ಧರಿಸಿದಂ ತನ್ಮಹಾಸಭಾಚಕ್ರಮಂ
ಬುದ್ಧಿಗರಿದುಸಿರಲನಿತಗಲದೊಳಗೆಡೆವಿಡದೆ
ಬದ್ಧಾಂಜಲಿಪ್ರಘಟ್ಟನ ಮಕುಟತತಟರಾಗಿ ಸುರಗಣಂ ನಿಂದಿರ್ದುದು ೧೦

ಸಿರಿಯ ಸೌಭಾಗ್ಯಮಾ ಸರಸತಿಯ ಜಾಣ್ಮೆಯುಂ
ಸುರನದಿಯ ನೈರ್ಮಲ್ಯಮಾ ಶಚಿಯ ವೈಭವಂ
ವರಮಂತ್ರದೇವಿಯರ ನಿಜಶಕ್ತಿ ರೋಹಿಣಿಯ ಸರಸತರ ಲಾವಣ್ಯಮುಂ

ಮನೋಹರವಾದ ಶಿವನ ಅರಮನೆ ಕಾಣಿಸಿತು. ಬಾಗಿಲಿನ ಹೊರಭಾಗದಲ್ಲಿ ಶಿವನನ್ನು ನೋಡಲು ಸಮಯಸಿಕ್ಕದೆ ಕಾದು ಸಾಲಾಗಿ ನಿಂತ ಮನು-ಮುನಿಗಳನ್ನು ಒಂದೇಸಮನೆ ನೋಡುತ್ತ ದಕ್ಷನು ವಿಮಾನದಿಂದಿಳಿದು ನಡೆದು ಒಳಭಾಗವನ್ನು ಪ್ರವೇಶಿಸಿದನು. ೯. ಇವನು ಶಿವನ ಅರಸಿಯ ತಂದೆ ಎಂದು ತಿಳಿದು ಒಳಬಾಗಿಲುಗಳಲ್ಲಿ ಇವನನ್ನು ತಡೆಯು ವವರೇ ಇಲ್ಲ. ಈ ರೀತಿ ಸಂತೋಷದಿಂದ ನಡೆದುಬರಲು ಮುಂದೆ ಶಿವನ ಓಲಗ ಶಾಲೆ ಕಡುರಮ್ಯವಾಗಿ ಕಾಣಿಸಿತು. ತುಂಬಿದ್ದ ವೇದ ವೇದಾಂತಮಂತ್ರಗಳನ್ನು ಉಗ್ಗ ಡಿಸುವ ಮಹಾ ಓಂಕಾರದಂತೆ ವಿಷ್ಣು ಮೊದಲಾದ ದೇವತೆಗಳ ಸಭೆಯ ಮಧ್ಯದಲ್ಲಿ ಖ್ಯಾತಿ ಹೊಂದಿದ ದೇವರದೇವನು ಎಂದರೆ ಪರಶಿವನು ಇರುವುದನ್ನು ದಕ್ಷನು ನೋಡಿ ದನು. ೧೦. ಸಿದ್ಧರಾಮೇಶ, ಕೇಳು, ಶಿವನ ಆಸ್ಥಾನದ ಉದ್ದ ನೂರು ಲಕ್ಷ ಯೋಜನ ; ಅಷ್ಟೇ ಅಗಲ, ಕೋಟಿ ಕೋಟಿ ಚಂದ್ರರಿಂದ ತುಂಬಿ ಈಶ್ವರನು ಮನದ ಅನುರಾಗದ ಆ ಮಹಾಸಭೆಯನ್ನು ಉದ್ಧರಿಸಿದ್ದನು. ಬುದ್ಧಿಗೆ ಎಟುಕದಷ್ಟು, ಮಾತಿನಲ್ಲಿ ಹೇಳಲು ಅಸಾಧ್ಯವಾದಷ್ಟು ಅಗಲದಲ್ಲಿಯೂ ಎಡೆಬಿಡದೆ ಕೈಮುಗಿದು ತಲೆಬಾಗಿದ ದೇವತಾ ಸಮೂಹವು ನಿಂತಿದ್ದಿತು. ೧೧. ಲಕ್ಷ್ಮಿಯ ಸೌಭಾಗ್ಯ, ಸರಸ್ವತಿಯ ಜಾಣ್ಮೆ, ದೇವ ಗಂಗೆಯ ನೈರ್ಮಲ್ಯ, ಶಚಿಯ ವೈಭವ, ಮಹಾ ಮಂತ್ರದೇವತೆಗಳ ಶಕ್ತಿ, ರೋಹಿಣಿಯ

CC-0. Jangamwadi Math Collection. Digitized by eGangotri

ಧರೆಯು ಸೈರಣೆ ಮಾತೃಕೆಯರ ಸಾಮರ್ಥ್ಯಮುಂ
ಪರಮಮೋಕ್ಷಾಂಗನೆಯ ಸೌಖ್ಯಮುಂ ಪಾರ್ವತಿಯ
ಚರಣಪಂಕಜದ ಮಾಂಗಲ್ಯತೆಯನೋಲಗಿಸಿ ನಿಂದಿರ್ದುವೇವೇಳ್ವೆನು ೧೧

ತುಂಬುರನ ನಾರದನ ಗಾನವೀಣಾಕ್ವಣಂ
ಕಂಬಳಾಶ್ವತರ ಗೀತಂ ಕಿವಿಯೊಳಿಡಿಯೆ ಲೋ
ಕಾಂಬಿಕೆಯ ವದನಮಂ ನೋಡಿ ನಸುನಗುತೆ ಭೃಂಗಿಯ ನರ್ತನಕೆ ಮೆಚ್ಚುತೆ
ಅಂಬುಜೋದರ ಕಮಲಸಂಭವರ ಬಿನ್ನಪಗ
ಳಂ ಬಹಳಕರುಣದಿಂ ಕೇಳಿ ಮನ್ನಿಸುತೆ ತ್ರಿ
ಯಂಬಕಂ ಸಿಂಹಪೀಠಾಗ್ರದೊಳ್ ಕುಳ್ಳಿರ್ದು ರಂಜಿಸಿದನೋಲಗದೊಳು ೧೨

ನಿಂದು ಬಿನ್ನೈಸು ಹರಿ ಅಜ ಕಳಕಳವ ಮಾಣ್ ಪು
ರಂದರ ಕಡೆಗೆ ಸಾರ್ ಧನೇಶ ಸುಳಿಯದಿರಿಲ್ಲಿ
ಮಂದನಗ್ರಜ ಕೆಲಕ್ಕೊತ್ತಿ ನಿಲ್ ವರುಣ ವಸು ಮದ್ರರೆಡಬಲಕೆ ತೊಲಗಿ
ವೃಂದಾರಕಸ್ತ್ರೀಯರಾರತಿಯನೆತ್ತಿ ಮುನಿ
ವೃಂದ ಪುಷ್ಪಾಂಜಲಿಯ ಸೂಸಿ ಚರಣದೊಳೆನುತೆ
ನಂದಿಯುಂ ಮಾಕಾಳನುಂ ಭರಾಭರಿಯ ಮಾಡುತ್ತಿರ್ದರೋಲಗದೊಳು ೧೩

ಹರಿನೇತ್ರಕಮಲಸಂಪೂಜಿತಪದಾಂಭೋಜ
ಹರಿಯನೆಡಗಾಲೊಳೊದೆದಡೆಗೆಡಹಿದಪ್ರತಿಮ
ಹರಿ ಹರಿ ಹರಿಗಳನೇ ನಯನತ್ರಯಂ ಮಾಡಿ ಜಸವನಾಂತೆಸೆವ ಮಹಿಮ

ಸರಸವಾದ ಲಾವಣ್ಯ, ಭೂಮಿಯ ಸಹನೆ, ಸಪ್ತಮಾತೃಕೆಯರ ಸಾಮರ್ಥ್ಯ, ಶ್ರೇಷ್ಠಳಾದ ಮೋಕ್ಷಸ್ತ್ರೀಯ ಸೌಖ್ಯ ಇವೆಲ್ಲವೂ ಪಾರ್ವತಿಯ ಪಾದಕಮಲದ ಮಂಗಳತೆಯನ್ನು ಸೇರಿಸಿ ಸೇವೆ ಮಾಡುತ್ತ ನಿಂತಿದ್ದುವು. ೧೨. ತುಂಬುರನ ಹಾಡು ಮತ್ತು ನಾರದನ ವೀಣೆಯ ಧ್ವನಿಯನ್ನು ಕಂಬಳವೆಂಬ ವಾದ್ಯದ ಮತ್ತು ಕಿನ್ನರರ ಗೀತೆಯು ಕಿವಿಯಲ್ಲಿ ತುಂಬಿರಲು, ಲೋಕಮಾತೆಯಾದ ಪಾರ್ವತಿಯ ಮುಖವನ್ನು ನೋಡಿ ನಸುನಗುತ್ತ, ಭೃಂಗಿಯ ನರ್ತನಕ್ಕೆ ಮೆಚ್ಚುತ್ತ, ವಿಷ್ಣು, ಬ್ರಹ್ಮರ ವಿಜ್ಞಾಪನೆಗಳನ್ನು ಬಹಳ ಕರುಣೆ ಯಿಂದ ಕೇಳಿ ಮನ್ನಿಸುತ್ತ ಶಿವನು ಸಿಂಹಾಸನದಲ್ಲಿ ಕುಳಿತಿದ್ದು ಆಸ್ಥಾನದಲ್ಲಿ ಪ್ರಕಾಶಿಸು ತ್ತಿದ್ದನು. ೧೩. ವಿಷ್ಣು ನಿಂತುಕೊಂಡು ವಿಜ್ಞಾಪಿಸಿಕೊ, ಬ್ರಹ್ಮ ಗದ್ದಲ ಮಾಡಬೇಡ, ದೇವೇಂದ್ರನೇ ಪಕ್ಕಕ್ಕೆ ಸರಿ, ಕುಬೇರ ಇಲ್ಲಿ ಸುಳಿಯಬೇಡ, ಯಮನೇ ಪಕ್ಕಕ್ಕೆ ಒತ್ತಿ ನಿಲ್ಲು, ವರುಣ, ವಸು ರುದ್ರರೇ ಎಡಬಲಗಳಿಗೆ ಹೋಗಿ, ದೇವತಾಸ್ತ್ರೀಯರೇ ಶಿವನಿಗೆ ಆರತಿಯನ್ನು ಬೆಳಗಿ, ಋಷಿಸಮೂಹವೇ ಹೂವನ್ನು ಶಿವನ ಪಾದಗಳ ಮೇಲೆ ಏರಿಸಿ ಎನ್ನುತ್ತ ನಂದಿಯೂ, ಮಹಾಕಾಳನೂ ಶಿವಸಭೆಯಲ್ಲಿ ವ್ಯವಸ್ಥೆಯನ್ನು ಮಾಡತ್ತಿದ್ದರು. ೧೪. ವಿಷ್ಣುವಿನ ಕಣ್ಣೆಂಬ ಕಮಲದಿಂದ ಪೂಜೆಗೊಂಡ ಪಾದಕಮಲವುಳ್ಳವನೆ, ವಿಷ್ಣು ವನ್ನು ಎಡಗಾಲಿನಲ್ಲಿ ಒದ್ದು ಕೆಡವಿದ ಅಪ್ರತಿಮವೀರನೇ, ಸೂರ್ಯ, ಚಂದ್ರ,ಅಗ್ನಿಗಳನ್ನು

CC-0. Jangamwadi Math Collection. Digitized by eGangotri

ಹರಿಕಟಕ ಕುಂಡಲೋದ್ಭಾಸಿತಕರಶ್ರವಣ
ಹರಿವರ್ಣ ಹರಿರೂಪ ಹರಿಮುಖ್ಯ ಸುರಸೇವ್ಯ
ಹರಿಹರನ ಪಿತನೆ ಜಯಜಯವೆಂದು ವಂದಿಗಳ್ ಕೊಂಡಾಡುತಿರಲಿತ್ತಲು ೧೪

ಬಾಗಿಲೊಳ್ ಪುಗಲೀಯದಿರೆ ತರುಬಿನಿಂದ ಶತ
ಯಾಗರುಂ ಬಿನ್ನಪಕೆ ಸಮಯವಲ್ಲದೆ ನಿಂದು
ಮೂಗುವಟ್ಟಿರ್ದ ನಾನಾಲೋಕಪಾಲರಂ ಕಾಣುತುಂ ದಕ್ಷನಂದು
ಭಾಗೀರಥೀಧರನ ಪರಮವಿಭವದ ಸಭಾ
ಸಾಗರದ ಕಡೆಯ ಕೋಹಿನ ಕೊಲ್ಲೆಯೊಳ್ ನಿಂದು
ತೂಗಿದಂ ಮಕುಟಮಂ ತನ್ನ ನುಡಿಸದ ಮಗಳನಳಿಯನಂ ನೋಡಿನೋಡಿ ೧೫

ಐಶ್ವರ್ಯಮದದಿಂದೆ ಮರೆದರೆನ್ನುವನೀ ಗ
ರೀಶ್ವರಂ ತಾಂ ಪಡೆದ ಮಗಳಿಂದು ಬಗೆಯದೆಯು
ನೈಶ್ವರ್ಯನೆಂದು ಮನ್ನಿಸದಾದಳೈಸೆ ಸಾಕಿನ್ನಿವರ ಸಿರಿಯನಿರದೆ
ವೈಶ್ವಾನರಂಗೀವುದಕ್ಕೇನುಪಾಯವೊಡ
ನಶ್ವಮೇಧವ ಮಾಡಿ ನೋಡುವೆಂ ತಾನೆನುತೆ
ವಿಶ್ವೇಶನಂ ಜರಿದು ದಕ್ಷನಿರದೈದಿದಂ ನಿಜಪುರಕೆ ವಹಿಲದಿಂದೆ ೧೬

ಪೊಕ್ಕನರಮನೆಯನೇಕಾಂತದಾಳೋಚನೆಗೆ
ತಕ್ಕರಂ ಕರೆಸಿದಂ ಮಂತ್ರಿಗಳನವರೊಡನೆ
ಮುಕ್ಕಣ್ಣನಿಂದೆ ತನಗಾದುದಾಸೀನಮಂ ವಿಸ್ತಾರಮಾಗಿ ಪೇಳ್ದು

ಮೂರು ಕಣ್ಣುಗಳನ್ನಾಗಿ ಮಾಡಿಕೊಂಡು ಕೀರ್ತಿಯನ್ನು ಪಡೆದ ಮಹಿಮನೆ, ಹಾವಿನ ಕಡಗ ಕುಂಡಲಗಳನ್ನು ಕೈ ಮತ್ತು ಕಿವಿಗಳಲ್ಲಿ ಧರಿಸಿರುವವನೆ, ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದ ದೇವತೆಗಳಿಂದ ಸೇವೆಗೊಳ್ಳುವವನೆ, ವೀರಭದ್ರನ ತಂದೆಯೆ ಜಯ ಜಯ ಎಂದು ವಂದಿಮಾಗಧರು ಕೊಂಡಾಡುತ್ತಿದ್ದರು. ೧೫. ಬಾಗಿಲಿನಲ್ಲಿ ಪ್ರವೇಶ ದೊರೆಯದೆ ಸರಿದು ನಿಂತಿದ್ದ ದೇವೇಂದ್ರರುಗಳನ್ನು ವಿಜ್ಞಾಪಿಸಿಕೊಳ್ಳಲು ಸಮಯ ದೊರೆಯದೆ ಮೂಕರಂತೆ ಮಾತನಾಡದೆ ನಿಂತಿದ್ದ ನಾನಾ ಲೋಕಪಾಲಕರನ್ನು ನೋಡುತ್ತ ದಕ್ಷನು ಅಂದು ಗಂಗಾಧರನಾದ ಈಶ್ವರನ ಪರಮವೈಭವದ ಸಭಾಸಾಗರದ ಕೊನೆಯ ಸಾಲಿನ ಮೂಲೆಯಲ್ಲಿ ನಿಂತು ತನ್ನನ್ನು ಮಾತನಾಡಿಸದ ಮಗಳನ್ನೂ ಅಳಿಯನನ್ನೂ ನೋಡಿ ನೋಡಿ ತಲೆದೂಗಿದನು. ೧೬. ಐಶ್ವರ್ಯಮದದಿಂದ ಈ ಈಶ್ವರನು ನನ್ನನ್ನು ಮರೆತ, ನಾನೇ ಪಡೆದ ಮಗಳು ಇಂದು ನಾನು ದರಿದ್ರನೆಂದು ನನ್ನನ್ನು ಉಪಚರಿಸಲಿಲ್ಲ. ಸಾಕು, ಇನ್ನು ಇವರ ಐಶ್ವರ್ಯವನ್ನು ಅಗ್ನಿಗಾಹುತಿ ಕೊಡಲು ಏನು ಉಪಾಯ? ನಾನು ಕೂಡಲೇ ಅಶ್ವಮೇಧಯಾಗವನ್ನು ಮಾಡಿ ನೋಡುತ್ತೇನೆ ಎನ್ನುತ್ತ ವಿಶ್ವೇಶ್ವರನನ್ನು ಹೀಯಾಳಿಸಿ, ದಕ್ಷನು ಅಲ್ಲಿರದೆ ತ್ವರಿತದಿಂದ ತನ್ನ ಪಟ್ಟಣಕ್ಕೆ ಹೋದನು. ೧೭. ಅರಮನೆಯನ್ನು ಪ್ರವೇಶಿಸಿದನು, ಏಕಾಂತದ ಆಲೋಚನೆಗೆ ಯೋಗ್ಯರಾದ ಮಂತ್ರಿಗಳನ್ನು ಕರೆಸಿದನು. ಈಶ್ವರನಿಂದ ತನಗೆ ಆದ ಅವಮಾನವನ್ನು ವಿಸ್ತಾರವಾಗಿ ಅವರಿಗೆ

CC-0. Jangamwadi Math Collection. Digitized by eGangotri

ಅಕ್ಕಟಾ ಕಂಡಿರೇ ಗೊರವಂಗೆ ಮಗಳಿತ್ತು
ದಕ್ಕಾಯ್ತು ಫಲವಾದೊಡೇನಾದುದಿಂದವನ
ಸೊಕ್ಕನೀಗಲೆ ನಿಲಿಪೆನೆಂದು ದಕ್ಷಂ ತನ್ನ ಪಿತನೆಡೆಗೆ ನಡೆತಂದನು ೧೭

ಕಂಡು ಬಿನ್ನೈಸಿದಂ ಬೊಮ್ಮಂಗೆ ಸುರಮಕುಟ
ಮಂಡಿತಪದಾಬ್ಜ ಕೇಳ್ ನೀನೆನ್ನ ಕುವರಿಯುಂ
ಮಂಡೆಯೊಳ್ ಜಡೆಗಟ್ಟಿ ಮೇಗೆ ಬೂದಿಯ ತೊಡೆದ ಗೊರವಂಗೆ ಕೊಟ್ಟಬಳಿಕೆ
ಕಂಡೊಮ್ಮೆ ಬಪ್ಪೆನೆಂದೈದಲೆನ್ನಂ ಪೆಸ
ಗೊಂಡನೇ ನುಡಿಸಿದನೆ ಕುಳ್ಳಿರೆಂದನೆ ಪಿಂತೆ
ಕಂಡುಬಲ್ಲಿರೆ ಮಗಳನಿತ್ತವರ್ಗೀ ವಿಧಿಯನೆಂದು ದಕ್ಷಂ ಸುಯ್ದನು ೧೮

ತನ್ನಂ ತಿರಸ್ಕರಿಸಿದವನನಾ ಪರಿಮಾಳ್ಪು
ದುನ್ನತಮದಲ್ಲದೊಡೆ ಸೃಷ್ಟಿಗೊಡೆತನದಿಂದ
ಮಿನ್ನೇತರಗ್ಗಳಿಕೆ ತಂದೆ ಕೊಡು ತಪಕನುಜ್ಞೆಯನೆಂದು ನಿಂದಿರಲ್ಕೆ
ನಿನ್ನೆನ್ನ ಬಾಯ ಹವಣೆನ ತುತ್ತೆ ಹರಿಗಿದಂ
ಬಿನ್ನೈಸಿ ನೋಳ್ಪೆನೆಂದತ್ಯಂತ ಚಿಂತೆಯಿಂ
ಪನ್ನಗಾರಿಧ್ವಜನ ಬಳಿಗೆ ದಕ್ಷಂಗೂಡಿ ಕಮಲಜಂ ನಡೆತಂದನು ೧೯

ಹೇಳಿದನು. ಆಯ್ಯೋ ! ನೋಡಿದಿರಾ? ತಿರುಕನಿಗೆ ಮಗಳನ್ನು ಕೊಟ್ಟುದಕ್ಕೆ ತಕ್ಕ ಶಾಸ್ತಿಯಾಯಿತು. ಆದರೆತಾನೇ ಏನಾಯಿತು ? ಇಂದು ಅವನ ಸೊಕ್ಕನ್ನು ಈಗಲೇ ಅಡಗಿಸುತ್ತೇನೆ ಎಂದು ದಕ್ಷನು ತನ್ನ ತಂದೆಯ (ಬ್ರಹ್ಮನ) ಬಳಿಗೆ ಬಂದನು. ೧೮. ಬ್ರಹ್ಮನನ್ನು ನೋಡಿ ಹೀಗೆಂದು ವಿಜ್ಞಾಪಿಸಿಕೊಂಡನು. ದೇವತೆಗಳಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳವನೇ ಕೇಳು, ನೀನು ನನ್ನ ಮಗಳನ್ನು ತಲೆಯಲ್ಲಿ ಜಡೆಗಟ್ಟಿ, ಮೈಗೆ ಬೂದಿಯನ್ನು ಬಳಿದುಕೊಂಡ ಭಿಕ್ಷುಕನಿಗೆ ಕೊಟ್ಟ ಬಳಿಕ, ಒಂದು ಬಾರಿ ನೋಡಿ ಬರುತ್ತೇನೆಂದು ಅಲ್ಲಿಗೆ ಹೋದರೆ, ಅವನು ಹೆಸರಿಸಿ ಕರೆದನೆ ? ಮಾತನಾಡಿಸಿದನೆ ? ಕುಳಿತುಕೊ ಎಂದನೆ ? ಮಗಳನ್ನು ಮದುವೆ ಮಾಡಿಕೊಟ್ಟ ಯಾರಿಗಾದರೂ ಹಿಂದೆ ಈ ರೀತಿಯ ದುರದೃಷ್ಟ ಆಗಿದ್ದುದನ್ನು ನೋಡಿ ತಿಳಿದಿದ್ದೀರ ಎಂದು ದಕ್ಷನು ನಿಟ್ಟುಸಿರು ಬಿಟ್ಟನು. ೧೯, ನನ್ನನ್ನು ಈ ರೀತಿ ತಿರಸ್ಕರಿಸಿ ಅವಮಾನಿಸಿದವನನ್ನು ನಾನೂ ಅವಮಾನ ಮಾಡುವುದು ಸರಿಯಿಲ್ಲವಾದರೆ ಸೃಷ್ಟಿಗೆ ಒಡೆಯ ಎಂಬುದರ ಹೆಚ್ಚುಗಾರಿಕೆ ಇನ್ನುಎಲ್ಲಿ ಉಳಿಯುತ್ತದೆ. ತಂದೆಯೆ, ನನಗೆ ತಪಸ್ಸಿಗೆ ಅಪ್ಪಣೆ ಕೊಡು ಎಂದು ನಿಂತಿರಲು, ನಿನ್ನ ಮತ್ತು ನನ್ನ ಬಾಯಿಯ ಅಳತೆಯ ತುತ್ತೇಇದು ? ವಿಷ್ಣುವಿಗೆ ಹೇಳಿನೋಡುತ್ತೇನೆ ಎಂದು ಅತಿಯಾದ

CC-0. Jangamwadi Math Collection. Digitized by eGangotri

ಕಮಲಜಂ ಬಂದು ಬಿನ್ನವಿಸಿದಂ ಹರಿಗಾಗ
ಉಮೆಯರಸನಿಂದೆ ದಕ್ಷಂಗಾದವಜ್ಞೆಯಂ
ಕ್ರಮದಿಂದೆ ಹಯಮೇಧಮಂ ರಚಿಸಿ ನಿಮಗಗ್ರಪೂಜೆಯಂ ಕೊಟ್ಟು ಬಳಿಕೆ
ಕುಮತಿಯಾ ರುದ್ರನಂ ಕ್ಷುದ್ರನೆಂದೆನಿಸಿ ಸುರ
ಸಮಿತಿಯೊಳ್ ಹವ್ಯಕವ್ಯಕೆ ಹೊರಗುಮಾಳ್ಪೆನೆಂ
ದಮಿತಕೋಪದೊಳೆನ್ನ ಕರೆತಂದನೆನೆ ಕೇಳಿ ಕಮಲಾಕ್ಷನಿಂತೆಂದನು ೨೦

ಶಿವ ಶಿವಾ ಸಕಲಯಜ್ಞಾದಿಕರ್ಮಂಗಳಿಗೆ
ಶಿವನೊಡೆಯನಾತನಂ ಬಿಟ್ಟೆನಗೆ ಸಕಲಸುರ
ನಿವಹದೊಳಗಗ್ರಪೂಜೆಯನಿತ್ತು ಯಾಗಮಂ ಮಾಳ್ಪೆನೆಂಬುದು ನೀತಿಯೇ
ಶಿವನೆ ಕೇಳ್ ಸಕಲಲೋಕಾರಾಧ್ಯನಾತನೇ
ವಿವರಿಸಲ್ಕೆಮಗೊಡೆಯನೆಂದೆನಲ್ ಕಮಲಜಂ
ಭವನೆಂದ ನಿಮ್ಮ ಮರೆವೊಕ್ಕರಂ ಕಾಯಬೇಕೆನಲಚ್ಯುತಂ ನುಡಿದನು ೨೧

ಆದುದಾಗಲಿ ಬಂದುದಂ ಕಾಣ್ಬೆವಿದರಿಂದೆ
ಮಾದೇವನೆಮಗೆ ಮುನಿಯದೆ ಬಿಡಂ ಪೋಗಿ ಸಂ
ಪಾದಿಸು ಮಖದ್ರವ್ಯಮಂ ಬರ್ಪೆವೆಂದವರ್ಗಳಂ ಕಳುಪಿ ಬಳಿಕೆ

ಚಿಂತೆಯಿಂದ ವಿಷ್ಣುವಿನ ಹತ್ತಿರಕ್ಕೆ ದಕ್ಷನ ಸಮೇತನಾಗಿ ಬ್ರಹ್ಮನು ಬಂದನು. ೨೦. ಬ್ರಹ್ಮನು ಬಂದು ವಿಷ್ಣುವಿನಲ್ಲಿ ಉಮಾಪತಿಯಿಂದ ದಕ್ಷನಿಗಾದ ಅಲಕ್ಷ್ಯವನ್ನು ವಿಜ್ಞಾಪಿಸಿಕೊಂಡನು, ಮತ್ತು ಕ್ರಮವಾಗಿ ಅಶ್ವಮೇಧಯಾಗ ಮಾಡಿ ನಿಮಗೆ ಅಗ್ರಪೂಜೆಯನ್ನು ಕೊಟ್ಟು ಬಳಿಕ ಆ ದುಷ್ಟ ಶಿವನನ್ನು ಹೀನಾಯಿಸಿ ದೇವಸಮೂಹದಲ್ಲಿ ಹವಿರ್ಭಾಗ ಮೊದಲಾದುವು ಇಲ್ಲದಂತೆ ಮಾಡುತ್ತೇನೆ ಎಂದು ಅತಿಯಾದ ಕೋಪದಿಂದ ನನ್ನನ್ನು ಕರೆತಂದನು ಎಂದು ಹೇಳಿದನು. ಅದನ್ನು ಕೇಳಿ ವಿಷ್ಣುವು ಹೀಗೆ ಹೇಳಿದನು, ೨೧. ಶಿವ ಶಿವಾ, ಎಲ್ಲ ಯಜ್ಞ ಮೊದಲಾದ ಕರ್ಮಗಳಿಗೆ ಶಿವನೇ ಅಧಿಪತಿ. ಅವನನ್ನು ಬಿಟ್ಟು ಎಲ್ಲ ದೇವಸಮೂಹದಲ್ಲಿ ನನಗೆ ಅಗ್ರಪೂಜೆಯನ್ನು ಮಾಡಿ ಯಾಗ ನಡೆಸುತ್ತೇನೆನ್ನುವುದು ನೀತಿಯಲ್ಲ. ಕೇಳು, ಎಲ್ಲ ಲೋಕಗಳಿಗೂ ಶಿವನೇ ಆರಾಧ್ಯದೈವ. ವಿವರಿಸಿ ಹೇಳಬೇಕೆಂದರೆ ಅವನೇ ನಮಗೂ ಒಡೆಯನು ಎನ್ನಲು, ನಿಮ್ಮನ್ನು ಮೊರೆಹೊಕ್ಕವರನ್ನು ಕಾಪಾಡಬೇಕೆಂದು ಬ್ರಹ್ಮನು ಕೇಳಿಕೊಂಡನು. ಅದಕ್ಕೆ ವಿಷ್ಣುವು ಹೀಗೆ ಹೇಳಿದನು. ೨೨. ಆದದ್ದು ಆಗಲಿ, ಬಂದದ್ದನ್ನು ಅನುಭವಿಸುತ್ತೇವೆ. ಇದರಿಂದ ಶಿವನು ನಮ್ಮ ಮೇಲೆ ಕೋಪಿಸಿಕೊಳ್ಳದೆ ಬಿಡುವುದಿಲ್ಲ. ಹೋಗಿ ಯಜ್ಞಕ್ಕೆ ಬೇಕಾದ ಧನ ಮತ್ತು ವಸ್ತುಗಳನ್ನು ಸಂಪಾದಿಸು, ನಾವು ಬರುತ್ತೇವೆ ಎಂದು ಅವರನ್ನು ಕಳುಹಿಸಿಕೊಟ್ಟು.

CC-0. Jangamwadi Math Collection. Digitized by eGangotri

ಐದಿದಂ ಸಕಲಚತುರಂಗಮುಂ ಕೂಡಿಕೊಂ
ಡಾ ದಕ್ಷನೆಡೆಗೆ ಕಮಲೋದರಂ ದಕ್ಷನಿಂ
ಬಾದ ಹಿಮಗಿರಿಯ ಗಂಗಾದ್ವಾರದೊಳ್ ಯಜ್ಞಶಾಲೆಯಂ ಮಾಡಿಸಿದನು ೨೨

ಕರೆಸಿದಂ ಮನುಗಳಂ ಮುನಿಗಳಂ ದಿನಪರಂ
ಬರಿಸಿದಂ ವಸುಗಳಂ ಋಷಿಗಳಂ ತ್ರಿದಶರಂ
ವರಿಸಿದಂ ಸವನಾಧಿಪತ್ಯಕ್ಕೆ ಮಿಕ್ಕಿನ ಜನರ ರಕ್ಷೆಗಬ್ಜಾಕ್ಷನಂ
ಹರಿಸಿದಂ ಸಕಲ ಭೂಮಂಡಲಕೆ ತುರಗಮಂ
ತರಿಸಿದಂ ಸಕಲ ಲೋಕದ ವಿವಿಧ ವಸ್ತುಗಳ
ನಿರಿಸಿದಂ ಬ್ರಹ್ಮತ್ವಕಬ್ಜಭವನಂ ಯಜ್ಞದೀಕ್ಷೆಯಂ ತಾಂ ತಳೆದನು ೨೩

ಚರುಪುರೋಡಾಶಂಗಳಿಂ ತಿಲವ್ರೀಹಿಗಳ
ನೆರವಿಯಿಂ ಪೃಷದಾಜ್ಯ ಮಧು ಕುಶಸ್ತಂಡುಲೋ
ತ್ಕರದಿಂದೆ ಬರ್ಹಿಗಳಿಂ ಸ್ರುಕ್ಸ್ರುವಾದಿಗಳ ಸಂದೋಹದಿಂದೆ
ಧರಣಿಯಮರರ ವೇದಮಂತ್ರಘೋಷಣೆಗಳಿಂ
ನಿರುಪಮಾಹವನೀಯ ಪರಮಗಾರುಹಪತ್ಯ
ವರದಕ್ಷಿಣಾಗ್ನಿಗಳ ಬೆಳಗಿನಿಂ ದಕ್ಷನಧ್ವರಶಾಲೆ ಕಣ್ಗೆಸೆದುದು ೨೪

ಆ ಕ್ಷಣಂ ಬಂದು ದಧೀಚಿಮುನಿ ಮಂಟಪದೊ
ಳೀಕ್ಷಿಸಿದನಾ ಚಂದ್ರಚೂಡನಂ ಕಾಣದೆ ಮ
ನೋಕ್ಷೋಭನಾಗಿ ಸೈರಿಸಿ ತನ್ನೊಳಾ ಯಜ್ಞದೀಕ್ಷಿತನ ಮುಂದೆ ನಿಂದು

ಅನಂತರ ಎಲ್ಲ ಚತುರಂಗಬಲವನ್ನೂ ಕೂಡಿಕೊಂಡು ವಿಷ್ಣುವು ದಕ್ಷನ ರಾಜ್ಯದ ಹಿಮಾಲಯದ ಗಂಗಾದ್ವಾರದಲ್ಲಿ ಯೋಗ್ಯವಾದ ಯಾಗಶಾಲೆಯನ್ನು ಮಾಡಿಸಿದನು. ೨೩. ಮನುಗಳನ್ನೂ, ಮುನಿಗಳನ್ನೂ, ಸೂರ್ಯರನ್ನೂ ಕರೆಸಿದನು. ವಸುಗಳನ್ನೂ, ಋಷಿಗಳನ್ನೂ, ದೇವತೆಗಳನ್ನೂ ಬರಮಾಡಿದನು. ಯಜ್ಞಸಮಾರಂಭದ ಮೇಲ್ವಿಚಾರಣೆಗೆ ಮತ್ತು ಉಳಿದ ಜನರ ರಕ್ಷಣೆಗೆ ವಿಷ್ಣುವನ್ನೆ ನಿಯಮಿಸಿದನು. ಎಲ್ಲ ಭೂಮಂಡಲಕ್ಕೂ ಕುದುರೆಯನ್ನು ಹರಿಯಬಿಟ್ಟನು. ಎಲ್ಲ ಲೋಕದ ನಾನಾ ರೀತಿಯ ವಸ್ತುಗಳನ್ನು ತರಿಸಿದನು. ಬ್ರಹ್ಮತ್ವಕ್ಕೆ ಬ್ರಹ್ಮನನ್ನು ಇಟ್ಟು ತಾನು ಯಜ್ಞದೀಕ್ಷಿತನಾದನು. ೨೪. ಚರು, ಪುರೋಡಾಶಗಳಿಂದ, ತಿಲ, ಬತ್ತಗಳ ಸಮೂಹದಿಂದ, ಪೃಷದ್, ತುಪ್ಪ, ಜೇನು, ದರ್ಭೆ, ಅಕ್ಕಿಗಳ ರಾಶಿಯಿಂದ, ದರ್ಭೆಯ ಹೊರೆಗಳಿಂದ, ಸ್ರುಕ್ಸ್ರುವಾದಿಗಳ ಗುಂಪಿನಿಂದ, ಬ್ರಾಹ್ಮಣರ ವೇದಮಂತ್ರಘೋಷಗಳಿಂದ, ಉಪಮಾತೀತವಾದ ಆಹವನೀಯ, ಅತ್ಯಂತ ಶ್ರೇಷ್ಠವಾದ ಗಾರ್ಹಪತ್ಯ ಮತ್ತು ದಕ್ಷಿಣಾಗ್ನಿಗಳ ಪ್ರಭೆಯಿಂದ ದಕ್ಷನ ಯಾಗ ಶಾಲೆಯು ಬೆಳಗುತ್ತಿದ್ದಿತು. ೨೫. ಆಕ್ಷಣದಲ್ಲಿ ಅಲ್ಲಿಗೆ ದಧೀಚಿಋಷಿಯು ಬಂದು ಯಾಗಮಂಟಪದಲ್ಲಿ ಎಲ್ಲಿಯೂ ಶಿವನನ್ನು ಕಾಣದೆ ಮನಸ್ಸಿನಲ್ಲಿ ವ್ಯಥೆಗೊಂಡು ತನ್ನಲ್ಲೆ ಸೈರಿಸಿಕೊಂಡನು. ಆ ಯಜ್ಞದೀಕ್ಷೆ ಕೈಗೊಂಡಿದ್ದ ದಕ್ಷನ ಮುಂದೆ ನಿಂತು ಹೇಳಿದನು.

CC-0. Jangamwadi Math Collection. Digitized by eGangotri

ದಕ್ಷ ಕೇಳ್ಳೈ ಮಹಾದೇವನಿಲ್ಲದ ಯಜ್ಞ
ಮೇ ಕ್ಷೀಣಮೆಂಬುದಂ ತಿಳಿದು ತೊಡಗುವರೆ ಪ್ರ
ತ್ಯಕ್ಷವಿಾ ವೇದಂಗಳಂ ಕೇಳ್ವುದೆನೆ ನಿಜಾಕಾರದಿಂ ಶ್ರುತಿ ನುಡಿದುದು ೨೫

ಯಾಗಕರ್ತಂ ಶಿವಂ ಶಿವನಿಲ್ಲದೀ ದುಷ್ಟ -
ಯಾಗಮೇ ಸರ್ವಥಾ ಕೆಡುಗುಮೆಂದುಸಿರಿ ಬಯ
ಲಾಗಲಾ ಶಿವನಿಂದೆಯಾ ಮಾಳ್ಪ ದಕ್ಷನಂ ಕಂಡು ಮುನಿ ಕೋಪದಿಂದೆ
ಈಗಳೀ ಶಿವರಹಿತಯಾಗಕ್ಕೈತಂದವರ್ಗೆ
ಬೇಗಂ ಶಿವಜ್ಞಾನಮಳಿಗೆಂದು ಶಪಿಸಿ ಮುನಿ
ಪೋಗಲ್ಕನಂತಮುನಿಗಳ್ ಪೋದರಿತ್ತಲೀ ಯಾಗಂ ನಡೆವುತಿರ್ದುದು ೨೬

ಪ್ರತ್ಯಕ್ಷಮಾಗಿ ದಿವಿಜರ್ ತಮ್ಮ ಹಸುಗೆಗಳ
ನತ್ಯಂತಹರುಷದಿಂ ನಡೆತಂದು ಕೊಂಬುದಂ
ಪ್ರತ್ಯಕ್ಷಮಾಗಿ ಹರಿಕಮಲಜರ್ ಸವನರಕ್ಷಕರಾಗಿ ಕಾದಿರ್ಪುದಂ
ಮೃತ್ಯುಹರನಂ ನಿಂದಿಸುತ್ತೆ ದಕ್ಷಂ ಮಾಳ್ಪ
ಕೃತ್ಯಮಂ ಕಂಡು ನಾರದನಖಿಳಮುನಿಜನ
ಸ್ತುತ್ಯನಡಿಗೆಯ್ದಿ ಬಿನ್ನವಿಸಿದಂ ಕೃತಕಮುಖದಾದ್ಯಂತಸಂಗತಿಯನು ೨೭

ಆಲಿಸಿದಳುಮೆ ತನ್ನ ಪಿತನ ದೂರಂ ಮನಕೆ
ತಾಳಿ ಕಡುದುಗುಡಮಂ ಹರನಡಿಗೆ ಮಣಿದು ಮಖ
ಶಾಲೆಗಾಂ ಪೋಗಿ ಪಿತನಜ್ಞಾನಮಂ ತಿಳಿಪಿದಪೆನೆಂದು ಬಿನ್ನೈಸಲು

ಎಲೈ ದಕ್ಷನೇ ಕೇಳು, ಶಿವನಿಲ್ಲದೆ ಯಜ್ಞವುಂಟೆ ? ಅದು ವಿನಾಶಕಾರಕವಾದುದು ಎಂದು ತಿಳಿದೂ ಅದಕ್ಕೆ ಕೈ ಹಾಕುತ್ತಾರೆಯೆ ? ಅದಕ್ಕೆ ಪ್ರತ್ಯಕ್ಷಪ್ರಮಾಣ ಬೇಕಿದ್ದರೆ ಈ ವೇದಗಳನ್ನೇ ಕೇಳು ಎಂದನು. ಆಗ ವೇದವು ರೂಪಪಡೆದು ಹೇಳಿತು. ೨೬. ಶಿವನೇ ಯಾಗಕರ್ತ. ಅವನಿಲ್ಲದೆ ಈ ಕೆಟ್ಟ ಯಾಗವೆ ? ಇದು ನಿಜವಾಗಿಯೂ ನಾಶವಾಗುವುದು ಎಂದು ಹೇಳಿ ವೇದ ಮಾಯವಾಯಿತು. ಆಗ ಶಿವನನ್ನು ನಿಂದಿಸುವ ದಕ್ಷನನ್ನು ನೋಡಿ ಆ ಋಷಿ ಕೋಪದಿಂದ ಈಗ ಈ ಶಿವನಿಲ್ಲದ ಯಾಗಕ್ಕೆ ಬಂದವರಿಗೆ ತಕ್ಷಣ ಶಿವಜ್ಞಾನವಿಲ್ಲದಂತೆ ಆಗಲಿ ಎಂದು ಶಾಪಕೊಟ್ಟು ಹೊರಟುಹೋದನು. ಆಗ ಅನೇಕ ಋಷಿಗಳೂ ಯಾಗಶಾಲೆಯಿಂದ ಹೊರಟುಹೋದರು. ಇತ್ತಕಡೆ ಯಾಗವು ನಡೆಯುತ್ತಿತ್ತು. ೨೭. ದೇವತೆಗಳು ಪ್ರತ್ಯಕ್ಷವಾಗಿ ಬಹಳ ಸಂತೋಷದಿಂದ ಬಂದು ತಮ್ಮ ಹವಿರ್ಭಾಗವನ್ನು ಸ್ವೀಕರಿಸುವುದನ್ನು ವಿಷ್ಣು, ಬ್ರಹ್ಮರು ಸ್ವತಃ ತಾವೇ ಯಾಗರಕ್ಷಣೆ ಮಾಡುತ್ತಿರುವುದನ್ನು, ಮೃತ್ಯುಂಜಯನನ್ನು ನಿಂದೆ ಮಾಡುತ್ತ ದಕ್ಷನು ಯಾಗವನ್ನು ಮಾಡುತ್ತಿದ್ದುದನ್ನು ನೋಡಿ ಎಲ್ಲ ಮುನಿಜನಗಳಿಂದ ಸ್ತುತ್ಯನಾದ ನಾರದನು ಶಿವನ ಬಳಿಗೆ ಬಂದು ಕೃತಕ ಯಾಗಮುಖದ ಎಲ್ಲ ಸಂಗತಿಗಳನ್ನೂ ವಿಜ್ಞಾಪಿಸಿಕೊಂಡನು. ೨೮. ತನ್ನ ತಂದೆಯ ಮೇಲಿನ ದೂರನ್ನು ಕೇಳಿ ಪಾರ್ವತಿಯ ಮನಸ್ಸಿಗೆ ಬಹಳ ದುಗುಡವಾಯಿತು. ಶಿವನ

CC-0. Jangamwadi Math Collection. Digitized by eGangotri

ಕೇಳಬಲ್ಲನೆ ನಿನ್ನ ಮಾತನಾ ದಕ್ಷಂ ಕ
ರಾಳಮತಿ ಬೇಡ ಬೇಡಬಲೆ ಪರಿಭವಮಹುದು
ಕೇಳೆಮ್ಮ ಮಾತನೆನೆ ಮತ್ತೆ ಮೆಯ್ಯಿಕ್ಕಿ ದಾಕ್ಷಾಯಣಿ ಶಿವಂಗೆಂದಳು ೨೮

ತಂದೆಯಿರ್ದೆಡೆಗೆ ಮಗಳೈದಲ್ಕೆ ಪರಿಭವಂ
ಬಂದಪುದೆ ಸರ್ವಥಾ ಬಾರದೆಂತಾದೊಡಂ
ಮಂದಮತಿಯಾದ ಪಿತನಂ ತಿಳಿಪಿಬರ್ಪೆನೆನೆ ಪೋಗಾದೊಡಾತನಿಂದೆ
ಮುಂದಪ್ಪುದಂ ಕಾಣ್ಬೆ ನೀನೆಂದು ದೇವಿಯುಂ
ನಂದಿಮುಖ್ಯಾಮರಗಣಂಗಳಂ ಕೂಡಿಕೊ
ಟ್ಟಿಂದುಜೂಟಂ ಕಳುಪಲತಿವೇಗದಿಂ ಪಿತನ ಯಜ್ಞಕ್ಕೆ ಬರುತಿರ್ದಳು ೨೯

ಭರದಿಂದೆ ಮುಂದೊರ್ವ ಗಣನಾಯಕಂ ಬಂದು
ತುರಗಮೇಧಾಧ್ವರದ ಯಾಜಮಾನದೊಳೆ ಹರಿ
ಸರಸಿಜಾಸನ ಸುರೇಂದ್ರಾದಿ ದಿವಿಜರ ನಡುವೆ ದೀಕ್ಷೆಯುಂ ತಳೆದೊಪ್ಪುವ
ದುರುಳದಕ್ಷನ ಮುಂದೆ ನಿಂದು ದೇವರದೇವ
ನರಸಿ ನಿನ್ನಣುಗಿ ತವ ಯಾಗಮಂ ನೋಡಲೆಂ
ದಿರದೆ ಬಿಜಯಂಗೆಯ್ದಳೆನೆ ಬ್ರಹ್ಮಜಂ ಕೇಳದಂತೆ ಗರ್ವದೊಳಿದ್ದನು ೩೦

ಪಾದಕ್ಕೆ ನಮಸ್ಕರಿಸಿ, ಯಜ್ಞಶಾಲೆಗೆ ಹೋಗಿ ತನ್ನ ತಂದೆಯ ಮನಸ್ಸಿನ ಅಜ್ಞಾನವನ್ನು ತಿಳಿಸಿ ಅದನ್ನು ನೀಗುತ್ತೇನೆ ಎಂದು ವಿಜ್ಞಾಪಿಸಿಕೊಂಡಳು. ಅದಕ್ಕೆ ಶಿವನು ಅವಳನ್ನು ಕುರಿತು ಆ ದಕ್ಷನು ಮೂರ್ಖಮನಸ್ಸಿನವನು, ನಿನ್ನ ಮಾತನ್ನು ಕೇಳುತ್ತಾನೆಯೆ ? ಬೇಡ ಅವಮಾನವಾಗುತ್ತದೆ. ಅಬಲೆ, ಬೇಡ ನಮ್ಮ ಮಾತನ್ನು ಕೇಳು-ಎಂದು ಹೇಳಿದನು. ಆಗ ಮತ್ತೆ ದಾಕ್ಷಾಯಿಣಿ ಶಿವನ ಪಾದಕ್ಕೆ ನಮಸ್ಕರಿಸಿ ಹೀಗೆ ಹೇಳಿದಳು. ೨೮. ತಂದೆ ಇರುವ ಕಡೆ ಮಗಳು ಹೋದರೆ ಅವಮಾನವೆ ? ನಿಜವಾಗಿ ಇಲ್ಲ, ಹೇಗಾದರೂ ಮಂದಬುದ್ಧಿಯಾದ ತಂದೆಗೆ ಬುದ್ಧಿ ಹೇಳಿ ಬರುತ್ತೇನೆ ಎಂದಳು. ಹಾಗಾದರೆ ಹೋಗು, ಆತನಿಂದ ಮುಂದೆ ಆಗುವುದನ್ನು ನೀನು ಕಾಣುತ್ತೀಯೆ ಎಂದು ಚಂದ್ರಚೂಡನಾದ ಈಶ್ವರನು ದಾಕ್ಷಾಯಿಣಿಯನ್ನು ನಂದಿ ಮುಂತಾದ ಮುಖ್ಯ ದೇವಗಣಗಳನ್ನು ಜೊತೆಗೂಡಿ ಕಳಿಸಿದನು. ಆಗ ಆಕೆ ಬಹಳ ತ್ವರಿತದಿಂದ ತಂದೆಯ ಯಜ್ಞಕ್ಕೆ ಬರುತ್ತಿದ್ದಳು. ೨೯. ಮೊದಲೇ ವೇಗವಾಗಿ ಗಣನಾಯಕನೊಬ್ಬನು ಬಂದು ಅಶ್ವಮೇಧಯಾಗದ ಯಾಜಮಾನ್ಯ ವಹಿಸಿ ವಿಷ್ಣು,ಬ್ರಹ್ಮ, ಇಂದ್ರ ಮೊದಲಾದ ದೇವತೆಗಳ ನಡುವೆ ದೀಕ್ಷೆಯನ್ನು ಕೈಕೊಂಡು ಕುಳಿತಿದ್ದ ದುಷ್ಟನಾದ ದಕ್ಷನ ಮುಂದೆ ನಿಂತು ದೇವರದೇವನಾದ ಶಿವನ ಪತ್ನಿಯೂ, ನಿನ್ನ ಪ್ರೀತಿಯ ಮಗಳೂ ಆದ ದಾಕ್ಷಾಯಿಣಿ ನಿನ್ನ ಯಾಗವನ್ನು ನೋಡಲು ಬಂದಿ

CC-0. Jangamwadi Math Collection. Digitized by eGangotri

ಏಕೆ ನುಡಿಯದೆ ಸುಮ್ಮನಿರ್ಪೆ ಅಕ್ಕಟ ಮರುಳೆ
ಲೋಕನಾಯಕನರಸಿ ನಿನ್ನ ಪುಣ್ಯದಫಲವೆ
ಸಾಕಾರವಂ ತಳೆದುದೆಂಬಂತೆ ಬಂದಳಿದೆ ಸುಧೆಯನುಳಿದಳೆಗೆಳಸುವ
ಕಾಕರ್ಗೆ ಗುರುವಾಗಬೇಡಿದಿರ್ಗೊಳ್ಳೆಲೇಳ್
ಜೋಕೆಯಿಂ ಪುರವ ಸಿಂಗರಿಸು ಪಹಿಲದೊಳೆನಲ್
ನೂಕಿವನನೆನುತೆ ಗುಡುಗುಡಿಸಿ ಕಿಡಿಕಿಡಿಯಾಗಿ ದೀಕ್ಷಿತಂ ಕೋಪಿಸಿದನು ೩೧

ಅನಿತರೊಳನೇಕವೈಭವದಿಂದೆ ಬಂದೆಸೆವ
ಜನಕನ ಮಹಾಧ್ವರವ ನೋಡಿ ನುಡಿಸಿದಳಾಗ
ವಿನಯದಿಂದಲೆ ಬೊಪ್ಪ ಸಕಲ ರಾಹಸ್ಯಂಗಳಂ ಕೇಳಿ ಕೇಳಿ ಕಂಡು
ನಿನಗಿದೇಕಜ್ಞಾನವಕಟಕಟ ಬೇಡವಭ
ವನನುಳಿದು ಮಾಳ್ಪ ಯಜ್ಞಂ ನಡೆವುದೇ ಮಾತ
ನನುಕರಿಸು ನೀನೆಂದು ಬೇಡಿಕೊಳೆ ಗುಡುಗುಡಿಸಿ ದಕ್ಷನಂದಿಂತೆಂದನು ೩೨

ಹರಿಯು ನೆಮ್ಮುಗೆ ಕಮಲಜನ ಸಹಾಯಂ ದಿಶಾ
ವರರೊತ್ತು ತರಣಿ ವಸು ದನುಜ ಮನುಗಳ ಕಾವ
ಲಿರವೆ ಚಂದ್ರಾತ್ರಿಕಶ್ಯಪರೆನ್ನ ಜಾಮಾತರಾಂ ಜಗತ್ಕರ್ತೃವೆನಗೆ

ದ್ದಾಳೆ ಎನ್ನಲು ದಕ್ಷನು ಅದನ್ನು ಕೇಳದಂತೆಯೆ ಗರ್ವದಿಂದ ಕುಳಿತಿದ್ದನು. ೩೧. ಮಾತನಾಡದೆ ಏಕೆ ಸುಮ್ಮನೆ ಇದ್ದೀಯೆ ? ಅಯ್ಯೋ ಮರುಳ, ಲೋಕನಾಯಕನಾದ ಶಿವನ ಪತ್ನಿ ನಿನ್ನ ಪುಣ್ಯದ ಫಲವೇ ರೂಪುಪಡೆದಿದೆಯೊ ಎನ್ನುವಂತೆ ಇಗೋ ಬಂದಿದ್ದಾಳೆ. ಅಮೃತವನ್ನು ಬಿಟ್ಟು ಮಜ್ಜಿಗೆಗೆ ಆಸಿಸುವ ನೀಚರಿಗೆ ಗುರುವಾಗಬೇಡ, ಅವಳನ್ನು ಎದುರುಗೊಳ್ಳು, ಏಳು, ಎಚ್ಚರಿಕೆಯಿಂದ ಬೇಗ ಪಟ್ಟಣವನ್ನು ಶೃಂಗರಿಸು ಎನ್ನಲು ದಕ್ಷನು ಗುಡುಗುಡಿಸುತ್ತ ಕೋಪದಿಂದ ಕಿಡಿಕಾರುತ್ತ ಇವನನ್ನು ಆಚೆಗೆ ನೂಕು ಎಂದನು. ೩೨. ಅಷ್ಟರಲ್ಲಿ ಅನೇಕ ವೈಭವದಿಂದ ದಾಕ್ಷಾಯಿಣಿ ಬಂದು ಶೋಭಿಸುತ್ತಿದ್ದ ತನ್ನ ತಂದೆಯ ಮಹಾ ಯಾಗವನ್ನು ನೋಡಿ ವಿನಯದಿಂದ ಮಾತನಾಡಿದಳು. ಎಲೈ ತಂದೆ ಎಲ್ಲ ವೇದಗಳ ರಹಸ್ಯಗಳನ್ನು ಕೇಳಿ, ಕೇಳಿ ನೋಡಿಯೂ ಸಹ ಈ ಅಜ್ಞಾನ ನಿನಗೇಕೆ ಬಂದಿತು ? ಅಯ್ಯಯ್ಯೊ ! ಬೇಡ, ಶಿವನನ್ನು ಬಿಟ್ಟು ಮಾಡುವ ಯಜ್ಞ ಫಲಿಸುತ್ತದೆಯೆ ? ನನ್ನ ಮಾತನ್ನು ನೀನು ಕೇಳು ಎಂದು ಬೇಡಿಕೊಳ್ಳಲು ದಕ್ಷನು ಗುಡು ಗುಡಿಸುತ್ತ ಹೀಗೆಂದನು. ೩೩. ವಿಷ್ಣುವಿನ ಆಶ್ರಯ,ಬ್ರಹ್ಮನ ಸಹಾಯ, ದಿಕ್ಪಾಲಕರ ಸಹ ಕಾರ, ಸೂರ್ಯ-ವಸು-ರಾಕ್ಷಸ-ಮನುಗಳ ರಕ್ಷಣೆಯಿದೆ.ಇದರಲ್ಲಿ ಕುಂದುಂಟೆ? ಚಂದ್ರ-ಅತ್ರಿ ಕಶ್ಯಪರು ನನ್ನ ಅಳಿಯಂದಿರು, ನಾನು ಜಗತ್ತನ್ನೇ ಸೃಷ್ಟಿಸುವವನು. ಇಂತಹ ನನಗೆ ತಿರು



CC-0. Jangamwadi Math Collection. Digitized by eGangotri

ತಿರುಕಂ ಮಸಣಗಾಹಿ ಹಾವಡಿಗನೆಲುಮಾಲೆ
ಗೊರಲ ಗೊರವಂ ನೋಡಲೆನಗೆ ಪಾಸಟಿಯೆ ನೀ
ನಿರದೆ ಕೆಲಸಾರೆನುತೆ ಕೋಪದಿಂ ಮರಳಿ ಮರಳೀಶನಂ ನಿಂದಿಸಿದನು ೩೩

ಕೇಳಿ ಶಿವಶಿವ ಮಹಾದೇವಮೆಂದರ್ ಕೆಲರ್
ಕೇಳಿ ಕೇಳದವೊಲ್ ಪರಾಕುಗೈದರ್ ಕೆಲರ್
ಕೇಳಬಾರದು ಶಿವನ ನಿಂದೆಯನೆನುತ್ತೆದ್ದು ತಂತಮ್ಮ ನಿಳಯಕೊಡನೆ
ಹೇಳದೇ ಬಿಟ್ಟು ಪೋದರ್ ಕೆಲರ್ ಬುದ್ಧಿಯಂ
ಪೇಳಲವ ಕೇಳದಿರೆ ಜಡಿದು ಪೋದರ್ ಕೆಲರ್
ಪೇಳಲೇನಧ್ವರದಶಾಲೆಯೊಳಗಿರ್ದ ಮುನಿವರರದೇನೆಂದೆಂಬೆನು ೩೪

ಇಂತಿರದೆ ದಕ್ಷನತಿಕೋಪದಿಂದಾಗಳ
ತ್ಯಂತ ಶಿವನಿಂದೆಯಂ ಮಾಡಲಕಟಾ ಪ್ರಾಣ
ಕಾಂತನಿಂದೆಯನಾಲಿಸಿದೆನಿವನ ಸಂಬಂಧಕಾಯಮಂ ಬಿಡುವೆನೆನುತೆ
ತಾಂ ತನ್ನ ದೇಹಮಂ ಯೋಗಾಗ್ನಿಗಿತ್ತಾಗ
ಪಿಂತೆ ಮೇನೆಗೆ ಕೊಟ್ಟ ವರಕಾಗಿ ಪೋಗಿ ಸಲೆ
ಕಂತುಮದಮರ್ದನನ ರಾಣಿ ಕಲ್ಯಾಣಿ ಮೇನೆಯ ಗರ್ಭದೊಳ್ ಬಳೆದಳು ೩೫

ಕನೂ, ಸ್ಮಶಾನದ ಕಾವಲುಗಾರನೂ, ಹಾವಾಡಿಗನೂ, ಎಲುಬುಗಳ ಹಾರವನ್ನು ಕುತ್ತಿಗೆಯಲ್ಲಿ ಧರಿಸಿರುವ ಬಿಕ್ಷುಕನೂ ಸಮನಾಗಬಲ್ಲನೆ? ನೀನು ಇಲ್ಲಿ ನಿಲ್ಲದೆ ಹೊರಟುಹೋಗು ಎಂದು ದಕ್ಷನು ಬಹುಕೋಪದಿಂದ ಮತ್ತೆ ಮತ್ತೆ ಈಶ್ವರನನ್ನು ನಿಂದಿಸಿದನು. ೩೪. ಯಾಗಶಾಲೆಯಲ್ಲಿದ್ದ ಮುನಿಗಳಲ್ಲಿ ಕೆಲವರು ಶಿವನಿಂದೆಯನ್ನು ಕೇಳಿ ಶಿವಶಿವಾ ಮಹದೇವ ಎಂದರು. ಕೆಲವರು ಕೇಳಿಯೂ ಕೇಳದ ರೀತಿಯಲ್ಲಿ ಅಲಕ್ಷ್ಯದಿಂದಿದ್ದರು. ಮತ್ತೆ ಕೆಲವರು ಶಿವನಿಂದೆಯನ್ನು ಕೇಳಬಾರದು ಎನ್ನುತ್ತಾ ಎದ್ದು ಹೇಳದೆಯೇ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಮತ್ತೂ ಕೆಲವರು ಅವನಿಗೆ ಬುದ್ಧಿವಾದವನ್ನು ಹೇಳಿದರು. ಅವನು ಅದನ್ನು ಕೇಳದಿರಲು ಗದರಿಸಿ ಹೊರಟುಹೋದರು. ಅದನ್ನು ಏನೆಂದು ಹೇಳಲಿ? ೩೫. ಹೀಗೆ ದಕ್ಷನು ಬಹಳ ಕೋಪದಿಂದ ಆಗ ಬಹಳವಾಗಿ ಶಿವನಿಂದೆಯನ್ನು ಮಾಡಲು ಆಯ್ಯೋ ಪ್ರಾಣಕಾಂತನ ನಿಂದೆಯನ್ನು ಕೇಳಿದೆ. ಇವನ ಸಂಬಂಧವಾದ ಈ ಶರೀರವನ್ನು ತೊರೆಯುತ್ತೇನೆ ಎಂದು ದಾಕ್ಷಾಯಿಣಿ ತನ್ನ ದೇಹವನ್ನು ಯೋಗಾಗ್ನಿಗೆ ಆಹುತಿಕೊಟ್ಟು ಹಿಂದೆ ಮೇನಾದೇವಿಗೆ ಕೊಟ್ಟ ವರವನ್ನು ಸಲ್ಲಿಸುವುದಕ್ಕಾಗಿ ಈಶ್ವರನ ರಾಣಿಯಾದ ದಾಕ್ಷಾಯಣಿ, ಕಲ್ಯಾಣಿಯು ಮೇನೆಯ ಗರ್ಭದಲ್ಲಿ

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥವಾ
ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೬

## ಮೂವತ್ತನೆಯ ಸಂಧಿ ಸಂಪೂರ್ಣ

ಬೆಳೆದಳು. ೩೬. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತೊಂದನೆಯ ಸಂಧಿ

ಸೂಚನೆ : ರುದ್ರನ ಮಹಾಕೋಪದಿಂದುದಿಸಿ ಸುರಬಲಸ
ಮುದ್ರಮಂ ಕಲಕಿ ಕಮಲಜಮುಖ್ಯರಂ ವೀರ
ಭದ್ರನತಿಕೋಪದಿಂ ಪೆಡಗುಡಿಯ ಕಟ್ಟಿ ಭೂತಾಳಿಗಳ ವಶಕಿತ್ತನು

ದಕ್ಷಮುಖಸಂಹಾರ ದಕ್ಷದುರಿತೇಭಹ
ರ್ಯಕ್ಷಮಿತ್ರೀಭೂತ ಯಕ್ಷಪತಿನುತ ಸಹ
ಸ್ರಾಕ್ಷವಿಧಿಪಂಕೇರುಹಾಕ್ಷವಂದಿತಪದ ಮಹೋಕ್ಷವಾಹನ ಜಯ ಜಯ
ಋಕ್ಷಪತಿಜೂಟಾನಲಾಕ್ಷ ಸುಲಲಾಟ ನತ
ರಕ್ಷ ಖಳಸಂಕುಲವಿಪಕ್ಷ ಲೋಕವ್ರಜಾ
ಧ್ಯಕ್ಷ ಪಂಪಾವಿರೂಪಾಕ್ಷ ನಿಜಭಕ್ತರಂ ರಕ್ಷಿಪುದಪೇಕ್ಷೆಯಿಂದೆ ೧

ಈಶ್ವರಿಯ ಕಾಯಮಳಿದಂದವಂ ಕಂಡು ಪರ
ಮೇಶ್ವರಂಗೀ ಹದನನರುಹಬೇಕೆಂದು ನಂ
ದೀಶ್ವರನತಿತ್ವರಿತಗಮನದಿಂದೈತಂದು ಶಿವನಿದಿರೊಳೈದೆ ನಿಂದು
ಶಾಶ್ವತನೆ ಕೇಳ್ ತವಾರ್ಧಾಂಗಿಯಾ ದಕ್ಷಪ್ರ
ಜೇಶ್ವರಂ ನಿಂದಿಸಲ್ ಕೇಳ್ದು ತನ್ನಯ ಕೋಪ
ವೈಶ್ವಾನರಂಗೆ ತುತ್ತಾದಳೆನೆ ಕೇಳ್ದುಗ್ರನಾಗ್ರಹಂ ತಾಳ್ದನಂದು ೨

ಸೂಚನೆ : ಶಿವನ ಮಹಾಕೋಪದಿಂದ ಹುಟ್ಟಿದ ವೀರಭದ್ರನು ಅತಿಯಾದ ಕೋಪದಿಂದ ದೇವತೆಗಳ ಸೈನ್ಯವೆಂಬ ಸಮುದ್ರವನ್ನು ಕಲಕಿ, ಬ್ರಹ್ಮ ಮೊದಲಾದ ಮುಖ್ಯ ದೇವತೆಗಳನ್ನು ಹೆಡಮುರಿಗೆ ಕಟ್ಟಿ, ಭೂತಸಮೂಹದ ವಶಕ್ಕೆ ಕೊಟ್ಟನು. ೧. ದಕ್ಷನ ಯಜ್ಞವನ್ನು ನಾಶಮಾಡಿದವನು, ಸಮರ್ಥವಾದ ಪಾಪವೆಂಬ ಆನೆಗೆ ಸಿಂಹದಂತಹವನು, ಯಕ್ಷನಾದ ಕುಬೇರನ ಮಿತ್ರ, ಕುಬೇರನಿಂದ ನಮಸ್ಕರಿಸಿ ಕೊಳ್ಳುವವನು, ದೇವೇಂದ್ರ–ಬ್ರಹ್ಮ–ವಿಷ್ಣುಗಳಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳವ, ಮಹಾವೃಷಭವಾಹನ, ಜಯ ಜಯ, ಚಂದ್ರಶೇಖರ, ಹಣೆಗಣ್ಣುಳ್ಳವ, ಶರಣಾಗತ ರಕ್ಷಕ, ದುಷ್ಟಸಮೂಹಕ್ಕೆ ವಿರೋಧಿ, ಎಲ್ಲ ಲೋಕಸಮೂಹಕ್ಕೂ ಒಡೆಯನಾದ ಪಂಪಾವಿರೂಪಾಕ್ಷನೇ ನಿನ್ನ ಭಕ್ತರಾದ ನಮ್ಮನ್ನು ಪ್ರೀತಿಯಿಂದ ಕಾಪಾಡು. ೨. ದಾಕ್ಷಾಯಣಿಯ ಸಾವಿನ ರೀತಿಯನ್ನು ಕಂಡು ಪರಮೇಶ್ವರನಿಗೆ ಈ ವಿಷಯವನ್ನು ತಿಳಿಸಬೇಕೆಂದು ನಂದಿಯು ಬಹು ವೇಗವಾಗಿ ಶಿವನ ಎದುರಿಗೆ ಬಂದು ನಿಂತು, ಶಾಶ್ವತನೇ ಕೇಳು, ಆ ದಕ್ಷನ ಶಿವನಿಂದೆಯನ್ನು ನಿನ್ನ ಅರ್ಧಾಂಗಿಯು ಕೇಳಿ ತನ್ನ ಕೋಪಾಗ್ನಿಗೆ ತಾನೇ ತುತ್ತಾದಳು ಎಂದನು. ಅದನ್ನು ಕೇಳಿ ಶಿವನು (ಉಗ್ರನು)

CC-0. Jangamwadi Math Collection. Digitized by eGangotri

ಬಿಡದೆ ಕಾಲಂಗಳೊಳ್ ಘನಪರ್ವತಂಗಳಂ
ಸುಡುವ ವಹ್ನಿಗೆ ಗಾಳಿ ಬೇಸಗೆಗಳೊಡವರಲ್
ತಡವದೇನುಂಟು ಪೆಸರೇಂ ವಿಷಗ್ರೀವನುಗ್ರಂ ಕಿಚ್ಚುಗಣ್ಣನೆಂತುಂ
ಕಡೆಗೆ ಸಂಹರಮೂರ್ತಿಯಾಗಿರ್ಪವಂ ಮೆಚ್ಚು
ಮಡದಿಯಳಿವುಂ ಪಳಿವುಮಂ ಕೇಳ್ದು ಸೈರಿಪನೆ
ಕಡುಗಾಯ್ಪಿನಿಂದೆ ಗುಡುಗುಡಿಸಿ ಕಿಡಿಕಿಡಿಯಾದನೊಡನಾ ವಿರೂಪಾಕ್ಷನು ೩

ಜಾರಿದುದು ಶಾಂತಿ ಮಿಗೆ ಮೀರಿದುದ ಮುಳಿಸು ಬೇ
ರೂರಿದುದು ಶಿಖಿ ಸಿಡಿದು ಹಾರಿದುದು ಕಿಡಿ ಬೆಮರ್
ತೋರಿದುದು ಪಣೆಗಿಚ್ಚು ಕಾರಿದುದು ಕಣ್ ನಟಣಮೇರಿದುದು ಮೀಸೆ ಬಿಸುಪಂ
ಪೇರಿದುದು ಸುಯ್ ಭಯಂ ಬೀರಿದುದು ಮೊಗಮಿರದೆ
ಚೀರಿದುದು ತಲೆಮಾಲೆ ಕೀರಿದುದು ಫಣಿವಿತತಿ
ಕಾರಿದುದು ಸಭೆಗೆ ಬಾಯಾರಿದುದು ಜನಕೆ ಲಯದೋರಿದುದು ಜಗಕೆಂದನು ೪

ಪಳಪಳನೆ ನಕ್ಷತ್ರಮುದುರುತಿರ್ದುವು ಬೆಟ್ಟ
ಛಿಳಿಛಿಳಿಲ್ ಛಿಟಿಲೆಂದು ಸಿಡಿವುತಿರ್ದುವು ಜಳಧಿ
ತಳಮಳನೆ ಕುದಿವುತಿರ್ದುವು ಧರಣಿ ಧಗಧಗೆಂದುರಿಯೆ ದಿಗ್ಗಜಫಣಿಗಳ
ತಲೆತಲೆಯ ಮುತ್ತುರನ್ನಂಗಳುಂ ಸಿಡಿದೊಡೆದು
ಬಳಬಳನೆ ಸುರಿವುತಿರ್ದುವು ನಿಖಿಳಲೋಕಂಗ
ಳೊಳಗೊಳಗು ಹೊರಗೆಂಬ ಭೇದವಿಲ್ಲದೆ ಹರನ ಕೋಪಾಗ್ನಿ ಸುಡುತಿರ್ದುದು ೫

ಬಹಳ ಕೋಪಗೊಂಡನು. ೩. ಪ್ರಳಯಕಾಲದಲ್ಲಿ ದೊಡ್ಡ ಪರ್ವತಗಳನ್ನೇ ಬಿಡದೆ ಸುಡುವ ಬೆಂಕಿಗೆ ಗಾಳಿ ಮತ್ತು ಬೇಸಿಗೆಗಳು ಸೇರಿದರೆ ತಡೆಯಲು ಯಾವುದರಿಂದ ಸಾಧ್ಯ ? ಅವನ ಹೆಸರೇ ವಿಷಕಂಠ, ಉಗ್ರ, ಕಿಡಿಗಣ್ಣ. ಮೇಲಾಗಿ ಕಡೆಗೆ ಸಂಹಾರ ಮೂರ್ತಿಯಾಗಿರುವವನು. ತನ್ನ ಮೆಚ್ಚಿನ ಮಡದಿಯ ಸಾವನ್ನು, ನಿಂದೆಯನ್ನು ಕೇಳಿ ಸೈರಿಸುತ್ತಾನೆಯೆ ? ತಕ್ಷಣ ವಿರೂಪಾಕ್ಷನು ಅತಿಕೋಪದಿಂದ ಗುಡುಗುಡಿಸಿ ಕಿಡಿಕಿಡಿಯಾದನು. ೪. ಮನಸ್ಸಿನ ಶಾಂತಿ ಹೊರಟುಹೋಯಿತು. ಕೋಪ ಮಿತಿ ಮೀರಿತು. ಮೈಯೆಲ್ಲ ಬೆಂಕಿಯಾಯಿತು. ಅಡಿ ಸಿಡಿದು ಹಾರಿತು. ಹಣೆಯಲ್ಲಿ ಬೆವರು ಕಾಣಿಸಿಕೊಂಡಿತು. ಕಣ್ಣು ಕಿಚ್ಚನ್ನು ಕಾರಿತು. ಮೀಸೆ ನಡುಗಿತು. ಶ್ವಾಸವು ಬಿಸಿ ಯಾಯಿತು. ಎಲ್ಲೆಲ್ಲೂ ಭಯವನ್ನು ಉಂಟುಮಾಡಿತು. ಮುಖವು ಚೀರಿತು. ರುಂಡ ಮಾಲೆ ಕಿರಿಚಿತು. ಸರ್ಪಗಳು ಕಾರಿದುವು, ಸಭೆಯಲ್ಲಿದ್ದವರಿಗೆ ಬಾಯಾರಿಕೆ ಆಯಿತು. ಪ್ರಪಂಚದ ಜನಕ್ಕೆ ಇವೆಲ್ಲವೂ ನಾಶಕಾರಕವಾಗಿ ತೋರಿದುವು ಎಂದನು. ೫. ನಕ್ಷತ್ರಗಳು ಪಳಪಳನೆ ಉದುರುತ್ತಿದ್ದುವು. ಬೆಟ್ಟಗಳು ಛಿಳಿಛಿಳಿಲ್ ಛಿಟಿಲೆಂದು ಸಿಡಿಯುತ್ತಿದ್ದುವು. ಸಮುದ್ರಗಳು ತಕಪಕನೆ ಕುದಿಯುತ್ತಿದ್ದುವು. ಭೂಮಿ ಧಗಧಗನೆ ಉರಿಯುತ್ತಿತ್ತು. ದಿಗ್ಗಜಗಳ ಮತ್ತು ಸರ್ಪಗಳ ತಲೆಗಳಲ್ಲಿದ್ದ ಮುತ್ತುರತ್ನಗಳು ಸಿಡಿದು ಒಡೆದು ಬಳಬಳನೆ ಸುರಿಯುತ್ತಿದ್ದುವು. ಎಲ್ಲ ಲೋಕಗಳನ್ನೂ ಒಳಗೆ–ಹೊರಗೆ ಎಂಬ ಭೇದ

CC-0. Jangamwadi Math Collection. Digitized by eGangotri

ಪೋಳಾಯ್ತುಜಾಂಡಮಾ ಕಾದ ಹಂಚೊಡೆದಂತೆ
ಮೇಲಣಾವರಣಾಂಬು ಕುದಿವುತಿರ್ದುದು ಶಿಖಿ ಚ
ಡಾಳಿಸಲ್ ಭೂತೇಶನೀ ಜಗತ್ತಿಂಗಿಂದು ಮುಳಿದನೋ ಕಲ್ಪಾಂತದ
ಕಾಲಮಂ ಕಂಡು ಸಂಹರಿಸುವನೊ ಮೇಣ್ ಮಹಾ
ಕಾಳಿಯುಳಿದುರಿಯೊಳೀ ಲೋಕಮಂ ಸುಡುವನೋ
ಪೇಳೆನೆ ಮಹಾರುದ್ರಕೋಪಾಗ್ನಿ ಸುಡುತಿರ್ದುದೇನೆಂಬೆನಚ್ಚರಿಯನು ೬

ಆ ಮಹಾದೇವಕೋಪದೊಳಜಾಂಡಕೆ ನೆಗೆದ
ಧೂಮಮೇ ಪೌರುಷಾಕಾರಮಾದುದೊ ಪ್ರಳಯ
ದಾ ಮೇಘತತಿಗಳಂ ಪೆರೆಗಳಂ ಭಗಣಂಗಳಂ ತಾಳ್ದ ನೀಲಾಚಲಂ
ವ್ಯೋಮಕೇಶಶ್ವಾಸಪ್ರಾಶದಿಂದಿಳಿದುದೆನೆ
ಶ್ಯಾಮಳೆ ಸಹಸ್ರಾಸ್ಯ ದ್ವಿಸಹಸ್ರ ಬಾಹುವಿಂ
ದಾ ಮಹಾದಂಷ್ಟ್ರದಿಂ ತ್ರಿಸಹಸ್ರ ಲೋಚನದ ಭೀಮರೂಪೊಗೆದುದಂದು ೭

ಅಂತಾ ವಿರಾಡ್ರೂಪಮೆಂಬುದೇಂ ಬ್ರಹ್ಮಾಂಡ
ದಂತಮೆ ಶಿರಂ ವಕ್ಷದೊಳ್ ತೊಳಪ ಸೂತ್ರರ
ತ್ನಂ ತರಣಿ ಶಶಿಬಿಂಬಮುಡುಗಣಂ ನವಕಂತಸರಮೆನಿಸುವುಗ್ರರೂಪಂ

ವಿಲ್ಲದೆ ಈಶ್ವರನ ಕೋಪದ ಬೆಂಕಿ ಸುಡುತ್ತಿದ್ದಿತು. ೬. ಕಾದ ಹೆಂಚು ಒಡೆದಂತೆ ಬ್ರಹ್ಮಾಂಡವು ಹೋಳಾಯಿತು. ಅಗ್ನಿಜ್ವಾಲೆಯು ಸಿಡಿಯಲು ಸಮುದ್ರದ ಮೇಲಿನ ಆವರಣ ಕುದಿಯುತ್ತಿತ್ತು. ಶಂಕರನು ಈ ಪ್ರಪಂಚದ ಮೇಲೆ ಇಂದು ಕೋಪ ಗೊಂಡನೊ ? ಪ್ರಳಯದ ಕಾಲವನ್ನು ತಿಳಿದು ಸಂಹಾರ ಮಾಡುತ್ತಾನೆಯೊ ? ಅಥವಾ ಮಹಾಕಾಳಿಯು ಸತ್ತ ಉರಿಯಿಂದಲೇ ಈ ಲೋಕವನ್ನೂ ಸುಡುತ್ತಾನೆಯೊ ? ಹೇಳು ಎನ್ನುವಂತೆ ಮಹಾರುದ್ರನ ಕೋಪಾಗ್ನಿ ಸುಡುತ್ತಿದ್ದಿತು ? ಆಶ್ಚರ್ಯವನ್ನು ಏನು ಹೇಳಲಿ ? ೭. ಆ ಮಹಾದೇವನ ಕೋಪದಿಂದ ಬ್ರಹ್ಮಾಂಡವನ್ನು ವ್ಯಾಪಿಸಿದ ಹೊಗೆಯೇ ವೀರಪುರುಷಾಕಾರವನ್ನು ತಾಳಿತೋ ? ಪ್ರಳಯದ ಮೋಡಗಳ ಸಮೂಹ ಗಳನ್ನು, ಚಂದ್ರರನ್ನು, ನಕ್ಷತ್ರಗಳನ್ನು ಧರಿಸಿದ ನೀಲಪರ್ವತವು ವ್ಯೋಮಕೇಶಿಯಾದ ಈಶ್ವರನ ಉಸಿರಾಟದಿಂದ ಇಳಿದುಬಂದಿತೊ ಎನ್ನುವಂತೆ ಕಂದುಬಣ್ಣದಿಂದ ಕೂಡಿ ಸಾವಿರ ಮುಖ, ಎರಡುಸಾವಿರ ತೋಳುಗಳಿಂದಲೂ, ಭೀಕರವಾದ ಕೋರೆಹಲ್ಲು ಗಳಿಂದಲೂ, ಮೂರುಸಾವಿರ ಕಣ್ಣುಗಳಿಂದಲೂ ಕೂಡಿದ ಭಯಂಕರಾಕಾರವೊಂದು ಅಂದು ಗೋಚರಿಸಿತು.೮. ಆ ವಿರಾಟ್‌ರೂಪ ಎಂಬುದು ಹೇಗಿದ್ದಿತು? ಬ್ರಹ್ಮಾಂಡದ ಕೊನೆಯೇ ತಲೆ, ಚಂದ್ರಸೂರ್ಯರೇ.ಎದೆಯ ಮೇಲಿನ ಹಾರದ ರತ್ನಗಳು, ನಕ್ಷತ್ರಗಳೇ ಕುತ್ತಿಗೆಯ ಹಾರ ಎನ್ನುವಂತೆ ಉಗ್ರರೂಪವನ್ನುಧರಿಸಿ ನಿಂತು ಸಾವಿರ ಕೋಟಿ ಸಿಡಿಲುಗಳು ಆರ್ಭಟಿಸು

CC-0. Jangamwadi Math Collection. Digitized by eGangotri

ತಾಂ ತಳೆದು ನಿಂದು ಶತಕೋಟಿ ಸಿಡಿಲಾರ್ಭಟಿಸು
ವಂತೆ ಗುಡುಗುಡಿಸುತೊಲೆದಾಡೆ ಪದಹತಿಗೆ ದಿ
ಗ್ದಂತಿಗಳ್ ಮುಗ್ಗಿ ತೊಲೆದಾಡೆ ಧರೆಯೊಲೆದಾಡುತಿರ್ದುದದನೇನೆಂಬೆನು ೮

ಏಳ್ಗೆಯಿಂ ತಲೆಮಾಲೆ ಫಣಿಭೂಷಣಂಗಳಿಂ
ಖಳ್ಗಮುಂ ಫಲಕಮುಖ್ಯಾಯುಧಂಗಳನಾಂತ
ತೋಳ್ಗಳಿಂ ಜುಂಜುದಲೆ ಕೆಮ್ಮೀಸೆ ಕೆಂಗಣ್ಗಳಿಂದಂ ಮಹಾಶೇಷನ
ಒಳ್ಗಾಸೆಯುಟ್ಟು ಸುರನರಭುಜಂಗರುಗಳಸು
ಗಳ್ಗೊಂಬ ಕಾಲ್ದೊಡರ್ಗಟ್ಟಿ ನಡೆತಂದು ಕ
ಟ್ಟಾಳ್ಗಳಧಿದೈವವಿಾಶಂಗೆರಗಿ ಬಿನ್ನೈಸುತಿರ್ದನದನೇನೆಂಬೆನು ೯

ಸೀಳ್ವೆನಿಳೆಯುಂ ಕೀಳ್ವೆನದ್ರಿಗಳನರ್ಕನಂ
ತೂಳ್ವೆನೇಳಬ್ಧಿಯುಂ ಪೂಳ್ವೆನಿದಿರಾದರಂ
ಬಾಳ್ವೆಗೆಡಿಸುತ್ತಸುಂಗೊಂಬೆನೀ ಬ್ರಹ್ಮಾಂಡಮುಂ ಪೋಳ್ವೆನರಿಭಟರನು
ಬೇಳ್ವೆನಗ್ನಿಗೆ ಬುದ್ಧಿವೇಳ್ವೆನುಳಿದರ್ಗಿಳೆಯ
ನಾಳ್ವರಂ ಸದೆವೆನೇಳ್ಸೂಳ್ವರಂ ಬಡಿವೆನೀ
ರೇಳ್ವರ ಜಗಂಗಳಂ ತಾಳ್ವುದಿಲ್ಲಿಲ್ಲೆನಗೆ ಪೇಳ್ವುದೇಂ ಬೆಸನೆಂದನು ೧೦

ವಂತೆ ಗುಡಿಗುಡಿಸುತ್ತಾ ಒಲೆದಾಡುತ್ತಿರಲು, ಅದರ ಪಾದಾಘಾತಕ್ಕೆದಿಗ್ಗಜಗಳು ಮುಗ್ಗ ರಿಸುತ್ತಾ ಅಲ್ಲಾಡಲು, ಭೂಮಿಯು ಅತ್ತಿತ್ತ ತೂಗಾಡುತ್ತಿದ್ದಿತು ! ೯. ಭಯಂಕರವಾದ ರುಂಡಮಾಲೆ, ನಾಗಾಭರಣಗಳು, ಕತ್ತಿ, ಗುರಾಣಿ ಮುಂತಾದ ಆಯುಧಗಳನ್ನು ಧರಿಸಿದ ಕೈಗಳು, ಒರಟಾದ ಕೆಂಗೂದಲು, ಕೆದರಿದ ತಲೆ, ಕೆಂಪಾದ ಮಿಾಸೆ, ಕೆಂಡದಂತಹ ಕಣ್ಣು ಗಳಿಂದ ಕೂಡಿ ಆದಿಶೇಷನನ್ನೊ ನಡುಕಟ್ಟಿ ಬಗಿದು ಸುರ, ನರ, ನಾಗರಗಳ ಪ್ರಾಣವನ್ನು ಹೀರುವ ಕಾಲಂದುಗೆಯನ್ನು ಕಟ್ಟಿ ನಡೆದುಬಂದು, ವೀರರ ಅಧಿದೇವತೆಯಾದ ಈಶ್ವರನ ಪಾದಕ್ಕೆ ನಮಿಸಿ ಆ ಭೀಮಾಕೃತಿಯು ಬಿನ್ನವಿಸಿಕೊಳ್ಳುತ್ತಿದ್ದಿತು. ಅದನ್ನು ಏನೆಂದು ಹೇಳಲಿ ? ೧೦. ಭೂಮಿಯನ್ನು ಸೀಳುತ್ತೇನೆ, ಪರ್ವತಗಳನ್ನು ಕೀಳುತ್ತೇನೆ. ಸೂರ್ಯನನ್ನು ಹಿಮ್ಮೆಟ್ಟಿಸುತ್ತೇನೆ. ಸಪ್ತ ಸಮುದ್ರಗಳನ್ನೂ ಹೂಳುತ್ತೇನೆ. ಎದು ರಾದವರನ್ನು ಬಾಳ್ವೆಗೆಡಿಸುತ್ತಾ ಪ್ರಾಣ ತೆಗೆಯುತ್ತೇನೆ. ಬ್ರಹ್ಮಾಂಡವನ್ನೇ ಹೋಳು ಮಾಡುತ್ತೇನೆ. ಶತ್ರುಸೈನಿಕರನ್ನು ಬೆಂಕಿಯಲ್ಲಿ ಬೇಯಿಸುತ್ತೇನೆ. ಉಳಿದವರಿಗೆ ಬುದ್ಧಿ ಹೇಳುತ್ತೇನೆ. ರಾಜರುಗಳನ್ನು ಏಳು ಸಾರಿ ಸದೆಬಡಿಯುತ್ತೇನೆ. ಹದಿನಾಲ್ಕು ಲೋಕ ಗಳನ್ನು ಬಡಿದುಹಾಕುತ್ತೇನೆ, ನಾನು ಕಾಯಲಾರೆ. ನಾನು ಮಾಡಬೇಕಾದ ಕೆಲಸವೇನು ?

CC-0. Jangamwadi Math Collection. Digitized by eGangotri

ನೆಗ್ಗಲೋ ಬ್ರಹ್ಮಾಂಡವಂ ಬ್ರಹ್ಮನೆಲುಗಳಂ
ನುಗ್ಗುಮಾಡಲೊ ಹರಿಯ ಹರಣವಂ ತೆಗೆಯಲೋ
ಸಗ್ಗದರಸುಗಳ ಸಿರಿಯಂ ಸುಡಲೊ ಪಾತಾಳದವರನೊರಸಲೊ ಸೊಕ್ಕಿದ
ದಿಗ್ಗಜಂಗಳ ಕೋಡ್ಗಳಂ ಕೀಳಲೋ ಫಣಿಯ
ಬಗ್ಗುರಿಯ ಸೀಳಲೋ ಬೆಸಸು ಬೆಸಸೆನಗೆನುತ
ಲಗ್ಗಳಿಕೆಯಿಂದವರ್ಬಡಿಸುತಿರ್ದಂ ಭೀಕರಾಕಾರನೇವೇಳ್ವೆನು ೧೧

ಆರಾದೊಡೇನೆನಗೆ ಬೆಸಸು ಬೆಸಸೀಗ ಸಂ
ಹಾರವಂ ಮಾಳ್ಪೆನೆಂದೆನುತ್ತಲತ್ಯಧಿಕತರ
ಘೋರರೂಪಿಂದಲಾರ್ಭಟಿಸುತಿಹ ಪುತ್ರಪ್ರತಾಪಕೆಳೆನಗೆಗೂಡಿದ
ಕಾರುಣ್ಯದಿಂ ನೋಡಿ ಸಕಲರಂ ಗೆಲ್ವೆ ನೀಂ
ವೀರನಿಂತೀ ಭದ್ರಮೂರ್ತಿಯಿಂ ಭದ್ರವದು
ಕಾರಣಂ ನೀಂ ವೀರಭದ್ರನೆಂದೀಶ್ವರಂ ಕೃಪೆಯೊಳಂದಿಂತೆಂದನು ೧೨

ಕೇಳೆಲೆ ಕುಮಾರಕನೆ ದಕ್ಷನೆಂಬವನೆಮ್ಮ
ನೋಲಗಿಪ ಹರಿಯಜೇಂದ್ರಗೊಡಿ ಯಾಗಮಂ
ಮೇಳೈಸಲಾ ಕಥಾಂತರದೊಳೀಶ್ವರಿಯಳಿದಳಾ ಸ್ಥಳಕೆ ನೀನೆ ಪೋಗಿ

ಅಪ್ಪಣೆ ಮಾಡು ಎಂದನು. ೧೧. ಬ್ರಹ್ಮಾಂಡವನ್ನು ಜಜ್ಜಿಹಾಕಲೇ ? ಬ್ರಹ್ಮನ ಎಲುಬುಗಳನ್ನು ಪುಡಿಮಾಡಲೆ? ವಿಷ್ಣುವಿನ ಪ್ರಾಣ ತೆಗೆಯಲೆ? ದೇವತೆಗಳ ಸಿರಿಯನ್ನು ಸುಡಲೆ ? ಪಾತಾಳದಲ್ಲಿ ಇರುವವರನ್ನು ನಾಶಮಾಡಲೆ ? ಕೊಬ್ಬಿದ ದಿಗ್ಗಜಗಳ ದಂತವನ್ನು ಕಿತ್ತುಹಾಕಲೆ ? ಆದಿಶೇಷನ ಗಂಟಲಿನ ಎದೆಯ ಎಲುಬನ್ನು ಸೀಳಿಹಾಕಲೆ ? ಆಜ್ಞೆ ಮಾಡು, ಆಜ್ಞಾಪಿಸು ಎನ್ನುತ್ತ ಭಯಂಕರಾಕಾರನು ಅತಿಯಾಗಿ ಆರ್ಭಟಿಸುತ್ತಿದ್ದನು. ೧೨. ಯಾರಾದರೆ ನನಗೇನು ? ಆಜ್ಞಾಪಿಸು–ಆಜ್ಞಾಪಿಸು, ಈ ಕೂಡಲೇ ಸಂಹರಿಸುತ್ತೇನೆ ಎಂದು ಅತಿಭಯಂಕರವಾದ ರೂಪದಿಂದ ಆರ್ಭಟಿಸುವ ಮಗನ ಪ್ರತಾಪಕ್ಕೆ ನಸುನಗೆಯಿಂದ ಕೂಡಿದ ಕರುಣೆಯಿಂದ ನೋಡಿ, ನೀನು ಎಲ್ಲರನ್ನೂ ಗೆಲ್ಲುವೆ, ನೀನು ವೀರನೂ ಹೌದು. ಈ ಭದ್ರ ಕೋಪದಿಂದ ಮಂಗಳವಾಗುವುದರಿಂದ ನೀನು ವೀರಭದ್ರ ಎಂದು ಈಶ್ವರನು ಕೃಪೆಯಿಂದ ಈ ರೀತಿ ಹೇಳಿದನು. ೧೩. ಕುಮಾರನೇ ಕೇಳು, ದಕ್ಷನೆಂಬುವನು ನನ್ನನ್ನು ಸೇವಿಸುವ ವಿಷ್ಣು, ಬ್ರಹ್ಮ, ಇಂದ್ರರ ಜೊತೆಗೂಡಿ ಯಾಗವನ್ನು ಮಾಡುತ್ತಿರಲು, ಆ ಸಂದರ್ಭದಲ್ಲಿ ದಾಕ್ಷಾಯಣಿಯು ಪ್ರಾಣ ತ್ಯಾಗ ಮಾಡಿದಳು. ನೀನೇ ಆ ಸ್ಥಳಕ್ಕೆ ಹೋಗಿ ಒಂದು ಸಾರಿ ಬುದ್ಧಿವಾದ ಹೇಳು.

CC-0. Jangamwadi Math Collection. Digitized by eGangotri

ಪೇಳೊಮ್ಮೆ ಬುದ್ಧಿಯಂ ರುದ್ರಾಂಶವಿಾಯದೊಡೆ
ಪಾಳಾಗಿಸಧ್ವರವನೊರ್ವರಂ ಬಿಡದೆ ಒಡಿ
ಯಾಳಾಗಿ ತರ್ಪುದೆಂದೀಶ್ವರಂ ನೇಮಿಸಿ ಕುಮಾರನಂ ಬೀಳ್ಕೊಟ್ಟನು ೧೩

ಕೇಳ್ದನಾ ಹರವಚನವಂ ರೋಷಪಾರ್ಥಿಯೊಳ
ಗಾಳ್ದನಂತೇಗೆಯ್ವೆನೆಂದೆರಗಿ ಮೂದೇವ
ರಾಳ್ದನಂ ಬೀಳ್ಕೊಂಡು ನಡೆತರುತ್ತೆಂದನಾ ಹರಿಯಜಸುರೇಂದ್ರಾದ್ಯರಂ
ಬಾಳ್ವಲೆಗಳಂ ಕೊಂಬೆನುಳಿದವರ ಪೊಡೆಗಳಂ
ಸೀಳ್ದಿಕ್ಕುವೆಂ ನಿಕ್ಕುವಂ ಕಾದಲೆನಗೆ ದೊರೆ
ಯಾಳ್ದಿಟದೊಳಾರೆಂದು ವೀರಭದ್ರಂ ಕೋಟಿಸಿಡಿಲಂತೆ ಗರ್ಜಿಸಿದನು ೧೪

ಆ ಧ್ವನಿಗೆ ನಡುಗಿತೀರೇಳ್ಜಗಂ ನಿಖಿಳತಾ
ರಾಧ್ವಚರರಾಚರಿಸಿ ಕೆಡೆದರಿಳೆಯೊಳ್ ಮಹಾ
ಸಾಧ್ವಸಂ ಮೂಡಿದುದು ಹರಿಯಜಾದ್ಯರ ಹೃದಯದೊಳ್ ದಕ್ಷನಳವಳಿದನು
ಅಧ್ವರಾಲಯದ ಮುನಿಪಾಲಕರ್ ಬೆದರಿ ವೃಷ
ಭಧ್ವಜಾಟೋಪವೆಂದರಿದರೊಳಗೊಳಗೆ ದ
ಕ್ಷಧ್ವಂಸಕಂ ನೆನೆವನೊಂದು ಕಾರ್ಯವುನದೇನೆಂದೆಂಬೆನಚ್ಚರಿಯನು ೧೫

ರುದ್ರನಿಗೆ ಸಲ್ಲಬೇಕಾದ ಹವಿರ್ಭಾಗವನ್ನು ಕೊಡದಿದ್ದರೆ ಅವನ ಯಾಗವನ್ನು ಹಾಳು ಮಾಡು. ಒಬ್ಬರನ್ನೂ ಬಿಡದೆ ಸೆರೆಯಾಳಾಗಿ ತರುವುದು ಎಂದು ಈಶ್ವರನು ಅಪ್ಪಣೆ ಮಾಡಿ ಮಗನನ್ನು ಬೀಳ್ಕೊಟ್ಟನು. ೧೪. ವೀರಭದ್ರನು ಆ ಈಶ್ವರನ ಮಾತನ್ನು ಕೇಳಿ ಕೋಪವೆಂಬ ಸಮುದ್ರದಲ್ಲಿ ಮುಳುಗಿದನು. ಹಾಗೆಯೇ ಮಾಡುತ್ತೇನೆ ಎಂದು ನಮಸ್ಕರಿಸಿ ಮೂರು ದೇವತ ಒಡೆಯನನ್ನು ಬೀಳ್ಕೊಂಡು ಬರುತ್ತ ವಿಷ್ಣು, ಬ್ರಹ್ಮ, ದೇವೇಂದ್ರಾದಿಗಳನ್ನೂ ಜೀವಂತವಾಗಿ ಸೆರೆಹಿಡಿಯುತ್ತೇನೆ, ಉಳಿದವರ ಹೊಟ್ಟೆಗಳನ್ನು ಸೀಳುತ್ತೇನೆ, ಇದು ಖಂಡಿತ. ನನ್ನೊಡನೆ ಯುದ್ಧಮಾಡಲು ಈ ಭೂಮಿಯಲ್ಲಿ ಎದುರಾಳಿ ಯಾರು ? ಎನ್ನುತ್ತಾ ವೀರಭದ್ರನು ಕೋಟಿ ಸಿಡಿಲಿನಂತೆ ಆರ್ಭಟಿಸಿದನು. ೧೫. ಆ ಧ್ವನಿಗೆ ಹದಿನಾಲ್ಕು ಲೋಕವೂ ನಡುಗಿತು. ತಾರೆಗಳೇ ಮೊದಲಾದ ಆಕಾಶದಲ್ಲಿ ಚಲಿಸುವ ಎಲ್ಲರೂ ಹೆದರಿ ಭೂಮಿಗೆ ಬಂದರು. ವಿಷ್ಣು–ಬ್ರಹ್ಮರ ಹೃದಯದಲ್ಲಿ ಭಯವು ಹುಟ್ಟಿತು. ದಕ್ಷನು ಧೈರ್ಯಗುಂದಿದನು. ಯಜ್ಞಶಾಲೆಯ ಮಹಾಋಷಿಗಳು ಹೆದರಿ ಇದೆಲ್ಲವೂ ಈಶ್ವರನ ಆಟೋಪವೆಂದು ತಿಳಿದರು. ಮನಸ್ಸಿನಲ್ಲಿಯೇ ವೀರಭದ್ರನು ಒಂದು ಕೆಲಸವನ್ನು ನೆನೆದನು. ಆ ಆಶ್ಚರ್ಯವನ್ನು ಏನೆಂದು ಹೇಳಲಿ.

CC-0. Jangamwadi Math Collection. Digitized by eGangotri

ರೌದ್ರದಿಂ ಹೂಂಕರಿಸೆ ಪೊರಪೊಣ್ಮಿದಳ್ ಮಹಾ
ಭದ್ರಕಾಳೀಶಕ್ತಿ ಮತ್ತೆ ಪಡೆದಂ ತನ್ನ
ತದ್ರೂಪವೀರರಗಣಿತಕೋಟಿಯಂ ಚತುರ್ಬಲಮನಗಣಿತಮನೊಡನೆ
ಉದ್ರೇಕದಿಂ ಬಲಂ ನಡೆಯಲಹಿ ದಿಗ್ಗಜ ಕು
ಲಾದ್ರಿ ಕಚ್ಛಪರದೇನಾದರೋ ಧರೆಯುಂ ಸ
ಮುದ್ರಂಗಳೊಂದಾಗುತಿರ್ದುವಾಕ್ಷಣದೊಳದನೇನೆಂಬೆನದ್ಭುತವನು ೧೬

ವಿಕ್ರಮದೊಳೈದುವ ಚತುರ್ಬಲಾಳಿಗೆ ಧರಾ
ಚಕ್ರಮಬ್ಬರಿಪ ಬಹುವಾದ್ಯಘೋಷಕೆ ದಿಶಾ
ಚಕ್ರಮೆತ್ತಿದ ಸಿಂಧ ಸೀಗುರಿ ಪತಾಕೆ ಚಾಮರ ಛತ್ರತತಿಗೆ ಗಗನ
ಚಕ್ರಮಿರದೇಳ್ವ ಕೆಂದೂಳ ದಾಳಿಗೆ ನೆಗಳ್ದ
ಶಕ್ರಜಗಮಿಂಬಿಲ್ಲೆನಲ್ ಬೇಗ ತಮತಮಗ
ತಿಕ್ರಮಿಸಿ ನೆಲನೀದುದೆನೆ ನಡೆದುದಾ ಸೈನ್ಯಚಕ್ರಮದನೇನೆಂಬೆನು ೧೭

ಇಂತಾ ಮಹಾಸೇನೆಯುಂ ನೆರಪಿ ವೀರಭ
ದ್ರಂ ತಳರ್ದೊರ್ವ ಗಣನಾಥನಂ ಕರೆದು ನೀಂ
ಮುಂತಾ ಶಿವದ್ರೋಹಿ ದಕ್ಷನೆಡೆಗೈದಿ ನಮ್ಮಯ ಬರವನೆಚ್ಚರಿಸದೆ

೧೬. ಭಯಂಕರವಾಗಿ ಹೂಂಕಾರ ಮಾಡಲು ತಕ್ಷಣ ಮಹಾಭದ್ರಕಾಳೀಶಕ್ತಿ ಹೊರ ಹೊಮ್ಮಿದಳು. ಮತ್ತೆ ತನ್ನ ರೂಪದ ಅಗಣಿತ ಕೋಟಿ ವೀರರನ್ನೂ, ಚತುರಂಗ ಬಲವನ್ನೂ ಪಡೆದನು. ಉದ್ರೇಕದಿಂದ ಸೈನ್ಯವು ನಡೆಯಲು ಆದಿಶೇಷ ದಿಗ್ಗಜ ಮೇರು ಪರ್ವತ ಆದಿಕೂರ್ಮರು ಏನಾದರೊ ? ಭೂಮಿ ಮತ್ತು ಸಮುದ್ರಗಳು ಒಂದಾಗುತ್ತಿದ್ದುವು. ಆ ಅದ್ಭುತವನ್ನು ಏನು ಹೇಳಲಿ ? ೧೭. ಪರಾಕ್ರಮದಿಂದ ಬರುತ್ತಿದ್ದ ಚತುರಂಗಬಲ ಸಮೂಹಕ್ಕೆ ಭೂಚಕ್ರ, ಅಬ್ಬರಿಸುತ್ತಿದ್ದ ವಾದ್ಯಗಳ ಶಬ್ದಕ್ಕೆ ದಿಕ್ಚಕ್ರ, ಎತ್ತಿಹಿಡಿದ ಬಾವುಟ, ಸೀಗುರಿ, ಪತಾಕೆ, ಚಾಮರ, ಛತ್ರಿಸಮೂಹಕ್ಕೆ ಆಕಾಶಚಕ್ರ, ಒಂದೇ ಸಮನೆ ದಟ್ಟವಾಗಿ ಏಳುತ್ತಿದ್ದ ಕೆಂಧೂಳಿನ ದಾಳಿಗೆ ಪ್ರಖ್ಯಾತವಾದ ಸ್ವರ್ಗವೂ ಸಾಲದು ಎನ್ನುವಂತೆ ಬೇಗನೆ ಅವೆಲ್ಲವನ್ನೂ ದಾಟಿ ನೆಲವೇ ಇದೆಲ್ಲವನ್ನೂ ಹಡೆಯಿತೊ ಎನ್ನುವಂತೆ ಆ ಅಪಾರ ಸೈನ್ಯಸಮೂಹ ನಡೆಯಿತು. ಏನೆಂದು ಹೇಳಲಿ ? ೧೮. ಈ ರೀತಿ ಆ ದೊಡ್ಡ ಸೈನ್ಯವನ್ನು ಸೇರಿಸಿ ವೀರಭದ್ರನು ಮುಂದೆ ಹೊರಟು ತಾನು ಸೃಷ್ಟಿಸಿದ ಗಣನಾಥನೊಬ್ಬನನ್ನು ಕರೆದು ನೀನು ಮುಂಚೆಯೆ ಆ ಶಿವದ್ರೋಹಿಯಾದ ದಕ್ಷನ ಬಳಿಗೆ ಹೋಗಿ ನಾವು ಬರುತ್ತಿರುವುದನ್ನು ಅವನಿಗೆ ತಿಳಿಸದೆ ಅವನಿಗೆ ಯಾವ ರೀತಿಯಲ್ಲಿ

CC-0. Jangamwadi Math Collection. Digitized by eGangotri

ಎಂತಾದೊಡಂ ಮಹಾದೇವವಿರಹಿತಯಜ್ಞ
ಮಂತರಿಪ್ಪುದಾ ರುದ್ರಭಾಗೆಯಂ ಕೊಟ್ಟು ಜೀ
ವಂತನಾಗೆಂದು ಪೇಳ್ದವನೆಂದ ಮಾತನೆಮಗುಸುರೆಂದು ಬೀಳ್ಕೊಟ್ಟನು ೧೮

ಜೀಯೆಂದು ನಮಿಸಿ ಬೀಳ್ಕೊಂಡಾ ಗಣೇಶ್ವರಂ
ವಾಯುವೇಗದೊಳೈದಿ ಶಾಲೆಯಂ ಪೊಗುತೆ ನಿಖಿ
ಳಾಯುಧಾಧೃತಹಸ್ತನಾಗಿ ಹರಿಯಜರ ಸಂದಣಿಗಳಂ ಬಗಿದುಪೋಗಿ
ಆ ಯಜ್ಞದೀಕ್ಷಿತನ ಮುಂದೆ ನಿಂದೆಲವೊ ನಿ
ನ್ನಾಯತಿಕೆಯಿದು ಮಹಾಸಿಂಹಮಂ ಕೆಣಕಿ ಗೋ
ಮಾಯುಗಣದಿಂ ಬಾಳ್ವೆನೆಂಬ ಮೂರ್ಖರ ಮಾಳ್ಕೆಯಾಯ್ತಕಟ ನಿನಗೆಂದನು ೧೯

ಆರನೊಲಿಪ್ಪೊಡೆ ಯಜ್ಞಯಂ ಮಾಳ್ಪರೀ ನೆರೆದ
ಹಾರುವರ್ ಬ್ರಹ್ಮಾಚ್ಯುತರ್ ನೀವು ಜನಿಸಿದಿರ
ದಾರಿಂದೆ ನೀವೀಗ ಹುತವಹಂಗಾಹುತಿಯನೀವ ಶ್ರುತಿಮಂತ್ರಂಗಳು
ಆರನುರೆ ನುತಿಪ್ಪುವೆಂದೆಂಬುದಂ ಮರೆದಹಂ
ಕಾರದಿಂ ಕೆಟ್ಟರಿಯಕಾರಣಂ ಬರಬರಲ್
ವಾರುವನ ಮರಿ ಗರ್ದಭಾಕಾರವಾದೊಲಾಯ್ತಾ ಬಾಳ್ಕೆ ನಿಮಗೆಂದನು ೨೦

ಕೇಳಿ ಕಿಡಿಕಿಡಿಯಾದನಾ ದಕ್ಷನೆಲ್ಲರುಂ
ತಾಳಿ ಕಡುರೋಷಂಗಳಂ ಬರಿದೆ ನೀನದೇ
ಕೂಳುತಿಪೆ ಯಾರವಂ ನಿನಗದೇತಕೆ ಮಂತ್ರತಂತ್ರರಾಹಸ್ಯದರಿತಂ

ಯಾದರೂ ಮಹಾದೇವನಿಲ್ಲದ ಯಾಗವು ನಾಶವಾಗುತ್ತದೆ. ಆ ಶಿವನಿಗೆ ಸಲ್ಲಬೇಕಾದ ಭಾಗವನ್ನು ಕೊಟ್ಟು ಬದುಕು ಎಂದು ಹೇಳು. ಅವನು ಹೇಳುವ ಮಾತನ್ನು ನಮಗೆ ತಂದು ಹೇಳು ಎಂದು ಹೇಳಿಕಳುಹಿಸಿದನು. ೧೯. ಸ್ವಾಮಿಯೆ, ಅಪ್ಪಣೆ ಎಂದವನಿಗೆ ನಮಸ್ಕರಿಸಿ, ಅಲ್ಲಿಂದ ಹೊರಟ ಗಣನಾಥನು ವಾಯುವೇಗದಿಂದ ಬಂದು ಯಾಗ ಶಾಲೆಯನ್ನು ಪ್ರವೇಶಿಸಿ ಸಕಲ ಆಯುಧಗಳನ್ನೂ ಕೈಯಲ್ಲಿ ಹಿಡಿದು, ವಿಷ್ಣು–ಬ್ರಹ್ಮರ ಸಮೂಹವನ್ನು ಭೇದಿಸಿಕೊಂಡು ಹೋಗಿ, ಆ ಯಜ್ಞದೀಕ್ಷೆಯಲ್ಲಿದ್ದ ದಕ್ಷನ ಮುಂದೆ ನಿಂತು, ಎಲವೊ ಈ ನಿನ್ನ ಪರಾಕ್ರಮ ದೊಡ್ಡ ಸಿಂಹವನ್ನು ಕೆಣಕಿ ನರಿಗಳ ಸಮೂಹ ದೊಡನೆ ಬಾಳುತ್ತೇನೆ ಎಂಬ ಮೂರ್ಖರ ರೀತಿಯಾಯಿತಲ್ಲ ಎಂದನು. ೨೦. ಈ ಬ್ರಾಹ್ಮಣರು ಯಾರನ್ನು ಮೆಚ್ಚಿಸಲೋಸುಗ ಈ ಯಜ್ಞವನ್ನು ಮಾಡುತ್ತಿದ್ದಾರೆ ? ಬ್ರಹ್ಮ–ವಿಷ್ಣುಗಳೇ ನೀವು ಯಾರಿಂದ ಜನ್ಮತಾಳಿದಿರಿ ? ನೀವು ಈಗ ಅಗ್ನಿಗೆ ಆಹುತಿ ಕೊಡುತ್ತಿರುವ ವೇದಮಂತ್ರಗಳು ಯಾರನ್ನು ಪ್ರಾರ್ಥಿಸುತ್ತವೆ ? ಎಂಬುದನ್ನು ಮರೆತು ಅಹಂಕಾರದಿಂದ ಅನ್ಯಾಯವಾಗಿ ಹಾಳಾದಿರಿ. ಬರುಬರುತ್ತಾ ಕುದುರೆಯ ಮರಿ ಕತ್ತೆಯಾಯಿತು ಎನ್ನುವಂತೆ ನಿಮ್ಮ ಬಾಳಾಯಿತು ಎಂದನು. ೨೧. ಅವನ ಮಾತನ್ನು ಕೇಳಿ ದಕ್ಷನು ಕೋಪದಿಂದ ಕಿಡಿಕಿಡಿಯಾದನು. ಎಲ್ಲರೂ ಬಹಳ ಕೋಪ ವನ್ನು ತಾಳಿದರು. ಸುಮ್ಮನೆ ನೀನು ಏಕೆ ಕಿರುಚುತ್ತಿದ್ದೀಯೆ ? ಅವನು ಯಾರು ?

CC-0. Jangamwadi Math Collection. Digitized by eGangotri

ಹೇಳೀಗ ನೀಂ ಬಂದ ಹದನನೆನೆ ಮುಳಿದು ಕ
ಣ್ಣಾಳಿಗಳ್ ಕೆಂಪಡರಲಿನಿಬರಂ ಸದೆವೆನೆಂ
ದಾಳೋಚನಂಗೈದು ಪತಿವಚನಮರಿದಾ ಗಣೇಶನಂದಿಂತೆಂದನು ೨೦

ಆರೆಂಬುದರಿಯಿರೇ ಕೇಳ್ ನಿಮ್ಮ ಮತ್ಸ್ಯಾವ
ತಾರದುಕ್ಕಂ ಮುರಿದ ಬ್ರಹ್ಮಶಿರವರಿದೆ ಜಗ
ದಾರಾಧ್ಯಶಿಖಿನೇತ್ರ ಶಿವದೂತನಾಂ ದೇವನಾಜ್ಞೆಯಿಂ ಯಜ್ಞಮುಖದ
ಈ ರುದ್ರಭಾಗೆಯಂ ಬೇಡ ಬಂದೆಂ ಕೊಡದ
ಕಾರಣದಿನೂಳ್ವ ನರಿ ನಾಯ್ಗಳ್ಗೆ ನಿಮ್ಮಾ ಶ
ರೀರದಡಗೌತಣಮನುಸುರಬಂದವನಲ್ಲದಾನೂಳ್ವನಲ್ಲೆಂದನು ೨೧

ಎತ್ತಣವನೀಶ್ವರಂ ರುದ್ರಭಾಗೆಯದೆತ್ತ
ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕೆ
ನುತ್ತೆ ನೂಂಕಲ್ ಬಪ್ಪ ಚರಹಸ್ತಮಂ ಕಡಿಯುಲನಿಬರುಂ ಮುಳಿದೈದಲು
ಮತ್ತೆಲ್ಲರಂ ಗೆಲ್ದು ವೀರಭದ್ರಂಗೆ ತ
ದ್ವೃತ್ತಾಂತಮಂ ತಿಳಿಪಬೇಕೆಂದು ಬಂದು ತ
ನ್ನುತ್ತಮಾಂಗಕೆ ಕಯ್ಯನಿಟ್ಟು ಬಿನ್ನೈಸಿದಂ ತಾಂ ಪೋದ ವೃತ್ತಾಂತಮಂ ೨೨

ಮಂತ್ರತಂತ್ರಗಳ ರಹಸ್ಯದ ತಿಳಿವಳಿಕೆ ನಿನಗೇಕೆ? ನೀನು ಬಂದ ಕೆಲಸವೇನು? ಈಗ ಹೇಳು ಎನ್ನಲು, ಆಗ ಗಣಾಧಿಪತಿ ಕೋಪಗೊಂಡನು. ಅವನ ಕಣ್ಣಾಲಿಗಳು ಕೆಂಪೇರಿದುವು. ಅಷ್ಟು ಜನರನ್ನೂ ಸದೆಬಡಿಯುತ್ತೇನೆಂದು ಆಲೋಚಿಸಿದನು. ಆದರೆ ತನ್ನ ಒಡೆಯನ ಮಾತನ್ನು ಜ್ಞಾಪಿಸಿಕೊಂಡು ಈ ರೀತಿ ಹೇಳಿದರು. ೨೧. ನಾನು ಯಾರೆಂದು ತಿಳಿಯದೆ ? ಹಾಗಾದರೆ ಕೇಳು. ನಿಮ್ಮ ಮತ್ಸ್ಯಾವತಾರದ ಸೊಕ್ಕನ್ನು ಮುರಿದ, ಬ್ರಹ್ಮನ ತಲೆಯನ್ನು ಕತ್ತರಿಸಿದ, ಜಗತ್ತಿನ ಆರಾಧ್ಯದೇವನಾದ ಮುಕ್ಕಣ್ಣನೆನಿಸಿದ ಶಿವನ ದೂತ ನಾನು ದೇವರ ಅಪ್ಪಣೆಯ ಪ್ರಕಾರ ಯಜ್ಞದಲ್ಲಿನ ರುದ್ರಭಾಗವನ್ನು ಕೇಳಲು ಬಂದಿದ್ದೇನೆ. ಅದನ್ನು ಕೊಡದೆ ಇರುವ ಕಾರಣ ಊಳಿಡುವ ನರಿ ನಾಯಿಗಳಿಗೆ ನಿಮ್ಮ ಈ ಶರೀರದ ಮಾಂಸದ ಔತಣವನ್ನು ಕೊಡುವೆನೆಂದು ಹೇಳಲು ಬಂದವನೇ ಹೊರತು ನಾನು ಊಳಿಡುವವನಲ್ಲ ಎಂದನು. ೨೨. ಎಲ್ಲಿಯ ಈಶ್ವರ, ಎಲ್ಲಿಯದು ಈ ರುದ್ರಭಾಗ ? ಕತ್ತು ಹಿಡಿದು ಈಗಲೇ ಈ ಬಾಯ್ಬಡುಕನನ್ನು ನೂಕು ಎಂದ ಮಾತಿಗೆ ನೂಕಲು ಬರುತ್ತಿರುವ ಚಾರರ ಕೈಯನ್ನು ಕಡಿದು, ಅಷ್ಟು ಜನರೂ ಕೋಪದಿಂದ ಮೇಲೆಬೀಳಲು ಅವರೆಲ್ಲರನ್ನೂ ಗೆದ್ದು ವೀರಭದ್ರನಿಗೆ ಈ ಎಲ್ಲ ಸಮಾಚಾರವನ್ನೂ ತಿಳಿಸಬೇಕೆಂದು ಬಂದು ತನ್ನ ತಲೆಯ ಮೇಲೆ ಕೈಯಿಟ್ಟು ನಮಸ್ಕರಿಸಿ ತಾನು ಹೋದ

CC-0. Jangamwadi Math Collection. Digitized by eGangotri

ಆ ಮಾತ ಕೇಳ್ದವಂ ತಾಳ್ದನತಿಕೋಪಮಂ
ಭೀಮಾವತಾರವೀರಂ ಪಿಡಿದು ಚಾಪಮಂ
ನೀ ಮಖಾಲಯಮಂ ಲಯಂಗೈವೆನೆಂದು ಪ್ರತಾಪಮಂ ನುಡಿದು ಮಿಡಿಯೆ
ಸೋಮಾರ್ಕರಡಗಿದರ್ ನಡುಗಿದರ್ ಶ್ರೀಪಮು
ಖ್ಯಾಮರಗಣಂಗಳಾ ಧ್ವನಿಗೇಳ್ದು ತಾಪಸರ್
ತಾವೊಡನೆ ಸುಕ್ಕಿದರ್ ಸಿಕ್ಕಿದರ್ ಪಾಪವೆಂತಪ್ಪರಂ ಕೆಡಿಸದಿಹುದೇ ೨೪

ಮೊಳಗಿದುವು ಭೇರಿಗಳ್ ಭಾರಿಗಳ್ ನಡೆದುವಾ
ಗಳೆ ಧೂಳ್ಗಳೆತ್ತಿದುವು ಮುತ್ತಿದುವು ಛತ್ರಮಂ
ತಳರ್ದುವಾ ತೇಜಿಗಳ್ ವಾಜಿಗಳ್ ಗಮಕದಿಂ ತೇರ್ಗಳಂ ಸೂಟಿಯಲ್ಲಿ
ಸುಳಿಸಿದರ್ ಸಾರಥಿಗಳಾ ರಥಿಗಳೋಜೆಯಿಂ
ಬಳಸಿದರ್ ಪೊಕ್ಕು ಮಖಶಾಲೆಯಂ ಜ್ವಾಲೆಯಂ
ಕೊಳಿಸಿದರ್ ಪಟುಭಟರ್ ಖಾತಿಯಿಂ ಭೀತಿಯಿಂ ಸಕಲ ಜನಮಳವಳಿಯಲು ೨೫

ಯಾಗಶಾಲೆಯನೊಲ್ದು ಸುತ್ತಲುಂ ಕಾವ ಶತ
ಯಾಗ ಚತುರಂಗಮಿವರುರುಬೆಯಂ ಕಂಡು ಫಡ
ಹೋಗದಿರ್ ಮಮ್ಮರೆಸಿ ಮಂಟಪಕೆ ಕಿಚ್ಚನಿಕ್ಕಿದ ಕಳ್ಳಬಂಟರಿವರಂ

ಸಮಾಚಾರವೆಲ್ಲವನ್ನೂ ವಿಜ್ಞಾಪಿಸಿಕೊಂಡನು. ೨೪. ಆ ಮಾತನ್ನು ಕೇಳಿದ ವೀರಭದ್ರನು ಅತಿಯಾದ ಕೋಪವನ್ನು ತಾಳಿದನು. ಭೀಕರಾಕಾರನಾದ ಆ ವೀರನು ಬಿಲ್ಲನ್ನು ಹಿಡಿದು, ಈ ಯಾಗಶಾಲೆಯನ್ನು ನಾಶಮಾಡುತ್ತೇನೆ ಎಂದು ವೀರಾಲಾಪ ಮಾಡಿ ಬಿಲ್ಲನ್ನು ಮೀಟಲು, ಅದರ ಶಬ್ದಕ್ಕೆ ಚಂದ್ರ-ಸೂರ್ಯರು ಅಡಗಿಹೋದರು. ವಿಷ್ಣು ಮುಂತಾದ ಮುಖ್ಯ ದೇವಸಮೂಹ ನಡುಗಿತು. ಆ ಶಬ್ದ ಕೇಳಿ ಋಷಿಗಳು ಒಡನೆಯೆ ಅಂಜಿ ಕುಗ್ಗಿಹೋದರು. ಪಾಪವು ಎಂತಹವರನ್ನಾದರೂ ನಾಶಮಾಡದೆ ಇರುತ್ತದೆಯೆ ? ೨೫. ಎಲ್ಲ ಜನರೂ ಹೆದರಿಕೆಯಿಂದ ಶಕ್ತಿಗುಂದುತ್ತಿರಲು ಭೇರಿಗಳು ಆರ್ಭಟಿಸಿದುವು, ಸೈನ್ಯ ಸಮೂಹ ಹೊರಟಿತು. ಆಗ ಧೂಳೆದ್ದು ಕೊಡೆಗಳನ್ನು ಮುಸುಕಿದುವು. ಕುದುರೆಗಳು ಠೀವಿ, ಉತ್ಸಾಹಗಳಿಂದ ಹೊರಟವು. ರಥಗಳನ್ನು ಸಾರಥಿಗಳು ಚುರುಕಾಗಿ ನಡೆಸಿದರು. ರಥಿಕರು ಅವುಗಳನ್ನು ಯೋಗ್ಯರೀತಿಯಲ್ಲಿ ಬಳಸಿಕೊಂಡರು. ವೀರಭಟರು ಸಿಟ್ಟಿನಿಂದ ಯಾಗಶಾಲೆಯನ್ನು ಹೊಕ್ಕು ಅದಕ್ಕೆ ಬೆಂಕಿಯಿಟ್ಟರು. ೨೬. ಯಾಗಶಾಲೆಯನ್ನು ಸುತ್ತಲೂ ಕಾಯುತ್ತಿದ್ದ ಇಂದ್ರನ ಚತುರಂಗಸೈನ್ಯ ಇವರ ಆವೇಶವನ್ನು ಕಂಡು ಛಿ! ಛಿ! ಹೋಗಬೇಡ. ನಮ್ಮನ್ನು ಮರೆಸಿ ಯಾಗಮಂಟಪಕ್ಕೆ ಬೆಂಕಿಯಿಟ್ಟ

CC-0. Jangamwadi Math Collection. Digitized by eGangotri

ಬೇಗದಿಂ ಪಿಡಿಯೆನುತ್ತೊದಗಿ ಬರುತಿರ್ಪರಂ
ತಾಗಿ ತಲೆಗಳನರಿದು ಮುಂಡರುಂಡಂಗಳಂ
ಮೇಗಣಿಂ ಹೋಮಕುಂಡದೊಳ್ಬೆದೆ ಕೆಡಪಿದರ್ ಮಡುಪಿದರ್ ಸುರಭಟರನು ೨೬

ಆನೆ ಕುದುರೆಗಳ ಶುಂಡಿಲ್ಗಳುಂ ಕಾಲ್ಗಳುಂ
ನಾನಾ ಭಟಾಳಿಗಳ ಬಾಳ್ಗಳುಂ ತೋಳ್ಗಳುಂ
ನೂನರಥಿಕರ ತಲೆಗಳೋಳ್ಗಳುಂ ಸೀಳ್ಗಳುಂ ಬಾನಿಂದೆ ಬೀಳುತಿರಲು
ಏನಿದಚ್ಚರಿಯೆಂದು ನೋಡಿದರ್ ಬಾಡಿದರ್
ಹಾನಿಯುಂ ಕೆಟ್ಟೆವೆನುತಾಡಿದರ್ ಕೋಡಿದರ್
ತಾನೆ ತನಗೆದ್ದು ಬಿದ್ದೋಡಿದರ್ ಮಾಡಿದರ್ ಭೀತಿಯುಂ ಸುರಮುನಿಗಳು ೨೭

ಒಳಗೆ ಗಜಬಜವಾದುದಾಕ್ಷಣಂ ಭಾವಿಸಲ್
ಹಳಸಿದುದು ಯಜ್ಞಗಿಜ್ಞದ ಮಾತಜೇಂದ್ರರುಂ
ಕಳವಳಿಸಿದರ್ ಮುನಿಜನಾಳಿ ಬಾಯ್ಬಿಡುತಿರ್ದುದಸುರಾಂತಕಂ ಮನದೊಳು
ತಿಳಿದನೀ ಹದನನರಿದೆಸಗಿ ಪಶ್ಚಾತ್ತಾಪ
ದೊಳಗದೇಂ ಕಾರಣಂ ಕಂಡುದಂ ಕಾಣ್ಬೆನಿಂ
ಹಳಚಿನೋಡುವೆನೆನುತ್ತೋಡುವ ಸುರಾಳಿಯಂ ಕೂಡಿ ಹುರಿಗೈದನಂದು ೨೮

ಕಣ್ಗೆಟ್ಟ ದಿಗ್ಪಾಲಪಾಲರಂ ಭೀತಿಯಿಂ
ನಾಣ್ಗೆಟ್ಟ ಸರ್ವಗಂಧರ್ವರಂ ಪರಿದೆಯ್ದಿ
ಗೋಣ್ಗಳಂ ತಡವರಿಪ ಯಕ್ಷರಕ್ಷರ್ಕಳಂ ಸುಗಿದ ಕಿನ್ನರ ನರರನು

ಕಳ್ಳರಿವರು. ಇವರನ್ನು ಬೇಗ ಹಿಡಿ ಎನ್ನುತ್ತ ಏರಿಬಂದಿತು. ಈ ರೀತಿ ಬರುತ್ತಿರುವ ದೇವಸೈನಿಕರನ್ನು ಎದುರಿಸಿ, ತಲೆಗಳನ್ನು ಕಡಿದು, ದೇಹ–ತಲೆ ಎರಡನ್ನೂ ಮೇಲಿನಿಂದ ಹೋಮಕುಂಡದಲ್ಲಿ ಬೀಳುವಂತೆ ಹಾಕಿದರು, ಸಾಯಿಸಿದರು, ೨೭. ಆನೆ, ಕುದುರೆಗಳ ಸೊಂಡಿಲು ಮತ್ತು ಕಾಲುಗಳು, ನಾನಾ ಭಟಸಮೂಹದ ಕತ್ತಿಗಳು, ತೋಳುಗಳು, ಹೀನ ರಥಿಕರ ತಲೆಗಳ ಹೋಳುಗಳು ಸೀಳುಗಳು ಆಕಾಶದಿಂದ ಕೆಳಕ್ಕೆ ಬೀಳುತ್ತಿರಲು, ದೇವ ಮುನಿಗಳು ಇದೇನು ಆಶ್ಚರ್ಯ ಎಂದು ನೋಡಿದರು, ಕಂದಿದರು, ಸರ್ವನಾಶವಾಯಿತು, ನಾವು ಕೆಟ್ಟೆವು ಎನ್ನುತ್ತ ಕೂಗಾಡಿದರು, ಹಿಂಜರಿದರು, ತಮಷ್ಟಕ್ಕೆ ತಾವೇ ಎದ್ದು ಬಿದ್ದೋಡಿದರು, ಭೀತಿಗೊಂಡರು. ೨೮. ಆಕ್ಷಣ ಒಳಗಡೆ ಗೊಂದಲವಾಯಿತು. ನೋಡಲು ಯಜ್ಞ-ಗಿಜ್ಞದ ಮಾತು ಹಾಳಾಯಿತು. ಬ್ರಹ್ಮ ದೇವೇಂದ್ರರು ಕಳವಳ ಪಟ್ಟರು. ಋಷಿಗಳ ಸಮೂಹ ಬಾಯ್ಬಿಡುತ್ತಿದ್ದಿತು. ಈ ಎಲ್ಲ ವಿಷಯವನ್ನೂ ವಿಷ್ಣುವು ಮನಸ್ಸಿನಲ್ಲೇ ತಿಳಿದು, ಮಾಡಿದ ಕೆಲಸಕ್ಕೆ ಪಶ್ಚಾತ್ತಾಪಪಟ್ಟರೆ ಏನು ಪ್ರಯೋಜನ, ಬಂದದ್ದನ್ನು ಎದುರಿಸೋಣ, ಎದುರಿಸಿ ನೋಡುತ್ತೇನೆ ಎನ್ನುತ್ತ, ಓಡುತ್ತಿರುವ ದೇವತೆಗಳ ಸಮೂಹವನ್ನು ಒಟ್ಟುಗೂಡಿಸಿ ಧೈರ್ಯ ತುಂಬಿದನು. ೨೯. ಕಂಗೆಟ್ಟ ದಿಕ್ಪಾಲಕರನ್ನೂ, ಹೆದರಿಕೆಯಿಂದ ನಾಚಿಕೆಬಿಟ್ಟ ಎಲ್ಲ ಗಂಧರ್ವರನ್ನೂ, ಓಡಿಹೋಗಿ

CC-0. Jangamwadi Math Collection. Digitized by eGangotri

ಬಿಣ್ಗತ್ತಿಗಳನುಗಿದ ಸಿದ್ಧಸಾಧ್ಯರ ನೋಡಿ
ಮಾಣ್ಗೆ ನಿಮ್ಮಯ ಭಯಂ ಪೋಪೆವಿದೆ ಕಾಳೆಗಕೆ
ಪಣ್ಗಿಜಾಶ್ವಮನೆನುತೆ ನಡೆದನಾ ಗರುಡವಾಹನ ಮಹಾಸತ್ತ್ವದಿಂದೆ ೨೯

ಭೋರ್ಗರೆದುವನಿತರೊಳ್ ಸಾಳನಿಃಸಾಳಮಾ
ತೇರ್ಗಳ ಪೊದರ್ ಪೊವಲ್ದೈದಿದುವು ಮೈಬೆಮರ್
ನೀರ್ಗಳೊಗೆಯಲ್ ವಾಜಿರಾಜಿ ನಡೆದುದು ಭಟರ್ ಲಟಕಟಿಸಿ ಮುಂಕೊಂಡರು
ಕಾರ್ಗಾಲದಭ್ರಮೆನಲಾನೆಗಳ್ ನಡೆದುವನಿ
ಬರ್ಗೂಡಿ ಜಂಭಾರಿಯಿಂ ಭಾರಿಯಂಕಕ್ಕೆ
ದಿರ್ಗೊಳಿಸಿ ನಡೆತಂದನಖಿಳಸುರಸೇನೆಯೊಡವರಲಂದು ದೇವೇಂದ್ರನು ೩೦

ಕೇಳ್ ಸುಗುಣಭೂಪ ನೀಂ ಸಿದ್ಧರಾಮೇಶ ಸುರ
ರಾಳ್ ಸುಳಿದುದಾಗಳೈನೂರ್ಪದ್ಮಮಭವಬಲ
ದೊಳ್ ಸವಿಾಪದ ಚೂಣಿಯೊಳ್ ದೊರೆಗೆ ದೊರೆಗಳಾ ರಥಕೆ ರಥಮಶ್ವಕಶ್ವಂ
ಆಳ್ ಸುಭಟರೊಳ್ ಮದೇಭಂಗಳ್ಗೆ ಮದದಾನೆ
ಗಳ್ ಸಮಮೆನಲ್ಕಿಂತು ಕಾದುತಿರ್ದರ್ ಪೊಯಿಲ
ಸೂಳ್ ಸುರಿಯೆ ಕಿಡಿಗಳಂ ನುಡಿಗಳಡಿಗಡಿಗೆ ಮೂದಲಿಸೆ ಕೇಳದ್ಭುತವನು ೩೧

ತಲೆತುರಿಸಿಕೊಳ್ಳುತ್ತಿದ್ದ ಯಕ್ಷರಕ್ಷರುಗಳನ್ನೂ, ಹಿಮ್ಮೆಟ್ಟಿದ್ದ ಕಿನ್ನರರು ಮತ್ತು ನರರನ್ನೂ, ಭಾರವಾದ ಕತ್ತಿಗಳನ್ನೂ, ಎಸೆದಿದ್ದ ಸಿದ್ಧ-ಸಾಧ್ಯರನ್ನೂ ನೋಡಿ ನಿಮ್ಮ ಭಯ ನಿಲ್ಲಿಸಿ, ಇದೋ ಯುದ್ಧಕ್ಕೆ ಹೋಗುತ್ತೇನೆ, ಆನೆ ಕುದುರೆಗಳನ್ನು ಸಿದ್ಧಗೊಳಿಸಿ ಎನ್ನುತ್ತ ವಿಷ್ಣುವು ಮಹಾವೈಭವದಿಂದ ಹೊರಟನು. ೩೦. ಅಷ್ಟರಲ್ಲಿ ನಗಾರಿ-ಭೇರಿಗಳು ಧ್ವನಿ ಮಾಡಿದುವು. ರಥಗಳ ಗುಂಪು ವ್ಯಾಪಿಸಿ ಹೊರಟವು. ಮೈಬೆವರಿನ ನೀರು ಹರಿಯುತ್ತಿರಲು ಕುದುರೆಗಳ ಸಮೂಹ ನಡೆಯಿತು. ಭಟರು ಉತ್ಸಾಹಿಸಿ ಮುಂದೆ ಹೊರಟರು, ಮಳೆ ಗಾಲದ ಮೋಡಗಳೊ ಎನ್ನುವಂತೆ ಆನೆಗಳು ನಡೆದುವು. ಅವರೆಲ್ಲ ಸೇರಿಕೊಂಡು ದೇವೇಂದ್ರನನ್ನೂ ಭೀಕರ ಯುದ್ಧಕ್ಕೆ ಎದುರಾಗಿಸಿದರು. ಆಗ ಸಕಲ ದೇವಸೈನ್ಯದೊಡನೆ ಕೂಡಿ ದೇವೇಂದ್ರನು ಹೊರಟುಬಂದನು. ೩೧. ಕೇಳಯ್ಯ, ಉತ್ತಮಗುಣಗಳೇ ಭೂಷಣನಾದ ಸಿದ್ಧರಾಮಣ್ಣ, ಆಗ ಐನೂರು ಪದ್ಮಗಳಷ್ಟು ದೇವತೆಗಳ ಸೈನ್ಯ ಹೊರಟಿತು. ಶಿವನ ಸೈನ್ಯದ ಮುಂಭಾಗದಲ್ಲಿ ನಾಯಕರಿಗೆ-ನಾಯಕರು, ರಥಕ್ಕೆ ರಥ, ಕುದುರೆಗೆ ಕುದುರೆ, ಸೈನಿಕರಿಗೆ ಸೈನಿಕರು, ಮದಿಸಿದ ಆನೆಗಳಿಗೆ ಆನೆಗಳು ಸಮವೆನ್ನುವಂತೆ ಮೇಲಿಂದ ಮೇಲೆ ಹೊಡೆತ ಬೀಳುತ್ತಿರಲು, ಮೂದಲಿಕೆ ಮಾತುಗಳು ಮತ್ತೆ ಮತ್ತೆ ಕಿಡಿ

CC-0. Jangamwadi Math Collection. Digitized by eGangotri

ನೂಂಕಿ ಗಜದಿಂ ತಿವಿಸಿದರ್ ಮಾವುತರ್ ಮುಡದೊ
ಳೌಂಕಿ ಹಯದಿಂದಿರಿದರಾ ರಾವುತರ್ ಕರುಳ್
ಸೋಂಕೆ ಸರಳೆಚ್ಚಾಡಿದರ್ ವರರೂಥಾರೋಹಕರ್ ಭಟರ್ ಖಾತಿಯಿಂದೆ
ಅಂಕೆಗೊಂಡಿರಿದು ತರಿದರ್ ತಲೆಯುನಟ್ಟೆಗ
ಳ್ತೆಂಕೆ ರಕ್ತಂ ಪೊನಲ್ವರಿಯಲಜಿಗಿಜಿಯಿಂ ರ
ಣಾಂಕಣಂ ಕೆಸರಾಗಿ ಕಾಗೆಗೂಗೆಗಳಾಗ ಮೇಲೆ ನಲಿಯಲ್ ಬಲದೊಳು ೩೨

ಇರ್ಬಲಂ ಸಮನಾಗಿ ಕಾದಲಿಂದ್ರನ ಮುಳಿಸು
ಪರ್ಬೆ ಕಂಡಖಿಳ ದಿಕ್ಪಾಲಕರ್ ತಂತಮ್ಮ
ಸರ್ಬಬಲಸನ್ನಾಹದಿಂದೊತ್ತಿ ಕೋಪದಿಂದಂಬುಗಳ ಪೆರ್ಮಳೆಯನು
ಒರ್ಬೊರ್ಬರೊಂದು ಕಡೆಯೊಳ್ ನಿಲ್ತು ಕರೆವುತಾ
ಪೆರ್ಬಡೆಯನೊಳಪೊಕ್ಕು ಬರೆ ಕಂಡು ವಿಕ್ರಮದ
ಗರ್ಬದಿಂ ವೀರೇಶನಾರ್ಭಟಿಸಿ ಕೈದೋರಿದದ್ಭುತವನೇನೆಂಬೆನು ೩೩

ಬಾಯ್ಗಳಂ ಕೊಯ್ ಬೀಳಹೊಯ್ ಕಾಯ್ದುವೆಣ್ದೆಸೆಯ
ನಾಯ್ಗಳಂ ಕರುಳ್ಗಳಂ ತಿನಿಸಾ ಮರುಳ್ಗೆನುತೆ
ಬಯ್ಗಳಿನ ಬೊಬ್ಬೆಯಿಂ ವೀರೇಶನೆಸೆಯಲಿಂದ್ರಾದ್ಯಷ್ಟದಿಕ್ಪಾಲರ

ಹಾರುತ್ತಿರಲು ಯುದ್ಧ ಮಾಡುತ್ತಿದ್ದರು. ಆ ಅದ್ಭುತವನ್ನು ಕೇಳು. ೩೨. ಸೈನ್ಯದಲ್ಲಿ ಮಾವುತರು ಮುನ್ನಡೆದು ಆನೆಗಳಿಂದ ತಿವಿಸಿದರು. ರಾವುತರು ಹಿಮ್ಮಡಿಯಿಂದ ಕುದುರೆಗಳನ್ನು ಒತ್ತಿ ಈಟಿಗಳಿಂದ ತಿವಿದರು. ರಥಾರೋಹಿಗಳು ಕರುಳನ್ನು ಸೋಕುವಂತೆ ಬಾಣಗಳಿಂದ ಹೊಡೆದಾಡಿದರು. ಅತಿಯಾದ ಕೋಪದಿಂದ ಭಟರು ಹಿಡಿತಕ್ಕೆ ಸಿಕ್ಕಿಸಿಕೊಂಡು ತಿವಿದು ತಲೆಯನ್ನು ಕಡಿದರು. ದೇಹಗಳು ತೇಲಾಡುವಂತೆ ರಕ್ತವು ಹೊಳೆಯಾಗಿ ಹರಿಯಲು ಗಜಿಬಿಜಿಯಿಂದ ರಣಾಂಗಣವು ಕೆಸರಾಯಿತು. ಕಾಗೆ-ಗೂಗೆಗಳು ಮೇಲೆ ಹಾರಾಡಿದುವು. ೩೩. ಎರಡು ಬಲವೂ ಸಮನಾಗಿ ಕಾದಾಡಿದುವು. ಆಗ ಇಂದ್ರನ ಕೋಪ ಹೆಚ್ಚಾಯಿತು. ಅದನ್ನು ನೋಡಿದ ಎಲ್ಲ ದಿಕ್ಪಾಲಕರೂ ತಮ್ಮ ತಮ್ಮ ಎಲ್ಲ ಸೈನ್ಯಗಳಿಂದಲೂ ಮೇಲೆಬಿದ್ದು ಕೋಪದಿಂದ ಒಬ್ಬೊಬ್ಬರೂ ಒಂದೊಂದು ಕಡೆಯಲ್ಲಿ ನಿಂತು ಬಾಣಗಳ ದೊಡ್ಡ ಮಳೆ ಸುರಿಸುತ್ತಾ ಆ ದೊಡ್ಡಸೈನ್ಯದ ಒಳಹೊಕ್ಕು ಬರಲು ಇದನ್ನು ನೋಡಿ ಪರಾಕ್ರಮದ ಗರ್ವದಿಂದ ವೀರಭದ್ರನು ಅಬ್ಬರಿಸಿ ತನ್ನ ಸಾಮರ್ಥ್ಯವನ್ನು ತೋರಿಸಿದನು. ಆ ಅದ್ಭುತವನ್ನು ಏನೆನ್ನಲಿ ? ೩೪. ಯುದ್ಧ ಮಾಡುತ್ತಿರುವ ಎಂಟು ದಿಕ್ಕಿನ ನಾಯಿ (ದಿಕ್ಪಾಲಕ) ಗಳ ಬಾಯಿಗಳನ್ನೂ ಕೊಯ್ಯಿ, ಬೀಳುವಂತೆ ಹೊಡೆ, ಭೂತ-ಪ್ರೇತಗಳಿಗೆ ಕರುಳನ್ನು ತಿನ್ನಿಸು ಎನ್ನುತ್ತ ಬೈಗುಳ ಕೂಗಾಟದಿಂದ ವೀರೇಶನು

CC-0. Jangamwadi Math Collection. Digitized by eGangotri

ಮಯ್ಗಳಂ ಕೊಯ್ದೆತ್ತಿ ನಭಕೆ ಕೊಂಡೊಯ್ಯುತಿರೆ
ಬಾಯ್ಗಳುಣ್ಮಿದುವವರ ವದನದೊಳ್ ಪೇಳ್ವುದೇ
ಮುಯ್ಗಳಗ್ನಿಯ ಮುಂದೆ ನಿಲ್ವುವೇ ಕಾಣೆನಳವಿಯೊಳವರ್ಗಳನೆಂದನು ೩೪

ಆ ಸೂರ್ಯಮಂಡಲ ಸಮೀಪಕ್ಕೆ ಪೋಗಿ ಬಳಿ
ಕೀ ಸುಧಾಹಾರಿಗಳ್ ಭೂತಳಕೆ ಬೀಳುತ್ತ
ದೇಸು ಬಲ್ಪೋ ಪೊಸ ರಥಂಗಳೊಳ್ ನಿಂತು ಬೊಬ್ಬಿಡುತೆಂದರಿದಿರಾಗದೆ
ಮೋಸದೊಳಗೆಚ್ಚು ನಭಕೆಬ್ಬಿಸಿದ ಬಲ್ಪನೆ
ಮಿಮ್ಮ ಸರಿಸದೊಳ್ ತೋರೆ ಕಾಣಬಹುದೆಂದೆನುತೆ
ಸಾಸಿರ ಸರಳ್ಗಳನವೋರೊರ್ವರೆಚ್ಚರಂದಾ ರುದ್ರಗಣದ ಮೇಲೆ ೩೫

ಸಿಡಿಲ ಭರವೆತ್ತ ಶಿಶುಗಳ ಬಳಗವೆತ್ತ ಗುಡು
ಗುಡಿಪ ಸಿಂಹಮದೆತ್ತ ಸೀಳ್ನರಿಗಳೆತ್ತಲಾ
ಮೃಡನ ಸುತನೆತ್ತ ಸುರರದಟೆತ್ತ ಕಾದುವೊಡೆ ಕೇಳಿದೈ ಸಿದ್ಧರಾಮ
ಕಡಿದನನಿಬರ ಸರಳ ಸಾರವಂ ಮತ್ತೆಚ್ಚು
ಪಿಡಿದ ಕಾರ್ಮುಕ ಛತ್ರ ಚಮರ ಹಯ ಸಾರಥಿಗ
ಳೊಡವೆರೆದ ತೇರ್ಗಳಂ ಕತ್ತರಿಸಿ ಸಮ್ಮುಖದೆ ಳಾರ್ಭಟಿಸಿ ನಿಂದಿರ್ದನು ೩೬

ಬಾಣ ಪ್ರಯೋಗಿಸಿದನು. ಅದು ಇಂದ್ರ ಮುಂತಾದ ಅಷ್ಟದಿಕ್ಪಾಲಕರ ಮೈಗಳನ್ನು ಕೊಯ್ದು ಎತ್ತಿ ಆಕಾಶಕ್ಕೆ ತೆಗೆದುಕೊಂಡು ಹೋಗುತ್ತಿರಲು ಅವರ ಮುಖದಿಂದ ನಿಟ್ಟುಸಿರು ಹೊರಟಿತು. ಏನು ಹೇಳುವುದು ? ಬೆಂಕಿಯ ಮುಂದೆ ಹೊಟ್ಟು ನಿಲ್ಲುತ್ತದೆಯೆ ? ಸಾಮರ್ಥ್ಯದಲ್ಲಿ ಅವರಂತಹವರನ್ನು ಎಲ್ಲಿಯೂ ನೋಡಿಲ್ಲ. ೩೫. ಆ ಸೂರ್ಯಮಂಡಲದ ಸಮೀಪಕ್ಕೆ ಹೋಗಿ ಬಳಿಕ ಆ ದೇವತೆಗಳು ನೆಲಕ್ಕೆ ಬೀಳುತ್ತ, ಅದೆಷ್ಟು ಸಾಮರ್ಥ್ಯವೊ ! ಹೊಸರಥಗಳನ್ನು ಏರಿ ಅಬ್ಬರಿಸುತ್ತ ಈ ರೀತಿ ಎಂದರು. ಎದುರಿಗೆ ಬರದೆ ಮೋಸದಿಂದ ಹೊಡೆದು ಆಕಾಶಕ್ಕೆ ಹಾರಿಸಿದ ಸಾಮರ್ಥ್ಯವನ್ನು ಎದುರಿನಲ್ಲಿ ತೋರಿಸಿದರೆ ನೋಡುತ್ತೇವೆ ಎಂದು ಸಾವಿರ ಬಾಣಗಳನ್ನು ಒಬ್ಬೊಬ್ಬರೇ ಆ ರುದ್ರಗಣದ ಮೇಲೆ ಅವರು ಪ್ರಯೋಗಿಸಿದರು. ೩೬. ಕೇಳಿದೆಯಾ ಸಿದ್ಧರಾಮ, ಯುದ್ಧ ಮಾಡುವುದಾದರೆ ಸಿಡಿಲರಭಸಕ್ಕೆ ಎಳೆಯಮಕ್ಕಳ ಸಮೂಹ ಸಮವೆ ? ಗರ್ಜಿಸುವ ಸಿಂಹಗಳಿಗೆ ಸೀಳ್ನರಿಗಳು ಸಾಟಿಯೆ ? ಆ ಶಿವನ ಮಗನಿಗೆ ದೇವತೆಗಳ ಸಾಮರ್ಥ್ಯ ಸಮವೆ ? ಅಷ್ಟು ಜನರ ಬಾಣಗಳನ್ನೂ ಕಡಿದುಹಾಕಿದನು. ಪ್ರತಿಯಾಗಿ ಬಾಣ ಪ್ರಯೋಗಿಸಿ ಅವರು ಹಿಡಿದಿದ್ದ ಬಿಲ್ಲು, ಛತ್ರ, ಚಾಮರ, ಕುದುರೆ, ಸಾರಥಿ, ಹತ್ತಿದ್ದ ರಥಗಳನ್ನೂ ಕತ್ತರಿಸಿ ಅವರ ಎದುರಿಗೆ ಆರ್ಭಟಿಸುತ್ತ ನಿಂತಿದ್ದನು.



CC-0. Jangamwadi Math Collection. Digitized by eGangotri

ಕಂಡು ಹಮ್ಮೈಸಿದರ್ ಕೆಲಕೆಲಂಬರ್ ಭಯಂ
ಗೊಂಡು ಬಿಳ್ದರ್ ಪಲಂಬರ್ ಮುಂದುಗೆಟ್ಟೆರ್ದೆಯ
ಗುಡಿಗೆಗಳೊಡೆದವರೆಬರಾಚರಿಸಿದರ್ ನಡುಗಿದರ್ ನಲವುಗೆಟ್ಟನಿಬರು
ಕಂಡಕಡೆಗಾಲಿ ಪರಿದೊಡನೆ ತಮತಮಗೆ ಪುಂ
ಕೊಂಡೆಲ್ಲರೆದ್ದು ಬಿದ್ದೋಡಿಯಾ ಸರಸತಿಯ
ಗಂಡನಂ ಮರೆವೊಕ್ಕುದಖಿಳದಿಕ್ಪಾಲಕರ ತಂಡಮದನೇನೆಂಬೆನು ೩೭

ಬಿಡುಮುಡಿಗಳಿಂ ತಪ್ಪುನುಡಿಗಳಿಂ ನಡೆಗಳಿಂ
ನಿಡುಸುಯ್ಗಳಿಂದೊಡೆದ ಮೆಯ್ಗಳಿಂ ಕೆಯ್ಗಳಿಂ
ಕಡುಬರೆತ ವದನದಿಂ ರದನದಿಂ ಪದನದಿಂಪಳಿದಧರದಮರನಿಕರಂ
ಸೆಡೆದ ಪಿನ್ನೋಟದಿಂದೋಟದಿಂ ಘಾಟದಿಂ
ಕಡಿವಡೆದ ಕಾಲ್ಗಳಿಂ ಪಲ್ಗಳಿಂದೆಲ್ಗಳಿಂ
ದೊಡನೊಡನೆ ನೊಂದು ವಿಧಿಯೊಳ್ ಚೀರಿ ದೂರಿ ತೋರಿದರದ್ಭುತಾಕಾರನು ೩೮

ಆರಿವಂ ವಿಲಯಯಮಾರಾರಿಯೋ ಮಾರಿಯೋ
ಸಾರಿದಂ ಕಾರ್ಮುಗಿಲ ತಾತನೋ ಭೂತನೋ
ಭೂರಿವೈರಿಪ್ರಾಣಹಾರನೋ ವೀರನೋ ನೋಡಭುಜಭವ ಪೇಳನು

೩೭. ಅವನನ್ನು ನೋಡಿ ಕೆಲವರು ಮೂರ್ಛೆಗೊಂಡರು. ಕೆಲಕೆಲವರು ಭಯಗೊಂಡು ನೆಲಕ್ಕೆ ಬಿದ್ದರು. ಹಲವರು ದಾರಿಗಾಣದೆ ಎದೆಯೊಡೆದು ಸತ್ತರು. ಮತ್ತೆ ಅರ್ಧಜನ ಅತ್ತಿತ್ತ ಅಲೆದರು. ಕೆಲವರು ಸಂತೋಷಗೆಟ್ಟು ನಡುಗಿದರು. ಸಿಕ್ಕಸಿಕ್ಕಿದ ಕಡೆಗೆ ದೃಷ್ಟಿಯನ್ನು ಹಾಯಿಸಿ ಕಡೆಗೆ ತಮ್ಮಷ್ಟಕ್ಕೆ ತಾವು ಹೋದರು. ಕಡೆಗೆ ಎದ್ದುಬಿದ್ದು ಓಡಿ ಎಲ್ಲ ದಿಕ್ಪಾಲಕರ ಗುಂಪೂ ಬ್ರಹ್ಮನ ಮರೆಹೊಕ್ಕಿತು. ೩೮. ಕೆದರಿದ ತಲೆಗಳಿಂದ, ತಡವರಿಸುವ ಮಾತುಗಳು ಮತ್ತು ನಡೆಗಳಿಂದ, ನಿಟ್ಟುಸಿರುಗಳಿಂದ, ಒಡೆದುಹೋದ ಮೈಕೈಗಳಿಂದ, ಒಣಗಿದ ಮುಖದಿಂದ ಮತ್ತು ಹಲ್ಲುಗಳಿಂದ, ರೀತಿಯಳಿದ, ರುಚಿ ಹಿತಗಳಿಲ್ಲದ ತುಟಿಗಳಿಂದ ದೇವತೆಗಳ ಸಮೂಹ ಹಿಂದೆ ನೋಡಲು ಹೆದರಿ, ಓಟದಿಂದ ತಾಗಿ ಒಡೆದ ಅಂಗಾಲುಗಳಿಂದ, ಹಲ್ಲುಗಳಿಂದ, ಎಲುಬುಗಳಿಂದ ಬಹಳವಾಗಿ ನೊಂದು ಬ್ರಹ್ಮನಲ್ಲಿ ಆರ್ತಧ್ವನಿಯಿಂದ ದೂರಿಕೊಂಡು ಆ ಭಯಂಕರಾಕಾರವನ್ನು ತೋರಿಸಿದರು. ೩೯. ಯಾರಿವನು ? ಪ್ರಳಯಕಾಲದ ರುದ್ರನೊ ? ಮಾರಿಯೊ ? ಸಮೀಪಕ್ಕೆ ಬಂದವನು. ಕಾರ್ಮುಗಿಲ ತಂದೆಯೊ ? (ಸಿಡಿಲು), ಭೂತವೊ ? ವೈರಿಗಳಾದ ಪ್ರಾಣಿಗಳನ್ನು ಕೊಲ್ಲತಕ್ಕವನೊ, ವೀರನೊ ? ಬ್ರಹ್ಮದೇವರೇ ನೋಡಿ ? ಒಳ್ಳೆಯದನ್ನು

CC-0. Jangamwadi Math Collection. Digitized by eGangotri

ಆರಯ್ಯದೀ ಯಾಗರೋಗಮಂ · ತೊಡಗಿದರ
ದಾರಯ್ಯ ನಿಮ್ಮನಿಂ ಕಾವ ದೇವರ್ ತೋರಿ
ಸಾರಯ್ಯಮಾದ ಕದನದೊಳೆಂದು ನೊಂದು ಸುರಕುಲವೈದೆ ಮೊರೆಯಿಟ್ಟುದು ೩೯

ಕೇಳಿ ಕಾಹೇರಿದಂ ಮೀರಿದಂ ಸಾರಿದಂ
ಕಾಳೆಗದುನುಬ್ಬಿನಿಂ ಕೊಬ್ಬಿನಿಂ ತಬ್ಬಿನಿಂ
ತೂಳಲಿಭವಳ್ಕುವುದೆ ಬಳ್ಕುವುದೆ ತುಳ್ಕುವುದೆ ನಾಡೆ ಭಯರಸವೆಮ್ಮೊಳು
ಏಳಿಪನರಾತಿಯಿಂ ಹೇತಿಯಿಂ ಖಾತಿಯಿಂ
ತಾಳದಿರಿ ಸುರಬಲಂ ನರಬಲಂ ಪರಬಲಂ
ತೂಳೆ ಸುತ್ತಲ್ ಮುತ್ತಲೊತ್ತಲೆಂದಬ್ಜಗರ್ಭಂ ಗರ್ಜಿಸುತ್ತೆಳ್ದನು ೪೦

ಕೆಟ್ಟೋಡಿದಸುರ ಸುರ ನರ ಭುಜಂಗರ್ ಭೀತಿ
ಬಿಟ್ಟೋಡಿದಬ್ಜಾರ್ಕ ವಸು ಮನುಗಳೊಡೆಯನಂ
ಬಿಟ್ಟೋಡಿದಪ್ಸರರ್ ಕಿನ್ನರರ್ ಸಿದ್ಧ ವಿದ್ಯಾಧರರ್ ಕಿಂಪುರುಷರು
ದಟ್ಟೈಸಿದರ್ ಜಗತ್ಪಿತನೇಮದಿಂದೆ ಪೊರ
ಮಟ್ಟೈಸು ವಾದ್ಯಘೋಷಣೆಗಳಿಂ ನಡೆತಂದು
ಮುಟ್ಟೈಸಿ ಮುತ್ತಿ ಮೂದಲಿಸಿದರ್ ಬಲಿಸಿದರ್ ಕಲಹಮದನೆ·ನೆಂಬೆನು ೪೧

ಆಲೋಚಿಸದೆ ಈ ಯಾಗರೋಗಕ್ಕೆ ತೊಡಗಿದಿರಿ. ಈ ರಮ್ಯವಾದ ಯುದ್ಧದಲ್ಲಿ ನಿಮ್ಮನ್ನು ನಮ್ಮನ್ನು ಕಾಪಾಡುವ ದೇವರು ಯಾರಿದ್ದಾರೆ ತೋರಿಸಿ ? ಎಂದು ನೊಂದು ದೇವತೆಗಳ ಸಮೂಹ ಬಹುವಾಗಿ ಮೊರೆಯಿಟ್ಟಿತು. ೪೦. ಇದನ್ನು ಕೇಳಿ ಬ್ರಹ್ಮನು ಕಾವೇರಿದನು, ಮಿತಿಮೀರಿದನು, ಉತ್ಸಾಹದಿಂದ ಯುದ್ಧದ ಡಂಗುರ ಹೊಡೆಸಿದನು. ಗರ್ವದ ನೆಚ್ಚಿಕೆಯಿಂದ ಮೇಲೆ ಬಿದ್ದರೆ ಆನೆ ಹೆದರುವುದೆ ? ನಡುಗುವುದೆ ? ಆಯುಧ ದಿಂದ ಕೋಪದಿಂದ ಅಪಹಾಸ್ಯ ಮಾಡುವ ಶತ್ರುವಿನಿಂದ ನಮಗೆ ಭಯವುಂಟಾಗುತ್ತ ದೆಯೆ ? ಶತ್ರುಸೈನ್ಯ ಮೇಲೆ ಬಿದ್ದು ಸುತ್ತ.ಮುತ್ತಿ ನೂಕಲಿ, ದೇವತೆಗಳ ಸೈನ್ಯ ಮತ್ತು ನರಬಲ ತಡೆಯದೆ ಇರಿಯಿರಿ ಎಂದು ಗರ್ಜಿಸುತ್ತ ಬ್ರಹ್ಮನು ಮೇಲೆದ್ದನು. ೪೧. ದಿಕ್ಕೆಟ್ಟು ಓಡಿದ ರಾಕ್ಷಸರು, ದೇವತೆಗಳು, ನರರು, ನಾಗರು, ಭಯಬಿಟ್ಟು ಓಡಿದ ಚಂದ್ರ, ಸೂರ್ಯ, ವಸು, ಮನುಗಳು, ತಮ್ಮ ನಾಯಕನನ್ನು ಬಿಟ್ಟು ಓಡಿಹೋದ ಅಪ್ಸರರು, ಕಿನ್ನರರು, ಸಿದ್ಧರು, ವಿದ್ಯಾಧರರು, ಕಿಂಪುರುಷರು ಒಟ್ಟುಗೂಡಿ, ಜಗದಪಿತ ನಾದ ಬ್ರಹ್ಮನ ಆಜ್ಞೆಯಿಂದ ಹೊರಟು ಎಲ್ಲ ವಾದ್ಯಘೋಷಣೆಗಳ ಸಮೇತ ಬಂದು ಮೇಲೆ ಬಿದ್ದು ಮುತ್ತಿಗೆಹಾಕಿ ಹೀಯಾಳಿಸಿದರು, ಯುದ್ಧವನ್ನು ಬಿರುಸುಗೊಳಿಸಿದರು.

CC-0. Jangamwadi Math Collection. Digitized by eGangotri

ಉರಗಂಗಳುರವಣೆಗೆ ಗರುಡಕುಲವಳಿಗುಮೇ
ಕರಿಗಳುರುಬೆಗೆ ಸಿಂಗದದಟು ಕೆಡುಗುಮೆ ಸೊಕ್ಕಿ
ದೆರಳೆಗಳ್ ಮುತ್ತೆ ಪುಲಿವಳಗಮೇಂ ಪಾಳಕ್ಕುಮೇ ಬ್ರಹ್ಮಬಲವೊತ್ತಲು
ಹರಗಣಂಗಳ್ಗೆ ನೋವಕ್ಕುಮೇ ನಿಮಿಷದೊಳ್
ಪರಬಲಂ ಸಾಸಿರವಮಹಾಪದ್ಮವಳಿದುದ
ಚ್ಚರಿಯಾಯ್ತು ಸಂಗರಂ ಭಂಗರಾದರ್ ಸಕಲ ಸುರರದೇಂವಣ್ಣಿಸುವೆನು ೪೨

ವೊತ್ತಿದರ್ ತರಿದರಿರಿದರ್ ಕೊರೆದರುರುಬಿ ಬೆಂ
ಬತ್ತಿದರ್ ಸಾರ್ದರಾರ್ದರ್ ಪೋರ್ದರುಗಿದು ಬಾ
ಳೆತ್ತಿ ಜಡಿದರ್ ಪೊಡೆದರೊಡೆದರಾ ಬ್ರಹ್ಮಾಂಡವಮಂ ಬೊಬ್ಬೆಯುಬ್ಬರದೊಳು
ಮುತ್ತಿದರ್ ಕೆಡಪಿದರ್ ಕೊಡಪಿದರ್ ಮಡಪಿದರ್
ಮುತ್ತಿರಿಯೆ ಮೆಚ್ಚಿದರ್ ಪೆಚ್ಚಿದರ್ ಕೊಚ್ಚಿದರ್
ಸತ್ತರಂ ಬಿತ್ತರದೊಳೊತ್ತರಿಸಿ ಹರಗಣಂ ಸುರಗಣವ ಬೆಂಕೊಂಡುದು ೪೩

ಸುರಪಂ ಸುರುಳ್ದನಲನಳಲ್ದಂ ಯಮಂ ಯಮಳ
ಕರಮನುರೆ ಮುಗಿದು ದನುಜಂ ನಿಜಂಗೆಟ್ಟು ತ
ದ್ವರುಣನಿರೆ ಶರಣೆಂದು ವಾಯು ಕಾಯೆಂದು ಧನದಂ ಮನಕೆ ಮುಂಚಿ ಪಾಯ್ದು

೪೨. ಹಾವುಗಳ ರಭಸಕ್ಕೆ ಗರುಡಕುಲ ನಾಶವಾಗುತ್ತದೆಯೆ ? ಆನೆಗಳ ಆವೇಶಕ್ಕೆ ಸಿಂಹಗಳ ಪರಾಕ್ರಮ ಕುಂದುತ್ತದೆಯೆ ? ಕೊಬ್ಬಿದ ಜಿಂಕೆಗಳು ಮುತ್ತಲು ಹುಲಿಗಳ ಸಮೂಹ ಹಾಳಾಗುತ್ತದೆಯೆ ? ಬ್ರಹ್ಮನ ಸೈನ್ಯ ಮೇಲೆಬೀಳಲು ರುದ್ರಗಣಗಳಿಗೆ ನೋವಾಗುತ್ತದೆಯೆ ? ಒಂದೇ ನಿಮಿಷದಲ್ಲಿ ಶತ್ರುಸೈನ್ಯದಲ್ಲಿ ಸಾವಿರ ಮಹಾಪದ್ಮದಷ್ಟು ನಾಶವಾಯಿತು. ಯುದ್ಧವು ಆಶ್ಚರ್ಯಕರವಾಗಿ ಕಾಣಿಸಿತು. ಎಲ್ಲ ದೇವತೆಗಳೂ ಸೋತರು. ಅದನ್ನು ಏನೆಂದು ಬಣ್ಣಿಸಲಿ ? ೪೩. ಹೊಡೆದರು, ತರಿದರು, ಇರಿದರು, ಕೊರೆದರು, ಮೇಲೆಬೀಳಲು ಆವೇಶದಿಂದ ಬೆನ್ನುಹತ್ತಿದರು, ಹತ್ತಿರ ಬಂದರು, ಅರಚಿದರು, ಹೋರಾಡಿದರು, ಒರೆಯಿಂದ ಹಿರಿದ ಕತ್ತಿಯನ್ನು ಎತ್ತಿ ಜಡಿದರು, ಹೊಡೆದರು, ಬ್ರಹ್ಮಾಂಡವನ್ನು ಆರ್ಭಟದ ಅಬ್ಬರದಲ್ಲಿ ಒಡೆದರು. ಮುತ್ತಿದರು. ಕೆಳಕ್ಕೆ ಕೆಡವಿದರು, ಕೊಡವಿದರು. ಸಾಯಿಸಿದರು, ಪ್ರತಿಭಟಿಸಿ ತಿವಿದವರನ್ನು ಮೆಚ್ಚಿಕೊಂಡರು, ಉತ್ಸಾಹಿಸಿದರು, ಕೊಚ್ಚಿ ಹಾಕಿದರು, ಸತ್ತವರನ್ನು ಹೆಚ್ಚಾಗಿ ಪಕ್ಕಕ್ಕೆ ತಳ್ಳಿ ರುದ್ರಗಣವು ದೇವಗಣವನ್ನು ಬೆನ್ನಟ್ಟಿತು. ೪೪. ದೇವೇಂದ್ರನು ಬೆದರಿ ಕುಗ್ಗಿದನು. ಅಗ್ನಿ ಆಯಾಸಗೊಂಡನು. ಯಮನು ಎರಡು ಕೈಗಳನ್ನೂ ಜೋಡಿಸಿ ನಮಸ್ಕರಿಸಿದನು. ರಾಕ್ಷಸರು ದಿಕ್ಕೆಟ್ಟು, ವರುಣನು ಶರಣಾಗತನಾಗಿ, ವಾಯು ಕಾಪಾಡು ಎಂದು ಬೇಡಿಕೊಂಡು, ಕುಬೇರನು

CC-0. Jangamwadi Math Collection. Digitized by eGangotri

ತರಣಿಗಳ್ ಸರಣಿಗೆಟ್ಟ ಮನುಗಳನುಗುಂದಿ
ಗರಗಳ್ ಕರಂಗಿ ವಸುಗಳ್ ಮುಸುಂಕಿಟ್ಟೋಡೆ
ಸರಸಿಜಭವಂ ಕಂಡು ಕಂಡು ಕಾಳೆಗಕೆ ಮುಂಕೊಂಡನದನೇನೆಂಬೆನು ೪೪

ಮುರಿದ ಬಲಮಂ ಜರೆದು ಪಿಂದಿಕ್ಕಿ ಮುಂದೆ ತ
ನ್ನುರುಪಾತ್ಮಬಲಮೆಡಬಲಂಗಳೊಳ್ ಸಂದಣಿಸೆ
ತರಗೆಲೆಗಳಗ್ನಿಗಿದಿರಪ್ಪಂತೆ ರುದ್ರಬಲಕಿದಿರಾಗಿ ನಡೆದಜಬಲಂ
ಪೆರಸಾರ್ ಜಗತ್ಕರ್ತೃ ಬಂದನದೆ ಕೊಂದನವೆ
ಬರಿದೆ ಕೆಡಬೇಡ ತೊಲತೊಲಗೆಂಬ ಕಹಳೆ ಮುಂ
ದೊರಲೆ ಬರಸಿಡಿಲಂತೆ ಬ್ರಹ್ಮನಾರ್ಭಟಿಸಿ ತಾಗಿದನಂದು ಹರಬಲವನು ೪೫

ಎಲ್ಲಿರ್ಪನಿನಿತು ಪೊಳ್ತೀ ಸುರಬಲಂಗಳಂ
ಚಲ್ಲವಡಿದಣ್ಣನಂ ತೋರ್ ತೋರೆನುತ್ತೆ ಬಲ್
ಬಿಲ್ಲನೊದರಿಸುತಂಬುಗಳ ಮಳೆಗಳಂ ಕರೆವುತಬ್ಜಗರ್ಭಂ ನೂಂಕಲು
ಬಲ್ಲಿದರ್ ತಾಗಿ ಪಿಮ್ಮೆಟ್ಟಿದರ್ ಕೆಲಬರ
ಲ್ಲಲ್ಲಿ ನಿಂದರ್ ಕೆಲಬರಳವಳಿಯೆ ಕಂಡು ಸುರ
ದಲ್ಲಣಂ ವೀರನಾ ಬ್ರಹ್ಮನಿದಿರೊಳ್ ನಿಂದು ನುಡಿದನದನೇನೆಂಬೆನು ೪೬

ಮನೋವೇಗವನ್ನು ಮೀರಿ ಓಡಿಹೋಗಿ, ಸೂರ್ಯರು ಕ್ರಮತಪ್ಪಿ, ಮನುಗಳು ರೀತಿಗೆಟ್ಟು, ಗ್ರಹಗಳು ಕರಗಿಹೋದುವು. ವಸುಗಳು ತಲೆಮರೆಸಿಕೊಂಡು ಓಡಿಹೋಗಲು ಇದನ್ನು ನೋಡಿದ ಬ್ರಹ್ಮನು ಯುದ್ಧಕ್ಕೆ ತಾನೆ ಮುಂದೆ ಬಂದನು. ೪೫, ಚೆದುರಿ ಹಿಂದೆ ಹೋದ ಸೈನ್ಯವನ್ನು ಹೀಯಾಳಿಸಿ ಹಿಂದಕ್ಕೆ ಬಿಟ್ಟುಕೊಂಡು ತನ್ನ ವಿಸ್ತಾರವಾದ ಸೈನ್ಯವು ಎಡ ಬಲಗಳಲ್ಲಿ ಒಂದಾಗಿ ಸೇರಲು, ತರಗೆಲೆಗಳು ಬೆಂಕಿಗೆ ಎದುರಾಗುವಂತೆ ಶಿವನ ಸೈನ್ಯಕ್ಕೆ ಎದುರಾಗಿ ಬ್ರಹ್ಮನ ಸೈನ್ಯ ಹೊರಟಿತು. ಪಕ್ಕಕ್ಕೆ ಸರಿ, ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನು ಇದೋ ಕೊಂದನು, ಸುಮ್ಮನೆ ಕೆಡಬೇಡ, ತೊಲಗು, ತೊಲಗು ಎಂಬ ಕಹಳೆಗಳು ಮುಂದೆ ಕೂಗುತ್ತಿರಲು ಬರಸಿಡಿಲಿನಂತೆ ಬ್ರಹ್ಮನು ಆರ್ಭಟಿಸಿ ಅಂದು ಶಿವ ಸೈನ್ಯವನ್ನು ಎದುರಿಸಿದನು. ೪೬. ಇಷ್ಟು ಹೊತ್ತು ದೇವಸೈನ್ಯವನ್ನು ಚೆಲ್ಲಾಡುವಂತೆ ಹೊಡೆದ ಗಂಡುಸು ಎಲ್ಲಿದ್ದಾನೆ ತೋರಿಸು ತೋರಿಸು ಎನ್ನುತ್ತ ಬಲಶಾಲಿಯಾದ ಬಿಲ್ಲನ್ನು ಠೇಂಕಾರ ಮಾಡಿ, ಬಾಣಗಳ ಮಳೆಯನ್ನು ಸುರಿಸುತ್ತಾ ಬ್ರಹ್ಮನು ಮೇಲೆ ಬೀಳಲು ಸಾಹಸಿಗಳು ಎದುರಿಸಿ ಹಿಮ್ಮೆಟ್ಟಿದರು. ಕೆಲವರು ಅಲ್ಲಲ್ಲಿಯೇ ನಿಂತರು. ಕೆಲವರು ಶಕ್ತಿಗುಂದಿದರು, ಇದನ್ನು ನೋಡಿ ದೇವತೆಗಳಿಗೆ ತಲ್ಲಣವನ್ನುಂಟುಮಾಡಿದ

CC-0. Jangamwadi Math Collection. Digitized by eGangotri

ಉಕ್ತಿಸತಿಯರಸ ನೀಂ ಚತುರಾನನಂ ಪರಮ
ಭಕ್ತನೆಂದೀಶ್ವರಂ ನಿನಗೆ ಕೃಪೆಯಿಂದೆ ಸು
ವ್ಯಕ್ತಮಪ್ಪೀ ಜಗತ್ಸೃಷ್ಟಿಯೊಡೆತನವಿಾಯೆ ಮಗನ ಮರುಳಪ್ಪಿ ನಿನ್ನ
ಯುಕ್ತಿಗೆಡಿಸಿತು ಜಗಲ್ಲಯಕಿಟ್ಟ ಯಜ್ಞದಾ
ಸಕ್ತಿಯಂ ಸುಡು ಶರಣ್ಬುಗು ಶಿವನನಲ್ಲದೊಡೆ
ಶಕ್ತನಾಗೇಳ್ ಸಮರಕೆನೆ ಬ್ರಹ್ಮನಂದು ಘನರೋಷದಿಂದಿಂತೆಂದನು ೪೭

ದಿಟ್ಟ ನೀನಾರ್ ನಿನ್ನ ಪೆಸರದೇನೆಮಗದಾರ್
ಕೊಟ್ಟರೀ ಬ್ರಹ್ಮತ್ವಮಂ ಪುಸಿಯನಿಂತು ಹ
ಳ್ಳುಟ್ಟುವರೆ ನೀನೆಮ್ಮೊಳೆಂದಜಂ ಸರಳಸಾರಂಗಳಂ ಕರೆವುತಿರಲು
ನೆಟ್ಟ ಸಸಿಯೆಂದಿನ್ನೆಗಂ ತಾಳ್ದರೆಮಗೆಂಬು
ದೊಟ್ಟೆಲಾ ಭಾಪು ನಿನ್ನುಳಿದೀ ಶಿರಂಗಳಂ
ಕುಟ್ಟಿ ಶಿವರುಂಡಮಾಲೆಗೆ ಕೊಡುವೆನೆಂದು ಕಣೆಗಡಿದೆಚ್ಚನಾ ವೀರನು ೪೮

ಕೇಳ್ಪೊಸತನೆಲೆ ರಾಮ ವೀರನೆಚ್ಚಂಬುಗಳ್
ಸೂಳ್ಪೆಚ್ಚಿ-ಸೂತಾಶ್ವಮಂ ಕೊಚ್ಚಿ ವಿಧಿಕಾಯ
ದೊಳ್ಪೊಕ್ಕು ತಟ್ಟುಚ್ಚಲಾ ಕ್ಷಣಂ ಗುಡುಗುಡಿಸಿ ಕೋಪದಿಂ ಗಾಯವಡೆದ

ವೀರಬದ್ರನು ಬ್ರಹ್ಮನ ಎದುರು ನಿಂತು ಹೀಗೆ ಹೇಳಿದನು. ೪೭. ವಾಣೀಪತಿಯೆ ನೀನು ಚತುರ್ಮುಖ ಪರಮಭಕ್ತ ಎಂದು ಈಶ್ವರನು ನಿನ್ನ ಮೇಲೆ ದಯೆತೋರಿ ಎಲ್ಲರೂ ಚೆನ್ನಾಗಿ ತಿಳಿದಿರುವ ಈ ಜಗತ್ತಿನ ಸೃಷ್ಟಿಯ ಯಜಮಾನಿಕೆಯನ್ನು ನಿನಗೆ ಕೊಟ್ಟನು. ಮಗನ ಮೇಲಿನ ಮೋಹ ನಿನ್ನ ಬುದ್ಧಿ ಕೆಡಿಸಿತು. ಪ್ರಪಂಚದ ನಾಶಕ್ಕೆ ಕಾರಣವಾದ ಆ ಯಜ್ಞದ ಮೇಲಿನ ಶ್ರದ್ಧೆಯನ್ನು ಸುಡು. ಶಿವನಿಗೆ ಶರಣಾಗು, ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧನಾಗು ಎನ್ನಲು ಬ್ರಹ್ಮನು ಅಂದು ಮಹಾಕೋಪದಿಂದ ಈ ರೀತಿ ಹೇಳಿದನು. ೪೮. ಧೈರ್ಯಶಾಲಿಯೋ ನೀನು ಯಾರು? ನಿನ್ನ ಹೆಸರೇನು? ನನಗೆ ಬ್ರಹ್ಮತ್ವವನ್ನು ಕೊಟ್ಟವರು ಯಾರಯ್ಯ? ನೀನು ನಮ್ಮಲ್ಲಿ ಈ ರೀತಿ ಸುಳ್ಳನ್ನು ಬೊಗಳುವುದೆ? ಎಂದು ಬ್ರಹ್ಮನು ತೀಕ್ಷ್ಣವಾದ ಬಾಣಗಳನ್ನು ಸುರಿಸುತ್ತಿರಲು ಆ ವೀರನು ನೆಟ್ಟ ಸಸಿ ಎಂದು ಈತನಕ ಸುಮ್ಮನಿದ್ದರೆ ನಮ್ಮ ಮೇಲೆ ಬಾಣತೊಟ್ಟೆ ಯಲ್ಲವೇ? ಭೇಷ್, ನಿನ್ನ ಉಳಿದ ಈ ತಲೆಗಳನ್ನು ಕುಟ್ಟಿ, ಶಿವನ ರುಂಡಮಾಲೆಗೆ ಸೇರಿಸಲು ಕೊಡುತ್ತೇನೆ ಎಂದು ಬ್ರಹ್ಮನ ಬಾಣವನ್ನು ಕಡಿದು, ಆ ವೀರಭದ್ರನು ಬಾಣ ಪ್ರಯೋಗಿಸಿದನು. ೪೯. ಹೊಸ ಸಂಗತಿಯನ್ನು ಕೇಳಯ್ಯ, ಸಿದ್ಧರಾಮ, ವೀರಭದ್ರನು ಬಿಟ್ಟ ಬಾಣಗಳ ಸರದಿ ಹೆಚ್ಚಾಗಿ ಬ್ರಹ್ಮನ ಸಾರಥಿ ಮತ್ತು ಕುದುರೆಗಳನ್ನು ಕೊಚ್ಚಿ ಹಾಕಿ ಬ್ರಹ್ಮನ ಶರೀರವನ್ನು ಹೊಕ್ಕು ಹೊರಬಂದಿತು. ಆಗ ಗುಡುಗುಡಿಸಿ ಕೋಪದಿಂದ

CC-0. Jangamwadi Math Collection. Digitized by eGangotri

ಕಾಳ್ಪಂದಿಯಂತಜಂ ಪೊಸರಥದೊಳೈದಿ ಬಿ
ಲ್ಲಾಳ್ಪಂಥಗಾರ ನೀನಹುದೆನುತ್ತೆಚ್ಚಂಬು
ಗಳ್ಪೊಳೆವುತ್ತೈತರಲ್ ವೀರಭದ್ರಂ ಕಡಿದು ಮಗುಳೆಚ್ಚು ಬೊಬ್ಬಿರಿದನು ೪೯

ಮತ್ತಾ ರಥಾಶ್ವಮಂ ತೆವರಿದುವು ಸವರಿದುವು
ಸುತ್ತಣ ಬಲಂಗಳಂ ಮುತ್ತಿದುವು ಕುತ್ತಿದುವು
ಪೊತ್ತು ವಿಧಿಯಂ ಗಗನಕೆತ್ತಿದುವು ಸುತ್ತಿದುವು ಬ್ರಹ್ಮಾಂಡದೆಲ್ಲೆಡೆಯೊಳು
ಮತ್ತೆ ರಣರಂಗಕೀಡಾಡಿದುವು ಕಾಡಿದುವು
ಪತ್ತುದೆಸೆದೆಸೆಗಳೊಳಗುಬ್ಬಿದುವು ಪಬ್ಬಿದುವು
ಸುತ್ತಲೆತ್ತೆತ್ತಲುಂ ತೋರಿದುವು ಮೀರಿದುವು ವೀರಭದ್ರನ ಕಣೆಗಳು ೫೦

ಈ ತೆರದೆ ವೀರಭದ್ರಂ ವಿಧಿಯನೊಡನೊಡನೆ
ಘಾತಿಸುತ್ತಿರೆ ಕಂಡು ಘನರೋಷದಿಂ ಸುರ
ವ್ರಾತಮಡಿಗಡಿಗೆ ಮಸಗಲ್ ಕಂಡು ನಸುನಗುತ್ತುರೆ ಭದ್ರಕಾಳಿಯೊಡನೆ
ಖಾತಿಯಿಂ ಕೊಲುತಿರ್ದಳೊಂದೆಸೆಯೊಳಾ ಭೂತ
ಬೇತಾಳರಾರ್ಭಟಿಸಿ ನುಂಗುತಿರೆ ಕಾಣುತ್ತ
ತೀತಕೋಪಂ ಬ್ರಹ್ಮನಂದು ಬ್ರಹ್ಮಾಸ್ತ್ರಮಂ ತೊಟ್ಟೆಚ್ಚನೇನೆಂಬೆನು ೫೧

ಗಾಯಗೊಂಡ ಕಾಡಹಂದಿಯಂತೆ ಬ್ರಹ್ಮನು ಹೊಸರಥದಲ್ಲಿ ಬಂದು, ನೀನು ಒಳ್ಳೆಯ ಬಿಲ್ಲುಗಾರನೂ ಜಿದ್ದುಗಾರನೂ ಆಗಿರುವೆ ಎನ್ನುತ್ತ ಪ್ರಯೋಗಿಸಿದ ಬಾಣಗಳು ಹೊಳೆಯುತ್ತ ಬರುತ್ತಿರಲು, ವೀರಭದ್ರನು ಅವುಗಳನ್ನು ಕಡಿದು ಮತ್ತೆ ತಾನೂ ಬಾಣ ಪ್ರಯೋಗಿಸಿ ಬೊಬ್ಬೆಹಾಕಿದನು. ೫೦. ಮತ್ತೆ ಆ ರಥ ಕುದುರೆಗಳನ್ನು ಸವರಿಹಾಕಿದುವು. ಸುತ್ತಲೂ ಇದ್ದ ಸೈನ್ಯವನ್ನು ಒರಸಿಹಾಕಿದುವು, ಮುತ್ತಿದುವು, ಇರಿದುವು, ಚೂರು ಚೂರು ಮಾಡಿದುವು, ಬ್ರಹ್ಮನನ್ನು ಹೊತ್ತು ಆಕಾಶಕ್ಕೆ ಎತ್ತಿ ಬ್ರಹ್ಮಾಂಡದಲ್ಲೆಲ್ಲಾ ಸುತ್ತಿಸಿದುವು, ಪುನ : ಯುದ್ಧರಂಗಕ್ಕೆ ಎಸೆದುವು, ಕಾಡಿದುವು, ಹತ್ತುದಿಕ್ಕಿನಲ್ಲಿಯೂ ಉರವಣಿಸಿದುವು, ಹಬ್ಬಿದುವು, ಸುತ್ತಲೂ ಎಲ್ಲ ಕಡೆಯಲ್ಲಿಯೂ ವೀರಭದ್ರನ ಬಾಣಗಳು ಕಾಣಿಸಿಕೊಂಡವು, ಮಿತಿಮೀರಿದುವು. ೫೧. ಈ ರೀತಿಯಲ್ಲಿ ವೀರಭದ್ರನು ಬ್ರಹ್ಮನೊಡನೆ ಹೋರಾಡಿ ಗಾಯಗೊಳಿಸುತ್ತಿರಲು ನೋಡಿ ಅತಿಕೋಪದಿಂದ ದೇವ ಸಮೂಹ ಮತ್ತೆ ಮತ್ತೆ ಮೇಲೆ ಬಿದ್ದಿತು. ಅದನ್ನು ನೋಡಿದ ಭದ್ರಕಾಳಿ ನಸುನಗುತ್ತಾ ಅತಿಯಾದ ಕೋಪದಿಂದ ಕೊಲ್ಲುತ್ತಿದ್ದಳು. ಇನ್ನೊಂದು ಕಡೆ ಭೂತ ಭೇತಾಳಗಳು ಆರ್ಭಟಿಸಿ ನುಂಗುತ್ತಿದ್ದುವು. ಅದನ್ನು ನೋಡಿ ಅತಿಯಾಗಿ ಕೋಪಗೊಂಡ ಬ್ರಹ್ಮನು

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗವನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೫೭

## ಮೂವತ್ತೊಂದನೆಯ ಸಂಧಿ ಸಂಪೂರ್ಣ

ಗಳನ್ನು ದೂಳಿನಿಂದ ಮುಚ್ಚುತ್ತ ನಡೆದರು. ೫೭. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥ ವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೊಂದನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತೆರಡನೆಯ ಸಂಧಿ

ಸೂಚನೆ : ಪಕ್ಷಿವಾಹನನನುರೆ ಗೆಲ್ದು ಸುರರಂ ತರಿದು
ದಕ್ಷಶಿರವರಿದು ಸೆರೆವಿಡಿದೆಲ್ಲರಂ ವಿರೂ
ಪಾಕ್ಷನೆಡೆಗೈತರಲ್ ವೀರಭದ್ರೇಶಂಗೆ ಶಾಂತಿಯಂ ಮಾಡಿಸಿದನು

ಚಿದ್ರೂಪ ಚಿನ್ಮಯ ಜಗದ್ರಕ್ಷ ಕರುಣಾಸ
ಮುದ್ರ ಗುರುತರವೀರಭದ್ರ ದುರಿತವ್ರಜೋ
ಪದ್ರವಚ್ಛೇದನ ಲಸದ್ರಾಜರಾಜಸಖ ರುದ್ರಾಣಿಯರ್ಧದೇಹ
ರುದ್ರಭವಬಂಧನ ಶಿವದ್ರೋಹಿ ದಕ್ಷಮದ
ವಿದ್ರಾವಣ ಪ್ರಸ್ಥಿತೋದ್ರೇಕದೈತ್ಯಮದ
ಛಿದ್ರ ವಿಶ್ರುತತರ ವಿಯದ್ರಮ್ಯಕೇಶನೆ ವಿರೂಪಾಕ್ಷ ಸಲಹೆಮ್ಮನು ೧

ಆಲಿಸೈ ರಾಮ ಹರಿ ಕಾಳೆಗಕೆ ನಡೆಯಲೆಡ
ದಾಲಿ ತೋಳ್ ತೊಡೆಗಳುರೆ ಕೆತ್ತಿದುವು ಮಾರ್ಗಮಂ
ವ್ಯಾಳ ಶರ ಕಾಕಾದಿಗಳ್ ಕಟ್ಟಿಯುಂ ಬಗೆಯದಂತು ತಲೆ ಪೋಪಬಳಿಗೆ
ಕಾಲೆ ಹೊಣೆಕಾರನೆಂದೆಂಬ ಗಾದೆಗೆ ಸಂದು
ಮೇಲನರಿಯದೆ ಬಂದು ಕಂಡನಾ ವೀರಶರ
ಜಾಲದಿಂ ಪುದಿದ ರಣರಂಗಮಂ ಹತಪಟುಭಟಾಂಗಮಂ ಸುರಭಂಗಮಂ ೨

ಸೂಚನೆ : ವಿಷ್ಣುವನ್ನು ಗೆದ್ದು, ದೇವತೆಗಳನ್ನು ತರಿದುಹಾಕಿ, ದಕ್ಷನ ತಲೆಯನ್ನು ಕಡಿದು ಅವರೆಲ್ಲರನ್ನೂ ಶಿವನ ಬಳಿಗೆ ಕರೆದುಕೊಂಡು ಬರಲು ಶಿವನು ವೀರಭದ್ರನಿಗೆ ಶಾಂತಿಯನ್ನು ಮಾಡಿಸಿದನು. ೧. ಚಿದ್ರೂಪ, ಚಿನ್ಮಯ, ಜಗದ್ರಕ್ಷಕ, ಕರುಣಾಸಮುದ್ರ, ಶ್ರೇಷ್ಠವಾದ ವೀರಭದ್ರ, ಪಾಪಸಮೂಹಗಳ ತೊಂದರೆಯನ್ನು ಛೇದಿಸುವವನು, ಚಂದ್ರ ಶೇಖರ,ಕುಬೇರನ ಸ್ನೇಹಿತ, ಅರ್ಧನಾರೀಶ್ವರ, ಮೋಕ್ಷದಾಯಿ, ಶಿವದ್ರೋಹಿಯಾದ ಮದಿಸಿದ ದಕ್ಷನನ್ನು ಕೊಂದವನು, ಉದ್ರೇಕಗೊಂಡ ದೈತ್ಯರ ಮದವನ್ನು ನಾಶಮಾಡುವವನು, ವಿಶಾಲವಾದ ಆಕಾಶವನ್ನೇ ರಮ್ಯವಾದ ಜಡೆಯನ್ನಾಗಿ ಉಳ್ಳ ವಿರೂಪಾಕ್ಷನೇ ನಮ್ಮನ್ನು ಕಾಪಾಡು. ೨. ಕೇಳಯ್ಯ ಸಿದ್ಧರಾಮ, ವಿಷ್ಣುವು ಯುದ್ಧಕ್ಕೆ ಹೊರಡಲು ಎಡದ ಕಣ್ಣು, ತೋಳು, ತೊಡೆಗಳು ಅದುರಿದವು. ದಾರಿಯಲ್ಲಿ ಹಾವು, ಮೊಲ, ಕಾಗೆಗಳು ಅಡ್ಡಬಂದರೂ ಲೆಕ್ಕಿಸದೆ ತಲೆ ಹೋಗುವ ಬಳಿಕ ಕಾಲೆ ಹೊಣೆಗಾರ ಎನ್ನುವ ಗಾದೆಗೆ ಸರಿಯಾಗಿ ಮುಂದಾಗುವುದನ್ನು ತಿಳಿಯದೆ ಬಂದು ವೀರಭದ್ರನ ಬಾಣಗಳ ಸಮೂಹದಿಂದ, ಸತ್ತ ಸೈನಿಕರ ದೇಹದಿಂದ ತುಂಬಿದ್ದ ಯುದ್ಧಭೂಮಿಯನ್ನೂ, ದೇವತೆಗಳಿಗೆ

CC-0. Jangamwadi Math Collection. Digitized by eGangotri

ಎತ್ತಿ ಕೈಕೋಲ್ಗಳಿಂ ಕಟ್ಟುವಡೆದನಿಬರಂ
ತತ್ತಧಿಮಿಕೆಂದು ಕುಣಿದಾಡಿಸುವುದಂ ಮರುಳ್ಗ
ಳೆತ್ತಲೆನ್ನದೆ ವಿನೋದಂಗಳಿಂದೈರಾವತಾದಿ ವಾಹನವಮನೇರಿ
ಸುತ್ತಿಸುವುದಂ ಘಾಯದಿಂ ಹೊರಳಿ ನರಳಿ ಬಾ
ಯ್ಬುತ್ತಿ ವಿಧಿಯುಂ ಬಯ್ಯುತಿರ್ಪರ್ಧರೆವೆಣಂಗಂಡು
ಚಿತ್ತಜಪಿತಂ ಪ್ರಳಯಚಿತ್ತಜಾರಾತಿಯೆನೆ ರೌದ್ರದಿಂ ನಡೆತಂದನು ೩

ಭೋರೆಂದುವಖಿಳವಾದ್ಯಂಗಳಾನದೆ ಕಡೆಗೆ
ಸಾರೆಂದುವರಿಗಳಂ ಕಹಳೆಗಳ್ ತಮಗೆ ದೊರೆ
ಯಾರೆಂದನಂತ ಗಜ ಹಯ ರಥ ಪದಾತಿವೆರಸೈದಿದರ್ ದೊರೆದೊರೆಗಳು
ಬಾರೆಂದು ಪಗೆಗಳಂ ಮೂದಲಿಸಿ ಕರೆದೆಮ್ಮ
ನಾರೆಂದು ಸೆಣಸಿದಿರಿ ಮೊದಲೆ ನಿಮ್ಮೊಡೆಯನಂ
ತಾರೆಂದು ಚೂಣಿಗರ್ ಕಾದುತಿರೆ ಕಂಡು ಹರಿ ಕೋಪದಿಂದಾ ಕ್ಷಣದೊಳು ೪

ಘೀಳಿಡಲ್ ದಿಕ್ಕುಗಳ್ ಸಿಂಜನಿನಿನಾದದಿಂ
ಸಾಲಿಡಲ್ ಶಿಖಿಕಣಂ ಬಾಣವಮಂ ಪಿಡಿದಿಂತು
ಘೋಳಿಡಿಸಿ ನಮ್ಮ ಬಲವಮಂ ಕೊಂದು ಬ್ರಹ್ಮಾದ್ಯರಂ ಕಟ್ಟಿದಾತನೊಡಲಂ

ಒದಗಿದ್ದ ಅಪಮಾನವನ್ನೂ ನೋಡಿದನು. ೩. ಕಟ್ಟಿಹಾಕಲ್ಪಟ್ಟ ಅಷ್ಟ ಜನರನ್ನೂ ಎತ್ತಿದ ಕೈಕೋಲುಗಳಿಂದ ತತ್ತಧಿಮಿಕೆಂದು ಕುಣಿದಾಡಿಸುವುದನ್ನು, ಭೂತಗಳು ವಿನೋದದಿಂದ ಐರಾವತ ಮೊದಲಾದ ವಾಹನಗಳನ್ನು ಹತ್ತಿ ಯಾವ ಭಾಗವೆನ್ನದೆ ಎಲ್ಲ ಕಡೆಯೂ ಸುತ್ತಿ ಸುತ್ತಿರುವುದನ್ನು, ಘಾಯದಿಂದ ಹೊರಳುತ್ತ ನರಳುತ್ತ ಬಾಯಿ ಒಣಗಿ ಬ್ರಹ್ಮನನ್ನು ಬೈಯುತ್ತಿರುವ ಅರ್ಧಸತ್ತ ಹೆಣಗಳನ್ನು ನೋಡಿ ವಿಷ್ಣುವು ಪ್ರಳಯಕಾಲದ ಶಿವನಂತೆ ಬಹುಕೋಪದಿಂದ ಹೊರಟುಬಂದನು. ೪. ಎಲ್ಲ ವಾದ್ಯಗಳೂ ಭೋರೆಂದು ಶಬ್ದ ಮಾಡಿದುವು. ಕಹಳೆಗಳು ಶತ್ರುಗಳನ್ನು ಕುರಿತು ತಡೆಯದೆ ಪಕ್ಕಕ್ಕೆ ಸರಿ ಎಂದುವು. ಪರಾಕ್ರಮಿಗಳು ತಮಗೆ ಸರಿಯಾದವರು ಯಾರೆಂದು ಅನೇಕ ಆನೆ, ಕುದುರೆ, ರಥ, ಕಾಲಾಳುಗಳ ಜೊತೆಗೂಡಿ ಹೊರಟರು. ಬಾರೊ ಎಂದು ಶತ್ರುಗಳನ್ನು ಹೀಯಾಳಿಸಿ ಕರೆದು, ನಮ್ಮನ್ನು ಯಾರೆಂದು ತಿಳಿದು ನಮ್ಮೊಡನೆ ಹೋರಾಡಿದಿರಿ ? ಮೊದಲೇ ನಿಮ್ಮ ನಾಯಕನನ್ನು ಕರೆದುಕೊಂಡು ಬನ್ನಿ ಎಂದು ಸೈನ್ಯದ ಮುಂದಾಳುಗಳು ಯುದ್ಧ ಮಾಡುತ್ತಿರಲು, ಅದನ್ನು ನೋಡಿ ವಿಷ್ಣುವು ಕೋಪದಿಂದ ಆ ಕ್ಷಣ ೫. ಬಿಲ್ಲಿನ ಠೇಂಕಾರದಿಂದ ದಿಕ್ಕುಗಳು ಪ್ರತಿಧ್ವನಿಸಲು, ಬೆಂಕಿಯ ಕಿಡಿಗಳು ಸಾಲುಸಾಲಾಗಿರಲು, ಬಾಣವನ್ನು ಹಿಡಿದು ಈ ರೀತಿಯಾಗಿ ಗೋಳಾಡಿಸಿ ನಮ್ಮ ಸೈನ್ಯವನ್ನು ಕೊಂದು, ಬ್ರಹ್ಮ ಮೊದಲಾದ

CC-0. Jangamwadi Math Collection. Digitized by eGangotri

ಸೀಳಿಡು ದಿಶಾಬಲಿಗೊಡೆಂದೆಸಲ್ ವೀರಬಲ
ದಾಳಿಡುಕುರೊಳ್ ಕರಿತುರಂಗರಥಸಂಘಣೆಯ
ಮೇಲಿಡಿದುವಂಬುಗಳ್ ಸುರಿದುವರುಣಾಂಬುಗಳ್ ಪೇಳಲೇನಚ್ಚರಿಯನು ೫

ಅಂಬುಜಾಂಬಕನಂದು ಬೆಂಬಿಡಿವುತುರ್ಬಿ ಕ
ರ್ಣಾಂಬರಂ ತೆಗೆದು ಬಿಟ್ಟಂಬುಗಳ್ ಗಗನಮುಂ
ತುಂಬಿದುವು ದೆಸೆಗಳೊಳ್ ಮುಂಬರಿದುವೀಂಟಿದುವು ಬಾಂಬೊಳೆಯನಬ್ಜಾರ್ಕರ
ಬಿಂಬಮುರಿಪುತ್ತೆ ವಿಶ್ವಂಭರೆಯ ಸುತ್ತುಮು
ತ್ತಂ ಬಲಿದು ಪೊಳಿ ಸಪ್ತಾಂಬುಧಿಯ ಸುಭಟದೇ
ಹಂಬೊಕ್ಕು ಖಂಡಮಂ ತಿಂಬುವೆನೆ ಕವಿದುವೇನೆಂಬೆನಾ ಹರಿಯದಟನು ೬

ತಾಗಲಾನೆಗಳ ಗಳಮಂ ಮಾವುತರ್ ಧರೆಗೆ
ಮೂಗೂರಿ ಬೀಳೆ ತುರಗದ ಮೊಗಂ ಮೊಗರಂಬು
ಮಾಗ ಗಗನಕೆ ಜಿಗಿಯೆ ರಾವುತರ್ ತರತರದ ಕೈಖಡ್ಗವೆರಸಿ ಬೀಳೆ
ಮೇಗೆ ರಥಿಕಾಳಿ ಕಾಳಿಕೆಗಾರೆ ಜೀವನಂ
ಬೋಗಿ ಭೋಗಿಸೆ ಸುಭಟರಮರಿಯರೊಳಮರಿ ಜಗ
ಕಾ ಗರಿಯ ವಾಯುವಾಯಾಸಮಂ ಬೀರೆ ಬೀರಿದನಚ್ಯುತಂ ಕಣೆಗಳ ೭

ವರನ್ನು ಕಟ್ಟಿಹಾಕಿದವನ ಶರೀರವನ್ನು ಸೀಳಿ ದಿಗ್ಬಲಿ ಕೊಡು ಎಂದು ವಿಷ್ಣುವು ಬಾಣ ಪ್ರಯೋಗಿಸಲು, ಇಕ್ಕಟ್ಟಾದ ಸ್ಥಳದಲ್ಲಿ ಆನೆ, ಕುದುರೆ, ರಥಸಮೂಹದ ಮೇಲೆ ಬಿದ್ದ ಬಾಣಗಳು ರಕ್ತವನ್ನು ಹರಿಸಿದುವು. ೬. ವಿಷ್ಣುವು ಅಂದು ಬೆನ್ನಟ್ಟುತ್ತ ಉಬ್ಬಿ ಕಿವಿಯ ವರೆಗೆ ಎಳೆದು ಬಿಟ್ಟ ಬಾಣಗಳು ಆಕಾಶವನ್ನು ತುಂಬಿದುವು, ದಿಕ್ಕು ದಿಕ್ಕಿನಲ್ಲಿ ಮುಂದುವರಿದುವು, ಆಕಾಶಗಂಗೆಯನ್ನು ಕುಡಿದುವು, ಚಂದ್ರ-ಸೂರ್ಯರ ಬಿಂಬವನ್ನು ಸುಡುತ್ತ, ಭೂಮಿಯ ಸುತ್ತಮುತ್ತಲೂ ತುಂಬಿ, ಸಪ್ತಸಮುದ್ರಗಳನ್ನು ಹೂಳುಗೆಡವಿ, ಸೈನಿಕರ ದೇಹವನ್ನು ಹೊಕ್ಕು ಮಾಂಸವನ್ನು ತಿನ್ನುತ್ತೆವೆ ಎನ್ನುವಂತೆ ಕವಿದುವು. ವಿಷ್ಣುವಿನ ಪರಾಕ್ರಮವನ್ನು ಏನೆಂದು ಹೇಳಲಿ ? ೭. ಬಾಣಗಳು ಆನೆಗಳ ಕುತ್ತಿಗೆಗಳಿಗೆ ನಾಟಲು ಮಾವುತರು ಭೂಮಿಗೆ ಮೂಗು ಅಡಿಯಾಗಿ ಬೀಳುತ್ತಿದ್ದರು. ಕುದುರೆಯ ಮುಖ-ಮುಖವಾಡ ಆಕಾಶಕ್ಕೆ ಹಾರಲು ರಾವುತರು ನಾನಾ ರೀತಿಯ ಆಯುಧ ಮತ್ತು ಕತ್ತಿಗಳ ಸಮೇತ ಬೀಳುತ್ತಿದ್ದರು. ಮೇಲೆ ರಥಿಕರ ಸಮೂಹ ಕಲ್ಮಶ ಕಾರಿ ಪ್ರಾಣ ಬಿಟ್ಟರು. ಸತ್ತ ಶೂರಸೈನಿಕರು ದೇವಸ್ತ್ರೀಯರನ್ನು ಭೋಗಿಸುತ್ತಿದ್ದರು. ದೇವಲೋಕದಲ್ಲಿ ಆಗ ಶತ್ರುಗಳ ವಾಸನೆ ಆಯಾಸವನ್ನು ಉಂಟುಮಾಡುವಂತೆ ವಿಷ್ಣುವು ಬಾಣಪ್ರಯೋಗ

CC-0. Jangamwadi Math Collection. Digitized by eGangotri

ನಾರಾಯಣಂ ಮಹಾರೋಷದಿಂದೆಸುತಿರ್ಪ
ತೋರಾಯದೆಸುಗೆಯಿಂ ತರಹರಿಸದಾಕ್ಷಣಂ
ಪೂರಾಯಗಾಯದಿಂ ಬಲಮಳಿಯೆ ಕಂಡು ಸಂಹಾರಾವತಾರನಾಗಿ
ಸಾರಯಶನಿವನಾವನೋ ರಣಕೆ ಲೇಸುಲೇ
ಸಾರಯುಲಿವಂ ಗುಣಕೆ ಮತ್ಸರವೆ ಸೂತ ಹರಿ
ಸಾರಯುದೊಳೀ ರಥವನಲ್ಲಿಗೆಂದೀಶ್ವರಕುಮಾರಕಂ ನೇಮಿಸಿದನು ೮

ಅದೆ ವಜ್ರಿಗಿರಿವಜ್ರನಗ್ನಿವನದಾವಾಗ್ನಿ
ಯದೆ ಯಮ ಯಮಂ ನಿರುತಿಸಿಂಹಸಿಂಹಾರಿ ಮ
ತ್ತದೆ ವರುಣತಿಮಿರತಿಮಿರಾಪಹೃತ್ಪವಮಾನಮೇಘಪವಮಾನನದೆಕೋ
ಅದೆಕೊ ಯಕ್ಷೇಶಗಜಗಜಮಥನನಿದೆ ಬಂದ
ನದೆ ಬ್ರಹ್ಮಮದನಮದನಾರಿ ವೀರಂ ಬಂದ
ನದೆ ಕಂಡು ಬದುಕೆಂದು ವಂದಿಗಳ್ ಪೊಗಳೆ ಹರಿಯಂ ತಡೆದನಾ ವೀರನು ೯

ಅಚ್ಚರಿಯನೀ ನಿನ್ನ ಬಾಣಮಿತ್ತುವು ಮನಕೆ
ಕೆಚ್ಚೆರ್ದೆಯ ಸುಭಟ ನೀನಾರ್ ನಿನ್ನ ಪೆಸರದೇ
ನುಚ್ಚರಿಸು ದಿಟ್ಟನಹೆಯಾಂ ಗೆಲ್ದವರೊಳೆಂದು ವೀರನೆಚ್ಚಂಬುಗಳನು

ಮಾಡಿದನು. ೮. ವಿಷ್ಣುವು ಅತಿಯಾದ ಕೋಪದಿಂದ ಬಿಡುತ್ತಿದ್ದ ಜೋರಾದ ಬಾಣದ ಹೊಡೆತ ತಾಳಲಾರದೆ ಉಂಟಾದ ಬಹಳ ಗಾಯದಿಂದ ಸೈನ್ಯ ನಾಶವಾಗಲು, ಅದನ್ನು ನೋಡಿ ಪ್ರಳಯಕಾರನಾಗಿ ಈ ಪರಾಕ್ರಮಿ ಯಾರೊ ? ಆಲೋಚಿಸಲು ಇವನು ಯುದ್ಧಸಮರ್ಥ, ಗುಣಕ್ಕೆ ಮತ್ಸರವೆ ? ಸಾರಥಿ ಬೇಗನೆ ಅವನಿರವನ್ನು ಹುಡುಕಿ, ರಥವನ್ನು ಅಲ್ಲಿಗೆ ತೆಗೆದುಕೊಂಡು ಹೋಗು ಎಂದು ವೀರಭದ್ರನು ಆಜ್ಞಾಪಿಸಿದನು. ೯. ಅದೇ ದೇವೇಂದ್ರನೆಂಬ ಪರ್ವತಕ್ಕೆ ವಜ್ರಾಯುಧ, ಅಗ್ನಿವನಕ್ಕೆ ಅದೇ ಕಾಳ್ಗಿಚ್ಚು, ಯಮನಿಗೆ ಯಮಸ್ವರೂಪ, ನಿರುತಿಯೆಂಬ ಸಿಂಹಕ್ಕೆ ಶತ್ರು, ಅದೇ ವರುಣನೆಂಬ ಕತ್ತಲೆಗೆ ಸೂರ್ಯ, ವಾಯುವೆಂಬ ಮೋಡಗಳಿಗೆ ಭೀಕರವಾದ ಗಾಳಿ, ಅದೋ, ಅದೋ ಕುಬೇರನೆಂಬ ಆನೆಯನ್ನು ವಧಿಸುವ ಸಿಂಹ, ಇಗೋ ಬಂದನು ಬ್ರಹ್ಮನೆಂಬ ಮನ್ಮಥನಿಗೆ ಶತ್ರುವಾದ ಈಶ್ವರ, ವೀರಭದ್ರ ಬಂದ, ಅವನನ್ನು ನೋಡಿ ಬದುಕು ಎಂದು ಹೊಗಳು ಭಟ್ಟರು ಹೊಗಳುತ್ತಿರಲು ವಿಷ್ಣುವನ್ನು ಆ ವೀರಭದ್ರನು ತಡೆದನು. ೧೦. ನಿನ್ನ ಈ ಬಾಣಗಳು ನನ್ನ ಮನಸ್ಸಿಗೆ ಆಶ್ಚರ್ಯವುಂಟುಮಾಡಿದುವು. ಕೆಚ್ಚೆದೆಯ ವೀರ,ನೀನಾರು? ನಿನ್ನ ಹೆಸರೇನು ಹೇಳು ? ನಾನು ಗೆದ್ದವರಲ್ಲಿ ನೀನೇ ಧೈರ್ಯಶಾಲಿಯಾಗಿದ್ದೀಯೆ

CC-0. Jangamwadi Math Collection. Digitized by eGangotri

ಕೊಚ್ಚಿ ನಸುನಗೆಯೊಳಗೆ ನೀನೆನ್ನ ಸಾಹಸಕೆ
ಮೆಚ್ಚಿ ಫಲವೇಂ ಬೇಗದಿಂ ಸುರರ ಸೆರೆಗಳಂ
ಬಿಚ್ಚಿರಂಬಿಟ್ಟು ನಡೆಯೆನಲಚ್ಯುತಂ ತಾಳ್ವನಲ್ಲೆಂದು ತೆಗೆದೆಚ್ಚನು ೧೦

ನಕ್ಕನಾ ನುಡಿಗೆ ವೀರಂ ಸುರರ ನೀಂ ಬಿಡಿವ
ಕಕ್ಕುಲತೆಯೇತಕವತಾರಂಗಳೊಳ್ ಬರ್ಪ
ಲೆಕ್ಕಮುಸುರುವೆ ನಿನ್ನನೆಸೆವಚ್ಯುತತ್ವಮಂ ನೀನಾವಲೇಕೆ ನಿನಗೆ
ಸೊಕ್ಕೇರಿತಾ ಯಾಗಪಶುರುಚಿಗಳಿಂದದಂ
ಕಕ್ಕಿಸುವೆನೀ ಕ್ಷಣಂ ನೋಡೆನುತೆ ಕಣೆಗಡಿದು
ಕಕ್ಕಸದ ಬಾಣವೊಂಬತ್ತರಿಂ ಹರಿವರೂಥವನೆಚ್ಚು ಬೊಬ್ಬಿರಿದನು ೧೧

ತೇರ್ತಿರುಗುತಾಗಸಕೆ ಪೋಗಿ ಬಳಿಕುಗ್ರನೇ
ಸರ್ತಾಗಲುರಿದು ಬೀಳ್ವನಿತರೊಳ್ ಮಾಧವಂ
ವರ್ತೇರನಳವಡಿಸಿ ಬತೆ ಭಾಪು ವೀರೇಶ ನಿನ್ನ ಸರಿ ಸಾಮರ್ಥ್ಯರು
ವರ್ತಿಸುವರಾರ್ ಜಗದೊಳೆಮ್ಮ ಬಾಣಂಗಳತಿ
ಧೂರ್ತತೆಯನೀಕ್ಷಿಸೆಂದೆಸೆಯಲೈತರುತಿರ್ಪ
ಕಾರ್ತಸ್ವರಾಂಕಿತಶರಂಗಳಂ ಕತ್ತರಿಸಿ ಮಾಧವಂಗಿಂತೆಂದನು ೧೨

ಎಂದು ಹೇಳುತ್ತ ವೀರಭದ್ರನು ಬಾಣಗಳನ್ನು ಬಿಡಲು ಅದನ್ನು ಕೊಚ್ಚಿ ನಸುನಗುತ್ತ ನೀನು ನನ್ನ ಪರಾಕ್ರಮವನ್ನು ಮೆಚ್ಚಿ ಫಲವೇನು ? ತಕ್ಷಣ ದೇವತೆಗಳ ಸೆರೆಯನ್ನು ಬಿಡಿಸಿ ಹೊರಡು ಎಂದು ವಿಷ್ಣು ಹೇಳಲು, ಇವನು ಸುಮ್ಮನಿರುವವನಲ್ಲ ಎಂದು ವೀರ ಭದ್ರನು ಬಾಣ ಪ್ರಯೋಗಿಸಿದನು. ೧೧. ಅವನ ಮಾತನ್ನು ಕೇಳಿ ನಕ್ಕು ವೀರಭದ್ರನು ದೇವತೆಗಳನ್ನು ಬಿಡಿಸುವ ಆಸೆ ನಿನಗೇಕೆ ? ನೀನು ಅವತಾರಗಳನ್ನು ಎತ್ತಿಬರುವ ಆಲೋಚನೆಯನ್ನು ಹೇಳುವೆ. ನಿನ್ನ ಚ್ಯುತಿ ಇಲ್ಲದಿರುವಿಕೆಯನ್ನು ಏತಕ್ಕೆ ಹೇಳುವೆ ? ಯಾಗದಲ್ಲಿ ಬಲಿಕೊಟ್ಟ ಪ್ರಾಣಿಗಳ ರುಚಿಯಿಂದ ನಿನಗೆ ಸೊಕ್ಕೇರಿದೆ. ಅದನ್ನು ಈ ಕ್ಷಣ ಕಕ್ಕಿಸುತ್ತೇನೆ, ನೋಡು ಎನ್ನುತ್ತ ವಿಷ್ಣುವಿನ ಬಾಣಗಳನ್ನು ಕಡಿದು ಕ್ರೂರವಾದ ಒಂಬತ್ತು ಬಾಣಗಳಿಂದ ವಿಷ್ಣುವಿನ ರಥವನ್ನು ಹೊಡೆದು ಅಬ್ಬರಿಸಿದನು. ೧೨. ರಥವು ತಿರುಗುತ್ತ ಆಕಾಶಕ್ಕೆ ಹೋಗಿ ಪ್ರಖರವಾದ ಸೂರ್ಯನ ಕಿರಣ ತಗುಲಿ ಉರಿದು ಬೀಳು ವಷ್ಟರಲ್ಲಿ ವಿಷ್ಣುವು ಬೇರೊಂದು ರಥವನ್ನು ಸಿದ್ಧಗೊಳಿಸಿ, ಭಲಾ, ಭೇಷ್, ವೀರೇಶ ನಿನ್ನ ಸರಿಸಮನಾದ ಶಕ್ತಿವಂತರು ಜಗತ್ತಿನಲ್ಲಿ ಬೇರೆ ಯಾರಿದ್ದಾರೆ ? ನಮ್ಮ ಬಾಣಗಳ ತೀಕ್ಷ್ಣತೆಯನ್ನು ನೋಡು ಎಂದು ಪ್ರಯೋಗಿಸಲು, ಬರುತ್ತಿದ್ದ ಬಂಗಾರದ ಅಕ್ಷರಗಳಿಂದ

CC-0. Jangamwadi Math Collection. Digitized by eGangotri

ಪತ್ರಿವಾಹನ ನಿನ್ನನಾಂ ಕರುಣದಿಂ ಜೀವ
ಮಾತ್ರದಿಂ ಬಿಡುವೆನೆಂದಿರ್ದೆನ್ನೈಸೆನಗೆ ಸಮ
ಶತ್ರುವೇ ನೀನೆನುತೆ ಬತ್ತಳಿಕೆಯಿಂದೆ ಮಸೆವೆತ್ತಂಬನೈದನುಗಿದು
ಛತ್ರ ಚಾಮರ ಸಿಂಧ ಸೀಗುರಿ ವರೂಥಾಶ್ವ
ಚಿತ್ರರಥ ಸಾರಥಿಗಳಂ ಕಡಿದು ಪಂಕೇಜ
ಪತ್ರಾಂಬಕನ ಪಣೆಯನೊಂಬತ್ತು ಬಾಣದಿಂ ಕೆಡೆಯೆಚ್ಚು ಬೊಬ್ಬಿರಿದನು ೧೩

ಹಾರಿಬಿದ್ದಂ ನೆಲಕೆ ನೀಲಗಿರಿ ಬೀಳ್ವಂತೆ
ಕಾರಿದು ರಕ್ತಮಂ ಜೀವನಂ ನಡುನೆತ್ತಿ
ಗೇರಿದುದದಂ ಕಂಡು ವೀರಭದ್ರಂ ಶಿವ ಮಹಾದೇವ ಪಿತನಾಜ್ಞೆಯು
ಮೀರಿತೆಮ್ಮದಟೆಂದು ಹರಿಯುಸಿರನಾರೈದು
ತೋರೆ ಶೈತ್ಯೋಪಚಾರಂಗಳಂ ಕಣ್ದೆರೆದು
ಮಾರುದ್ದಿ ಕೈಗಳಂ ವಿಷ್ಣುವಾರ್ಭಟಿಸಿ ಕೋಪಾಟೋಪದಿಂದೆಳ್ದನು ೧೪

ಆಕ್ಷಣಂ ಬಂದುದಾ ಹರಿಗೆ ಮಣಿರಥಮದಂ
ತೀಕ್ಷಣದೊಳಡರಲಸ್ತ್ರಾಭ್ಯಾಸಮಂ ಹರಿಗೆ
ಶಿಕ್ಷಿಸುವನೋ ವೀರನೆಂಬಂತೆ ಕಾದುತಿರಲಭವನಿವರತಿಸಮರಮಂ

ಕೂಡಿದ್ದ ಬಾಣಗಳನ್ನು ಕತ್ತರಿಸಿ ವಿಷ್ಣುವಿಗೆ ಹೀಗೆ ಹೇಳಿದನು. ೧೩. ಪಕ್ಷಿವಾಹನನೆ, ನಿನ್ನನ್ನು ನಾನು ಕರುಣೆಯಿಂದ ಜೀವದೊಡನೆ ಬಿಡೋಣವೆಂದಿದ್ದೆ. ನೀನು ನನಗೆ ಸರಿಸಮನಾದ ಶತ್ರುವೆ? ಎನ್ನುತ್ತ ಬತ್ತಳಿಕೆಯಿಂದ ಚೂಪಾಗಿ ಮಸೆದಿದ್ದ ಐದು ಬಾಣಗಳನ್ನು ತೆಗೆದು ಛತ್ರ, ಚಾಮರ, ಬಾವುಟ, ಸೀಗುರಿ, ರಥದ ಕುದುರೆ, ಚಿತ್ರರಥ ಮತ್ತು ಸಾರಥಿಗಳನ್ನು ಕಡಿದು, ವಿಷ್ಣುವಿನ ಹಣೆಯನ್ನು ಒಂಬತ್ತು ಬಾಣದಿಂದ ಬಲವಾಗಿ ಹೊಡೆದು ಅಬ್ಬರಿಸಿದನು. ೧೪. ನೀಲಗಿರಿಯು ನೆಲಕ್ಕೆ ಬೀಳುವಂತೆ ವಿಷ್ಣುವು ಹಾರಿಬಿದ್ದನು, ರಕ್ತವನ್ನು ಕಾರಿದನು. ಅವನ ಪ್ರಾಣ ನಡುನೆತ್ತಿಗೆ ಏರಿತು. ಅದನ್ನು ನೋಡಿ ವೀರಭದ್ರನು ಶಿವ,ಮಹಾದೇವ, ನಮ್ಮ ಪರಾಕ್ರಮ ತಂದೆಯ ಆಜ್ಞೆಯನ್ನು ಮೀರಿತು ಎಂದು ವಿಷ್ಣುವಿನ ಪ್ರಾಣದ ಬಗ್ಗೆ ಯೋಚಿಸಿ ಶೈತ್ಯೋಪಚಾರಗಳನ್ನು ಮಾಡಿದನು. ವಿಷ್ಣುವು ಆಗ ಕಣ್ಣನ್ನು ತೆರೆದು ಕೈಗಳನ್ನು ಮಸೆದು ಆರ್ಭಟಿಸಿ ಕೋಪಾಟೋಪದಿಂದ ಎದ್ದನು. ೧೫. ಆ ಕ್ಷಣದಲ್ಲಿ ವಿಷ್ಣುವಿಗೆ ಮಣಿಖಚಿತವಾದ ರಥವು ಬಂದಿತು. ಅದನ್ನು ಬೇಗನೆ ಅವನು ಹತ್ತಿದನು. ವಿಷ್ಣುವಿಗೆ ವೀರಭದ್ರನು ಶಸ್ತ್ರಾಭ್ಯಾಸವನ್ನು ಕಲಿಸುತ್ತಿದ್ದಾನೆಯೊ ಎನ್ನುವಂತೆ ಹೋರಾಡುತ್ತಿರಲು, ಈಶ್ವರನು ಅವರ ಭೀಕರ ಯುದ್ಧವನ್ನು ನೋಡುತ್ತೇನೆ

CC-0. Jangamwadi Math Collection. Digitized by eGangotri

ಈಕ್ಷಿಸುವೆನೆಂದಲ್ಲಿವಟ್ಟು ನಭದೊಳ್ ನಿಂದು
ಪೇಕ್ಷೆಯಿಲ್ಲದೆ ಭೃತ್ಯಪುತ್ರರದಟಂ ನೋಡೆ
ಸಾಕ್ಷಾಜ್ಜಗದ್ರಕ್ಷಸಂಹಾರಕರ್ ಪೋರ್ದರೇನೆಂಬೆನಚ್ಚರಿಯನು ೧೫

ಸಂಗರಂ ಸಮನಾಗುತಿರೆ ಕೋಪದಿಂದೆ ವೀ
ರಂ ಗರುಡವಾಹನನ [1]ವಾಹನಚತುಷ್ಕ[1]ಮಂ
ಮುಂಗಡೆಯ ಸೂತನಂ ಸಿಂಧ ಸೀಗುರಿ ಛತ್ರ ಚಾಮರ ಮಹಾಧನುವನು
ಓಂಗದೈನೂರ್ಸೂಳೊಳಂ ಕಡಿದು ವಿಷ್ಣುವಂ
ಭಂಗಿಸಿ ಧರಾತಳಕೆ ಮೂರ್ಛೆಯಿಂ ಕೆಡೆಪಿ ಚತು
ರಂಗಮಂ ಕೊಲತೊಡಗಿದಂ ಕರುಣೆಯೇ ರುದ್ರಪುತ್ರನೆಂಬೊಲ್ ವೀರನು ೧೬

ನಿಡುಸರಳ ಸಾರದಿಂ ಘೋರದಿಂ ಭಾರದಿಂ
ದಡೆಗೆಡದ ಸೇನೆಯಿಂದಾನೆಯಿಂ ಬೇನೆಯಿಂ
ದೊಡನೆ ಧರೆಗುರುಳ್ವರಿಂ ನರಳ್ವರಿಂ ತೆರಳ್ವರಿಂ ತಮತಮಗೆ ಕಂಡಕಡೆಗೆ
ಕಡಿವಡೆದ ಕೊರಳ್ಗಳಿಂ ಕರುಳ್ಗಳಿಂ ಮರುಳ್ಗಳಿಂ
ಪಿಡಿವಡೆದ ಸುರರಿಂದಸುರರಿಂದೆ ನರರಿಂದೆ
ಮಡಲಿರಿದ ಭೀತಿಯಿಂ ಖಾತಿಯಿಂ ಹೇತಿಯಿಂದಾ ರಣಾಂಕಣಮೆಸೆದುದು ೧೭

ಎಂದು ಆಸೆಪಟ್ಟು, ಆಕಾಶದಲ್ಲಿ ನಿಂತು, ಲಕ್ಷ್ಯವಿಟ್ಟು ತನ್ನ ಸೇವಕ ಮತ್ತು ಮಗನ ಶೌರ್ಯವನ್ನು ನೋಡುತ್ತಿರಲು, ಆಗ ಸಾಕ್ಷಾತ್ ಜಗತ್ತಿನ ರಕ್ಷಕನೂ (ವಿಷ್ಣು) ಸಂಹಾರಕನೂ (ವೀರಭದ್ರ) ಹೋರಾಡಿದರು. ಆಶ್ಚರ್ಯವನ್ನು ಏನೆನ್ನಲಿ ? ೧೬. ಯುದ್ಧ ಸಮನಾಗುತ್ತಿರಲು ಕೋಪದಿಂದ ವೀರಭದ್ರನು ವಿಷ್ಣುವಿನ ರಥಸಮುದಾಯದ ಶೈಬ್ಯಾದಿ ನಾಲ್ಕು ಕುದುರೆಗಳನ್ನೂ ಮುಂದಿನ ಸಾರಥಿಯನ್ನೂ, ಬಾವುಟ,ಸೀಗುರಿ, ಛತ್ರ, ಚಾಮರ ಮತ್ತು ಮಹಾಧನುಸ್ಸನ್ನೂ ಐದುನೂರು ಬಾರಿ ಕಡಿದು ವಿಷ್ಣುವನ್ನು ಸೋಲಿಸಿ ಮೂರ್ಛಿತನಾಗಿ ಭೂಮಿಯ ಮೇಲೆ ಬೀಳುವಂತೆ ಕೆಡವಿದನು. ಶಿವನ ಮಗನೆಂಬ ವೀರ ವೀರಭದ್ರನಿಗೆ ಏನಾದರೂ ಕರುಣವಿದೆಯೆ ಎನ್ನುವಂತೆ ಅವನ ಚತುರಂಗ ಸೈನ್ಯವನ್ನುನಾಶ ಮಾಡತೊಡಗಿದನು. ೧೭. ಪ್ರಖರವಾದ ಉದ್ದವಾದ ಬಾಣದ ಹೊಡೆತದಿಂದ, ಘೋರ ದಿಂದ, ಭಾರದಿಂದ ಕೆಳಗೆ ಬಿದ್ದ ಸೈನ್ಯದಿಂದ ಆನೆಯಿಂದ, ನೋವಿನಿಂದ ತಕ್ಷಣ ನೆಲಕ್ಕೆ ಬೀಳುವವರಿಂದ, ಯಾತನೆ ಪಡುವವರಿಂದ, ತಮತಮಗೆ ಇಷ್ಟಬಂದ ಕಡೆಗೆ ಹೋಗು ವವರಿಂದ, ಕಡಿದುಹೋದ ಕುತ್ತಿಗೆಗಳಿಂದ, ಕರುಳುಗಳಿಂದ, ಭೂತಗಳಿಂದ ಹಿಡಿಯಲ್ಪಟ್ಟ ದೇವತೆಗಳಿಂದ-ರಾಕ್ಷಸರಿಂದ-ಮನುಷ್ಯರಿಂದ ಹಬ್ಬಿದ ಹೆದರಿಕೆಯಿಂದ, ಕೋಪದಿಂದ,

---

[1] ದಾರುವ ಚತುಷ್ಕ



CC-0. Jangamwadi Math Collection. Digitized by eGangotri

ವರನದಿಗಳಂತೆ ಕೀಲಾಲಮಯಮಾಗಲಹಿ
ಪುರದಂತೆ ಕಾಳಿಕವಿಲಾಸಮಯಮಾಗೆ ವ
ತ್ಸರಮಾರ್ಗದಂತೆ ವಿಕ್ರಮಪರಾಭವಯುಕ್ತಮಾಗಲಾ ಸರಸಿಯಂತೆ
ನಿರುತಮಳಿಗಳ ಪದ್ಮಮಯಮಾಗಲುಂದಮರ
ಗಿರಿಯಂತೆ ಸುರಗಣವಿಮಾನಮಯಮಾಗೆ ಸಾ
ಗರದಂತೆ ವಡಬವಾರಣಭಂಗಮಯಮಾಗೆ ರಣಭೂಮಿ ಕಂಗೆಸೆದುದು ೧೮

ಜವಮಯಂ ಬೆಂಗೊಟ್ಟ ಭಟರ ಕಿಕ್ಕಿರಿದಿರ್ದ
ಶವಮಯಂ ನೆಣನ ನೆತ್ತರ ಬಸೆಯ ಜಿಗಿಯರೌ
ರವಮಯಂ ನೆರೆದ ಮಕ್ಷಿಕ ಕಾಕ ಘೂಕ ಬಕ ಶುನಕ ಜಂಬುಕತತಿಗಳ
ರವಮಯಂ ಶಾಕಿನಿ ಪಿಶಾಚ ಡಾಕಿನಿಯರುರು
ತ್ಸವಮಯಂ ಮುರಿದ ತೇರ್ ಕಡಿವಡೆದ ಹಸ್ತಿ ಸೈಂ
ಧವಮಯಂ ತಾನೆನಿಸಿ ವೀರೇಶನಿರಿದ ರಣಮಂಡಲಂ ಕಣ್ಗೆಸೆದುದು ೧೯

ಸುರರ ಮುಂಡಗಳ ಹಸೆವಣೆಗಳೊಳ್ ಕುಳಿತು ಕೆಂ
ಗುರುಳ ಬಣ್ಣದ ಬಾಸಿಗಂಗಳಂ ಧರಿಸಿ ಪೊಸ
ತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮೆಲ್ಗಳ ತೊಡಂಗಳನೆ ತೊಟ್ಟು

ಶಸ್ತ್ರಾಸ್ತ್ರಗಳಿಂದ ಆ ರಣರಂಗ ತುಂಬಿತ್ತು. ೧೮. ಶ್ರೇಷ್ಠವಾದ ನದಿಗಳು ನೀರಿನಿಂದ ತುಂಬಿರುವಂತೆ ರಣರಂಗವು ರಕ್ತದಿಂದ ತುಂಬಿತ್ತು. ನಾಗಲೋಕ ಹಾವಿನ ಮುಖದಿಂದ ಕಂಗೊಳಿಸುವಂತೆ ಯುದ್ಧಭೂಮಿಯು ಗೂಬೆಗಳಿಂದ ತುಂಬಿತ್ತು. ವರ್ಷಗಳಲ್ಲಿ ವಿಕ್ರಮ ಪರಾಭವಗಳಿರುವಂತೆ ಇಲ್ಲಿಯೂ ಗೆಲುವು ಸೋಲುಗಳಿದ್ದುವು. ಕೊಳವು ಯಾವಾಗಲೂ ದುಂಬಿಗಳಿಂದ ಕೂಡಿದ ಕಮಲಗಳನ್ನು ಹೊಂದಿರುವಂತೆ ರಣಭೂಮಿಯು ಸತ್ತವರ ಕತ್ತುಗಳೆಂಬ ಪದ್ಮಗಳಿಂದ ತುಂಬಿತ್ತು. ಮೇರುಪರ್ವತದಂತೆ ದೇವತೆಗಳ ವಿಮಾನಗಳಿಂದ ತುಂಬಿತ್ತು. ಸಮುದ್ರವು ದಾವಾನಲ ಮತ್ತು ಅಲೆಯನ್ನು ಹೊಂದಿರುವಂತೆ ಸತ್ತ ಕುದುರೆ, ಆನೆಗಳಿಂದ ತುಂಬಿದ ಯುದ್ಧಭೂಮಿ ಕಣ್ಣಿಗೆ ಕಾಣಿಸಿತು. ೧೯. ಬೆನ್ನು ಕೊಟ್ಟು ವೇಗವಾಗಿ ಓಡುತ್ತಿದ್ದ ಸೈನಿಕರಿಂದ ತುಂಬಿತ್ತು. ಶವದಿಂದ ಕಿಕ್ಕಿರಿದು ತುಂಬಿತ್ತು. ಮೇದಸ್ಸು, ರಕ್ತ, ನೊಣ, ಹೆಪ್ಪುಗಟ್ಟಿದ ರಕ್ತಗಳಿಂದ ಕೂಡಿ ನರಕಭಯಂಕರವಾಗಿತ್ತು. ಅಲ್ಲಿ ಸೇರಿದ್ದ ನೊಣ, ಕಾಗೆ, ಗೂಗೆ, ಬಕಪಕ್ಷಿ, ನಾಯಿನರಿಗಳ ಕೂಗಾಟದಿಂದ ತುಂಬಿತ್ತು. ಶಾಕಿನಿ, ಪಿಶಾಚಿ, ಡಾಕಿನಿಯರ ಸಡಗರದಿಂದ, ಮುರಿದುಬಿದ್ದ ರಥ, ಕಡಿದುಹಾಕಲ್ಪಟ್ಟ ಆನೆ ಕುದುರೆಗಳ ಮಯವಾಗಿ ವೀರಭದ್ರನು ನಾಶಗೊಳಿಸಿದ ಯುದ್ಧಭೂಮಿ ಕಣ್ಣಿಗೆ ಕಾಣಿಸಿತು. ೨೦. ದೇವತೆಗಳ ಮುಂಡಗಳೇ ಹಸೆಮಣೆ, ಅದರ ಮೇಲೆ ಕುಳಿತ ಭೂತಗಳ ಕೆಂಪುಬಣ್ಣದ ಕೂದಲೇ ಬಾಸಿಂಗ, ಹೊಸಗುಲ್ಮವೇ ಮುಡಿದ ಒತ್ತಾಗಿ ಕಟ್ಟಿದ ಹೂದಂಡೆ, ಎಲುಬುಗಳೇ ತೊಟ್ಟಿದ್ದ ಆಭರಣ, ನರವೇ ಕಂಕಣದದಾರ, ನರಿಗಳ

CC-0. Jangamwadi Math Collection. Digitized by eGangotri

ಸರದ ಕಂಕಣದಾರವೆಸೆಯೆ ಶೋಭಾನವಂ
ಸರಿಗಳಿಂ ಪಾಡಿಸುತೆ ನೆತ್ತರೋಕುಳಿಯಾಡಿ
ಮರುಳ ಮದವಕ್ಕಳೆಸೆಯಲ್ ವೀರನಿರಿದ ಸಮರಾಂಗಣದೊಳೇನೆಂಬೆನು ೨೦

ರುದ್ರಾತ್ಮಜಂ ಮಹಾಕೋಪದಿಂದಾ ಬಲಸ
ಮುದ್ರವಂ ಕಲಕುತಿರೆ ಲಕ್ಷ್ಮೀವರಂ ಸಮರ
ನಿದ್ರೆಯಿಂದೆಚ್ಚೆತ್ತು ಬಲುರೋಷದಿಂದೆ ಗುಡುಗುಡಿಸಿ ದಿವ್ಯಾಸ್ತ್ರಂಗಳ
ಉದ್ರೇಕದಿಂದೆಸೆಯೆ ತುಡುಕುವ ಶರಂಗಳಂ
ಛಿದ್ರಿಸಿದನೊಂದುಳಿಯದಂತೆ ಭಾಪುರೆ ವೀರ
ಭದ್ರನಿದಿರೊಳ್ ಕಾದುತಿರ್ಪರಾತಿಗೆ ವಿಜಯಮೆಂತೆಂದು ಸುರರುಲಿಯಲು ೨೧

ನೋಡಿದಂ ವೀರನಾಟೋಪಮಂ ಕೋಪಮಂ
ಮಾಡಿದಂ ವೈಷ್ಣವಾಸ್ತ್ರಮನಾಗ ಚಾಪದೊಳ್
ಪೂಡಿದಂ ವೀರಭದ್ರನ ಸರಿಸದೊಳ್ ಬಿಟ್ಟು ಸಕಲಲೋಕಮನುರಿಯೊಳು
ಕೂಡಿದಂ ಬರ್ಪ ಬಾಣವನವಂ ಖಂಡಿಸೀ
ಡಾಡಿದಂ ರುದ್ರಾಸ್ತ್ರದಿಂ ಮತ್ತೆ ಖತಿಯೊಳೋ
ಲಾಡಿದಂ ಹರಿಯೆನ್ನನಳಲಿಸಿದ ಫಲಮನುಣ್ಣೆನುತೆ ಚಕ್ರದೊಳಿಟ್ಟನು ೨೨

ಕೂಗೇ ಶೋಬಾನದ ಹಾಡು, ರಕ್ತವೇ ಓಕುಳಿ (ಆರತಿ)ಯಾಗಿ ಆ ಭೂತಗಳೇ ಮದುಮಣಿಗರಾಗಿ ವೀರಭದ್ರನು ಸಾಲಗೊಳಿಸಿದ ಯುದ್ಧಭೂಮಿಯಲ್ಲಿ ಕಾಣಿಸುತ್ತಿದ್ದರು. ೨೧. ಶಿವನ ಮಗನಾದ ವೀರಭದ್ರನು ಅತಿಯಾದ ಕೋಪದಿಂದ ಸೇನಾಸಮುದ್ರವನ್ನು ಕವಡುತ್ತಿರಲು, ವಿಷ್ಣುವು ಯುದ್ಧದಿಂದ ಉಂಟಾದ ಮೂರ್ಛೆಯಿಂದ ಎಚ್ಚರಗೊಂಡು, ಬಹಳವಾದ ರೋಷದಿಂದ ಗುಡುಗುಡಿಸಿ, ದಿವ್ಯವಾದ ಅಸ್ತ್ರಗಳನ್ನು ಉದ್ರೇಕಗೊಂಡು ಪ್ರಯೋಗಿಸಲು, ಭಲೇ ವೀರಭದ್ರನ ಎದುರಿನಲ್ಲಿ ಯುದ್ಧಮಾಡುವ ಶತ್ರುವಿಗೆ ಜಯ ಹೇಗೆ ಲಭಿಸಲು ಸಾಧ್ಯ ಎಂದು ದೇವತೆಗಳು ಹೇಳುತ್ತಿರಲು ತನ್ನ ಮೇಲೆ ಬರುತ್ತಿದ್ದ ಆ ಎಲ್ಲ ಅಸ್ತ್ರಗಳನ್ನೂ ವೀರಭದ್ರನು ಒಂದೂ ಉಳಿಯದಂತೆ ತುಂಡರಿಸಿದನು. ೨೨. ವಿಷ್ಣು ವೀರಭದ್ರನ ಅಟಾಟೋಪವನ್ನು ನೋಡಿ ಬಲು ಕೋಪಗೊಂಡು ವೈಷ್ಣವಾಸ್ತ್ರವನ್ನು ಬಿಲ್ಲಿಗೆ ಹೂಡಿದನು. ವೀರಭದ್ರನ ಎದುರಿನಲ್ಲಿ ಅದನ್ನು ಬಿಟ್ಟನು. ಎಲ್ಲ ಲೋಕವನ್ನೂ ಬೆಂಕಿಯಿಂದ ತುಂಬಿದನು. ಈ ರೀತಿ ಬರುತ್ತಿರುವ ಬಾಣವನ್ನು ವೀರಭದ್ರನು ರುದ್ರಾಸ್ತ್ರದಿಂದ ತುಂಡರಿಸಿ ಬಿಸಾಡಿದನು. ಮತ್ತೆ ವಿಷ್ಣು ಅತಿಯಾಗಿ ಕೋಪಗೊಂಡು ನನಗೆ ತೊಂದರೆ ಮಾಡಿದ ಫಲವನ್ನು ಅನುಭವಿಸು ಎನ್ನುತ್ತ ಚಕ್ರದಿಂದ ಹೊಡೆದನು.

CC-0. Jangamwadi Math Collection. Digitized by eGangotri

ಬೆಚ್ಚಿದುವು ನಿಖಿಳಲೋಕಂಗಳಾ ಕ್ಷಣದೊಳುರ್ಕಿ
ಮುಚ್ಚಿದುವು ಸೂರ್ಯಕಿರಣಂಗಳಾಕಾಶದಿಂ
ದುಚ್ಚಿದುವು ತಾರೆಗಳ್ ಧರಣಿ ನಡುಗಿತು ಸಪ್ತಸಾಗರಂಗಳ್ ಕುದಿಯಲು
ಕಿಚ್ಚನುಗುಳುತೆ ಬರ್ಪ ಘನಚಕ್ರಮಂ ನಡುವೆ
ಕೊಚ್ಚಿ ನೂರ್ಕಡಿಮಾಡಿ ಕೆಯ್ಯೊಡನೆ ವೀರೇಶ
ನೆಚ್ಚಿ ಹರಿರಥ ಸೂತ ತುರಗ ಮೊದಲಾದವಂ ಸವರಿದಂ ಸಾಹಸದೊಳು ೨೩

ಕಿರಣವಿಲ್ಲದ ಸೂರ್ಯನಂತೆ ಭರಿಕ್ಕೈ ಪರಿದ
ಕರಿಯಂತೆ ದಂತಂಗಳುಡಿದುರಗನಂತಸುರ
ಹರನತಿಭಯಂಗೊಂಡು ತಾಂ ಗೆಲುವುಪಾಯಮಂ ಕಾಣದಲೆ ವೇಗದಿಂದೆ
ಎರಳೆಯಾಕಾರದಿಂದೋಡುತ್ತಿರಲ್ ಕಂಡು
ಹರಸುತಂ ಕಡುವೇಗದಿಂದೊಂದು ಬಾಣಮಂ
ಪರಿವಿಡಲ್ ಬೇಗದಿಂ ಬೆಂಬತ್ತಿ ಸರಳೆರಳೆಯಂ ಕೆಡೆಪಿತಾ ಕ್ಷಣದೊಳು ೨೪

ಪಚ್ಚಳವನೊಡೆದು ಬಳಿಕಾ ಸರಳ್ ನೆತ್ತಿಯೊಳ
ಗುಚ್ಚಳಿಸಿದುದು ಬಳಿಕ್ಕಾ ಹರಿಣನುರೆ ನೆಲಂ
ಗಚ್ಚಿ ನೆತ್ತರ್ಗಾರಿ ಬಾಯ್ಬಿಡಲ್ ವೀರಭದ್ರಂ ಮಹಾಕರುಣದಿಂದೆ
ಸಚ್ಚಿದಾನಂದರೂಪಂ ತೋರಿ ವಿಷ್ಣುವಂ
ಬೆಚ್ಚಬೇಡೇಳ್ ಪ್ರಾಣಮಂ ಕಾಯ್ವೆನೆಂದೆಂಬ
ಮೆಚ್ಚರಿದು ನಿಜರೂಪಿನಿಂ ವೀರಭದ್ರನಂ ನುತಿಸಿದಂ ಭಕ್ತಿಯಿಂದೆ ೨೫

೨೩. ಆ ಕ್ಷಣದಲ್ಲಿ ಎಲ್ಲ ಲೋಕಗಳೂ ಬೆಚ್ಚಿದುವು, ಸೂರ್ಯನ ಕಿರಣಗಳೆಲ್ಲ ಮುಚ್ಚಿ ಹೋದುವು. ಆಕಾಶದಿಂದ ನಕ್ಷತ್ರಗಳು ಉದುರಿದುವು, ಭೂಮಿ ನಡುಗಿತು, ಸಪ್ತ ಸಮುದ್ರ ಗಳೂ ಕುದಿದುವು. ಬೆಂಕಿಯನ್ನು ಉಗುಳುತ್ತ ಬರುತ್ತಿರುವ ಮಹಾಶಕ್ತಿಯುತವಾದ ಚಕ್ರ ವನ್ನು ಮಧ್ಯದಲ್ಲಿಯೇ ಕೊಚ್ಚಿ ನೂರು ಚೂರು ಮಾಡಿ, ಸಾಹಸದಿಂದ ಹೊಡೆದು ವೀರ ಭದ್ರನು ವಿಷ್ಣುವಿನ ರಥ, ಸಾರಥಿ, ಕುದುರೆಗಳನ್ನು ನಾಶಗೊಳಿಸಿದನು. ೨೪. ಕಿರಣ ವನ್ನು ಕಳೆದುಕೊಂಡ ಸೂರ್ಯನಂತೆ, ಸೊಂಡಿಲು ಕಡಿದ ಆನೆಯಂತೆ, ಹಲ್ಲುಗಳು ಉದುರಿ ಹೋದ ಹಾವಿನಂತೆ ವಿಷ್ಣುವು ಅತಿಯಾಗಿ ಹೆದರಿ, ಗೆಲ್ಲುವ ಉಪಾಯ ತೋರದೆ ಬಹಳ ವೇಗವಾಗಿ ಜಿಂಕೆಯ ರೂಪ ಧರಿಸಿ ಓಡುತ್ತಿರಲು ಅದನ್ನು ನೋಡಿ ವೀರಭದ್ರನು ಅತಿ ವೇಗದಿಂದ ಬಾಣವೊಂದನ್ನು ಬಿಡಲು ಅದು ಶೀಘ್ರವಾಗಿ ಜಿಂಕೆಯ ಬೆನ್ನಟ್ಟಿ ಆ ಕ್ಷಣವಲ್ಲಿ ಅದನ್ನು ಹೊಡೆದು ಕೆಡವಿತು. ೨೫. ಚಪ್ಪೆಯನ್ನು ಒಡೆದು ಬಾಣವು ನೆತ್ತಿಯಲ್ಲಿ ಹೊರಹೊರಟಿತು. ಆಗ ಆ ಜಿಂಕೆಯು ನೆಲವನ್ನು ಕಚ್ಚಿ ರಕ್ತಕಾರಿ ಬಾಯ್ಬಿಡುತ್ತಿರಲು ಅದನ್ನು ನೋಡಿ ವೀರಭದ್ರನು ಬಹಳ ಕರುಣೆಯಿಂದ ತನ್ನ ಸಚ್ಚಿದಾನಂದ ರೂಪವನ್ನು ತೋರಿಸಿ ವಿಷ್ಣುವನ್ನು ಕುರಿತು ಅಂಜಬೇಡ, ಏಳು ನಿನ್ನ ಪ್ರಾಣವನ್ನು ಕಾಪಾಡುತ್ತೇನೆ ಎಂದನು. ಆಗ ವಿಷ್ಣುವು ಅದನ್ನು ತಿಳಿದು ತನ್ನ ನಿಜರೂಪನ್ನು ತಳೆದು ವೀರಭದ್ರನನ್ನು

CC-0. Jangamwadi Math Collection. Digitized by eGangotri

ಜಯ ಜಯ ಸುಚಾರಿತ್ರ ಭವಗಣಾಂಬುಧಿಛೈತ್ರ
ಜಯ ಜಯ ವಿರಾಡ್ರೂಪ ಹಸ್ತಮಂಡಿತಚಾಪ
ಜಯ ಜಯ ಸುಜನಪಾಲ ದುಷ್ಟನಿಗ್ರಹಶೀಲ ಜಯ ಜಯ ಸುಭಕ್ತಭಕ್ತ
ಜಯ ಜಯ ಶುಭಾಕಾರ ಜನನಮರಣವಿದೂರ
ಜಯ ಜಯ ನತೋದ್ಧರಣ ದಕ್ಷಮುಖಸಂಹರಣ
ಜಯ ಜಯ ಸುಫಣಿಭೂಷ ವೀರೇಶ ಸರ್ವೇಶ ಜಯ ಜಯತು ಸಲಹೆಂದನು ೨೬

ಸಾಹಸ್ರವದನ ರಕ್ಷಿಸು ರಕ್ಷಿಸೆನ್ನ ತ್ರಿ
ಸಾಹಸ್ರನಯನ ರಕ್ಷಿಸು ರಕ್ಷಿಸೈ ಯುಗಳ
ಸಾಹಸ್ರಬಾಹು ರಕ್ಷಿಸು ರಕ್ಷಿಸೈ ನಿನ್ನ ಮಹಿಮೆಯಂ ಬಣ್ಣಿಸುವೊಡೆ
ಸಾಹಸ್ರವದನರಗಣಿತಕೋಟಿ ತಮ್ಮ ಯುಗ
ಸಾಹಸ್ರ ಜಿಹ್ವೆಯಿಂ ಪೊಗಳಲಾರ್ಪರೆಯೆಂದು
ಸಾಹಸ್ರನಾಮದಿಂ ನುತಿಸುತಿರೆ ವಿಷ್ಣುವಿಗೆ ವೀರೇಶನಿಂತೆಂದನು ೨೭

ಬರ್ಪುದಾವಾಗಲುಂ ಬಾರದಿರದೈಸೆ ಕಂ
ದರ್ಪಪಿತ ನೀಂ ನೋಯಲೇಕೆ ಖಳದಕ್ಷನ ಸ
ದರ್ಪಮುಖಮಂ ನೋಳ್ಪೆವೆಂದೆನಲ್ ಕೇಳಿ ಹರಿ ಭಯಭರಿತ ಭಕ್ತಿಯಿಂದೆ

ಭಕ್ತಿಯಿಂದ ಸ್ತುತಿಸಿದನು. ೨೬. ಸಚ್ಚಾರಿತ್ರ್ಯವುಳ್ಳವನಿಗೆ ಜಯ ಜಯ, ಭವಸಾಗರವನ್ನು ದಾಟಿಸುವ ನಾವೆಯೇ ಜಯ ಜಯ, ವಿರಾಡ್ರೂಪ, ಕೈಯಲ್ಲಿ ಬಿಲನ್ನು ಹಿಡಿದಿರುವವನೇ ಜಯ ಜಯ, ಶಿಷ್ಟರಕ್ಷಕ, ದುಷ್ಟನಿಗ್ರಹನೇ ಜಯ ಜಯ, ಉತ್ತಮ ಭಕ್ತರನ್ನು ಪ್ರೀತಿಸುವವನೇ ಜಯ ಜಯ, ಮಂಗಳಾಕಾರನೇ, ಹುಟ್ಟು ಸಾವುಗಳಿಂದ ದೂರಾದವನೇ ಜಯ ಜಯ, ಶರಣಾಗತರಕ್ಷಕ,ದಕ್ಷಯಜ್ಞನಾಶಕ ಜಯ ಜಯ,ಸರ್ಪಭೂಷಣ, ವೀರೇಶ, ಸರ್ವೇಶ ಜಯ ಜಯತು ರಕ್ಷಿಸು ಎಂದನು. ೨೭. ಸಾವಿರ ಮುಖವುಳ್ಳವನೇ ಕಾಪಾಡು, ಮೂರು ಸಾವಿರ ಕಣ್ಣುಳ್ಳವನೇ ನನ್ನನ್ನು ಕಾಪಾಡು, ಎರಡು ಸಾವಿರ ತೋಳುಗಳುಳ್ಳವನೇ ರಕ್ಷಿಸಯ್ಯ, ನಿನ್ನ ಮಹಿಮೆಯನ್ನು ವರ್ಣಿಸುವುದಾದರೆ ಅನೇಕ ಕೋಟಿ ಸಂಖ್ಯೆ ಸಾವಿರ ಮುಖದವರು ಎಂದರೆ ಆದಿಶೇಷರು ತಮ್ಮ ಎರಡು ಸಾವಿರ ನಾಲಗೆಯಿಂದಲೂ ಹೊಗಳಲು ಅಸಮರ್ಥರು ಎಂದು ಸಾವಿರ ಹೆಸರಿನಿಂದ ವಿಷ್ಣುವು ಸ್ತುತಿಸುತ್ತಿರಲು ವೀರೇಶನು ಹೀಗೆ ಹೇಳಿದನು. ೨೮. ಬರುವುದು ಯಾವಾಗಲೂ ಬರದೆ ಇರುವುದಿಲ್ಲ. ವಿಷ್ಣುವೇ ಅದಕ್ಕೆ ನೀನು ಏಕೆ ವ್ಯಥೆಪಡುವೆ. ದುಷ್ಟನಾದ ದಕ್ಷನ ದರ್ಪದಿಂದ ಕೂಡಿದ ಯಾಗವು ಹೇಗೆ ನೆರವೇರುವುದೋ ನೋಡುತ್ತೇನೆ ಎಂದನು. ಅದನ್ನು ಕೇಳಿ ವಿಷ್ಣುವು ಭಯದಿಂದ ಕೂಡಿದ ಭಕ್ತಿಯಿಂದ, ಸರ್ಪಭೂಷಣನೆ ಯಜ್ಞ ಮೊದಲಾದ ಒಳ್ಳೆಯ

CC-0. Jangamwadi Math Collection. Digitized by eGangotri

ಸರ್ಪಭೂಷಣನೆ ಯಜ್ಞಾದಿ ಸತ್ಕರ್ಮದಿಂ
ದಿರ್ಪವರ ಕೃತ್ಯಕೀ ಕಪಟಕೃಷ್ಣಾಜಿನಂ
ಬರ್ಪಂತು ಗೈವುದೆನಲೊಪ್ಪಿ ವೀರಂ ಸೀಳಲನುಗೈದನಾ ದೇಹಮಂ ೨೮

ಸರಸರನೆ ಸೀಳ್ದು ಚರ್ಮಂದೆಗೆವುತಿದನಾವ
ರರಿತದಿಂ ಜಪ ಹೋಮ ಯಜ್ಞಾದಿ ಕರ್ಮದೊಳ್
ತರಿಸಂದು ಭಕ್ತಿಯಿಂ ಬಳಸಿದಪರವರ ವರದುಷ್ಕರ್ಮಪಾಶಂಗಳು
ಪರಿಪಟ್ಟು ಪೋಗಲೆಂದಧಿಕ ವರಮಿತ್ತು ಮುಂ
ದುರುವ ಕಜ್ಜಮನೆಣಿಸುತಿರಲಿತ್ತಲತ್ತ ರಸ
ವರತ ನಾಲಗೆಗೊನೆಯ ದೂತರೈತಂದು ದೀಕ್ಷಿತನ ಮುಂದಿಂತೆಂದರು ೨೯

ಜೀಯ ಬಿಡು ದೀಕ್ಷೆಯಂ ವೀರನೊಳ್ ಕಾದಿ ನಾ
ರಾಯಣಂ ಶರಣೆಂದು ಜೀವಿಸಿದನಿನ್ನೇನು
ಪಾಯಮಂ ಕಂಡಪೆ ಶರಣ್ಬೊಗುವೆಯೋ ರಣಂಬೊಗುವೆಯೋ ಪೇಳೆನಲ್ಕೆ
ವಾಯುಸಖಿನೊಳ್ ತುಪ್ಪಮಂ ಪೊಯ್ದವೊಲ್ ತನ್ನ
ಕಾಯದೊಳ್ ಭುಗಿಭುಗಿಲೆನುತ್ತುರಿವ ಶಿಖಿಯ ಭಾ
ರಾಯಮಾನಸನಾಗಿ ದಕ್ಷನಾ ಕೆಲಬಲದ ಮಂತ್ರಿಗಳೊಳಿಂತೆಂದನು ೩೦

ಆರಳಿದರೇಂ ಮರಳಿ ಪಡೆವ ಬಲ್ಪೆಮ್ಮೊಳಿರೆ
ವೀರನೇಂ ಗಹನಮವನಂ ಗೆಲ್ವುದೇಂ ಯಾಗ
ಭಾರದಿಂದಾವಿರಲ್ಕೆಂತಾದುದೆಂದು ದಕ್ಷಂ ಮಹಾಕೋಪದಿಂದೆ

ಕೆಲಸಗಳಲ್ಲಿ ತೊಡಗಿರುವವರ ಉಪಯೋಗಕ್ಕೆ ಈ ಕೃತಕವಾದ ಜಿಂಕೆಯ ಚರ್ಮವು ಉಪಯುಕ್ತವಾಗುವಂತೆ ಅನುಗ್ರಹಿಸು ಎಂದನು. ಅದಕ್ಕೆ ಒಪ್ಪಿ ವೀರಭದ್ರನು ಆ ದೇಹ ವನ್ನು ಸೀಳಲು ಸಿದ್ಧನಾದನು. ೨೯. ಸರಸರ ಸೀಳಿ ಚರ್ಮವನ್ನು ತೆಗೆಯುತ್ತ, ಇದನ್ನು ಯಾರು ಚೆನ್ನಾಗಿ ತಿಳಿದು ಜಪ, ಹೋಮ, ಯಜ್ಞ ಮೊದಲಾದ ಕೆಲಸಗಳಲ್ಲಿ ನಿಜವಾದ ಭಕ್ತಿಯಿಂದ ಬಳಸುತ್ತಾರೆಯೊ ಅವರ ಭಯಂಕರ ಪಾಪಕರ್ಮಪಾಶಗಳು ಹರಿದು ಹೋಗಲಿ ಎಂದು ವರವನ್ನು ಕೊಟ್ಟು ಮುಂದಿನ ಅಧಿಕವಾದ ಕೆಲಸವನ್ನು ಆಲೋಚಿಸು ತ್ತಿರಲು, ಆ ಕಡೆ, ನಾಲಗೆ ಒಣಗಿಹೋದ ದಕ್ಷನ ದೂತರು ಓಡಿಬಂದು ಯಜ್ಞದೀಕ್ಷೆ ಯಲ್ಲಿದ್ದ ಅವನ ಮುಂದೆ ಹೀಗೆ ಹೇಳಿದರು. ೩೦. ಸ್ವಾಮಿ ದೀಕ್ಷೆಯನ್ನು ಬಿಡು, ವೀರ ಭದ್ರನೊಡನೆ ಯುದ್ಧಮಾಡಿದ ವಿಷ್ಣುವು ಶರಣಾಗತನಾಗಿ ಪ್ರಾಣ ಉಳಿಸಿಕೊಂಡನು, ನೀನು ಇನ್ನು ಯಾವ ಉಪಾಯ ಮಾಡುತ್ತೀಯ ? ಶರಣಾಗತನಾಗುತ್ತೀಯೊ, ಯುದ್ಧ ಮಾಡುತ್ತೀಯೋ ಹೇಳು ಎಂದರು. ಅದನ್ನು ಕೇಳಿ ಬೆಂಕಿಯಲ್ಲಿ ತುಪ್ಪವನ್ನು ಸುರಿದಂತೆ ತನ್ನ ಶರೀರದಲ್ಲಿ ಭುಗಿ ಭುಗಿಲೆನ್ನುತ್ತ ಉರಿಯುವ ಕೋಪಾಗ್ನಿಯಿಂದ ಕೂಡಿದ ಮನಸ್ಸಿ ನಿಂದ ದಕ್ಷನು ತನ್ನ ಅಕ್ಕಪಕ್ಕದಲ್ಲಿದ್ದ ಮಂತ್ರಿಗಳ ಕೂಡೆ ಹೀಗೆ ಹೇಳಿದನು. ೩೧. ಮತ್ತೆ ಮತ್ತೆ ಸೃಷ್ಟಿಸುವ ಸಾಮರ್ಥ್ಯ ನಮ್ಮಲ್ಲಿರುವಾಗ ಯಾರು ನಾಶವಾದರೇನು ?

CC-0. Jangamwadi Math Collection. Digitized by eGangotri

ಬೂರಂ ಸಮೀರನಂ ಗೆಲ್ವುಕ್ತಿಯಂತೆ ನೀ
ಹಾರವಗ್ನಿಯಂಪಟ್ಟಿ ಬಾಳ್ವೆನೆಂಬಂತಿರ್ದ
ನಾರಾದೊಡಂ ಫಲಗ್ರಹಿಗಳಜ್ಞಾನರಾಗರೆ ಲೋಕದೊಳಗೆಂದನು ೩೧

ಬಿಟ್ಟನಾ ಮಂತ್ರದುಚ್ಚರಣೆಯಂ ಹವಿಗಳಂ
ತೊಟ್ಟನಿಳೆಗಿಳಿಪಿದಂ ದಕ್ಷನಾ ಕ್ಷಣದೊಳಗೆ
ದಿಟ್ಟನಾಗುತೆ ಪಡೆದನಖಿಳ ಚತುರಂಗವಂ ತನ್ನ ಮೊಮ್ಮಕ್ಕಳೆನಿಪ
ಬೆಟ್ಟದಂತೊಪ್ಪುತಿರ್ಪರ್ವತಾರ್ಕೋಟಿ ಜಗ
ಜಟ್ಟಿರಕ್ಕಸದೊರೆಗಳಂ ಕರೆಸಿ ನೇಮಮಂ
ಕೊಟ್ಟು ಕಳುಹಿದನತ್ತಲಿತ್ತ ದಕ್ಷಂ ಹವಿಗಳಂ ಬೇಳುತಿರುತಿರ್ದನು ೩೨

ಕಾಳಮೇಘಾಳಿ ನಡೆದಪುವೊ ಕೈಕಾಲ್ ಮೂಡಿ
ನೀಲಾದ್ರಿಗಳ್ ತಳರ್ದಪುವೊ ಕತ್ತಲೆ ಬಂದು
ಮೇಲಾದ ಬಹುರೂಪವಂ ಧರಿಸಿ ಸಂದಣಿಸಿ ಪೋದಪುವೊ ಪೇಳೆನಲ್ಕೆ
ಮೇಳದಿಂ ತಾರಕ ನಿಶುಂಭ ಜಂಭಾಸುರರ್
ಭೀಳಧೂಮ್ರಾಕ್ಷ ಮಹಿಷಾಸುರ ಮಹಾಪಾಪ
ಶೀಲ ಚಂಡಾಸುರ ಕರಾಳರೆಂಬತುಳದಾನವರೊದಗಿದರ್ ಕ್ಷಣದೊಳು ೩೩.

ವೀರಭದ್ರನು ನಮಗೆಷ್ಟರವನು ? ಅವನನ್ನು ಗೆಲ್ಲುವುದು ಏನು ಕಷ್ಟ ? ಯಜ್ಞದ ಕಾರ್ಯದಲ್ಲಿ ನಾವು ತೊಡಗಿದ್ದರಿಂದ ಇಷ್ಟೆಲ್ಲ ಆಯಿತು ಎಂದು ದಕ್ಷನು ಮಹಾಕೋಪದಿಂದ ಬೂರುಗದ ಮರ ಗಾಳಿಯನ್ನು ಗೆಲ್ಲುವ ಸಮಾಚಾರದಂತೆ, ಮಂಜು ಅಗ್ನಿಯನ್ನು ಹಿಂದಟ್ಟಿ ಬಾಳುತ್ತೇನೆ ಎನ್ನುವಂತೆ ಇದ್ದನು. ಫಲದಿಂದ ಕೂಡಿದವರು ಯಾರಾದರೂ ಲೋಕದಲ್ಲಿ ಅಜ್ಞಾನಿಗಳಾಗದೆ ಇರುತ್ತಾರೆಯೆ ಎಂದು ಚೆನ್ನಬಸವಣ್ಣನು ಹೇಳಿದನು. ೩೨. ದಕ್ಷನು ಆ ಕ್ಷಣದಲ್ಲಿ ಮಂತ್ರೋಚ್ಚಾರಣೆಯನ್ನು ಬಿಟ್ಟುಬಿಟ್ಟನು. ಎತ್ತಿದ್ದ ಹವಿಸ್ಸನ್ನು ಕೆಳಗಿಳಿಸಿದನು. ಮಹಾಧೈರ್ಯದಿಂದ ಚತುರಂಗಸೈನ್ಯವನ್ನು ಸೃಷ್ಟಿಸಿದನು.ತನ್ನ ಮೊಮ್ಮಕ್ಕಳಾದ ಬೆಟ್ಟದಾಕಾರದಲ್ಲಿರುವ ಇಪ್ಪತ್ತಾರು ಕೋಟಿ ಜಗಜಟ್ಟಿಗಳಾದ ರಾಕ್ಷಸರನ್ನು ಕರೆಸಿ, ಅವರಿಗೆ ಅಪ್ಪಣೆ ಮಾಡಿ ಕಳಿಸಿದನು, ಅನಂತರ ದಕ್ಷನು ಅಗ್ನಿಯಲ್ಲಿ ತುಪ್ಪ ಮೊದಲಾದುವನ್ನು ಆಹುತಿ ಕೊಡುತ್ತಿದ್ದನು. ೩೩. ಕಾಲಮೇಘಗಳ ಸಮೂಹ ನಡೆಯುತ್ತಿವೆಯೊ ! ನೀಲಾದ್ರಿಗಳಿಗೆ ಕೈಕಾಲುಗಳು ಬಂದು ಹೊರಟುವೊ ! ಕತ್ತಲೆಯೆ ನಡೆದು ಬಂದು ಅನೇಕ ರೂಪಗಳನ್ನು ಧರಿಸಿ ಒಟ್ಟುಗೂಡಿ ಹೊರಟುವೊ ಹೇಳು ಎನ್ನುವಂತೆ ತಾರಕ, ನಿಶುಂಭ, ಜಂಭಾಸುರರು; ಭಯಂಕರನಾದ ಧೂಮ್ರಾಕ್ಷ, ಮಹಿಷಾಸುರ, ಮಹಾಪಾಪಶೀಲನಾದ ಚಂಡಾಸುರ, ಕರಾಳ ಎಂಬ ಅನೇಕ ರಾಕ್ಷಸರು ಆ ಕ್ಷಣದಲ್ಲಿ ಒಟ್ಟಾಗಿ

CC-0. Jangamwadi Math Collection. Digitized by eGangotri

ಸರ್ಪಭೂಷಣನೆ ಯಜ್ಞಾದಿ ಸತ್ಕರ್ಮದಿಂ
ದಿರ್ಪವರ ಕೃತ್ಯಕೀ ಕಪಟಕೃಷ್ಣಾಜಿನಂ
ಬರ್ಪಂತು ಗೈವುದೆನಲೊಪ್ಪಿ ವೀರಂ ಸೀಳಲನುಗೈದನಾ ದೇಹಮಂ ೨೮

ಸರಸರನೆ ಸೀಳ್ದು ಚರ್ಮಂದೆಗೆವುತಿದನಾವ
ರರಿತದಿಂ ಜಪ ಹೋಮ ಯಜ್ಞಾದಿ ಕರ್ಮದೊಳ್
ತರಿಸಂದು ಭಕ್ತಿಯಿಂ ಬಳಸಿದಪರವರ ವರದುಷ್ಕರ್ಮಪಾಶಂಗಳು
ಪರಿಪಟ್ಟು ಪೋಗಲೆಂದಧಿಕ ವರಮಿತ್ತು ಮುಂ
ದುರುವ ಕಜ್ಜಮನೆಣಿಸುತಿರಲಿತ್ತಲತ್ತ ರಸ
ವರತ ನಾಲಗೆಗೊನೆಯ ದೂತರೈತಂದು ದೀಕ್ಷಿತನ ಮುಂದಿಂತೆಂದರು ೨೯

ಜೀಯ ಬಿಡು ದೀಕ್ಷೆಯಂ ವೀರನೊಳ್ ಕಾದಿ ನಾ
ರಾಯಣಂ ಶರಣೆಂದು ಜೀವಿಸಿದನಿನ್ನೇನು
ಪಾಯಮಂ ಕಂಡಪೆ ಶರಣ್ಬೊಗುವೆಯೋ ರಣಂಬೊಗುವೆಯೋ ಪೇಳೆನಲ್ಕೆ
ವಾಯುಸಖನೊಳ್ ತುಪ್ಪಮಂ ಪೊಯ್ದವೊಲ್ ತನ್ನ
ಕಾಯದೊಳ್ ಭುಗಿಭುಗಿಲೆನುತ್ತುರಿವ ಶಿಖಿಯ ಭಾ
ರಾಯಮಾನಸನಾಗಿ ದಕ್ಷನಾ ಕೆಲಬಲದ ಮಂತ್ರಿಗಳೊಳಿಂತೆಂದನು ೩೦

ಆರಳಿದರೇಂ ಮರಳಿ ಪಡೆವ ಬಲ್ಪೆಮ್ಮೊಳಿರೆ
ವೀರನೇಂ ಗಹನಮವನಂ ಗೆಲ್ವುದೇಂ ಯಾಗ
ಭಾರದಿಂದಾವಿರಲ್ಕೆಂತಾದುದೆಂದು ದಕ್ಷಂ ಮಹಾಕೋಪದಿಂದೆ

ಕೆಲಸಗಳಲ್ಲಿ ತೊಡಗಿರುವವರ ಉಪಯೋಗಕ್ಕೆ ಈ ಕೃತಕವಾದ ಜಿಂಕೆಯ ಚರ್ಮವು ಉಪಯುಕ್ತವಾಗುವಂತೆ ಅನುಗ್ರಹಿಸು ಎಂದನು. ಅದಕ್ಕೆ ಒಪ್ಪಿ ವೀರಭದ್ರನು ಆ ದೇಹವನ್ನು ಸೀಳಲು ಸಿದ್ಧನಾದನು. ೨೯. ಸರಸರ ಸೀಳಿ ಚರ್ಮವನ್ನು ತೆಗೆಯುತ್ತ, ಇದನ್ನು ಯಾರು ಚೆನ್ನಾಗಿ ತಿಳಿದು ಜಪ, ಹೋಮ, ಯಜ್ಞ ಮೊದಲಾದ ಕೆಲಸಗಳಲ್ಲಿ ನಿಜವಾದ ಭಕ್ತಿಯಿಂದ ಬಳಸುತ್ತಾರೆಯೊ ಅವರ ಭಯಂಕರ ಪಾಪಕರ್ಮಪಾಶಗಳು ಹರಿದು ಹೋಗಲಿ ಎಂದು ವರವನ್ನು ಕೊಟ್ಟು ಮುಂದಿನ ಅಧಿಕವಾದ ಕೆಲಸವನ್ನು ಆಲೋಚಿಸುತ್ತಿರಲು, ಆ ಕಡೆ, ನಾಲಗೆ ಒಣಗಿಹೋದ ದಕ್ಷನ ದೂತರು ಓಡಿಬಂದು ಯಜ್ಞದೀಕ್ಷೆಯಲ್ಲಿದ್ದ ಅವನ ಮುಂದೆ ಹೀಗೆ ಹೇಳಿದರು. ೩೦. ಸ್ವಾಮಿ ದೀಕ್ಷೆಯನ್ನು ಬಿಡು, ವೀರಭದ್ರನೊಡನೆ ಯುದ್ಧಮಾಡಿದ ವಿಷ್ಣುವು ಶರಣಾಗತನಾಗಿ ಪ್ರಾಣ ಉಳಿಸಿಕೊಂಡನು, ನೀನು ಇನ್ನು ಯಾವ ಉಪಾಯ ಮಾಡುತ್ತೀಯ ? ಶರಣಾಗತನಾಗುತ್ತೀಯೊ, ಯುದ್ಧ ಮಾಡುತ್ತಿಯೋ ಹೇಳು ಎಂದರು. ಅದನ್ನು ಕೇಳಿ ಬೆಂಕಿಯಲ್ಲಿ ತುಪ್ಪವನ್ನು ಸುರಿದಂತೆ ತನ್ನ ಶರೀರದಲ್ಲಿ ಭುಗಿ ಭುಗಿಲೆನ್ನುತ್ತ ಉರಿಯುವ ಕೋಪಾಗ್ನಿಯಿಂದ ಕೂಡಿದ ಮನಸ್ಸಿನಿಂದ ದಕ್ಷನು ತನ್ನ ಅಕ್ಕಪಕ್ಕದಲ್ಲಿದ್ದ ಮಂತ್ರಿಗಳ ಕೂಡೆ ಹೀಗೆ ಹೇಳಿದನು. ೩೧. ಮತ್ತೆ ಮತ್ತೆ ಸೃಷ್ಟಿಸುವ ಸಾಮರ್ಥ್ಯ ನಮ್ಮಲ್ಲಿರುವಾಗ ಯಾರು ನಾಶವಾದರೇನು ?

CC-0. Jangamwadi Math Collection. Digitized by eGangotri

ಬೂರಂ ಸಮೀರನಂ ಗೆಲ್ವುಕ್ತಿಯಂತೆ ನೀ
ಹಾರವಗ್ನಿಯನಟ್ಟಿ ಬಾಳ್ವೆನೆಂಬಂತಿರ್ಪ
ನಾರಾದೊಡಂ ಫಲಗೃಹಿಗಳಜ್ಞಾನರಾಗರೆ ಲೋಕದೊಳಗೆಂದನು ೩೧

ಬಿಟ್ಟನಾ ಮಂತ್ರದುಚ್ಚರಣೆಯಂ ಹವಿಗಳಂ
ತೊಟ್ಟನಿಳೆಗಿಳಿಪಿದಂ ದಕ್ಷನಾ ಕ್ಷಣದೊಳಗೆ
ದಿಟ್ಟನಾಗುತೆ ಪಡೆದನಖಿಳ ಚತುರಂಗಮಂ ತನ್ನ ಮೊಮ್ಮಕ್ಕಳೆನಿಪ
ಬೆಟ್ಟದಂತೊಪ್ಪುತಿರ್ಪರ್ವತಾರ್ಕೋಟಿ ಜಗ
ಜಟ್ಟಿರಕ್ಕಸದೊರೆಗಳಂ ಕರೆಸಿ ನೇಮಮಂ
ಕೊಟ್ಟು ಕಳುಪಿದನತ್ತಲಿತ್ತ ದಕ್ಷಂ ಹವಿಗಳಂ ಬೇಳುತಿರುತಿರ್ದನು ೩೨

ಕಾಳಮೇಘಾಳಿ ನಡೆದಪುವೊ ಕೈಕಾಲ್ ಮೂಡಿ
ನೀಲಾದ್ರಿಗಳ್ ತಳರ್ದಪುವೊ ಕತ್ತಲೆ ಬಂದು
ಮೇಲಾದ ಬಹುರೂಪಮಂ ಧರಿಸಿ ಸಂದಣಿಸಿ ಪೋದಪುವೊ ಪೇಳೆನಲ್ಕೆ
ಮೇಳದಿಂ ತಾರಕ ನಿಶುಂಭ ಜಂಭಾಸುರರ್
ಭೀಳಧೂಮ್ರಾಕ್ಷ ಮಹಿಷಾಸುರ ಮಹಾಪಾಪ
ಶೀಲ ಚಂಡಾಸುರ ಕರಾಳರೆಂಬತುಳದಾನವರೊದಗಿದರ್ ಕ್ಷಣದೊಳು ೩೩.

ವೀರಭದ್ರನು ನಮಗೆಷ್ಟರವನು ? ಅವನನ್ನು ಗೆಲ್ಲುವುದು ಏನು ಕಷ್ಟ ? ಯಜ್ಞದ ಕಾರ್ಯ
ದಲ್ಲಿ ನಾವು ತೊಡಗಿದ್ದರಿಂದ ಇಷ್ಟೆಲ್ಲ ಆಯಿತು ಎಂದು ದಕ್ಷನು ಮಹಾಕೋಪದಿಂದ
ಬೂರುಗದ ಮರ ಗಾಳಿಯನ್ನು ಗೆಲ್ಲುವ ಸಮಾಚಾರದಂತೆ, ಮಂಜು ಅಗ್ನಿಯನ್ನು ಹಿಂದಟ್ಟಿ
ಬಾಳುತ್ತೇನೆ ಎನ್ನುವಂತೆ ಇದ್ದನು. ಫಲದಿಂದ ಕೂಡಿದವರು ಯಾರಾದರೂ ಲೋಕ
ದಲ್ಲಿ ಅಜ್ಞಾನಿಗಳಾಗದೆ ಇರುತ್ತಾರೆಯೆ ಎಂದು ಚೆನ್ನಬಸವಣ್ಣನು ಹೇಳಿದನು. ೩೨.
ದಕ್ಷನು ಆ ಕ್ಷಣದಲ್ಲಿ ಮಂತ್ರೋಚ್ಚಾರಣೆಯನ್ನು ಬಿಟ್ಟುಬಿಟ್ಟನು. ಎತ್ತಿದ್ದ ಹವಿಸ್ಸನ್ನು
ಕೆಳಗಿಳಿಸಿದನು. ಮಹಾಧೈರ್ಯದಿಂದ ಚತುರಂಗಸೈನ್ಯವನ್ನು ಸೃಷ್ಟಿಸಿದನು.ತನ್ನ ಮೊಮ್ಮ
ಕ್ಕಳಾದ ಬೆಟ್ಟದಾಕಾರದಲ್ಲಿರುವ ಇಪ್ಪತ್ತಾರು ಕೋಟಿ ಜಗಜಟ್ಟಿಗಳಾದ ರಾಕ್ಷಸರನ್ನು
ಕರೆಸಿ, ಅವರಿಗೆ ಅಪ್ಪಣೆ ಮಾಡಿ ಕಳಿಸಿದನು, ಅನಂತರ ದಕ್ಷನು ಅಗ್ನಿಯಲ್ಲಿ ತುಪ್ಪ ಮೊದ
ಲಾದುವನ್ನು ಆಹುತಿ ಕೊಡುತ್ತಿದ್ದನು. ೩೩. ಕಾಲಮೇಘಗಳ ಸಮೂಹ ನಡೆಯು
ತ್ತಿವೆಯೊ ! ನೀಲಾದ್ರಿಗಳಿಗೆ ಕೈಕಾಲುಗಳು ಬಂದು ಹೊರಟುವೊ ! ಕತ್ತಲೆಯೆ ನಡೆದು
ಬಂದು ಅನೇಕ ರೂಪಗಳನ್ನು ಧರಿಸಿ ಒಟ್ಟುಗೂಡಿ ಹೊರಟುವೊ ಹೇಳು ಎನ್ನುವಂತೆ
ತಾರಕ, ನಿಶುಂಭ, ಜಂಭಾಸುರರು; ಭಯಂಕರನಾದ ಧೂಮ್ರಾಕ್ಷ, ಮಹಿಷಾಸುರ, ಮಹಾ
ಪಾಪಶೀಲನಾದ ಚಂಡಾಸುರ, ಕರಾಳ ಎಂಬ ಅನೇಕ ರಾಕ್ಷಸರು ಆ ಕ್ಷಣದಲ್ಲಿ ಒಟ್ಟಾಗಿ

CC-0. Jangamwadi Math Collection. Digitized by eGangotri

ಶರಭ ದುಂದುಭಿ ಹಯಗ್ರೀವ ಶತಮಾಯು ಗಜ
ಶಿರ ಗಗನಮೂರ್ಧ್ನಿ ಸ್ವರ್ಭಾನು ವೃಷಪರ್ವ ದು
ರ್ಧರ ವಜ್ರನಾಭ ವಿದ್ರಾವಣ ಮಹಾನಾಭ ಶಂಕುಕರ್ಣರ್ ಸುಬಾಹು
ವರಮಹಾಬಲ ಹಿರಣ್ಯಕಶಿಪು ಹಿರಣ್ಯಾಕ್ಷ
ಯಿರಶುಂಭ ಮಯ ಶಂಖುಶಿರ ನಮುಚಿ ಕಾಳಿಕೇ
ಯರಘನನಿವಾತಕವಚರ ಹಿಂಡು ಪೌಲೋಮಿಗಳ ತಂಡಮೈತಂದುದು ೩೪

ಇತ್ತಲಾ ಮರುಳ ತಂಡಂ ಯಾಗಶಾಲೆಯಂ
ಮುತ್ತಿ ಕಾವಲಭಟರ್ಗಳ ಸದೆದು ಬಾಗಿಲಂ
ಕಿತ್ತು ದಳದುಳಿಪನಿತರೊಳ್ ದಡಿಗರಕ್ಕಸರ್ ಕಂಡು ಕಡುಖಾತಿಯಿಂದೆ
ಕಿತ್ತು ಬಲ್ಗೈದುಗಳನೆತ್ತಿ ಜಡಿದಬ್ಬರಿಸು
ತೊತ್ತಿ ತರಿದಿರಿದು ಖಂಡಿಸಿ ಕೊಚ್ಚಿ ಕೊರೆಕೊರೆದು
ಕತ್ತರಿಸಿ ನಾನಾ ಪ್ರಕಾರದಿಂ ಕೊಲುತಿರ್ಪರೇನೆಂಬೆನದ್ಭುತವನು ೩೫

ಬರಸಿಡಿಲ್ಗಳಾಗಿ ಮಳೆಯಾಗಿ ಬೆಟ್ಟಗಳಾಗಿ
ಸರಿಕಲ್ಗಳಾಗಿ ಗುಂಡುಗಳಾಗಿ ಮೃಗಳಂ
ಕೊರೆವ ಕರಗಸವಾಗಿ ಪುಲಿ ಕರಡಿಯಾಗಿ ಕೇಸರಿಯಾಗಿ ಘೋರವಿಷಮುಂ

ಹೊರಟುಬಂದರು. ೩೪. ಶರಭ, ದುಂದುಭಿ,ಹಯಗ್ರೀವ, ಶತಮಾಯ, ಗಜಶಿರ, ಗಗನ ಮೂರ್ಧ್ನಿ, ಸ್ವರ್ಭಾನು, ವೃಷಪರ್ವ. ದುರ್ಧರ, ವಜ್ರನಾಭ, ವಿದ್ರಾವಣ, ಮಹಾನಾಭ, ಶಂಕುಕರ್ಣ ಮೊದಲಾದವರು, ಸುಬಾಹು, ಮಹಾಬಲ, ಹಿರಣ್ಯಕಶಿಪು, ಹಿರಣ್ಯಾಕ್ಷ, ಇರ ಶುಂಭ, ಮಯಶಂಖುಶಿರ, ನಮುಚಿ, ಕಾಳಿಕೇಯರು, ಭಯಂಕರರಾದ ನಿವಾತಕವಚರ ಹಿಂಡೂ, ಪೌಲೋಮಿಗಳ ತಂಡವೂ ಹೊರಟುಬಂದಿತು. ೩೫. ಇತ್ತಲಾಗಿ ಆ ಭೂತ ಗಳ ಸಮೂಹ ಯಾಗಶಾಲೆಯನ್ನು ಮುತ್ತಿ, ಕಾವಲುಭಟರನ್ನು ಕೊಂದು, ಬಾಗಿಲು ಗಳನ್ನು ಕಿತ್ತು, ಲೂಟಿ ಮಾಡುವಷ್ಟರಲ್ಲಿ ದಾಂಡಿಗರಾದ ರಾಕ್ಷಸರು ಅದನ್ನು ನೋಡಿ, ಅತಿಯಾಗಿ ಕೋಪಗೊಂಡು, ಒರೆಗಳಚಿದ ದೊಡ್ಡ ಆಯುಧಗಳನ್ನು ಎತ್ತಿ ಹೊಡೆದು, ಆರ್ಭಟಿಸುತ್ತ ಮುಂದುವರಿದು ತರಿತರಿದು, ಕತ್ತರಿಸಿ ಕೊಚ್ಚಿಹಾಕಿದರು. ಕೊರೆ ಕೊರೆದು ಕತ್ತರಿಸಿ ನಾನಾ ರೀತಿಯಿಂದ ಕೊಲ್ಲುತ್ತಿದ್ದರು. ಆ ಅದ್ಭುತವನ್ನು ಏನೆಂದು ಹೇಳಲಿ ? ೩೬. ಆ ರಾಕ್ಷಸರು ಬರಸಿಡಿಲುಗಳಾಗಿ, ಮಳೆಯಾಗಿ, ಬೆಟ್ಟಗಳಾಗಿ, ಕಲ್ಮಳೆಯಾಗಿ, ಗುಂಡುಗಳಾಗಿ, ಮೃಗಳನ್ನು ಕತ್ತರಿಸುವ ಗರಗಸಗಳಾಗಿ, ಹುಲಿ-ಕರಡಿ ಗಳಾಗಿ, ಸಿಂಹಗಳಾಗಿ, ಭಯಂಕರವಾದ ವಿಷವನ್ನು ಕಾರುವ ಸರ್ಪಗಳಾಗಿ, ಬೆಂಕಿ

CC-0. Jangamwadi Math Collection. Digitized by eGangotri

ಕರೆವಹಿಗಳಾಗಿ ಶಿಖಿಯಾಗಿ ಕಳ್ತಲೆಯಾಗಿ
ಬಿರುಗಾಳಿಯಾಗಿ ಬಿಸಿಲಾಗಿ ನಾನಾವಿಧದೆ
ತರಿವ ಶಸ್ತ್ರಾಸ್ತ್ರಂಗಳಾಗಿ ಮಾಯೆಯೊಳುರುಬಿ ರಕ್ಕಸರ್ ಕೊಲುತಿರ್ದರು ೩೭

ಪಿಡಿಪಿಡಿದು ರಕ್ಕಸರ್ ಮರುಳ್ಗಳಂ ಬಾಯ್ಗಳೊಳ
ಗಡಸಿ ನುಂಗಲ್ ಕಿವಿಗಳೊಳ್ ಮೂಗಿನೊಳ್ ಕಣ್ಣ
ಕಡೆಗಳೊಳ್ ಪೊರಮಟ್ಟು ನೆಗದು ನೆತ್ತಿಯ ನೇರಿ ಪಲ್ಗಳಿಂದಾ ದನುಜರ
ಕುಡಿಮೂಗನುರೆ ಕಚ್ಚಿ ಕಿವಿಗಳಂ ಕಿಳ್ತು ಕೈ
ಯೊಡನೆ ಕಿವಿಮೂಳ ಮೂಕೊರೆಯರಂ ಮಾಡಿ ನೆರೆ
ಬಡಿದಾಡುತಿರ್ದರೊಡವೆರಸಿಯಾ ದನುಜರುಂ ಮರುಳ್ಗಳುಂ ತತ್‌ಕ್ಷಣದೊಳು ೩೭

ಏರಿದರ್ ಬೀರಿದರ್ ಬೆಟ್ಟದೊಳ್ ಗಾಳಿವೊಲ್
ತೂರಿದರ್ ಪಾರಿದರ್ ನಭದೆಡೆಗೆ ಬಲ್ಮೆಯಂ
ಸಾರಿದರ್ ಮೀರಿದರ್ ಬೀರಂಗಳಿಂ ಪೊಯಿಲ್ ಪೊಯಿಲ್ಗೆ ನೆರೆನೆತ್ತರ್ಗಳ
ಕಾರಿದರ್ ಪೇರಿದರ್ ಭಯರಸಮನೊಡನೆ ಬಾ
ಯಾರಿದರ್ ಬೀರಿದರ್ ಸಿಡಿಲಂತೆ ಕೌತುಕಂ
ತೋರಿದರ್ ಮಾರಿದರ್ ಮೈಗಳಂ ದನುಜರುಂ ಮರುಳ್ಗಳುಮದೇನೆಂಬೆನು ೩೮

ಈ ಪರಿಯೊಳಿರ್ವಲಂ ಕಾದುತಿರೆ ರಕ್ಕಸರ್
ಕೋಪದಿಂ ಹೂಂಕರಿಸಿ ನೂಂಕಿ ದನುಜಾಳಿಪ್ರ
ತಾಪದಿಂ ನಾನಾ ಪ್ರಕಾರದಿಂದೊಡನೊಡನೆ ವೀರಭದ್ರನ ಬಲವನು

ಯಾಗಿ, ಕತ್ತಲೆಯಾಗಿ, ಬಿರುಗಾಳಿಯಾಗಿ, ಬಿಸಿಲಾಗಿ, ನಾನಾ ರೀತಿಯ ಕೊಚ್ಚುವ ಆಯುಧಗಳಾಗಿ ಹೀಗೆ ನಾನಾ ಮಾಯಾರೂಪಿಗಳಾಗಿ ಮೇಲೆಬಿದ್ದು ಕೊಲ್ಲುತ್ತಿದ್ದರು. ೩೭. ಆಗ ರಾಕ್ಷಸರು ಭೂತಗಳನ್ನು ಹಿಡಿಹಿಡಿದು ಬಾಯಿಗಳಲ್ಲಿ ತುರುಕಿಕೊಂಡು ನುಂಗಲು, ಅವು ಕಿವಿಗಳಲ್ಲಿ, ಮೂಗುಗಳಲ್ಲಿ, ಕಡೆಗಣ್ಣುಗಳಲ್ಲಿ ಹೊರಬಂದು ಮೇಲಕ್ಕೆ ನೆಗೆದು ನೆತ್ತಿಯ ಮೇಲೆ ಹತ್ತಿ, ಹಲ್ಲುಗಳಿಂದ ಆ ರಾಕ್ಷಸರ ತುದಿಮೂಗನ್ನು ಚೆನ್ನಾಗಿ ಕಚ್ಚಿ, ಕಿವಿಗಳನ್ನು ಕಿತ್ತು, ಕೈ ಜೊತೆಗೆ ಹರುಕುಕಿವಿ, ಕೊರೆಮೂಗರನ್ನಾಗಿ ಮಾಡಿದುವು. ರಾಕ್ಷಸರೂ ಭೂತಗಳೂ ಸೇರಿಕೊಂಡು ಒಂದರೊಡನೊಂದು ಬಡಿದಾಡುತ್ತಿದ್ದುವು. ೩೮. ಮೇಲೆ ಏರಿದರು, ಬೆಟ್ಟದ ರೀತಿಯಲ್ಲಿ ಬೀರಿದರು, ಗಾಳಿಯಂತೆ ತೂರಿದರು, ಆಕಾಶಕ್ಕೆ ಹಾರಿದರು, ಪರಾಕ್ರಮವನ್ನು ಪ್ರದರ್ಶಿಸಿದರು. ಸಾಹಸದಲ್ಲಿ ಒಬ್ಬರನ್ನೊಬ್ಬರು ಮೀರಿದರು. ಹೊಡೆತ ಹೊಡೆತಕ್ಕೆ ರಕ್ತವನ್ನು ಕಾರಿದರು, ಭಯರಸವನ್ನುಂಟುಮಾಡಿದರು, ಬಾಯಾರಿದರು, ಸಿಡಿಲಿನಂತೆ ಹೊಳೆದು ಕುತೂಹಲವನ್ನು ತೋರಿದರು, ರಾಕ್ಷಸರು—ಭೂತಗಳು ಮೈಗಳನ್ನು ಮರೆಸಿಕೊಂಡರು (ಮಾಯವಾದರು). ಅದನ್ನು ಏನೆನ್ನಲಿ ? ೩೯. ಈ ರೀತಿಯಲ್ಲಿ ಎರಡು ಸೈನ್ಯವೂ ಯುದ್ಧ ಮಾಡುತ್ತಿರಲು ರಾಕ್ಷಸರು ಕೋಪದಿಂದ ಹೂಂಕಾರ ಮಾಡಿ ನೂಕಿದರು. ಪರಾಕ್ರಮದಿಂದ ನಾನಾ ರೀತಿ

CC-0. Jangamwadi Math Collection. Digitized by eGangotri

ಆಪನಿತನುರೆ ಸದೆವೃತಟ್ಟಲತಿಭೀತಿಯಿಂ
ದಾ ಪಂಥಮುಡುಗಿ ಕಡುವೇಗದಿಂ ಭದ್ರಕಾ
ಳೀಪತಿಯ ಮರೆವೊಕ್ಕುದಖಿಳಸೈನ್ಯಂ ಪೇಳ್ವುದೇಂ ದನುಜರುರ್ಬಟೆಯನು ೩೯

ನೋಡಿದಂ ವಿಸ್ಮಯರಸಾಬ್ಧಿಯೊಳ್ ಮಿಗೆ ಮುಳುಂ
ಗಾಡಿದಂ ವಿಷ್ಣುವಂ ಕರೆದು ನಸುನಗುತೆ ಮಾ
ತಾಡಿದಂ ವೀರನಾ ದಕ್ಷನ ಛಲಕ್ಕೆ ಮನದೊಳ್ ಮೆಚ್ಚಿ ಕೋಪದಿಂದೆ
ಪೂಡಿದಂ ಸರಳ್ಗಳಂ ತೆಗೆದೆಚ್ಚು ವಿರಥರಂ
ಮಾಡಿದಂ ದೈತ್ಯರಂ ಮತ್ತಮಖಿಳ ಸೇನೆಯಂ
ಕೂಡಿದಂ ಪೆಣನ ಮೆದೆಗಳೊಳೊಂದುಕ್ಷಣದೊಳೆಲೆ ರಾಮ ಕೇಳ್ ಕೌತುಕವನು ೪೦

ದುಂದುಭಿಗೆ ನಾಲ್ಕು ಶರಭಂಗಯ್ದು ತಾರಕಂ
ಗೊಂದು ಸ್ವರ್ಭಾನು ವೃಷಪರ್ವರ್ಗೆ ನಾಲ್ಕು ನಾ
ಲ್ಕೊಂದು ಶಲಭಂಗೆಂಟು ಗಗನಮೂರ್ಧ್ನಿಗೆ ಪತ್ತು ಶತಮಾಯು ನಮುಚಿ ಹಯದ
ಕಂಧರರ್ಗೆಂಟೆಂಟು ಶುಂಭಜಂಭರ್ಗಿಪ್ಪ
ತೊಂದಾ ಹಿರಣ್ಯಾಕ್ಷ ಧೂಮ್ರಾಕ್ಷಕರ್ಗೆ ಹ
ನ್ನೊಂದಿಂತಸಂಖ್ಯಾತಬಾಣಂಗಳಿಂದೆಲ್ಲರುಮನೆಚ್ಚು ಬೊಬ್ಬಿರಿದನು ೪೧

ಎಲೆ ಸಿದ್ಧರಾಮ ಕೇಳಾ ವೀರನಂಬುಗಳ
ಮಳೆಗಳಂ ನನೆಯದವರಿಲ್ಲವಾ ರಕ್ಕಸರ
ಬಲದೊಳಗೆ ದೊರೆದೊರೆಗಳುಂ ಪಲಾಯನಮನನುಕರಿಸಿ ಕಡುಭೀತಿಯಿಂದೆ

ಯಲ್ಲಿ ವೀರಭದ್ರನ ಸೈನ್ಯವನ್ನು ಸಾಧ್ಯವಾದಷ್ಟು ಚೆನ್ನಾಗಿ ಸದೆಬಡಿದು ಅಟ್ಟಿದರು. ಆಗ ಅತಿಭೀತಿಯಿಂದ ಶಕ್ತಿಉಡುಗಿ ವೇಗವಾಗಿ ಎಲ್ಲ ಸೈನ್ಯವೂ ವೀರಭದ್ರನ ಮರೆಹೊಕ್ಕಿತು. ರಾಕ್ಷಸರ ಪರಾಕ್ರಮವನ್ನು ಹೇಳುವುದೇನು ? ೪೦. ವೀರಭದ್ರನು ಇವೆಲ್ಲವನ್ನೂ ನೋಡಿ ವಿಸ್ಮಯಸಾಗರದಲ್ಲಿ ಪೂರ್ಣವಾಗಿ ಮುಳುಗಿ ವಿಷ್ಣುವನ್ನು ಕರೆದು ನಸುನಗುತ್ತ ಮಾತನಾಡಿದನು. ದಕ್ಷನ ಛಲಕ್ಕೆ ಮನಸ್ಸಿನಲ್ಲಿಯೇ ಮೆಚ್ಚಿಕೊಂಡು ಕೋಪದಿಂದ ಬಾಣ ಗಳನ್ನು ಹೂಡಿ ಬಿಟ್ಟು ರಾಕ್ಷಸರನ್ನು ರಥಹೀನರನ್ನಾಗಿ ಮಾಡಿದನು, ಮತ್ತೆ ಎಲ್ಲ ಸೈನ್ಯ ವನ್ನೂ ಒಂದೇ ಕ್ಷಣದಲ್ಲಿ ಹೆಣದ ರಾಶಿಯಲ್ಲಿ ಕೂಡಿಸಿದನು, ಎಲೈ ಸಿದ್ಧರಾಮ, ಆಶ್ಚರ್ಯ ವನ್ನು ಕೇಳು. ೪೧. ದುಂದುಭಿಗೆ ನಾಲ್ಕು ಬಾಣ, ಶರಭನಿಗೆ ಐದು, ತಾರಕನಿಗೆ ಒಂದು, ಸ್ವರ್ಭಾನು-ವೃಷಪರ್ವರಿಗೆ ನಾಲ್ಕು-ನಾಲ್ಕು, ಶಲಭಂಗೆ ಎಂಟು, ಗಗನಮೂರ್ಧ್ನಿಗೆ ಹತ್ತು, ಶತಮಾಯು, ನಮುಚಿ-ಹಯಕಂಧರರಿಗೆ ಎಂಟೆಂಟು, ಶುಂಭ-ಜಂಭರಿಗೆ ಇಪ್ಪತ್ತೊಂದು, ಹಿರಣ್ಯಾಕ್ಷ-ಧೂಮ್ರಾಕ್ಷಕರಿಗೆ ಹನ್ನೊಂದು—ಈ ರೀತಿ ಅಸಂಖ್ಯಾತ ಬಾಣಗಳಿಂದ ಎಲ್ಲರನ್ನೂ ಹೊಡೆದು ಆರ್ಭಟಿಸಿದನು. ೪೨. ಎಲೆ ಸಿದ್ಧರಾಮ ಕೇಳು, ಆ ವೀರಭದ್ರನ ಬಾಣಗಳ ಮಳೆಯಲ್ಲಿ ನೆನೆಯದವರಿಲ್ಲ. ಆ ರಾಕ್ಷಸರ ಸೈನ್ಯದಲ್ಲಿ ದೊಡ್ಡ ದೊಡ್ಡ ನಾಯಕರೇ ಅತಿಯಾಗಿ ಅಂಜಿ ಪಲಾಯನ ಮಾಡಿ

CC-0. Jangamwadi Math Collection. Digitized by eGangotri

ಜಲದೊಳ್ ಮುಳುಂಗಿ ಪುಲ್ಗಚ್ಚಿ ಪೆರ್ಮರ ಪುತ್ತು
ಗಳನೇರಿ ಕೈಗಳಂ ಮುಗಿದು ಬಾಯೊಳ್ ಬೆರ
ಲ್ಗಳನಿಟ್ಟು ಕೈದುವಂ ಹಾಯ್ಕಿ ಹಾಯ್ದರ್ ಕಂಡಕಡೆಗದೇಂ ವರ್ಣಿಸುವೆನು ೪೨

ಕಂಡನನಿಬರ ಕಾಲ ಬೇಗವುಂ ಕರುಣದಿಂ
ದಂಪಲೆಯು ಬಾರದೆಂದೆನುತೆ ಹಸ್ತದ ಹಲಗೆ
ಖಂಡೆಯುವನಿರದೆ ಝಳಪಿಸುತೆ ತೇರಿಂದಿಳಿದು ಸಲೆ ಭದ್ರಕಾಳಿಸಹಿತೆ
ಗಂಡುಗಲಿ ವೀರನಾ ಹೋಮಶಾಲೆಗೆ ಮರುಳ್
ತಂಡವೆರಸಳ್ಳಿರಿವ ವಾದ್ಯರವವೊಡನೆ ಬ್ರ
ಹ್ಮಾಂಡಮಂ ತೀವೆ ಬರುತಿರ್ದನೆಡಬಲದ ವಂದಿವ್ವಯದ ಗಡಣದಿಂದೆ ೪೩

ಬಾಗಿಲೊಳಗಿರ್ದ ಭೈರವನನುರೆ ಭಂಗಿಸುತೆ
ಬೇಗದಿಂ ಕಾದಿರ್ದ ಸುಭಟರಂ ಸದೆಬಡಿದು
ಯಾಗಮಂಟಪದೆಡೆಗೆ ಪೊಕ್ಕು ಚೌಡೇಶ್ವರಿಯ ಕರ್ಣಮಂ ಕಿತ್ತು ಕೂಡೆ
ರಾಗದಿಂ ಸಿರಿಯು ಮುಂದಲೆಗೊಯ್ದು ಶಾರದೆಯ
ಮೂಗನರಿದಾ ಶಚೀದೇವಿಗಚ್ಚೊತ್ತಿ ಮಿಗೆ
ನೀಗಿದಂ ಸ್ವಾಹಾಸ್ತನಂಗಳಂ ಮಿಕ್ಕ ಸುರಸತಿಯರಂ ನಾಣ್ಗೆಡಿಸಿದಂ ೪೪

ಕಟ್ಟಿದಿರಿನೊಳ್ ತೋರ್ಪ ಮಟ್ಟಿಯ ಮರುಳ್ ವಿಪ್ರ
ರಟ್ಟಿ ಧೋತ್ರಂಗಳಂ ಸೆಳೆದು ಭಂಗಿಸಿ ತೆಗೆದು
ಕಟ್ಟುತ್ತೊರ್ವನ ಶಿಖಿಮನೊರ್ವವನ ಗಡ್ಡಕಿಂತೆಲ್ಲರಂ ಮರುಳತಂಡಂ

ದರು. ನೀರಿನಲ್ಲಿ ಮುಳುಗಿ, ಸೋಲನ್ನೊಪ್ಪಿ ಶರಣಾಗತರಾಗಿ, ದೊಡ್ಡ ಮರಗಳನ್ನು, ಪುತ್ತಗಳನ್ನು ಹತ್ತಿ, ಕೈಗಳನ್ನು ಮುಗಿದು, ಬಾಯಲ್ಲಿ ಬೆರಳುಗಳನ್ನಿಟ್ಟು, ಆಯುಧಗಳನ್ನು ಕೆಳಕ್ಕೆ ಹಾಕಿ ಸಿಕ್ಕ ಸಿಕ್ಕ ಕಡೆಗೆ ಓಡಿದರು. ಅದನ್ನು ಏನೆಂದು ಬಣ್ಣಿಸಲಿ· ೪೩. ಅಷ್ಟು ಜನರೂ ವೇಗದಿಂದೋಡುವುದನ್ನು ವೀರಭದ್ರನು ಕರುಣೆಯಿಂದ ನೋಡಿದನು. ಇನ್ನು ಪೀಡಿಸಬಾರದೆಂದು ಕೈಯಲ್ಲಿ ಗುರಾಣಿ ಕತ್ತಿಗಳನ್ನು ಒಂದೇ ಸಮನೆ ಝಳಪಿಸುತ್ತ ರಥದಿಂದ ಇಳಿದು ಭದ್ರಕಾಳಿ ಸಹಿತ ಗಂಡುಗಲಿಯಾದ ವೀರಭದ್ರನು ಯಜ್ಞಶಾಲೆಗೆ ಭೂತಗಣದೊಡಗೂಡಿ, ವಾದ್ಯದ ಶಬ್ದ ಬ್ರಹ್ಮಾಂಡವನ್ನು ತುಂಬುತ್ತಿರಲು ಎಡಬಲಗಳಲ್ಲಿ ವಂದಿಮಾಗಧರನ್ನು ಕೂಡಿಕೊಂಡು ಬರುತ್ತಿದ್ದನು. ೪೪. ಬಾಗಿಲಿನಲ್ಲಿದ್ದ ಭೈರವನನ್ನು ಚೆನ್ನಾಗಿ ಸೋಲಿಸಿ, ಕಾದಿದ್ದ ಸೈನಿಕರನ್ನು ಸದೆಬಡಿದು, ಯಾಗಮಂಟಪವನ್ನು ಒಳಹೊಕ್ಕು, ಚೌಡೇಶ್ವರಿಯ ಕಿವಿಯನ್ನು ಕಿತ್ತನು. ಜೊತೆಗೇ ಸಿಟ್ಟಿನಿಂದ ಲಕ್ಷ್ಮಿಯ ಮುಂದಲೆಯನ್ನು ಕೊಯ್ದನು. ಸರಸ್ವತಿಯ ಮೂಗನ್ನು ಕೊಯ್ದು ಆ ಶಚಿದೇವಿಗೆ ಮೆತ್ತಿದನು. ಸ್ವಾಹಾಸತಿಯ ಮೊಲೆಗಳನ್ನು ಕತ್ತರಿಸಿದನು. ಉಳಿದ ದೇವಸ್ತ್ರೀಯರನ್ನು ಅವಮಾನಪಡಿಸಿದನು. ೪೫. ಮರುಳುಗಳ ತಂಡವು ಎದುರಿನಲ್ಲಿ ಕಾಣಿಸುತ್ತಿದ್ದ ಗೋಪೀಚಂದನ ಧರಿಸಿದ ಬುದ್ಧಿಗೇಡಿ ಬ್ರಾಹ್ಮಣರು ಉಟ್ಟಿದ್ದ

CC-0. Jangamwadi Math Collection. Digitized by eGangotri

ಆಟ್ಟುಳಿಯನೆಸಗಬೇಡೆಂದು ಕೃಪೆಯಿಂ ಸಂತ
ವಿಟ್ಟು ಮುನಿನಿಕರಮಂ ಶಿಖಿಗೆ ಪೂರ್ಣಾಹುತಿಯ
ಕೊಟ್ಟಪೆನೆನುತ್ತಿರ್ಪ ದಕ್ಷನ ಶಿರಸ್ಸುಮಂ ಕುಟ್ಟಿ ಹೋಮದೊಳಿಟ್ಟನು ೪೫

ಖೋಯೆಂದು ಕುಣಿದಾಡಿತಾ ಮರುಳಗಣವಿರದೆ
ಹಾಯೆಂದು ದಕ್ಷನರಸಿಯರಳುತೆ ನಡೆತಂದು
ಕಾಯೆಮ್ಮ ಕರ್ಣತಾಟಂಕಸೌಭಾಗ್ಯಮಂ ನೀನೆಂದು ಬೇಡಿಕೊಳಲು
ಜೀಯೆಂದು ಹರಿಯಜರ್ ಬಿನ್ನೈಸೆ ಕರುಣದಿಂ
ದಾ ಯಜ್ಞಪಶುಶಿರವನರಿದು ಪತ್ತಿಸೆ ದಕ್ಷ
ನಾಯತಮನಜಪುತ್ರನೆಂಬ ನಾಮಂ ಸಾಮ್ಯಮಾದುದದನೇನೆಂಬೆನು ೪೬

ಶಿರದ ಮುಸುಕಿಂ ದಕ್ಷನಂದು ವೀರೇಶ್ವರನ
ಚರಣಕೆರಗಲ್ ಕಡೆಗೆ ಪೋಗೆಲವೊ ತಾಂ ಕೆಡುತೆ
ನೆರೆಯುವರನೆಲ್ಲರಂ ಕೆಡಿಪುವರ ಮಾಳ್ಕೆಯಾಯ್ತೆಂದು ನಿನ್ನೀ ವರ್ತನಂ
ಹರನದಕೆ ತಕ್ಕುದಂ ವಿರಚಿಸಿದನೆಂದವಂ
ವೆರಸಿ ಹರಿಯಜಮುಖ್ಯರೆಲ್ಲರುಂ ಬರೆ ಬಂದು
ಪರಮಕೈಲಾಸಮಂ ಪೊಕ್ಕೀಶ್ವರಾಸ್ಥಾನದೆಡೆಗೆ ಬಂದಂ ಕ್ರಮದೊಳು ೪೭

ಪಂಚೆಗಳನ್ನು ಎಳೆದುಹಾಕಿ ಅವರನ್ನು ಅವಮಾನಪಡಿಸಿ, ಒಬ್ಬನ ತಲೆಯ ಜುಟ್ಟನ್ನು ಮತ್ತೊಬ್ಬನ ಗಡ್ಡಕ್ಕೆ ಕಟ್ಟಿದವು. ಈ ರೀತಿ ಪೀಡಿಸಿ ತೊಂದರೆ ಮಾಡಬೇಡಿ ಎಂದು ವೀರಭದ್ರನು ಹೇಳಿ ಕೃಪೆಯಿಂದ ಮುನಿಸಮೂಹವನ್ನು ಸಂತೈಸಿ ಅಗ್ನಿಗೆ ಪೂರ್ಣಾಹುತಿಗಳನ್ನು ಕೊಡುತ್ತೇನೆ ಎನ್ನುತ್ತಿದ್ದ ದಕ್ಷನ ತಲೆಯನ್ನು ತರಿದು ಹೋಮಕುಂಡದಲ್ಲಿ ಹಾಕಿದನು. ೪೬. ಭೂತಗಣಗಳು ತಡೆಯದೆ ಖೋಯೆಂದು ಕುಣಿದಾಡಿದುವು. ದಕ್ಷನ ಪತ್ನಿಯರು ಹೋ ! ಎಂದು ಅಳುತ್ತ ಬಂದು—ನೀನು ನಮ್ಮ ಕಿವಿಯ ಓಲೆಯ ಸೌಭಾಗ್ಯವನ್ನು ಕಾಪಾಡು ಎಂದು ಬೇಡಿದರು. ಅತಿದೈನ್ಯದಿಂದ ವಿಷ್ಣು-ಬ್ರಹ್ಮರು ಬಿನ್ನವಿಸಿಕೊಂಡರು. ಆಗ ಕರುಣೆಯಿಂದ ಆ ಯಜ್ಞಪಶುವಿನ ತಲೆಯನ್ನು ಕತ್ತರಿಸಿ ದಕ್ಷನಿಗೆ ಅಂಟಿಸಲು ಅಜಪುತ್ರನೆಂಬ ಯೋಗ್ಯವಾದ ಹೆಸರು ಅವನಿಗೆ ಹೊಂದಿಕೊಂಡಿತು. ಅದನ್ನು ಏನೆಂದು ಹೇಳುವೆನು ? ೪೭. ಆಗ ತಲೆಯನ್ನು ತಗ್ಗಿಸಿ ದಕ್ಷನು ವೀರಭದ್ರನ ಕಾಲುಗಳಿಗೆರಗಿದನು. ಆಗ ವೀರಭದ್ರನು ಎಲವೊ ಹೋಗು, ನಿನ್ನ ಕೆಲಸ ತಾನು ಕೆಡುವುದಲ್ಲದೆ ಸುತ್ತಲಿನವರನ್ನೂ ಕೆಡಿಸಿದವರ ರೀತಿ ಆಯಿತು. ಈಶ್ವರನು ಅದಕ್ಕೆ ಸರಿಯಾದ ಶಿಕ್ಷೆ ಮಾಡಿಸಿದ ಎಂದು ಅವನನ್ನೂ ಕೂಡಿಕೊಂಡು ವಿಷ್ಣು-ಬ್ರಹ್ಮ ಮೊದಲಾದವರು ಬರಲು ಶ್ರೇಷ್ಠವಾದ ಕೈಲಾಸಕ್ಕೆ ಪ್ರವೇಶಿಸಿ ಕ್ರಮದಿಂದ ಈಶ್ವರನ ಆಸ್ಥಾನದ ಸಮೀಪಕ್ಕೆ

CC-0. Jangamwadi Math Collection. Digitized by eGangotri

ಕಡೆವಾಗಿಲೊಳ್ ನಿಲಿಸಿ ಸಕಲರಂ ನಾರದನ
ನೊಡಗೊಂಡು ಪೋಗಿ ವೀರೇಶ್ವರಂ ತನ್ನ ಪಿತ
ನಡಿಗಳ್ಗೆ ನಮಿಸಲ್ ಶಿವಂ ಹರುಷದಿಂ ತೆಗೆದು ತಕ್ಕೈಸಿ ಮೈದಡವುತೆ
ಒಡನೆ ನಾರದನಿಂದೆ ವೃತ್ತಾಂತಮರಿದು ಮು
ತ್ತಡಿಗಡಿಗೆ ಕರುಣರಸಮಿರದೆ ತುಳ್ಕಾಡಲಾ
ಮೃಡನೆಲ್ಲರಂ ಕರೆಸಿ ಪೆಡೆಗೈಗಳಂ ಬಿಡಿಸೆ ಸ್ತುತಿಸಿದರ್ ಭಕ್ತಿಯಿಂದೆ ೪೮

ದೇವರಿಪುದೈತ್ಯವನದಾವ ಹರಿಶಕ್ರರಾ
ಜೀವಭವಮುಖ್ಯ ನಾನಾವಿಬುಧಮಕುಟರ
ತ್ನಾವಳೀ ಬಹುಲಪ್ರಭಾವಪದ ಭಕ್ತಸಂಜೀವ ದೈವಾಧೀಶನೆ
ಪಾವಕರವೀಂದುನೇತ್ರಾವಲಂಬನ ಲೋಕ
ಸೇವಿತ ಮಹಾವಿಷಗ್ರೀವ ಕೈಲಾಸಶಿಖ
ರೀವಾಸ ಭೂತೇಶ ವೀರೇಶಪಿತನೆ ಸಲಹೆಂದು ತುತಿಯಿಸುತಿರ್ದರು ೪೯

ಇಂತೆಂದು ನುತಿಪ ಹರಿಯಜಮುಖ್ಯದಿವಿಜರಂ
ಸಂತೈಸಿ ನೀವೆಮಗೆ ವಿರಹಿತದ ಕಾರ್ಯಕ್ಕದಟೆ
ಗಿಂತು ಪೋಗದಿರಿ ನಿಮ್ಮಯ ಶರೀರದ ಕೊಂಕುಕೊರತೆಗಳ್ ಪೋಗಿ ಮಡಿದ

ಬಂದನು. ೪೮. ವೀರಭದ್ರನು ಅವರೆಲ್ಲರನ್ನೂ ಬಾಗಿಲಿನ ಹೊರಗೆ ನಿಲ್ಲಿಸಿ, ನಾರದನೊಡನೆ ಒಳಗೆ ಹೋಗಿ ತನ್ನ ತಂದೆಯ ಪಾದಗಳಿಗೆ ನಮಸ್ಕರಿಸಿದನು. ಶಿವನು ಸಂತೋಷದಿಂದ ಅವನನ್ನು ಎತ್ತಿ ತಬ್ಬಿಕೊಂಡು, ಪ್ರೀತಿಯಿಂದ ಅವನ ಮೈದಡವುತ್ತ, ನಾರದನಿಂದ ಎಲ್ಲ ವಿಷಯವನ್ನೂ ತಿಳಿದುಕೊಂಡನು. ಆಗ ಅವನಲ್ಲಿ ಅತಿಯಾದ ಕರುಣೆಯು ಉಕ್ಕಿತು. ಆಗ ಶಿವನು ಎಲ್ಲರನ್ನೂ ಕರೆಸಿ, ಕಟ್ಟಿದ್ದ ಅವರ ಕೈಗಳನ್ನು ಬಿಡಿಸಿದನು. ಅವರೆಲ್ಲರೂ ಭಕ್ತಿಯಿಂದ ಅವನನ್ನು ಸ್ತೋತ್ರಮಾಡಿದರು. ೪೯. ದೇವತೆಗಳ ಶತ್ರುಗಳಾದ ರಾಕ್ಷಸರೆಂಬ ವನಕ್ಕೆ ಕಾಳ್ಗಿಚ್ಚಿನಂತಿರುವ, ವಿಷ್ಣು-ಇಂದ್ರ-ಬ್ರಹ್ಮ ಮೊದಲಾದ ಎಲ್ಲ ದೇವತೆಗಳ ಕಿರೀಟದ ರತ್ನಗಳ ಅತಿಯಾದ ಕಾಂತಿಯಿಂದ ರಂಜಿಸುತ್ತಿರುವ ಪಾದವುಳ್ಳ, ಭಕ್ತರಿಗೆ ಸಂಜೀವಿನಿಯೌಷಧವನಾದ, ದೇವತೆಗಳ ಒಡೆಯನಾದ, ಅಗ್ನಿ, ಸೂರ್ಯ, ಚಂದ್ರರನ್ನೆ ಕಣ್ಣಾಗಿ ಉಳ್ಳ, ಲೋಕಸೇವ್ಯನಾದ ವಿಷಕಂಠ, ಕೈಲಾಸ ಶಿಖರವಾಸಿಯಾದ ಭೂತೇಶ, ವೀರಭದ್ರನ ತಂದೆಯಾದ ಶಿವನೆ ಕಾಪಾಡು ಎಂದು ಪ್ರಾರ್ಥಿಸಿದರು. ೫೦. ಈ ರೀತಿಯಾಗಿ ನುತಿಸುತ್ತಿದ್ದ ವಿಷ್ಣು-ಬ್ರಹ್ಮ ಮುಂತಾದ ಪ್ರಮುಖ ದೇವತೆಗಳನ್ನು ಸಂತೈಸಿ ನೀವು ನನಗೆ ಹಿತವಲ್ಲದ ಕೆಲಸಕ್ಕೆ ಈ ರೀತಿ ಹೋಗಬೇಡಿ. ನಿಮ್ಮ ದೇಹದಲ್ಲಿ ಆಗಿರುವ ಊನವೆಲ್ಲವೂ ಹೊರಟುಹೋಗಿ, ಸತ್ತ ಸೈನ್ಯ

CC-0. Jangamwadi Math Collection. Digitized by eGangotri

ತಿಂತಿಣಿಯು ಬಲಮೇಳ್ವುದೆಂದೆಲ್ಲರಂ ಕಳುಪಿ
ಮುಂತಿರ್ದ ವೀರೇಶನುಗ್ರತ್ವವನು ಕಂಡು
ಶಾಂತಿಯಂ ಮಾಡಿಸಿ ಜಗದ್ರಕ್ಷನಾ ವಿರೂಪಾಕ್ಷನಿರ್ದಂ ಮುದದೊಳು ೫೦

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸವೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮುನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೫೧

ಮೂವತ್ತೆರಡನೆಯ ಸಂಧಿ ಸಂಪೂರ್ಣ

ಸಮೂಹವೆಲ್ಲವೂ ಮತ್ತೆ ಎದ್ದು ಬದುಕುತ್ತದೆ ಎಂದು ಹೇಳಿ ಎಲ್ಲರನ್ನೂ ಕಳುಹಿಸಿ ಕೊಟ್ಟನು. ತನ್ನ ಮುಂದೆ ನಿಂತಿದ್ದ ವೀರಭದ್ರನ ಕೋಪವನ್ನು ನೋಡಿ ಸಮಾಧಾನ ಮಾಡಿದನು. ಜಗದ್ರಕ್ಷಕನಾದ ವಿರೂಪಾಕ್ಷನು ಸಂತೋಷದಿಂದ ಇದ್ದನು. ೫೧. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿ ದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗ ಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೆರಡನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತಮೂರನೆಯ ಸಂಧಿ

ಸೂಚನೆ : ಹರನಾಜ್ಞೆಯಿಂದೆ ಹರಿ ಹರಿಯಾಗಿ ರಕ್ಕಸನ
ಹರಿಸಿ ಜಗವಂ ಹರಿಸುತಿರೆ ಹರಿಯ ಮೊರೆಗೇಳ್ದು
ಹರನಿರೂಪದೆ ಹರಿಯ ಹರಿಸಿದಂ ಹರಸುತಂ ಶರಭಾವತಾರದಿಂದೆ

ಅಕ್ಷಯಾಕಾರ ಮೋಕ್ಷಾಗಾರ ಲೋಕಸಂ
ರಕ್ಷ ಖಳಶಿಕ್ಷ ಭಕ್ತಾಪೇಕ್ಷ ಭೀಮಭಾ
ಳಾಕ್ಷ ದಕ್ಷಾಧ್ವರವಿಪಕ್ಷ ಸುರಪಕ್ಷ ಪ್ರತ್ಯಕ್ಷಪಾವನಸ್ವರೂಪ
ಯಕ್ಷಪತಿಸೇವಿತ ಮಹೋಕ್ಷವಾಹನ ವರಮು
ಮುಕ್ಷುವಂದಿತ ನಿರಾಪೇಕ್ಷ ಕಾಮಿತಪೂಜ್ಯ
ಪಕ್ಷಿಗಮನಾಕ್ಷಿಘನನಿಕ್ಷೇಪಪದ ವಿರೂಪಾಕ್ಷ ತ್ರಿಯಕ್ಷ ಸಲಹು ೧

ಆಲಿಸಿನ್ನೆಲೆ ಸಿದ್ಧರಾಮ ದಿವಿಜರ್ ಕೆಲವು
ಕಾಲಮಂ ಸುಖದಿಂದೆ ಕಳಿವುತಿರಲಲ್ಲಿಂದೆ
ಮೇಲೊಂದು ಮೃತ್ಯುವಾಯ್ತುಮರರ್ಗೆ ಖಳಹಿರಣ್ಯಕಶಿಪುವೆನಿಪ್ಪ ಪೆಸರ
ಕಾಳರಕ್ಕಸನೊರ್ವನಂ ಪೆರ್ಚಿ ಸಕಲ ದೇ
ವಾಳಿಯಂ ತನ್ನ ಭುಜಬಲದಿಂದೆ ಸದೆಯೆ ಸುರ
ಜಾಲಸಹಿತಮರೇಂದ್ರನೀಶನಂ ಕಂಡು ಬಿನ್ನೈಸಿದಂ ಭಕ್ತಿಯಿಂದೆ ೨

ಸೂಚನೆ : ಈಶ್ವರನ ಆಜ್ಞೆಯಿಂದ ವಿಷ್ಣುವು ನರಸಿಂಹನಾಗಿ ರಾಕ್ಷಸನನ್ನು ಸಂಹಾರಮಾಡಿ ಜಗತ್ತನ್ನು ನಾಶಮಾಡುತ್ತಿರಲು ದೇವೇಂದ್ರನ ಗೋಳನ್ನು ಕೇಳಿದ ಈಶ್ವರನ ನಿರೂಪದಂತೆ ವೀರಭದ್ರನು ಶರಭಾವತಾರವೆತ್ತಿ ನರಸಿಂಹನನ್ನು ಸಂಹಾರ ಮಾಡಿದನು. ೧. ಶಾಶ್ವತತನು, ಮೋಕ್ಷಕ್ಕೆ ಆಗರ, ಲೋಕರಕ್ಷಕ, ದುಷ್ಟಶಿಕ್ಷಕ, ಭಕ್ತರ ಅಪೇಕ್ಷೆ ಪೂರೈಸುವವ, ಭಯಂಕರವಾದ ಹಣೆಗಣ್ಣುಳ್ಳವ, ದಕ್ಷನ ಯಾಗವನ್ನು ನಾಶ ಮಾಡಿದವ, ದೇವತೆಗಳ ಪಕ್ಷಪಾತಿ,ಕಣ್ಣಿಗೆ ಕಾಣಿಸಿಕೊಳ್ಳುವ ಪರಿಶುದ್ಧ ಸ್ವರೂಪವುಳ್ಳವ, ಕುಬೇರನಿಂದ ಸೇವಿಸಲ್ಪಡುವವ, ವೃಷಭವಾಹನ, ಶ್ರೇಷ್ಠವಾದ ಮುನಿಗಳಿಂದ ನಮಸ್ಕರಿಸಿ ಕೊಳ್ಳುವವ, ನಿಷ್ಕಾಮಿಗಳಿಂದ ಪ್ರೀತಿಸಲ್ಪಡುವ ಪೂಜ್ಯ, ವಿಷ್ಣುವಿನ ಕಣ್ಣಿಂದ ಪೂಜೆ ಗೊಂಡ ಪಾದವುಳ್ಳವ, ವಿರೂಪಾಕ್ಷ, ಮುಕ್ಕಣ್ಣ ಕಾಪಾಡು. ೨. ಮುಂದೆ ಕೇಳಯ್ಯ ಸಿದ್ಧರಾಮ, ದೇವತೆಗಳು ಕೆಲವು ಕಾಲವನ್ನು ಸುಖದಿಂದ ಕಳೆಯುತ್ತಿದ್ದರು. ಹೀಗಿರುವಾಗ ಮತ್ತೊಂದು ಆಪತ್ತು ಒದಗಿತು. ದುಷ್ಟನಾದ ಹಿರಣ್ಯಕಶಿಪು ಎಂಬ ಹೆಸರಿನ ಕರಾಳ ರಾಕ್ಷಸನೊಬ್ಬನು ಕೊಬ್ಬಿ ಎಲ್ಲ ದೇವತೆಗಳ ಸಮೂಹವನ್ನೂ ತನ್ನ ಬಾಹುಬಲದಿಂದ ಸದೆಬಡಿಯಲು, ಆಗ ದೇವತೆಗಳೊಡಗೂಡಿ ದೇವೇಂದ್ರನು ಈಶ್ವರನನ್ನು ಕಂಡು

CC-0. Jangamwadi Math Collection. Digitized by eGangotri

ಧರೆಯೊಳೊರ್ವಂ ಹಿರಣ್ಯಕಶಿಪುವೆನಿಪ್ಪವಂ
ಸರಸಿಜಾಸನನಿಂದೆ ಪಗಲಿರುಳ್ ಪೊರಗೊಳಗು
ಸುರನರೋರಗದನುಜರಿಂದೆ ಬತ್ತೀಸಾಯುಧಗಳಿಂ ಸಾಯದಂತೆ
ವರವನಿನಿತುಂ ಪಡೆದು ತಮ್ಮೆಲ್ಲರಂ ಪದದೊ
ಳೊರಸಿ ದೇವಸ್ತ್ರೀಯರಂ ಪಿಡಿದನಿಂತಿದಂ
ಪರಿಹರಿಸಿ ಕಾಯೆಮ್ಮನೆಂದು ಸುರಸಂಕುಲಂ ಧರಣಿಯೊಳಗಡೆಗೆಡೆದುದು ೩

ಏಳಿಸಿದನಮರರಂ ಶಿವನಂದು ಕರುಣಮಂ
ತಾಳಿ ಸಿರಿಯರಸನುಂ ಕರೆದೆಂದನೀಪರಿ ವಿ
ತಾಳಿಸಿ ಜಗಕ್ಕೆ ಕೇಡಂ ತಂದ ಖಳನಸುಂಗೊಳ್ಳೆಂದು ನೇಮವೀಯೆ
ಆಲಿಸಿದನಾ ನಿರೂಪಂಗಳಂ ಶಿವನಡಿಗೆ
ಬೀಳಿಸಿ ಕಿರೀಟಾಂಕಶಿರಮನಿನ್ನಮರರಂ
ಪಾಲಿಸುವೆನೆಂದು ಕಡುಬೇಗದಿಂದೈತಂದನೇನೆಂಬೆನದ್ಭುತವನು ೪

ಕಂಜಸಂಭವನಿತ್ತ ವರದ ಬಲವಂ ನೆನೆವು
ತುಂ ಜನಾರ್ದನನವನ ಮನೆಯ ಕಂಭದೊಳುಗ್ರ
ದಿಂ ಜನಿಸಿ ನರಸಿಂಹರೂಪದಿಂ ದೈತ್ಯನಂ ಪಿಡಿತಂದು ಹೊಸ್ತಿಲೊಳಗೆ
ಸಂಜೆಯೊಳ್ ತನ್ನ ತೊಡೆಯೊಳ್ ಕೆಡಪುತುಗುರ್ಗೊನೆಗ
ಳಿಂ ಜಠರಮಂ ಬಗಿದು ರಕ್ತಮಂ ಸುರಿಸುರಿದು
ಭುಂಜಿಸಿದನಾ ಹಿರಣ್ಯಕಶಿಪುವನಖಿಳಲೋಕಾಳಿ ಹರುಷಂಬಡೆಯಲು ೫

ಭಕ್ತಿಯಿಂದ ವಿಜ್ಞಾಪಿಸಿಕೊಂಡನು. ೩. ಭೂಮಿಯಲ್ಲಿ ಹಿರಣ್ಯಕಶಿಪು ಎನ್ನುವವನೊಬ್ಬ ಹಗಲಿನಲ್ಲಿ-ರಾತ್ರಿಯಲ್ಲಿ, ಹೊರಗೆ-ಒಳಗೆ, ದೇವ-ಮಾನವ-ನಾಗ-ರಾಕ್ಷಸರಿಂದ, ಮೂವತ್ತೆರಡು ಆಯುಧಗಳಿಂದ, ಸಾವಿಲ್ಲದಂತೆ ಬ್ರಹ್ಮನಿಂದ ವರವನ್ನು ಪಡೆದು ನಮ್ಮನ್ನೆಲ್ಲರನ್ನೂ ಕಾಲಿನಲ್ಲಿ ಒರಸಿ ದೇವತಾಸ್ತ್ರೀಯರನ್ನು ಸೆರೆಹಿಡಿದುಕೊಂಡನು. ಈ ಕಷ್ಟವನ್ನು ಪರಿಹರಿಸಿ ನಮ್ಮನ್ನು ಕಾಪಾಡು ಎಂದು ದೇವತಾಸಮೂಹ ನೆಲದಮೇಲೆ ಬಿದ್ದು ನಮಸ್ಕರಿಸಿತು. ೪. ನೆಲದ ಮೇಲೆ ಬಿದ್ದಿದ್ದ ದೇವತೆಗಳನ್ನು ಅಂದು ಎಬ್ಬಿಸಿದ ಶಿವನು ಕರುಣೆಗೊಂಡು ವಿಷ್ಣುವನ್ನು ಕರೆದು—ಈ ರೀತಿ ಸೊಕ್ಕಿ ಪ್ರಪಂಚಕ್ಕೆ ಕೇಡಕನ್ನುಂಟು ಮಾಡಿದ ರಾಕ್ಷಸನ ಪ್ರಾಣವನ್ನು ತೆಗೆ ಎಂದು ಆಜ್ಞಾಪಿಸಿದನು. ಆ ಅಪ್ಪಣೆಯನ್ನು ಕೇಳಿದ ವಿಷ್ಣು ಶಿವನ ಪಾದಕ್ಕೆ ತನ್ನ ಕಿರೀಟದೊಡಗೂಡಿದ ತಲೆಯನ್ನು ಎರಗಿಸಿ, ಇನ್ನು ದೇವತೆಗಳನ್ನು ಕಾಪಾಡುತ್ತೇನೆ ಎಂದು ಅತಿಶೀಘ್ರವಾಗಿ ಹೊರಟುಬಂದನು. ೫. ಬ್ರಹ್ಮನು ಕೊಟ್ಟ ವರದ ಬಲವನ್ನು ನೆನಪು ಮಾಡಿಕೊಳ್ಳುತ್ತ ವಿಷ್ಣುವು ಆ ರಾಕ್ಷಸನ ಮನೆಯ ಕಂಬದಲ್ಲಿ ಭಯಂಕರ ಆಕಾರದಿಂದ ನರಸಿಂಹರೂಪದಿಂದ ಹುಟ್ಟಿ ದೈತ್ಯನನ್ನು ಹಿಡಿದುತಂದು ಹೊಸಲಿನ ಮೇಲೆ ಸಂಜೆಯಲ್ಲಿ ತನ್ನ ತೊಡೆಯಮೇಲೆ ಕೆಡವಿಕೊಂಡು ಉಗುರಿನ ತುದಿಯಿಂದ ಜಠರವನ್ನು ಬಗೆದು ರಕ್ತವನ್ನು ಸುರಿದುಕೊಂಡು

CC-0. Jangamwadi Math Collection. Digitized by eGangotri

ಮುತ್ತೆ ಕೆಲಕಾಲಕೆ ನೃಸಿಂಹಂಗೆ ಖಳನ ನೊರೆ
ನೆತ್ತರಾವರಿಸಲಂಗೋಪಾಂಗಮುಂ ಮದೋ
ನ್ಮತ್ತತೆಯನೈದಿ ತಾನಾ ಹಿರಣ್ಯಕಶಿಪುವಿಗೆಂಟುಮಡಿಯಾಗಿ ಜಗಮಂ
ಸುತ್ತಿ ಸುಡುತಿರೆ ಸಕಲ ಜಗಮನಮರಾಳಿ ಬೇ
ಸತ್ತು ಮಗುಳ್ದೈದಿ ಕೈಲಾಸಮಂ ಪೊಕ್ಕು ನಮಿ
ತೋತ್ತಮಾಂಗಿಗಳಾಗಿ ಬಿನ್ನವಿಸಿದರ್ ಶಂಕರಂಗೆ ತದ್ವೃತ್ತಕವನು ೬

ಪಳೆಯ ರೋಗಕ್ಕೌಷಧಂಗೊಳಲ್ ನವರೋಗ
ಮೊಲಿದು ಬಂದಂತೆ ಮೊದಲಾಣ್ಮನೊಲ್ಲೆಂದೊರ್ವ
ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ ಖಳನಾ
ಕೊಲೆಗಂಜಿ ದೇವರಂ ಮರೆವೊಕ್ಕಡೆಮ್ಮನುಂ
ದಲೆದು ತಿಂಬೊಂದು ಸಿಂಹಾಕೃತಿಯ ಭೂತಮಂ
ಕಳುಪಿದಿರಿಯೆಂದು ನೊಂದಮರಾಳಿ ವಿಸ್ತರಿಸಿದರ್ ನೃಸಿಂಹನ ಹದನನು ೭

ಅಚ್ಚರಿಯನಾಂತು ಶಿವನಾ ನುಡಿಗೆ ಹರಿಗಿಂತು
ಪೆಚ್ಚಿದ ಮದಂಗಳಂ ನಿಲಿಸುವೆವು ನೀಂ ಮುಂದೆ
ಬೆಚ್ಚಬೇಡೆಂದಭಯಮಿತ್ತು ದಿವಿಜರ್ಗೆ ವೀರೇಶನಂ ಕರೆದು ನೀನು

ಎಲ್ಲ ಲೋಕವೂ ಸಂತೋಷಪಡಲು ಆ ಹಿರಣ್ಯಕಶಿಪುವನ್ನು ತಿಂದನು. ೬. ಮತ್ತೆ ಕೆಲವುಕಾಲಕ್ಕೆ ಆ ರಾಕ್ಷಸನ ನೊರೆನೊರೆಯಾದ ರಕ್ತವು ನರಸಿಂಹನ ಅಂಗಾಂಗವನ್ನೆಲ್ಲ ಆವರಿಸಿತು. ಆಗ ಅವನು ಮದೋನ್ಮತ್ತನಾಗಿ ಆ ಹಿರಣ್ಯಕಶಿಪುವಿಗಿಂತ ಎಂಟು ಪಟ್ಟು ಹೆಚ್ಚಾಗಿ ಜಗತ್ತನ್ನು ಸುತ್ತಿಸುಡುತ್ತಿರಲು ದೇವತೆಗಳ ಸಮೂಹವು ಬೇಸರಗೊಂಡು, ಮತ್ತೆ ಕೈಲಾಸಕ್ಕೆ ಬಂದು ತಲೆಬಾಗಿ ನಮಸ್ಕರಿಸಿ ಶಿವನಿಗೆ ಈ ವೃತ್ತಾಂತವನ್ನು ನಿವೇದಿಸಿದರು. ೭. ಹಳೆಯ ರೋಗಕ್ಕೆ ಔಷಧಿ ತೆಗೆದುಕೊಳ್ಳಲು ಹೊಸ ರೋಗವೊಂದು ಒಲಿದು ಬಂದಂತೆ, ಮೊದಲ ಪ್ರಿಯನು ಬೇಡವೆಂದು ಬೇರೊಬ್ಬ ಶಕ್ತಿವಂತನನ್ನು ಬಯಸಿ ಬಾಳುವೆ ಮಾಡಲು ಹೊಡೆಯುವ ಗಂಡನು ಸಿಕ್ಕಿದಂತೆ, ಆ ರಾಕ್ಷಸನ ಕೊಲೆಗೆ ಹೆದರಿ, ದೇವರಾದ ನಿಮ್ಮನ್ನು ಮೊರೆ ಹೊಕ್ಕರೆ, ನಮ್ಮನ್ನೂ ಹಿಂಸಿಸಿ ತಿನ್ನುವ ಸಿಂಹರೂಪಿಯಾದ ಭೂತವೊಂದನ್ನು ಕಳಿಸಿದಿರಿ ಎಂದು ವ್ಯಥೆಗೊಂಡ ದೇವಸಮೂಹದವರು ನರಸಿಂಹನ (ಹಿಂಸೆಯ) ರೀತಿಯನ್ನು ವಿವರಿಸಿದರು. ೮. ಈಶ್ವರನು ಈ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡು, ಸೊಕ್ಕಿದ ವಿಷ್ಣುವಿನ ಮದವನ್ನು ಇಳಿಸುತ್ತೇವೆ. ನೀವು ಇನ್ನು ಮುಂದೆ ಹೆದರಬೇಡಿ ಎಂದು ದೇವತೆಗಳಿಗೆ ಅಭಯವಿತ್ತು, ವೀರಭದ್ರನನ್ನು ಕರೆದು



CC-0. Jangamwadi Math Collection. Digitized by eGangotri

ಚೆಚ್ಚರದೊಳಾ ಹರಿಯ ಬಳಿಗೈದು ನೀತಿಗಳ
ನುಚ್ಚರಿಸಿ ಕರೆ ಬಾರದಿರ್ದೊಡಾ ದೇಹಮಂ
ಬಿಚ್ಚುತೆ ಶಿರಶ್ಚರ್ಮಮೆರಡುಮಂ ತಾರೆಂದು ಕುವರನಂ ಬೀಳ್ಕೊಟ್ಟನು ೮

ನಮಿಸಿದಂ ಶಿವನಡಿಗೆ ಭಕ್ತಿಯಿಂ ಕೂಡಿ ಸಂ
ಕ್ರಮಿಸಿದಂ ತನ್ನ ಬಲಮಂ ದಿವಿಜವರ್ಗಮಂ
ಗಮಿಸಿದಂ ನಿಂದಲ್ಲಿ ನಿಲ್ಲದಾ ನರಸಿಂಹನಿದಿರೊಳೈತಂದು ನಿಂದು
ಭ್ರಮಿಸಿ ನುಡಿಯದೆ ಸುಮ್ಮನಿರ್ಪ ಹರಿಯಂ ಕಂಡು
ಕ್ಷಮಿಸಿ ನುಡಿದಂ ಸಕಲಜನರ ಭೀತಿಯನುಪ
ಕ್ರಮಿಸಿ ನಡೆವುದು ನೀತಿಯೇ ನಿನಗೆ ಹೇಳೆಂದು ಹರಿಗೆ ಮತ್ತಿಂತೆಂದನು ೯

ಎಲೆ ಹರಿಯೆ ಕೇಳ್ ನೀನು ಸತ್ವಗುಣಸಂಯುತಂ
ಸುಲಲಿತಂ ಜ್ಞಾನಿ ಲೋಕಂಗಳಂ ನಲಿವಿನಿಂ
ಸಲಹುವಂ ನೀನಸುರಕೃತ್ಯದೊಳ್ ತಾಮಸದೊಳಜ್ಞಾನದೊಳ್ ಲೋಕದ
ಕೊಲೆಗೆಳಸೆ ನಗದಿಹರೆ ಕೇಳ್ದವರ್ ನಿನ್ನೊಳಗೆ
ತಿಳಿದುನೋಡೀ ನುಡಿಯನೆಂದು ನರಹರಿಗಂದು
ಪಲತೆರದ ಬುದ್ಧಿಯಂ ಪೇಳಿದಂ ರುದ್ರಾವತಾರನತಿಶಾಂತತೆಯೊಳು ೧೦

ನೀನು ಜಾಗ್ರತೆಯಾಗಿ ನರಸಿಂಹನ ಬಳಿಗೆ ಹೋಗಿ, ನೀತಿಬೋಧೆ ಮಾಡಿ, ಅವನನ್ನು ಕರೆ. ಅವನು ಬರದಿದ್ದರೆ ಅವನ ಪ್ರಾಣ ತೆಗೆದು,ತಲೆ-ಚರ್ಮ ಎರಡನ್ನೂ ತೆಗೆದುಕೊಂಡು ಬಾ ಎಂದು ಬೀಳ್ಕೊಟ್ಟನು. ೯, ಶಿವನ ಪಾದಕ್ಕೆ ವೀರಭದ್ರನು ಭಕ್ತಿಯಿಂದ ನಮಸ್ಕರಿಸಿದನು. ತನ್ನ ಸೈನ್ಯ ಮತ್ತು ದೇವತೆಗಳ ಜೊತೆಗೂಡಿ ಹೊರಟನು. ನಿಂತಲ್ಲಿ ನಿಲ್ಲದೆ ಹೊರಟು ಬಂದು ನರಸಿಂಹನ ಎದುರಿನಲ್ಲಿ ನಿಂತನು. ಗರ್ವದಿಂದ ಭ್ರಮೆಗೊಂಡು ತನ್ನನ್ನು ಮಾತಾಡಿಸದೆ ಸುಮ್ಮನಿದ್ದ ವಿಷ್ಣುವನ್ನು ನೋಡಿ ಅವನ ವರ್ತನೆಯನ್ನು ಕ್ಷಮಿಸಿ ಅವನನ್ನು ಕುರಿತು ಎಲ್ಲ ಜನರ ಹೆದರಿಕೆಯನ್ನೂ ಉಂಟುಮಾಡಿ ಈ ರೀತಿ ನಡೆಯುವುದು ನಿನಗೆ ನ್ಯಾಯವೇ ? ನನ್ನ ಎದುರಿಗೆ ಬಂದು ಸರಿಸಮನಾಗಿ ಮಾತನಾಡುವ ನೀನು ಯಾರು ? ಹೇಳು ಎಂದು ಕೇಳಿ ಮತ್ತೆ ಈ ರೀತಿ ಹೇಳಿದನು. ೧೦. ಎಲೈ ನರಸಿಂಹನೇ ಕೇಳು, ನೀನು ಸತ್ಯಗುಣಸಂಪನ್ನನು, ಮನೋಹರನಾದವ, ಜ್ಞಾನಿ, ಲೋಕವನ್ನು ಪ್ರೀತಿಯಿಂದ ಪಾಲಿಸುವವನು. ನೀನೇ ರಾಕ್ಷಸಕೃತ್ಯದಲ್ಲಿ ತಾಮಸಿಯಾಗಿ ನೀಚಸ್ವಭಾವದಿಂದ ಅಜ್ಞಾನದಿಂದ, ಪ್ರಪಂಚದ ನಾಶಕ್ಕೆ ಆಶಿಸಿದರೆ ಕೇಳಿದವರು ನಗದಿರುವರೆ. ನೀನೇ ಈ ಮಾತನ್ನು ಆಲೋಚಿಸಿನೋಡು ಎಂದು ನರಸಿಂಹನಿಗೆ ರುದ್ರಾವತಾರಿಯಾದ ವೀರಭದ್ರನು ಶಾಂತವಾಗಿ ಅನೇಕ ರೀತಿಯ ಬುದ್ಧಿವಾದಗಳನ್ನು ಹೇಳಿದನು.

CC-0. Jangamwadi Math Collection. Digitized by eGangotri

ವಾರಿನಿಧಿ ಮೇರೆಯಂ ಮೀರ್ದಂತಕಾರಣಂ
ಭೂರಮಣಿ ಬಾಯ್ಬಿರದು ನುಂಗುವೊಲಕಾಲದ ಸ
ಮೀರಣಂ ವೆಗ್ಗಳಿಸಿ ಬೀಸುವಂತಾವಗಂ ಸಕಲರಂ ಸಲಹುವವನೇ
ಈ ರಾಕ್ಷಸತ್ವದಿಂ ಲೋಕಮಂ ನೀನೆ ಸಂ
ಹಾರಮಂ ಮಾಳ್ಪುದನುಚಿತಮೆಂದು ನಿನ್ನನಾ
ಮಾರಾರಿ ತನ್ನಲ್ಲಿಗೊಡಗೊಂಡು ಬರವೇಳ್ದನೆನೆ ನೃಸಿಂಹಂ ನುಡಿದನು ೧೧

ಆವನದಾರ್ ಮಾರಾರಿಯೆಂಬುವಂ ತನ್ನ ಕರೆ
ವವನದಾರಿನಿತೊಂದು ಪೆಸರೊಳಂ ಬಾಳ್ವ ದೊ
ಡ್ಡವನದಾರೆನ್ನಿದಿರೊಳ್ಕೈದಿ ಸರಿಬರಿಗೆ ಮಾತಾಡುವಂ ನೀನದಾರು
ಜವನವರ್ ನಿನ್ನ ಕರೆದಪರೇನೊ ನೀನಧಿಕ
ಜವದೊಳಳಿಯಲ್ ಬಂದಯಕಟೆಮ್ಮ ಶೌರ್ಯಮಂ
ಜವನೆಲ್ಲರಿಂ ಕೇಳ್ದು ಬರ್ಪುದನುಚಿತಮೆಂದು ಗುಡುಗುಡಿಸಿದಂ ನೃಸಿಂಹಂ ೧೨

ಕೇಳ್ದು ಗಹಗಹಿಸಿ ವೀರಂ ಮಹಾಕೋಪಮಂ
ತಾಳ್ದು ತರಹರಿಸಿ ಹರಿ ಕೇಳ್ ದೈತ್ಯರಾಜನಂ
ಸೀಳ್ದು ನೆತ್ತರ್ಗುಡಿಯಲಾ ಮದಂ ಪತ್ತಿ ನೀಂ ಮೈಮರೆಯೆ ತಪ್ಪದೇನು
ಪೇಳ್ದಪೆವು ಕೇಳ್ ಬ್ರಹ್ಮನೇ ಸೃಷ್ಟಿಕರ್ತೃ ಜಗ
ದೊಳ್ದಿಟಂ ರಕ್ಷಿಪಂ ನೀಂ ನಿಮ್ಮನುಂ ಜಗಮ
ನಾಳ್ದು ಸೃಷ್ಟಿಸಿ ಸಲಹಿ ಕೊಲ್ವವಂ ರುದ್ರನಾತನ ಪುತ್ರನಾನೆಂದನು ೧೩

೧೧. ಸಮುದ್ರವು ತನ್ನ ಗಡಿಯನ್ನು ಮೀರಿದಂತೆ, ವಿನಾಕಾರಣ ಭೂಮಿ ಬಾಯಿಬಿಟ್ಟು ನುಂಗುವಂತೆ,ಅಕಾಲದಲ್ಲಿ ಬಿರುಗಾಳಿ ಬೀಸುವಂತೆ,ಯಾವಾಗಲೂ ಎಲ್ಲರನ್ನೂ ಕಾಪಾಡುವ ನೀನೇ ಈ ರಾಕ್ಷಸತ್ವದಿಂದ ಲೋಕಸಂಹಾರವನ್ನು ಮಾಡುವುದು ಉಚಿತವಲ್ಲ ಎಂದು ಈಶ್ವರನು ನಿನ್ನನ್ನು ತನ್ನ ಬಳಿಗೆ ಕರೆದುಕೊಂಡು ಬರುವಂತೆ ಹೇಳಿದನು ಎಂದನು. ಅದಕ್ಕೆ ನರಸಿಂಹನು ಈ ರೀತಿ ಹೇಳಿದನು. ೧೨. ಮಾರಾರಿ ಎನ್ನುವ ಅವನ್ಯಾರು ? ನನ್ನನ್ನು ಬರಹೇಳುವವನು ಅವನಾರು ? ಇಷ್ಟೊಂದು ದೊಡ್ಡ ಹೆಸರಿನಿಂದ ಬಾಳುವ ಅವನು ಯಾರು ? ಯಮನ ಕಡೆಯವರು ನಿನ್ನನ್ನೂ ಬರಹೇಳಿದರೇನೊ ? ನೀನು ಬಹಳ ಬೇಗ ಸಾಯಲು ಬಂದೆಯಲ್ಲ. ಅಯ್ಯೋ ! ನನ್ನ ಸಾಹಸಗಳನ್ನು ಎಲ್ಲರಿಂದಲೂ ಕೇಳಿಯೂ ಬರುವುದು ಉಚಿತವಲ್ಲ ಎಂದು ನರಸಿಂಹನು ಗುಡುಗುಡಿಸಿದನು. ೧೩. ಈ ಮಾತನ್ನು ಕೇಳಿ ಗಹಗಹಿಸಿ ನಕ್ಕು ವೀರಭದ್ರನು ಮಹಾಕೋಪಗೊಂಡು ಮತ್ತೆ ಸಮಾಧಾನ ತಾಳಿ, ರಾಕ್ಷಸನನ್ನು ಕೊಂದು ಅವನ ರಕ್ತವನ್ನು ಕುಡಿದುದರಿಂದ ನಿನಗೆ ಗರ್ವವುಂಟಾಗಿ ಮೈಮರೆತುದು ನಿನ್ನ ತಪ್ಪಲ್ಲ. ಹೇಳುತ್ತೇವೆ ಕೇಳು, ಜಗತ್ತಿನಲ್ಲಿ ಬ್ರಹ್ಮನೇ ಸೃಷ್ಟಿಸುವವನು. ನೀನು ನಿಜವಾಗಿಯೂ ರಕ್ಷಿಸುವವನು. ನಿಮ್ಮನ್ನೂ ಪ್ರಪಂಚವನ್ನೂ ಆಳಿ ಸೃಷ್ಟಿಸಿ, ಸಲಹಿ, ಕೊಲ್ಲುವವನು ಶಿವ. ನಾನು ಅವನ ಮಗ

CC-0. Jangamwadi Math Collection. Digitized by eGangotri

ಹೋ ಹೋ ಪುರೇ ಕೇಳ್ದೆವಾಶ್ಚರ್ಯವಂ ಮಸಣ
ಗಾಹಿ ಗೊರವಂ ಬೂದಿಬಡಿಕನರೆವೆಣ್ಣವನ
ಸಾಹಸಂ ಗಡ ಜಗತ್‌ಸ್ಥಿತಿ ಜನನ ಲಯಕರ್ತೃವಾತಂ ಗಡೆಮ್ಮೊಡೆಯನು
ಈ ಹದಿರುಗಾರನಾತನ ಮಗಂ ಗಡ ಮರ
ಳ್ದಾ ಪಿರಿಯನೆಡೆಗೆಮ್ಮನೊಯ್ವ ಗಡ ಕೇಳಿಮೆಂ
ದಾ ಹತ್ತಿರಿರ್ದವರ ಕೈವೊಯ್ದು ನಕ್ಕು ನರಹರಿ ಮಗುಳ್ದಿಂತೆಂದನು ೧೪

ನುಡಿಯೊಳೇಂ ಪಿರಿಯತನಮಪ್ಪುದೇ ನಿನ್ನ ಬಾ
ಯ್ಬಡಿಕತನಮಂತಿರಲಿ ಲೋಕಕ್ಕೆ ತಾನಲ್ಲ
ದೊಡೆಯರುಂಟೆ ಸುರಪ ಬ್ರಹ್ಮ ರುದ್ರಾದಿಗಳ್ ನಮ್ಮಾಜ್ಞೆಯೊಳ್ ನಡೆವರು
ಕಡೆಗೆ ಸಂಹರಿಸುವೆವು ಸೃಷ್ಟಿಪೆವು ರಕ್ಷಿಪೆವು
ಕೊಡುವೆವಳಿವೆವು ಸಕಲಸಂಪದವ ನಿನಗದರ
ಗೊಡವೆಯೇತಕೆ ಬಂದ ದಾರಿಯೊಳ್ ನಡೆಯೆಂದು ನುಡಿದನಾ ನರಸಿಂಹನು ೧೫

ತರಹರಿಸಿದಂ ವೀರನಾ ನುಡಿಗೆ ಪಲ್ಮೊರೆದು
ಹರನಾಜ್ಞೆಯಿಂದಿವಂಗಿನ್ನೊಮ್ಮೆ ಬುದ್ಧಿಗಳ
ನೊರೆವೆನವನುಂ ಕೇಳದೊಡೆ ತಕ್ಕುದಂ ನೆಗಳ್ವೆನೆಂದುರೆ ಮಹಾನಯದೊಳು

ಎಂದನು. ೧೪. ಹೋ ಹೋ ಭಾಪುರೇ, ಆಶ್ಚರ್ಯವನ್ನು ಕೇಳಿದೆವು ! ಸ್ಮಶಾನಕಾಯುವ ಭಿಕ್ಷುಕ, ಬೂದಿಬಡುಕ, ಅರೆಹೆಣ್ಣಾದವನು ಮಹಾಸಾಹಸಿಯಲ್ಲವೆ ! ಜಗತ್ತಿನ ಸೃಷ್ಟಿ, ಸ್ಥಿತಿ, ಲಯಕರ್ತ ಆತನಲ್ಲವೆ ? ನಮ್ಮ ಯಜಮಾನನು ಆತನಲ್ಲವೆ ! ಈ ಎಳೆಗಾಯಿ ಅವನ ಮಗನಂತೆ ! ಅಲ್ಲದೆ ಆ ಹಿರಿಯನ ಹತ್ತಿರಕ್ಕೆ ನಮ್ಮನ್ನು ಕರೆದುಕೊಂಡು ಹೋಗು ತ್ತಾನಂತೆ ! ಇವನ ಮಾತನ್ನು ಕೇಳಿ ಎಂದು ಹತ್ತಿರವಿದ್ದವರ ಕೈತಟ್ಟಿ ನಕ್ಕು ನರಸಿಂಹನು ಮತ್ತೆ ಹೀಗೆಂದನು. ೧೫. ಮಾತಿನಲ್ಲಿ ಯಾವ ದೊಡ್ಡತನ ಬರುವುದೇನು ? ನಿನ್ನ ಬಾಯಿಬಡುಕತನ ಹಾಗಿರಲಿ ! ಲೋಕಕ್ಕೆ ನಾನಲ್ಲದೆ ಬೇರೆ ಯಜಮಾನರು ಇದ್ದಾರೆಯೆ ? ದೇವೇಂದ್ರ, ಬ್ರಹ್ಮ, ರುದ್ರರು ನಮ್ಮ ಆಜ್ಞೆಯಂತೆ ನಡೆಯುತ್ತಾರೆ. ಕೊನೆಗೆ ಎಲ್ಲರನ್ನೂ ಸಂಹರಿಸುತ್ತೇವೆ; ಮತ್ತೆ ಸೃಷ್ಟಿಸುತ್ತೇವೆ, ರಕ್ಷಿಸುತ್ತೇವೆ, ಸಕಲ ಸಂಪತನ್ನು ಕೊಡುತ್ತೇವೆ, ನಾಶ ಮಾಡುತ್ತೇವೆ. ನಿನಗೆ ಅದರ ತಂಟೆಯೇಕೆ ? ಬಂದ ದಾರಿಯಲ್ಲಿ ಹಿಂದಿರುಗು ಎಂದು ಆ ನರಸಿಂಹನು ಹೇಳಿದನು. ೧೬. ಆ ಮಾತನ್ನು ಕೇಳಿಯೂ ವೀರಭದ್ರನು ಕೋಪವನ್ನು ತಡೆದುಕೊಂಡನು. ಹಲ್ಲುಕಡಿಯುತ್ತ ಈಶ್ವರನ ಆಜ್ಞೆಯಂತೆ ಇವನಿಗೆ ಇನ್ನೂ ಒಂದು ಬಾರಿ ಬುದ್ಧಿಯನ್ನು ಹೇಳುತ್ತೇನೆ. ಅಲ್ಲಿಗೂ ಕೇಳದಿದ್ದರೆ ತಕ್ಕದ್ದನ್ನು

CC-0. Jangamwadi Math Collection. Digitized by eGangotri

ನರಸಿಂಹ ಕೇಳ್ ನಿನ್ನ ಮೂರ್ಖತೆಯನುಳಿ ಬರಿದು
ಮರುಳಾಟದಿಂದೆ ಫಲವೇಂ ಸಕಲಲೋಕಮಂ
ಪೊರೆವಾತನಹುದು ನೀನಾದೊಡಂ ಹರನಾಜ್ಞೆಯಂ ಮಿರಬೇಡೆಂದನು ೧೬

ಹರನಾಜ್ಞೆಯಿಂ ಮತ್ಸ್ಯ ಕೂರ್ಮ ಕಿಟಿ ಘೋರಕೇ
ಸರಿ ಮುಖ್ಯರೂಪುಗಳನಾಂತು ತಮನು ಮಹಾ
ಗಿರಿಯಂ ಹಿರಣ್ಯಾಕ್ಷನಂ ಹಿರಣ್ಯಕಶಿಪುವನರಿದೆತ್ತಿ ಸದೆದು ಸೀಳಿ
ಸುರರ ಸಲಹಿದೆ ಈಗಳದನೆಲ್ಲಮಂ ಮರೆದು
ಸುರರನೇ ಸಂಹಾರಮಂ ಮಾಳ್ಪಬೇಡೆನ
ಲ್ಕರರೆ ವೀರೇಶವಚನಾಮೃತದೆ ನನೆದುದಿಲ್ಲವನೆರ್ದೆಯದೇಂ ಕಠಿಣಮೋ ೧೭

ಬೇಡ ಬಾರೈ ನೃಕೇಸರಿ ಶಂಕರಂ ನಿನಗೆ
ಕೇಡನೆಣಿಸುವನಲ್ಲ ಕಂಡು ಬರ್ದುಕೆಂದು ಮಾ
ತಾಡುತಿರೆ ಗುಡುಗುಡಿಸಿ ಕೋಪದಿಂ ವೀರನಂ ಮೇಲ್ವಾಯ್ದು ಕೊಲ್ವೆನೆಂದು
ಕೂಡೆ ಲಂಘಿಸೆ ಕಂಡು ತಪ್ಪಿಲ್ಲವೆಮ್ಮೊಳಿಂ
ದಾಡಿ ಸುರರೆಲ್ಲರುಂ ನೋಡುತಿರೆ ಪುಟನೆಗೆದು
ಗಾಡದಿಂ ನರಮೃಗದ ಮಸ್ತಕವನೆಡಗಾಲೊಳೊದೆದನವನೇನೆಂಬೆನು ೧೮

ಮಾಡುತ್ತೇನೆ ಎಂದು ಬಹಳ ನಯವಾಗಿ ಹೇಳಿದನು. ನರಸಿಂಹ ಕೇಳು. ನಿನ್ನ ಮೂರ್ಖತನವನ್ನು ಬಿಡು. ಬರೀಹುಚ್ಚಾಟದಿಂದ ಏನು ಪ್ರಯೋಜನ ? ಎಲ್ಲ ಲೋಕವನ್ನೂ ಸಲಹುವವನು ನೀನಾದರೂ ಶಿವನ ಆಜ್ಞೆಯನ್ನು ಮೀರಬೇಡ ಎಂದನು. ೧೭. ಶಿವನ ಆಜ್ಞೆಯಂತೆ ಮತ್ಸ್ಯ, ಕೂರ್ಮ, ವರಾಹ, ಘೋರವಾದ ನರಸಿಂಹ ಮುಂತಾದ ಮುಖ್ಯವಾದ ಅವತಾರಗಳನ್ನು ತಾಳಿ ಅಂಧಕಾಸುರನನ್ನು ಕೊಂದು, ಮಂದರಪರ್ವತವನ್ನು ಎತ್ತಿ, ಹಿರಣ್ಯಾಕ್ಷನನ್ನು ಸದೆಬಡಿದು, ಹಿರಣ್ಯಕಶಿಪುವನ್ನು ಎತ್ತಿ ಸದೆಬಡಿದು ಸೀಳಿ ದೇವತೆಗಳನ್ನು ಕಾಪಾಡಿದೆ. ಈಗ ಅದನ್ನೆಲ್ಲ ಮರೆತು ದೇವತೆಗಳನ್ನೇ ನಾಶಮಾಡ ಬೇಡ ಎನ್ನಲು ಅಯ್ಯೊ, ವೀರೇಶ್ವರನ ಮಾತೆಂಬ ಅಮೃತದಿಂದ ಕೂಡ ಅವನ ಎದೆ ನೆನೆಯಲಿಲ್ಲ, ಅದು ಇನ್ನೆಷ್ಟು ಕಠಿಣವಾದುದೊ ! ೧೮. ಹಟಬೇಡ ಬಾರಯ್ಯ, ನರಸಿಂಹ ಶಿವನು ನಿನಗೆ ಕೇಡನ್ನು ಎಣಿಸುವವನಲ್ಲ, ಅವನ ದರ್ಶನಮಾಡಿ ಬದುಕಿಕೊ ಎಂದು ಹೇಳುತ್ತಿರಲು ನರಸಿಂಹನು ಕೋಪದಿಂದ ಗುಡುಗುಡಿಸಿ ವೀರಭದ್ರನ ಮೇಲೆ ಬಿದ್ದು ಕೊಲ್ಲುತ್ತೇನೆ ಎಂದು ತಕ್ಷಣ ಹಾರಿದನು. ಅದನ್ನು ನೋಡಿ ವೀರಭದ್ರನು ಇನ್ನು ನಮ್ಮಲ್ಲಿ ತಪ್ಪಿಲ್ಲ ಎಂದು ಹೇಳಿ, ದೇವತೆಗಳೆಲ್ಲರೂ ನೋಡುತ್ತಿದ್ದಂತೆಯೇ; ಪುಟನೆಗೆದು ಬಲವಾಗಿ ನರಸಿಂಹನ ಹಣೆಯನ್ನು ಎಡಗಾಲಿನಿಂದ ಒದ್ದನು. ಅದನ್ನು ಏನೆನ್ನಲಿ ?

CC-0. Jangamwadi Math Collection. Digitized by eGangotri

ತದ್ದನುಜರಿಪು ಧರೆಗೆ ಬಿದ್ದು ಚೇತರಿಸಿ ಮಾ
ರುದ್ದಿ ಕೈಗಳನತುಳ ರೋಷದಿಂ ವೀರನಂ
ಗುದ್ದುವೆನೆನುತ್ತೆ ನಡೆತರ್ಪುದಂ ಕಾಣುತ್ತೆ ವೀರಭದ್ರಂ ಮನದೊಳು
ಉದ್ದುರುಟುತನದ ಸಿಂಹಾಕೃತಿಗೆ ತಕ್ಕ ಬ
ಲ್ಮದ್ದನಿತ್ತೀ ನೃಸಿಂಹನ ಪಣೆಯ ಬರಹವಂ
ತಿದ್ದಿ ಬಿಟ್ಟಪೆನೀಗಳೆನುತೆ ಶರಭಾಕಾರಮಂ ತಾಳ್ದು ರಂಜಿಸಿದನು ೧೯

ಕಾಂಚನಮಹಾಗಿರಿಗೆರಂಕೆಗಳ್ ಪಾದವೆಂ
ಟುಂ ಚಮತ್ಕಾರದಿಂ ಮೂಡಿದುವೊ ನಭದೊಳಿದು
ತಾಂ ಚಲಿಸೆ ಗರಿಯ ಗಾಳಿಯೊಳಬ್ಧಿಗಳ್ ಮೇರೆಯುಂ ಮೀರವೇ ಗಿರಿಗಳ
ಸಂಚಯುಂ ಪಾರದಿರ್ಪುವೆ ತರಣಿ ಶಶಿ ತಾರೆ
ಯುಂ ಚಲ್ಲವಡಿದುತೆ ಬೀಳದಿರವೆಂಬಿನಂ
ಚಂಚುವಿಂ ನರಮೃಗದ ಕಂಠಮಂ ಕರ್ಚಿ ಪಾರಿತು ಗಗನಕೇನೆಂಬೆನು ೨೦

ಕೊಡಹುವಂ ನರಮೃಗಶರೀರಿ ಚರಣಂಗಳಿಂ
ತೊಡರುವಂ ಶರಭಾವತಾರಿ ಮತ್ತೆಡಬಲಕೆ
ಮಿಡುಕುವಂ ನಾರಸಿಂಹಂ ಬಳಿಕ್ಕೊಡನೊಡನೆ ತುಡುಕುವಂ ವೀರಭದ್ರಂ

೧೯. ವಿಷ್ಣುವು ನೆಲಕ್ಕೆ ಬಿದ್ದು ಚೇತರಿಸಿಕೊಂಡು, ಅತಿಯಾದ ರೋಷದಿಂದ ಕೈಗಳನ್ನು ಉಜ್ಜಿ ಹೊಸೆಯುತ್ತ ವೀರಭದ್ರನನ್ನು ಗುದ್ದುತ್ತೇನೆ ಎಂದು ನಡೆದುಬರುವುದನ್ನು ನೋಡಿ ವೀರಭದ್ರನು ಉದ್ಧಟನಾದ ಈ ನರಸಿಂಹನಿಗೆ ತಕ್ಕ ಬಲವಾದ ಔಷಧವನ್ನು ಕೊಟ್ಟು, ಇವನ ಹಣೆಯಬರಹವನ್ನು ಈಗಲೇ ತಿದ್ದಿಬಿಡುತ್ತೇನೆ ಎಂದು ಮನಸ್ಸಿನಲ್ಲಿಯೆ ಯೋಚಿಸಿ ಶರಭಾವತಾರವನ್ನು ತಾಳಿ ಪ್ರಕಾಶಿಸಿದನು. ೨೦. ಮಹಾ ಮೇರುಪರ್ವತಕ್ಕೆ ರೆಕ್ಕೆಗಳು, ಎಂಟು ಕಾಲುಗಳು ಚಮತ್ಕಾರವಾಗಿ ಹುಟ್ಟಿದುವೊ ? ಆಕಾಶದಲ್ಲಿ ಇದು ಹಾರುತ್ತಿದ್ದರೆ ಅದರ ಗರಿಯಿಂದ ಹೊರಟ ಗಾಳಿಗೆ ಸಮುದ್ರಗಳು ತಮ್ಮ ಮೇರೆಯನ್ನು ಮೀರದಿರುತ್ತವೆಯೆ ? ಪರ್ವತಗಳ ಸಮೂಹ ಹಾರಿಹೋಗದೆ ? ಸೂರ್ಯ ಚಂದ್ರ ನಕ್ಷತ್ರಗಳು ಚೆಲ್ಲಾಪಿಲ್ಲಿಯಾಗಿ ಬೀಳದಿರವು ಎನ್ನುವಂತೆ ಆ ಶರಭವು ತನ್ನ ಕೊಕ್ಕಿನಿಂದ ನರಸಿಂಹನ ಕುತ್ತಿಗೆಯನ್ನು ಕಚ್ಚಿ ಹಿಡಿದು ಆಕಾಶಕ್ಕೆ ಹಾರಿತು. ಏನೆಂದು ಹೇಳಲಿ ! ೨೧. ನರಸಿಂಹನು ಮೈಕೊಡವುತ್ತಾನೆ. ಶರಭಾವತಾರಿ ತಕ್ಷಣ ಕಾಲುಗಳಿಂದ ಅವನನ್ನು ಹಿಡಿದುಕೊಳ್ಳುತ್ತಾನೆ, ಮತ್ತೆ ಎಡಕ್ಕೆ ಬಲಕ್ಕೆ ನರಸಿಂಹ ಮಿಡುಕಾಡುತ್ತಾನೆ. ಬಳಿಕ ಒಡನೊಡನೆಯೆ ವೀರಭದ್ರನು ಹಿಡಿದುಕೊಳ್ಳುತ್ತಾನೆ. ಸಿಡಿದುಹೋಗುತ್ತೇನೆ

CC-0. Jangamwadi Math Collection. Digitized by eGangotri

ಸಿಡಿವೆನೆಂದುಬ್ಬುವಂ ದನುಜಾರಿ ಪಕ್ಕದೊಳ್
ಬಡಿವೆನೆಂದಬ್ಬರಿಸೆ ದಕ್ಷಾರಿ ಕಣ್ಬಾಯ
ಬಿಡುವಂ ನೃಹರಿ ಜರೆವನೊಡನತನ್ನರಿಪುತ್ರನೇನೆಂದು ಬಣ್ಣಿಸುವೆನು ೨೧

ಎಲ್ಲಿ ತೋರಿಸು ಜಗತ್‌ಸ್ಥಿತಿಲಯೋತ್ಪತ್ತಿಗಾ
ನಲ್ಲದಿಲ್ಲೆಂಬ ನಾಲಗೆಯನಾ ಶಿವನ ಬಳಿ
ಗೊಲ್ಲೆನೆಂದೆಂಬ ಬಲ್ಮೆಯನಭವನಂ ಜರೆವ ಚತುರಿಕೆಯ ಮಾತುಗಳನು
ಸೊಲ್ಲುಸೊಲ್ಲೆಂದು ಮೂದಲಿಸುತುಂ ನಿಖಿಳನಖ
ದಲ್ಲಿ ಮುಖದಲ್ಲೆರಂಕೆಯುಲೆರಗಿ ದೆಸೆದೆಸೆಗೆ
ಚೆಲ್ಲಿಸಿದನರುಣಾಂಬುವಂ ನೃಕೇಸರಿಯಂಗದಿಂದಮದ್ಭುತಶರಭನು ೨೨

ಕುಸುಕಿರಿವನಡಿಗಡಿಗೆ ಘನಪರ್ವತಂಗಳೊಳ್
ಬಸಿವನಲ್ಲಲ್ಲಿ ನೆತ್ತರನಬ್ಧಿಯೊಳ್ ಮುಳುಂ
ಗಿಸುವನೊಮ್ಮೊಮ್ಮೆ ತೆಗದೆತ್ತುವಂ ಸುತ್ತುವಂ ನಾನಾ ದಿಗಂತಗಳನು
ಕೊಸರಿ ಬೀಸಾಡುವಂ ಗಗನದಿಂದಿಳೆಗಪ್ಪ
ಳಿಸುವನಿಂತೆರ್ದೆಯುಳಲ್ ತೀರ್ವನ್ನೆಗಂ ನೃಹರಿ
ಯಸು ಪಿಂಗುವನ್ನೆಗಂ ವೀರನಾರುಂ ಕೊಲ್ಲದರೆಗೊಲೆಯನುರೆಕೊಂದನು ೨೩

ಎಂದು ಶರೀರವನ್ನು ವಿಷ್ಣು ಗರ್ವದಿಂದ ಉಬ್ಬುತ್ತಾನೆ. ರೆಕ್ಕೆಯಿಂದ ಬಡಿಯು ತ್ತೇನೆ ಎಂದು ವೀರಭದ್ರ ಆರ್ಭಟಿಸುತ್ತಾನೆ. ನರಸಿಂಹ ಕಣ್ಣು ಬಾಯಿ ಬಿಡು ತ್ತಾನೆ. ತಕ್ಷಣ ವೀರಭದ್ರ ಅವನನ್ನು ಹೀಯಾಳಿಸುತ್ತಾನೆ. ಅದನ್ನು ಏನೆಂದು ಬಣ್ಣಿಸಲಿ ? ೨೨. ಜಗತ್ತಿನ ಸೃಷ್ಟಿ-ಸ್ಥಿತಿ-ಲಯಕ್ಕೆ ನಾನಲ್ಲದೆ ಬೇರೆ ಇಲ್ಲ ಎನ್ನುವ ನಾಲಗೆಯನ್ನು, ಶಿವನ ಬಳಿಗೆ ಬರುವುದಿಲ್ಲವೆಂಬ ಪರಾಕ್ರಮವನ್ನು ಎಲ್ಲಿ ತೋರಿಸು. ಶಿವನನ್ನು ಹೀಯಾಳಿಸುವ ಬುದ್ಧಿವಂತಿಕೆಯ ಮಾತುಗಳನ್ನು ಹೇಳು ಹೇಳು ಎಂದು ಮೂದಲಿಸುತ್ತ ಆ ಅದ್ಭುತಾಕಾರದ ಶರಭನು ತನ್ನ ಎಲ್ಲ ಉಗುರು, ಕೊಕ್ಕು,ರೆಕ್ಕೆಯಲ್ಲಿ ಅಪ್ಪಳಿಸಿ ಹೊಡೆದು, ನರಸಿಂಹನ ಮೈಯಿಂದ ದಿಕ್ಕುದಿಕ್ಕಿಗೆ ರಕ್ತವನ್ನು ಚೆಲ್ಲಿಸಿದನು. ೨೩. ಮತ್ತೆ ಮತ್ತೆ ಕುಕ್ಕಿ ಗುದ್ದುತ್ತಾನೆ. ದೊಡ್ಡಪರ್ವತಗಳ ಮೇಲೆ ಅಲ್ಲಲ್ಲಿ ರಕ್ತವನ್ನು ಸುರಿಸುತ್ತಾನೆ. ಒಂದೊಂದು ಸಾರಿ ಸಮುದ್ರದಲ್ಲಿ ಮುಳುಗಿ ಸುತ್ತಾನೆ. ಮತ್ತೆ ಅಲ್ಲಿಂದ ಎತ್ತುತ್ತಾನೆ. ನಾನಾ ದಿಕ್ಕುಗಳನ್ನು ಸುತ್ತುತ್ತಾನೆ. ಒದರಿ ಬಿಸಾಡುತ್ತಾನೆ. ಆಕಾಶದಿಂದ ನೆಲಕ್ಕೆ ಅಪ್ಪಳಿಸುತ್ತಾನೆ. ಮನಸ್ಸಿನ ರೋಷ ತೀರುವಷ್ಟು ನರಸಿಂಹನ ಪ್ರಾಣಹೋಗುವ ತನಕ ಈ ರೀತಿ ವೀರಭದ್ರನು ಯಾರೂ

CC-0. Jangamwadi Math Collection. Digitized by eGangotri

ಇಂತು ಕೊಂದಾ ನೃಕೇಸರಿಚರ್ಮಮಂ ಶಿರ
ಸ್ಸಂ ತಂದು ತಂದೆಗೊಪ್ಪಿಸೆ ಕಾಣುತೀಶ್ವರಂ
ಸಂತಸದೊಳಾ ಮುಖಕೆ ಕೀರ್ತಿಮುಖವೆಂಬ ಪೆಸರಿಟ್ಟೆಸೆವ ಭೂಷಣದೊಳು
ಅಂತು ತಚ್ಚರ್ಮಮಂ ಸಿಂಹಾಸನಮಿದೆಂದು
ತಾಂ ತಡೆಯದೇರಿ ಸುತನಂ ಮನ್ನಿಸುತ್ತೆ ಸುರ
ಸಂತತಿಗಳಂ ಮುದದೆ ಬೀಳ್ಕೊಟ್ಟು ಸುಖದೊಳಿರ್ದಂ ವಿರೂಪಾಕ್ಷನಂದು ೨೪

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೨೫

## ಮೂವತ್ತಮೂರನೆಯ ಸಂಧಿ ಸಂಪೂರ್ಣ

ಕೊಲ್ಲಲಾಗದ ಕೊಲೆಗಡುಕನನ್ನು ಪೂರ್ಣವಾಗಿ ಸಾಯಿಸಿದನು. ೨೪. ಈ ರೀತಿ ಕೊಂದ ಆ ನರಸಿಂಹನ ಚರ್ಮವನ್ನೂ ತಲೆಯನ್ನೂ ತಂದು ತಂದೆಗೆ ಒಪ್ಪಿಸಿದನು. ಅದನ್ನು ನೋಡುತ್ತ ಈಶ್ವರನು ಸಂತೋಷದಿಂದ ಆ ಮುಖಕ್ಕೆ ಕೀರ್ತಿಮುಖ ಎಂಬ ಹೆಸರಿಟ್ಟು ಅದನ್ನು ತನ್ನ ಆಭರಣದ ಮಧ್ಯೆ ಸೇರಿಸಿದನು. ಆ ರೀತಿ ಆ ಚರ್ಮವನ್ನೆ ಇದು ಸಿಂಹಾಸನವೆಂದು ಏರಿದನು. ತನ್ನ ಮಗನನ್ನು ಸನ್ಮಾನಿಸಿ, ದೇವತೆಗಳ ಸಮೂಹ ವನ್ನು ಸಂತೋಷದಿಂದ ಬೀಳ್ಕೊಟ್ಟು ವಿರೂಪಾಕ್ಷನು ಅಂದು ಸುಖವಾಗಿದ್ದನು. ೨೫. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖ ಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

## ಮೂವತ್ತಮೂರನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತನಾಲ್ಕನೆಯ ಸಂಧಿ

ಸೂಚನೆ : ದಕ್ಷಸಂಬಂಧಕಾಯವನಳಿದು ಮೇನೆಯಂ
ರಕ್ಷಿಸುವೆನೆನುತೆ ಸುತೆಯಾಗಿ ಪಂಪಾವಿರೂ
ಪಾಕ್ಷನಂ ಪೂಜಿಸುತ್ತಿರ್ದಳಗಜಾತೆ ವಿಖ್ಯಾತೆಯತಿಭಕ್ತಿಯಿಂದೆ

ಚಂದ್ರಾರ್ಧಧರಣ ದಿವಿಜೇಂದ್ರನುತಚರಣ ಭುಜ
ಗೇಂದ್ರಾಭರಣ ಭಾರತೀಂದ್ರಶಿರಹರಣ ವಿಜಿ
ತೇಂದ್ರಿಯವಿರಣ ಪರ್ವತೇಂದ್ರಜಾವರಣ ಗುಣಸಾಂದ್ರಸತ್ಕರಣ ಶರಣ
ರುಂದ್ರ ನಿಜಶರಣವೃಷಭೇಂದ್ರ ವರಕರುಣ ಶೌ
ಪೇಂದ್ರಸಾಧರಣ ದಿವಸೇಂದ್ರಹಿಮಕಿರಣ ಸ್ವಾ
ಹೇಂದ್ರಾಕ್ಷ ಶರಣು ಮೋಕ್ಷೇಂದ್ರ ವಿರುಪಾಕ್ಷ ಖಳಶಿಕ್ಷ ಸೌಜನ್ಯರಕ್ಷ ೧

ಆಲಿಸಿನ್ನೆಲೆ ಸಿದ್ಧರಾಮ ಶಿವೆಯಂ ಕುರಿತು
ಪ್ರಾಲೇಯಶೈಲನರ್ಧಾಂಗಿ ಪೂರ್ವದೆ ಬಹಳ
ಕಾಲಪರಿಯಂತರಂ ತಪದೊಳಿರಲುಮೆಯೊಲಿದು ಬಂದವಳ ಮುಂದೆ ನಿಂದು
ಬಾಲೆ ನಿನ್ನಯ ತಪಕೆ ಮೆಚ್ಚಿದೆಂ ವರವದೇಂ
ಕೇಳೆನಲ್ ನೀನೆನಗೆ ಸುತೆಯಪ್ಪುದೆನಲದರಿ
ನಾ ಲಲನೆ ದಕ್ಷಸಂಬಂಧಕಾಯವನುಳಿದು ಮೇನೆಯುದರದೆ ಬಳೆದಳು ೨

ಸೂಚನೆ : ದಕ್ಷನ ಸಂಬಂಧವಾದ ಶರೀರವನ್ನು ತ್ಯಜಿಸಿ, ಮೇನೆಯನ್ನು ರಕ್ಷಿಸುತ್ತೇನೆ ಎಂದು ಅವಳಿಗೆ ಮಗಳಾಗಿ ಹುಟ್ಟಿ ಪ್ರಖ್ಯಾತೆಯಾದ ಪರ್ವತರಾಜನ ಪುತ್ರಿ ಪಾರ್ವತಿಯು ಪಂಪಾವಿರೂಪಾಕ್ಷನನ್ನು ಭಕ್ತಿಯಿಂದ ಪೂಜಿಸುತ್ತಿದ್ದಳು. ೧. ಚಂದ್ರ ಶೇಖರ, ದೇವೇಂದ್ರನಿಂದ ಸ್ತುತಿಸಲ್ಪಡುವ ಪಾದವುಳ್ಳವ, ಪನ್ನಗಾಭರಣ, ಬ್ರಹ್ಮನ ತಲೆಯನ್ನು ಚಿವುಟಿದವ, ಜಿತೇಂದ್ರಿಯರಲ್ಲಿ ಶ್ರೇಷ್ಠ, ಗಿರಿಜಾಪತಿ, ಶ್ರೇಷ್ಠಗುಣಗಳಿಂದ ಕೂಡಿದವನು, ವಿಶಾಲವಾದ ಭಕ್ತ ಸಮೂಹವುಳ್ಳವ, ಭಕ್ತರಭಕ್ತ, ವೃಷಭನಿಗೆ ಅನುಗ್ರಹ ಮಾಡಿದವ, ಕೃಷ್ಣನನ್ನು ಆಧರಿಸಿದವನು, ಸೂರ್ಯ–ಚಂದ್ರ–ಅಗ್ನಿಯನ್ನೇ ಕಣ್ಣುಗಳಾಗಿ ಉಳ್ಳವನು, ಮೋಕ್ಷದಾಯಿ, ದುಷ್ಟಶಿಕ್ಷ ಮತ್ತು ಸುಜನರಕ್ಷನಾದ ವಿರೂಪಾಕ್ಷನೇ ನಿನಗೆ ಶರಣು. ೨. ಇನ್ನು ಕೇಳಯ್ಯ ಸಿದ್ಧರಾಮ, ಹಿಂದೆ ಹಿಮವಂತನ ಪತ್ನಿಯಾದ ಮೇನೆಯು ದಾಕ್ಷಾಯಣಿಯನ್ನು ಕುರಿತು ಬಹಳ ಕಾಲ ತಪಸ್ಸುಮಾಡಿದಳು. ಆಗ ಉಮೆಯು ಅವಳ ತಪಕ್ಕೆ ಮೆಚ್ಚಿ ಅವಳ ಮುಂದೆ ಬಂದು ನಿಂತು–ಬಾಲೆ ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ, ಏನು ವರ ಬೇಕು ಕೇಳು ಎನ್ನಲು, ಮೇನೆಯು ನೀನು ನನಗೆ ಮಗಳಾಗಿ ಹುಟ್ಟಬೇಕು ಎಂದು ಕೇಳಲಾಗಿ, ಉಮೆ ದಕ್ಷನಿಗೆ ಸಂಬಂಧಿಸಿದ ಶರೀರವನ್ನು ತ್ಯಜಿಸಿ

CC-0. Jangamwadi Math Collection. Digitized by eGangotri

ಬಳಿಕ ತಿಥಿ ವಾರ ತಾರಾ ಯೋಗ ಕರಣಸ
ಮ್ಮಿಳಿತ ಶುಭದಿವಸದೊಳ್ ಶುಭಲಗ್ನದೊಳ್ ಪಡೆದ
ಳೊಲವಿನಿಂ ಶಿವಲಿಂಗಧರೆಯಾದ ಕುವರಿಯಂ ಗಿರಿರಾಜನೆಯ್ದೆ ನೋಡಿ
ನಲಿದು ತಚ್ಛಿಶುವಿಂಗೆ ತಲ್ಲಿಂಗಮಂ ತನ್ನ
ಕುಲಗುರುವಿನಿಂ ದೀಕ್ಷೆಯಿಂ ಕೊಡಿಸಿ ಪೆಸರಿಡಲ್
ಬಳೆವುತಿರ್ದಳ್ ಲೋಕಮಾತೆ ಗಿರಿಜಾತೆ ಶಿವಶರಣಕುಲಪಾರಿಜಾತೆ ೩

ಶಿವನ ಪುಣ್ಯದ ಫಲಂ ಪೆರ್ಚಿ ಬಳೆಬಳೆವಂತೆ
ಶಿವನ ಮೋಹನಮಂತ್ರಶಕ್ತಿ ಬಳೆಬಳೆವಂತೆ
ಶಿವನ ಸುಖಮಿದಿರಿಟ್ಟು ಮೂರ್ತಿಯಂ ಧರಿಸಿ ಬಳೆಬಳೆವಂತೆ ಕಂಗೊಳಿಸುವ
ಶಿವನ ಸತ್ಕೀರ್ತಿಲತೆ ನಳನಳಿಸಿ ಬಳೆವಂತೆ
ಶಿವನ ಜಯಲಕ್ಷ್ಮಿ ಬಳಬಳೆವಂತೆ ಬಳೆದಳಾ
ಶಿವನ ಪಟ್ಟದರಾಣಿ ಕಲ್ಯಾಣಿ ಮೃದುಪಾಣಿ ಫಣಿವೇಣಿ ಮಧುರವಾಣಿ ೪

ಎಳೆಯ ಸುರಲತೆಯಂತೆ ಬೆಳ್ಪಕ್ಕದೊಳ್ ತೊಳಗಿ
ಬೆಳಗುವ ಸುಧಾಸೂತಿಯಂತೆ ಶಿಶಿರಾಂತದೊಳ್
ತಲೆದೋರುವಂಗಜನ ಸಖನಂತೆ ನಳನಳಿಕೆ ಕಾಂತಿ ಮೋಹನಗಳೊಗೆಯೆ

ಮೇನೆಯ ಗರ್ಭದಲ್ಲಿ ಬೆಳೆದಳು. ೩. ಅನಂತರ ಮೇನೆಯು ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳಿಂದ ಕೂಡಿದ ಒಂದು ಒಳ್ಳೆಯ ದಿವಸದಲ್ಲಿ ಶುಭಲಗ್ನದಲ್ಲಿ ಶಿವಲಿಂಗಸಮೇತಳಾದ ಮಗಳೊಬ್ಬಳನ್ನು ಪಡೆದಳು, ಆ ಮಗುವನ್ನು ಪರ್ವತರಾಜನು ಬಂದು ನೋಡಿ ಸಂತೋಷಗೊಂಡು ಆ ಮಗುವಿಗೆ ತನ್ನ ಕುಲಗುರುವಿನಿಂದ ಆ ಲಿಂಗವನ್ನು ದೀಕ್ಷೆಯ ಮೂಲಕ ಕೊಡಿಸಿ ಹೆಸರಿಡಲು ಶಿವಶರಣರ ಕುಲಕ್ಕೆ ಪಾರಿಜಾತೆಯಾದ ಲೋಕ ಮಾತೆಯಾದ ಪಾರ್ವತಿಯು ಬೆಳೆಯುತ್ತಿದ್ದಳು. ೪. ಶಿವನ ಪುಣ್ಯದ ಫಲವೇ ಅಧಿಕವಾಗಿ ಬೆಳೆಯುತ್ತಿರುವಂತೆ, ಶಿವನ ಮೋಹನ ಮಂತ್ರಶಕ್ತಿ ಬೆಳೆಬೆಳೆಯುವಂತೆ, ಪ್ರಕಾಶಿಸುವ ಶಿವನ ಸುಖವೇ ಎದುರಾಗಿ ರೂಪವನ್ನು ಧರಿಸಿ ಬೆಳೆಯುವಂತೆ, ಪ್ರಕಾಶಿಸುವ ಶಿವನ ಸತ್ಕೀರ್ತಿಯೆಂಬ ಬಳ್ಳಿ ಕೋಮಲವಾಗಿ ಬೆಳೆಯುವಂತೆ, ಶಿವನ ಜಯಲಕ್ಷ್ಮಿ ಬೆಳೆಯುವಂತೆ, ಆ ಶಿವನ ಪಟ್ಟದರಾಣಿ, ಕಲ್ಯಾಣಿ, ಮೃದುಪಾಣಿ, ಫಣಿವೇಣಿ ಮದುರವಾಣಿ ಬೆಳೆದಳು. ೫. ಎಳೆಯದಾದ ಕಲ್ಪವೃಕ್ಷದ ಬಳ್ಳಿಯಂತೆ, ಶುಕ್ಲಪಕ್ಷ ದಲ್ಲಿ ತೊಳಗಿ ಬೆಳಗುವ ಚಂದ್ರನಂತೆ, ಶಿಶಿರಋತುವಿನ ಕೊನೆಯಲ್ಲಿ ತೋರುವ ವಸಂತ ಮಾಸದಂತೆ ನಳನಳಿಸುವ ಕಾಂತಿ ಮೋಹಕತೆಗಳುಂಟಾಗಲು, ಮನೋಹರವಾದ ಮುತ್ತು

CC-0. Jangamwadi Math Collection. Digitized by eGangotri

ಲಲಿತಾಂಗದೊಳ್ ವದನದೊಳ್ ಬಾಹುಮೂಲದೊಳ್
ಸಲೆ ನುಂಪು ಸೊಂಪು ಕೆಂಪಮರೆ ರಂಜಿಸೆ ಸೊಗಸೆ
ವಿಲಸಿತಗುಣವ್ರಾತೆ ಕಣ್ಗೆಸೆದಳಗಜಾತೆ ಚಾರುಚಾರಿತ್ರಪೂತೆ ೫

ತೋಳ ಮೊದಲೊಳ್ ಕಂಪು ಮುಖಕಮಲದೊಳ್ ಸೊಂಪು
ಲೋಲಾಕ್ಷಿಯೊಳ್ ನೀಳ್ಪು ನುಣ್ಪಸಿರಿನೊಳ್ ತೆಳ್ಪು
ಬಾಳೆದೊಡೆಯೊಳ್ ನುಂಪು ನುಡಿಯೊಳ್ ಸೊಗಸಿನಿಂಪು ಸಂಜನಿಸಿ ಮೆರೆಯೆ ಕೊಡೆ
ಆಲಸಂ ನಡೆಗುಣ್ಮೆ ಲಜ್ಜೆ ನಡೆಯೊಳ್ ಪೊಣ್ಮೆ
ಮೇಲೆ ವಕ್ಷದೊಳುರ್ವು ಭ್ರೂಲತೆಗಳೊಳ್ ಜರ್ವು
ಮೇಳವಿಸಿ ಶಿವೆಯಿಂತು ಜವ್ವನದ ಸಿರಿಯಾಂತು ಕಣ್ಗೆಸೆದಳೇನೆಂಬೆನು ೬

ಒಕ್ಕಯ್ಯೊಳಡಗದ ವಿಶಾಲಲೋಚನಯುಗಳ
ಮಿಕ್ಕಯ್ಯೊಳಡಗದ ಕುಚದ್ವಯಂಗಳ್ ಬೆನ್ನ
ಮಿಕ್ಕೊಳಗುಮಾಡಿಕೊಂಡೆಸೆವ ವೇಣೀಬಂಧಮಸಿಯ ನಡು ತನ್ನಿದಿರೊಳು
ಚಿಕ್ಕದೆನಿಸುವ ಬಾಸೆ ಮೊದಲಾದಿವಳ ಯೌವ
ನಕ್ಕೊಂದೊಡಲ್ ಸಾಲದೆಂದು ಮುನ್ನವೆ ಕಂಡು
ಮುಕ್ಕಣ್ಣನೆಣ್ಮಯ್ಯನಾದನೆನಲಗಸುತೆಯ ಯೌವನದ ಪೆಂಪದೆಂತೋ ೭

ಕೋಮಲವಾದ ದೇಹದಲ್ಲಿ ಹೆಚ್ಚಾದ ಮೃದುತ್ವ, ಮುಖದಲ್ಲಿ ಸೊಬಗು, ಕಂಕುಳಲ್ಲಿ ಕೆಂಪುಗೂಡಿ ಪ್ರಕಾಶಿಸಲು ಸೊಗಸಿನಿಂದ ಕಾಣಲು ಅರಳಿದ ಗುಣಗಳ ಸಮೂಹವುಳ್ಳ ಶ್ರೇಷ್ಠವಾದ ಚಾರಿತ್ರವುಳ್ಳ ಪುಣ್ಯಪ್ರದಳಾದ ಪರ್ವತರಾಜನ ಪುತ್ರಿ ಕಣ್ಣಿಗೆ ಕಾಣಿಸಿದಳು. ೬. ಕಂಕುಳಿನಲ್ಲಿ ಸುವಾಸನೆ, ಮುಖಕಮಲದಲ್ಲಿ ಸೊಗಸು ಮೂಡಿತು. ಚಂಚಲವಾದ ಕಣ್ಣುಗಳಲ್ಲಿ ವಿಶಾಲತೆ, ಹೊಟ್ಟೆ ತೆಳುವು, ಬಾಳೆಯದಿಂಡಿನಂತಹ ತೊಡೆಯಲ್ಲಿ ನುಣುಪು, ಮಾತಿನಲ್ಲಿ ಸೊಗಸಾದ ಇಂಪು, ನಡೆಯಲ್ಲಿ ಆಲಸ್ಯ, ನಡೆವಳಿಕೆಯಲ್ಲಿ ನಾಚಿಕೆ, ಎದೆಯಲ್ಲಿ ಉಬ್ಬು,ಹುಬ್ಬುಗಳಲ್ಲಿ ಕೊಂಕು, ಇವೆಲ್ಲ ಲಕ್ಷಣಗಳಿಂದ ಕೂಡಿಕೊಂಡು ಪಾರ್ವತಿಯು ಯವ್ವನದ ಸಿರಿಯನ್ನು ತಾಳಿ ಕಣ್ಣಿಗೆ ಮನೋಹರವಾಗಿ ಕಂಡಳು. ೭. ಒಂದು ಕೈಯಲ್ಲಿ ಅಡಗಿಸಲಾಗದ ವಿಶಾಲವಾದ ಕಣ್ಣುಗಳು, ಎರಡು ಕೈಯಲ್ಲಿಯೂ ಮುಚ್ಚಲಾಗದ ಎರಡು ಸ್ತನಗಳು, ಬೆನ್ನ ಉದ್ದವನ್ನೂ ಮೀರಿ ಬೆಳೆದ ಸೊಂಪಾದ ತಲೆಗೂದಲು, ಸಣ್ಣ ನಡು, ಅದರ ಎದುರಿನಲ್ಲಿ ತೆಳ್ಳಗೆ ಕಾಣುವ ಹೊಕ್ಕುಳ ಕೂದಲು ಮುಂತಾದ ಇವಳ ಪ್ರಾಯಕ್ಕೆ ಒಂದೇ ಶರೀರ ಸಾಲದು ಎಂದು ಈಶ್ವರನು ಮೊದಲೇ ಯೋಚಿಸಿ ಎಂಟು ಮೈಯನ್ನು (ಅಷ್ಟಮೂರ್ತಿ) ತಳೆದನು ಎನ್ನಲು

CC-0. Jangamwadi Math Collection. Digitized by eGangotri

ಪೊಳೆವ ಮುಖವಂಬುಜಂ ಕುಂತಳಂ ಷಟ್ಪದಿಗ
ಳಲರ್ಗಣ್ಣಳುರೆ ಮೀನ್ಗಳೆಸೆವ ಕಂಠಂ ಶಂಖ
ಮೆಳೆದೋಳ್ಗಳಾ ತೆರೆಗಳುರಸಿಜಂ ಚಕ್ರತತಿ ಬಾಸೆಯೇ ಶೈವಾಲವು
ಸುಳಿನಾಭಿ ನಿಮ್ನವಳಿಸಂಕುಲಂ ಕಿರುದೆರೆಗ
ಳಲಘುಜಘನಂ ಪುಳಿನ ಮೇಗಾಲ್ಗಳಾವೆಗಳ್
ತಿಳಿವೊಡೆನೆ ಗಿರಿಜೆ ಬಾಂಬೊಳೆಯುಂತೆ ಕಣ್ಗೆಸೆದಳೀಕ್ಷಿಸುವರಕ್ಷಿಗಳ್ಗೆ ೮

ಶಿವನ ವಿಭವದ ನಾಡು ಶಿವನ ಮಹಿಮೆಯ ಬೀಡು
ಶಿವನ ಸುಖಮಯಮೂರ್ತಿ ಶಿವನ ನಿರುಪಮಕೀರ್ತಿ
ಶಿವನ ಭಾಗ್ಯದ ಪೆಂಪು ಶಿವನ ವಿಷಯದ ಸೊಂಪು ಶಿವನ ಶೋಭನದಲಂಪು
ಶಿವನ ಬಯಕೆಯ ಗೊತ್ತು ಶಿವನ ತನುವಿನ ಜೊತ್ತು
ಶಿವನ ಮನದನುಕೂಲೆ ಶಿವನ ಚಿತ್ತದ ಲೀಲೆ
ಶಿವನ ಸುಕೃತವ್ಯಕ್ತಿಯೆನಿಸುವ ಮಹಾಶಕ್ತಿ ವಿಭವದಿಂದಿರುತಿರ್ದಳು ೯

ಇಂತು ಪಾರ್ವತಿ ಲೀಲೆಯಿಂದಿರಲ್ ನೀರದಪ
ಥಾಂತರದ ನಾರದಂ ಬಂದೊಡಗರಾಜನ
ತ್ಯಂತಹರುಷದೊಳೆರಗಿ ಕೈಗೊಟ್ಟು ತನ್ನ ರಾಜಾಲಯಕ್ಕೊಯ್ಯುತಿರಲು

ಪಾರ್ವತಿಯ ಯವ್ವನದ ಸೊಗಸು ಎಂತಹುದೊ! ೮. ಆಲೋಚಿಸಿದರೆ, ಪಾರ್ವತಿಯ ಹೊಳೆಯುವ ಮುಖವೇ ಕಮಲ, ಕಪ್ಪಾದ ಗುಂಗುರುಕೂದಲೇ ದುಂಬಿಗಳು, ವಿಶಾಲ ವಾದ ಕಣ್ಣುಗಳೇ ಮೀನುಗಳು, ಶೋಭಿಸುವ ಕುತ್ತಿಗೆಯೇ ಶಂಖ, ಎಳೆಯ ತೋಳುಗಳೇ ಅಲೆಗಳು, ಮೊಲೆಗಳೇ ಚಕ್ರವಾಕಪಕ್ಷಿಗಳು, ಹೊಕ್ಕುಳಿನಿಂದ ಮೇಲಕ್ಕೆ ಬೆಳೆದ ಕೂದಲೇ ಪಾಚಿ, ಆಳವಾದ ಹೊಕ್ಕುಳೇ ಸುಳಿ, ತ್ರಿವಳಿಗಳೇ ಸಣ್ಣ ತೆರೆಗಳು, ಭಾರವಾದ ಜಘನವೇ ಮರಳಿನ ದಡ, ಮೊಣಕಾಲುಗಳೇ ಆಮೆಗಳು ಎನ್ನುವಂತೆ ಪಾರ್ವತಿಯು ಆಕಾಶಗಂಗೆ ಯಂತೆ ನೋಡುವವರ ಕಣ್ಣುಗಳಿಗೆ ತೋರುತ್ತಲಿದ್ದಳು. ೯. ಶಿವನ ವೈಭವದ ನಾಡು, ಶಿವನ ಮಹಿಮೆಯ ಬೀಡು, ಶಿವನ ಸುಖಮಯವಾದ ಮೂರ್ತಿ, ಶಿವನ ಅನುಪಮವಾದ ಕೀರ್ತಿ, ಶಿವನ ಭಾಗ್ಯದ ಹೆಚ್ಚಳ, ಶಿವನ ವಿಷಯಸುಖದ ಸಮೃದ್ಧಿ, ಶಿವನ ಮಂಗಳದ ಮೇಲ್ಮೆ, ಶಿವನ ಬಯಕೆಯ ನೆಲೆ, ಶಿವನ ಶರೀರದ ಆಸರೆ, ಶಿವನ ಮನಸ್ಸಿನ ಅನುಕೂಲ, ಶಿವನ ಚಿತ್ತದ ಲೀಲೆ, ಶಿವನ ಪುಣ್ಯದ ಮೂರ್ತಿ ಎನಿಸುವ ಮಹಾಶಕ್ತಿ ಗಿರಿಜೆಯು ವೈಭವದಿಂದ ಇರುತ್ತಿದ್ದಳು. ೧೦. ಈ ರೀತಿಯಾಗಿ ಪಾರ್ವತಿಯು ಲೀಲೆಯಿಂದಿ ರುವಾಗ ಆಕಾಶಮಾರ್ಗದಲ್ಲಿ ನಾರದನು ಬರಲು ಪರ್ವತರಾಜನು ಬಹಳ ಸಂತೋಷದಿಂದ ನಮಸ್ಕರಿಸಿ, ಕೈಹಿಡಿದು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋದನು. ತಮ್ಮ

CC-0. Jangamwadi Math Collection. Digitized by eGangotri

ಮುಂತೆ ಗಿರಿಸುತೆಯಿರಲ್ ಮುನಿ ಕಂಡು ಪದಕೆರಗಿ
ಸಂತಸದಿ ಪೊಗಳುತಿರೆ ನೀಂ ವಂದ್ಯರೆಮ್ಮ ಮಗ
ಳಂ ತುತಿಸಿ ಮಣಿದಿರೇಕೆನೆ ನಗುತೆ ಗಿರಿರಾಜಗಾ ಮುನಿಪನಿಂತೆಂದನು ೧೦

ಜನನಿಯೇ ದೇವಗಂಗೆಗೆ ವಿಯನ್ಮಂಡಲಂ
ಜನನಿಯೇ ಕಲ್ಪವೃಕ್ಷಕೆ ಚೈತ್ರರಥವನಂ
ಜನನಿಯೇ ದಿವ್ಯನಿಗಮಾಕ್ಷರಾಳಿಗೆ ಮುಖಂ ವಿಮಲಸುಜ್ಞಾನಸುಧೆಗೆ
ಜನನಿಯೇ ವೈಕಾರ್ಯಮಾನಸಂ ರತ್ನಕ್ಕೆ
ಜನನಿಯೇ ಫಣಿಶಿರಂ ಸರ್ವಮಂಗಳೆಗೆ ನೀವ್
ಜನನಿಜನಕರೆ ಜಗನ್ಮಾತೆ ನಿಮ್ಮಯ ಮಗಳೆ ಶಿವಶಿವಾ ಕೇಳೆಂದನು ೧೧

ದಕ್ಷಸಂಬಂಧಕಾಯವನುಳಿದು ಮಿಗೆ ವಿರೂ
ಪಾಕ್ಷನರ್ಧಾಂಗಿ ಮೇನೆಯ ವರಕ್ಕಾಗಿ ತವ
ಕುಕ್ಷಿಯೊಳ್ ಬರೆ ನಿನ್ನ ಮಗಳೆಯಿಾಕೆಯ ವಿಯೋಗದೆ ಹೇಮಕೂಟಗಿರಿಯ
ಸುಕ್ಷೇತ್ರ ತುಂಗಭದ್ರಾನದಿಯ ತೀರದ ಸ
ಮಕ್ಷದೊಳ್ ಘನತಪೋಧನನಾಗಿ ನಿಂದು ಫಾ
ಳಾಕ್ಷನಾನಂದದಿಂ ತನ್ನ ನಿಜಮಂ ತಾನೆ ಜಾನಿಸುತ್ತಿರುತಿರ್ಪನು ೧೨

ಮುಂದೆ ಇದ್ದ ಪಾರ್ವತಿಯನ್ನು ನೋಡಿ ನಾರದಮುನಿಯು ಅವಳಿಗೆ ನಮಸ್ಕರಿಸಿ ಸಂತೋಷದಿಂದ ಹೊಗಳುತ್ತಿರಲು, ಪರ್ವತರಾಜನು ನಾರದನನ್ನು ಕುರಿತು ನೀವೇ ವಂದನೀಯರು, ನಮ್ಮ ಮಗಳನ್ನು ಸ್ತುತಿಸಿ ನಮಸ್ಕರಿಸಿದಿರಲ್ಲ ಏಕೆ ಎನ್ನಲು ಪರ್ವತರಾಜನಿಗೆ ನಾರದನು ನಗುತ್ತ ಈ ರೀತಿ ಹೇಳಿದನು. ೧೧. ಆಕಾಶವು ದೇವಗಂಗೆಗೆ ತಾಯಿಯೆ ? ಕುಬೇರನ ಚೈತ್ರರಥವನವು ಕಲ್ಪವೃಕ್ಷಕ್ಕೆ ತಾಯಿ ಎನ್ನಬಹುದೆ? ಮಾತಿನ ಮೂಲಕ ಬರುವ ಶ್ರೇಷ್ಠವಾದ ವೇದಾಕ್ಷರಗಳಿಗೆ ಮುಖವು ತಾಯಿ ಆಗಬಲ್ಲುದೆ? ಪವಿತ್ರವಾದ ಸುಜ್ಞಾನವೆಂಬ ಅಮೃತಕ್ಕೆ ವಿಕಾರವಾದ ಮನಸ್ಸು ತಾಯಿಯೆ ? ಹಾವಿನ ಹೆಡೆಯು ರತ್ನಕ್ಕೆ ತಾಯಿಯೆ ? ಪಾರ್ವತಿಗೆ ನೀವು ತಂದೆ-ತಾಯಿಗಳೆ ? ಜಗನ್ಮಾತೆ ನಿಮ್ಮ ಮಗಳೇ ? ಶಿವ ಶಿವಾ ಕೇಳಿ ಎಂದನು. ೧೨. ದಕ್ಷನ ಸಂಬಂಧವಾದ ಶರೀರವನ್ನು ಬಿಟ್ಟು ಶ್ರೇಷ್ಠನಾದ ವಿರೂಪಾಕ್ಷನ ಅರ್ಧಾಂಗಿಯಾದ ಶಿವೆಯು ಮೇನೆಗೆ ಕೊಟ್ಟ ವರವನ್ನು ಸಲ್ಲಿಸಲು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನಿನ್ನ ಮಗಳಾದುದು ದಿಟ. ಈಕೆಯ ವಿಯೋಗದಿಂದ ಮುಕ್ಕಣ್ಣನು ಹೇಮಕೂಟಪರ್ವತದ ಪುಣ್ಯಕ್ಷೇತ್ರವಾದ ತುಂಗಭದ್ರಾನದಿಯ ತೀರದಲ್ಲಿ ಘನವಾದ ತಪಸ್ಸನ್ನು ಕೈಕೊಂಡು

CC-0. Jangamwadi Math Collection. Digitized by eGangotri

ಆ ವಿರೂಪಾಕ್ಷನಿರ್ದೆಡೆಗೆ ಕಳುಪ್ಪೆ ಮಹಾ
ದೇವಿಯಂ ನೀನೆನಲ್ ಕೈಕೊಳುತ್ತುಚಿತಸಂ
ಭಾವನೆಯೊಳಾ ಮುನಿಪನಂ ಕಳುಪಿ ಪರಶಕ್ತಿಯೆಂದರಿದು ಭಕ್ತಿಯಿಂದೆ
ಪಾವನಚರಿತ್ರೆ ನಡೆ ಪೋಪೆವೆನೆ ತಾಯ್ಗೆರಗಿ
ತೀವಿದನುರಾಗದಿಂ ಪುಷ್ಪಕವನೇರಿ ಕಾಂ
ತಾವಳಿಯ ಗಡಣದಿಂ ಪಿತನೊಡನೆ ಹೇಮಕೂಟಾಚಲಕೆ ಬರುತಿರ್ದಳು ೧೩

ಕರಕಧಾರಕನಾಗಿಯಕ್ಷಮಾಲಿಕನಾಗಿ
ನಿರುತಮುಂ ರತಿಮುಕ್ತನಾಗಿ ನಿಶ್ಚಲನಾಗಿ
ಸ್ಥಿರಜೀವಿಯಾಗಿ ಜಟಿಯಾಗಿ ಮುಕ್ತಾಹಾರಿಯಾಗಿ ಸದ್ವಂಶಿಯಾಗಿ
ಉರುತರಪವಿತ್ರಾಂಗಿಯಾಗಿ ಸದ್ವಿಜವೃಂದ
ಪರಿವೃತ್ತನಾಗಿ ಪುಷ್ಕರತೀರಗತನಾಗಿ
ಪರಮಯೋಗೀಂದ್ರನೆನೆ ಹೇಮಕೂಟಾಚಲಂ ಕಣ್ಗೆಸೆದುದೇನೆಂಬೆನು ೧೪

ಗಿರಿಶಿರದ ಕುಜದೆಳದಳಿರ್ಗಳೇ ಕೆಂಜೆಡೆಗ
ಳಿರದಲ್ಲಿ ಮೆರೆವ ಶಶಿಸೂರ್ಯಶಿಲೆಯೇ ಕಂಗ
ಳುರಿವ ದಾವಾನಲನೆ ಬಿಸಿಗಣ್ ತದವನಿಧರಕಂದರದ ನೀಲಶಿಲೆಯೇ

ಆನಂದದಿಂದ ತನ್ನನ್ನು ತಾನೇ ಧ್ಯಾನಿಸುತ್ತಿದ್ದಾನೆ. ೧೩. ಆ ಶಿವನಿರುವ ಜಾಗಕ್ಕೆ ನೀನು ಮಹಾದೇವಿಯನ್ನು ಕಳುಹಿಸಯ್ಯ ಎಂದನು. ಅವನ ಮಾತನ್ನು ಒಪ್ಪಿಕೊಂಡು, ಉಚಿತ ರೀತಿಯಲ್ಲಿ ಉಪಚರಿಸಿ ನಾರದನನ್ನು ಕಳಿಸಿಕೊಟ್ಟು ಪರ್ವತರಾಜನು ಮಗಳನ್ನು ಪರಾಶಕ್ತಿಯೆಂದು ತಿಳಿದು, ಭಕ್ತಿಯಿಂದ ಪಾವನಚರಿತ್ರಳೇ ಹೋಗೋಣ ನಡೆ ಎನ್ನಲು, ಆಕೆ ತಾಯಿಗೆ ನಮಸ್ಕರಿಸಿ ಅನುರಾಗದಿಂದ ಕೂಡಿ ಪುಷ್ಪಕವಿಮಾನವನ್ನು ಹತ್ತಿ, ಸಖೀ ಸಮೂಹದೊಡನೆ, ತಂದೆಯೊಡಗೂಡಿ ಹೇಮಕೂಟಪರ್ವತಕ್ಕೆ ಬರುತ್ತಿದ್ದಳು. ೧೪. ನೀರಿನಿಂದ ತುಂಬಿದ ಕಮಂಡಲ ಉಳ್ಳವನಾಗಿ, ರುದ್ರಾಕ್ಷಿಮಾಲೆ ಧರಿಸಿದವನಾಗಿ, ಸದಾ ಕಾಮವಿರಕ್ತನಾಗಿ, ನಿಶ್ಚಲನಾಗಿ, ಸ್ಥಿರಜೀವಿಯಾಗಿ, ಜಟಾಧಾರಿಯಾಗಿ, ಆಹಾರದಿಂದ ಮುಕ್ತನಾಗಿ, ಉತ್ತಮವಾದ ವಂಶದವನಾಗಿ, ಶ್ರೇಷ್ಠವಾದ ಪವಿತ್ರವಾದ ದೇಹವುಳ್ಳವನಾಗಿ, ಶ್ರೇಷ್ಠ ಸರ್ಪಸಮೂಹದಿಂದ ಆವೃತನಾಗಿ, ಸರೋವರದ ತೀರದಲ್ಲಿ ಕುಳಿತ ಶ್ರೇಷ್ಠಯೋಗಿ ಪರಮೇಶ್ವರನೋ ಎನ್ನುವಂತೆ ಹೇಮಕೂಟಪರ್ವತ ಕಣ್ಣಿಗೆ ಕಾಣಿಸಿತು. ಅದನ್ನು ಏನೆಂದು ಹೇಳಲಿ ? [ಶ್ಲೇಷೆ : ಅರಣ್ಯದಿಂದ ಕೂಡಿ, ರುದ್ರಾಕ್ಷಿ ಮರದಿಂದ ಕೂಡಿ, ಯಾವಾಗಲೂ ಗಲಾಟೆಯಿಂದ ದೂರವಾಗಿ, ನಿಶ್ಚಲವಾಗಿ, ಸ್ಥಿರಜೀವಿಯಾಗಿ, ಬೀಳಲುಗಳುಳ್ಳ ಮರಗಳಿಂದ ಕೂಡಿ, ಫಲಭರಿತವಾಗಿ, ಬಿದಿರುಗಳಿಂದ ಕೂಡಿ,ಶ್ರೇಷ್ಠವಾದ ದರ್ಭೆಯನ್ನು ಹೊಂದಿ, ಹಕ್ಕಿಗಳಿಂದ ಆವೃತವಾಗಿ, ಸರೋವರದ ತೀರದಲ್ಲಿ ಹೇಮಾಚಲವು ಪರಮ ತಪಸ್ವಿಯಂತೆ ಕಾಣುತ್ತಿದ್ದಿತು]. ೧೫. ಪರ್ವತದ ಶಿಖರದ ಮೇಲೆ ಬೆಳೆದಿದ್ದ ಮರಗಳ ಎಳೆಯ ಚಿಗುರುಗಳೇ ಕೆಂಜಡೆಗಳು, ಅಲ್ಲಿ ಪ್ರಕಾಶಿಸುವ ಚಂದ್ರ

CC-0. Jangamwadi Math Collection. Digitized by eGangotri

ಕೊರಳಗರಳಂ ಪುದಿದ ಮಂಜೇ ವಿಭೂತಿ ವಿ
ಸ್ತರಗಂಡ ಶಿಲೆಗಳೆ ಶಿರೋಮಾಲೆಯಾಗೆ ಶಂ
ಕರನ ಸಾರೂಪ್ಯಮಂ ಪಡೆದಂತೆ ಹೇಮಕೂಟಾಚಲಂ ಕಣ್ಗೆಸೆವುದು ೧೫

ಪರಿವ ಪರಿಪರಿಯ ಮೃಗಕುಲವೆಂಬ ಮೀನ್ಗಳಿಂ
ಮರುತಹತಿಗೊಲೆವ ತರುಶಿರವೆಂಬ ತೆರೆಗಳಿಂ
ಕರಿಕುಂಭವೊಡೆದೊಕ್ಕ ಮುಕ್ತಾಫಲಂಗಳಿಂ ತಳಿರೆಂಬ ಪವಳದಿಂದೆ
ವರಧಾತುನಿರ್ಝರಾವಳಿಯ ಪೊಸನೀರ್ಗಳಿಂ
ಚರಿಪ ಸುರಪುಷ್ಪಕವೆನಿಪ್ಪ ಭೈತ್ರಂಗಳಿಂ
ಶರಧಿಯೆಂದದಿನೆಸೆವ ಹೇಮಕೂಟಾದ್ರಿಯಂ ಗಿರಿರಾಜಸುತೆ ಕಂಡಳು ೧೬

ನೋಡು ನೋಡಿದು ಹೇಮಕೂಟಮಿದನೊಲ್ದು ಕೊಂ
ಡಾಡಲಸದಳಮಿದರ ಮಹಿಮೆ ಪಿರಿದಬ್ಬಾರಿ
ಚೂಡನಿಲ್ಲಿರ್ಪ ಕಾರಣದಿಂದಲೆಂದು ಮಿಗೆ ನಗರಮಂ ತೋರುತೆ ಬರೆ
ಕೂಡೆ ಕಚ್ಛಪ ಪುಳಿನ ನಳಿನ ಚಕ್ರಾಳಿಗಳ್
ನಾಡೆ ಪದ ಜಘನ ಮುಖಮಂಡಲ ಕುಚಂಗಳ್ಗೆ
ಮಾಡಾಗೆ ವರತುಂಗಭದ್ರೆಯಂಗನೆಯಂತೆ ಕಣ್ಣೆಸೆದಳಗಜಾತೆಯು ೧೭

ಸೂರ್ಯ ಶಿಲೆಗಳೇ ಕಣ್ಣುಗಳು, ಉರಿಯುವ ಕಾಳ್ಗಿಚ್ಚೇ ಹಣೆಗಣ್ಣು, ಆ ಕುಲಪರ್ವತದ ಕಂದರದಲ್ಲಿನ ನೀಲಿಶಿಲೆಯೇ ಕುತ್ತಿಗೆಯಲ್ಲಿನ ವಿಷ, ತುಂಬಿ ಹರಡಿಕೊಂಡಿರುವ ಮಂಜೇ ವಿಭೂತಿ, ವಿಸ್ತಾರವಾದ ದೊಡ್ಡ ಬಂಡೆಗಳೇ ಶಿರೋಮಾಲೆಯಾಗಲು ಈಶ್ವರನ ಸಮಾನ ರೂಪವನ್ನು ಪಡೆದಂತೆ ಹೇಮಕೂಟಾಚಲವು ರಂಜಿಸುತ್ತಿದ್ದಿತು. ೧೬. ನಾನಾರೀತಿಯ ಜಿಂಕೆಗಳೆಂಬ ಮೀನುಗಳಿಂದ, ಗಾಳಿಗೆ ತೊನೆದಾಡುವ ಮರಗಳ ತುದಿಯೆಂಬ ಅಲೆಗಳಿಂದ. ಆನೆಗಳ ಕುಂಭಸ್ಥಳಗಳು ಒಡೆದು ಹೊರಚಿಮ್ಮಿದ ಮುತ್ತುಗಳಿಂದ, ಚಿಗುರೆಂಬ ಹವಳಗಳಿಂದ, ಶ್ರೇಷ್ಠವಾದ ಧಾತುಮೂಲಗಳಿಂದ ಜಿನುಗುವ ಹೊಸ ನೀರಿನಿಂದ ಕೂಡಿ ಹರಿಯುವ ಝರಿಗಳಿಂದ, ಚಲಿಸುವ ದೇವತೆಗಳ ಪುಷ್ಪಕವಿಮಾನವೆಂಬಂತಿರುವ ಹಡಗುಗಳಿಂದ ಸಮುದ್ರವೋ ಎನ್ನುವಂತೆ ರಾಜಿಸುವ ಹೇಮಕೂಟಾಚಲವನ್ನು ಪಾರ್ವತಿಯು ನೋಡಿದಳು. ೧೭. ನೋಡು ನೋಡು, ಇದು ಹೇಮಕೂಟ. ಚಂದ್ರಶೇಖರನು ಇಲ್ಲಿರುವ ಕಾರಣದಿಂದ ಇದರ ಹಿರಿದಾದ ಮಹಿಮೆಯನ್ನು ಹೊಗಳಲು ಅಸಾಧ್ಯ ಎಂದು ಪರ್ವತರಾಜನು ಗಿರಿಜೆಗೆ ನಗರವನ್ನು ತೋರಿಸುತ್ತ ಬರುತ್ತಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಆಮೆ, ಮರಳು, ಕಮಲ ಮತ್ತು ಸುಳಿಗಳೇ ಉನ್ನತವಾದ ಪಾದ, ಜಘನ, ಮುಖ ಮತ್ತು ಸ್ತನಗಳಿಗೆ ಸಮನಾಗಲು, ಶ್ರೇಷ್ಠಳಾದ ತುಂಗಭದ್ರೆಯು ಅಂಗನೆಯಂತೆ ಪಾರ್ವತಿಯ

CC-0. Jangamwadi Math Collection. Digitized by eGangotri

ಗುರುಫೇನಪಿಂಡಂಗಳೇ ಕಳಶವೆಸೆವ ತಾ
ವರೆಯೆ ಕನ್ನಡಿ ಕಣಾವಳಿಯೆ ಮುತ್ತಿನ ಸೇಸೆ
ಮೊರೆವ ಧ್ವನಿಯೇ ವಾದ್ಯಮಂಬುಚರಮೇ ಜನಂ ಸುಳಿಗಳಾರತಿಗಳಾಗೆ
ಪರಮಶಂಕರನ ಪಟ್ಟದರಾಣಿ ಬರೆ ಕಂಡು
ಹರುಷದಿಂದಿದಿರ್ಗೊಂಬ ಪಾಂಗಿನಿಂದೊಪ್ಪಿದಳ್
ಸರಸಪ್ರಣ್ಯರಸಾರ್ದ್ರೆ ವಿಷಯದುರಿತಚ್ಛಿದ್ರೆ ಗುಣಮುದ್ರೆ ತುಂಗಭದ್ರೆ ೧೮

ನಿರುತಮನಿಮಿಷಕುಲಕ್ಕಾಶ್ರಯಂ ತಾನಾಗಿ
ವರಸಕಲ ಭುವನಕಾಸ್ಪದಮಾಗಿ ಹಂಸಸಂ
ಚರಣಾನುಬಂಧಿಯಾಗಿಯುಮೆಸೆವ ಕಮಲಸಂಭವ ನಿಜನಿವಾಸಮಾಗಿ
ದುರಿತದೂರಮುಮಾಗಿ ಮುನಿಜನಾನ್ವಿತಮಾಗಿ
ನಿರುತಂ ಶಿವೋದ್ಭಾಸಕರಮಾಗಿ ಸುಮನಸರ
ಗಿರಿಯಂತೆ ಕಂಗೊಳಿಸುತಿಹ ತುಂಗಭದ್ರೆಯಂ ಗಿರಿರಾಜಸುತೆ ಕಂಡಳು ೧೯

ಇಂಚರದೊಳೊಪ್ಪುವರಸಂಚೆಗಳ ಕೊಂಚೆಗಳ
ಮುಂಚೆ ಪರಿವುರು ತರಂಗಾವಳಿಯ ಗಾವಳಿಯ
ಸಂಚರಿಪ ಸಕಲ ಮುನಿರಾಜಿಗಳ ವಾಜಿಗಳ ತಡಿವಿಡಿದ ವೃಕ್ಷಂಗಳ

ಕಣ್ಣಿಗೆ ಕಾಣಿಸಿದಳು. ೧೮. ದೊಡ್ಡದಾದ ನೊರೆಗಳ ಗುಂಪೇ ಕಲಶಗಳು, ಮನೋಹರವಾಗಿ ಕಾಣುವ ತಾವರೆಯೇ ಕನ್ನಡಿ, ತುಂತುರುಹನಿಗಳೇ ಮುತ್ತಿನ ಅಕ್ಷತೆ, ಅಲೆಗಳ ಮೊರೆತವೇ ವಾದ್ಯ, ಜಲಚರಗಳೇ ಜನಗಳು, ಸುಳಿಗಳೇ ಆರತಿಗಳಾಗಲು, ಪರಮೇಶ್ವರನ ಪಟ್ಟದರಾಣಿಯಾದ ಪಾರ್ವತಿಯು ಬರುವುದನ್ನು ನೋಡಿ ಸಂತೋಷದಿಂದ ಎದುರುಗೊಳ್ಳುವ ರೀತಿಯಲ್ಲಿ ಪುಣ್ಯರಸದಿಂದ ಕೂಡಿರುವ ಭೋಗಾಭಿಲಾಷೆ ಮತ್ತು ಪಾಪವನ್ನು ಹೋಗಲಾಡಿಸುವ, ಸುಗುಣವತಿಯಾದ ತುಂಗಭದ್ರೆ ಪ್ರಕಾಶಿಸುತ್ತಿದ್ದಳು. ೧೯. ಸದಾ ದೇವತೆಗಳಿಗೆ (ಮೀನುಗಳಿಗೆ) ಆಶ್ರಯಸ್ಥಾನವಾಗಿ, ಶ್ರೇಷ್ಠವಾದ ಎಲ್ಲ ಪ್ರಪಂಚಕ್ಕೂ ಆಧಾರವಾಗಿ, ಚಲಿಸುವ ಸೂರ್ಯನಲ್ಲಿ (ಹಂಸಗಳಲ್ಲಿ) ಸಂಬಂಧವುಳ್ಳದ್ದಾಗಿ, ಕೀರ್ತಿವೆತ್ತ ಬ್ರಹ್ಮನ (ಕಮಲಗಳ) ವಾಸಸ್ಥಳವಾಗಿ,ಪಾಪಗಳಿಂದ ದೂರವಾಗಿ,ಮುನಿಜನಗಳಿಂದ ಕೂಡಿ, ಯಾವಾಗಲೂ ಮಂಗಳಕರವಾಗಿ (ಶಿವನಿಂದ) ಶೋಭಿಸುತ್ತ ಮೇರುಪರ್ವತದಂತೆ ಕಂಗೊಳಿಸುತ್ತಿರುವ ತುಂಗಭದ್ರೆಯನ್ನು ಗಿರಿಜೆಯು ನೋಡಿದಳು. ೨೦. ಮಧುರಧ್ವನಿ ಮಾಡುತ್ತಿರುವ ರಾಜಹಂಸಗಳು ಮತ್ತು ಕ್ರೌಂಚಪಕ್ಷಿಗಳು ಸಪ್ಪಳ ಮಾಡುತ್ತ ಮುಂದೆ ಚಲಿಸುವ ತೆರೆಗಳ ಸಮೂಹ, ಓಡಾಡುತ್ತಿರುವ ಮುನಿಸಮೂಹ, ಮರಗಳನ್ನಾಶ್ರಯಿಸಿರುವ ಪಕ್ಷಿಗಳು,

CC-0. Jangamwadi Math Collection. Digitized by eGangotri

ಚಂಚರೀಕದ ಸರದ ಸೊಂಪುಗಳ ಪೆಂಪುಗಳ
ಮಿಂಚುತಿಹ ನೈದಿಲ್ಗಳೋಳಿಗಳ ಪಾಳಿಗಳ
ಕಾಂಚನಾಂಭೋಜಾತಧೂಳಿಗಳ ಕೇಳಿಗಳ ತುಂಗಭದ್ರೆಯ ಕಂಡಳು ೨೦

ಜಂಬೂ ರಸಾಲ ಪೂಗ ದ್ರಾಕ್ಷೆ ಖರ್ಜೂರ
ಜಂಬೀರ ನಾರಂಗ ಮಾತುಳುಂಗಾಮಳಕ
ದಿಂಬಾದ ಪನಸ ದಾಡಿಮ ನಾಳಿಕೇರ ರಂಭಾದಿಗಳ್ ಫಲಭಾರದೆ
ಅಂಬಿಕೆ ಬರಲ್ ಕಂಡು ಭಯಭರಿತಭಕ್ತಿಯಿಂ
ದಂ ಬಾಗಿ ನಮಿಸುವೊಲ್ ತುಂಗಭದ್ರಾತೀರ
ಮಂ ಬಿಡದೆ ಸಾಲ್ಗೊಂಡ ಬನಬನದೊಳೆಸೆದಿರ್ದುವೇನೆಂಬೆನಚ್ಚರಿಯನು ೨೧

ತುಂಗಭದ್ರೆಯನಾಗ ಗಿರಿಸುತೆಗೆ ತೋರಿಸುತೆ
ತುಂಗಸಂತೋಷದಿಂದಂ ತಳರೆ ರಂಜಿಸುವ
ಸಂಗಹರನಿರ್ಪ ಪಂಪಾಕ್ಷೇತ್ರಮೆಡೆವಿಡದೆ ರಂಜಿಪ ವನಂಗಳಿಂದೆ
ಕಂಗೆಸೆದುದ್ಯೆದೆ ಸಾಸಿರವೊಗದ ಫಣಿವಲ್ಲ
ಭಂಗೆ ಕೊಂಡಾಡಲಸದಳವೆನಿಸುವದರ ನವ
ಮಂಗಲತೆಯಂ ಕಂಡು ಪುಷ್ಪಕವನಾ ಸರ್ವಮಂಗಲೆಯ ಪಿತನಿಳಿದನು ೨೨

ಬಾಗಿಲೊಳ್ ಕಾದಿರ್ದ ನಂದೀಶನಂ ಕಂಡು
ಬಾಗಿ ಮಸ್ತಕವನಗರಾಜನನುರಾಗದಿಂ
ಭೋಗಿಭೂಷಣನಿರ್ಪನಲ್ಲಿ ನಿನ್ನಂ ಹಿಂತೆ ಭೋಗಿಸಿದ ನಿಜರಮಣನು

ಸೊಂಪಾಗಿ ಮನೋಹರತೆಯಿಂದ ಕೂಡಿದ ದುಂಬಿಗಳ ಝೇಂಕಾರ, ಮಿಂಚುತ್ತಿರುವ ನೈದಿಲೆಗಳ ಸಾಲಾದ ಬಮಗಳು ಮತ್ತು ಚಿನ್ನದ ಬಣ್ಣದ ಕಮಲಪುಷ್ಪಗಳ ಧೂಳಿ ಇವುಗಳಿಂದ ಕೂಡಿದ ತುಂಗಭದ್ರೆಯನ್ನು ಪಾರ್ವತಿಯು ಕಂಡಳು. ೨೧. ಪಾರ್ವತಿಯು ಬಂದುದನ್ನು ನೋಡಿ ನೇರಳೆ, ಮಾವು, ಅಡಿಕೆ, ನಿಂಬೆ, ದ್ರಾಕ್ಷಿ, ಕರ್ಜೂರ, ಗಜನಿಂಬೆ, ಕಿತ್ತಳೆ, ಮಾದಳ, ನೆಲ್ಲಿ, ರುಚಿಯಾದ ಹಲಸು, ದಾಳಿಂಬೆ, ತೆಂಗು, ಬಾಳೆಗಳು ಹಣ್ಣುಗಳ ಭಾರದಿಂದ ಬಗ್ಗಿ, ಭಯ ಭರಿತ ಭಕ್ತಿಯಿಂದ ನಮಸ್ಕರಿಸುತ್ತಿರುವಂತೆ ತೋರುತ್ತಿದ್ದಿತು. ತುಂಗಭದ್ರಾತೀರದ ಕಾಡುಗಳಲ್ಲಿ ಇಂತಹ ಮರಗಳು ಸಾಲುಸಾಲಾಗಿ ಕಂಗೊಳಿಸುತ್ತಿದ್ದುವು. ೨೨. ಪರ್ವತರಾಜನು ತನ್ನ ಮಗಳಾದ ಪಾರ್ವತಿಗೆ ತುಂಗಭದ್ರೆಯನ್ನು ತೋರಿಸುತ್ತ ಅತಿಯಾದ ಸಂತೋಷದಿಂದ ಮುಂದೆ ಬರಲು ಪ್ರಕಾಶಿಸುವ ಚಂದ್ರಶೇಖರನಿರುವ ಪಂಪಾಕ್ಷೇತ್ರವು ಎಡೆಬಿಡದೆ ರಂಜಿಸುವ ವನಗಳಿಂದ ಕಣ್ಣಿಗೆ ಕಾಣಿಸಿತು. ಸಾವಿರ ಮುಖವನ್ನು ಹೊಂದಿರುವ ಫಣಿರಾಜನಿಗೂ ಅದನ್ನು ಕೊಂಡಾಡಲು ಅಸಾಧ್ಯ ಎನ್ನಿಸುವ ಅದರ ಹೊಚ್ಚಹೊಸ ಮಂಗಳಾಕೃತಿಯನ್ನು ನೋಡಿ ಸರ್ವಮಂಗಳೆಯ ತಂದೆಯಾದ ಹಿಮವಂತನು ಪುಷ್ಪಕವಿಮಾನದಿಂದ ಇಳಿದನು. ೨೩. ಬಾಗಿಲಲ್ಲಿ ಕಾದಿದ್ದ ನಂದೀಶನನ್ನು ನೋಡಿ ಅವನಿಗೆ ತಲೆಬಾಗಿ ನಮಸ್ಕರಿಸಿ ಆಗ ರಾಜನು ಪ್ರೀತಿಯಿಂದ ಪಾರ್ವತಿಯನ್ನು ಕುರಿತು ನಿನ್ನ ಪೂರ್ವಜನ್ಮದ ಪತಿಯಾದ ನಾಗಭೂಷಣನು ಯೋಗಿಯ ರೂಪ



CC-0. Jangamwadi Math Collection. Digitized by eGangotri

ವೇದಶಾಸ್ತ್ರಾಗಮಗಳಂ ಶಿಷ್ಯಸಮುದಯ
ಕ್ಕೋದಿಸುವ ಪೌರಾಣಮಂ ಪೇಳ್ವ ಭಾಷೆ ಮೊದ
ಲಾದ ತರ್ಕಂಗಳಂ ಕನ್ನಡಿಪ ಸ್ನಾನಮಂ ಮಾಳ್ಪ ಜಪಗಳನೆಣಿಸುವ
ಸಾದರದೆ ಯಜ್ಞಂಗಳಂ ಮಾಳ್ಪ ಹೋಮ ಮೊದ
ಲಾದ ಸತ್ಕ್ರಿಯೆಗಳಂ ನಡೆಸುತಿರ್ಪರ್ ಶಿವನ
ಪಾದಯುಗಳಸ್ಮರರ್ ಮುಕ್ತಿಯುವತೀವರರ್ ಮುನಿವರರ್ ಕಣ್ಗೆಸೆದರು ೨೬

ಪೋದೆಡೆಗೆ ಬಳಿವಿಡಿದು ಪೋಗಿ ಬೆಸನೇನೆಂದು
ಕಾದಿರ್ದು ಹೋಮಕ್ಕೆ ಸಮಿದಾಜ್ಯದರ್ಭಸಂ
ಪಾದನೆಗಳಂ ನೀಡಿಯುಮಳಫಲ ಕಂದಮೂಲಗಳನವರಿರ್ದಲ್ಲಿಗೆ
ಆದರದೊಳಾಹಾರಕಾಲಕೊದಗಿಸಿ ನಿರ್ಮ
ಳೋದಕಮನಾಶ್ರಮಕೆ ತಂದಿತ್ತು ಭಕ್ತಿಯೊಳ್
ಪಾದಗಳನೊತ್ತುತಿರ್ಪುವು ವೃದ್ಧಮುನಿಪರ್ಗೆ ಕಪಿಗಳಾ ಗಿರಿತಟದೊಳು ೨೭

ಸುಳಿಯಲಮ್ಮದು ಗಾಳಿ ಬಿರುಸಾಗಿ ಪೂಗಳಂ
ತುಳಿಯಲಮ್ಮದು ತುಂಬಿವಿಂಡು ಮೊರೆಮೊರೆವುತ್ತ
ಮಿಳಿಯಲಮ್ಮದು ಸೂರ್ಯಕಿರಣತತಿ ಬಿಸುಪಾಗಿ ತರುಲತಾಗುಲ್ಮಕುಲಕೆ

ಸುತ್ತಿದ್ದಿತು. ೨೬. ವೇದ–ಶಾಸ್ತ್ರ–ಆಗಮಗಳನ್ನು ಶಿಷ್ಯರಿಗೆ ಪಾಠ ಮಾಡಿಸುವ, ಪುರಾಣಗಳನ್ನು ಹೇಳುವ, ಭಾಷೆ ಮೊದಲಾದ ತರ್ಕಗಳನ್ನು ತಿಳಿಯಹೇಳುವ, ಸ್ನಾನವನ್ನು ಮಾಡುವ, ಜಪಮಣಿಗಳನ್ನು ಎಣಿಸುವ, ಆದರದಿಂದ ಯಜ್ಞಗಳನ್ನು ಮಾಡುವ, ಹೋಮ ಮೊದಲಾದ ಸತ್ಕರ್ಮಗಳನ್ನು ನಡೆಸುತ್ತಿರುವ, ಶಿವನ ಪಾದಗಳನ್ನೇ ಯಾವಾಗಲೂ ಸ್ಮರಿಸುವ ಮುಕ್ತಿಸ್ತ್ರೀಯ ಪತಿಗಳಾದ ಋಷಿಶ್ರೇಷ್ಠರು ಕಣ್ಣಿಗೆ ಕಾಣಿಸಿದರು. ೨೭. ಆ ಬೆಟ್ಟದ ತಪ್ಪಲಲ್ಲಿದ್ದ ಕೋಡಗಗಳು ಅಲ್ಲಿನ ಮುದುಕರಾದ ಋಷಿಗಳು ಹೋದಲ್ಲಿಗೆ ಹಿಂಬಾಲಿಸಿ ಹೋಗಿ ಅವರ ಅಪ್ಪಣೆಯನ್ನು ಕಾದಿದ್ದು, ಹೋಮಕ್ಕೆ ಸಮಿತ್ತು, ತುಪ್ಪ-ದರ್ಭೆ ಮೊದಲಾದುವುಗಳನ್ನು ಸಂಗ್ರಹಿಸಿ ತಂದುಕೊಟ್ಟು ಶ್ರೇಷ್ಠವಾದ ಹಣ್ಣು, ಗೆಡ್ಡೆ–ಗೆಣಸುಗಳನ್ನು ಅವರು ಇದ್ದಲ್ಲಿಗೆ ಆದರದಿಂದ ಭೋಜನದ ಕಾಲಕ್ಕೆ ಒದಗಿಸಿ ನಿರ್ಮಲವಾದ ನೀರನ್ನು ಆಶ್ರಮಕ್ಕೆ ತಂದುಕೊಟ್ಟು ಭಕ್ತಿಯಿಂದ ಆ ವೃದ್ಧಮುನಿಗಳ ಕಾಲನ್ನು ಒತ್ತುತ್ತಿದ್ದುವು. ೨೮. ಆ ವನದಲ್ಲಿ ಎಲ್ಲಾ ಋತುಗಳೂ ಒಂದಾಗಿ ಒಟ್ಟುಗೂಡಿರುವ ಕಾರಣದಿಂದ ಗಾಳಿಯು ಬಿರುಸಾಗಿ ಬೀಸಲು ಇಷ್ಟಪಡುವುದಿಲ್ಲ. ದುಂಬಿಗಳ ಸಮೂಹ ಮೊರೆಯುತ್ತ ಹೂಗಳನ್ನು ತುಳಿದು ನಾಶಪಡಿಸಲು ಆಶಿಸುವುದಿಲ್ಲ. ಸೂರ್ಯ

CC-0. Jangamwadi Math Collection. Digitized by eGangotri

ಯೋಗಿರೂಪಿಂದೆ ನಿನ್ನಾತನೆಂತಿಹನಂತು
ಯೋಗಿಣಿಯುಮೆನಿಸಿ ನೀನೊಲಿಸೆಂದು ಬಿನ್ನೈಸಿ
ಸಾಗಿದಂ ಬೀಳ್ಕೊಂಡು ಪರಶಿವನ ಮನವನಿಂಪಾಗಿ ಪಡೆಯೆಂದು ಪುರಕೆ ೨೩

ಜಯೆ ವಿಜಯೆಗಳುಮೆನಿಪ ಘನಸಹಾಯಿಗಳನನು
ನಯದಿಂದೆ ಬೆಸಸಿ ನಿಜಪುರದತ್ತ ಕುಧರಸಂ
ಚಯನಾಥನೈದಲುಮೆಯಿತ್ತ ಪಂಪಾಮಹಾಕ್ಷೇತ್ರಕ್ಕೆ ನಡೆದುಬರಲು
ನಿಯತದಿಂ ಹೋಮಧೂಮಂಗಳಿಂ ಶ್ರುತಿಸಮಾ
ಶ್ರಯಮಂತ್ರಘೋಷದಿಂ ವರಹವಿರ್ಗಂಧದಿಂ
ನಯನಕರ್ಣಘ್ರಾಣತತಿಗಳಂ ತಣಿಸುತೆ ತಪೋವನಂ ಕಣ್ಗೆಸೆದುದು ೨೪

ರುದ್ರಾಕ್ಷಿಗಳ ಕೋವ ವಿಮಲಶಿವಲಿಂಗಕ್ಕೆ
ರುದ್ರಾಭಿಷೇಕಮಂ ಮಾಳ್ಪ ಭಯಭಕ್ತಿಯಿಂ
ರುದ್ರಪೂಜೋಪಕರಣಂಗಳಿಂ ಬೆಳಪ ವಲ್ಕಲಮನುರೆ ತೊಳೆದೊಣಗಿಪ
ರುದ್ರನರ್ಚನೆಗೆ ನಾನಾ ಕುಸುಮಮಂ ಕೊಯ್ವ
ರುದ್ರರೆಂದೇ ಕಂಡು ಯತಿಗಳ್ಗೆ ನಮಿಪ ಶತ
ರುದ್ರೀಯ ಮೊದಲಾದ ಮಂತ್ರಂಗಳಂ ಜಪಿಪ ಮುನಿಗಳಿಂ ವನಮೆಸೆದುದು ೨೫

ದಲ್ಲಿ ಇಲ್ಲಿದ್ದಾನೆ. ನಿನ್ನವನಾದ ಆತನು ಯಾವ ರೂಪದಲ್ಲಿದ್ದಾನೆಯೋ ಅದೇ ರೀತಿ ನೀನೂ ಯೋಗಿಣಿಯಾಗಿ ಅವನನ್ನು ಒಲಿಸಿಕೊ, ಪರಮೇಶ್ವರನ ಮನಸ್ಸನ್ನು ಆನಂದ ದಿಂದ ಪಡೆದುಕೊ ಎಂದು ಹೇಳಿ ಅವಳಿಂದ ಬೀಳ್ಕೊಂಡು ತನ್ನ ಪಟ್ಟಣಕ್ಕೆ ಹೊರಟನು. ೨೪. ಅತ್ತಕಡೆ ಜಯೆ–ವಿಜಯೆ ಎಂಬ ಸೇವಕಿಯರನ್ನು ಅನುನಯದಿಂದ ಅವಳ ಸೇವೆಗೆ ನೇಮಿಸಿ ತನ್ನ ರಾಜಧಾನಿಗೆ ಪರ್ವತರಾಜನು ಹೋದನು. ಇತ್ತ ಪಾರ್ವತಿಯು ಪಂಪಾ ಕ್ಷೇತ್ರಕ್ಕೆ ನಡೆದುಬಂದಳು. ಅಲ್ಲಿ ನಿಯಮದಂತೆ ಕ್ರಮವಾಗಿ ಹೋಮನಳಿಂದ ಹೊರಟ ಹೊಗೆಯಿಂದ, ವೇದಮಂತ್ರಗಳ ಘೋಷಣೆಯಿಂದ, ಶ್ರೇಷ್ಠವಾದ ಹವಿಸ್ಸುಗಳ ಸುವಾಸನೆಯಿಂದ, ಕಣ್ಣು-ಕಿವಿ–ಮೂಗುಗಳನ್ನು ತಣಿಸುತ್ತಲಿದ್ದ ತಪೋವನವು ಕಣ್ಣಿಗೆ ಕಾಣಿಸಿತು. ೨೫. ರುದ್ರಾಕ್ಷಿಗಳನ್ನು ಪೋಣಿಸುವ, ಪರಮಪವಿತ್ರವಾದ ಶಿವಲಿಂಗಕ್ಕೆ ರುಧ್ರಾಭಿಷೇಕವನ್ನು ಮಾಡುವ, ಭಯಭಕ್ತಿಯಿಂದ ರುದ್ರಪೂಜೆಗೆ ಉಪಕರಣಗಳನ್ನು ತೊಳೆಯುವ, ನಾರುಡೆಯನ್ನು ಒಗೆದು ಒಣಗಿಸುವ, ಶಿವನ ಅರ್ಚನೆಗೆ ನಾನಾ ರೀತಿಯ ಹೂಗಳನ್ನು ಕೊಯ್ದುಕೊಂಡು ಬರುವ ಯತಿಗಳನ್ನು ಶಿವನೆಂದೇ ತಿಳಿದು ನಮಸ್ಕರಿಸುವ, ಶತರುದ್ರೀಯ ಮೊದಲಾದ ಮಂತ್ರಗಳನ್ನು ಜಪಿಸುವ ಋಷಿಗಳಿಂದ ಆ ವನವು ಶೋಭಿ

CC-0. Jangamwadi Math Collection. Digitized by eGangotri

ವೇದಶಾಸ್ತ್ರಾಗಮಗಳಂ ಶಿಷ್ಯಸಮುದಯ
ಕ್ಕೋದಿಸುವ ಪೌರಾಣಮಂ ಪೇಳ್ವ ಭಾಷೆ ಮೊದ
ಲಾದ ತರ್ಕಂಗಳಂ ಕನ್ನಡಿಪ ಸ್ನಾನಮಂ ಮಾಳ್ಪ ಜಪಗಳನೆಣಿಸುವ
ಸಾದರದೆ ಯಜ್ಞಂಗಳಂ ಮಾಳ್ಪ ಹೋಮ ಮೊದ
ಲಾದ ಸತ್ಕ್ರಿಯೆಗಳಂ ನಡೆಸುತಿರ್ಪರ್ ಶಿವನ
ಪಾದಯುಗಳಸ್ಮರರ್ ಮುಕ್ತಿಯುವತೀವರರ್ ಮುನಿವರರ್ ಕಣ್ಗೆಸೆದರು ೨೬

ಪೋದೆಡೆಗೆ ಬಳಿವಿಡಿದು ಪೋಗಿ ಬೆಸನೇನೆಂದು
ಕಾದಿರ್ದು ಹೋಮಕ್ಕೆ ಸವದಾಜ್ಯದರ್ಭೆಸಂ
ಪಾದನೆಗಳಂ ನೀಡಿಯಮಳಫಲ ಕಂದಮೂಲಗಳನವರಿರ್ದಲ್ಲಿಗೆ
ಆದರದೊಳಾಹಾರಕಾಲಕೊದಗಿಸಿ ನಿರ್ಮ
ಳೋದಕಮನಾಶ್ರಮಕೆ ತಂದಿತ್ತು ಭಕ್ತಿಯೊಳ್
ಪಾದಗಳನೊತ್ತುತಿರ್ಪುವು ವೃದ್ಧಮುನಿಪರ್ಗೆ ಕಪಿಗಳಾ ಗಿರಿತಟದೊಳು ೨೭

ಸುಳಿಯಲಮ್ಮದು ಗಾಳಿ ಬಿರುಸಾಗಿ ಪೂಗಳಂ
ತುಳಿಯಲಮ್ಮದು ತುಂಬಿವಿಂಡು ಮೊರೆಮೊರೆವುತ್ತ
ಮಿಳಿಯಲಮ್ಮದು ಸೂರ್ಯಕಿರಣತತಿ ಬಿಸುಪಾಗಿ ತರುಲತಾಗುಲ್ಮಕುಲಕೆ

ಸುತ್ತಿದ್ದಿತು. ೨೬. ವೇದ–ಶಾಸ್ತ್ರ–ಆಗಮಗಳನ್ನು ಶಿಷ್ಯರಿಗೆ ಪಾಠ ಮಾಡಿಸುವ, ಪುರಾಣಗಳನ್ನು ಹೇಳುವ, ಭಾಷೆ ಮೊದಲಾದ ತರ್ಕಗಳನ್ನು ತಿಳಿಯಹೇಳುವ, ಸ್ನಾನವನ್ನು ಮಾಡುವ, ಜಪಮಣಿಗಳನ್ನು ಎಣಿಸುವ, ಆದರದಿಂದ ಯಜ್ಞಗಳನ್ನು ಮಾಡುವ, ಹೋಮ ಮೊದಲಾದ ಸತ್ಕರ್ಮಗಳನ್ನು ನಡೆಸುತ್ತಿರುವ, ಶಿವನ ಪಾದಗಳನ್ನೇ ಯಾವಾಗಲೂ ಸ್ಮರಿಸುವ ಮುಕ್ತಿಸ್ತ್ರೀಯ ಪತಿಗಳಾದ ಋಷಿಶ್ರೇಷ್ಠರು ಕಣ್ಣಿಗೆ ಕಾಣಿಸಿದರು. ೨೭. ಆ ಬೆಟ್ಟದ ತಪ್ಪಲಲ್ಲಿದ್ದ ಕೋಡಗಗಳು ಅಲ್ಲಿನ ಮುದುಕರಾದ ಋಷಿಗಳು ಹೋದಲ್ಲಿಗೆ ಹಿಂಬಾಲಿಸಿ ಹೋಗಿ ಅವರ ಅಪ್ಪಣೆಯನ್ನು ಕಾದಿದ್ದು, ಹೋಮಕ್ಕೆ ಸಮಿತ್ತು, ತುಪ್ಪ-ದರ್ಭೆ ಮೊದಲಾದುವುಗಳನ್ನು ಸಂಗ್ರಹಿಸಿ ತಂದುಕೊಟ್ಟು ಶ್ರೇಷ್ಠವಾದ ಹಣ್ಣು, ಗೆಡ್ಡೆ–ಗೆಣಸುಗಳನ್ನು ಅವರು ಇದ್ದಲ್ಲಿಗೆ ಆದರದಿಂದ ಭೋಜನದ ಕಾಲಕ್ಕೆ ಒದಗಿಸಿ ನಿರ್ಮಲವಾದ ನೀರನ್ನು ಆಶ್ರಮಕ್ಕೆ ತಂದುಕೊಟ್ಟು ಭಕ್ತಿಯಿಂದ ಆ ವೃದ್ಧಮುನಿಗಳ ಕಾಲನ್ನು ಒತ್ತುತ್ತಿದ್ದುವು. ೨೮. ಆ ವನದಲ್ಲಿ ಎಲ್ಲಾ ಋತುಗಳೂ ಒಂದಾಗಿ ಒಟ್ಟುಗೂಡಿರುವ ಕಾರಣದಿಂದ ಗಾಳಿಯು ಬಿರುಸಾಗಿ ಬೀಸಲು ಇಷ್ಟಪಡುವುದಿಲ್ಲ. ದುಂಬಿಗಳ ಸಮೂಹ ಮೊರೆಯುತ್ತ ಹೂಗಳನ್ನು ತುಳಿದು ನಾಶಪಡಿಸಲು ಆಶಿಸುವುದಿಲ್ಲ. ಸೂರ್ಯ

CC-0. Jangamwadi Math Collection. Digitized by eGangotri

ಮುಳಿಯಲಮ್ಮದು ದವಾನಲನುರುಬಿ ಮಳೆಗಳಂ
ಹಿಳಿಯಲಮ್ಮದು ಮೇಘಮೊತ್ತಿ ಪಣ್ಗಳ ಸೊಂಪು
ಕಳಿಯಲಮ್ಮದು ಸಕಲ ಋತುಗಳೊಂದಾಗಿರ್ಪ ಕಾರಣಂ ತದ್ವನದೊಳು ೨೮

ಗಿರಿಕಾ ಬಿಡಾಲ ಫಣಿ ನಕುಲ ಶಶ ವೃಕ ನಾಗ
ಹರಿ ಹರಿಣ ಶಾರ್ದೂಲ ಶರಭ ಭೇರುಂಡಾದಿ
ಧರೆಯ ಮೃಗಪಕ್ಷಿಕುಲಮನ್ಯೋನ್ಯವೈರಂಗಳಂ ಮರೆದು ಸೊಗಸಿರ್ಪುವು
ಬಿರಿದ ಸಂಪಗೆಗಳಿಗಳಂಬುಜಕೆ ಚಂದ್ರಮು
ಸರಸ ಕೈರವದಲರ್ಗಳಂ ಸೂರ್ಯನಿಂತಿವರೊ
ಳಿರವಿಲ್ಲದಿಹುದು ಪಂಪಾವಿರೂಪಾಕ್ಷನ ತಪೋವನದೊಳೇನೆಂಬೆನು ೨೯

ಇಂತು ರಂಜಿಸುವ ಪುಣ್ಯಾಶ್ರಮಂಗಾಣುತೋ
ರಂತೆ ಗಿರಿಸುತೆ ಬಂದು ಹೇಮಕೂಟಾಚಲ
ಪ್ರಾಂತದೆ ತಪೋಮೂರ್ತಿಯಾಗಿ ಶೋಭಿಪ ವಿರೂಪಾಕ್ಷನಂ ಕಂಡು ನಮಿಸಿ
ಸಂತಸದೊಳೊಲ್ದು ಕೊಂಡಾಡಿ ಭಯಭಕ್ತಿಯಿಂ
ಸಂತತಂ ಪೂಜಿಸುತ್ತಿರ್ದಳಗಜಾತೆಯು
ತ್ಯಂತಭುವನಖ್ಯಾತೆ ಸಕಲನಿಗಮಾತೀತೆ ಸಂಪೂತೆ ಲೋಕಮಾತೆ ೩೦

ಕಿರಣಗಳ ಸಮೂಹ ಬಿಸಿಯಾಗಿ ಕೆಳಗಿಳಿಯಲು ಇಚ್ಛಿಸುವುದಿಲ್ಲ. ಕಾಡ್ಗಿಚ್ಚು ಹೆಚ್ಚಾಗಿ ಮರ ಬಳ್ಳಿ ಪೊದೆಗಳನ್ನು ಸುಡಲು ಬಯಸುವುದಿಲ್ಲ. ಮೋಡ ಗುಂಪುಗೂಡಿ ಮಳೆಯನ್ನು ಅತಿಯಾಗಿ ಸುರಿಸುವುದಿಲ್ಲ. ಹಣ್ಣುಗಳು ಬಹಳ ಮಾಯ್ದು ರುಚಿಯನ್ನು ಕಳೆದುಕೊಳ್ಳುವುದಿಲ್ಲ. ೨೯. ಇಲಿ, ಸುಂಡಿಲಿ, ಬೆಕ್ಕು, ಹಾವು, ಮುಂಗುಸಿ, ಮೊಲ, ತೋಳ, ಆನೆ, ಸಿಂಹ, ಜಿಂಕೆ, ಶಾರ್ದೂಲ, ಶರಭ, ಗಂಡಬೇರುಂಡ ಮೊದಲಾದ ಭೂಮಿಯಲ್ಲಿನ ಎಲ್ಲ ಮೃಗ ಪಕ್ಷಿಗಳೂ ಜಾತಿವೈರವನ್ನು ಮರೆತು ಒಂದಾಗಿದ್ದುವು. ಅರಳಿದ ಸಂಪಿಗೆಗೆ ದುಂಬಿಗಳು, ಕಮಲಕ್ಕೆ ಚಂದ್ರ, ನೈದಿಲೆಗೆ ಸೂರ್ಯ ಈ ರೀತಿಯಲ್ಲಿ ಪರಸ್ಪರ ವೈರಭಾವವಿಲ್ಲದಂತೆ ಪಂಪಾವಿರೂಪಾಕ್ಷನ ತಪೋವನದಲ್ಲಿರುತ್ತವೆ. ೩೦. ಈ ರೀತಿ ಶೋಭಿಸುವ ಪುಣ್ಯಾಶ್ರಮವನ್ನು ನೋಡುತ್ತ ಪಾರ್ವತಿಯು ನೇರವಾಗಿ ಬಂದು ಹೇಮಕೂಟಗಿರಿಯ ಪ್ರಾಂತದಲ್ಲಿ ತಪಸ್ಸಿನಲ್ಲಿ ಕುಳಿತು ಶೋಭಿಸುತ್ತಿದ್ದ ಶಿವನನ್ನು ನೋಡಿ ನಮಸ್ಕರಿಸಿ, ಸಂತಸದಿಂದ ಮೆಚ್ಚಿ, ಪ್ರೀತಿಸಿ, ಕೊಂಡಾಡಿ, ಭಯಭಕ್ತಿಯಿಂದ ಅನವರತವೂ ಪ್ರಪಂಚದಲ್ಲಿ ಮಹಾಖ್ಯಾತಿಯನ್ನು ಹೊಂದಿದವಳೂ, ಎಲ್ಲ ವೇದಗಳಿಗೂ ಮೀರಿದವಳೂ, ಪರಮಪವಿತ್ರಳೂ ಲೋಕಮಾತೆಯೂ ಆದ ಗಿರಿಜೆ ಪೂಜೆ ಮಾಡುತ್ತಿದ್ದಳು.

CC-0. Jangamwadi Math Collection. Digitized by eGangotri

ನಿಚ್ಚಲುಂ ತುಂಗಭದ್ರಾನದಿಯೊಳುಂ ಮಿಂದು
ನಿಚ್ಚಳದ ಧೌತಾಂಬರವನುಟ್ಟು ನೊಸಲಿನೊಳ್
ಪೊಚ್ಚಪೊಸತಾದ ಭಸಿತವನಿಟ್ಟು ರುದ್ರಾಕ್ಷೆಯಂ ತೊಟ್ಟುಕೊಂಡು ಬಳಿಕ
ಅಚ್ಚಪೂಗಳನರಸಿ ಕೊಯ್ದು ತಂದವರಿಂದೆ
ಪಚ್ಚವಂ ಮಾಡಿ ತತ್ತತ್ ಸ್ಥಾನಕಳವಡಿಸಿ
ಅಚ್ಚಮೂರುಳ್ಳ ಶಿವನಂ ಭಜಿಸುತಗಜಾತೆ ಸುಖಮಿರಲ್ಕಿತ್ತಲತ್ತ ೩೧

ತಾರಕಾಸುರನೆಂಬ ದಾನವಂ ಪೆರ್ಚಿ ಮಿಗೆ
ವಾರಿಜಾಂಬಕ ಸುರೇಂದ್ರಾದಿ ದಿಕ್ಪಾಲಕರ
ಗೋರಿಗೊಳಿಸುತ್ತವರ ದುರ್ಗಂಗಳಂ ಕೊಂಡು ತನ್ನ ಠಾಣೆಯುವನಿಡಲು
ಭೂರಿಯಾಹವದೆ ಸೈರಿಸಿ ನಿಲ್ಲಲಾರದೆ ಮ
ಕಾರಿವೇಷವನಾಂತು ಕೈವಿಡಿದು ತಂತಮ್ಮ
ನಾರಿಯರನೆಲ್ಲರಂ ನಡೆತಂದು ಮೇರುವಿನ ಗುಹೆಯೊಳಗೆ ಮೈಗರೆದರು ೩೨

ಉಟ್ಟರುವೆಗಳ ಮೆಯ್ಯ ಕಾಳಿಕೆಯ ದೈನ್ಯರಸ
ಮಿಟ್ಟಣಿಸಿದಾಸ್ಯದಮರರ್ಕಳಿಂಗಿಪ್ಪಮಂ
ಕೊಟ್ಟವನ ಪೊರೆಗೆ ನಡೆತರಲಜಂ ಕಂಡು ನಿಮಗೇಕೆ ಬರವಾದುದೆನಲು
ದಿಟ್ಟನಹ ತಾರಕನ ಕೊಲೆಗಾರದಾಂ ಭೀತಿ
ವಟ್ಟೆವೆಮ್ಮಯ ಸಕಲಸೌಭಾಗ್ಯಮಂ ಪೆಸರ
ಪಟ್ಟಣಂಗಳನವಂ ಕೊಂಡು ಬಿಡದುರುಬಿಯುರೆಯಟ್ಟಿದಂ ಕೇಳೆಂದರು ೩೩

೩೧. ನಿತ್ಯವೂ ತುಂಗಭದ್ರಾನದಿಯಲ್ಲಿ ಸ್ನಾನ ಮಾಡಿ, ಶುಭ್ರವಾದ ಬಿಳಿ ಸೀರೆಯುಟ್ಟು, ಹಣೆಯಲ್ಲಿ ಹೊಸದಾದ ವಿಭೂತಿ ಧರಿಸಿ, ರುದ್ರಾಕ್ಷಮಾಲೆಯನ್ನು ಹಾಕಿಕೊಂಡು, ಅನಂತರ ಹೊಸ ಹೂಗಳನ್ನು ಆರಿಸಿ ಕೊಯ್ದುತಂದು ಅದರಿಂದ ಅಲಂಕಾರಮಾಡಿ ಆಯಾ ಸ್ಥಾನಗಳಲ್ಲಿ ಹೊಂದಿಸಿಟ್ಟು ಮೂರು ಕಣ್ಣುಳ್ಳ ಶಿವನನ್ನು ಗಿರಿಜೆಯು ಆರಾಧಿಸುತ್ತ ಸುಖದಿಂದಿರಲು, ಆ ಕಡೆ ೩೨. ತಾರಕಾಸುರನೆಂಬ ರಾಕ್ಷಸನು ಕೊಬ್ಬಿ ವಿಷ್ಣು–ಇಂದ್ರ ಮೊದಲಾದ ದಿಕ್ಪಾಲಕರನ್ನು ಮರುಳುಮಾಡಿ ಅವರ ದುರ್ಗಗಳನ್ನು ವಶಪಡಿಸಿಕೊಂಡು ತನ್ನ ಬಿಡಾರವನ್ನು ಹೂಡಿರಲು, ಅವರೆಲ್ಲ ತಾರಕನನ್ನು ಭಯಂಕರವಾದ ಯುದ್ಧದಲ್ಲಿ ಎದುರಿಸಿ ನಿಲ್ಲಲಾರದೆ, ವೇಷ ಮರೆಸಿಕೊಂಡು ತಮ್ಮ ತಮ್ಮ ಪತ್ನಿಯರನ್ನು ಕರೆದುಕೊಂಡು ಬಂದು ಮೇರುಪರ್ವತದ ಗುಹೆಯಲ್ಲಿ ಅಡಗಿಕೊಂಡರು. ೩೩. ಉಟ್ಟ ಬಟ್ಟೆ, ಸ್ನಾನ ಮಾಡದೆ ಕೊಳೆಗೂಡಿದ್ದ ಮೈ, ದೈನ್ಯದಿಂದ ತುಂಬಿದ್ದ ಮುಖವನ್ನು ಹೊಂದಿದ ದೇವತೆಗಳು ಆ ರಾಕ್ಷಸನಿಗೆ ವರಕೊಟ್ಟ ಬ್ರಹ್ಮನ ಬಳಿಗೆ ಬಂದರು. ಅವರನ್ನು ನೋಡಿದ ಬ್ರಹ್ಮನು ನಿಮ್ಮ ಬರವಿಗೆ ಕಾರಣವೇನೆಂದು ಕೇಳಿದನು. ಪರಾಕ್ರಮಿಯಾದ ತಾರಕಾಸುರನನ್ನು ಕೊಲ್ಲುವಿಕೆಗೆ ಬಲಗುಂದಿ ನಾವು ಹೆದರಿದ್ದೇವೆ. ನಮ್ಮ ಎಲ್ಲ ಸೌಭಾಗ್ಯವನ್ನೂ, ಹೆಸರಾದ ಪಟ್ಟಣಗಳನ್ನೂ ಕಿತ್ತುಕೊಂಡು, ನಮ್ಮನ್ನು

CC-0. Jangamwadi Math Collection. Digitized by eGangotri

ಸಾರಿದೆವು ಹರಿಗೆ ತಾರಕನಟ್ಟುಳಿಯನಾತ
ನಾರೇಳ್ಸಹಸ್ರವರ್ಷಂ ಕಾದಿ ಕಾದಿ ಗೆಲ
ಲಾರದೆ ಸುದರ್ಶನಂ ಮುರಿದೋಡಿಯಮೃತಾಬ್ಧಿಯಂ ಪೊಕ್ಕು ಮೈಗರೆದನು
ಆರೆವಿನ್ನವನಲೆಗೆ ಸುರರುಳಿವ ದಾರಿಯಂ
ತೋರಿಕೊಡಿಮೆಂದು ಬಿನ್ನವಿಸೆ ಕಮಲಾಸನಂ
ದೂರನಾಲಿಸಿಯಮರನಂ ಸಂತವಿಟ್ಟು ಪೇಳ್ದಂ ಖಳನ ವೃತ್ತಕವನು ೩೪

ಪಿಂತೆ ತಾರಕದೈತ್ಯನತಿನಿಷ್ಠೆಯಿಂದಂ ವ
ನಾಂತರದೆ ತೊಡಗಿದಂ ತಪವನದರುಗ್ರಮಂ
ಶಿಂತೆಂದು ಪೇಳಲೆನಗರಿದಾ ತಪೋಗ್ನಿಯಿಂದೀರೇಳ್ಜಗಂ ಸುಡುತಿರೆ
ಚಿಂತೆವೆತ್ತಾನೀಶನೆಡೆಗೈದಿ ಕೇಳಲಭ
ವಂ ತನಗೆ ಪೇಳ್ದನಿದು ತಾರಕನ ತಪದ ವೃ
ತ್ತಾಂತವಾತಂಗೆ ಬೇಡಿದ ವರವನಿತ್ತದಂ ಬಿಡಿಸೆಂದು ಬೀಳ್ಕೊಟ್ಟನು ೩೫

ಮೃಡನಾಜ್ಞೆಯಿಂದೆ ತಾರಕನೆಡೆಗೆ ನಡೆತಂದು
ನುಡಿಸಿದೆಂ ಸಾಕು ತಪವ ವರವಂ ಬೇಡೆನ
ಲ್ಕೊಡನೆ ಕಣ್ದೆರೆದು ಕೊಂಡಾಡುತುಂ ನುಡಿದನಾನೆಂದಿಗುಂ ಸಾಯದಂತೆ

ಬಿಡದೆ ಹೊಡೆದಟ್ಟಿದ್ದಾನೆ ಕೇಳು-ಎಂದರು. ೩೪. ತಾರಕನ ಪೀಡೆಯನ್ನು ವಿಷ್ಣುವಿಗೆ ಹೇಳಿದೆವು. ಅವನು ಆರೇಳು ಸಾವಿರ ವರ್ಷದವರೆಗೆ ಯುದ್ಧಮಾಡಿಯೂ ಗೆಲ್ಲಲಾರದೆ ಹೋದನು. ಸುದರ್ಶನಚಕ್ರವು ಮುರಿಯಲು ಸಮುದ್ರವನ್ನು ಹೊಕ್ಕು ಅವಿತುಕೊಂಡನು. ಅವನ ಹೊಡೆತವನ್ನು ಇನ್ನು ನಾವು ತಾಳಲಾರೆವು. ದೇವತೆಗಳು ಬದುಕುವ ದಾರಿಯನ್ನು ತೋರಿಸಿಕೊಡು ಎಂದು ಬಿನ್ನವಿಸಲು, ಬ್ರಹ್ಮನು ಅವರ ದೂರನ್ನು ಕೇಳಿ, ಅವರನ್ನು ಸಂತೈಸಿ, ರಾಕ್ಷಸನ ವೃತ್ತಾಂತವನ್ನು ಅವರಿಗೆ ವಿವರಿಸಿದನು. ೩೫. ಹಿಂದೆ ತಾರಕಾಸುರನು ಅತಿನಿಷ್ಠೆಯಿಂದ ಕಾಡಿನಲ್ಲಿ ತಪಸ್ಸಿಗೆ ತೊಡಗಿದನು. ಅದರ ಉಗ್ರತೆ ಅಷ್ಟಿಷ್ಟೆಂದು ಹೇಳಲು ನನ್ನಿಂದ ಸಾಧ್ಯವಿಲ್ಲ. ಆ ತಪಸ್ಸಿನ ಜ್ವಾಲೆಯಿಂದ ಹದಿನಾಲ್ಕು ಲೋಕಗಳೂ ಸುಡುತ್ತಿರಲು, ಚಿಂತೆಗೊಂಡು ಈಶ್ವರನ ಬಳಿಗೆ ಹೋಗಿ ಕೇಳಿದೆನು. ಅಭವನು (ಶಿವನು) ತಾರಕಾಸುರನ ತಪಸ್ಸಿನ ಸಂಗತಿಯನ್ನು ಹೇಳಿ ಆತನು ಬೇಡಿದ ವರವನ್ನು ಕೊಟ್ಟು ಅವನ ತಪಸ್ಸನ್ನು ನಿಲ್ಲಿಸು ಎಂದು ಹೇಳಿ ನನ್ನನ್ನು ಕಳಿಸಿದನು. ೩೬. ಈಶ್ವರನ ಆಜ್ಞೆಯಂತೆ ತಾರಕಾಸುರನ ಬಳಿಗೆ ಹೋಗಿ ತಪಸ್ಸನ್ನು ಸಾಕುಮಾಡು, ವರವನ್ನು ಕೇಳು ಎಂದು ಹೇಳಿದೆ. ಅವನು ತಕ್ಷಣ ಕಣ್ಣುಬಿಟ್ಟು ನೋಡಿ ಕೊಂಡಾಡುತ್ತ ನಾನು ಯಾವತ್ತೂ

CC-0. Jangamwadi Math Collection. Digitized by eGangotri

ಕೊಡುವುದೆನೆ ಜಾತಸ್ಯ ಮರಣಂ ಧ್ರುವಮದೆಂಬ
ನುಡಿಯನರಿದಘಟಿತವನೆಂಬರೇ ಜೀವರಂ
ಬಿಡುವುದೇ ಮರಣಮೆಂತಾದೊಡಂ ಪೇಳೆನಲ್ಕವನೆನ್ನೊಳಿಂತೆಂದನು ೩೬

ಆದೊಡಭವನ ವೀರ್ಯಮಂ ಬಿಡದೆ ಹರಿಯಜೇಂ
ದ್ರಾದಿ ಬೃಂದಾರಕರ್ ಧರಿಸಲಾ ವೀರ್ಯದಿಂ
ದಾದೇಳ್ದಿನದ ಕುಮಾರಕನಿಂದಲಲ್ಲದುಳಿದವರಿಂದೆ ಸಾಯದಂತೆ
ಸಾದರದೊಳೀವುದೆಂದೆನಗೆ ಬಿನ್ನೈಸಲಾಂ
ಭೇದದಿಂದಾ ವರವನಿತ್ತೆನದರಿಂದವಂ
ಕಾದಿ ಕೊಂದೊಡೆ ಸಾಯನಾರಕೆಯ್ಯೊಳುಮೆಂದು ಪೇಳ್ದು ಮತ್ತಿಂತೆಂದನು ೩೭

ಹೇಮಕೂಟಾಚಲದೆ ಶಂಕರಂ ತಪಮಿರಲ್
ಪ್ರೇಮದಿಂ ಗಿರಿಜೆಯಾತನ ಸೇವೆಯಂ ಮಾಳ್ಪ
ಳಾ ಮಹಾದೇವನಾಕೆಯೊಳೊಂದಿದಲ್ಲದೆಮ್ಮಯ ಕಾರ್ಯವಾಗದೆಂದು
ಕಾಮಪಿತನಂ ಕೇಳ್ವೆನೆಂದಜಂ ನಿರ್ಜರ
ಸ್ತೋಮಮಂ ಕೂಡಿ ಹರಿಯೆಡೆಗೆ ಬರೆ ಕಾಣುತ್ತೆ
ತಾಮರಸಲೋಚನಂ ಬಂದುದೇಂ ಪೇಳೆಂದು ಬೊಮ್ಮನಂ ಬೆಸಗೊಂಡನು ೩೮

ಸಾಯದಂತೆ ವರವನ್ನು ಕೊಡು ಎಂದನು. ಆಗ ನಾನು ಜಾತಸ್ಯ ಮರಣಂ ಧ್ರುವಂ ಎಂಬ ಹೇಳಿಕೆಯು ಗೊತ್ತಿದ್ದು ಅಸಾಧ್ಯವಾದುದನ್ನು ಕೇಳುತ್ತಾರೆಯೆ ? ಹುಟ್ಟಿದವರನ್ನು ಸಾವು ಎಂದಾದರು ಬಿಡುತ್ತದೆಯೆ ? ಹೇಳು ಎನ್ನಲು ಅವನು ನನ್ನಲ್ಲಿ ಈ ರೀತಿ ಹೇಳಿದನು. ೩೭. ಹಾಗಾದರೆ ಈಶ್ವರನ ವೀರ್ಯವನ್ನು ವಿಷ್ಣು ಬ್ರಹ್ಮ ಇಂದ್ರನೇ ಮೊದಲಾದ ದೇವತೆಗಳು ಧರಿಸಲು ಅದರಿಂದ ಹುಟ್ಟಿದ ಏಳು ದಿನದ ಮಗನಿಂದ ಅಲ್ಲದೆ ಬೇರೆಯವರಿಂದ ನನಗೆ ಮರಣವಿಲ್ಲದಂತೆ ನನ್ನ ಮೇಲೆ ಪ್ರೀತಿಯಿಟ್ಟು ವರವನ್ನು ಕೊಡು ಎಂದು ವಿಜ್ಞಾಪಿಸಿಕೊಂಡನು. ನಾನು ಬೇರೆ ರೀತಿಯಿಂದ ಆಲೋಚಿಸಿ ವರವನ್ನು ಕೊಟ್ಟೆ. ಅದರಿಂದ ಅವನು ಯುದ್ಧದಲ್ಲಿ ಯಾರಿಂದಲೂ ಸಾಯುವುದಿಲ್ಲ ಎಂದು ಹೇಳಿ ಮತ್ತೆ ಹೀಗೆಂದನು. ೩೮. ಹೇಮಕೂಟಾಚಲದಲ್ಲಿ ಶಿವನು ತಪಸ್ಸಿನಲ್ಲಿದ್ದಾನೆ. ಗಿರಿಜೆಯು ಪ್ರೇಮದಿಂದ ಆತನ ಸೇವೆಯನ್ನು ಮಾಡುತ್ತಿದ್ದಾಳೆ. ಆ ಮಹಾದೇವನು ಆಕೆಯಲ್ಲಿ ಕೂಡದಿದ್ದರೆ ನಮ್ಮ ಯತ್ನ ಫಲಿಸುವುದಿಲ್ಲ ಎಂದು ಹೇಳಿ ಬ್ರಹ್ಮನು ವಿಷ್ಣುವನ್ನು ಕೇಳುತ್ತೇನೆ ಎಂದು ದೇವತೆಗಳ ಸಮೂಹವನ್ನು ಕೂಡಿಕೊಂಡು ವಿಷ್ಣುವಿನ ಬಳಿ ಬಂದನು. ಅವರನ್ನು ನೋಡಿ ವಿಷ್ಣುವು ಬಂದ ವಿಷಯವೇನು ಹೇಳು ಎಂದು ಬ್ರಹ್ಮ

CC-0. Jangamwadi Math Collection. Digitized by eGangotri

ಹರಿಗೆ ಕೈಮುಗಿದಜಂ ನುಡಿದನಾ ತಾರಕಂ
ದುರುಳನವನಂ ಕೊಲ್ವೊಡೀಶ್ವರಂ ಗಿರಿಜೆಯೊಳ್
ನೆರೆಯಲಾ ವೀರ್ಯದಿಂದುದಿಸಿದವನಿಂದಲ್ಲವಾಗದಾ ಶಂಭು ತನ್ನ
ಪರಮ ನಿಜಮಂ ತನ್ನ ಹೃತ್ಕಮಲಮಧ್ಯದೊಳ
ಗಿರಿಸಿ ತನ್ನಂ ತಾನೆ ಜಾನಿಸುತ್ತಿರ್ದನಾ
ಪರದಿನಾತನ ಯೋಗಮಂ ಕೆಡಿಪುದಕ್ಕುಪಾಯಂಗಾಣಬೇಕೆಂದನು ೩೯

ಹರನ ನಿಷ್ಠುರತಪಶ್ಚಲನೆಯಂ ಮಾಡೆ ಪೂ
ಸರನಲ್ಲದುಳಿದರಿಂದಾಗದೆಂದಬ್ಜವಿ
ಷ್ಟರ ಕಮಲನಾಭ ಮುಂತಾದವರ್ ನಿರ್ಧರಿಸಿ ಪುಷ್ಪಾಸ್ತ್ರನಂ ಬರಿಸಲು
ಹರಿಗೆ ಪೊಡಮಟ್ಟು ನಿಂದಿರ್ದೆನ್ನನೀಕ್ಷಣಂ
ಕರೆಸಿದಿರದೇಕೆನಲ್ ಹೇಮಕೂಟದೊಳಿರ್ಪ
ಹರನತಪಮಂ ಕೆಡಿಸಿ ಪಾರ್ವತಿಯೊಳೊಂದಿಸೆಂದಸುರಾರಿ ನೇಮಿಸಿದನು ೪೦

ಆ ಮಾತು ಕಿವಿಯೊಳಲಗುಡಿದಂತಿರಾಗಲ್ಕೆ
ಕಾಮಂ ಭಯಂಗೊಂಡು ಶಂಭುವಂ ಕೆಣಕೆ ನಿ
ರ್ಧೂಮಮಾಗೆನೆ ನಯನವಹ್ನಿಯಿಂದೀ ಮಾತನುಸಿರ್ವರೇ ನೀವೆನಲ್ಕೆ

ನನ್ನು ಕೇಳಿದನು. ೩೯. ವಿಷ್ಣುವಿಗೆ ನಮಸ್ಕರಿಸಿಬ್ರಹ್ಮನು ಹೇಳಿದನು-ಆ ತಾರಕನು ದುಷ್ಟ. ಅವನನ್ನು ಕೊಲ್ಲಬೇಕಾದರೆ ಈಶ್ವರನು ಗಿರಿಜೆಯಲ್ಲಿ ನೆರೆಯಬೇಕು. ಆ ವೀರ್ಯದಿಂದ ಹುಟ್ಟಿದವನಿಂದಲ್ಲದೆ ಈ ಕೆಲಸ ಸಾಧ್ಯವಿಲ್ಲ. ಆದರೆ ಶಿವನು ತನ್ನ ಪರಮ ಸತ್ಯವನ್ನು ತನ್ನ ಹೃದಯಮಧ್ಯದಲ್ಲಿ ಇರಿಸಿಕೊಂಡು ತನ್ನನ್ನು ತಾನೇ ಧ್ಯಾನಿಸುತ್ತಿದ್ದಾನೆ. ಅವನ ಯೋಗವನ್ನು ಕೆಡಿಸುವುದಕ್ಕೆ ಉಪಾಯವನ್ನು ಹುಡುಕಬೇಕು ಎಂದನು. ೪೦. ಶಿವನ ಘೋರ ತಪಸ್ಸನ್ನು ಕೆಡಿಸಲು (ಪುಷ್ಪಶರ) ಮನ್ಮಥನಿಂದಲ್ಲದೆ ಬೇರೆಯವರಿಂದ ಸಾಧ್ಯವಿಲ್ಲ ಎಂದು ವಿಷ್ಣು-ಬ್ರಹ್ಮ ಮೊದಲಾದವರು ನಿರ್ಧರಿಸಿ ಅವನನ್ನು ಬರಮಾಡಿದರು. ಅವನು ವಿಷ್ಣುವಿಗೆ ನಮಸ್ಕರಿಸಿ ನಿಂದು 'ನನ್ನನ್ನು ಇಷ್ಟೊಂದು ತ್ವರಿತವಾಗಿ ಕರೆಸಿದ ಕಾರಣವೇನು' ಎನ್ನಲು. ಹೇಮಕೂಟದಲ್ಲಿ ತಪದಿಂದಿರುವ ಈಶ್ವರನ ತಪೋಭಂಗ ಮಾಡಿ ಪಾರ್ವತಿಯೊಂದಿಗೆ ಅವನನ್ನು ಸೇರಿಸು ಎಂದು ವಿಷ್ಣು ಮನ್ಮಥನಿಗೆ ಆಜ್ಞಾಪಿಸಿದನು. ೪೧. ಆ ಮಾತನ್ನು ಕೇಳಿ ಮನ್ಮಥನಿಗೆ ಕಿವಿಯಲ್ಲಿ ಕತ್ತಿಯನ್ನು ಮುರಿದಂತಾಯಿತು. ಅವನು ಹೆದರಿ ಶಿವನನ್ನು ಕೆಣಕಿದರೆ ಅವನ ಕಣ್ಣಿನ ಬೆಂಕಿಯಿಂದ ನಾನು ಬೂದಿಯಾಗದಿರುತ್ತೇನೆಯೆ ? ಈ ಮಾತನ್ನು ನೀವು ಹೇಳುವುದು ಸರಿಯೇ ? ಎನ್ನಲು, ವಿಷ್ಣುವು

CC-0. Jangamwadi Math Collection. Digitized by eGangotri

ಈ ಮಹಾದೇವಗಣಕಾಗಿ ತನುವಂ ಕೊಡಲ್
ನೀ ಮಾಡಿದುದು ಸಫಲವೆಂದೊಡಂಬಡಿಸಿ ಲ
ಕ್ಷ್ಮೀಮನೋವಲ್ಲಭಂ ಕಳುಪಿದಂ ತಿಳುಪಿದಂ ಸುರರ ಚಿತ್ತದ ಭಯವನು ೪೧

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸವೆ ಬರೆದವರ್ಗೋದಿದರ್ಗರ್ಥವಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೨

**ಮೂವತ್ತನಾಲ್ಕನೆಯ ಸಂಧಿ ಸಂಪೂರ್ಣ**

ಅವನನ್ನು ಕುರಿತು, ಈ ದೇವತಾಸಮೂಹಕ್ಕಾಗಿ ನೀನು ನಿನ್ನ ದೇಹವನ್ನು ತ್ಯಾಗ ಮಾಡಲು ನಿರ್ಧರಿಸುವುದು ಸಫಲವಾಗುತ್ತದೆ ಎಂದು ಅವನನ್ನು ಒಪ್ಪಿಸಿ ಕಳುಹಿಸಿಕೊಟ್ಟು ದೇವತೆಗಳ ಮನದ ಹೆದರಿಕೆಯನ್ನು ನಿವಾರಿಸಿದನು. ೪೨. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತನಾಲ್ಕನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತೈದನೆಯ ಸಂಧಿ

ಸೂಚನೆ : ಕಾಮನತಿಗರ್ವದಿಂ ಸಕಲಸನ್ನಾಹದಿಂ
ಹೇಮಕೂಟಾಚಲಕೆ ನಡೆತಂದು ಹರನನು
ದ್ದಾಮ ಬಾಣಂಗಳಿಂದಿಸೆ ವಿರೂಪಾಕ್ಷನುರಿಗಣ್ಣಿನಿಂ ಸುಟ್ಟನವನ

ಅಂಗಭವನತುಳಸರ್ವಾಂಗದಾಹನ ಗುಣೋ
ತ್ತುಂಗನಯನಾಗ್ನಿಸ್ಫುಲಿಂಗ ಹಿಮಶೈಲಜಾ
ರ್ಧಾಂಗ ನತಜನಕಮಲಭೃಂಗ ಶಂಕರಕೃಪಾಪಾಂಗ ನಿರ್ಮಲ ಶುಭಾಂಗ
ಗಂಗಾತರಂಗಪ್ರಸಂಗತಜಟಾಪಟಲ
ಮಂಗಳಾತ್ಮಕ ಭಕ್ತಸಂಘಮಂ ರಕ್ಷಿಪುದು
ಹಿಂಗದನುದಿನವೆಸೆವ ಪಂಪಾವಿರೂಪಾಕ್ಷಲಿಂಗ ಸತ್ಕೀರ್ತಿಸಂಗ ೧

ತಂದೆಯಡಿಗೆರಗಿ ಕಳುಹಿಸಿಕೊಂಡು ಮನ್ಮಥಂ
ಮುಂದಮಾರುತನಂ ಸಮೀಪಕ್ಕೆ ಕರೆದು ನೀ
ನಿಂದೆಮ್ಮ ಚೈತ್ರನಂ ಸಕಲ ಬಲವಂ ಕೂಡಿಕೊಂಡು ಬರವೇಳೆಂದೆನೆ
ಅಂದವಂ ಬಂದಾ ವಸಂತಂಗೆ ಕಂದರ್ಪ
ನಿಂದುಧರನಂ ಜಯಿಸಲೈದುವಂ ನೀಂ ಬೇಗ
ದಿಂದೆ ಚತುರಂಗಮಂ ಕೂಡಿಬಹುದೆನಲಖಿಳ ಬಲವೆರಸಿ ಪೊರಮಟ್ಟನು ೨

ಸೂಚನೆ : ಮನ್ಮಥನು ಅತಿಯಾದ ಗರ್ವದಿಂದ ಸಕಲ ಸನ್ನಾಹದೊಡನೆ ಹೇಮಕೂಟಾಚಲಕ್ಕೆ ಬಂದು, ಶಿವನನ್ನು ತನ್ನ ಶ್ರೇಷ್ಠವಾದ ಬಾಣಗಳಿಂದ ಹೊಡೆಯಲು ಈಶ್ವರನು ಉರಿಗಣ್ಣಿನಿಂದ ಅವನನ್ನು ಸುಟ್ಟನು. ೧. ಮದನಾರಿ, ಉತ್ತುಂಗ ಗುಣಶಾಲಿ, ಕಿಡಿಗಳನ್ನು ಸೂಸುವ ಹಣೆಗಣ್ಣ, ಅರ್ಧನಾರೀಶ್ವರ, ಭಕ್ತಜನರೆಂಬ ಕಮಲಗಳಿಗೆ ತುಂಬಿಯಂತಹವನು, ಶಂಕರ, ಕೃಪಾಕಟಾಕ್ಷವುಳ್ಳವ, ನಿರ್ಮಲವಾದ ಮಂಗಳಕರವಾದ ದೇಹವುಳ್ಳವನು, ಗಂಗಾಧರ, ಮಂಗಳಾತ್ಮಕ, ಕೀರ್ತಿಶಾಲಿಯಾದ ಪಂಪಾವಿರೂಪಾಕ್ಷಲಿಂಗನೇ, ಸತ್ಕೀರ್ತಿಗಳಿಂದ ಕೂಡಿದವನೇ ಯಾವಾಗಲೂ ಭಕ್ತಸಮುದಾಯವನ್ನು ರಕ್ಷಿಸು. ೨. ಮನ್ಮಥನು ತಂದೆಯ ಪಾದಕ್ಕೆ ನಮಸ್ಕರಿಸಿ ಅವನಿಂದ ಬೀಳ್ಕೊಂಡು, ಮುಂದಮಾರುತನನ್ನು ಹತ್ತಿರಕ್ಕೆ ಕರೆದು, ನೀನು ಈ ದಿನ ನಮ್ಮ ಎಲ್ಲ ಸೈನ್ಯವನ್ನೂ ಕೂಡಿಕೊಂಡು ಬರುವಂತೆ ಚೈತ್ರನಿಗೆ ಹೇಳು ಎಂದನು. ಆಗ ವಸಂತನು ಬಂದನು. ಈ ರೀತಿ ಬಂದ ವಸಂತನನ್ನು ಕುರಿತು ಮನ್ಮಥನು ಚಂದ್ರಚೂಡನನ್ನು ಜಯಿಸಲು ಹೋಗೋಣ. ನೀನು ಬೇಗ ಚತುರಂಗಸೈನ್ಯವನ್ನು ಕೂಡಿಕೊಂಡು ಬಾ ಎನ್ನಲು, ಅವನು ಸಕಲ ಸೈನ್ಯದೊಡನೆ

CC-0. Jangamwadi Math Collection. Digitized by eGangotri

ಮಾವುಗಳ್ ಮದವೇರೆ ಮಲ್ಲಿಗೆ ಮನಂಗೊಳಿಸ
ಲಾ ವಿಮಲಚಂಪಕಂ ಸೊಂಪಡರೆ ಬಕುಳವಿರ
ದಾವರಿಸೆ ಮುಕುಳಮಂ ಪಾದರಿಗೆ ಪದವಿ ಪೆಚ್ಚಲ್ಕೆಯದಿರ್ಗಂತಿಯಲರ
ತೀವೆ ಪೊಸತಳಿರ್ಗಳನಶೋಕೆಗಳ್ ತಳೆಯೆ ಚೆಂ
ದಾವರೆಗಳಲರಿನುರೆ ಜೆಲ್ವಾಗೆ ಬನಬನದೊ
ಳೇವೇಳ್ವೆನಲರಂಬ ರಾಯನೆಡೆಗಾ ವಸಂತಂ ಬಂದನುತ್ಸವದೊಳು ೩

ಬಂದು ಕಾಣ್ಕೆಯನಿಕ್ಕಿ ಭಯಭರಿತಭಕ್ತಿಯಿಂ
ಕಂದರ್ಪರಾಯ ಚಿತ್ತಯಿಸೀಗಳೆನ್ನೊಡನೆ
ಬಂದ ಸೇನಾಸಮುದ್ರವನೆಂದು ಬಿನ್ನವಿಸುತಿರೆ ಕೇಳಿ ಚೈತ್ರನೊಡನೆ
ಇಂದುಧರನಿರ್ಪನಾ ಹೇಮಕೂಟಾಚಲದೊ
ಳಿಂದು ನಾವಾತನಲ್ಲಿಗೆ ಬೇಗ ಪೋಗಬೇ
ಕೆಂದು ಕರೆಸಿದೆವೆಂದು ಪೇಳ್ದು ಸಂಭ್ರಮದಿಂದೆ ಪೊರಮಡಲ್ಕನುವಾದನು ೪

ನವಪರಾಗದ ತಿಲಕಮಂ ರಚಿಸಿ ಮಲ್ಲಿಗೆಯ
ವಿವಿಧ ಮುಕುಳದ ಕಂಠಮಾಲೆಯಂ ತಳೆದು ಸೊಗ
ಸುವ ಕಂಜಗುಣದ ವಸನದ ಮಲ್ಲಗಾಸೆಯಂ ಬಿಗಿದುಟ್ಟು ಮಾಂದಳಿರೊಳು

ಹೊರಟನು. ೩. ವನವನಗಳಲ್ಲಿ ಮಾವುಗಳಿಗೆ ಮದವೇರಲು, ಮಲ್ಲಿಗೆಗಳು ಮನಸ್ಸನ್ನು ಆಕರ್ಷಿಸಲು, ಆ ಮನೋಹರವಾದ ಸಂಪಿಗೆ ಸೊಂಪುಗೂಡಲು, ಬಕುಳವು ಮೊಗ್ಗುಗಳಿಂದ ತುಂಬಲು, ಪಾದರಿಯ ಸ್ಥಾನ ಹೆಚ್ಚಲು, ಮಾಧವೀಲತೆ ಹೂವಿಂದ ತುಂಬಲು. ಅಶೋಕವೃಕ್ಷಗಳು ಹೊಸಚಿಗುರನ್ನು ಧರಿಸಲು, ಕೆಂದಾವರೆಗಳು ಹೂಗಳಿಂದ ಚೆಲುವಾಗಲು, ಏನು ಹೇಳಲಿ! ಮನ್ಮಥರಾಜನ ಬಳಿಗೆ ವಸಂತನು ಸಂತೋಷ ಸಂಭ್ರಮಗಳಿಂದ ಬಂದನು. ೪. ಹಾಗೆ ಬಂದು ಕಾಣಿಕೆಯನ್ನು ಅರ್ಪಿಸಿ, ಭಯಭಕ್ತಿಯಿಂದ, 'ಮನ್ಮಥರಾಜನೇ, ಆಲಿಸು ಈಗ ನನ್ನ ಜೊತೆಯಲ್ಲಿ ಬಂದಿರುವ ಸೇನಾಸಮೂಹವನ್ನು ನೋಡು' ಎಂದು ವಿಜ್ಞಾಪಿಸಿಕೊಂಡನು. ಅದನ್ನು ಕೇಳಿ ಮನ್ಮಥನು ಚೈತ್ರನನ್ನು ಕುರಿತು ಹೇಮಕೂಟಾಚಲದಲ್ಲಿ ಚಂದ್ರಶೇಖರನಿದ್ದಾನೆ. ಈಗ ನಾವು ಆತನ ಬಳಿಗೆ ಬೇಗನೆ ಹೋಗಬೇಕೆಂದು ನಿನ್ನನ್ನು ಕರೆಸಿದೆವು ಎಂದು ಹೇಳಿ ಸಂಭ್ರಮದಿಂದ ಹೊರಡಲು ಸಿದ್ಧನಾದನು. ೫. ಹೊಸಪರಾಗದ ತಿಲಕವನ್ನು ಇಟ್ಟು, ಮಲ್ಲಿಗೆಯ ನಾನಾ ರೀತಿಯ ಹೂಗಳ ಮೊಗ್ಗಿನ ಹಾರವನ್ನು ಧರಿಸಿ, ಶೋಭಿಸುವ ತಾವರೆಯ ದಾರದಿಂದ ನೇಯ್ದ ಬಟ್ಟೆಯ ವೀರಗಾಸೆಯನ್ನು ಬಿಗಿದು, ಮಾವಿನ ಚಿಗುರಿನಲ್ಲಿ ಮಾಡಿದ ಮುಂಗೈ ಪಟ್ಟಿಯನ್ನು ಕೆಂಪುಕಣಿ

CC-0. Jangamwadi Math Collection. Digitized by eGangotri

ಸವೆದ ಕೈಪೊಡೆಯ ಚೆಂಗಣಗಿಲೆಯ ಗೊಂಡೆಯುದ
ತವೆ ಮೆರೆವ ಕುಂದಕಿಂಕಿಣಿಯ ಪೂವಿನ ಬಿಲ್ಗೆ
ಸವಡಿಸಿದ ತುಂಬಿ ಮುಡಿವಾಳಗಳ ಸಿಂಜಿನಿಯ ಮುಂಜುಳಾಂಗಂ ಮೆರೆದನು ೫

ಎಸೆವ ಕಬ್ಬಿನಬಿಲ್ಲನುರೆ ಪಿಡಿದು ತುಂಬಿಗಳ
ಪೊಸ ತಿರುವನಳವಡಿಸಿ ನನೆಯಂಬುಗಳನು ಸೇ
ರಿಸಿನೋಡಿ ಪೆದೆಗಳೊಳ್ ತೀವಿ ಪೂವಿನ ಸರದ ಝಲ್ಲಿಗಳನಾಂತು
ಮಿಸುಪ ಕೇದಗಿಯೆಸಳ ಕಿಗ್ಗಟ್ಟ ಕಟ್ಟಿ ರಂ
ಜಿಸುವ ಪೂದೇರನಾ ರತಿಯು ಕೈವಿಡಿದಡರಿ
ಬಿಸಜಾತಪತ್ರಂಗಳಿಂದೆ ಪೊಂಬಾಳೆಗಳ ಚಮರದಿಂ ರಂಜಿಸಿದನು ೬

ತಳಿರ ಮಾಮರದಾನೆಗಳ ಗಿಳಿಯ ಕುದುರೆಗಳ
ಸಲೆ ರಥಾಂಗಂಗಳ ರಥಂಗಳ ವಿಲಾಸದಿಂ
ತಳರ್ವ ಕಾಂತಾಜನದ ಕಾಲಾಳ ಚಂದ್ರಮಂತ್ರಿಯ ವರವಸಂತನೆಂಬ
ದಳವಾಯ ಗಡಣಂಗಳಿಂ ಕಾವರಾಯನಳಿ
ಕುಳರವದ ಭೇರಿಯಂ ಪೊಯ್ಸುತ್ತೆ ಕೋಕಿಳಂ
ಗಳ ರವವ ಕಹಳೆ ಚಾಳಂಕಿಪಾಠಕರ ಕಳಕಳದಿಂದೆ ಪೊರಮಟ್ಟನು ೭

ಗಿಲೆಯ ಕುಚ್ಚನ್ನು ಸೊಗಸಾಗಿ ಕಾಣುವ ಕೋಲುಮಲ್ಲಿಗೆಯ ಕಿರುಗೆಜ್ಜೆಗಳನ್ನು ಹೂವಿನ ಬಿಲ್ಲಿಗೆ ಹೂಡಿದ ತುಂಬಿ ಮತ್ತು ಲಾಮಂಚದ ಬೇರುಗಳ ಬಿಲ್ಲಿನ ಹೆದೆಯನ್ನು ಹೊಂದಿ ಮನೋಹರವಾದ ದೇಹವುಳ್ಳ ಮನ್ಮಥನು ಪ್ರಕಾಶಿಸಿದನು. ೬. ಪ್ರಕಾಶಿಸುವ ಕಬ್ಬಿನ ಬಿಲ್ಲನ್ನು ಹಿಡಿದು, ದುಂಬಿಗಳ ಹೊಸಹೆದೆಯನ್ನು ಅಳವಡಿಸಿ, ಹೂವಿನ ಬಾಣಗಳನ್ನು ಹೂಡಿನೋಡಿ, ಹೆದೆಗಳ ಮೇಲೆ ಅರಳಿದ ಹೂವಿನ ಸರದಗೊಂಡೆಗಳನ್ನು ಧರಿಸಿ, ಅನಂತರ ಹೊಳೆಯುವ ಕೇದಿಗೆಯ ಎಸಳಿನ ಸಣ್ಣಗಂಟನ್ನು ಕಟ್ಟಿ, ಪ್ರಕಾಶಿಸುವ ಹೂವಿನ ತೇರನ್ನು ರತಿಯ ಕೈಹಿಡಿದುಕೊಂಡು ಹತ್ತಿದ ಮನ್ಮಥನು ತಾವರೆಯ ಹೂಗಳ ಕೊಡೆ ಮತ್ತು ಹೊಂಬಾಳೆಗಳ ಚಾಮರದಿಂದ ಕಂಗೊಳಿಸಿದನು. ೭. ಮಾವಿನಮರದ ಚಿಗುರುಗಳೇ ಆನೆಗಳು, ಗಿಳಿಗಳೇ ಕುದುರೆಗಳು, ಚಕ್ರವಾಕಪಕ್ಷಿಗಳೇ ರಥಗಳು, ವಿಲಾಸ ದಿಂದ ಚಲಿಸುವ ಸ್ತ್ರೀಸಮೂಹವೇ ಕಾಲಾಳು, ಚಂದ್ರನೇ ಮಂತ್ರಿ, ವಸಂತನೇ ಸೇನಾಪತಿ, ಈ ಎಲ್ಲ ಸಮೂಹದಿಂದ ಕೂಡಿಕೊಂಡು ಮದನರಾಜನು ತುಂಬಿಗಳ ಝೇಂಕಾರದ ಭೇರಿ ಯನ್ನು ಹೊಡೆಸುತ್ತ, ಕೋಗಿಲೆಗಳ ಕಂಠದ ಮಧುರಧ್ವನಿಯ ಕಹಳೆಗಳನ್ನು ಕೂಗಿಸುತ್ತ, ಚಾಳಂಕಪಕ್ಷಿಯೆಂಬ ವಂದಿಮಾಗಧರು ಪರಾಕು ಹೇಳುತ್ತಿರಲು ಹೊರಹೊರಟನು.

CC-0. Jangamwadi Math Collection. Digitized by eGangotri

ಒಸೆದು ಕೂಜಿಸುವ ಕೋಕಿಲರವಂ ಬೃಂಹಿತಂ
ಮಿಸುಪ ಕೆಂದಳಿರೆ ಪಣೆಗಪುರ್ವ ಸಿಂಧೂರವಾ
ಲಸಿತಪಟ್ಪದಿಗಳೆರಗಿನಿಗಂಪು ಮದಗಂಧಮುಲರ್ಗಣೆಗಳೇ ಕೋಡ್ಗಳು
ನಸುಗಾಳಿಗೊಲೆದಾಡುವೆಳೆಗೊಂಬೆ ಸೋಂಡಿಲಾ
ಗಸಕೆದ್ದ ನಟ್ಟೆಗೊಂಬೆಸೆವ ಠಕ್ಕೆಯುಮಾಗ
ಲಸಮಶರನೆಡಬಲದೊಳಿಟ್ಟಣಿಸಿ ನಡೆವ ಮಾಮರದಾನೆಗಳ್ ಮೆರೆದುವು ೮

ಗಳದ ಕಪ್ಪಿನ ಗೆರೆಯೆ ವಾಘೆ ರಕ್ಕೆಗಳೆ ಪೈ
ಗಳವಟ್ಟ ಮರಕತದ ಪೊಸ ಪಕ್ಕರಕ್ಕೆ ಮೇ
ಲುಲಿಯೆ ಹೇಷಾರವಂ ಗತಿಗಮಕವೇ ಪಂಚಧಾರಾವಿಶೇಷವಾಗೆ
ನಳಿನಸಾಯಕ ಚಕ್ರವರ್ತಿಯಿಕ್ಕೆಲದೊಳಗೆ
ಪೊಳೆದ ಖೇಚರಭೂಚರಂಗಳೊಳ್ ನಡೆಗೊಳ್ವ
ಗಿಳಿಗುದುರೆಗಳ ಹಿಂದುಹಿಂದು ರಂಜಿಸಿದುವಂದೇನೆಂದು ಬಣ್ಣಿಸುವೆನು ೯

ತನುತನುಗಳೇ ರಥದ ಗಾಲಿಯೆರಡೊಂದಾದ
ಮನವೆ ರಂಜಿಸುವಚ್ಚು ಬಾಯ್ಗೂಟದಿಂದೊಗೆದ
ದನಿಯೆ ಚೀತ್ಕಾರಮೆಲರಲೆಪದಿಂದೆದ್ದ ಗರಿ ಮೆರವ ಠಕ್ಕೆಯುಮುದಾಗೆ

೮. ಒಗ್ಗಿನಿಂದ ಕೂಗುವ ಕೋಗಿಲೆಗಳ ಧ್ವನಿಯೇ ಘೀಂಕಾರ, ಹೊಳೆಯುವ ಕೆಂಪಾದ ಚಿಗುರೇ ಹಣೆಗೆ ಹಚ್ಚಿದ ಸಿಂಧೂರ, ಜಡಸ್ವಭಾವದ ತುಂಬಿಗಳು ಎರಗಿದ ಹೂವಿನ ವಾಸನೆಯೇ ಆನೆಯ ಮದಜಲ, ಹೂವಿನಿಂದ ನಿಬಿಡವಾಗಿ ತುಂಬಿದ ಕೊಂಬೆಗಳೇ ಕೊಂಬುಗಳು, ನಿಧಾನವಾಗಿ ಬೀಸುವ ಗಾಳಿಗೆ ತೂಗಾಡುವ ಎಳೆಯ ಕೊಂಬೆಗಳೇ ಸೊಂಡಿಲು, ಆಕಾಶಕ್ಕೆ ಎದ್ದ ನೇರವಾದ ಕೊಂಬೆಯೇ ಬಾವುಟವಾಗಲು (ಪಂಚಬಾಣನ) ಮನ್ಮಥನ ಎಡಬಲಗಳಲ್ಲಿ ಗುಂಪುಗೂಡಿ ನಡೆಯುವ ಮಾವಿನಮರವೆಂಬ ಆನೆಗಳು ಮೆರೆದುವು. ೯. ಕೊರಳಿನಲ್ಲಿರುವ ಕಪ್ಪುಗೆರೆಯೇ ಲಗಾಮು, ರೆಕ್ಕೆಗಳೇ ಮೈಗೆ ತೊಡಿಸಿದ ಮರಕತದ ಹೊಸಪಕ್ಕರಕ್ಕೆ, ಮಧುರವಾದ ಧ್ವನಿಯೇ ಕೆನೆಯುವ ಧ್ವನಿ, ನಡಿಗೆಯ ಸೊಬಗೇ ಕುದುರೆಯ ಐದು ರೀತಿಯ ನಡಿಗೆಯಾಗಲು ಕಮಲಶರನಾದ ಮನ್ಮಥಚಕ್ರವರ್ತಿಯ ಎರಡು ಪಕ್ಕಗಳಲ್ಲಿಯೂ ಹೊಳೆಯುವ ಆಕಾಶ ಮತ್ತು ಭೂಮಿಗಳಲ್ಲಿ ನಡೆದುಬರುತ್ತಿದ್ದ ಗಿಳಿಯೆಂಬ ಕುದುರೆಗಳ ಹಿಂದುಹಿಂದೇ ಪ್ರಕಾಶಿಸಿದುವು. ಅದನ್ನು ಏನೆಂದು ಬಣ್ಣಿಸಲಿ. ೧೦. ತಮ್ಮೆರಡು ದೇಹಗಳೇ ರಥದ ಎರಡುಗಾಲಿಗಳು, ಒಂದಾದ ಮನಸ್ಸೇ ಪ್ರಕಾಶಿಸುವ ಅಚ್ಚು, ಬಾಯಿಯೆಂಬ ಗೂಟದಿಂದ ಹೊರಟ ಧ್ವನಿಯೇ ರಥದ ಚೀತ್ಕಾರ, ಬೀಸುವ ಗಾಳಿಯಿಂದ ಮೇಲೆದ್ದ ಗರಿಗಳೇ ಹೊಳೆಯುವ ಧ್ವಜವಾಗಲು ಮನ್ಮಥಮಹಾ

CC-0. Jangamwadi Math Collection. Digitized by eGangotri

ಮನಸಿಜಮಹಾಮಂಡಲೇಶನೆಡಬಲಗಳೊಳ್
ಮಿನುತವಿಭವದ ವಿಡಾಯದೊಳೆ ನಡೆಗೊಳ್ವ ನೂ
ತನರಥಾಂಗಂಗಳ ರಥಂಗಳಿಟ್ಟಣಿಸಿ ಸಂಭ್ರಮದಿಂದೆ ನಡೆಗೊಂಡುವು ೧೦

ಕುಡುವುರ್ಬುಗಳೆ ಬಿಲ್ ಕಟಾಕ್ಷಂಗಳಂಬುಗಳ್
ನಿಡುದೋಳ್ಗಳೇ ಲೌಡಿ ಕೂರುಗುರ್ಗಳೇ ಸುರಗಿ
ತೊಡೆದ ಕತ್ತುರಿಯ ಬೊಟ್ಟೇ ಹರಿಗೆ ಬಾಸೆಗಳೆ ಕರವಾಳ್ಗಳಾಗೆ ಕೂಡೆ
ಕಡುತವಕದಿಂದೆ ಮನ್ಮಥನ ಹೂವಿನ ತೇರಿ
ನೆಡಬಲದೊಳಿಟ್ಟಣಿಸಿ ಪರಿದು ಪಂರಿಸಿ ಪೊಳಕಿ
ನಡೆವ ಕಾಲಾಳ ಮಂಗಡದ ಸಂದಣಿಯ ಸಂಭ್ರಮವನೇವಣ್ಣಿಸುವೆನು ೧೧

ಚೂಳಿಯೊಳ್ ಮೈದೋರಿದಂ ಮುಂದಮಾರುತಂ
ಪಾಳಿಯಿಂ ನಡೆಸಿದಂ ಸೇನೆಯಂ ಸೇನಾನಿ
ಪೇಳಲೇಂ ಸಕಲ ಭರಭಾರಮಂ ಧರಿಸಿದಂ ಚಂದ್ರಮಂ ಮದನಬಲದ
ಘೋಳಿಟ್ಟುದಖಿಳ ಖಗವರವಾದ್ಯನಿಸ್ವನಂ
ಧೂಳಿ ಮುಸುಕಿದುದು ಬ್ರಹ್ಮಾಂಡಮಂ ರತಿಯು ಸ
ಮ್ಮೇಳದಿಂದ್ಯೆದುವಂಗಜನ ಚಾತುರ್ಬಲಂ ನಡೆದುದೀಶ್ವರನ ಮೇಲೆ ೧೨

ಇದಿರೊಳಾನದೆ ತೊಲಗು ತೊಲಗು ಮನ್ಮಥನೃಪನ
ಮದದಾನೆವಿಂಡೈದುತಿದೆಕೊ ಕಾಯಜನ ತಳ
ಪದ ಖಡ್ಗಮೈತರ್ಪುತಿದೆಕೊ ಕಾಮನ ಪೊಸ ಕಠಾರವಿದೆ ಪೋಗು ಪೋಗು

ಮಂಡಲೇಶ್ವರನ ಎಡಬಲಗಳಲ್ಲಿ ಅತಿಯಾದ ವೈಭವ ಉತ್ಸಾಹದಿಂದ ನಡೆಯುತ್ತಿರುವ ಚಕ್ರವಾಕಪಕ್ಷಿಗಳೆಂಬ ರಥಗಳು ಗುಂಪುಗೂಡಿ ಸಂಭ್ರಮದಿಂದ ಮುಂದುವರಿದುವು. ೧೧. ಕೊಂಕಿದ ಹುಬ್ಬುಗಳೇ ಬಿಲ್ಲುಗಳು, ಕಡೆಗಣ್ನೋಟಗಳೇ ಬಾಣಗಳು, ಉದ್ದವಾದ ತೋಳುಗಳೇ ಕಬ್ಬಿಣದ ಆಯುಧಗಳು, ಚೂಪಾದ ಉಗುರುಗಳೇ ಕಠಾರಿಗಳು, ಹಣೆ ಗಿಟ್ಟುಕೊಂಡಿದ್ದ ಕಸ್ತೂರಿಯ ಬೊಟ್ಟೇ ಗುರಾಣಿ, ಹೊಕ್ಕಳ ಕೂದಲೇ ಕತ್ತಿಗಳಾಗಲು, ಅತಿಯಾದ ತವಕದಿಂದ ಕೂಡಿ ಮನ್ಮಥನ ಹೂವಿನ ತೇರಿನ ಎಡಬಲದಲ್ಲಿ ಗುಂಪುಗೂಡಿ ಸಂಭ್ರಮದಿಂದ ಚಲಿಸಿ, ನರ್ತಿಸಿ ಪ್ರಕಾಶಿಸಿ ನಡೆಯುವ ಕಾಲಾಳ (ಸ್ತ್ರೀಯರ) ಸಮೂಹದ ಗುಂಪಿನ ಸಂಭ್ರಮವನ್ನು ಏನೆಂದು ವರ್ಣಿಸಲಿ. ೧೨. ಸೇನೆಯ ಮುಂಭಾಗದಲ್ಲಿ ಮಂದ ಮಾರುತನು ಕಾಣಿಸಿಕೊಂಡನು. ಸೇನಾಧಿಪತಿ ಕ್ರಮವಾಗಿ ಸೈನ್ಯವನ್ನು ನಡೆಸಿದನು. ಹೇಳಲೇನಿದೆ ! ಮನ್ಮಥನ ಸೈನ್ಯದ ಯುದ್ಧದ ಎಲ್ಲ ಭಾರವನ್ನೂ ಚಂದ್ರನು ವಹಿಸಿ ಕೊಂಡನು. ಎಲ್ಲ ಪಕ್ಷಿಗಳ ರಣವಾದ್ಯಗಳು ಮೊಳಗಿದುವು. ಧೂಳಿಯು ಬ್ರಹ್ಮಾಂಡ ವನ್ನು ಆವರಿಸಿತು. ರತಿಯೊಡನೆ ಕೂಡಿ ನಡೆಯುತ್ತಿರುವ ಮನ್ಮಥನ ಚತುರಂಗಸೈನ್ಯವೂ ಈಶ್ವರನ ಮೇಲೆ ಯುದ್ಧಕ್ಕೆ ಹೊರಟಿತು. ೧೩. ಮನ್ಮಥನ ಮದದಾನೆಗಳ ಹಿಂಡು ಬರುತ್ತಿವೆ ಇಗೊ, ಎದುರಿನಲ್ಲಿ ಅಡ್ಡಬರದೆ ತೊಲಗು ತೊಲಗು, ಮದನನ ಹೊಳೆಯುವ

CC-0. Jangamwadi Math Collection. Digitized by eGangotri

ಅದಟುಕೊಳ್ಳದು ಸಾರೆನುತ್ತೆ ಸನ್ಮುನಿಜನಕೆ
ಬೆದರಿಕೆಯನಿಕ್ಕಿ ಸಾರುವ ತೆರದೊಳೊಡನೆ ಕೂ
ಗಿದುವು ಮನ್ಮಥನ ಪೂವಿನ ತೇರ ಮುಂಗಡೆಯ ಕಹಳೆಗಳದೇನೆಂಬೆನು ೧೩

ಚೂಳಿಗಾಳಿಯ ದನಿಯನಾಲಿಸುತೆ ನೆಲದೊಳಗೆ
ಪೂಳಿರ್ದ ತನುಗಳಂ ಕೀಳಲಾರದೆ ಮದನ
ದಾಳಿಯಂ ಕಂಡು ತರುಗುಲ್ಮಪುತ್ತ್ರದರ್ದೊಡಲನಲುಗಲಾರದೆ ಭರದೊಳು
ಘೋಳಿಟ್ಟು ಕಣ್ಗೆಟ್ಟು ಬಾಯ್ಬಿಟ್ಟು ಮರವಟ್ಟು
ಬಾಳಗೊಲೆಯಂ ಬಂದನೆಂತೆನುತೆ ತಾಪಸರ್
ಬೇಳಾಗಿ ಕಾಳಾಗಿ ಮಮ್ಮಲಂ ಮರುಗಿದರ್ ತತ್‍ಕ್ಷಣದೊಳು ೧೪

ಕದಡಿ ತೊಟ್ಟಿಕ್ಕುವ ವಿಭೂತಿಗಳ ಬೆಮರಿನಿಂ
ಕೆದರಿ ನೆಲಕೆಳಲ್ವ ಜಡೆಗಳನಕ್ಷಮಾಲೆಯಿಂ
ಗದಗದಿಪ ಕಂಠದ ಶಿವಸ್ಮರಣೆಯಂ ಕಮಂಡಲು ದಂಡಗಳನೆ ಮರೆದು
ಮದನನಿದೆ ಬಂದನೇಳೇಳೆಂದು ಕಣ್ಗೆಟ್ಟು
ಬೆದರಿ ಕೈಕಾಲ್ಗೆಟ್ಟು ಕಳವಳಿಸಿ ಬೆಬ್ಬಳಿಸಿ
ಕುದಿದೋಡಿದರ್ ತಾಪಸರ್ ಕಾಮಭಯಮಾರನಳ್ಕಿಸದು ಮೂಜಗದೊಳು ೧೫

ಕತ್ತಿ ಬರುತ್ತಿದೆ. ಇಗೊ ಕಾಮನ ಹೊಸದಾದ ಕಠಾರಿ ಇದೇ, ಹೋಗು-ಹೋಗು. ನಿನ್ನ ಸಾಮರ್ಥ್ಯವು ನಿಷ್ಪ್ರಯೋಜಕ ನಡೆನಡೆ ಎನ್ನುತ್ತ ಮುನಿಸಮೂಹಕ್ಕೆ ಹೆದರಿಕೆಯನ್ನುಂಟು ಮಾಡಿ ಮುಂದುವರಿಯುವ ರೀತಿಯಲ್ಲಿ ಮನ್ಮಥನ ಹೂವಿನ ತೇರಿನ ಮುಂಭಾಗದ ಕಹಳೆಗಳು ಒಂದೇ ಬಾರಿಗೆ ಮೊಳಗಿದುವು. ೧೪. ಆ ಕ್ಷಣದಲ್ಲಿ ಮುಂಭಾಗದ ಸೈನ್ಯದ ಶಬ್ದವನ್ನು ಕೇಳುತ್ತ, ನೆಲದೊಳಗೆ ಹೂತಿದ್ದ ಶರೀರಗಳನ್ನು ಕೀಳಲಾರದೆ, ಮನ್ಮಥನ ಧಾಳಿಯನ್ನು ನೋಡಿ, ಮರ, ಪೊದೆ, ಹುತ್ತಗಳಲ್ಲಿ ಅಡಗಿದ್ದ ಶರೀರಗಳನ್ನು ಅಲುಗಾಡಿಸ ಲಾರದೆ ಗೊಳಿಟ್ಟು,ಕಂಗೆಟ್ಟು, ಬಾಯ್ಬಿಟ್ಟು, ಎಚ್ಚರತಪ್ಪಿ, ಜೀವದ ಕೊಲೆಗಾರ ಬಂದನು· ಇನ್ನೇನು ಗತಿ ಎನ್ನುತ್ತ ಋಷಿಗಳು ಕಳವಳಿಸಿ, ಕೆಟ್ಟು, ಹಾಳಾಗಿ ಮಮ್ಮಲ ಮರುಗಿದರು. ೧೫. ಬೆವರಿನಿಂದ ಕದಡಿಹೋಗಿ ತೊಟ್ಟಿಕ್ಕುತ್ತಿದ್ದ ವಿಭೂತಿಯಿಂದ, ಕೆದರಿ ನೆಲಕ್ಕೆ ಜೋತಾಡುವ ಜಡೆ ಮತ್ತು ರುದ್ರಾಕ್ಷಿಮಾಲೆಗಳಿಂದ, ನಡುಗುವ ಕಂಠದಿಂದ ಹೊರಡುವ ಶಿವನನಾಮ ಜಪಮಾಡುತ್ತ, ದಂಡ-ಕಮಂಡಲುಗಳನ್ನು ಮರೆತು, ಇಗೋ, ಮನ್ಮಥನು ಬಂದನು, ಏಳು, ಏಳು ಎಂದು ಕಂಗೆಟ್ಟು, ಹೆದರಿ, ಕೈಕಾಲ್ಗಳಲ್ಲಿ ಶಕ್ತಿಯಿಲ್ಲದೆ ಕಳವಳ ಗೊಂಡು, ಗಾಬರಿಯಾಗಿ ಸಂಕಟಪಡುತ್ತ ಋಷಿಗಳು ಓಡಿದರು. ಕಾಮನಭಯವು

CC-0. Jangamwadi Math Collection. Digitized by eGangotri

ಯತಿಗಳಿಂದೆರಗಿಸಿಕೊಳುತ್ತೆ ಕಾಣ್ಕೆಗಳುಮಂ
ವ್ರತಿಗಳಿಂದಿಕ್ಕಿಸಿಕೊಳುತ್ತೆ ಯೋಗೀಶ್ವರರ
ಮತಿಗಳೊಳ್ ತಮ್ಮ ಮುದ್ರಾಂಕಿತವನೊತ್ತುತ್ತೆ ಯಮಿಗಳಂ ಕೊಂದೆತ್ತುತೆ
ಶ್ರುತಿಸುಮಾರ್ಗಿಗಳ ಸರ್ವಸ್ವಮಂ ಕೈಕೊಳು
ತ್ತತಿಜಿತೇಂದ್ರಿಯರನಂಗನೆಯರೊಳ್ ನೆರೆಪುತು
ನ್ನತಹರುಷದಿಂದಂಗಭವಚಕ್ರವರ್ತಿ ನಡೆಗೊಂಡನೀಶ್ವರನ ಮೇಲೆ ೧೬

ಮುನಿನಿಕರವಾರಾಶಿವಡಬಾನಲಂ ಯೋಗಿ
ಜನಮದದ್ವಿಪಕುಂಭವಿದಳನಮೃಗೇಂದ್ರ ಪಾ
ವನನೈಷ್ಠಿಕವ್ರಜಮನೋಹರಿಣ ಶಾರ್ದೂಲ ಯತಿಮೇಘಚಂಡ ಪವನ
ಘನಜಿತೇಂದ್ರಿಯಕುಧರಕುಲಿಶ ವೈರಾಗಿಜನ
ವನದವಾನಲನೆಂದು ಪಾಠಕಾವಳಿಯೆಂದು
ಮನಸಿಜನ ಬಿರುದ ಕೊಂಡಾಡುತಿರೆ ಬೇಗ ಪಂಪಾಕ್ಷೇತ್ರಕೈತಂದನು ೧೭

ಪಟ್ಟದ ಮದದ್ವಿಪಂ ಮುಗ್ಗಿದುದು ಮುಂದಡ್ಡ
ಗಟ್ಟಿ ನರಿಯೂಳ್ದುವುರೆ ನಡೆಗೊಂಬ ಸೈನಿಕರ
ನಟ್ಟನಡುವಡಹಾಯ್ದು ಪೋಯ್ತು ಸಿಕ್ಕದೆ ಮೊಲಂ ಗಜ ಹಯಂಗಳ ಕಣ್ಣೊಳು

ಮೂರು ಲೋಕಗಳಲ್ಲಿಯೂ ಯಾರನ್ನು ತಾನೆ ಹೆದರಿಸದೆ ಬಿಡುತ್ತದೆ ? ೧೬. ಯತಿಗಳಿಂದ ನಮಸ್ಕರಿಸಿಕೊಳ್ಳುತ್ತ, ವ್ರತಾರೂಢರಾದ ಯತಿಗಳಿಂದ ಕಾಣಿಕೆಗಳನ್ನು ಸ್ವೀಕರಿಸುತ್ತ, ಯೋಗೀಶ್ವರರ ಬುದ್ಧಿಯ ಮೇಲೆ ತಮ್ಮ ಮುದ್ರೆಯನ್ನು ಒತ್ತುತ್ತ, ಯತಿಗಳನ್ನು ಕೊಂದು ಎತ್ತುತ್ತ, ವೇದವೇ ಮೊದಲಾದುವನ್ನು ಅನುಸರಿಸಿ ಸನ್ಮಾರ್ಗದಲ್ಲಿದ್ದವರಿಂದ ಎಲ್ಲವನ್ನೂ ಕಿತ್ತುಕೊಳ್ಳುತ್ತ, ಅತಿಜಿತೇಂದ್ರಿಯರನ್ನು ಸ್ತ್ರೀಯರೊಡನೆ ಕೂಡಿಸುತ್ತ, ಅತಿಯಾದ ಸಂತೋಷದಿಂದ ಮನ್ಮಥಚಕ್ರವರ್ತಿಯು ಈಶ್ವರನ ಮೇಲೆ ಯುದ್ಧಕ್ಕೆ ಹೊರಟನು. ೧೭. ಮುನಿಸಮೂಹವೆಂಬ ಸಮುದ್ರಕ್ಕೆ ಬಡಬಾನಲ, ಯೋಗಿಜನವೆಂಬ ಮದಿಸಿದ ಆನೆಯ ಕುಂಭಸ್ಥಳವನ್ನು ಸೀಳುವ ಸಿಂಹ, ಪಾವನವಾದ ನಿಷ್ಠೆಯಿಂದ ಕೂಡಿದ ಜನರ ಸಮೂಹದ ಮನಸ್ಸೆಂಬ ಸಿಂಹಕ್ಕೆ ಶಾರ್ದೂಲದಂತಹವನು, ಯತಿಗಳೆಂಬ ಮೋಡಗಳಿಗೆ ಭಯಂಕರವಾದ ಬಿರುಗಾಳಿ, ಶ್ರೇಷ್ಠ ಜಿತೇಂದ್ರಿಯರು ಎಂಬ ಪರ್ವತಗಳಿಗೆ ವಜ್ರಾಯುಧ, ವೈರಾಗಿಜನಗಳೆಂಬ ವನಕ್ಕೆ ಕಾಳ್ಗಿಚ್ಚು ಎಂದು ವಂದಿಮಾಗಧರು ಮನ್ಮಥನ ಬಿರುದುಗಳನ್ನು ಕೊಂಡಾಡುತ್ತಿರಲು ಬೇಗನೆ ಪಂಪಾಕ್ಷೇತ್ರಕ್ಕೆ ಬಂದನು. ೧೮. ಆಗ ಪಟ್ಟಣದ ಆನೆ ಮುಗ್ಗರಿಸಿತು. ಎದುರಿನಲ್ಲಿ ಅಡ್ಡಗಟ್ಟಿ ನರಿಗಳು ಕೂಗಿಕೊಂಡವು. ಕೈಗೆ ಸಿಕ್ಕದೆ ಮೊಲವು ಚಲಿಸುತ್ತಿದ್ದ ಸೈನ್ಯದ ನಡುವೆ ತೂರಿ ಹೋಯಿತು. ಆನೆ-ಕುದುರೆಗಳ ಕಣ್ಣಿನಲ್ಲಿ ನೀರು ಸುರಿದುವು. ಹೂವಿನ ರಥಕ್ಕೆ ಕಟ್ಟಿದ್ದ

CC-0. Jangamwadi Math Collection. Digitized by eGangotri

ಬಟ್ಟಾಡಿದುವು ಕಂಬನಿಗಳಲರ ತೇರಿಂಗೆ
ಕಟ್ಟಿದ ಹಯಂ ನೊಗನನೀಡಾಡಿ ದೆಸೆದೆಸಗೆ
ಕೆಟ್ಟೋಡಿದುವು ಸ್ಮರನ ದಳದೊಳಾಯ್ತುತ್ಪಾತಶತಮದೇಂವಣ್ಣಿಸುವೆನು ೧೮

ಮಾರನೊಡನಾಗ ಚೈತ್ರಂ ಪೇಳ್ದನಪಜಯಂ
ಬಾರದಿರದವಶಕುನಮಂ ಮೀರೆ ತಿರುಗೆನ
ಲ್ಕೋರಂತೆ ದಿವಿಜರ್ಗೆ ನಂಬುಗೆಯನಿತ್ತ ಬಳಿಕಾದುದಂ ಕಾಣ್ಬೆನೆನುತೆ
ದಾರಿವಿಡಿದೈತಂದು ಹೇಮಕೂಟಾಚಲ
ದ್ವಾರದೊಳಗಿರ್ದ ನಂದೀಶನಂ ಕಂಡು ಪರಿ
ವಾರಮಳವಳಿದು ಕಳವಳಿಸಿದುದು ವಿಾರಿ ಪೋಗಲಂಜಿ ಶಂಕರನ ಪೊರೆಗೆ ೧೯

ಹರನೆಡೆಗೆ ನಡೆವ ತೆರನಂ ಕಾಣದಾ ಕುಸುಮ
ಶರನಧಿಕಚಿಂತೆಯಿಂದಿರೆ ಪೂಗಳಂ ಕೊಂಡು
ಗಿರಿತನುಜೆ ಪುಷ್ಪಕದೊಳಾಳಿಯರ್ವೆರಸಿ ಬರೆ ಮನ್ಮಥಂ ಕಂಡು ನಮಿಸೆ
ತರಳ ನೀನಾರೆಂದು ಬೆಸಗೊಳಲ್ಕಾಂ ಪುಷ್ಪ
ಶರನಭವನಂ ನಿಮ್ಮೊಳೊಂದಿಸೆಂದಮರಕುಲ
ಮೊರೆಯೆ ಬಂದೆಂ ನಂದಿಯಂ ಕಂಡು ಪೋಗಲಂಜಿದೆನೆಂದೊಡಿಂತೆಂದಳಂ ೨೦

ಕುದುರೆಗಳು ನೊಗವನ್ನು ಬಿಸುಟು ದಿಕ್ಕುಗೆಟ್ಟು ಓಡಿದುವು. ಹೀಗೆ ಮನ್ಮಥನ ಸೈನ್ಯದಲ್ಲಿ ನೂರಾರು ಅಪಶಕುನಗಳು ಆದವು. ಅದನ್ನು ಏನೆಂದು ಬಣ್ಣಿಸಲಿ ? ೧೯. ಆಗ ಮನ್ಮಥನನ್ನು ಕುರಿತು ವಸಂತನು—ಅಪಶಕುನವನ್ನು ಧಿಕ್ಕರಿಸಿ ಹೋದರೆ ಸೋಲು ಉಂಟಾಗದೆ ಇರುವುದಿಲ್ಲ, ಹಿಂತಿರುಗು ಎಂದನು. ಒಂದೇಸಮನೆ ದೇವತೆಗಳಿಗೆ ನಂಬುಗೆಯನ್ನು ಕೊಟ್ಟಿದ್ದೇನೆ. ಬಳಿಕ ಮುಂದಾಗುವುದನ್ನು ಎದುರಿಸುತ್ತೇನೆ ಎಂದು ದಾರಿ ಹಿಡಿದು ಬಂದು, ಹೇಮಕೂಟಗಿರಿಯ ಬಾಗಿಲಿನಲ್ಲಿದ್ದ ನಂದಿಯನ್ನು ನೋಡಿ ಮದನನ ಪರಿವಾರದ ಜನ ಅವನನ್ನು ದಾಟಿ ಈಶ್ವರನ ಬಳಿಗೆ ಹೋಗಲು ಧೈರ್ಯವನ್ನು ಕಳೆದುಕೊಂಡು ಕಳವಳಿಸಿತು. ೨೦. ಶಿವನ ಬಳಿಗೆ ಹೋಗುವ ರೀತಿಯನ್ನು ಕಾಣದೆ ಮನ್ಮಥನು ಅತಿಯಾದ ಚಿಂತೆಯಿಂದ ಇದ್ದನು. ಆಗ ಹೂಗಳನ್ನು ತೆಗೆದುಕೊಂಡು ಪಾರ್ವತಿಯು ಪುಷ್ಪಕವಿಮಾನದಲ್ಲಿ ಸೇವಕಿಯರ ಜೊತೆಯಲ್ಲಿ ಬಂದಳು. ಅವಳನ್ನು ನೋಡಿ ಮನ್ಮಥನು ನಮಸ್ಕಾರ ಮಾಡಿದನು. ಪಾರ್ವತಿಯು ಅವನನ್ನು ಕುರಿತು ಬಾಲಕನೆ, ನೀನಾರು ಎಂದು ಕೇಳಿದಳು. ನಾನು ಮನ್ಮಥ, ನಿಮ್ಮನ್ನು ಈಶ್ವರನ ಜೊತೆಗೂಡಿಸಲು ದೇವತೆಗಳು ನನಗೆ ನಿಯಮಿಸಲು ಬಂದೆ. ನಂದಿಯನ್ನು ನೋಡಿ ಒಳಗೆ ಹೋಗಲು ಹೆದರಿದೆ ಎನ್ನಲು



CC-0. Jangamwadi Math Collection. Digitized by eGangotri

ಎನ್ನ ಪುಷ್ಪಕದ ಮರೆಯೊಳಗೆ ಬಾರೈ ಮದನ
ಮುನ್ನ ದಿವಿಜರ್ಗಿತ್ತ ಮಾತ ನೀಂ ಸಲಿಸೆನಲ್
ಪನ್ನಗಾಭರಣನಿನಪಾಯಮಾಪ್ಪುದೆನಲ್ಕಂಜದಿರು ಭೀತಿ ಬೇಡ
ಎನ್ನ ನೀ ನಂಬಿ ಬಾರೆಂದು ಸಂತೈಸಿ ಮನ
ದನ್ನನೆಡೆಗಂಗಜಂವೆರಸು ನಡೆತಂದಭವ
ನನ್ನೇಮದಿಂ ಪೂಜಿಸಲ್ ಕಾವನಿನಿವಿಲ್ಲಿಗಳಿವೆದೆಯನೇರಿಸಿದನು ೨೧

ಮದನನಾ ದೇವಿಯುರ ಹಿಂತೆ ನಿಂದುನ್ಮದನ
ಮದನ ಮೋಹನ ವಶೀಕರಣ ಸಂತಾಪಮಂ
ಬ್ಬಾದ ಮಹಾಬಾಣಂಗಳಿಂ ಕ್ರಮದೊಳೆಸೆಯೆ ಶಿವನಂ ತಾಗಲಂಜಿ ಮರಳೆ
ಮದಮಡಗಿ ಸರಳೈದರಿಂದಲೊಂದೇ ಬಾರಿ
ಬೆದರದಾರ್ದೆಸೆಯಲಾ ಶಿವನಂಗಮಂ ತಾಗೆ
ಹೃದಯದೊಳಗರಿವು ತೋರಲ್ ವಿರೂಪಾಕ್ಷನತಿಕೋಪದಿಂದೀಕ್ಷಿಸಿದನು ೨೨

ನೋಡಲುರಿಗಣ್ಣಿನಿಂ ಮದನನ ಕಳೇವರಂ
ಕೂಡೆ ಭುಗಿಭುಗಿಲೆಂದು ಬೆಂದು ಪೋದುದು ಹರಂ
ನಾಡೆ ತದ್ಭಸ್ಮಮಂ ಸರ್ವಾಂಗಕುದ್ಧೂಳನಂಗೈದು ಪಾರ್ವತಿಯನು

ಪಾರ್ವತಿಯು ಈ ರೀತಿ ಎಂದಳು. ೨೧. ನನ್ನ ಪುಷ್ಪಕವಿಮಾನದ ಮರೆಯಲ್ಲಿ ಬಾರಯ್ಯ ಮನ್ಮಥ. ಈ ಮೊದಲೇ ದೇವತೆಗಳಿಗೆ ಕೊಟ್ಟ ಮಾತನ್ನು ನೀನು ನಡೆಸು ಎಂದು ಹೇಳಲು, ಈಶ್ವರನಿಂದ ನನಗೆ ಅಪಾಯ ಉಂಟಾಗುತ್ತದೆಂದು ಮನ್ಮಥನು ಹೇಳಿದ. ಆಗ ಗಿರಿಜೆಯು ಅದಕ್ಕಾಗಿ ಹೆದರಬೇಡ. ಧೈರ್ಯವಾಗಿ ನನ್ನನ್ನು ನಂಬಿ ಬಾ ಎಂದು ಸಂತೈಸಿ ತನ್ನ ಪ್ರಿಯಕರನ ಬಳಿಗೆ ಮನ್ಮಥನ ಜೊತೆಗೂಡಿ ಬಂದು ನೇಮದಿಂದ ಶಿವನ ಪೂಜೆ ಮಾಡಿದಳು. ಮನ್ಮಥನು ತನ್ನ ಕಬ್ಬಿನ ಬಿಲ್ಲಿಗೆ ದುಂಬಿಗಳ ಹೆದೆಯನ್ನು ಏರಿಸಿದನು. ೨೨. ಮನ್ಮಥನು ಆ ದೇವಿಯ ಹಿಂದೆ ನಿಂತು ಉನ್ಮದನ, ಮದನ, ಮೋಹನ, ವಶೀಕರಣ, ಸಂತಾಪ ಮುಂತಾದ ಹೆಸರಿನ ಮಹಾಬಾಣಗಳನ್ನು ಕ್ರಮವಾಗಿ ಶಿವನ ಮೇಲೆ ಪ್ರಯೋಗಿಸಿದನು. ಅವು ಶಿವನನ್ನು ಮುಟ್ಟಲು ಹೆದರಿ ಹಾಗೆಯೇ ಹಿಂದಿರುಗಿದುವು. ಆಗ ಮನ್ಮಥನ ಸಂತಸ ಅಡಗಿತು. ಆದರೆ ಹೆದರದೆ ಆರ್ಭಟಿಸಿ ಐದು ಬಾಣಗಳಿಂದ ಒಂದೇ ಬಾರಿಗೆ ಹೊಡೆಯಲು, ಅವು ಶಿವನ ದೇಹವನ್ನು ತಟ್ಟಿ ಶಿವನ ಮನಸ್ಸು ಎಚ್ಚರಗೊಳ್ಳಲು, ಶಿವನು ಮಹಾಕೋಪದಿಂದ ನೋಡಿದನು. ೨೩. ರುದ್ರನು ತನ್ನ ಉರಿಗಣ್ಣಿನಿಂದ ನೋಡಲು ಮನ್ಮಥನ ದೇಹ ತಕ್ಷಣ ಭುಗಿಭುಗಿಲೆಂದು ಬೆಂದುಹೋಯಿತು. ಹರನು ಚೆನ್ನಾಗಿ ಆ ಬೂದಿಯನ್ನು ತನ್ನ ದೇಹಕ್ಕೆಲ್ಲ ಬಳಿದುಕೊಂಡು, ಪಾರ್ವತಿಯನ್ನು ನೋಡಿ,

CC-0. Jangamwadi Math Collection. Digitized by eGangotri

ನೋಡಿ ನುಡಿಸದೆ ನಿರಾಕಾರಮಂ ತಳೆಯೆ ರತಿ
ಗಾಡದಿಂವೈತಂದು ಪತಿಯುಳಿದ ಬಳಿಯೊಳೀ
ಡಾಡಿವಳ್ ದೇಹಮಂ ಬಾಯ್ವೊಯ್ದು ಮೊರೆಯಿಟ್ಟು ಬಹಳಶೋಕಾರ್ತೆಯಾಗಿ ೨೩

ಪೊಡೆದರೇ ಕಾಮಧೇನುವ ಕಲ್ಪವೃಕ್ಷಮಂ
ಕಡಿದರೇ ಸೌಂದರ್ಯರಸದ ಕೆರೆಯಂ ಮಾಣ
ದೊಡೆದರೇ ವಿಮಲಮುಕ್ತಾಮಣಿಯ ಕೆಂಡದೊಳ್ ಸುಟ್ಟರೇ ಮಾಣಿಕವನು
ಪುಡಿಗೆಯ್ದರೇ ಲಲಿತಶೃಂಗಾರಲತೆಯ ಕುಡಿ
ಯುಡಿದರೇ ಕೆಟ್ಟೆನಯ್ಯೋ ಎನ್ನಳಲ್ ಪೋಗಿ
ಸುಡದೆ ಗಂಡನ ಕಳುಪಿ ಕೊಲಿಸಿದಮರರನೆಂದು ದೆಸೆದೆಸೆಗೆ ಬಾಯ್ಬಿಟ್ಟಳು ೨೪

ಹಾಯೆನ್ನ ಪ್ರಾಣೇಶ ಹಾಯೆನ್ನ ಸುವಿಲಾಸ
ಹಾಯೆನ್ನ ಮನದನ್ನ ಹಾಯೆನ್ನ ಪೊಸರನ್ನ
ಹಾಯೆನ್ನ ಭಾಗ್ಯನಿಧಿ ಹಾಯೆನ್ನ ಗುಣಶರಧಿ ಹಾಯೆನ್ನ ಸಕಲಸುಖವೇ
ಓಯೆನ್ನಲಾಗದೇ ಶಿವಶಿವಾಯೆನ್ನೆಡೆಗೆ
ಬಾಯೆನ್ನಲಾಗದೇಯಗಲೆ ನೊಂದೆಯ
ಯ್ಯೋಯೆನ್ನಲಾಗದೇ ಮದನ ಮೋಹನವದನ ಹಾಯೆನುತ್ತಳವಳಿದಳು ೨೫

ಮಾತನಾಡಿಸದೆಯೆ ಮಾಯವಾಗಲು, ರತಿದೇವಿಯು ವೇಗದಿಂದ ಬಂದು ಬಹು ದುಃಖಾರ್ತಳಾಗಿ, ಬಾಯ್ಬಡಿದುಕೊಂಡು, ಅಳುತ್ತ, ಮೊರೆಯಿಡುತ್ತ ರಭಸದಿಂದ ಬಂದು ತನ್ನ ಗಂಡನು ಬೂದಿಯಾದ ಸ್ಥಳದಲ್ಲಿ ಬಿದ್ದು ಹೊರಳಾಡಿದಳು. ೨೪. ಕಾಮಧೇನು ವನ್ನು ಹೊಡೆದರೆ ? ಕಲ್ಪವೃಕ್ಷವನ್ನು ಕಡಿದುಹಾಕಿದರೆ ? ಸೌಂದರ್ಯರಸದ ಕೆರೆಯನ್ನು ಬಿಡದೆ ಒಡೆದುಹಾಕಿದರೆ ? ಶ್ರೇಷ್ಠವಾದ ಮುತ್ತಿನ ಮಣಿಯನ್ನು ಬೆಂಕಿಯಲ್ಲಿ ಸುಟ್ಟು ಹಾಕಿದರೆ ? ಮಾಣಿಕ್ಯವನ್ನು ಪುಡಿ ಮಾಡಿದರೆ ? ಕೋಮಲವಾದ ಶೃಂಗಾರವೆಂಬ ಬಳ್ಳಿಯ ಕುಡಿಯನ್ನು ಚಿವುಟಿಹಾಕಿದರೆ ? ಅಯ್ಯೊ ಕೆಟ್ಟೆ ! ನನ್ನ ಪತಿಯನ್ನು ಈ ಕೆಲಸಕ್ಕೆ ಕಳಿಸಿ ಅವನ ಸಾವಿಗೆ ಕಾರಣರಾದ ದೇವತೆಗಳನ್ನು ನನ್ನ ಈ ದುಃಖ ಸುಡದೆ ಬಿಡುತ್ತದೆಯೆ ಎಂದು ದಿಕ್ಕುದಿಕ್ಕಿಗೆ ನೋಡಿ ಅತಿಯಾಗಿ ದುಃಖಿಸಿದಳು. ೨೫. ಹಾ ನನ್ನ ಪ್ರಾಣೇಶ, ಹಾ ನನ್ನ ಸುವಿಲಾಸ, ಹಾ ನನ್ನ ಮನದನ್ನ, ಹಾ ನನ್ನ ಹೊಸರನ್ನ, ಹಾ ನನ್ನ ಭಾಗ್ಯದನಿಧಿ, ಹಾ ನನ್ನ ಗುಣಶರಧಿ, ಹಾ ನನ್ನ ಸಕಲಸುಖವೇ, ಓ ಎನ್ನ ಬಾರದೇ ? ಶಿವ ಶಿವಾ ! ನನ್ನ ಬಳಿ ಬಾ ಎಂದು ಕೂಗಲು ಸಾಧ್ಯವಿಲ್ಲವೆ ? ನಾನು ನಿನ್ನನ್ನು ಬಿಟ್ಟುಹೋಗಲು ನೊಂದುಕೊಂಡೆಯಾ ಎಂದು ಕೇಳಬಾರದೇ ? ಮದನ,

CC-0. Jangamwadi Math Collection. Digitized by eGangotri

ಮಾರನಂ ಹರಿಯ ಸುಕುಮಾರನಂ ರಮ್ಯಾವ
ತಾರನಂ ಕೀರ್ತಿವಿಸ್ತಾರನಂ ಸೌಂದರ್ಯ
ಸಾರನಂ ಸತ್ಕೃಪಾಸಾರನಂ ಮುನಿಮದವಿದೂರನಂ ತನ್ನ ಕುಚದ
ಹಾರನಂ ಶೃಂಗಾರಹಾರನಂ ಲೋಕೋಪ
ಕಾರನಂ ಮೋಹನಾಕಾರನಂ ಸಂತತೋ
ದ್ಧಾರನಂ ಸುರತಮಂದಾರನಂ ಕಾಣದೆಂತಿರ್ಪೆನೋ ಹಾಯೆಂದಳು ೨೬

ಚೆಂದುಟಿಯ ಸೊಂಪುಗಳ ಪೊಳೆವ ಕದಪುಗಳ ನವ
ಕುಂದರದನದ ಚೆಲ್ವ ಬಾಯ್ದೆರೆಯ ಕುಡುಪುರ್ವಿ
ನಂದವಡೆದಿರ್ದ ನಾಸಿಕದ ನಿಟ್ಟೆಸಳ್ಗಣ್ಣ ಕಾಂತಿಗಳ ತುರುಗೆವೆಗಳ
ಮಂದಹಾಸದ ಕರ್ಣಭೂಷಣದ ಮಾಣಿಕ್ಯ
ದಿಂದೆ ಝಗಝಗಿಪ ಮಕುಟದ ಮಸ್ತಕದ ಮಹಾ
ಸೌಂದರ್ಯಸದನನಂ ಮದನನಂ ಕಾಣದೆಂತಿರ್ಪೆನೋ ಹಾಯೆಂದಳು ೨೭

ಕುಸುಮಬಾಣವನೆತ್ತ ಬಿಸುಟೆ ಗಿಳಿಗುದುರೆಗಳ
ಹಸರಮನದೆಲ್ಲಿ ಕಳುಹಿದೆ ಚಂದ್ರಮನನಾವ
ದೆಸೆಗೆ ಬೀಳ್ಕೊಟ್ಟೆ ತಂಗಾಳಿಗೇನೂಳಿಗವನಿತ್ತೆ ಮಾಮರದಾನೆಯ

ಮೋಹನವದನ, ಹಾ ! ಎನ್ನುತ್ತ ದುಃಖಿಸಿದಳು. ೨೬. ಮನ್ಮಥನನ್ನು, ವಿಷ್ಣುವಿನ ಮಗನನ್ನು, ಮನೋಹರಾಕಾರನನ್ನು, ವಿಶಾಲಕೀರ್ತಿಯುಳ್ಳವನನ್ನು, ಸೌಂದರ್ಯ ಸಾರನನ್ನು, ಕೃಪಾಸಾರನನ್ನು, ಋಷಿಗಳ ಮದವನ್ನು ನಾಶಮಾಡುವವನನ್ನು, ನನ್ನ ಸ್ತನದ ಹಾರವನ್ನು, ಶೃಂಗಾರಹಾರನನ್ನು, ಲೋಕೋಪಕಾರಿಯನ್ನು, ಮೋಹನಾ ಕಾರನನ್ನು, ಯಾವಾಗಲೂ ಉದ್ಧರಿಸುವವನನ್ನು, ಸಂಭೋಗಸುಖದಲ್ಲಿ ಕಲ್ಪವೃಕ್ಷವನ್ನು ಕಾಣದೆ ಹೇಗೆ ಇರಲಿ, ಹಾ ! ಎಂದಳು. ೨೭. ಕೆಂಪಾದ ತುಟಿಯ ಸೊಂಪಿನ, ಹೊಳೆ ಯುವ ಕೆನ್ನೆಗಳ, ಹೊಸ ಮಲ್ಲಿಗೆಯಂತಹ ಹಲ್ಲಿನ, ಚೆಲುವಾದ ತುಟಿಯ, ಬಿಲ್ಲಿನಂತೆ ಬಾಗಿದ ಹುಬ್ಬಿನ, ಅಂದವಾದ ಮೂಗಿನ, ದೀರ್ಘವಾದ ಹೂವಿನ ಎಸಳಿನಂತಹ ಕಣ್ಣಿನ ಕಾಂತಿಯ, ಒತ್ತಾದ ಕೂದಲ ಎವೆಗಳ, ಮುಗುಳುನಗೆಯ, ಕಿವಿಯಾಭರಣದ, ಮಾಣಿಕ್ಯ ದಿಂದ ಝಗಝಗಿಸುವ ಕಿರೀಟವನ್ನು ಹೊಂದಿದ ತಲೆಯ, ಮಹಾಸೌಂದರ್ಯದ ಆಗರ ವಾದ ಮನ್ಮಥನನ್ನು ಕಾಣದೆ ಹೇಗೆ ಇರಲಿ, ಹಾ ! ಎಂದಳು. ೨೮. ನಿನ್ನ ಹೂವಿನ ಬಾಣವನ್ನು ಎಲ್ಲಿ ಬಿಸುಟೆ ? ಗಿಳಿ-ಕುದುರೆಗಳ ಗುಂಪನ್ನು ಎಲ್ಲಿಗೆ ಕಳಿಸಿದೆ ? ಚಂದ್ರನನ್ನು ಯಾವ ದಿಕ್ಕಿಗೆ ಬೀಳ್ಕೊಟ್ಟೆ. ತಂಗಾಳಿಗೆ ಯಾವ ಕೆಲಸವನ್ನು ಕೊಟ್ಟೆ ? ಮಾವಿನಮರದ

CC-0. Jangamwadi Math Collection. Digitized by eGangotri

ಎಸೆವ ಪೂವಿಲ್ಲನಳಿವೆದೆಯನಾರ್ಗಿತ್ತೆ ಕೋ
ಭಿಸುವಂಚೆ ಕೊಂಚೆ ಕೊಳರ್ವಕ್ಕಿಗಳನೇಗೆಯ್ದೆ
ಪೊಸ ಬಸಂತನನಾರ ಕಯ್ಯೊಡೆಯನಿತ್ತೆಯ್ಕೆ ಹಾ ಕಾಂತ ಹಾಯೆಂದಳು ೨೮

ಪತಿಯಳಿದ ಪೊರೆಯೊಳಗೆ ಪೊರಳುತುಂ ನರಳುತುಂ
ಮತಿಗೆಟ್ಟು ಮರವಟ್ಟು ಚೀರುತುಂ ದೂರುತುಂ
ಧೃತಿಯಿಂದೆ ತಾಂ ಮೆಲ್ಲನೇಳುತುಂ ಬೀಳುತುಂ ದೆಸೆದೆಸೆಗೆ ಬಾಯ್ಬಿಡುತ್ತುಂ
ಗತಿಯಾವುದೇನಗೆಂದು ಬೇಡುತುಂ ಕೋಡುತುಂ
ಕ್ಷಿತಿಯೆ ಬಾಯ್ದೆರೆಯೆಂದು ಕರಗುತುಂ ಕೊರಗುತುಂ
ಖತಿಯಿಂದೆ ದಿವಿಜರಂ ಬಯ್ವುತುಂ ಸುಯ್ಯುತುಂ ರತಿ ಪತಿಗೆ ಶೋಕಿಸಿದಳು ೨೯

ರಾಮ ಕೇಳಾಗಳಾ ಮೃಗಪಕ್ಷಿಸಂಕುಳಂ
ಕಾಮನರಸಿಯ ಶೋಕವಂ ನೋಡಿ ದುಃಖದಿಂ
ತಾವೊಡನೆ ಬಳಸಿ ಕಂಬನಿದುಂಬಿ ಮೇಹಿನಾಸೆಯನುಳಿದು ನಿಂದಿರ್ದುವು
ಭೂಮಿಜಂಗಳ್ ಬಾಡಿ ಸೋಲುತಿರ್ದುವು ಲತಾ
ಸ್ತೋಮಂಗಳೊಣಗಿ ಮಿಗೆ ನೇಲುತಿರ್ದುವು ಕೂಡೆ
ತಾಮರಸಮಾದಿಗಳ್ ಕೊರಗುತಿರ್ದುವು ದುಃಖಿಯೆಂತಪ್ಪರಂ ಕೆಡಿಸದೇ ೩೦

ಉಲಿಯದಿರ್ಪುದು ಭ್ರಮರಿ ಪೊಳೆಯದಿರ್ಪುದು ಚಮರಿ
ಕೆಲೆಯದಿರ್ಪುದು ಪಿಕಂ ಉಲಿಯದಿರ್ಪುದು ಶುಕಂ
ಸುಳಿಯದಿರ್ಪುದು ಕರಿಣಿ ಕಳಿಯದಿರ್ಪುದು ಹರಿಣಿ ಗಳಪದಿರ್ಪುದು ಪಾರಿವಂ

ಆನೆಯನ್ನು ಪ್ರಕಾಶಿಸುವ ಹೂವಿನ ಬಿಲ್ಲನ್ನು, ದುಂಬಿಗಳ ಹೆದೆಯನ್ನು ಯಾರಿಗೆ ಕೊಟ್ಟೆ ? ಮನೋಹರವಾಗಿ ಕಾಣುವ ಹಂಸ, ಕ್ರೌಂಚ, ನೀರುಹಕ್ಕಿಗಳನ್ನು ಏನು ಮಾಡಿದೆ? ವಸಂತನನ್ನು ಯಾರ ಅಧೀನದಲ್ಲಿಟ್ಟೆ ? ಹಾ ಕಾಂತ ! ಎಂದಳು. ೨೯. ಗಂಡನು ಸತ್ತ ಜಾಗದಲ್ಲಿ ಹೊರಳಾಡುತ್ತ, ನರಳುತ್ತ, ಮತಿಗೆಟ್ಟು-ಎಚ್ಚರತಪ್ಪಿ, ಚೀರುತ್ತ, ದೂರುತ್ತ, ಧೈರ್ಯದಿಂದ ಮೆಲ್ಲಗೆ ಏಳುತ್ತ-ಬೀಳುತ್ತ, ದಿಕ್ಕುದಿಕ್ಕಿಗೆ ಬಾಯ್ಬಿಡುತ್ತ, ನನಗಿನ್ನೇನು ಗತಿ ಎಂದು ಬೇಡುತ್ತ-ಅಂಜುತ್ತ, 'ಭೂದೇವಿ, ಬಾಯ್ಬಿಡು' ಎಂದು ಕರಗುತ್ತ, ಕೊರಗುತ್ತ, ಕೋಪದಿಂದ ದೇವತೆಗಳನ್ನು ಬಯ್ಯುತ್ತ, ನಿಟ್ಟುಸಿರುಬಿಡುತ್ತ ರತಿದೇವಿ ತನ್ನ ಗಂಡನಿಗಾಗಿ ದುಃಖಿಸಿದಳು. ೩೦. ಸಿದ್ಧರಾಮ, ಕೇಳು. ಆಗ ಮೃಗಪಕ್ಷಿಗಳ ಸಮೂಹ ರತಿಯ ದುಃಖವನ್ನು ನೋಡಿ ತಾವೂ ದುಃಖಗೊಂಡು, ಅವಳನ್ನು ಸುತ್ತುಗಟ್ಟಿ ಕಣ್ಣೀರು ತುಂಬಿ, ಆಹಾರದ ಆಸೆಯನ್ನು ಬಿಟ್ಟು ನಿಂತಿದ್ದುವು. ಮರಗಳು ಬಾಡಿ ಸೋತು ಹೋಗಿದ್ದುವು. ಬಳ್ಳಿಗಳ ಸಮೂಹ ಒಣಗಿ ಜೋತಾಡುತ್ತಿದ್ದುವು. ಕಮಲ ಮೊದಲಾದುವು ಕೊರಗುತ್ತಿದ್ದುವು. ದುಃಖವು ಎಂತಹವರಿಗೂ ಕೇಡನ್ನುಂಟುಮಾಡದೆ ಇರುತ್ತದೆಯೆ ? ೩೧. ಆ ರತಿದೇವಿಯ ದುಃಖವನ್ನು ನೋಡಿ ಆ ದುಃಖವು ತಮ್ಮದೆಂದೇ ತಿಳಿದುಕೊಂಡು, ಅತಿಯಾದ ಶೋಕದಿಂದ ದುಂಬಿಗಳು ಝೇಂಕರಿಸದಿವೆ. ಚಮರೀ

CC-0. Jangamwadi Math Collection. Digitized by eGangotri

ಉಲಿಯುದಿರ್ಪುದು ಕೋಕಿ ನಲಿಯುದಿರ್ಪುದು ಕೇಕಿ
ಯುಲುಕದಿರ್ಪುದು ಕೊಂಚೆಯುಲುಕದಿರ್ಪವದಂಚೆ
ಲಲನೆಯುಳಲಂ ನೋಡಿ ತಮ್ಮದೆಂಟೇ ಮಾಡಿಕೊಂಡು ಘನಶೋಕದಿಂದೆ ೩೧

ಕಾವ ನಿನ್ನಂ ಕಾಯದಾದನೇ ಮಗನೆಂದು
ಮಾವನೀ ಲೋಕಮಂ ರಕ್ಷಿಸುವನೆಂಬ ನುಡಿ
ಹೇವವಲ್ಲವೆ ತನಗೆ ಕಟಕಟಾ ಸಕಲ ಲೋಕಂಗಳಂ ಸೃಜಿಪೆನೆಂಬ
ಭಾವನಯ್ಯೋ ತನ್ನ ತಮ್ಮನೆಂದೆಂಬ ನಿಜ
ಭಾವದಿಂ ಮರಳಿ ಸೃಷ್ಟಿಸಲಾಗದೇ ಮಹಾ
ದೇವ ನನಗಿನ್ನಾರು ದಿಕ್ಕುಗೆಟ್ಟೆಂ ಕೆಟ್ಟೆನೆಂದು ರತಿ ಶೋಕಿಸಿದಳು ೩೨

ತರುಗಳಿರ ಲತೆಗಳಿರ ಮೃಗಪಕ್ಷಿಗಳಿರ ಭಾ
ಸುರ ಸುರಾಂಗನೆಯರಿರ ದಿಗ್ದೇವಿಯರಿರ ಪರ
ಗಿರಿಗಳಿರ ಭೂದೇವಿ ವನಲಕ್ಷ್ಮಿಯರಿರ ಕಂಡಿರೆಯೆನ್ನ ವಿಧಿಯನೀಗ
ಕರುಣಿಸೆಲೆ ತಾಯೆ ಗಿರಿಜಾತೆ ನಿನ್ನಂ ನಂಬಿ
ಹರನ ಕಣ್ಗಿಚ್ಚಿಗಾಹುತಿಯಾಗಿ ಪೋದನೆ
ನ್ನರಸನೇಗುವೆನೆಂದು ಮರುಗುತಿರೆ ಕೇಳುತಾ ಶಿವೆ ತನ್ನೊಳಿಂತೆಂದಳು ೩೩

ಮೃಗಗಳು ಹೊಳೆಯುತ್ತಿರಲಿಲ್ಲ, ಕೋಗಿಲೆ ಕೆಲೆಯುತ್ತಿರಲಿಲ್ಲ, ಗಿಣಿಗಳು ಮಾತನಾಡು ತ್ತಿರಲಿಲ್ಲ, ಹೆಣ್ಣಾನೆ ಅಲ್ಲಿ ಸುಳಿದಾಡುತ್ತಿರಲಿಲ್ಲ, ಜಿಂಕೆಗಳು ಅಲ್ಲಿಂದ ಹೋಗುತ್ತಿರಲಿಲ್ಲ. ಪಾರಿವಾಳಗಳು ಗುಟುರುಗುಟ್ಟುತ್ತಿರಲಿಲ್ಲ, ಚಕ್ರವಾಕ ಉಲಿಯುತ್ತಿರಲಿಲ್ಲ, ನವಿಲುಗಳು ನಲಿಯುತ್ತಿರಲಿಲ್ಲ, ಕ್ರೌಂಚ ಕೂಗುತ್ತಿರಲಿಲ್ಲ, ಹಂಸಗಳು ಅಲುಗಾಡುತ್ತಿರಲಿಲ್ಲ, ಎಲ್ಲವೂ ದುಃಖದಿಂದ ಮೌನವಾಗಿ ಅಲುಗಾಡದಿವೆ. ೩೨. ಎಲೈ ಕಾಮನೆ, ನನ್ನ ಮಾವನು (ವಿಷ್ಣು) ನಿನ್ನನ್ನು ಮಗನೆಂದು ರಕ್ಷಿಸದೆಹೋದನೆ ? ಲೋಕರಕ್ಷಕನೆಂಬ ಮಾತು ಅವನಿಗೆ ನಾಚಿಕೆಗೇಡಿನದಲ್ಲವೆ ? ಅಯ್ಯಯ್ಯೋ ! ಎಲ್ಲ ಲೋಕಗಳನ್ನೂ ನಾನು ಸೃಷ್ಟಿಸು ತ್ತೇನೆ—ಎನ್ನುವ ನನ್ನ ಭಾವನಾದರೂ (ಬ್ರಹ್ಮ) ಅಯ್ಯೊ, ತನ್ನ ತಮ್ಮ ಎಂಬ ವಿಶ್ವಾಸ ದಿಂದ ನಿನ್ನನ್ನು ಮತ್ತೆ ಸೃಷ್ಟಿಸಬಾರದೆ? ಮಹಾದೇವ, ನನಗೆ ಇನ್ನಾರು ಗತಿ, ದಿಕ್ಕುತಪ್ಪಿದೆ ಕೆಟ್ಟೆ ಎಂದು ರತಿ ದುಃಖಿಸಿದಳು. ೩೩. ಮರಗಳೇ, ಬಳ್ಳಿಗಳೇ, ಮೃಗಪಕ್ಷಿಗಳೇ ಪ್ರಕಾಶಿಸುವ ದೇವತಾಸ್ತ್ರೀಯರೇ, ದಿಗ್ವನಿತೆಯರೇ, ಪರ್ವತಗಳೇ, ಎಲೈ ಭೂದೇವಿ, ವನ ಲಕ್ಷ್ಮಿಯೇ, ನನ್ನ ಈ ಹಣೆಯಬರಹವನ್ನು ನೋಡಿದಿರಾ ? ಎಲೆ ತಾಯಿ ಪಾರ್ವತಿ, ಕರುಣೆ ತೋರು. ನಿನ್ನನ್ನು ನಂಬಿ ನನ್ನ ಪತಿ ಶಿವನ ಕಣ್ಣಿನ ಬೆಂಕಿಗೆ ಆಹುತಿಯಾಗಿ ಹೋದ. ಇನ್ನೇನು ಮಾಡಲಿ ? ಎಂದು ಶೋಕಿಸುತ್ತಿರಲು, ಅದನ್ನು ಕೇಳಿ ಆ ಪಾರ್ವತಿ

CC-0. Jangamwadi Math Collection. Digitized by eGangotri

ತಂದೆ ತಾಯುಂ ಬಿಟ್ಟುದೊಂದು ಮದನಂ ನಂಬಿ
ಬಂದುದೆರಡೀಶ್ವರನವಜ್ಞೆ ಮೂರ್ ಸತಿಯ ಶೋ
ಕಂದೋರೆ ನಾಲ್ಕು ಲೋಕಾಪವಾದಮುದೈದು ನವಯೌವನೋದಯದೊಳು
ಬಂದಡವಿಯೊಳಗಿರ್ಪುದಾರೆನ್ನ ನುಡಿಸದೆಯು
ಮಿಂದುಜೂಟಂ ಪೋಗಲೇಳಾದುದೀಗಲೆನ
ಗೊಂದಡಸಲೇಳಡಸಿತೆಂಬ ನುಡಿ ನಿಜವಾದುದೆಂದಗಜೆ ಚಿಂತಿಸಿದಳು ೩೪

ರತಿಯ ಸಂತಾಪಮಂ ನೋಡಿ ಕಡುನೊಂದು ಪಾ
ರ್ವತಿ ಮಹಾಕರುಣದಿಂ ಕಾಂತೆ ಬಾ ಕೇಳ್ ನಿನ್ನ
ಪತಿಯನೀವೆಂ ಮಹಾದೇವನಂ ಕುರ್ತು ತಪಮಂ ಮಾಡಿ ಸಲೆ ಮೆಚ್ಚಿಸಿ
ಅತಿದುಃಖಮಂ ಮಾಡಬೇಡೆಂದು ತಲೆದಡವಿ
ಸತಿ ಸಂತವಿಟ್ಟು ಬಳಿಕೀಶ್ವರನನೊಳಕೆಯ್ವ
ಗತಿಯಾವುದೆಂದು ನಿರ್ಧರಿಸಿ ತನ್ನೊಳ್ ತಾನೆ ಗಿರಿಜಾತೆ ಚಿಂತಿಸಿದಳು ೩೫

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ

ತನ್ನೊಳಗೆ ಈ ರೀತಿ ಆಲೋಚಿಸಿದಳು. ೩೪. ತಂದೆ-ತಾಯಿಯನ್ನು ಬಿಟ್ಟು ಹೊರಟು ಬಂದುದು ಒಂದು, ಮನ್ಮಥನು ನನ್ನನ್ನು ನಂಬಿ ಬಂದದ್ದು ಎರಡು, ಈಶ್ವರನ ತಿರಸ್ಕಾರ ಮೂರು, ರತಿಯ ದುಃಖ ನಾಲ್ಕು, ಮನ್ಮಥನನ್ನು ಕೊಲ್ಲಿಸಿದೆನೆಂಬ ಲೋಕಾಪವಾದ ಐದು, ಹೊಸ ಪ್ರಾಯದ ಈ ಸಮಯದಲ್ಲಿ ಬಂದು ಕಾಡಿನಲ್ಲಿ ವಾಸಿಸುತ್ತಿರುವುದು ಆರು, ನನ್ನನ್ನು ಮಾತನಾಡಿಸದೆಯೇ ಚಂದ್ರಮೌಳಿಯು ಹೊರಟುಹೋದುದು ಏಳು ಈ ರೀತಿ ಒಂದು ಬರಲು ಏಳರ ಕಾಟ ಬಂದಿತು ಎಂಬ ಮಾತು ನಿಜವಾಯಿತು ಎಂದು ಪಾರ್ವತಿ ಚಿಂತಿಸಿದಳು. ೩೫. ರತಿಯ ಅಪಾರ ದುಃಖವನ್ನು ನೋಡಿ, ಪಾರ್ವತಿಯು ಬಹುವಾಗಿ ವೇದನೆಗೊಂಡು, ಮಹಾ ಕರುಣೆಯಿಂದ ತರುಣಿ ಬಾ, ಕೇಳು, ಮಹಾದೇವನನ್ನು ಕುರಿತು ತಪಸ್ಸು ಮಾಡಿ, ಅವನನ್ನು ಪೂರ್ಣವಾಗಿ ಮೆಚ್ಚಿಸಿ ನಿನ್ನ ಪತಿಯನ್ನು ಕೊಡುತ್ತೇನೆ, ಬಹಳವಾಗಿ ಶೋಕಿಸಬೇಡ ಎಂದು ತಲೆಸವರಿ, ಅವಳನ್ನು ಸಮಾಧಾನಗೊಳಿಸಿದಳು. ಅನಂತರ ಈಶ್ವರನನ್ನು ಒಲಿಸಿಕೊಳ್ಳುವ ದಾರಿ ಯಾವುದು ಎಂದು ನಿರ್ಧರಿಸಿ ತನ್ನಲ್ಲಿ ತಾನೇ ಗಿರಿಜೆ ಚಿಂತಿಸಿದಳು. ೩೬. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವಪುರಾಣ ವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ

CC-0. Jangamwadi Math Collection. Digitized by eGangotri

ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೬

ಮೂವತ್ತೈದನೆಯ ಸಂಧಿ ಸಂಪೂರ್ಣ

ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೈದನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತಾರನೆಯ ಸಂಧಿ

ಸೂಚನೆ : ರತಿಗಭಯಮಂ ಕೊಟ್ಟು ಘನತಪದೊಳಂದು ಪಾ
ರ್ವತಿ ಶಿವನನೊಲಿಸಿ ಪಿತನರಮನೆಗೆ ಬರೆ ಶೈಲ
ಪತಿ ಸುತೆಗೆ ಕಲ್ಯಾಣಮಂಟಪವನಾ ವಿಶ್ವಕರ್ಮನಿಂ ನಿರ್ಮಿಸಿದನು

ಗಂಗಾತರಂಗೋತ್ತಮಾಂಗದಹನೀಕೃತಾ
ಪಾಂಗಸ್ಮರಭಸ್ಮಧವಳಾಂಗ ಮುಕ್ತ್ಯಂಗನಾ
ಲಿಂಗ ಸದ್ಭಕ್ತಭವಭಂಗ ಶ್ರುತಿಸಂಗ ಮುನಿಪುಂಗವಾಭೇದ್ಯಸರ್ವ
ಮಂಗಳಾರ್ಧಾಂಗ ತ್ರಿಗುಣಂಗಳುತ್ತುಂಗ ನೇ
ತ್ರಂಗಳ ಸೊಬಂಗ ಕರ್ಣಾಂಗಳ ತೊಡಂಗಳುರ
ಗಂಗಳಾ ಸಂಗಮಂ ಹಿಂಗದ ವಿರೂಪಾಕ್ಷಲಿಂಗ ರಕ್ಷಿಸುವುದೆನ್ನ ೧

ಆಲಿಸೈ ಸಿದ್ಧರಾಮೇಶ ಗಿರಿಜಾತೆ ಕರು
ಣಾಳುವಲ್ಲಾ ರತಿಯ ಶೋಕಮಂ ಸಂತೈಸಿ
ಮೇಲೆ ಪಂಪಾಕ್ಷೇತ್ರದೊಳ್ ತನಗೆ ವರತಪಃಸ್ಥಳವಾವುದೆಂದು ಬಂದು
ಸಾಲಾದ ತರುಲತೆಯ ಸೊಂಪಿನೊಳ್ ನಿಂದು ತದ್
ಭಾಳಲೋಚನನುದಾಸೀನಮಂ ನೆನೆನೆನೆದು
ಮೇಳದಾಳಿಯರಾದ ಜಯೆ ವಿಜಯೆಮುಖ್ಯರೊಳ್ ಗಿರಿಜಾತೆಯಿಂತೆಂದಳು ೨

ಸೂಚನೆ : ರತಿಗೆ ಅಭಯವನ್ನು ಕೊಟ್ಟು, ಘೋರವಾದ ತಪಸ್ಸಿನಿಂದ ಪಾರ್ವತಿ ಶಿವನನ್ನು ಒಲಿಸಿಕೊಂಡು ತಂದೆಯ ಅರಮನೆಗೆ ಬಂದಳು. ಪರ್ವತರಾಜನು ಮಗಳ ಮದುವೆಯ ಮಂಟಪವನ್ನು ವಿಶ್ವಕರ್ಮನಿಂದ ನಿರ್ಮಿಸಿದನು. ೧. ಗಂಗಾಧರ, ಉರಿಗಣ್ಣ, ಮನ್ಮಥನನ್ನು ಸುಟ್ಟ ಬೂದಿಯನ್ನು ಬಳಿದು ಬೆಳ್ಳಗಿರುವ ದೇಹವುಳ್ಳವ, ಮೋಕ್ಷದಾಯಿ, ಉತ್ತಮರಾದ ಭಕ್ತರ ಹುಟ್ಟು ಸಾವನ್ನು ಇಲ್ಲದಂತೆ ಮಾಡುವವನು, ವೇದ ವೇದಾಂಗಗಳನ್ನರಿತ ಋಷಿಗಳಿಗೂ ಭೇದಿಸಲಸಾಧ್ಯನಾದವನು, ಅರ್ಧನಾರೀಶ್ವರ, ಸತ್ವ-ರಜ-ತಮೋಗುಣಗಳನ್ನೇ ಶ್ರೇಷ್ಠವಾದ ಕಣ್ಣುಗಳನ್ನಾಗಿ ಉಳ್ಳ ಸೊಗಸುಗಾರ, ಕಿವಿಯ ಆಭರಣಗಳಾದ ಸರ್ಪಗಳನ್ನು ಸದಾ ಹೊಂದಿರುವ ವಿರೂಪಾಕ್ಷಲಿಂಗನೇ ನನ್ನನ್ನು ಕಾಪಾಡು. ೨. ಕೇಳಯ್ಯ ಸಿದ್ಧರಾಮ, ಪಾರ್ವತಿ ಕರುಣಾಶಾಲಿಯಲ್ಲವೆ ! ರತಿಯ ದುಃಖವನ್ನು ಸಂತೈಸಿದ ಮೇಲೆ, ಪಂಪಾಕ್ಷೇತ್ರದಲ್ಲಿ ತನಗೆ ತಪಸ್ಸಿಗೆ ಯೋಗ್ಯವಾದ ಸ್ಥಳ ಯಾವುದೆಂದು ಹುಡುಕಿ ಬಂದು ಸಾಲಾಗಿದ್ದ ಮರಬಳ್ಳಿಗಳ ಸೊಗಸಾದ ತಾಣದಲ್ಲಿ ನಿಂತಳು. ಆ ಮುಕ್ಕಣ್ಣನ ಉದಾಸೀನತೆಯನ್ನು ನೆನೆ-ನೆನೆಸಿಕೊಂಡು ಸೇವಕಿಯರಾದ

CC-0. Jangamwadi Math Collection. Digitized by eGangotri

ಆನೆ ತನ್ನೆಡೆಗೆ ಬರೆ ನೋಡಿ ನುಡಿಸದೆಯುದಾ
ಸೀನಮಂ ಮಾಡಿ ಪೋದನೆ ಭಳಿರೆಯೆನ್ನೆಡೆಗೆ
ತಾನೆ ಬರ್ಪಂತೆ ಮಾಳ್ಪೆಂ ಶಿವನನೆಂದು ರುದ್ರಾಣಿ ಘನಧೈರ್ಯದಿಂದೆ
ಸಾನುರಾಗದೆ ತನ್ನ ಹೃತ್ಕಮಲಮಧ್ಯದೊಳ್
ಧ್ಯಾನಿಸಿದಳೀಶನಂ ತತ್ತಪಸ್ತೇಜಮಾ
ಭಾನುಮಂಡಲಮಂ ತಿರಸ್ಕರಿತೇನೆಂಬೆನುಗ್ರತರತಪದಿರವನು ೨

ಮಾಗಿ ಬೇಸಗೆ ಮಳೆಗಳೆಂದೆಂಬ ಕಾಲದೊಳ್
ಭೋಗಿಭೂಷಣನರಸಿ ಮಾಡಿದಳ್ ತಪವನನು
ರಾಗದಿಂ ಕೊಳನ ತಡಿಯೊಳ್ ಕೋಡುಗಲ್ಗಳೊಳ್ ವಟಮೂಲದಾಶ್ರಯದೊಳು
ಮೇಗೊಗುವ ಶೀತ ಶಿಖಿ ದಾರಿಧಾರೆಗೆ ಮನಂ
ಬೀಗದೆ ತಪಸ್ಖಲನೆಯಾಗದೆ ಸುಧೈರ್ಯಮಂ
ನೀಗದೆ ಸದಾ ತನಗೆ ಯೋಗಿಣಿಯೆನಿಪ್ಪ ಪೆಸರಾಗ ನಿಶ್ಚಯಮಾಗಲು ೩

ಕಂದಮೂಲಫಲಾದಿಗಳನುಳಿದು ತರಗೆಲೆಯ
ದಂದುಗಂದೊರೆದಂಬುವಾಯುಗಳನೊಲ್ಲದಾ
ನಂದದಿಂ ಶಿವನಂಘ್ರಿಪಂಕಜಧ್ಯಾನಾಮೃತವನುಂಡು ಸೊಗಸಿ ದಣಿದು
ಕಂದದೊಡಲಿನ ಕಾಂತಿಯೇರಿದ ಮುಖಾಂಬುಜದ
ಕುಂದದನುರಾಗದಗಜೆಯನೀಕ್ಷಿಸುತ್ತಮರ
ಬೃಂದವಚ್ಚರಿವಟ್ಟು ಕೊಂಡಾಡಿ ಭಕ್ತಿಯಿಂ ನಮಿಸುತಿಹರಾಗಸದೊಳು ೪

ಜಯೆ-ವಿಜಯೆಯರೊಡನೆ ಪಾರ್ವತಿ ಈ ರೀತಿ ಹೇಳಿದಳು. ೨. ನಾನೇ ಅವನ ಬಳಿಗೆ ಹೋಗಲು ನೋಡಿ ಮಾತನಾಡಿಸದೆ ಅಲಕ್ಷ್ಯಮಾಡಿ ಹೊರಟುಹೋದನೆ ? ಭಲಾ, ಆ ಶಿವನೇ ನನ್ನ ಬಳಿಗೆ ಬರುವಂತೆ ಮಾಡುತ್ತೇನೆ ಎಂದು ಪಾರ್ವತಿ ಬಹಳ ಧೈರ್ಯದಿಂದ ಮತ್ತು ಅನುರಾಗದಿಂದ ತನ್ನ ಹೃದಯಕಮಲದ ಮಧ್ಯದಲ್ಲಿ ಈಶ್ವರನನ್ನು ಧ್ಯಾನಿಸಿದಳು. ಆ ತಪಸ್ಸಿನ ಜ್ವಾಲೆ ಸೂರ್ಯಮಂಡಲವನ್ನೂ ಮೀರಿತು. ಆ ಉಗ್ರತರವಾದ ತಪಸ್ಸಿನ ರೀತಿಯನ್ನು ಏನೆಂದು ಹೇಳಲಿ ? ೩. ಮಾಗಿ, ಬೇಸಗೆ, ಮಳೆಗಾಲಗಳಲ್ಲಿ ಸರ್ಪಭೂಷಣನನ್ನು ಕುರಿತು ಅನುರಾಗದಿಂದ ಕೊಳದ ತೀರದಲ್ಲಿ ಕೋಡುಗಲ್ಲುಗಳ ಮೇಲೆ ಆಲದಮರದ ಕೆಳಗೆ, ಮೇಲೆ ಬೀಳುವ ಚಳಿ,ಬಿಸಿಲು ಮತ್ತು ಮಳೆಗೆ ಮನ ಹಿಂಜರಿಯದೆ ತಪಸ್ಸಿಗೆ ಭಂಗವಾಗದಂತೆ ಧೈರ್ಯಕೆಡದೆ ಯಾವಾಗಲೂ ತನಗೆ ಯೋಗಿಣಿ ಎನ್ನುವ ಹೆಸರು ನಿಶ್ಚಯವಾಗಿ ಒಪ್ಪುವಂತೆ ತಪಸ್ಸನ್ನು ಮಾಡಿದಳು. ೪. ಗೆಡ್ಡೆಗೆಣಸು ಹಣ್ಣುಗಳನ್ನು ಬಿಟ್ಟು ತರಗಲೆಯನ್ನು ತಿನ್ನುವ ಕಷ್ಟವನ್ನುಳಿದು, ನೀರು-ಗಾಳಿಯನ್ನು ಇಚ್ಛಿಸದೆ ಆನಂದದಿಂದ ಶಿವನ ಪಾದಕಮಲಗಳ ಧ್ಯಾನಾಮೃತವನ್ನೇ ಸೇವಿಸಿ ಆನಂದದಿಂದ ಉಬ್ಬಿ ಸೊಗಯಿಸಿದಳು. ದಣಿದು ಕಂದಿಹೋಗದ ಶರೀರದ, ಅಧಿಕ ಕಾಂತಿಗೂಡಿದ ಮುಖಕಮಲದ, ಕುಂದದ ಅನುರಾಗದ ಪಾರ್ವತಿಯನ್ನು ಆಕಾಶದಿಂದ ನೋಡುತ್ತ ದೇವತೆಗಳು ಆಶ್ಚರ್ಯ

CC-0. Jangamwadi Math Collection. Digitized by eGangotri

ತಿಳಿದನೀಶ್ವರನುಮೆಯ ತಪದುಗ್ರಮಂ ಕೃಪೆಯೊ
ಳಿಳಿದು ನಿರ್ಮಳಮಪ್ಪಾಯತಿರೂಪನಳವಡಿಸಿ
ನಲಿವಿನಿಂ ಪರ್ಣಶಾಲೆಯ ಬಾಗಿಲಿಗೆ ಬರಲ್ಕಾಣುತಿದಿರೆದ್ದು ನಮಿಸಿ
ಬಳಿಕಮರ್ಘ್ಯಾಸನಾದಿಗಳಿಂದಲುಪಚರಿಸಿ
ಫಲಕಂದಮೂಲಾದಿಗಳನಿರಿಸಿ ಭಕ್ತಿಯಿಂ
ಬಳಲಿದಿರಿ ಕೈಕೊಂಬುದೆಂದು ಸಖಿಯರ್ ನುಡಿಯೆ ಕಪಟಯತಿಯಿಂತೆಂದನು ೬

ಆನಿದಂ ಕೈಗೊಂಬೆನಂತಿರಲಿ ಪೇಳಿವಿಾ
ಮಾನಿನಿಗೆ ತಪವದೇಂ ಕಾರಣಮೆನಲ್ಕವರ್
ನೀನತಿಥಿಪೂಜೆಯಂ ತಳೆದು ಪೋಗೀಕೆಯ ವಿಚಾರವೇಕೆಂದೆನಲ್ಕೆ
ಹಾನಿಯೇ ಬೆಸಗೊಂಡೊಡಕಟ ಯೌವನದೊಳೀ
ಕಾನನದೊಳಿರೆ ಬಿಡಿಪರಿಲ್ಲಲಾಯೆಂಬೀ ನ
ವೀನರವಮಂ ಕೇಳ್ದು ಕಣ್ದೆರೆಯೆ ಕಪಟಯತಿ ಗಿರಿಸುತೆಯೊಳಿಂತೆಂದನು ೭

ಮಲಯರುಹಘುಸೃಣಂಗಳಂ ಪೂಸುವಂಗದೊಳ್
ತಳೆವರೇ ಭಸಿತಮಂ ದಿವ್ಯವಸ್ತ್ರಮನುಡುವ
ಸೆಳೆನಡುವಿಗಕಟ ವಲ್ಕಲಮನೇಂ ಸಾರ್ಚುವರೆ ಮಂದಾರಮುಖ್ಯಮಾದ

ಪಟ್ಟು ಭಕ್ತಿಯಿಂದ ಕೊಂಡಾಡಿ ನಮಸ್ಕರಿಸಿದರು. ೬. ಪಾರ್ವತಿಯ ತಪದ ಪ್ರಭಾವವನ್ನು ತಿಳಿದ ಈಶ್ವರನು ಕೃಪೆಯಿಂದ ಇಳಿದುಬಂದು ಶ್ರೇಷ್ಠವಾದ ಯತಿರೂಪವನ್ನು ಧರಿಸಿ ಸಂತೋಷದಿಂದ ಪರ್ಣಶಾಲೆಯ ಬಾಗಿಲಿಗೆ ಬರಲು, ಸಖಿಯರು ಅವನನ್ನು ನೋಡಿ ಇದಿರುಗೊಂಡು ನಮಸ್ಕರಿಸಿ ಅನಂತರ ಅರ್ಘ್ಯ ಅಸನಗಳನ್ನು ಕೊಟ್ಟು ಉಪಚರಿಸಿದರು. ಹಣ್ಣು-ಗೆಡ್ಡೆಗೆಣಸುಗಳನ್ನಿರಿಸಿ ಭಕ್ತಿಭಾವದಿಂದ ಆ ಯತಿಯನ್ನು ಕುರಿತು 'ಆಯಾಸಗೊಂಡಿದ್ದೀರಿ, ಇದನ್ನು ಸೇವಿಸಿ' ಎಂದು ಹೇಳಿದರು. ಆಗ ಕಪಟಮುನಿ ಹೀಗೆಂದನು. ೭. ನಾನು ಇದನ್ನು ಸೇವಿಸುತ್ತೇನೆ. ಅದು ಹಾಗಿರಲಿ, ಈ ತರುಣಿಯ ತಪಸ್ಸಿನ ಕಾರಣವೇನು ? ಎಂದು ಕೇಳಲು, ಅವರು 'ನೀನು ಅತಿಥಿಪೂಜೆಯನ್ನು ಸ್ವೀಕರಿಸಿ ಹೋಗು. ಈಕೆಯ ವಿಚಾರ ನಿನಗೇತಕ್ಕೆ' ಎಂದರು. ಕೇಳಿದರೆ ಕುಂದೇನು ? ಅಯ್ಯೋ, ಈ ಯೌವನದಲ್ಲಿ ಈ ಕಾಡಿನಲ್ಲಿರಲು ಇದನ್ನು ತಡೆಯುವವರು ಯಾರೂ ಇಲ್ಲವೆ ? ಎಂಬ ಹೊಸ ಧ್ವನಿಯನ್ನು ಕೇಳಿ ಪಾರ್ವತಿಯು ಕಣ್ಣು ತೆರೆಯಲು ಕಪಟಮುನಿ ಈ ರೀತಿ ಹೇಳಿದನು. ೮. ಗಂಧವೇ ಮೊದಲಾದುವನ್ನು ಬಳಿಯಬೇಕಾದ ಶರೀರಕ್ಕೆ ವಿಭೂತಿಯನ್ನು ಬಳಿಯುತ್ತಾರೆಯೆ ? ದಿವ್ಯವಾದ ಬಟ್ಟೆಗಳನ್ನುಡಬೇಕಾದ ತೆಳುವಾದ ಸೊಂಟಕ್ಕೆ ಅಯ್ಯೋ ! ನಾರುಬಟ್ಟೆಯನ್ನು ತೊಡಿಸುತ್ತಾರೆಯೆ ? ಮಂದಾರ ಮುಂತಾದ

CC-0. Jangamwadi Math Collection. Digitized by eGangotri

ಅಲರ್ಗಳಂ ಮುಡಿವ ಕುರುಳಂ ಪೊಸೆದು ಜಡೆಯುನಂ
ತಳವಡಿಪರೇ ರತಿಸುಖಂಬಡೆವ ಕಾಲದೊಳ್
ಕೆಳೆಗೊಂಬರೇ ತಪವನಾರನೊಲಿಸುವೆನೆಂದು ಮಾಳ್ಪೆಯೆನಲಿಂತೆಂದಳು ೮

ಆಲಿಸೈ ಯತಿಯೆ ಸರ್ವಜ್ಞನಂ ಶಂಭುವಂ
ಭಾಳಾಕ್ಷನಂ ಸದಾಶಿವನನೊಲಿಸುವೆನೆನಲ್
ಕೇಳಿ ಗಹಗಹಿಸಿ ಮನ್ಮಥಹರನನುಗ್ರನಂ ವಿಷಕಂಠನಂ ತಿರುಕನಂ
ವ್ಯಾಳಚರ್ಮಾವರಣನಂ ಸದಾಮಾಂಗಲ್ಯ
ಶೀಲನಂ ಭಜಿಪರೇಯೆನೆ ಗಿರಿಜೆ ಕೋಪದಿಂ
ಖೂಳ ಫಡ ಹೋಗೆನುತೆ ಶಪಿಸುವನಿತರೊಳೀಶನೊಲಿದು ನಿಜದಿಂದಿರ್ದನು ೯

ಹೊಳೆಹೊಳೆವ ಜಡೆಗುಡಿಯ ಶಶಿಯ ಸೂಡಿದ ಮುಡಿಯ
ಥಳಥಳಿಪ ನಗೆಮೊಗದ ನಾಗಕುಂಡಲಯುಗವ
ತೊಳಗುವಕ್ಷಿತ್ರಯದ ಮಿರುಪ ಗಲ್ಲದ ನಯದ ಬಾಯ್ದೆರೆಯ ಗರಳಗಳದ
ವಿಲಸಿತಾಭಯಕರದ ದಂತಿಚರ್ಮಾಂಬರದ
ಮೊಳೆಮೊಳೆವ ನಸುನಗೆಯ ಕಾಂತೆಗೆಳಸುವ ಬಗೆಯ
ಲಲಿತತನುದೀಧಿತಿಯ ತಳೆದ ಕರುಣೋನ್ನತಿಯ ಶಿವನೊಪ್ಪಿದಂ ಮುದದೊಳು ೧೦

ಹೂಗಳನ್ನು ಮುಡಿಯಬೇಕಾದ ಕುರುಳನ್ನು ಹೊಸೆದು ಜಟೆಯಂತೆ ಮಾಡುತ್ತಾರೆಯೆ ? ರತಿಸುಖವನ್ನು ಪಡೆಯುವ ಕಾಲದಲ್ಲಿ ತಪಸ್ಸನ್ನು ಕೈಗೊಳ್ಳುತ್ತಾರೆಯೆ ? ಯಾರನ್ನು ಒಲಿಸುತ್ತೇನೆಂದು ಈ ತಪವನ್ನು ಮಾಡುತ್ತಿರುವೆ ಎನ್ನಲು ಈ ರೀತಿ ಹೇಳಿದಳು. ೯. ಕೇಳಯ್ಯ ಯತಿಯೆ, 'ಸರ್ವಜ್ಞನನ್ನು, ಶಿವನನ್ನು, ಮುಕ್ಕಣ್ಣನನ್ನು, ಸದಾಶಿವನನ್ನು ಒಲಿಸುತ್ತೇನೆ' ಎಂದಳು. ಅದನ್ನು ಕೇಳಿ ಶಿವನು ಗಹಗಹಿಸಿ ನಕ್ಕು 'ಮನ್ಮಥನನ್ನು ಸುಟ್ಟವನನ್ನು, ಮಹಾ ಭಯಂಕರನಾದವನನ್ನು, ವಿಷಕಂಠನನ್ನು, ಭಿಕ್ಷೆ ಬೇಡುವವನನ್ನು, ಗಜಚರ್ಮಾಂಬರನನ್ನು, ಯಾವಾಗಲೂ ಅಮಂಗಳವನ್ನೆ ಉಂಟು ಮಾಡುವವನನ್ನು ಆರಾಧಿಸುತ್ತಾರೆಯೆ ? ಎನ್ನಲು ಪಾರ್ವತಿಯು ಕೋಪದಿಂದ ನೀಚ, ಥೂ ಹೋಗು' ಎನ್ನುತ್ತ ಶಾಪಕೊಡುವಷ್ಟರಲ್ಲಿ ಯತಿಯು ತನ್ನ (ಈಶ್ವರನ) ನಿಜರೂಪವನ್ನು ಧರಿಸಿ ಕಾಣಿಸಿಕೊಂಡನು. ೧೦. ಹೊಳೆಹೊಳೆಯುತ್ತಿರುವ ಜಡೆಗೂದಲಿನ, ಚಂದ್ರನನ್ನು ಧರಿಸಿದ್ದ ಮುಡಿಯ, ಥಳಥಳಿಸುವ ನಗುಮುಖದ, ಎರಡು ಕಿವಿಗಳಲ್ಲಿಯೂ ನಾಗಕುಂಡಲ ವನ್ನು ಧರಿಸಿದ್ದ, ಪ್ರಕಾಶಿಸುವ ಮೂರು ಕಣ್ಣಿನ, ಮಿರುಗುವ ಗಲ್ಲದ, ನುಣುಪಾದ ತುಟಿಯ, ವಿಷಕಂಠದ, ಅರಳಿದ ಅಭಯಹಸ್ತದ, ಗಜಚರ್ಮಾಂಬರದ, ನಸುನಗುವನ್ನು ಸೂಸುವ, ಪ್ರಿಯೆಗೆ ಆಶಿಸುವ ಮನದ, ಮನೋಹರವಾದ ಶರೀರಕಾಂತಿಯನ್ನು

CC-0. Jangamwadi Math Collection. Digitized by eGangotri

ಜಯ ಜಯ ಜಗನ್ನಾಥ ಜಯ ಸಕಲಗುಣಯೂಥ
ಜಯ ಜಯ ಮಹಾದೇವ ಜಯ ದುರಿತವನದಾವ
ಜಯ ಜಯ ಪ್ರಮಥರಾಜ ಜಯ ಕೋಟಿರವಿತೇಜ ಜಯ ಶಶಿಕಲಾವತಂಸ
ಜಯ ಜಯ ಶುಭಾಕಾರ ಜಯ ಭಕ್ತಮಂದಾರ
ಜಯ ಜಯ ನಿರಾವರಣ ಜಯ ಪುಣ್ಯಮಯಚರಣ
ಜಯ ಜಯ ನಿಗಮಕೋಶ ಜಯ ಮಹಾಂಬರಕೇಶ ಜಯಯೆನುತ್ತಡಿಗೆಡೆದಳು ೧೧

ಬಡವಂಗೆ ಕಡವರಂ ಪಸಿದವಂಗೊಳ್ಗಣಿಸು
ನಡೆಗೆಟ್ಟ ಪೆಳವಂಗೆ ಕಾಲಂಧಕಂಗೆ ಕಣ್
ನುಡಿ ಮೂಕಗರತಂಗೆ ಶೀತಾಂಬು ತಾಪತ್ರಯದೆ ನೊಂದ ಸಂಸಾರಿಗೆ
ಬಿಡದೆ ಸದ್ಗುರುಬೋಧೆ ರೋಗಿಗಮೃತಂ ಸೇದೆ
ವಡೆದಂಗೆ ತಂಗಾಳಿ ಪಗಲ ನೈದಿಲಬನ
ಕ್ಕುಡುರಾಜನಿರದ ದೊರೆಕೊಂಡೊಲಾಯ್ತುಮೆಗೆ ಶಿವನಡಿಗಳಂ ಕಾಣಲೊಡನೆ ೧೨

ಶ್ರುತಿನಿಕರಮೌಳಿ ಮೌಳಿಯನೆತ್ತಿ ನಿಜರಮಣಿ
ಗತಿಶಯಕೃಪೋಕ್ತಿಯಿಂ ಬೆಸಸಿದಂ ಲೋಕಸ
ನ್ನುತೆ ನಿನ್ನ ಮನವನೀಕ್ಷಿಪೆನೆಂದಿನಿತ್ತು ದಿವಸಂ ತವೆದೆಸ್ಸೆಸೆ ಮುಂದೆ

ಹೊಂದಿದ, ಕರುಣೆಯನ್ನು ತಾಳಿದ ಶಿವನು ಸಂತೋಷದಿಂದ ರಂಜಿಸುತ್ತಿದ್ದನು. ೧೧. ಜಯ, ಜಯ ಜಗನ್ನಾಥ, ಸಕಲ ಗುಣಗಳ ಸಮೂಹಗಳುಳ್ಳವನೇ ಜಯವಾಗಲಿ. ಜಯ ಜಯ ಮಹಾದೇವ ಪಾಪವೆಂಬ ಕಾಡಿಗೆ ಕಾಳ್ಗಿಚ್ಚಿನಂತಿರುವವನೇ ಜಯವಾಗಲಿ. ಜಯ ಜಯ ಪ್ರಮಥಗಣಗಳ ರಾಜನೆ, ಕೋಟಿ ಸೂರ್ಯಪ್ರಕಾಶನೇ ಜಯವಾಗಲಿ, ಚಂದ್ರಕಲೆಯನ್ನು ಆಭರಣವಾಗಿ ಉಳ್ಳವನಿಗೆ ಜಯವಾಗಲಿ, ಜಯ ಜಯ ಶುಭಾಕಾರ-ಭಕ್ತಜನಕ್ಕೆ ಮಂದಾರವೃಕ್ಷದಂತಹವನಿಗೆ ಜಯವಾಗಲಿ, ದಿಗಂಬರನಿಗೆ ಜಯ ಜಯ, ಪುಣ್ಯಮಯವಾದ ಪಾದವುಳ್ಳವನಿಗೆ ಜಯವಾಗಲಿ, ವೇದಗಳಿಗೆ ಆಗರನಾದವನಿಗೆ ಜಯಜಯ, ಆಕಾಶವನ್ನೇ ತಲೆಗೂದಲಾಗಿ (ವ್ಯೋಮಕೇಶ) ಉಳ್ಳವನಿಗೆ ಜಯವಾಗಲಿ ಎನ್ನುತ್ತ ಶಂಕರನ ಪಾದಗಳಿಗೆ ನಮಿಸಿದಳು. ೧೨. ಶಿವನ ಪಾದಗಳನ್ನು ನೋಡಿದ ಕೂಡಲೇ ಪಾರ್ವತಿಗೆ ಬಡವನಿಗೆ ಬಂಗಾರ, ಹಸಿದವನಿಗೆ ಉತ್ತಮವಾದ ಆಹಾರ, ಓಡಾಡಲು ಅಸಮರ್ಥನಾದ ಹೆಳವನಿಗೆ ಕಾಲು, ಕುರುಡನಿಗೆ ಕಣ್ಣು, ಮೂಗನಿಗೆ ಮಾತು, ಬಾಯಾರಿದವನಿಗೆ ತಣ್ಣನೆಯ ನೀರು, ತಾಪತ್ರಯದಿಂದ ನೊಂದ ಸಂಸಾರಿಗೆ ಉತ್ತಮವಾದ ಗುರುವಿನ ಉಪದೇಶ, ರೋಗಿಷ್ಠನಿಗೆ ಅಮೃತ, ಆಯಾಸಗೊಂಡವನಿಗೆ ತಣ್ಣನೆಯ ಗಾಳಿ, ಹಗಲಿನಲ್ಲಿ ನೈದಿಲೆಯ ವನಕ್ಕೆ ಚಂದ್ರನು ದೊರೆತಂತೆ ಮಹದಾನಂದವಾಯಿತು. ೧೩. ವೇದಸಮೂಹಗಳಿಗೆ ಕಿರೀಟಪ್ರಾಯನಾದ ಶಿವನು ತನ್ನ ಪ್ರಿಯೆಯಾದ ಪಾರ್ವತಿಯ ತಲೆಯನ್ನೆತ್ತಿ ಅತಿಶಯವಾದ ಕೃಪೆಯಿಂದ ಈ ರೀತಿ ಹೇಳಿದನು-ಸಕಲ ಲೋಕಗಳಿಂದಲೂ ಹೊಗಳಿಸಿಕೊಳ್ಳುವವಳೆ, ನಿನ್ನ ಮನಸ್ಸನ್ನು ಪರೀಕ್ಷೆ ಮಾಡಬೇಕೆಂದು

CC-0. Jangamwadi Math Collection. Digitized by eGangotri

ಕೃತಕವಲ್ಲೆನ್ನ ಮೆಯ್ಯರೆಯ ನೀಂ ಮನೆಮಾಡಿ
ಪ್ರತಿಪಾಲಿಸಳ್ಕರಿಂ ಸಕಲಲೋಕಮನೆನಲ್
ಧೃತಸೋಮನಡಿಗಳ್ಗೆ ಮಗುಳೆರಗಿ ನಿಂದು ಬಿನ್ನವಿಸಿದಳಗೇಂದ್ರತನುಜೆ ೧೩

ಕಾಯಭವನೆನ್ನ ಕಾರಣದಿಂದೆ ತನ್ನ ಸತ್
ಕಾಯಮಂ ನಿಮಗರ್ಪಿಸಿದ ಸುಕೃತಭೂರುಹಂ
ಕಾಯಬೇಡವೆ ಮುನ್ನಮದು ಕಾರಣದೊಳವನ ಹರಣಮಂ ಕೊಟ್ಟು ತನ್ನ
ಕಾಯಬೇಕಾಮೇಲೆ ಹರಿಮುಖ್ಯನಿರ್ಜರನಿ
ಕಾಯದೊಡನೈತಂದು ಗಿರಿರಾಜನಾಲಯದ
ಕಾಯಮಾನದ ಕೆಳಗೆ ಕಲ್ಯಾಣಮಪ್ಪುದೆಂದಡಿವಿಡಿದಳಗಜೆ ಶಿವನ ೧೪

ಈಶ್ವರಾಜ್ಞೆಯನುಳಿಯಬಾರದೆಂಬುಕ್ತಿಯಂ
ಶಾಶ್ವತಂ ಮಾಡಬೇಕಲ್ಲದುಳಿದರೆ ಮಾತ
ರಿಶ್ವಮಿತ್ರಂಗಾಹುತಿಯನೀಯಬೇಕಲ್ಲದಿತ್ತುದಂ ತೆಗೆಯಬಹುದೇ
ವಿಶ್ವಕೆಲ್ಲಂ ಮನೋಭವನಾಗಲೀಮೆಂ ರ
ತೀಶ್ವರನನೀ ರತಿಗೆನೆನುತಿತ್ತು ಶಂಭು ಪ
ರ್ಮೇಶ್ವರಿಯ ಮದುವೆಯಾದಪೆನೆಂದು ಬೀಳ್ಕೊಟ್ಟು ಕೈಲಾಸಮಂ ಪೊಕ್ಕನು ೧೫

ಇಷ್ಟು ದಿವಸಗಳೂ ತಡೆದಿದ್ದೆ. ಇನ್ನು ಮುಂದೆ ನನ್ನ ಪ್ರೇಮದಲ್ಲಿ ಕಪಟವಿಲ್ಲ. ನನ್ನ ಶರೀರದ ಅರ್ಧಭಾಗವನ್ನೇ ನೀನು ಮನೆ ಮಾಡಿಕೊಂಡು ಪ್ರೀತಿಯಿಂದ ಸಕಲ ಲೋಕವನ್ನು ಪರಿಪಾಲಿಸು—ಎಂದನು, ಆಗ ಗಿರಿಜೆಯು ಚಂದ್ರಶೇಖರನ ಪಾದಗಳಿಗೆ ಮತ್ತೆ ನಮಸ್ಕರಿಸಿ ನಿಂತು ಈ ರೀತಿ ವಿಜ್ಞಾಪಿಸಿಕೊಂಡಳು. ೧೪. ಮನ್ಮಥನು ನನಗಾಗಿ ತನ್ನ ಶರೀರವನ್ನು ನಿಮಗೆ ಅರ್ಪಿಸಿದ, ಪರೋಪಕಾರವೆಂಬ ಕಲ್ಪವೃಕ್ಷವಾದ ನೀವು ಅವನನ್ನು ಕಾಯಬಾರದೆ? ಆ ಕಾರಣದಿಂದ ಮೊದಲು ಅವನ ಪ್ರಾಣವನ್ನು ಕೊಟ್ಟು ನನ್ನನ್ನು ಕಾಪಾಡಬೇಕು. ಅನಂತರ ವಿಷ್ಣು ಮುಂತಾದ ಮುಖ್ಯ ದೇವತೆಗಳ ಸಮೂಹದೊಡನೆ ಬಂದು ಪರ್ವತರಾಜನ ಅರಮನೆಯ ಮದುವೆಯ ಚಪ್ಪರದಲ್ಲಿ ಮದುವೆಮಾಡಿಕೊಳ್ಳಬೇಕು ಎಂದು ಹೇಳಿ ಪಾರ್ವತಿಯು ಶಿವನ ಪಾದಗಳಿಗೆ ನಮಸ್ಕರಿಸಿದಳು. ೧೫. ಈಶ್ವರನ ಆಜ್ಞೆಯನ್ನು ಮೀರಬಾರದು ಎಂಬ ಮಾತು ಶಾಶ್ವತವಾಗುವಂತೆ ಮಾಡಬೇಕು. ಅಲ್ಲದೆ ಆ ರೀತಿ ಮೀರಿದರೆ ಅಗ್ನಿಗೆ ಆಹುತಿಯನ್ನು ಕೊಡಬೇಕು. ಹಾಗೆ ಕೊಟ್ಟ ಮೇಲೆ ಉಳಿಸಬಹುದೇ ? ಪ್ರಪಂಚಕ್ಕೆಲ್ಲ ಅವನು ಮನೋಭವನಾಗುವಂತೆ ರತಿಗೆ ಅವಳ ಪತಿ ಮನ್ಮಥನನ್ನು ಕೊಡುತ್ತೇನೆ ಎಂದು ಹೇಳಿ ಮಾತನ್ನು ಕೊಟ್ಟನು. ಅನಂತರ ಪಾರ್ವತಿಯನ್ನು ಮದುವೆಯಾಗಿ ನಂಬುಗೆಯನ್ನಿತ್ತು ಶಿವನು ಆಕೆಯನ್ನು ಕಳಿಸಿ ತಾನು

CC-0. Jangamwadi Math Collection. Digitized by eGangotri

ಬಂದಪನಲಾ ಶಿವಶಿವಾ ನಿನ್ನ ದಸೆಯಿಂದ
ಲಿಂದೆಸುಧನ್ಯರೋ ನೋಳ್ಪೊಡಾವೆನುತೆ ಪಾ
ದೇಂದೀವರಕ್ಕೆರಗಿ ನಿಜನಿಳಯಕೊಯ್ದರತಿವಿಭವದಿಂ ಪಾರ್ವತಿಯನು ೧೮

ರಾಜಿಸುತ್ತಿರ್ಪ ಮಾಂಗಲ್ಯ ಮಜ್ಜನ ದಿವ್ಯ
ಭೋಜನಾದಿಗಳಿಂದಲುಪಚರಿಸಿ ಭೂಮಿಧರ
ರಾಜನುಂ ಮೇನೆಯುಂ ಮಗಳೆಂಬ ಭಾವನೆಯನುಳಿದು ಪರಶಕ್ತಿಯೆಂದು
ಓಜೆದಪ್ಪದೆ ಬಹಳಭಯಭಕ್ತಿಯಿಂ ಪದಸ
ರೋಜಂಗಳಂ ಭಜಿಸುತಿರ್ದರಾ ಭಕ್ತಸುರ
ಭೂಜೆಯಂ ಪೀನವಕ್ಷೋಜೆಯಂ ನತಸುರಸಮಾಜೆಯಂ ವಿಭ್ರಾಜೆಯಂ ೧೯

ಅತ್ತಲಾ ಪರಶಿವಂ ಕೈಲಾಸಪುರದೊಳಗಿ
ರುತ್ತಿರ್ದು ಸಪ್ತರ್ಷಿಗಳನಿರದೆ ಕರೆದು ಶೈ
ಲೋತ್ತಮನ ಮಗಳ ತಾಂ ಮದುವೆಯಾಗಲ್ವೇಳ್ಕುಮಾತನಂ ಕೇಳಿಮೆನಲು
ಚಿತ್ತಹರುಷದೊಳಿವರ್ ನಡೆತರಲ್ಕಾಗ ಕಾ
ಣುತ್ತೆ ಗಿರಿರಾಜನರ್ಘ್ಯಾಸನಾದಿಗಳನೊ
ಲ್ದಿತ್ತು ವಿವಿಧೋಪಚಾರಂಗಳಿಂ ಸತ್ಕರಿಸೆ ಬೆಸಗೊಂಡನುತ್ಸವದೊಳು ೨೦

ಬಂದ ಹದನಂ ನಿರೂಪಿಸುವುದೆನೆ ಮುನಿನಾಥ
ರೆಂದರೀಶಂಗೆ ಹಿಮಕರಕಲಾಜೂಟಂಗೆ
ವೃಂದಾರಕೇಂದ್ರ ಕಮಲಜ ಮುಕುಂದಾದಿ ಸುರನಿಕರಪೂಜಿತಪದಂಗೆ

ಕಾರಣದಿಂದ ಆತನ ದರ್ಶನ ಮಾಡುವ ನಾವು ಎಷ್ಟು ಧನ್ಯರು ? ಎಂದು ಪಾದಕಮಲಗಳಿಗೆ ನಮಸ್ಕರಿಸಿ ಪಾರ್ವತಿಯನ್ನು ತಮ್ಮ ಅರಮನೆಗೆ ಅತಿ ವೈಭವದಿಂದ ಕರೆದುಕೊಂಡು ಹೋದರು. ೧೯. ಶೋಭಾಯಮಾನವಾದ ಮಂಗಳಸ್ನಾನ, ಮೃಷ್ಟಾನ್ನ ಭೋಜನಗಳಿಂದ ಆಕೆಯನ್ನುಪಚರಿಸಿದರು. ಪರ್ವತರಾಜನೂ ಮೇನೆಯೂ ಮಗಳೆಂಬ ಭಾವನೆಯನ್ನು ಬಿಟ್ಟು ಆ ಭಕ್ತರ ಕಲ್ಪವೃಕ್ಷವನ್ನೂ, ಉನ್ನತವಾದ ಎದೆಯುಳ್ಳವಳನ್ನೂ, ದೇವತೆಗಳಿಂದ ನಮಸ್ಕರಿಸಿಕೊಳ್ಳುವ ತೇಜಸ್ವಿನಿಯನ್ನೂ ಪರಶಕ್ತಿ ಎಂದು ಕ್ರಮ ತಪ್ಪದೆ ಬಹಳ ಭಯ-ಭಕ್ತಿಯಿಂದ ಆಕೆಯ ಪಾದಕಮಲಗಳನ್ನು ಸೇವಿಸುತ್ತಿದ್ದರು. ೨೦. ಅತ್ತಲಾಗಿ ಪರಮೇಶ್ವರನು ಕೈಲಾಸದಲ್ಲಿ ಇದ್ದುಕೊಂಡು ಸಪ್ತಋಷಿಗಳನ್ನು ಕರೆದು ಪರ್ವತರಾಜನ ಮಗಳನ್ನು ನಾನು ಮದುವೆಯಾಗಬೇಕು, ಆತನನ್ನು ಕೇಳಿ ಎಂದನು. ಅವರು ಮನಸ್ಸಂತೋಷದಿಂದ ಹೊರಟುಬಂದರು. ಅವರನ್ನು ನೋಡಿ ಪರ್ವತರಾಜನೇ ಅರ್ಘ್ಯ ಆಸನಗಳನ್ನು ಮನಃಪೂರ್ವಕವಾಗಿ ಕೊಟ್ಟು, ನಾನಾ ಉಪಚಾರಗಳನ್ನು ಮಾಡಿ ಸಂತೋಷದಿಂದ ವಿಜ್ಞಾಪಿಸಿಕೊಂಡನು. ೨೧. ಬಂದ ಕಾರಣವೇನು ಹೇಳಿ ಎನ್ನಲು ಋಷಿಗಳು 'ಈಶ್ವರನಿಗೆ, ಚಂದ್ರಶೇಖರನಿಗೆ, ದೇವೇಂದ್ರ, ಬ್ರಹ್ಮ, ವಿಷ್ಣು ಮುಂತಾದ ದೇವತಾಸಮೂಹದಿಂದ ಪೂಜಿಸಿಕೊಳ್ಳುವ ಪಾದವುಳ್ಳವನಿಗೆ ಮಲ್ಲಿಗೆ, ಕರ್ಪೂರ, ಶುದ್ಧ

CC-0. Jangamwadi Math Collection. Digitized by eGangotri

ಕುಂದಕರ್ಪೂರಶುದ್ಧಸ್ಫಟಿಕವರ್ಣಂಗೆ
ಮಂದರಾಚಲನಿವಾಸಂಗೆ ಮುದದಿಂ ಬೇಡ
ಬಂದೆವು ಭವತ್ಸುತೆಯನಖಿಳಜನಸನ್ನುತೆಯನಮರಕುಲವಂದಿತೆಯನು ೨೧

ಈಶ್ವರಿಯ ಘನತಪಕೆ ಮೆಚ್ಚಿ ಕರುಣದೊಳೆ ಪರ
ಮೇಶ್ವರಂ ಸುರನರೋರಗರಾದಿ ನಾನಾ ಗ
ಣೇಶ್ವರರ್ ಸಹಿತಮತಿವಿಭವದಿಂ ನಿನ್ನ ರಾಜಾಲಯಕೆ ಬಂದು ಕೂಡೆ
ಶಾಶ್ವತಂ ಮದುವೆಯಾದಪೆನೆಂದು ಕಳುಹಿದನ
ಗೇಶ್ವರನೆ ಕೇಳೆಂದು ನುಡಿಯಲದು ಕೇಳ್ದಾ ಮು
ನೀಶ್ವರರ ಮೊಗನೋಡಿ ನುಡಿದನಾ ಗಿರಿರಾಜನಧಿಕತರವಿನಯದಿಂದ ೨೨

ಲೇಸಾದುದಿಂದೆಮಗೆ ನಮ್ಮ ಮಗಳಿಷ್ಟಾರ್ಥ
ಕೈಸಾರ್ದುದೀಶಂಗೆ ಕೊಟ್ಟೆವೆರಡಿಲ್ಲದೆ ಸು
ಧಾಸೂತಿಮುಖಿಯನೆಂದಖಿಳಬಾಂಧವವಿತತಿಯುಂ ಕರೆಸಲಾಕ್ಷಣದೊಳು
ಆ ಸಪ್ತಋಷಿವರರ್ ಗಿರಿಜೆಗಂದಾ ಘನವಿ
ಲಾಸದಿಂದುಂಗುರುಡಿಕೆಯ ಮಾಡಿ ಬಳಿಕಾ ಮ
ಹಾಸಭೆಗೆ ನಿಜ್ಚತಾಂಬೂಲಮಂ ಸಾಗಿಸಿದರಧಿಕತರವಿಭವದಿಂದೆ ೨೩

ಗಿರಿರಾಜನಾ ಋಷಿಗಳಂ ಕಳುಹಿ ಬಳಿಕ ಘನ
ಹರುಷದಿಂ ವಿಶ್ವಕರ್ಮನನೊಡನೆ ಕರೆಸಿ ಮ
ದ್ವರಸುತೆಯ ಮದುವೆಗೆ ವಿವಾಹಮಂಟಪವ ರಚಿಸೆನಲವಂ ಭಕ್ತಿಯಿಂದ

ವಾದ ಸ್ಫಟಿಕದಂತಹ ಬಣ್ಣವುಳ್ಳವನಿಗೆ, ಮಂದರಾಚಲದಲ್ಲಿ ವಾಸಿಸುವವನಿಗೆ, ಸರ್ವ ಜನರಿಂದಲೂ ಹೊಗಳಿಸಿಕೊಳ್ಳುವ, ಎಲ್ಲ ದೇವತೆಗಳೂ ನಮಸ್ಕರಿಸಲ್ಪಡುವ ನಿನ್ನ ಮಗಳನ್ನು ಸಂತೋಷದಿಂದ ಬೇಡಲು ಬಂದೆವು' ಎಂದು ಹೇಳಿದರು. ೨೨. ಪಾರ್ವತಿಯ ಘೋರವಾದ ತಪಸ್ಸಿಗೆ ಮೆಚ್ಚಿ ಕರುಣೆಯಿಂದ ಶಾಶ್ವತನಾದ ಪರಮೇಶ್ವರನು ದೇವತೆ-ಮನುಷ್ಯ-ಸರ್ಪ ಮೊದಲಾದ ನಾನಾಗಣಗಳ ಜೊತೆಗೂಡಿ ಬಹಳ ವೈಭವದಿಂದ ನಿನ್ನ ಅರಮನೆಗೆ ಬಂದು ಮದುವೆಯಾಗುತ್ತೇನೆಂದು ನಮ್ಮನ್ನು ಕಳುಹಿಸಿದ, ಪರ್ವತರಾಜನೇ ಕೇಳು ಎಂದು ಹೇಳಿದರು. ಆ ಮಾತನ್ನು ಕೇಳಿ ಋಷಿಗಳ ಮುಖವನ್ನು ನೋಡಿ ಪರ್ವತರಾಜನು ಬಹಳ ವಿನಯದಿಂದ ಹೇಳಿದನು. ೨೩. ಈ ದಿನ ನಮಗೆ ಒಳ್ಳೆಯ ದಾಯಿತು. ನಮ್ಮ ಮಗಳ ಮನದ ಆಸೆ ಕೈಗೂಡಿತು. ಒಂದೇ ಮನಸ್ಸಿನಿಂದ ಚಂದ್ರ ಮುಖಿಯನ್ನು ಈಶ್ವರನಿಗೆ ಕೊಟ್ಟಿದ್ದೇವೆ ಎಂದು ಆ ತಕ್ಷಣ ಎಲ್ಲ ಬಂಧುಬಾಂಧವರ ಸಮೂಹವನ್ನೂ ಕರೆಸಿದನು. ಆ ಸಪ್ತಋಷಿಗಳು ಪಾರ್ವತಿಗೆ ಆ ದಿನ ಅತಿಯಾದ ಸಂತೋಷದಿಂದ ಉಂಗುರವಸ್ತ್ರಗಳನ್ನು ಕೊಟ್ಟು ಅನಂತರ ವೈಭವದಿಂದ ಆ ಮಹಾ ಸಭೆಗೆ ನಿಶ್ಚಯ ತಾಂಬೂಲಶಾಸ್ತ್ರವನ್ನು ನೆರವೇರಿಸಿದರು. ೨೪. ಪರ್ವತರಾಜನು ಆ ಋಷಿಗಳನ್ನು ಕಳಿಸಿಕೊಟ್ಟು ಅನಂತರ ಬಹಳ ಸಂತೋಷದಿಂದ ವಿಶ್ವಕರ್ಮನನ್ನು ತಕ್ಷಣ



CC-0. Jangamwadi Math Collection. Digitized by eGangotri

ಬಂದಪನಲಾ ಶಿವಶಿವಾ ನಿನ್ನ ದಸೆಯಿಂದ
ಲಿಂದೆಸುಧನ್ಯರೋ ನೋಳ್ಪೊಡಾವೆನುತೆ ಪಾ
ದೇಂದೀವರಕ್ಕೆರಗಿ ನಿಜನಿಳಯಕೊಯ್ದರತಿವಿಭವದಿಂ ಪಾರ್ವತಿಯನು ೧೮

ರಾಜಿಸುತ್ತಿರ್ಪ ಮಾಂಗಲ್ಯ ಮಜ್ಜನ ದಿವ್ಯ
ಭೋಜನಾದಿಗಳಿಂದಲುಪಚರಿಸಿ ಭೂಮಿಧರ
ರಾಜನುಂ ಮೇನೆಯುಂ ಮಗಳೆಂಬ ಭಾವನೆಯನುಳಿದು ಪರಶಕ್ತಿಯೆಂದು
ಓಜೆದಪ್ಪದೆ ಬಹಳಭಯಭಕ್ತಿಯಿಂ ಪದಸ
ರೋಜಂಗಳಂ ಭಜಿಸುತಿರ್ದರಾ ಭಕ್ತಸುರ
ಭೂಜೆಯಂ ಪೀನವಕ್ಷೋಜೆಯಂ ನತಸುರಸಮಾಜೆಯಂ ವಿಭ್ರಾಜೆಯಂ ೧೯

ಅತ್ತಲಾ ಪರಶಿವಂ ಕೈಲಾಸಪುರದೊಳಗಿ
ರುತ್ತಿರ್ದು ಸಪ್ತರ್ಷಿಗಳನಿರದೆ ಕರೆದು ಶೈ
ಲೋತ್ತಮನ ಮಗಳ ತಾಂ ಮದುವೆಯಾಗಲ್ವೇಳ್ಕುಮಾತನಂ ಕೇಳಿಮೆನಲು
ಚಿತ್ತಪರುಷದೊಳಿವರ್ ನಡೆತರಲ್ಕಾಗ ಕಾ
ಣುತ್ತೆ ಗಿರಿರಾಜನರ್ಘ್ಯಾಸನಾದಿಗಳನೊ
ಲ್ದಿತ್ತು ವಿವಿಧೋಪಚಾರಂಗಳಿಂ ಸತ್ಕರಿಸೆ ಬೆಸಗೊಂಡನುತ್ಸವದೊಳು ೨೦

ಬಂದ ಹದನಂ ನಿರೂಪಿಸುವುದೆನೆ ಮುನಿನಾಥ
ರೆಂದರೀಶಂಗೆ ಹಿಮಕರಕಲಾಜೂಟಂಗೆ
ವೃಂದಾರಕೇಂದ್ರ ಕಮಲಜ ಮುಕುಂದಾದಿ ಸುರನಿಕರಪೂಜಿತಪದಂಗೆ

ಕಾರಣದಿಂದ ಆತನ ದರ್ಶನ ಮಾಡುವ ನಾವು ಎಷ್ಟು ಧನ್ಯರು ? ಎಂದು ಪಾದಕಮಲ ಗಳಿಗೆ ನಮಸ್ಕರಿಸಿ ಪಾರ್ವತಿಯನ್ನು ತಮ್ಮ ಅರಮನೆಗೆ ಅತಿ ವೈಭವದಿಂದ ಕರೆದುಕೊಂಡು ಹೋದರು. ೧೯. ಶೋಭಾಯಮಾನವಾದ ಮಂಗಳಸ್ನಾನ, ಮೃಷ್ಟಾನ್ನ ಭೋಜನ ಗಳಿಂದ ಆಕೆಯನ್ನುಪಚರಿಸಿದರು. ಪರ್ವತರಾಜನೂ ಮೇನೆಯೂ ಮಗಳೆಂಬ ಭಾವನೆ ಯನ್ನು ಬಿಟ್ಟು ಆ ಭಕ್ತರ ಕಲ್ಪವೃಕ್ಷವನ್ನೂ, ಉನ್ನತವಾದ ಎದೆಯುಳ್ಳವಳನ್ನೂ, ದೇವತೆಗಳಿಂದ ನಮಸ್ಕರಿಸಿಕೊಳ್ಳುವ ತೇಜಸ್ವಿನಿಯನ್ನೂ ಪರಶಕ್ತಿ ಎಂದು ಕ್ರಮ ತಪ್ಪದೆ ಬಹಳ ಭಯ-ಭಕ್ತಿಯಿಂದ ಆಕೆಯ ಪಾದಕಮಲಗಳನ್ನು ಸೇವಿಸುತ್ತಿದ್ದರು. ೨೦. ಅತ್ತ ಲಾಗಿ ಪರಮೇಶ್ವರನು ಕೈಲಾಸದಲ್ಲಿ ಇದ್ದುಕೊಂಡು ಸಪ್ತಋಷಿಗಳನ್ನು ಕರೆದು ಪರ್ವತ ರಾಜನ ಮಗಳನ್ನು ನಾನು ಮದುವೆಯಾಗಬೇಕು, ಆತನನ್ನು ಕೇಳಿ ಎಂದನು. ಅವರು ಮನಸ್ಸಂತೋಷದಿಂದ ಹೊರಟುಬಂದರು. ಅವರನ್ನು ನೋಡಿ ಪರ್ವತರಾಜನೇ ಅರ್ಘ್ಯ ಆಸನಗಳನ್ನು ಮನಃಪೂರ್ವಕವಾಗಿ ಕೊಟ್ಟು, ನಾನಾ ಉಪಚಾರಗಳನ್ನು ಮಾಡಿ ಸಂತೋಷದಿಂದ ವಿಜ್ಞಾಪಿಸಿಕೊಂಡನು. ೨೧. ಬಂದ ಕಾರಣವೇನು ಹೇಳಿ ಎನ್ನಲು ಋಷಿಗಳು 'ಈಶ್ವರನಿಗೆ, ಚಂದ್ರಶೇಖರನಿಗೆ, ದೇವೇಂದ್ರ, ಬ್ರಹ್ಮ, ವಿಷ್ಣು ಮುಂತಾದ ದೇವತಾಸಮೂಹದಿಂದ ಪೂಜಿಸಿಕೊಳ್ಳುವ ಪಾದವುಳ್ಳವನಿಗೆ ಮಲ್ಲಿಗೆ, ಕರ್ಪೂರ, ಶುದ್ಧ

CC-0. Jangamwadi Math Collection. Digitized by eGangotri

ಕುಂದಕರ್ಪೂರಶುದ್ಧಸ್ಫಟಿಕವರ್ಣಂಗೆ
ಮಂದರಾಚಲನಿವಾಸಂಗೆ ಮುದದಿಂ ಬೇಡ
ಬಂದೆವು ಭವತ್ಸುತೆಯನಖಿಳಜನಸನ್ನುತೆಯನಮರಕುಲವಂದಿತೆಯನು ೨೧

ಈಶ್ವರಿಯ ಘನತಪಕೆ ಮೆಚ್ಚಿ ಕರುಣದೊಳೆ ಪರ
ಮೇಶ್ವರಂ ಸುರನರೋರಗರಾದಿ ನಾನಾ ಗ
ಣೇಶ್ವರರ್ ಸಹಿತಮತಿವಿಭವದಿಂ ನಿನ್ನ ರಾಜಾಲಯಕೆ ಬಂದು ಕೂಡೆ
ಶಾಶ್ವತಂ ಮದುವೆಯಾದಪೆನೆಂದು ಕಳುಹಿದನ
ಗೇಶ್ವರನೆ ಕೇಳೆಂದು ನುಡಿಯಲದು ಕೇಳ್ದಾ ಮು
ನೀಶ್ವರರ ಮೊಗನೋಡಿ ನುಡಿದನಾ ಗಿರಿರಾಜನಧಿಕತರವಿನಯದಿಂದ ೨೨

ಲೇಸಾದುದಿಂದೆಮಗೆ ನಮ್ಮ ಮಗಳಿಷ್ಟಾರ್ಥ
ಕೈಸಾರ್ದುದೀಶಂಗೆ ಕೊಟ್ಟೆವೆರಡಿಲ್ಲದೆ ಸು
ಧಾಸೂತಿಮುಖಿಯನೆಂದಖಿಳಬಾಂಧವವಿತತಿಯಂ ಕರೆಸಲಾಕ್ಷಣದೊಳು
ಆ ಸಪ್ತಋಷಿವರರ್ ಗಿರಿಜೆಗಂದಾ ಘನವಿ
ಲಾಸದಿಂದುಂಗುರುಡಿಕೆಯ ಮಾಡಿ ಬಳಿಕಾ ಮ
ಹಾಸಭೆಗೆ ನಿಚ್ಚತಾಂಬೂಲಮಂ ಸಾಗಿಸಿದರಧಿಕತರವಿಭವದಿಂದೆ ೨೩

ಗಿರಿರಾಜನಾ ಋಷಿಗಳಂ ಕಳುಹಿ ಬಳಿಕ ಘನ
ಹರುಷದಿಂ ವಿಶ್ವಕರ್ಮನನೊಡನೆ ಕರೆಸಿ ಮ
ದ್ವರಸುತೆಯ ಮದುವೆಗೆ ವಿವಾಹಮಂಟಪವ ರಚಿಸೆನಲವಂ ಭಕ್ತಿಯಿಂದೆ

ವಾದ ಸ್ಫಟಿಕದಂತಹ ಬಣ್ಣವುಳ್ಳವನಿಗೆ, ಮಂದರಾಚಲದಲ್ಲಿ ವಾಸಿಸುವವನಿಗೆ, ಸರ್ವ ಜನರಿಂದಲೂ ಹೊಗಳಿಸಿಕೊಳ್ಳುವ, ಎಲ್ಲ ದೇವತೆಗಳೂ ನಮಸ್ಕರಿಸಲ್ಪಡುವ ನಿನ್ನ ಮಗಳನ್ನು ಸಂತೋಷದಿಂದ ಬೇಡಲು ಬಂದೆವು' ಎಂದು ಹೇಳಿದರು. ೨೨. ಪಾರ್ವತಿಯ ಘೋರವಾದ ತಪಸ್ಸಿಗೆ ಮೆಚ್ಚಿ ಕರುಣೆಯಿಂದ ಶಾಶ್ವತನಾದ ಪರಮೇಶ್ವರನು ದೇವತೆ-ಮನುಷ್ಯ-ಸರ್ಪ ಮೊದಲಾದ ನಾನಾಗಣಗಳ ಜೊತೆಗೂಡಿ ಬಹಳ ವೈಭವದಿಂದ ನಿನ್ನ ಅರಮನೆಗೆ ಬಂದು ಮದುವೆಯಾಗುತ್ತೇನೆಂದು ನಮ್ಮನ್ನು ಕಳುಹಿಸಿದ, ಪರ್ವತರಾಜನೇ ಕೇಳು ಎಂದು ಹೇಳಿದರು. ಆ ಮಾತನ್ನು ಕೇಳಿ ಋಷಿಗಳ ಮುಖವನ್ನು ನೋಡಿ ಪರ್ವತರಾಜನು ಬಹಳ ವಿನಯದಿಂದ ಹೇಳಿದನು. ೨೩. ಈ ದಿನ ನಮಗೆ ಒಳ್ಳೆಯ ದಾಯಿತು. ನಮ್ಮ ಮಗಳ ಮನದ ಆಸೆ ಕೈಗೂಡಿತು. ಒಂದೇ ಮನಸ್ಸಿನಿಂದ ಚಂದ್ರ ಮುಖಿಯನ್ನು ಈಶ್ವರನಿಗೆ ಕೊಟ್ಟಿದ್ದೇವೆ ಎಂದು ಆ ತಕ್ಷಣ ಎಲ್ಲ ಬಂಧುಬಾಂಧವರ ಸಮೂಹವನ್ನೂ ಕರೆಸಿದನು. ಆ ಸಪ್ತಋಷಿಗಳು ಪಾರ್ವತಿಗೆ ಆ ದಿನ ಅತಿಯಾದ ಸಂತೋಷದಿಂದ ಉಂಗುರವಸ್ತ್ರಗಳನ್ನು ಕೊಟ್ಟು ಅನಂತರ ವೈಭವದಿಂದ ಆ ಮಹಾ ಸಭೆಗೆ ನಿಶ್ಚಯ ತಾಂಬೂಲಶಾಸ್ತ್ರವನ್ನು ನೆರವೇರಿಸಿದರು. ೨೪. ಪರ್ವತರಾಜನು ಆ ಋಷಿಗಳನ್ನು ಕಳಿಸಿಕೊಟ್ಟು ಅನಂತರ ಬಹಳ ಸಂತೋಷದಿಂದ ವಿಶ್ವಕರ್ಮನನ್ನು ತಕ್ಷಣ



CC-0. Jangamwadi Math Collection. Digitized by eGangotri

ಪರಶಿವನ ಮದುವೆಯಿಂದು ಮಿಕ್ಕ ನಾಡಾಡಿ ಸುರ
ಗಿರರ ಮದುವೆಗಳ ಪಾಡಲ್ಲೆಂದು ಕೂಡಿ ನಿ
ರ್ಧರಿಸಿ ತೊಡಗಿದನಖಿಳಪರಿಕರದ ಸಂಗ್ರಹದೊಳೇನೆಂಬೆನಚ್ಚರಿಯಂನು ೨೪

ವರವಜ್ರಮಯದ ಕಂಭಂಗಳಿಂ ಮಾಣಿಕದ
ಪರಿಪರಿಯ ತೊಲೆಗಳಿಂ ಗೋಮೇದಿಕಾವಳಿಯ
ಗುರುತರದ ಬೋದಿಗೆಗಳಿಂದಿಂದ್ರನೀಲಮಯಮಾದ ನೆಲಗಟ್ಟಿನಿಂದೆ
ತರತರದ ವಿಮಲವೈಡೂರ್ಯವೇದಿಕೆಗಳಿಂ
ಪರಮ ಮುಕ್ತಾಫಲದ ಸೂಸಕದ ಲೋವೆಗಳ
ಹೊರಳಿಯಿಂ ಪುಷ್ಯರಾಗದ ಮತ್ತವಾರಣದಿನಾ ಸಭಾಸ್ಥಳವೆಸೆದುದು ೨೫

ಲಲಿತನವಪದ್ಮರಾಗದ ಭಿತ್ತಿ ಭಿತ್ತಿಯೊಳ್
ಥಳಥಳಿಸಿ ರಂಜಿಪ ಸಜೀವಪುತ್ರಿಕೆಗಳಿಂ
ಪೊಳೆವ ಚಿತ್ರದ ಸಿಂಹ ಶಾರ್ದೂಲ ಗಜ ಶರಭ ಭೇರುಂಡ ಮುಖ್ಯಮಾದ
ಇಳೆಯೊಳುಳ್ಳಖಿಳ ಮೃಗ ಪಕ್ಷಿಜಾತಿಗಳ ಸಂ
ಕುಳಮುಂ ವಿಚಿತ್ರವರ್ತನಮನಭಿನಯಿಸುತಿಹ
ಕಳಗೀತಮಂ ಪಾಡುವಂದದೊಳ್ ಮೆರೆವ ಚಿತ್ರದ ಬೊಂಬೆಯೆಸೆದಿರ್ದುವು ೨೬

ಕರೆಸಿ ನನ್ನ ಶ್ರೇಷ್ಠ ಮಗಳ ಮದುವೆಗೆ ವಿವಾಹಮಂಟಪವನ್ನು ರಚಿಸು ಎಂದನು. ಅವನು ಭಕ್ತಿಯಿಂದ ಇದು ಪರಮೇಶ್ವರನ ಮದುವೆ, ಉಳಿದ ಸಾಮಾನ್ಯ ದೇವತೆಗಳ ಮದುವೆಗಳ ರೀತಿಯಲ್ಲ ಎಂದು ನಿರ್ಧರಿಸಿ, ಎಲ್ಲ ಪರಿಕರಗಳ ಸಂಗ್ರಹದಲ್ಲಿ ತೊಡಗಿದನು. ಆಶ್ಚರ್ಯವನ್ನು ಏನೆಂದು ಹೇಳಲಿ ? ೨೫. ಶ್ರೇಷ್ಠವಜ್ರಮಯವಾದ ಕಂಬಗಳಿಂದ, ಮಾಣಿಕ್ಯದ ನಾನಾರೀತಿಯ ತೊಲೆಗಳಿಂದ, ಗೋಮೇದಿಕ ಸಮೂಹಗಳ ದೊಡ್ಡದಾದ ಬೋದಿಗೆಗಳಿಂದ, ಇಂದ್ರನೀಲಮಯವಾದ ನೆಲಗಟ್ಟಿನಿಂದ, ತರತರಹದ ಅಮೂಲ್ಯವಾದ ವೈಡೂರ್ಯಗಳ ಜಗಲಿಗಳಿಂದ, ಮುತ್ತಿನ ಗೊಂಡೆಗಳನ್ನು ಇಳಿಯಬಿಟ್ಟ ಸೂರು ಮಾಡುಗಳ ಸಮೂಹದಿಂದ, ಪುಷ್ಯರಾಗದಿಂದ ಕಂಡರಿಸಿದ ಮದ್ದಾನೆಗಳಿಂದ ಆ ಸಭಾಸ್ಥಳವು ಮನೋಹರವಾಗಿ ಇತ್ತು. ೨೬. ಹೊಚ್ಚ ಹೊಸ ಮಾಣಿಕ್ಯದ ಗೋಡೆಗಳು, ಅವುಗಳಲ್ಲಿ ಥಳಥಳನೆ ಹೊಳೆಯುವ ಸಜೀವವಾದುವೋ ಎಂಬ ಭ್ರಾಂತಿಯನ್ನುಂಟು ಮಾಡುವ ಬೊಂಬೆಗಳು, ಚಿತ್ರಿಸಿದ ಸಿಂಹ, ಶಾರ್ದೂಲ, ಆನೆ, ಶರಭ, ಭೇರುಂಡಗಳೇ ಮೊದಲಾದ ಭೂಮಿಯಲ್ಲಿರುವ ಎಲ್ಲ ಮೃಗಪಕ್ಷಿಜಾತಿಯ ಸಮೂಹ, ಚಿತ್ರ-ವಿಚಿತ್ರ ಭಂಗಿಯಲ್ಲಿ ನರ್ತಿಸುವ, ಮಧುರವಾದ ಹಾಡನ್ನು ಹಾಡುವ ರೀತಿಯಲ್ಲಿ ರಂಜಿಸುವ

CC-0. Jangamwadi Math Collection. Digitized by eGangotri

ಬಿಗಿದ ದೇವಾಂಗವಸ್ತ್ರಂಗಳಿಂ ಝಲ್ಲಿ ಪ
ಟ್ಟಿಗಳ ಮುತ್ತಿನ ಗುಡಿಯ ಪವಳವಳ್ಳಿಗಳ ಕಡು
ಸೊಗಸೀವ ಪರಿಪರಿಯ ಕುಸುಮಮುಂಜರಿಗಳ ವಿಡಾಯದಿಂದೆಡೆಯೆಡೆಯೊಳು
ಝಗಝಗಿಪ ರನ್ನಗನ್ನಡಿಗಳಿಂ ಪರಿಮಳಿಸು
ವಗರುಧೂಪೋದ್ಧೂಮನಿಕರದಿಂ ಕತ್ತುರಿಯ
ಬಗೆಬಗೆಯ ಸಾರಣೆಯ ಕುಂಕುಮದ ಕಾರಣೆಯ ಮಂಟಪಂ ಚೆಲ್ವಾದುದು ೨೭

ಅಲ್ಲಲ್ಲಿ ಸಮೆದ ಪೊನ್ನುಪ್ಪರಿಗೆಯೊಗ್ಗಿನಿಂ
ದಲ್ಲಲ್ಲಿ ಸಮೆದ ಮಣಿವೇದಿಕೆಯ ಪೆಂಪಿನಿಂ
ದಲ್ಲಲ್ಲಿ ಸಮೆದ ಗುಡಿ ಗೂಡಾರ ಬೀಡಾರದರಮನೆಗಳೋಳಿಯಿಂದ
ಅಲ್ಲಲ್ಲಿ ಸಮೆದ ಕ್ರೀಡಾವನದ ಸೊಂಪಿನಿಂ
ದಲ್ಲಲ್ಲಿ ಸಮೆದ ಪೂಗೊಳದ ಶೃಂಗಾರದಿಂ
ದಲ್ಲಲ್ಲಿ ಸಮೆದ ಕೃತಕಾದ್ರಿಯಿಂದಾ ಮಂಟಪಪ್ರದೇಶಂ ಮೆರೆದುದು ೨೮

ಎಡೆಯೆಡೆಗೆ ತೀವಿದ ಸುಗಂಧದ ಕಟಾಹದಿಂ
ಕಡುಗಂಪು ಬೀರುವ ಜವಾದಿಯ ಘಟಂಗಳಿಂ
ದೊಡನೆ ತೀವಿದ ಸುಕಸ್ತೂರಿಗಳ ದೋಣಿಯಿಂದೆಸೆವ ಕರ್ಪೂರಂಗಳ

ಚಿತ್ರದ ಗೊಂಬೆಗಳು ಅಲ್ಲಿ ಶೋಭಿಸುತ್ತಿದ್ದುವು. ೨೭. ಮಂಟಪಕ್ಕೆ ಬಿಗಿದ ರೇಷ್ಮೆ ಬಟ್ಟೆಗಳ, ಗೊಂಡೆ, ಪಟ್ಟಿಗಳ, ಮುತ್ತಿನ ಬಾವುಟಗಳ, ಹವಳದ ಬಳ್ಳಿಗಳ, ಅತಿಯಾಗಿ ಸೊಗಯಿಸುವ ನಾನಾರೀತಿಯ ಹೂಗಳ ಗೊಂಚಲುಗಳ ಆಡಂಬರದಿಂದ ಶೋಭಿಸುತ್ತಿತ್ತು. ಎಲ್ಲೆಲ್ಲೂ ಝಗಝಗಿಸುತ್ತ ಹೊಳೆಯುವ ರತ್ನದ ಕನ್ನಡಿಗಳಿಂದ, ಸುವಾಸನೆಯನ್ನು ಬೀರುವ ಅಗರುಧೂಪದ ಹೊಗೆಯಿಂದ, ಕಸ್ತೂರಿಯ ಸಾರಣೆಗಳಿಂದ, ಕುಂಕುಮದ ಕಾರಣೆಯಿಂದ ಮದುವೆಯಮಂಟಪ ಸೊಗಸಾಗಿ ಕಾಣುತ್ತಿತ್ತು. ೨೮. ಅಲ್ಲಲ್ಲಿ ರಚಿಸಿದ ಚಿನ್ನದ ಉಪ್ಪರಿಗೆಗಳ ಸಮೂಹದಿಂದ, ಅಲ್ಲಲ್ಲಿ ರಚಿಸಿದ ರತ್ನದ ವೇದಿಕೆಗಳ ಸೊಗಸಿನಿಂದ, ಅಲ್ಲಲ್ಲಿ ರಚಿಸಿದ ಬಾವುಟ-ಗುಡಾರ-ಬಿಡಾರದ ಅರಮನೆಯ ಸಾಲಿನಿಂದ, ಅಲ್ಲಲ್ಲಿ ರಚಿಸಿದ ಆಟದ ವನಗಳ ಸೊಂಪಿನಿಂದ, ಅಲ್ಲಲ್ಲಿ ರಚಿಸಿದ ಸುಂದರವಾದ ಹೂವಿನಕೊಳದಿಂದ, ಅಲ್ಲಲ್ಲಿ ರಚಿಸಿದ ಕೃತಕವಾದ ಬೆಟ್ಟಗಳಿಂದ ಆ ಮದುವೆಯ ಮಂಟಪದ ಪ್ರದೇಶವು ಪ್ರಕಾಶಿಸಿತು. ೨೯. ಎಲ್ಲೆಂದರಲ್ಲಿ ತುಂಬಿದ ಸುಗಂಧದ ಕೊಪ್ಪರಿಗೆಯಿಂದ, ಬಹು ಸುವಾಸನೆಯನ್ನು ಬೀರುವ ಜವಾಜಿಯ ಬಿಂದಿಗೆಗಳಿಂದ, ಒಳ್ಳೆಯ ಕಸ್ತೂರಿಯನ್ನು ತುಂಬಿದ ದೋಣಿ ಗಳಿಂದ, ಶೋಭಿಸುವ ಕರ್ಪೂರದ ಕೊಡಗಳಿಂದ, ಕುಂಕುಮದ ಭರಣಿಯಿಂದ, ಸುಗಂಧ

CC-0. Jangamwadi Math Collection. Digitized by eGangotri

ಕೊಡಗಳಿಂ ಕುಂಕುಮದ ರಂಜಣೆಗೆಯಿಂದಂದ
ವಡೆದಿಹ ಕದಂಬಪೂರಿತದ ಪೆಟ್ಟಿಗೆಗಳಿಂ
ದಡಿಗಡಿಗೆ ಪರಿವ ಪನ್ನೀರ ಪರಿಕಾಲ್ಗಳಿಂದಾ ಸ್ಥಳಂ ಚೆಲ್ವಾದುದು ೨೯

ನೀರಡಿಸಿದರ್ಗೆ ನೀರೆರೆವ ಪಸಿದೊಡೆ ಫಲಾ
ಹಾರಮಂ ಕೊಡುವ ಗಂಧವನೀವ ಲಲಿತಕ
ಸ್ತೂರಿ ಕರ್ಪೂರಂಗಳಂ ನೀಡುತಿಹ ರನ್ನಗನ್ನಡಿಗಳಂ ತೋರುವ
ಓರಂತೆ ಬಳಲ್ದರಂ ಸತ್ಕರಿಪ ವಿವಿಧೋಪ
ಚಾರಂಗಳಂ ನುಡಿವ ಪಲವು ಪುತ್ತಳಿಗಳಂ
ಸೇರಿಸಿದನಲ್ಲಲ್ಲಿ ವಿಶ್ವಕರ್ಮಂ ಕರುಣವೆಂತುಟೋ ಗಿರಿಜಾತೆಯ ೩೦

ಗಿರಿರಾಜನಿರ್ದೆಡೆಗೆ ವಿಶ್ವಕರ್ಮಂ ಬಂದು
ಕರಯುಗಳವಂ ಮುಗಿದು ದೇವ ದೇವೇಶಂಗೆ
ವಿರಚಿಸಿದ ತನ್ನ ಬಡಭಕ್ತಿಯಂ ನೀಂ ಬಂದು ನೋಡಬೇಕೆನೆ ಕೇಳುತೆ
ವರತನುಜೆಯಂ ಬಂಧುವರ್ಗಮಂ ಕೂಡಿಕೊಂ
ಡಿರದೆ ಮಂಟಪವನೀಕ್ಷಿಸಿ ವಿಶ್ವಕರ್ಮಂಗೆ
ಹರುಷದಿಂದುಡುಗೊರೆಯನಿತ್ತು ಮನ್ನಿಸಿ ಸುತೆಗೆ ಗಿರಿರಾಜನಿಂತೆಂದನು ೩೧

ತಾಯೆ ಕೇಳಭವನೊಡನೈತರ್ಪ ನಿರ್ಜರನಿ
ಕಾಯಮನದೆಂತು ಸತ್ಕರಿಸುವೆಂ ತಾನೆನ
ಲ್ಕಾ ಯುವತಿ ನಸುನಗುತ್ತಾನಿರ್ಪೆನಂಜಬೇಡೈ ಭವ್ಯಭವನಿಕೆಯೊಳು

ದ್ರವ್ಯಗಳು ತುಂಬಿದ ಪೆಟ್ಟಿಗೆಗಳಿಂದ, ಹರಿಯುವ ಪನ್ನೀರಿನ ಕಾಲುವೆಗಳಿಂದ ಆ ಪ್ರದೇಶವು ರಮ್ಯವಾಗಿದ್ದಿತು. ೩೦. ಬಾಯಾರಿದವರಿಗೆ ನೀರನ್ನು ಎರೆಯುವ, ಹಸಿದವರಿಗೆ ಹಣ್ಣುಗಳ ಆಹಾರವನ್ನು ಕೊಡುವ, ಗಂಧವನ್ನು ಕೊಡುವ, ಮನೋಹರವಾದ ಕಸ್ತೂರಿ-ಕರ್ಪೂರಗಳನ್ನು ಕೊಡುತ್ತಿರುವ, ರತ್ನದ ಕನ್ನಡಿಗಳನ್ನು ತೋರಿಸುತ್ತಿರುವ, ಒಂದೇ ಸಮನೆ ಬಳಲಿದವರನ್ನು ಸತ್ಕರಿಸುವ, ನಾನಾರೀತಿಯ ಉಪಚಾರದ ಮಾತುಗಳನ್ನು ಆಡುವ ಹಲವು ಬೊಂಬೆಗಳನ್ನು ವಿಶ್ವಕರ್ಮನು ಅಲ್ಲಲ್ಲಿ ಸೇರಿಸಿದನು. ಪಾರ್ವತಿಯ ಕರುಣೆ ಎಂತಹುದೊ ! ೩೧. ವಿಶ್ವಕರ್ಮನು ಪರ್ವತರಾಜನ ಬಳಿಗೆ ಬಂದು ಕೈಗಳನ್ನು ಮುಗಿದು, ದೇವ ಈಶ್ವರನಿಗಾಗಿ ನನ್ನ ಬಡಭಕ್ತಿಯಿಂದ ನಿರ್ಮಿಸಿದ ವಿವಾಹಮಂಟಪ ವನ್ನು ನೀನು ಬಂದು ನೋಡಬೇಕು ಎಂದನು. ಅದನ್ನು ಕೇಳಿ ಪರ್ವತರಾಜನು ತನ್ನ ಮಗಳನ್ನೂ, ಬಂಧುವರ್ಗದವರನ್ನೂ ಕೂಡಿಕೊಂಡು ಬಂದು ಮಂಟಪವನ್ನು ನೋಡಿ ವಿಶ್ವಕರ್ಮನಿಗೆ ಸಂತೋಷದಿಂದ ಉಡುಗೊರೆಯನ್ನು ಕೊಟ್ಟು, ಸನ್ಮಾನಿಸಿ ಪಾರ್ವತಿಗೆ ಈ ರೀತಿ ಹೇಳಿದನು. ೩೨. ತಾಯೆ ಕೇಳು, ಶಿವನೊಡನೆ ಬರುವ ದೇವತಾ ಸಮೂಹವನ್ನು ಯಾವ ರೀತಿ ಸತ್ಕರಿಸಲಿ ಎನ್ನಲು ಅದಕ್ಕೆ ತರುಣಿಯಾದ ಆಗಜೆಯು ನಸುನಗುತ್ತ ನಾನಿದ್ದೇನೆ ಹೆದರಬೇಡ. ಅರಮನೆಯ ಮುಂಗಳ ವಿವಾಹಮಂಟಪದಲ್ಲಿ

CC-0. Jangamwadi Math Collection. Digitized by eGangotri

ಒಯ್ಯಾರದಿಂದಮರಕುಜವಮರಧೇನು ರಮ
ಣೀಯ ಚಿಂತಾರತ್ನ ಮುಂತಾದ ವಸ್ತುಸಮು
ದಾಯಮುಂ ಸಕಲಪರಿಕರಮುಮಿರಲೆಂದು ಗಿರಿಜಾತೆಯಾಜ್ಞಾಪಿಸಿದಳು ೩೨

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೩೩

**ಮೂವತ್ತಾರನೆಯ ಸಂಧಿ ಸಂಪೂರ್ಣ**

ಸಂಭ್ರಮದಿಂದ ಕಲ್ಪವೃಕ್ಷ, ಕಾಮಧೇನು, ಮನೋಹರವಾದ ಚಿಂತಾಮಣಿ ಮೊದಲಾದ ವಸ್ತುಗಳ ಸಮೂಹವೂ ಇತರ ಎಲ್ಲ ಪರಿಕರಗಳೂ ಇರಲಿ ಎಂದು ಗಿರಿಜೆ ಆಜ್ಞೆಯಿತ್ತಳು. ೩೩. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತಾರನೆಯ ಸಂಧಿ ಮುಗಿಯಿತು.

CC-0. Jangamwadi Math Collection. Digitized by eGangotri

# ಮೂವತ್ತೇಳನೆಯ ಸಂಧಿ

ಸೂಚನೆ : ಪರನೊಲಿದು ಸಿಂಗರಿಗನಾಗಿ ವಿಭವದೆ ಸಾಗಿ
ಗಿರಿರಾಜನರಮನೆಗೆ ಬಂದು ಕರುಣದೊಳಂದು
ಗಿರಿಜಾತೆಯಂ ಮದುವೆಯಾಗಿ ಶಿವೆಸಹವಾಗಿ ಶಿವಲೋಕಮಂ ಪೊಕ್ಕನು

ಹಸ್ತಿಚರ್ಮಾಂಬರ ಸಮಸ್ತದೇವವ್ರಾತ
ಮಸ್ತಕ ಕಿರೀಟ ಸುಗಭಸ್ತಿಪರಿಪೂರ್ಣವಿ
ನ್ಯಸ್ತಪದಪದ್ಮ ವೇದಸ್ತವಾಭೇದ್ಯ ನಿರ್ವಿಸ್ತರಣಕಾಯ ಗಿರಿಜಾ
ಸುಸ್ತನವಿಲೇಪ ನವಕಸ್ತೂರಿಪಂಕಾಂಕ
ಹಸ್ತಪಲ್ಲವಯುಗಪ್ರಶಸ್ತ ನಾನಾ ಮುನಿಮ
ನಸ್ತಿಮಿರಭಾಸ್ಕರ ನಮಸ್ತೇ ವಿರೂಪಾಕ್ಷ ಸುಸ್ಥಿರದೆ ಸಲಹೆಮ್ಮನು ೧

ಆಲಿಸೈ ಸಿದ್ಧರಾಮೇಶ ಗಿರಿನಂದನೆಯ
ಲೀಲೆಯೆಂತುಟೊ ಚತುರ್ದಶಭುವನದೊಳಗುಳ್ಳ
ಮೇಲಾದ ನಾನಾ ಸುವಸ್ತುಗಳ್ ಕೋಟಾನುಕೋಟಿಗಳ್ ಪಸರಿಸಿದುವು
ಭಾಳಾಂಬಕಂಗತ್ತಲಾ ಸಪ್ತಋಷಿವರರ್
ಪೇಳಿದಾ ಕ್ಷಣದೊಳಗೆ ಮದುವಣಿಗನಾಗಿ ಗಣ
ಜಾಲಮಂ ಸಕಲಜನಜಾಲಮಂ ಬೆರಸೆ ಪೊರಮಡಲಭವನನುವಾದನು ೨

ಸೂಚನೆ: ಶಿವನು ಪ್ರೀತಿಯಿಂದ ಶೃಂಗಾರ ಮಾಡಿಕೊಂಡು ವೈಭವದಿಂದ ಹೊರಟು ಹಿಮವಂತನ ಅರಮನೆಗೆ ಬಂದು ಕರುಣೆಯಿಂದ ಪಾರ್ವತಿಯನ್ನು ಮದುವೆಯಾಗಿ ಆಕೆಯೊಡನೆ ಕೈಲಾಸಕ್ಕೆ ಹೋದನು. ೧. ಗಜಚರ್ಮಾಂಬರ, ಎಲ್ಲ ದೇವ ಸಮೂಹದ ತಲೆಯ ಕಿರೀಟಗಳ ಕಾಂತಿಯಿಂದ ಪರಿಪೂರ್ಣವಾಗಿ ಚಿತ್ರಿತವಾದ ಪಾದ ಕಮಲವುಳ್ಳವ, ವೇದಗಳಿಗೆ ಅಭೇದ್ಯ, ವರ್ಣಿಸಲಶಕ್ಯವಾದ ದೇಹವುಳ್ಳವನು, ಪಾರ್ವತಿಯ ಸ್ತನಗಳಿಗೆ ಹಚ್ಚಿರುವ ಹೊಸ ಕಸ್ತೂರಿಯ ಲೇಪದ ಗುರುತುಳ್ಳವನು, ಪ್ರಶಸ್ತವಾದ ಚಿಗುರಿನಂತಹ ಎರಡು ಕೈಗಳನ್ನುಳ್ಳವ, ನಾನಾ ಋಷಿಗಳ ಮನಸ್ಸೆಂಬ ಕತ್ತಲೆಗೆ ಸೂರ್ಯನೂ ಆದ ವಿರೂಪಾಕ್ಷನೇ ನಮಸ್ಕಾರ, ಸ್ಥಿರವಾಗಿ ನಮ್ಮನ್ನು ಕಾಪಾಡು. ೨. ಕೇಳಯ್ಯ ಸಿದ್ಧರಾಮ, ಪಾರ್ವತಿಯ ಲೀಲೆ ಎಂತಹುದೊ ! ಹದಿನಾಲ್ಕು ಲೋಕಗಳಲ್ಲಿಯೂ ಇರುವ ಅನೇಕ ಉತ್ತಮವಾದ ವಸ್ತುಗಳು ಕೋಟಿ ಕೋಟಿಗಟ್ಟಲೆ ತುಂಬಿದುವು. ಅತ್ತಕಡೆ ಸಪ್ತಋಷಿಶ್ರೇಷ್ಠರು ಫಾಲಾಕ್ಷನಿಗೆ ಸಂಗತಿಯನ್ನು ತಿಳಿಸಿದ ಕೂಡಲೆ ಶಿವನು ಮದುವಣಿಗನಾಗಿ ಗಣಗಳು ಮತ್ತು ಜನಸಮೂಹವನ್ನು ಕೂಡಿಕೊಂಡು ಹೊರಡಲು

CC-0. Jangamwadi Math Collection. Digitized by eGangotri

ಹರಿಯಜ ಸುರೇಂದ್ರ ವರಗರುಡ ಗಂಧರ್ವ ಕಿ
ನ್ನರ ಯಕ್ಷ ಸಿದ್ಧ ವಿದ್ಯಾಧರ ಪಿಶಾಚ ಕಿಂ
ಪುರುಷ ಮನು ಮುನಿ ವಸು ದಿಶಾಧಿಪ ದಿನಾಧಿಪಾದ್ಯಖಿಳ ಸುರಸಂದೋಹಮುಂ
ನರಭುಜಂಗಾದಿ ನಾನಾ ಲೋಕವಾಸಿಗಳ್
ಪರಿಕಿಸಲನಂತ ಬ್ರಹ್ಮಾಂಡದ ಜನಂ ಮಹೇ
ಶ್ವರನ ವೈವಾಹಮಂ ನೋಳ್ಪೆವೆಂದುತ್ಸವದೊಳೈತಂದುದಾಕ್ಷಣದೊಳು ೩

ಎಡಬಲದೊಳಾಮ್ನಾಯತತಿ ಹರನ ಬಿರುದನು
ಗ್ಗಡಿಸೆ ಮುತ್ತಿನ ಬಾಸಿಗಂಗಟ್ಟಿ ನಂದಿಯಂ
ನ್ನಡರ್ದನೇರಿಪಂ ಹರಿಯಜಾದ್ಯರುಂ ವಾಹನಂಗಳನೇರಿ ಪಿಂತೆ ಬರಲು
ಒಡನುಲಿವ ವಾದ್ಯನಿಸ್ವನದಿಂದೆ ಶಂಕರಂ
ನಡೆತರಲ್ ಕೇಳಿ ಸಂಭ್ರಮದಿಂದೆ ಬಾಂಧವರ
ಗಡಣದಿಂದಿದಿರ್ಗೊಳಲ್ಕೈದಿದಂ ತುಹಿನಗಿರಿರಾಜನತಿವಿಭವದಿಂದೆ ೪

ಮೊಳಗುತಿಹ ನಿರ್ಜರರ ಭೇರಿಗಳ ಭೂರಿಗಳ
ಕಳಸಕನ್ನಡಿವಿಡಿದ ಬಾಲೆಯರ ಲೋಲೆಯರ
ನಲಿದು ಸಿಂಗರಿಸಿದಿಭರಾಜಿಗಳ ವಾಜಿಗಳ ದಂಡಿಗೆಯ ತಂಡಂಗಳ

ಸಿದ್ಧನಾದನು. ೩. ವಿಷ್ಣು ಬ್ರಹ್ಮ ಇಂದ್ರ, ಶ್ರೇಷ್ಠನಾದ ಗರುಡ, ಗಂಧರ್ವ, ಕಿನ್ನರ, ಯಕ್ಷ, ಸಿದ್ಧ, ವಿದ್ಯಾಧರ, ಪಿಶಾಚ, ಕಿಂಪುರುಷ, ಮನು-ಮುನಿ-ವಸು-ದಿಕ್ಪಾಲಕರು, ಸೂರ್ಯನೇ ಮುಂತಾದ ದೇವತೆಗಳ ಸಮೂಹವೂ, ಮನುಷ್ಯ ಹಾವು ಮೊದಲಾದ ನಾನಾ ಲೋಕಗಳ ವಾಸಿಗಳೂ, ಅನಂತ ಬ್ರಹ್ಮಾಂಡದ ಜನಸಮೂಹವೂ ಈಶ್ವರನ ವಿವಾಹವನ್ನು ನೋಡುತ್ತೇವೆಂದು ಸಂತೋಷ ಸಂಭ್ರಮಗಳಿಂದ ಆ ಕ್ಷಣದಲ್ಲಿ ಬಂದುವು. ೪. ಎಡ-ಬಲಗಳಲ್ಲಿ ವೇದಗಳ ಸಮೂಹ ಶಿವನ ಬಿರುದನ್ನು ಹೊಗಳುತ್ತಿದ್ದುವು. ಮುತ್ತಿನ ಬಾಸಿಂಗವನ್ನು ಕಟ್ಟಿಕೊಂಡು ಶಿವನು ನಂದಿಯನ್ನು ಏರಿದನು. ವಿಷ್ಣು-ಬ್ರಹ್ಮರು ವಾಹನಗಳನ್ನು ಏರಿ ಹಿಂದೆ ಬರುತ್ತಿದ್ದರು. ಮೊಳಗುತ್ತಿದ್ದ ವಾದ್ಯಗಳ ಧ್ವನಿಯಿಂದ ಶಿವನು ಹೊರಟುಬರಲು ಆ ವಾರ್ತೆಯನ್ನು ಕೇಳಿ ಪರ್ವತರಾಜನು ಸಂಭ್ರಮದಿಂದ ಬಂಧು-ಬಾಂಧವರ ಗುಂಪಿನೊಡನೆ ಎದುರುಗೊಳ್ಳಲು ಬಹಳ ವೈಭವದಿಂದ ಬಂದನು. ೫. ಬಹುವಾಗಿ ಮೊಳಗುತ್ತಿರುವ ದೇವದುಂದುಭಿಗಳ, ಕಳಶ, ಕನ್ನಡಿಗಳನ್ನು ಹಿಡಿದ ಚಂಚಲೆಯರಾದ ತರುಣಿಯರ, ಅಲಂಕಾರ ಮಾಡಿದ ಆನೆ ಮತ್ತು ಕುದುರೆಗಳ ಸಮೂಹದ, ಪಲ್ಲಕ್ಕಿಯ ಗುಂಪುಗಳ, ಥಳಥಳಿಸುವ ಚಿಗುರಿನಂತಹ ಕೊಡೆಯ ಸಮೂಹದ,

CC-0. Jangamwadi Math Collection. Digitized by eGangotri

ಥಳಥಳಿಪ ಪಲ್ಲವದ ಸತ್ತಿಗೆಯು ಮುತ್ತಿಗೆಯು
ಚಲಿಸುತಿಪ ಕನಕಚಮರಾಳಿಗಳ ಪಾಳಿಗಳ
ತೊಳಪ ರತ್ನಾಭರಣರೋಚಿಗಳ ವೀಚಿಗಳ ಸಂಭ್ರಮದೆ ನಡೆಗೊಂಡರು ೫

ಇಂತೆಸೆವ ಸಕಲವೈಭವದಿಂದಲಂದು ಹಿಮ
ವಂತನಭವನನಿದಿರ್ಗೊಂಡು ಘನಹರುಷದಿಂ
ಮುಂದೆ ತನ್ನಯ ಪುರಕ್ಕೊಡಗೊಂಡು ಬಂದು ಬೀಡಾರದರಮನೆಯೊಳಿಳಿಸಿ
ಅಂತರಾಂತರವರಿದು ಬಂದ ನಿಬ್ಬಣಿಗರ್ಗ
ನಂತಮಾಗಿರ್ದ ಪಡಿ ಬೀಡಾರಮಂ ತೋರೆ
ಸಂತಸದೊಳೀಶ್ವರಂ ಹರಿಯಜೇಂದ್ರಾದ್ಯರೊಡನೊಡ್ಡೋಲಗದೊಳೆಸೆದನು ೬

ನಾರದನ ವೀಣಾಕ್ವಣಂ ತುಂಬುರರ್ ಮಾಳ್ಪ
ಸಾರಸಂಗೀತಮುಂ ರಂಭಾದಿ ಸಕಲ ಸುರ
ನಾರಿಯರ ನರ್ತನಂ ಭೃಂಗಿಯ ಸುನಾಟ್ಯಮಾ ಚಾರಣರ ಕೈವಾರಮುಂ
ಘೋರೆಂದು ವಾದ್ಯನಿರ್ಘೋಷಮುಂ ಸುರಸತಿಯ
ರಾರತಿಯ ಮಾಂಗಲ್ಯರಭಸದ ವಿಲಾಸದಿಂ
ಮಾರಾರಿಯಿರಲಿತ್ತ ನಗರಾಜನಗಜೆಯಂ ಸಿಂಗರಿಸವೇಳ್ದನಂದು ೭

ಗಿರಿರಾಜನಾಜ್ಞೆಯಿಂ ಶತಕೋಟಿ ಕೆಳದಿಯರ್
ಗಿರಿಜೆಯೆಡೆಗೈತಂದು ನಸುನಗುತೆ ಕೇಳ್ ನಿನ್ನ
ಪರಮಪುಣ್ಯದ ಫಲಂ ಕೈಸಾರ್ದುದೆನುತವರ್ ಕುಂಕುಮದ ರಸದೊಳಂದು

ಚಲಿಸುತ್ತಿರುವ ಚಿನ್ನದ ಚಾಮರಸಮೂಹದ ಸಾಲುಗಳ, ತೊಳಗುವ ರತ್ನಾಭರಣಗಳ ಕಾಂತಿಗಳ ಅಲೆಗಳ ಸಂಭ್ರಮದಿಂದ ಹೊರಟರು. ೬. ಈ ರೀತಿ ಸಕಲ ವೈಭವದಿಂದ ಆಗ ಹಿಮವಂತನು ಈಶ್ವರನನ್ನು ಎದುರುಗೊಂಡು ಬಹಳ ಸಂತೋಷದಿಂದ ಮುಂದೆ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ, ಬಿಡಾರದ ಅರಮನೆಯಲ್ಲಿ ಇಳಿಸಿ, ಬಂದ ನಿಬ್ಬಣದವರ ಅಂತಸ್ತನ್ನು ತಿಳಿದು ಅಸಂಖ್ಯಾತವಾಗಿದ್ದ ಬಿಡಾರಗಳಲ್ಲಿ ಅವರವರಿಗೆ ಸರಿಯಾದುದನ್ನು ತೋರಿಸಲು, ಈಶ್ವರನು ಸಂತೋಷದಿಂದ ವಿಷ್ಣು–ಬ್ರಹ್ಮ–ಇಂದ್ರಾದಿಗಳೊಡನೆ ಸುಭಾಭವನದಲ್ಲಿ ಪ್ರಕಾಶಿಸುತ್ತಿದ್ದನು. ೭. ನಾರದನ ವೀಣೆಯಧ್ವನಿ, ತುಂಬುರರು ಮಾಡುವ ಮಧುರಸಂಗೀತ, ರಂಭೆ ಮೊದಲಾದ ದೇವತಾಸ್ತ್ರೀಯರ ನರ್ತನ, ಭೃಂಗಿಯ ಉತ್ತಮವಾದ ನಾಟ್ಯ, ಚಾರಣರ ಹೊಗಳಿಕೆ, ಘೋರ್ಗರೆಯುವ ವಾದ್ಯದ ಧ್ವನಿ, ದೇವಸ್ತ್ರೀಯರ ಆರತಿಯ ಮಂಗಳಕರವಾದ ವೈಭವ–ವಿಲಾಸದಿಂದ ಈಶ್ವರನು ಇರಲು, ಇತ್ತ ಪರ್ವತರಾಜನು ವಧುವಾದ ಪಾರ್ವತಿಯನ್ನು ಅಲಂಕರಿಸುವಂತೆ ಹೇಳಿದನು. ೮. ಪರ್ವತರಾಜನ ಆಜ್ಞೆಯಿಂದ ನೂರುಕೋಟಿ ಸಖೀಜನರು ಪಾರ್ವತಿಯ ಬಳಿಗೆ ಬಂದು ನಸುನಗುತ್ತ, 'ಕೇಳು, ನಿನ್ನ ಶ್ರೇಷ್ಠವಾದ ಪುಣ್ಯದ ಫಲ ಕೈಗೂಡಿತು' ಎನ್ನುತ್ತ ಅವರು ಕುಂಕುಮದ ಹೂವಿನ ರಸದಲ್ಲಿ ದೇಹದ ಎಲ್ಲ

CC-0. Jangamwadi Math Collection. Digitized by eGangotri

ಇರದೆ ಸರ್ವಾಂಗವಮಂ ತಿಗುರಿ ಮಗಮಗಿಸುತಿಪ
ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ
ವರದುಕೂಲಮನುಡಿಸಿ ಪಣೆಯೊಳಗೆ ಮೃಗಮದಲಲಾಮವಂ ರಚಯಿಸಿದರು ೮

ಲಲಿತಜಾಳಿಯ ರನ್ನದೋಲೆ ಮುತ್ತಿನ ಬೊಟ್ಟು
ಪೊಳೆವ ಮೂಗುತಿ ಕಂಠಮಾಲೆ ಭುಜಕೀರ್ತಿ ಸರ
ಪಳಿ ತೋಳಬಳೆ ಹಸ್ತಕಡಗ ಮಾಣಿಕ್ಯದುಂಗುರ ರಂಜಿಪೊಡ್ಯಾಣವಮಂ
ಉಲಿವ ಘಂಟೆಗಳ ಕಟಿಸೂತ್ರ ನೂಪುರ ಕಾಲ
ಲುಳಿ ಕಡೆಯ ಬೆರಳ ಮುದ್ರಿಕೆ ಕಂಕಣಂಗಳಂ
ಲಲನೆಯರ್ ಗಿರಿರಾಜಸುತೆಗೆ ಸಿಂಗರಿಸಲತಿವಿಭವದಿಂ ರಂಜಿಸಿದಳು ೯

ಸುಳಿಗುರುಳ ನಗೆಮೊಗದ ಸುಲಿಪಲ್ಲ ಚೆಂದುಟಿಯ
ಪೊಳೆವ ಕರ್ಣಾಭರಣದೆಸೆವ ತಿಲಕದ ನೊಸಲ
ನೆಲೆಮೊಲೆಯ ನೀಳ್ದ ಬಾಸೆಯ ಗುಳಿದ ಪೊಕ್ಕುಳಿನ ಸೆಳೆನಡುವಿನೊಬ್ಬುಳಿಗಳ
ಲಲಿತಜಂಘಾಕಾಂಡದವರ್ದ ಪರಡುಗಳ ಕೆಂ
ದಳದ ಸೊಬಗಿನ ನಾರಿ ಸಕಲಸೌಖ್ಯಾಧಾರಿ
ಲಲನೆಯರ ತಲೆರನ್ನೆ ವಿವಿಧಗುಣಸಂಪನ್ನೆ ಗಿರಿಜಾತೆ ಕಣ್ಗೆಸೆದಳು ೧೦

ಭಾಗವನ್ನು ಲೇಪಿಸಿ, ಗಮಗಮಿಸುತ್ತಿರುವ ಪರಿಮಳದ ಪನ್ನೀರಿನಿಂದ ಸ್ನಾನ ಮಾಡಿಸಿ, ಉತ್ತಮವಾದ ಪಟ್ಟೆವಸ್ತ್ರವನ್ನು ಉಡಿಸಿ, ಹಣೆಗೆ ಕಸ್ತೂರಿತಿಲಕವನ್ನು ಇಟ್ಟರು. ೯. ಮನೋಹರವಾದ ಬೈತಲೆಬೊಟ್ಟು, ರನ್ನದ ಓಲೆ, ಮುತ್ತಿನ ಬೊಟ್ಟು, ಹೊಳೆಯುವ ಮೂಗುತಿ, ಕತ್ತಿನಸರ, ಭುಜಕೀರ್ತಿ, ಸರಪಳಿ, ತೋಳಿನ ಬಳೆ, ಕೈಕಡಗ, ಮಾಣಿಕ್ಯದ ಉಂಗುರ, ರಂಜಿಸುವ ಸೊಂಟದ ಡಾಬು, ಶಬ್ದಮಾಡುವ ಗಂಟೆಗಳ ಸೊಂಟಪಟ್ಟಿ, ಕಾಲಗೆಜ್ಜೆ, ಹೊಳೆಯುವ ಕಡೆಯ ಬೆರಳಿನ ಉಂಗುರ, ಕೈಬಳೆಗಳಿಂದ ಚೆಲುವೆಯರು ಪಾರ್ವತಿಯನ್ನು ಶೃಂಗರಿಸಲು ಅವಳು ಬಹಳ ವೈಭವದಿಂದ ಕಂಗೊಳಿಸಿದಳು. ೧೦. ಗುಂಗುರಾದ ಮುಂಗುರುಳಿನ, ನಗೆಮೊಗದ, ಕಾಂತಿಯಿಂದ ಕೂಡಿದ ಹಲ್ಲಿನ, ಕೆಂಪಾದ ತುಟಿಯ, ಹೊಳೆಯುವ ಕಿವಿಯ ಆಭರಣದ, ಶೋಭಿಸುವ ತಿಲಕವಿರುವ ಹಣೆಯ, ದಪ್ಪನಾದ ಮೊಲೆಯ, ಉದ್ದವಾದ ನಾಭಿರೋಮದ, ಗುಳಿಬಿದ್ದ ಹೊಕ್ಕುಳದ, ತೆಳ್ಳನೆಯ ಸೊಂಟದ ಸಮೂಹದ, ಮನೋಹರವಾದ ತೊಡೆಯ ಮಾಂಸಖಂಡಗಳ, ವ್ಯಾಪಿಸಿದ (ಹಿಮ್ಮಡಿ) ಮಣಿಗಂಟುಗಳ, ಚಿಗುರಿನಂತೆ ಕೆಂಪಾದ ಅಂಗೈಗಳಿಂದ ಕೂಡಿ ಸುಂದರಳಾದ, ಎಲ್ಲ ಸುಖಗಳಿಗೂ ಆಧಾರೆಯರಾದ, ಸ್ತ್ರೀಯರ ನಾಯಕರತ್ನವೆನಿಸಿದ, ನಾನಾ ಗುಣಸಂಪನ್ನೆಯಾದ ಪಾರ್ವತಿಯು ಮನೋಹರವಾಗಿ ಕಂಗೊಳಿಸುತ್ತಿದ್ದಳು.

CC-0. Jangamwadi Math Collection. Digitized by eGangotri

ಪರಿಕಿಸೆ ಕುಜಾತಿಗಳೊಳುದಿಸಿದೆವನಂತರಂ
ಪರವೈರಿಗಸ್ತ್ರಂಗಳಾದೆವನಿತಲ್ಲದೆಯು
ನಿರುತಮತಿರಾಗತೆಯ ಕೈಕೊಂಡೆವಕಟ ಪೆಣ್ಗೊಲೆಗೊಡಂಬಟ್ಟೆವೆಂದು
ಪರಿಭವವ ಬಡಿಸು ನೀನೆಂದಂಘ್ರಿಪಂಕಜವ
ನಿರದೆ ಸಾರ್ದಸುಗೆಯೆಳೆದಳಿರ್ಗಳೋ ಪೇಳೆನಲ್
ಸರಸಿರುಹಮುಖಿಯ ಪದತಳಪಲ್ಲವಂಗಳೊಪ್ಪಿದುವದೇಂವರ್ಣಿಸುವೆನು ೧೧

ಅಕ್ಷಿಗಳ್ ಪದಿನೈದವರೊಳೈದು ಮುಗಿಯೆ ಮಿ
ಕ್ಕಕ್ಷಿಗಳೊಳೀಶನಗಜೆಯ ದೇಹಕಾಂತಿಯ ನಿ
ರೀಕ್ಷಿಸಲ್ ತನುನುಣ್ಪಿನೊಳ್ ನಿಲದೆ ಜಗುಳ್ದು ಪದಕಮಲಂಗಳೊಳ್ ನಿಂದುವೋ
ದಕ್ಷಯಾಗದಲಿ ವೀರಂ ಭಗಂ ಪೂಷರಂ
ಶಿಕ್ಷಿಸಲ್ ಮಿಕ್ಕ ರವಿಗಳ್ ಭಯದೆ ಬಂದೆಮ್ಮ
ರಕ್ಷಿಸೆನುತಡಿಗೆರಗಿದುವೊಯೆನಲ್ ಗಿರಿಸುತೆಯ ಪದನಖದ ಚೆಲ್ವೆಸೆವುದು ೧೨

ತಳಿರಲರ್ ಪುದಿದಮರತರುಶಾಖೆಯುಂ ಮುತ್ತಿ
ದಳಿಗಳೆನೆ ನೀಲಸರಪಳಿಯೆಸೆದುವಾಗಲವ
ರುಲಿಪೆನಲ್ ಚಾರುನೂಪುರಝಣತ್ಕಾರವೊಪ್ಪಿದುದೊಂದು ಮದದಾನೆಯ

೧೧. ಆಲೋಚಿಸಲು ಕೀಳುಜಾತಿಯಲ್ಲಿ ಹುಟ್ಟಿದೆವು. ಅನಂತರ ಮನ್ಮಥನಿಗೆ ಅಸ್ತ್ರಗಳಾದೆವು. ಅಷ್ಟೇಅಲ್ಲದೆ ಸದಾ ಅಚ್ಚ ಕೆಂಪುಬಣ್ಣವನ್ನೇ ತಾಳಿದೆವು. ಅಯ್ಯೋ! ಸ್ತ್ರೀಯರ ಕೊಲೆಗೂ ಸಹಾಯಕರಾದೆವು. ಈ ಅವಹೇಳನವನ್ನು ನೀನು ಹೋಗಲಾಡಿಸು ಎಂದು ಪಾದಕಮಲವನ್ನು ಬಿಡದೆ ಸಮೀಪಿಸಿದ ಅಶೋಕದ ಎಳೆಯ ಚಿಗುರುಗಳೋ ಎನ್ನುವಂತೆ ಕಮಲಮುಖಿಯಾದ ಗಿರಿಜೆಯ ಚಿಗುರಿನಂತೆ ಮೃದುವಾದ ಪಾದತಳಗಳು ರಂಜಿಸುತ್ತಿದ್ದುವು. ಅದನ್ನು ಏನೆಂದು ಬಣ್ಣಿಸಲಿ ? ೧೨. ಹದಿನೈದು ಕಣ್ಣುಗಳಲ್ಲಿ ಐದು ಮುಚ್ಚಿಕೊಳ್ಳಲು ಉಳಿದ ಕಣ್ಣುಗಳಿಂದ ಈಶ್ವರನು ಗಿರಿಜೆಯ ದೇಹದ ಕಾಂತಿಯನ್ನು ನೋಡಲು ಶರೀರವು ನುಣುಪಾಗಿದ್ದುದರಿಂದ ನಿಲ್ಲದೆ ಜಾರಿ ಪಾದಕಮಲಗಳಲ್ಲಿ ದೃಷ್ಟಿಗಳು ನಿಂತುವೊ ? ದಕ್ಷನ ಯಾಗದಲ್ಲಿ ವೀರಭದ್ರನು ಭಗ ಪೂಷರನ್ನು ಶಿಕ್ಷಿಸಲು ಉಳಿದ ಹತ್ತುಮಂದಿ ಸೂರ್ಯರು ಹೆದರಿ ಓಡಿ ಬಂದು ನಮ್ಮನ್ನು ಕಾಪಾಡು ಎನ್ನುತ್ತ ಕಾಲಿಗೆ ಬಿದ್ದರೋ ಎನ್ನುವಂತೆ ಗಿರಿಜೆಯ ಕಾಲಿನ ಉಗುರಿನ ಸೌಂದರ್ಯವು ಕಾಂತಿಯಿಂದ ಹೊಳೆಯುತ್ತಿತ್ತು. ೧೩. ಚಿಗುರು ಹೂಗಳನ್ನು ತುಂಬಿದ ಕಲ್ಪವೃಕ್ಷದ ಕೊಂಬೆಗಳನ್ನು ಮುತ್ತಿದ ದುಂಬಿಗಳು ಎನ್ನುವಂತೆ ನೀಲಿಸರಪಳಿ ಸೊಗಯಿಸಿತು. ಆ ದುಂಬಿಗಳ ಧ್ವನಿಯಂತೆ ಮನೋಹರವಾದ ಗೆಜ್ಜೆಗಳು ಝಣತ್ಕಾರ ಮಾಡುತ್ತಿದ್ದುವು. ಒಂದು

CC-0. Jangamwadi Math Collection. Digitized by eGangotri

ತಲೆಯೊಳಗೆ ಸೊಂಡಿಲೆರಡೊಗೆದಂತೆ ಗಿರಿಜಾತೆ
ಯಲಘುಜಘನಂ ಬಟ್ಟದೊಡೆಗಳುಂ ಮೆರೆದುವದ
ಬಳಸಿದರಳೆಲೆಮಾಲೆಯಂತೆ ಕಾಂಚೀದಾಮ ಕಣ್ಗೆಸೆದುದೇನೆಂಬೆನು ೧೩

ಹರನ ಮೋಹನದ ನಿಧಿಯಂ ಪತ್ತುವೆರಸಿ ಫಣಿ
ಪರಿಕಿಪೆ ಸದಾ ಕಾದುಕೊಂಡಿರುತ್ತಿರ್ದೊಡಂ
ನಿರುತಮಬಲಾಶ್ರಯದೊಳಿರ್ದ ಕಾರಣದಿನೆಚ್ಚರಿಕೆಯೇ ಕಾರ್ಯವೆಂದು
ತರತರದ ಘಂಟೆಪಾರಿಗಳನಿಂಬಿಟ್ಟರೆನೆ
ವರರೋಮರಾಜಿ ಸುಳಿನಾಭಿಯೊತ್ತಿನೊಳೆ ಪರಿ
ಪರಿಯ ರಸನಾಂಚಿತದ ಕಟಿಸೂತ್ರಮೊಪ್ಪಿತಗಜಾತೆಯ ತನೂದರದೊಳು ೧೪

ಹರಿಯಂತೆ ಚಕ್ರಶೋಭನಕರಂ ಯೋಗಿಪ್ರ
ವರನಂತೆ ವಿಮಲಮುಕ್ತಾಹಾರವಿಲಸಿತಂ
ಪರಶುಧರನಂತೆ ಭೂಭೃತ್‌ಗುರುತ್ವಾಪಹಂ ನೀಳ್ದ ನೀರೊಟ್ಟಿಲಂತೆ
ಪರಮಲಾವಣ್ಯವಿಭ್ರಾಜಿತಂ ಮೃಗಕುಲೇ
ಶ್ವರನಂತೆ ಕುಂಭಿಕುಂಭಸ್ಪರ್ಧಿ ದುರ್ಜನೋ
ತ್ಕರಸಂಗದಂತೆ ಕರ್ಕಶವೃತ್ತಿಯಿಂದೆಸೆದುವುನ್ನತಕುಚಂಗಳುಮೆಯ ೧೫

ಆವಗಂ ತವೆ ವಿಕಾಸಂಗೆಯ್ಯದಿರ್ಪ ರಾ
ಜೀವಮುಕುಳಂಗಳುಂಟೇ ಚೋದ್ಯಮೊಂದೊರ್ವ
ಭಾವೆ ಗಿರಿಜೆಯ ಕುಚದ್ವಯವನೀಕ್ಷಿಸುತಿರಲ್ ಮತ್ತೊರ್ವಳವಳ ಕೂಡೆ

ಮದ್ದಾನೆಯ ತಲೆಯಲ್ಲಿ ಎರಡು ಸೊಂಡಿಲುಗಳು ಹೊರಟಂತೆ ಪಾರ್ವತಿಯ ಭಾರವಾದ ಜಘನ, ದೊಡ್ಡದಾದ ದುಂಡನೆಯ ತೊಡೆಗಳು ಕಾಣಿಸಿದುವು. ಅದನ್ನು ಬಳಸಿದ್ದ ಅರಳಿ ಎಲೆಯ ಸರದಂತೆ ನಡುಪಟ್ಟಿ ನೋಡಲು ಮನೋಹರವಾಗಿ ಕಾಣಿಸಿತು. ೧೪. ಶಿವನ ಆಕರ್ಷಕ ಪ್ರೇಮನಿಧಿಯನ್ನು ಸುತ್ತ ಆವರಿಸಿರುವ ಹುತ್ತದೊಡನೆ ಸರ್ಪವು ಸದಾ ಕಾಯುತ್ತಿದ್ದರೂ ಯಾವಾಗಲೂ ಸ್ತ್ರೀಯ ಆಶ್ರಯದಲ್ಲಿದ್ದ ಕಾರಣ ಅದರ ಬಗ್ಗೆ ಎಚ್ಚರಿಕೆಯಿಂದಿರುವುದೇ ಕರ್ತವ್ಯವೆಂದು ನಾನಾ ರೀತಿಯ ಗಂಟೆಗಳ ಪಹರೆಯನ್ನಿಟ್ಟರೊ ಎಂಬಂತೆ ಕೂದಲು ಸುಳಿಯಾದ ಹೊಕ್ಕುಳಿನ ಸಮೀಪದ ಸುತ್ತ ನಾನಾ ರೀತಿಯ ಶಬ್ದಮಾಡುವ ಸೊಂಟಪಟ್ಟಿ ಪಾರ್ವತಿಯ ದೇಹದಲ್ಲಿ ಪ್ರಕಾಶಿಸುತ್ತಿತು. ೧೫. ವಿಷ್ಣುವಿನಂತೆ ಚಕ್ರದ ಕಾಂತಿಯಿಂದ ಕೂಡಿ, ಮುನಿಶ್ರೇಷ್ಠನಂತೆ ಶುಭ್ರವಾದ ಮುತ್ತಿನಹಾರ ಧರಿಸಿ, ಪರಶುರಾಮನಂತೆ ರಾಜರ ಪರ್ವತದ ಶ್ರೇಷ್ಠತೆಯನ್ನು ಅಪಹರಿಸಿ, ಅಗಲವಾದ ನೀರಿನಿಂದ ತುಂಬಿದ ಬೊಗಸೆಯಂತೆ ಬಹಳ ಲಾವಣ್ಯದಿಂದ ಬೆಳಗಿ,ಸಿಂಹದಂತೆ ಆನೆಯ ಕುಂಭಸ್ಥಳಕ್ಕೆ ಸ್ಪರ್ಧಿಸಿ, ಕೆಟ್ಟವರನ್ನು ಪ್ರೋತ್ಸಾಹಿಸುವವರ ಸ್ನೇಹದಂತೆ ಕಠಿಣವಾಗಿ ಪಾರ್ವತಿಯ ಮೊಲೆಗಳು ಪ್ರಕಾಶಿಸಿದುವು. ೧೬. ಯಾವಾಗಲೂ ಚೆನ್ನಾಗಿ ಅರಳದಿರುವ ತಾವರೆಯ ಮೊಗ್ಗುಗಳು ಇವೆಯೆ ? ಇದು ಆಶ್ಚರ್ಯ ಎಂದು ಚೇಡಿಸುವ

CC-0. Jangamwadi Math Collection. Digitized by eGangotri

ಆವ ಸೋಜಿಗಮಬಲೆ ಮೆರೆವ ನಕ್ಷತ್ರಮಾ
ಲಾವಳಿಯು ಗಡಣದಿಂ ಚಂದ್ರಮಂ ಪೊರೆಯೊಳಿರೆ
ತಾವರೆಗರಳ್ಕೆಯೇಕೆನುತಗಜೆಯಾಸ್ಯಹಾರಂಗಳಂ ತೋರಿಸಿದಳು ೧೬

ಸಸಿಯು ಬಟ್ಟನೊಳಿರ್ದ ದಿವ್ಯಸುಧೆಯಂ ಚಿತ್ತ
ದೊಸಗೆಯಿಂ ಕೊಂಡೊಯ್ದು ಶಿಷ್ಯರಂ ಬಿಡದೆ ರ
ಕ್ಷಿಸುವೆನೆಂಬಳ್ತಿಯಿಂ ಬಂದು ತದ್ಬಿಂಬದಮೃತದ ರಸದ ರುಚಿಗೆ ಸೊಗಸಿ
ಅಸುರಗುರುವಕ್ಕರಿಂದಲ್ಲಿ ನೆಲೆಗೊಂಡು ಸಂ
ತಸದಿಂದೆ ನಿಂದನೋಯೆನೆ ಸಖಿಯರೊಲ್ದು ಸೇ
ರಿಸಿದ ಮುಗುತಿ ನಾಡೆ ಕಣ್ಗೊಳಿಸಿತುಮೆಯ ವದನಾಂಬುಜವನಿಂಬುಗೊಂಡು ೧೭

ರಾಜೀವಕುಮುದಂಗಳೆಂಬ ಮತ್ಸರದೆ ರವಿ
ರಾಜಮಂಡಲಯುಗಂ ರಂಜಿಸುವ ತುಹಿನಗಿರಿ
ರಾಜನಂದನೆಯ ವಿಮಲಾಂಬಕದ್ವಯಮಿದು ತನ್ನದಿದುವೆನ್ನದೆಂಬ
ವ್ಯಾಜದಿಂದೊಂದೊಂದರೊತ್ತಿನೊಳ್ ಸಲೆ ನಿಂದು
ರಾಜಿಪರೊ ಪೇಳೆನಲ್ ಚಾರುತರ ನವರತ್ನ
ರಾಜನಿರ್ಮಿತವಾದ ಕರ್ಣತಾಟಂಕಯುಗವೊಪ್ಪಿದುದು ಗಿರಿಜಾತೆಯ ೧೮

ಭಾವುಕಳಾದ ಹೆಣ್ಣೊಬ್ಬಳು ಪಾರ್ವತಿಯ ಎರಡು ಮೊಲೆಗಳನ್ನು ನೋಡುತ್ತಿರಲು, ಮತ್ತೊಬ್ಬಳು ಅವಳನ್ನು ಕುರಿತು ಸಖೀ, ಇದೇನು ಮಹಾ ಆಶ್ಚರ್ಯಕರ ವಿಷಯ ? ಹೊಳೆಯುವ ನಕ್ಷತ್ರಮಾಲೆಗಳ ಸಮೂಹದ ಆ ಚಂದ್ರನು ಇರುವಾಗ ತಾವರೆ ಎಲ್ಲಿಯಾದರೂ ಅರಳುವುದುಂಟೆ ಎನ್ನುತ್ತ ಗಿರಿಜೆಯ ಮುಖ ಮತ್ತು ಹಾರಗಳನ್ನು ತೋರಿಸಿದಳು. ೧೭. ಚಂದ್ರಮಂಡಲದಲ್ಲಿ ಇದ್ದ ದಿವ್ಯವಾದ ಅಮೃತವನ್ನು ಮನದಾಸೆಯಿಂದ ತೆಗೆದುಕೊಂಡು ಹೋಗಿ ಶಿಷ್ಯರನ್ನು ಬಿಡದೆ ಕಾಪಾಡುತ್ತೇನೆ ಎಂಬ ಇಚ್ಛೆಯಿಂದ ಬಂದು ಆ ಬಿಂಬದ ಅಮೃತದರಸದ ರುಚಿಗೆ ಮಾರುಹೋಗಿ ರಾಕ್ಷಸರ ಗುರು ಅಕ್ಕರೆಯಿಂದ ಸಂತೋಷಗೊಂಡು ಅಲ್ಲಿಯೆ ನೆಲೆ ನಿಂತನೊ ಎಂಬಂತೆ ಸಖಿಯರು ಪ್ರೀತಿಯಿಂದ ಶೃಂಗರಿಸಿದ ಮೂಗುಬಟ್ಟು ಪಾರ್ವತಿಯ ಮುಖವನ್ನು ಆಶ್ರಯಿಸಿ ಚೆನ್ನಾಗಿ ಪ್ರಕಾಶಿಸಿತು. ೧೮. ಸೂರ್ಯ–ಚಂದ್ರಮಂಡಲಗಳೆರಡೂ ಪ್ರಕಾಶಿಸುವ ಹಿಮವಂತನ ಮಗಳಾದ ಪಾರ್ವತಿಯ ಮಂಗಳಕರವಾದ ಎರಡು ಕಣ್ಣುಗಳನ್ನು ತಾವರೆ ಮತ್ತು ನೈದಿಲೆ ಹೂಗಳೆಂಬ ಹೊಟ್ಟೆಕಿಚ್ಚಿನಿಂದ ಇದು ನನ್ನದು, ಇದು ತನ್ನದು ಎಂಬ ನೆಪದಿಂದ ಒಂದರ ಪಕ್ಕದಲ್ಲಿ ಒಂದು ಚೆನ್ನಾಗಿ ನಿಂತು ಕಂಗೊಳಿಸುತ್ತಿವೆಯೋ ಹೇಳು ಎನ್ನುವಂತೆ ಮನೋಹರವಾದ ನವರತ್ನಗಳಿಂದ ಮಾಡಿದ ಬೆಂಡೋಲೆಗಳು ಗಿರಿಜೆಯ

CC-0. Jangamwadi Math Collection. Digitized by eGangotri

ಕುವಲಯಪರಾಜಿತಂ ಕಂಜಾತರಂಜಿತಂ
ತವೆ ತಾರಕಾಲಂಕೃತಂ ನಾಡೆ ಸಂತತಂ
ರವಿಯಂತೆ ಪುರದಂತೆ ವನದಂತೆ ಶಿವನಂತೆ ದಿವದಂತೆ ದನುಜರಂತೆ
ವಿವಿಧಾನಿಮಿಷಭಂಗವರ್ಧನಂ ಶ್ರುತಿಯುತಂ
ವಿವರಿಸಲ್ಕಂಜನೋದ್ಭಾಸಿತಂ ಬಕಸರಸಿ
ನವಗಾನ ವಿಪ್ರಕುಲಗಿರಿವರುಣದಿಶೆಯಂತೆ ಗಿರಿಜೆಯಂಬಕವೆಸೆದುವು ೧೯

ಈಕೆ ಮೂಜಗದ ಸತಿಯರ್ಗೆ ಭೂಷಾರತ್ನ
ಮಿಾಕೆಗಿನ್ನೇಕೆ ಭೂಷಣವಖಿಳದೇವಿಯ
ರ್ಗೀಕೆ ಮಸ್ತಕದಮಣಿಯೀಕೆಗಿನ್ನೇಕೆ ಸೀಮಂತಮಣಿ ಭಾವಿಸುವೊಡೆ
ಈಕೆ ಪೆಣ್ಗಳ ನೊಸಲತಿಲಕವೀಕೆಗೆ ತಿಲಕ
ಮೇಕೆ ರಂಜಿತ ಕುಸುಮಕೋಮಲಾಂಗದ ಚೆಲ್ವೆ
ಯಿಾಕೆಯಿಾಕೆಗೆ ಪುಷ್ಪಮಾಲೆಯೇಕೆಂದೊರ್ವಳಾಪ್ತಸಖಿಯಂ ಕೇಳ್ದಳು ೨೦

ಸಿಂಗರಕೆ ಸಿಂಗರಂ ಸಲ್ಲವಹುದಾದೊಡಂ
ಮಂಗಲಾರ್ಥಕ್ಕೆ ಮಾಡಿದೆವೆನಲ್ ತೆಗೆ ಸರ್ವ
ಮಂಗಲೆಗೆ ಮಂಗಲಮದೇಕೆನಲ್ ನಸುನಗುತೆ ಲೋಕೋಪಚಾರಕಾಗಿ

ಕಿವಿಗಳನ್ನು ಅಲಂಕರಿಸಿ ಬೆಳಗುತ್ತಿದ್ದುವು. ೧೯. ಗಿರಿಜೆಯ ಕಣ್ಣು ಸೂರ್ಯನಂತೆ ಪರಾಜಿತವಾದ ಕುವಲಯವುಳ್ಳದ್ದು ; ನದಿಯಂತೆ (1) ಕಮಲಗಳಿಂದ ರಂಜಿತ (2) ಕಮಲದಂತೆ ರಂಜಿತವಾದದ್ದು ; ನೀರಿನಂತೆ (1) ದೋಣಿಯಿಂದ ಅಲಂಕೃತ (2) ಕಪ್ಪು ಗುಡ್ಡೆಯಿಂದ ರಂಜಿತ ; ಈಶ್ವರನಂತೆ ವಿಶೇಷವಾಗಿ ದೇವತೆಗಳಿಗೆ ಒದಗುವ ವಿವಿಧ ಭಂಗಗಳನ್ನು (ವರ್ಧನ) ಹೋಗಲಾಡಿಸತಕ್ಕವನು ; ಆಕಾಶದಂತೆ ಶಬ್ದಯುಕ್ತ, ಕರ್ಣಪರ್ಯಂತ ವಿಸ್ತೃತ ; ವರ್ಣಿಸುವುದಾದರೆ ರಾಕ್ಷಸರಂತೆ ಕಾಡಿಗೆಯಂತೆ ಕಪ್ಪಾದದ್ದು' ಕಾಡಿಗೆಯಿಂದ ಪ್ರಕಾಶಿತವಾದದ್ದು ; ಮತ್ತು ಗಿರಿಜೆಯ ಕಣ್ಣು ಬಕದಂತೆ ಬಿಳಿಯ ನೈದಿಲೆಯನ್ನು ಪರಾಭವಗೊಳಿಸಿತ್ತು, ಸರೋವರದಂತೆ ಕಮಲಗಳಿಂದ ರಂಜಿತವಾಗಿತ್ತು, ನವಗಾನದಂತೆ ತಾರಸ್ವರಯುಕ್ತವಾದದ್ದು, ವಿಪ್ರಕುಲದಂತೆ ದೇವತೆಗಳ ಹಾನಿಯನ್ನು ಪರಿಹರಿಸತಕ್ಕದ್ದು, ಗಿರಿಯಂತೆ (ಮೃಗಪಕ್ಷಿಗಳ) ಧ್ವನಿಯಿಂದ ಕೂಡಿತ್ತು, ಪಶ್ಚಿಮ ದಿಕ್ಕಿನಂತೆ ಅಂಜನಪರ್ವತದಿಂದ ಪ್ರಕಾಶಿತವಾಗಿತ್ತು. ೨೦. ಈಕೆ ಮೂರು ಜಗತ್ತಿನ ಸತಿಯರಿಗೂ ಭೂಷಣರತ್ನಪ್ರಾಯಳು. ಈಕೆಗೆ ಇನ್ನೇಕೆ ಆಭರಣಗಳು. ಎಲ್ಲ ದೇವಿಯರಿಗೂ ಈಕೆ ಶಿರೋಮಣಿ. ಅಂಥ ಈಕೆಗೆ ಬೈತಲೆಯ ಬೊಟ್ಟೇಕೆ ? ಆಲೋಚಿಸುವುದಾದರೆ ಇವಳು ಹೆಂಗಸರ ಹಣೆಯ ತಿಲಕ,ಇನ್ನು ಬೇರೆ ತಿಲಕ ಇವಳಿಗೇಕೆ? ಪ್ರಕಾಶಿಸುವ ಹೂವಿನಂತೆ ಮೃದುವಾದ ಶರೀರದ ಚೆಲುವೆ ಈಕೆ. ಇವಳಿಗೆ ಹೂವಿನ ಹಾರವೇಕೆ ? ಎಂದು ಒಬ್ಬಳು ಆಪ್ತಸಖಿಯನ್ನು ಕೇಳಿದಳು. ೨೧. ಶೃಂಗಾರಕ್ಕೇ ಮತ್ತೆ ಶೃಂಗರಿಸುವುದು ಹೊಂದುವುದಿಲ್ಲವಾದರೂ ಮಂಗಳಕ್ಕಾಗಿ ಮಾಡಿದೆವು ಎನ್ನಲು, ಬಿಡು ಸರ್ವ

CC-0. Jangamwadi Math Collection. Digitized by eGangotri

ಸಿಂಗರಂಗೈದವೀ ನಳನಳಿಪ ನವಕೋಮ
ಲಾಂಗಿಯನೆನುತ್ತುಸಿರುತಿರಲೆಸೆದಳಾಗಲಗ
ಪುಂಗವನ ತನುಜಾತೆ ಸಕಲನಿಗಮಾತೀತೆ ವಿಖ್ಯಾತೆ ಲೋಕಮಾತೆ ೨೧

ಮಿಂಡಿಗೆ ಮೋಹಿದ ಕೇಶಮುಭವಬಂಧನಪಾಶ
ಮೊಡರ್ವ ಮೊಲೆಗಳ ಕೊರ್ಬು ಭವನ ಹರುಷದ ಪರ್ಬು
ಕುಡಿನೋಟಗಳ ಕಾಂತಿ ಹರನ ಚಿತ್ತದ ಭ್ರಾಂತಿ ರೂಪು ಶಂಕರನ ಕಾಪು
ಮುಡಿದ ಪೂವಿನ ತುರುಬು ಮೃಡಗಂಧಗಜದಿರುಬು
ನಡೆಯ ಸೊಬಗಿನ ಸೊಂಪು ಚಂದ್ರಚೂಡನಲಂಪು
ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮದ್ದು ತಾನೆನಲ್ ಶಿವೆ ಮೆರೆದಳು ೨೨

ಥಳಥಳಿಪ ನೀಲಾಳಕಾಳಿಗಳ ಪಾಳಿಗಳ
ತೊಳತೊಳಗುವಾಭರಣದೋರಣದ ಪೂರಣದ
ನಳನಳಿಪ ಕಾಂತಿಗಳ ಸೊಂಪುಗಳ ಪೆಂಪುಗಳ ಕಸ್ತೂರಿಕಾತಿಲಕದ
ಕಳಕಳಿಪ ನಗೆಗಣ್ಣ ಡಾಳಗಳ ಮೇಳಗಳ
ಹೊಳೆಹೊಳೆವ ಬೈತಲೆಯ ಮುತ್ತುಗಳ ಜೊತ್ತುಗಳ
ಘಲಘಲನೆ ಮೊರೆವಂದುಗಾವಳಿಯ ಗಾವಳಿಯ ಗಿರಿಜಾತೆ ರಂಜಿಸಿದಳು ೨೩

ಮಂಗಳೆಗೆ ಮಂಗಳವೇಕೆ ಎನ್ನಲು ನಸುನಗುತ್ತಾ ಲೋಕರೂಢಿಯ ಉಪಚಾರಕ್ಕಾಗಿ ಈ ಹೊಳೆ ಹೊಳೆಯುವ ನವಕೋಮಲಾಂಗಿಯನ್ನು ಅಲಂಕರಿಸಿದೆವು ಎಂದು ಹೇಳುತ್ತಿರಲು, ಆಗ ಪರ್ವತಶ್ರೇಷ್ಠನ ಮಗಳು ಸಕಲ ವೇದಗಳಿಗೂ ಅತೀತಳಾದವಳು, ಪ್ರಖ್ಯಾತಳೂ, ಲೋಕಮಾತೆಯೂ ಆದ ಅಗಜೆಯು ಪ್ರಕಾಶಿದಳು. ೨೨. ಹಿಮ್ಮಡಿಗೆ ತಗುಲುತ್ತಿದ್ದ ನೀಳವಾದ ತಲೆಗೂದಲೇ ಶಿವನನ್ನು ಬಂಧಿಸುವ ಹಗ್ಗ, ಉಬ್ಬಿ ಬೆಳೆದ ಮೊಲೆಗಳ ಕೊಬ್ಬೇ ಈಶ್ವರನ ಸಂತೋಷದ ಆಧಿಕ್ಯ, ಕಡೆಗಣ್ಣೋಟದ ಕಾಂತಿಯೇ ಶಿವನ ಮನಸ್ಸಿಗುಂಟಾಗುವ ಭ್ರಾಂತಿ, ಆಕೆಯ ಸೌಂದರ್ಯವೇ ಶಂಕರನ ರಕ್ಷಣೆ, ಮುಡಿದಿದ್ದ ಹೂವಿನ ತುರುಬೇ ಶಿವನೆಂಬ ಮದಗಜವನ್ನು ಕೆಡಹುವ ಹಳ್ಳ, ನಡಿಗೆಯ ಠೀವಿಯ ಸೊಂಪೇ ಚಂದ್ರಶೇಖರನಿಗೆ ಸೊಗಸಾದ ಅಲಂಕಾರ, ನುಡಿಯ ಮಾತಿನ ಮುದ್ದೇ ಶಿವನನ್ನು ಒಲಿಸುವ ಔಷಧವೆನ್ನುವಂತೆ ಪಾರ್ವತಿ ಮೆರೆಯುತ್ತಿದ್ದಳು. ೨೩. ಥಳಥಳಿಸುವ ಕಪ್ಪುಬಣ್ಣದ ಮುಂಗುರುಳುಗಳ ಸಾಲುಗಳು, ಹೊಳೆಹೊಳೆಯುವ ಓರಣವಾಗಿ ತುಂಬಿದ್ದ ಆಭರಣಗಳು, ನಳನಳಿಸುವ ಕಾಂತಿಯ ಅತಿಯಾದ ಸೌಂದರ್ಯದ ಕಸ್ತೂರಿತಿಲಕ, ಕಳಕಳಿಸುತ್ತಿದ್ದ ನಗೆ ತುಂಬಿದ ಕಳೆಗೂಡಿದ ಕಂಗಳು, ಹೊಳೆಹೊಳೆಯುವ ಬೈತಲೆಯ ಮುತ್ತುಗಳ ಸಾಲುಗಳು, ಘಲಘಲರೆಂದು ಶಬ್ದ ಮಾಡುವ ಕಾಲಂದುಗೆಯ

CC-0. Jangamwadi Math Collection. Digitized by eGangotri

ಚಂದ್ರಬಿಂಬಾನನದ ಕುಲಿಶರದನದ ಲಸ
ಚ್ಚಂದ್ರಾರ್ಧಭಾಳದ ಲಲಾಮದ ವಿರಾಜಿಸುವ
ಚಂದ್ರಕಿಸಮಾನಕಬರಿಯ ಭರದ ಸೂಸಕದ ಸುಣ್ಣೊಡೆಯ ಪೊಸತು ನಡೆಯ
ಚಂದ್ರಗಾವಿಯ ದುಕೂಲದ ಬೈತಲೆಗೆ ಪೊರೆದ
ಚಂದ್ರರಜದೊಬ್ಬುಳಿಯ ಶೃಂಗಾರಸಾರದಿಂ
ಚಂದ್ರಶೇಖರನ ಪಟ್ಟದರಾಣಿ ನಮಿತಗೀರ್ವಾಣಿ ರಂಜಿಸುತಿರ್ದಳು ೨೪

ರಾಜಹಂಸೀಯಾನೆ ಸುಕಲಾನಿಧಾನೆ ಮೃಗ
ರಾಜಸನ್ನಿಭಮಧ್ಯೆ ಸರ್ವನಿಗಮಾಭೇದ್ಯೆ
ರಾಜಸಮಶುಭವದನೆ ಕುಂದಕುಟ್ಮಲರದನೆ ಸಕಲಸೌಂದರ್ಯಸದನೆ
ರಾಜನ್ಮಹಾಭರಣೆ ದಿವಿಜವಂದಿತಚರಣೆ
ರಾಜರಿಪುಘನವೇಣಿ ದಳಿತಪಂಕಜಪಾಣಿ
ರಾಜಶೇಖರನರಸಿ ವಿಮಲಸದ್ಗುಣಸರಸಿ ಸಿಂಗರದೊಳೊಪ್ಪಿರ್ದಳು ೨೫

ಆ ಸಮಯದೊಳ್ ಬೃಹಸ್ಪತಿ ಶಂಭುವೆಡೆಗೆ ಸುವಿ
ಲಾಸದಿಂ ಬಂದು ಬಂದುದು ಮುಹೂರ್ತಂ ಕೃತ್ತಿ
ವಾಸ ಬಿಜಯಂಗೆಯ್ವುದೆನೆ ಕೇಳುತಾಗ ಹರಿಯಜರ ಕೈಲಾಗಿನಿಂದೆ

ಸಮೂಹದ ಸಪ್ಪಳ, ಇವುಗಳಿಂದ ಪಾರ್ವತಿ ಮನೋಹರವಾಗಿ ಕಂಡಳು. ೨೪. ಚಂದ್ರ ಬಿಂಬದಂತಹ ಮುಖದ, ವಜ್ರದಂತೆ ಬೆಳ್ಳಗಿರುವ ಹಲ್ಲಿನ, ಹೊಳೆಯುವ ಅರ್ಧಚಂದ್ರ ದಂತೆ ಇದ್ದ ಹಣೆಯ ತಿಲಕದ, ಪ್ರಕಾಶಿಸುವ ನವಿಲಿನಂತಹ ಕೂದಲುಳ್ಳ ಭಾರವಾದ ಹಣೆ ಯ ಆಭರಣದ, ಸುಣ್ಣಾದ ತೊಡೆಯ, ಹೊಸನಡಿಗೆಯ, ಚಂದ್ರಗಾವಿಯ ಸೀರೆ, ಬೈತ ಲೆಗೆ ಹಚ್ಚಿದ ಸಿಂಧೂರದ ಸಮೂಹಗಳ ಶೃಂಗಾರಸಾರವೋ ಎಂಬಂತಿರುವ ವಸ್ತ್ರ ಭೂಷಣ ಅಲಂಕಾರಗಳಿಂದ ಕೂಡಿ ಸರಸ್ವತಿಯಿಂದ ನಮಿಸಿಕೊಳ್ಳುವ ಚಂದ್ರಶೇಖರನ ಪಟ್ಟದರಾಣಿಯಾದ ಗಿರಿಜೆಯು ರಂಜಿಸುತ್ತಿದ್ದಳು. ೨೫. ರಾಜಹಂಸದಂತೆ ನಡೆಯುವ ವಳು, ಒಳ್ಳೆಯ ಕಲೆಗಳಿಗೆ ಆಶ್ರಯಳಾದವಳು, ಸಿಂಹದಂತೆ ತೆಳುವಾದ ನಡುವುಳ್ಳವಳು, ವೇದಾತೀತೆ, ಚಂದ್ರವದನೆ, ಕೋಲುಮಲ್ಲಿಗೆಯಂತಹ ಹಲ್ಲುಳ್ಳವಳು, ಎಲ್ಲ ಸೌಂದರ್ಯ ಗಳಿಗೂ ಆವಾಸಸ್ಥಾನಳಾದವಳು, ಚಂದ್ರಾಭರಣೆ, ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದವುಳ್ಳವಳು, ಕಪ್ಪಾದ ಜಡೆಯುಳ್ಳವಳು, ಅರಳಿದ ತಾವರೆಯಂತಹ ಕೈಯುಳ್ಳವಳು, ಚಂದ್ರಶೇಖರನ ಅರ್ಧಾಂಗಿ, ಸದ್ಗುಣಗಳ ಸಾಗರೆಯಾದ ಪಾರ್ವತಿಯು ಶೃಂಗಾರದಿಂದ ಶೋಭಿಸುತ್ತಿದ್ದಳು. ೨೬. ಆ ಹೊತ್ತಿನಲ್ಲಿ ಬೃಹಸ್ಪತಿಯು ಈಶ್ವರನ ಬಳಿಗೆ ಸಂತೋಷ ದಿಂದ ಬಂದು ಮುಹೂರ್ತ ಹತ್ತಿರವಾಯಿತು ಶಿವನೆ ದಯಮಾಡಿಸಬೇಕು ಎಂದನು. ಅದನ್ನು ಕೇಳಿ ಬಾಸಿಂಗವನ್ನು ಹಣೆಯಲ್ಲಿ ಧರಿಸಿದ್ದ ದೇವನು ಕೋಮಲವಾದ ಪಾದಗಳಿಂದ

CC-0. Jangamwadi Math Collection. Digitized by eGangotri

ಬಾಸಿಗದ ನೊಸಲ ದೇವಂ ಕೋವಮಲಾಂಘ್ರಿವಿ
ನ್ಯಾಸದಿಂದ್ಯೆತಂದು ಮಣಿಕಾಂತಿ ದೆಸೆದೆಸೆಗೆ
ಸೂಸುತಿಹ ಪಲ್ಲಕ್ಕಿಯಂ ಪತ್ತಿ ಸಕಲ ವೈಭವದಿಂದೆ ಬರುತಿರ್ದನು ೨೬

ಹರಿಯಜೇಂದ್ರಾದಿ ನಾನಾ ಲೋಕಪಾಲಕರ್
ಹರನೆಡಬಲಂಗಳೊಳ್ ಕಾಲ್ನಡೆಯೊಳೈತರಲ್
ಪರಿಪರಿಯ ವಿನಿಯೋಗದಷ್ಟದಿಕ್ಪಾಲಕರ್ ಸುತ್ತಲುಂ ಬಳಸಿ ಬರಲು
ತರಣಿಚಂದ್ರಮರುಭಯ ಚಮರಮಂ ಡಾಳಿಸಲ್
ಪರಮಕರ್ಪೂರದ ಬೊಂಬಾಳದೀವಿಗೆ ಬೆಳಗು
ಪರಿಶೋಭಿಸಲ್ಕಾಗ ಮುತ್ತುಗಳ ಸತ್ತಿಗೆಯ ವೊತ್ತವೆಸೆಯಲ್ ಬಂದನು ೨೭

ತರತರದೆ ಪೊಗಳ್ವ ವೇದಾವಳಿಯ ಗಾವಳಿಯ
ಬಿರುದ ಕೊಂಡಾಡುತಿಹ ಪಾಠಕರ ನೋಟಕರ
ಮೊರೆವ ವಾದ್ಯಧ್ವನಿಗಳೋಳಿಗಳ ಪಾಳಿಗಳ ಸುರವಧೂನೃತ್ಯಂಗಳ
ಇರದೆತ್ತುವಾರತಿಯ ಚೆನ್ನೆಯರ ಕನ್ನೆಯರ
ಶಿರಕೆ ತಳಿವಕ್ಷತೆಯ ಮುತ್ತುಗಳ ಜೊತ್ತುಗಳ
ಪರಮ ಸಂಭ್ರಮದಿಂದೆ ವರಮಂಟಪದ ಮುಂದೆ ಪಲ್ಲಕ್ಕಿಯಿಂದಿಳಿದನು ೨೮

ಸುರಲೋಕದಂತೆ ರಂಭಾರಂಜಿತಂ ರತೀ
ಶ್ವರನ ಕೈಪೊಡೆಯಂತೆ ಪೂಸರಕ್ಕಾಶ್ರಯಂ
ಗುರುಮೇರುಗಿರಿಯಂತನಂತಮಣಿವೇಷ್ಟನವಿಲಾಸನ ಸರೋಜದಂತೆ

ನಡೆದುಬಂದು ವಿಷ್ಣು ಬ್ರಹ್ಮರು ಹಸ್ತಲಾಘವವನ್ನೀಯಲು ಮಣಿಗಳ ಕಾಂತಿಯನ್ನು ದಿಕ್ಕುದಿಕ್ಕುಗಳಿಗೂ ಬೀರುತ್ತಿದ್ದ ಪಲ್ಲಕ್ಕಿಯನ್ನು ಏರಿ ಎಲ್ಲ ವೈಭವದಿಂದ ಬರುತ್ತಿದ್ದನು. ೨೭. ವಿಷ್ಣು ಬ್ರಹ್ಮ ಮೊದಲಾದ ನಾನಾ ಲೋಕನಾಯಕರು ಶಿವನ ಎಡ-ಬಲಗಳಲ್ಲಿ ಕಾಲ್ನಡಿಗೆಯಲ್ಲಿ ಬರುತ್ತಿರಲು, ನಾನಾರೀತಿಯ ಊಳಿಗದ ಅಷ್ಟದಿಕ್ಪಾಲಕರು ಬರುತ್ತಿರಲು, ಸೂರ್ಯ–ಚಂದ್ರರು ಎರಡು ಕಡೆಗಳಲ್ಲಿಯೂ ಚಾಮರವಿಕ್ಕುತ್ತಿರಲು, ಶ್ರೇಷ್ಠವಾದ ಕರ್ಪೂರದ ದೀಪದ ಕಂಬಗಳ ಬೆಳಕು ಶೋಭಿಸುತ್ತಿರಲು, ಮುತ್ತಿನ ಛತ್ರಿಗಳ ಸಮೂಹವು ಶೋಭಿಸುತ್ತಿರಲು ಶಿವನು ಬಂದನು. ೨೮. ನಾನಾ ರೀತಿಯಲ್ಲಿ ಹೊಗಳುವ ವೇದಗಳ ಗುಂಪುಗಳಿದ್ದುವು. ಬಿರುದುಗಳನ್ನು ಹೊಗಳುವ ವಂದಿಮಾಗಧರು, ನೋಡಲು ಬಂದ ವರು ಇದ್ದರು. ಬಾರಿಸುತ್ತಿದ್ದ ವಾದ್ಯಧ್ವನಿಗಳ ಸಾಲುಗಳಿದ್ದುವು, ದೇವತಾಸ್ತ್ರೀಯರು ನರ್ತಿಸುತ್ತಿದ್ದರು. ಬಿಡದೆ ಆರತಿಯನ್ನು ಎತ್ತುವ ಸೊಗಸುಗಾತಿಯರು, ಕನ್ಯೆಯರು ಇದ್ದರು. ತಲೆಯ ಮೇಲೆ ಹಾಕುತ್ತಿದ್ದ ಮುತ್ತುಗಳ ಅಕ್ಷತೆಯ ರಾಶಿಯಿದ್ದಿತು. ಇವುಗಳ ಸಂಭ್ರಮದಿಂದ ಕೂಡಿ ಮಂಗಳಕರವಾದ ಅಲಂಕೃತಮಂಟಪದ ಮುಂದೆ ಪಲ್ಲಕ್ಕಿಯಿಂದ ಇಳಿದನು. ೨೯. ದೇವಲೋಕದಂತೆ ರಂಭೆಯಿಂದ ರಂಜಿಸುತ್ತಿತ್ತು, ಮನ್ಮಥನ ಬಾಣದ ಹಿಂಭಾಗದಂತೆ ಹೂವಿಗೆ ಆಶ್ರಯವಾಗಿತ್ತು. ಶ್ರೇಷ್ಠವಾದ ಮೇರುಪರ್ವತದಂತೆ ಅನೇಕ

CC-0. Jangamwadi Math Collection. Digitized by eGangotri

ವರಚಿತ್ರಪತ್ರರಾರಾಜಿತಂ ಸಂತತಂ
ಪರಿಯಂತೆ ಲಕ್ಷ್ಮೀಕರಗ್ರಾಹಿಯೆಂದೆನಿಸಿ
ಪರಿಶೋಭಿಸಿತ್ತು ತದ್ವೈವಾಹಮಂಟಪಂ ಲೋಕನಾಯಕನಿದಿರೊಳು ೨೯

ಪರಮರುಚಿಪೀತಾಂಬರಂ ವರಶ್ರೀಧರಂ
ಸರಸಗಾರುತ್ಮಧ್ವಜಾಲಂಕೃತಂ ಚಕ್ರ
ಪರಿರಂಜಿತಂ ವಿಶ್ವಕರ್ಮನಿರ್ಮಾಣವಣ ಗೋವರ್ಧನಂ ಸಂತತಂ
ಪರಿಕಿಸಲನಂತಮಣಿಕಿರಣವಿಭ್ರಾಜಿತಂ
ನಿರುತಮತನುಪ್ರಭಾವೋಲ್ಲಾಸಿತಂ ನಾಡೆ
ಪರಿಯಂತೆ ವೈವಾಹಮಂಟಪಂ ರಂಜಿಸಿದುದೇನೆಂಬೆನಚ್ಚರಿಯನು ೩೦

ವಿಲಸದ್ವಿಭೂತಿ ಶೋಭಾರಂಜಿತಂ ಮಹೋ
ಜ್ವಲಪದ್ಮರಾಗವಿಭ್ರಾಜಿತಂ ಗಾಂಗೇಯ
ಜಲಧೃತಂ ನವಚಂದ್ರಕಾಂತಕಾಂತಂ ರಾಜಹಂಸಲೋಚನರಾಜಿತಂ
ಸುಲಲಿತವಿಚಿತ್ರ ಮೃಗಸಂಶೋಭಿತಂ ನುನಿ
ಶ್ಚಲನೀಲಲೋಹಿತಂ ನುತಸರ್ವಮಂಗಲಾ
ಕಲಿತಮುಂ ತಾನೆನಿಸಿ ಮಂಟಪಂ ಶಿವನಂತೆ ಶಿವನಿದಿರೊಳೆಸೆದಿರ್ದುದು ೩೧

ರತ್ನಗಳ ಕಾಂತಿಯಿಂದ ಆವರಿಸಿತ್ತು, ಕಮಲದಂತೆ ಬಣ್ಣ ಬಣ್ಣದ ಎಲೆಗಳಿಂದ ಕೂಡಿತ್ತು, ಸದಾ ವಿಷ್ಣುವಿನಂತೆ ಲಕ್ಷ್ಮಿಯ ಕೈಹಿಡಿದಿತ್ತು ಎನಿಸಿ ಆ ವಿವಾಹಮಂಟಪವು ಶಿವನ ಎದುರಿನಲ್ಲಿ ಪ್ರಕಾಶಮಾನವಾಗಿತ್ತು. ೩೦. ಮನೋಹರವಾದ ಕಾಂತಿ ಕೂಡಿ ಪೀತಾಂಬರ ದಿಂದ ರಚಿಸಲ್ಪಟ್ಟಿತ್ತು. (ವಿಷ್ಣುವಿನಂತೆ ಪೀತಾಂಬರಧಾರಿಯಯಗಿತ್ತು), ಮಂಗಳ ಕರವಾಗಿತ್ತು (ಲಕ್ಷ್ಮಿಯಿಂದ ಕೂಡಿದ್ದ ವಿಷ್ಣುವಿನಂತಿತ್ತು), ಮನೋಹರವಾದ ಮರ ಕತರತ್ನ ಧ್ವಜಗಳಿಂದ ಅಲಂಕೃತವಾಗಿತ್ತು. (ಗರುಡಧ್ವಜವನ್ನು ಹೊಂದಿರುವ ವಿಷ್ಣುವಿ ನಂತೆ ಕಾಣುತ್ತಿತ್ತು), ಜನರ ಸಮೂಹದಿಂದ ಕೂಡಿತ್ತು, (ಚಕ್ರಧಾರಿಯಾದ ವಿಷ್ಣುವಿ ನಂತೆ ತೋರುತ್ತಿತ್ತು), ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಆ ಮಂಟಪ ಕಣ್ಣುಗಳನ್ನು ಅರಳಿಸುವಂತೆ ಮಾಡಿತ್ತು (ಬ್ರಹ್ಮನಿಂದ ಸೃಷ್ಟಿಗೊಂಡ ಗೋವರ್ಧನಪರ್ವತದಂತೆ ತೋರುತ್ತಿತ್ತು), ಪರೀಕ್ಷಿಸಲು ಆದಿಶೇಷನ ಫಣಾಮಣಿ ಕಿರಣಗಳಿಂದ ಆವರಿಸಲ್ಪಟ್ಟಿತ್ತು, ಸದಾ ಮನ್ಮಥನ ಪ್ರಭಾವಕ್ಕೊಳಗಾಗಿ ಉಲ್ಲಾಸಗೊಳಿಸುತ್ತಿತ್ತು. ಈ ರೀತಿ ಕೂಡಿದ್ದ ವಿವಾಹಮಂಟಪವು ವಿಷ್ಣುವಿನಂತೆ ಪ್ರಕಾಶಮಾನವಾಗಿತ್ತು, ಆಶ್ಚರ್ಯವನ್ನು ಏನೆಂದು ಹೇಳಲಿ ! ೩೧. ಪವಿತ್ರವಾದ ವಿಭೂತಿಯ ಶೋಭೆಯಿಂದ ರಂಜಿಸುತ್ತಿತ್ತು. ಬಹಳ ಉಜ್ವಲವಾದ ಪದ್ಮರಾಗದಿಂದ ಹೊಳೆಯುತ್ತಿತ್ತು. ಗಂಗಾಜಲವನ್ನು ಧರಿಸಿದಂತಿತ್ತು. ಚಂದ್ರಶೇಖರನಂತೆ ಇತ್ತು. ರಾಜಹಂಸದ ಕಣ್ಣಿನಂತೆ ಶೋಭಿಸುತ್ತಿತ್ತು. ಮನೋಹರ ವಾದ ವಿಚಿತ್ರ ಮೃಗಗಳಿಂದ ಶೋಭಾಯಮಾನವಾಗಿತ್ತು, ನಿಶ್ಚಲವಾದ ಧೂಮ್ರ ವರ್ಣದಿಂದ ಕೂಡಿತ್ತು. ಹೊಗಳಲ್ಪಡುವ ಸರ್ವಮಂಗಳೆಯನ್ನು ಹೊಂದಿರುವವ ತಾನು



CC-0. Jangamwadi Math Collection. Digitized by eGangotri

ಬಿಗಿದ ನವಮಕರತೋರಣದಿಂದೆ ಗುಣದಿಂದೆ
ನೆಗೆದ ನಾನಾಧ್ವಜಾವಳಿಯಿಂದೆ ಪಳಿಯಿಂದೆ
ಝುಗಝುಗಿಪ ಮಣಿದೀಪಚಯದಿಂದೆ ನಯದಿಂದಲೆಸೆವ ಮೇಲ್ಕಟ್ಟಿನಿಂದೆ
ಅಗರುಧೂಪದ ಪೊಗೆಯ ಕಂಪಿಂದೆ ಪೆಂಪಿಂದೆ
ಮೃಗನಾಭಿ ಕರ್ಪೂರದ ಸೊಂಪಿಂದೆ ತಂಪಿಂದೆ
ನಿಗುರ್ವ ಪೂಮಾಲೆಗಳ ಲಂಪಿಂದಲಂಪಿಂದೆ ಮಂಟಪಂ ಚೆಲ್ವಾದುದು ೩೨

ನಟ್ಟನಡುವಗಲ ಮಾರ್ತಾಂಡನೇರಿದ ರಥದ
ತಿಟ್ಟವೋ ಭೂಮಂಡಲದ ನಡುವೆ ಪೊಳೆವ ಪೊಂ
ಬೆಟ್ಟವೋ ತತ್ಸಭಾಪಂಕೇರುಹದ ಮಧ್ಯಕರ್ಣಿಕೆಯೊ ಪೇಳೆಂದೆನೆ
ಇಟ್ಟಣಿಸಿ ಬಿಗಿದ ಮಾಣಿಕ್ಯಲಹರಿಯ ಮುತ್ತಿ
ನೊಟ್ಟಜೆಯ ಕೀಲಣೆಯ ಗಾಡಿಯಿಂದಿರದೆ ಕರು
ವಿಟ್ಟ ವೈವಾಹವೇದಿಕೆಯನೇರಿದನಭವನಧಿಕತರ ವಿಭವದಿಂದೆ ೩೩

ಇಂತು ರಾಜಿಸುವ ವೈವಾಹವೇದಿಕೆಯೊಳಗ
ನಂತ ಶಿವಗಣಕುಲಂ ಪಿಂತೆ ರಾಜಿಸುತಿರಲ್
ಕಂತುಪಿತ ಕಮಲಜೇಂದ್ರಾದಿ ದಿವಿಜವ್ರಾತಮೆಡಬಲದೊಳಿಟ್ಟಣಿಸಲು

ಎನ್ನಿಸಿ ಶಿವನಂತೆ ಈಶ್ವರನ ಎದುರಿನಲ್ಲಿ ಆ ವಿವಾಹಮಂಟಪ ಶೋಭಿಸುತ್ತಿತ್ತು, ೩೨. ಕಟ್ಟಿದ ನೂತನ ಮಕರ ತೋರಣಗಳಿಂದ, ದಾರದಿಂದ ಹಾರಾಡುವ ನಾನಾರೀತಿಯ ಧ್ವಜ ಸಮೂಹದಿಂದ, ರೇಷ್ಮೆವಸ್ತ್ರದ ಪರದೆಯಿಂದ, ಝುಗಝುಗಿಸುವ ಮಣಿದೀಪಗಳಿಂದ, ನಯವಾಗಿ ಕಾಣುವ ಮೇಲ್ಕಟ್ಟಿನಿಂದ, ಅಗರುಧೂಪಗಳ ಹೊಗೆಯಿಂದ, ಸುವಾಸನೆಯ ಆಧಿಕ್ಯದಿಂದ, ಕಸ್ತೂರಿ ಕರ್ಪೂರದ ಸೊಗಸಿನಿಂದ, ತಂಪಿನಿಂದ, ಉದ್ದನಾಗಿ ಇಳಿಬಿದ್ದ ಹೂಮಾಲೆಗಳ ವೈಭವದ ಸೊಗಸಿನಿಂದ ಆ ಮಂಟಪ ಮನೋಹರವಾಯಿತು. ೩೩. ನಟ್ಟ ನಡುಹಗಲಿನಲ್ಲಿ ಸೂರ್ಯನು ಹತ್ತಿದ ರಥದ ಆಸನವೊ, ಭೂಮಿಯ ಮಧ್ಯೆ ಹೊಳೆಯುವ ಚಿನ್ನದ ಬೆಟ್ಟವೊ ! ಆ ಸಭಾಕಮಲದ ಮಧ್ಯದ ಬೀಜಕೋಶವೊ ! ಹೇಳು ಎನ್ನಲು ಒತ್ತೊತ್ತಾಗಿ ಕಟ್ಟಿದ ಮಾಣಿಕ್ಯತರಂಗದ, ಮುತ್ತಿನ ಸಾಲಿನ ಕೀಲಿನ ಸೊಬಗಿನಿಂದ ಎರಕಹೊಯ್ದ ವಿವಾಹವೇದಿಕೆಯನ್ನು ಶಿವನು ಅಧಿಕವಾದ ವೈಭವದಿಂದ ಹತ್ತಿದನು. ೩೪. ಒಂದೆಡೆ ಈ ರೀತಿ ಪ್ರಕಾಶಿಸುವ ವಿವಾಹವೇದಿಕೆಯಲ್ಲಿ ಎಲ್ಲ ಶಿವಗಣವೂ ಹಿಂಭಾಗದಲ್ಲಿ ಕುಳಿತಿದ್ದುವು. ವಿಷ್ಣು-ಬ್ರಹ್ಮ-ಇಂದ್ರ ಮೊದಲಾದ ದೇವತಾ ಸಮೂಹ ಎಡ-ಬಲಗಳಲ್ಲಿರಲು ಮುಂದೆ ರಂಭೆ ಮೊದಲಾದ ನಾನಾ ದೇವಸ್ತ್ರೀಯರು

CC-0. Jangamwadi Math Collection. Digitized by eGangotri

ಮುಂತೆ ರಂಭಾದಿ ನಾನಾ ದೇವಕಾಂತೆಯರ್
ಸಂತಸದೆ ನರ್ತಿಸುತ್ತಿರೆ ನಂದಿ ಮಾಕಾಳ
ರುಂ ತವೆ ಭರಾಭರಿಗಳಂ ಮಾಡುತಿರಲಿತ್ತಲತ್ತಲತಿಸಂಭ್ರಮದೊಳು ೩೪

ಇಂದೀವರಾಯತಾಂಬಕಿಯನೊಲವಿಂದೆ ಪೊ
ನ್ನಂದಣದೊಳಿಟ್ಟು ಹಡಪಂ ಗಿಂಡಿ ಕಾಳಂಜಿ
ಯುಂದವಡೆದಿರ್ದ ಚಮರಾದಿಯೂಳಿಗವಾಂತು ಚೌಷಷ್ಟಿ ಯೋಗಿಣೆಯರು
ಕುಂದರದನದ ಕುಮುದಲೋಚನದ ಲಲಿತಾರ
ವಿಂದವದನದ ವಿಪುಳಕುಚಭರದ ಕೆಳದಿಯರ್
ಕಂದರ್ಪನಾನೆಯೆಂತೈದಿದರ್ ಗಿರಿತನುಜೆಯಂದಣದ ಮುಂದೆಸೆಯೊಳು ೩೫

ನಾಗಸನ್ನಿಭವೇಣಿ ನಳಿನದಳನಯನೆ ಮದ
ನಾಗಮೋಹನಯಾನೆ ನಾನಾ ಕಲಾಲೋಲೆ
ನಾಗರಿಪುಮಧ್ಯೆ ನರ ನಾಗ ಸುರಲೋಕದಬಲಾಗಣದ ಮಸ್ತಕಮಣಿ
ನಾಗಾರಿಗಮಸಾತ್ಮಜನ ಪಟ್ಟದಾನೆ ಪುಂ
ನಾಗಸೌಗಂಧಿ ಕಡುಬಿಳಿದಾಗಿ ರಂಜಿಸುವ
ನಾಗವಲ್ಲೀದಳವ ಮಡಿದೀವುತೈದಿದಳ್ ನಾಗಭೂಷಣನರಸಿಗೆ ೩೬

ತೋಳ ಮೊದಲಂ ಕರವನೆತ್ತಿ ಸಿತಚಾಮರವ
ಢಾಳಿಸುವ ನೆವದೆ ತೋರುತ್ತಲೊರ್ವರನೊರ್ವ
ರಾಲೋಕಿಸುವ ನೆವದೆ ಲೋಚನಮರೀಚಿಗಳ ಪಸರಿಸುತೆ ಬಲ್ಮೊಲೆಗಳ

ಸಂತೋಷದಿಂದ ನರ್ತನ ಮಾಡುತ್ತಿರಲು, ನಂದಿ-ಮಾಕಾಳರು ಉತ್ತಮ ವ್ಯವಸ್ಥೆ ಮಾಡುತ್ತಿರಲು,ಮತ್ತೊಂದೆಡೆ ಅತಿಸಂಭ್ರಮದಿಂದ ೩೫. ಕಮಲಾಕ್ಷಿಯನ್ನು ಪ್ರೀತಿಯಿಂದ ಪೊನ್ನಿನ ಪಲ್ಲಕ್ಕಿಯಲ್ಲಿ ಕೂಡಿಸಿ ತಾಂಬೂಲದತಟ್ಟೆ, ಹೂಪಾತ್ರೆ, ಪನ್ನೀರುದಾನಿ, ಮನೋಹರವಾಗಿದ್ದ ಚಾಮರ ಬೀಸುವುದು ಮೊದಲಾದ ಕೆಲಸಗಳನ್ನು ಕೈಗೊಂಡಿದ್ದ ಅರವತ್ತನಾಲ್ಕು ಯೋಗಿಣಿಯರು, ಕೋಲುಮಲ್ಲಿಗೆ ಹಲ್ಲಿನ ನೈದಿಲೆಗಣ್ಣಿನ, ಮನೋಹರವಾದ ತಾವರೆಮುಖದ, ದಪ್ಪವಾದ ಭಾರವಾದ ಮೊಲೆಗಳ ಸಖಿಯರು ಗಿರಿಜೆಯ ಪಲ್ಲಕ್ಕಿಯ ಮುಂಭಾಗದಲ್ಲಿ ಮನ್ಮಥನ ಆನೆಯಂತೆ ನಡೆದುಬಂದರು. ೩೬. ಫಣಿವೇಣಿ, ಕಮಲಾಕ್ಷಿ, ಮದನಶಾಸ್ತ್ರದಿಂದ ಆಕರ್ಷಕವಾದ ನಡಿಗೆಯುಳ್ಳವಳು, ನಾನಾ ಕಲೆಯನ್ನು ಬಲ್ಲವಳು, ಸಿಂಹಕಟಿಯುಳ್ಳವಳು, ಮಾನವ ಸರ್ಪ ದೇವಲೋಕದ ಸ್ತ್ರೀಜನದ ತಲೆವಣಿ, ಮನ್ಮಥನ ಪಟ್ಟದ ಆನೆ, ಸುರಹೊನ್ನೆಹೂವಿನ ಸುಗಂಧದಿಂದ ಕೂಡಿದವಳೊಬ್ಬಳು ಸಖಿಯು ಅಚ್ಚ ಬಿಳುಪಾಗಿ ಶೋಭಿಸುವ ವೀಳೆಯದೆಲೆಯನ್ನು ನಾಗಭೂಷಣನ ರಾಣಿಯಾದ ಪಾರ್ವತಿಗೆ ಮಡಚಿ ಕೊಡುತ್ತ ಬರುತ್ತಿದ್ದಳು. ೩೭. ಕೈಯೆತ್ತಿ ಬಿಳಿಯ ಚಾಮರವನ್ನು ಬೀಸುವ ನೆಪದಿಂದ ಕಂಕುಳನ್ನು ತೋರಿಸುತ್ತ, ಒಬ್ಬರನ್ನೊಬ್ಬರು ನೋಡುವ ನೆಪದಿಂದ ಕಣ್ಣಿನ ಕಾಂತಿಯನ್ನು ಹರಡುತ್ತ, ಸೆರಗನ್ನು ಪೊದ್ದು

CC-0. Jangamwadi Math Collection. Digitized by eGangotri

ಮೇಲುದಂ ಪೊದೆವ ನೆವದಿಂದೆ ನಸುದೋರಿಸುತೆ
ಮೇಳದಿಂ ಗಿರಿಜೆಯೆಡಬಲಗಳೊಳ್ ಕಣ್ಗೊಳಿಸಿ
ಲೀಲೆಯಿಂ ನಡೆವ ಚಮರಗ್ರಾಹಿಣಿಯರೆಸೆದರೇನೆಂದು ಬಣ್ಣಿಸುವೆನು ೩೭

ತಾವರೆಯ ಕನ್ನಡಿಯ ಶಶಿಯ ಪಡಿಗುಟ್ಟುವುದಿ
ದಾವ ಬಲ್ಲವಿಕೆ ಕೆಸರೊಳ್ ಪುಟ್ಟಿ ಕಠಿಣತೆಯ
ನಾವರಿಸಿ ಕಂದನಾಂತುವನೆಮ್ಮ ಮೊಗಕೆಂದವಂ ಪಿಡಿದು ಸರಿನೋಡುವ
ಭಾವದಿಂ ಗೌರಿಯಿಕ್ಕೆಲಗಳೊಳ್ ಬೀಸುವ ಬ
ಲಾವಳಿಯ ಕರಪಲ್ಲವಂಗಳೊಳಗೊಪ್ಪುತಿಹ
ಪಾವನವ್ಯಜನಂ ವಿರಾಜಿಸಿದುವೆನಲವರ ನಗೆಮೊಗದ ಗಾಡಿಯೆಂತೊ ೩೮

ಈತನನುದಿನ ಪುಷ್ಪಿತಾಸಂಗಿ ಕುವಲಯವಿ
ಘಾತಕು ದ್ವಿಜವರ್ಣಹೃತನದರಿನೀಗ ಪ್ರ
ದ್ಯೋತಕಿರಣಂಗಳೆಮ್ಮರಸಿಯುಂ ಸೋಂಕಬೇಡೆಂದುರೆ ನಿವಾರಿಪಂತೆ
ಮಾತಂಗದಾನಲೋಭಿಗಳಿರದೆ ಮಧುವನತಿ
ಪ್ರೀತಿಯಿಂದುಂಬ ಚಂಡಾಳಿಗಳ್ ಶಿವೆಯ ಮುಖ
ಜಾತಪರಿಮಳಕೆರಗಬೇಡೆಂದು ಪೊಡೆವಂತೆ ಛತ್ರಚಾಮರವೆಸೆದುವು ೩೯

ಕೊಳ್ಳುವ ನೆಪದಿಂದ ತೋರ ಮೊಲೆಗಳನ್ನು ಸ್ವಲ್ಪವೇ ತೋರಿಸುತ್ತ ಪಾರ್ವತಿಯ ಎಡ-ಬಲಗಳಲ್ಲಿ ಸಂದಣಿಸಿ ಕಂಗೊಳಿಸಿ ಒಯ್ಯಾರದಿಂದ ನಡೆಯುವ ಚಾಮರ ಹಿಡಿದವರು ಕಂಗೊಳಿಸುತ್ತಿದ್ದರು. ೩೮. ಕೆಸರಿನಲ್ಲಿ ಹುಟ್ಟುವ ತಾವರೆಯನ್ನು, ಕಠಿಣವಾದ ಕನ್ನಡಿಯನ್ನು, ಕಂದಿಹೋಗುವ ಚಂದ್ರನನ್ನು ನಮ್ಮ ಮುಖಕ್ಕೆ ಸರಿಗಟ್ಟುವುದು ಯಾವ ಬುದ್ಧಿವಂತಿಕೆ? ಎಂದು ಅವನ್ನು ಹಿಡಿದು ಸರಿನೋಡುವ ಅಭಿಪ್ರಾಯದಿಂದ ಪಾರ್ವತಿಯ ಎರಡೂ ಕಡೆಗಳಲ್ಲಿ ಗಾಳಿ ಹಾಕುವ ಅಬಲೆಯರ ಕೋಮಲವಾದ ಕೈಗಳಲ್ಲಿರುವ ಪಾವನವಾದ ಬೀಸಣಿಗೆಗಳು ಹೊಳೆಯುತ್ತಿದ್ದುವು ಎನ್ನಲು ಅವರ ನಗುಮುಖದ ಸೌಂದರ್ಯವೆಂತಹುದು ! ೩೯. ಇವನು ಪ್ರತಿದಿನವೂ ಹೂಗಳ ಸಂಗ ಬಯಸುವವ, ನೈದಿಲೆಗಳಿಗೆ ಆಘಾತವುಂಟುಮಾಡುವವ, ನಕ್ಷತ್ರಕುಲನಾಶಕ, ಆದುದರಿಂದ ಈಗ ಹೊಳೆಯುವ ಕಿರಣಗಳು ನಮ್ಮ ರಾಣಿಯನ್ನು ಸೋಕುವುದು ಬೇಡವೆಂದು ಚೆನ್ನಾಗಿ ತಡೆಯುವಂತೆ ಛತ್ರಿಗಳು, ಆನೆಯ ಮದಜಲಕ್ಕೆ ಆಶಿಸುವ ಹೂಗಳ ಮಕರಂದವನ್ನು ಅತಿಪ್ರೀತಿಯಿಂದ ಕುಡಿಯುವ ದುರುಳ ದುಂಬಿಗಳು, ಪಾರ್ವತಿಯ ಮುಖಕಮಲದಿಂದ ಸೂಸುವ ಸುವಾಸನೆಗೆ ಎರಗದಿರಲೆಂದು ಅವನ್ನು ಓಡಿಸು

CC-0. Jangamwadi Math Collection. Digitized by eGangotri

ಭೇರೀಮೃದಂಗ ದುಂದುಭಿ ಶಂಖ ಕಹಳಾ ಮ
ಹಾರವಂಗಳ ಶೋಭನಸ್ವನದ ವಂದಿ ಗಂ
ಭೀರಘೋಷದ ಸಖೀನಿಕರದುಗ್ಗಡಣೆಗಳ ವರಸಿಂಜಿತಧ್ವಾನದ
ಭೂರಿಸಂಭ್ರಮದೊಳೈತರುತಿರ್ದಳೀಶ್ವರನ
ನಾರಿ ಘನದುರಿತಸಂಹಾರಿ ಸತ್ಕೀರ್ತಿವಿ
ಸ್ತಾರಿ ಭಕ್ತವ್ರಜಾಧಾರಿ ಗಿರಿರಾಜನ ಕುಮಾರಿ ಪೊನ್ನಂದಣದೊಳು ೪೦

ತಳಿರಡಿಯ ಮೆಲ್ಲಡಿಯ ತಾವರೆಗಳಡಿಯ ಥಳ
ಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್
ಪೊಳೆವ ನುಣ್ದೊಡೆಯ ಪೊಸಪೊಂಬಾಳೆದೊಡೆಯಾನೆಗೈದೊಡೆಯ ಬಾಲಕಿಯರು
ಕಳಹಂಸೆಗಳ ನಡೆಯ ಕಳಭಂಗಳೊಳ್ನಡೆಯ
ಸಲೆ ಸೊಂಪುನಡೆಯ ಸೋಲ್ನಡೆಯ ಸೊಬಗಿಯರಿರದೆ
ತಳರ್ದರತಿಸಂಭ್ರಮದೆ ಪಾರ್ವತಿಯ ದಂಡಿಗೆಯ ಮುಂದೆಸೆಯೊಳೇನೆಂಬೆನು ೪೧

ಸಲೆ ತೋರ ಪೊರವಾರ ಬಿಣ್ಪು ಪೊರವಾರ ನು
ಣ್ಮಳಲ್ದಿಟ್ಟೆ ಪೊರವಾರ ಬಟ್ಟಪೊರವಾರುಗಳ
ಲಲನೆಯರ್ ತೆಳ್ವಸುರ ಸುಳಿವಾಳೆವಸುರ ಕೈದಳವಸುರ ಕೋಮಳೆಯರು

ವಂತೆ ಚಾಮರಗಳು ಬೀಸುತ್ತಿದ್ದುವು. ೪೦. ಭೇರಿ, ಮೃದಂಗ, ದುಂದುಭಿ, ಶಂಖ, ಕಹಳೆಗಳ ಮಹಾಶಬ್ದಗಳ ಮಂಗಳಧ್ವನಿಯ, ವಂದಿಮಾಗಧರ ಗಂಭೀರವಾದ ಘೋಷಣೆಗಳ, ಸಖೀಜನದ ಹೊಗಳಿಕೆಗಳ, ಶ್ರೇಷ್ಠವಾದ ಧಾತುವಿನಿಂದ ಹೊರಡುವ ಶಬ್ದದ, ಮಹಾಸಂಭ್ರಮದಿಂದ ಈಶ್ವರನ ಸತಿಯಾದ ಭಯಂಕರ ಪಾಪಗಳನ್ನು ಸಂಹರಿಸುವ, ವಿಶಾಲವಾದ ಸತ್ಕೀರ್ತಿಯುಳ್ಳ ಭಕ್ತಸಮೂಹವುಳ್ಳ ಹಿಮವಂತನ ಮಗಳಾದ ಪಾರ್ವತಿಯು ಚಿನ್ನದ ಪಲ್ಲಕ್ಕಿಯಲ್ಲಿ ಬರುತ್ತಿದ್ದಳು. ೪೧. ಚಿಗುರಿನಂತೆ ಕೋಮಲವಾದ ಪಾದದ, ಮೃದುವಾದ ಪಾದದ,ಕಮಲದಂತೆ ಪಾದವುಳ್ಳ, ಥಳಥಳಿಸುವ ಕೆಂಪು ಪಾದಗಳ, ತೆಳುವಾದ ಪಾದದ ಲಲಿತಾಂಗಿಯರು, ಹೊಳೆಯುವ ನುಣುಪಾದ ತೊಡೆಯ, ಹೊಸ ಹೊಂಬಾಳೆ ತೊಡೆಯ, ಆನೆ (ಬಂಗಾರದ ಬಾಳೆಯ ?) ಸೊಂಡಿಲಿನಂತಹ ತೊಡೆಯ ಬಾಲಕಿಯರು, ರಾಜಹಂಸಗಳ ನಡಿಗೆಯ, ಆನೆ ನಡಿಗೆಯ, ಸೊಗಸಾದ ನಡಿಗೆಯ, ಸೋತ ನಡಿಗೆಯ ಸೊಬಗಿಯರು ಇರದೆ ಬಹಳ ಸಂಭ್ರಮದಿಂದ ಪಾರ್ವತಿಯ ಪಲ್ಲಕ್ಕಿಯ ಮುಂಭಾಗದಲ್ಲಿ ಹೋಗುತ್ತಿದ್ದರು. ೪೨. ದಪ್ಪವಾದ ಪೃಷ್ಠದ, ಭಾರವಾದ ಪೃಷ್ಠದ, ನುಣುಪಾದ ಮರಳಿನ ಗೋಪುರಾಕಾರದ ಪೃಷ್ಠದ, ದುಂಡಾದ ಪೃಷ್ಠದ ಲಲನೆಯರು; ತೆಳುವಾದ ಹೊಟ್ಟೆಯ, ಸುಳಿಬಾಳೆಯಂತಹ ಹೊಟ್ಟೆಯ, ಅಂಗೈಯಿಂದ

CC-0. Jangamwadi Math Collection. Digitized by eGangotri

ಸೆಳೆನಡುವಿನಸಿಯು ನಡುವಿನ ಕಮಲನಾಳದೊಂ
ದೆಳೆಯು ನಡುವಿನ ಸಿಂಗನಡುವಿನೊಪ್ಪಿಡಿನಡುವು
ಗಳ ಸಣ್ಣನಡುವಿನಿಲ್ಲುಂಟೆಂಬ ನಡುವಿನಬಲೆಯರ್ಬೈದೆ ಬರುತಿರ್ದರು ೪೨

ಪೊಂಗಳಸಮೊಲೆಯು ಪೊಣ್ಮುವ ಮೊಲೆಯು ಕಿಕ್ಕಿರಿದ
ತೆಂಗಾಯ್ಮೊಲೆಯು ಪೊಚ್ಚಪೊಸ ಪೊಂಬೊಗರಿಮೊಲೆಯು
ಸಿಂಗರದ ಮೊಲೆಯು ಬೆಳುಗಾಯ್ಮೊಲೆಯು ಬಟ್ಟಡಕೆಮೊಲೆಯು ಕಡುಮೊಗ್ಗೆಮೊಲೆಯು
ಪೊಂಗುತಿಹ ಮೊಲೆಯು ನುಣ್ಮೊಲೆಯು ನೋಳ್ಪವರಂ ಬೆ
ರಂಗುವಡಿಸುವ ಮೊಲೆಯು ಮೇಲುರದ ಸೆರಗಂ ತೊ
ಲಂಗನೂಂಕುವ ಮೊಲೆಯು ಬಲ್ಮೊಲೆಯು ಬಿಣ್ಮೊಲೆಯು ಭಾಮೆಯರ್ ಬರುತಿರ್ದರು ೪೩

ಒಚ್ಚಾರೆಗಣ್ಣ ತಾವರೆಗಣ್ಣ ನಗೆಗಣ್ಣ
ಬೆಚ್ಚೆರಳೆಗಣ್ಣ ತುರುಗೆವೆಗಣ್ಣ ಕಿವಿಗಳೊಳ್
ಬೆಚ್ಚೆಸೆವಗಣ್ಣ ಬೆಳತಿಗೆಗಣ್ಣ ನಿಟ್ಟೆಸಳ್ಗಣ್ಣ ಮಿಾನ್ಗಣ್ಣ ನಿಜದ
ಅಚ್ಚಕಾಡಿಗೆಗಣ್ಣ ಮಿಗೆ ಮಿಂಚುಗಣ್ಣ ಕಡು
ಪೊಚ್ಚಲರ್ಗಣ್ಣ ಬಲ್ಪೊಗಸೆಗಣ್ಣಬಲೆಯರ್
ನಿಚ್ಚಳದ ನೀರೆಯರ್ ನಿಬಿಡಕುಚಭಾರೆಯರ್ ಬರುತಿರ್ದರುತ್ಸವದೊಳು ೪೪

ಹಿಡಿಯಲು ಸಾಧ್ಯವಾಗುವಷ್ಟು ಕಿರಿಯ ಹೊಟ್ಟೆಯ ಕೋಮಲೆಯರು; ಬಾಗುವ ಸೊಂಟದ,ಸಣ್ಣ ಸೊಂಟದ, ಕಮಲದ ದಂಟಿನಂಥ ಎಳೆಯ ಸಣ್ಣ ನಡುವಿನ, ಸಿಂಹದಂತೆ ತೆಳುವಾದ ನಡುವಿನ, ಹಿಡಿ ನಡುವುಗಳ ಚಿಕ್ಕ ನಡುವುಗಳ,ಸೊಂಟವೇ ಇದೆಯೊ ಇಲ್ಲವೊ ಎಂಬಂತೆ ಕಾಣುವ ನಡುವಿನ ಸ್ತ್ರೀಯರು ಬರುತ್ತಿದ್ದರು. ೪೩. ಹೊನ್ನಿನ ಕಳಶದಾಕಾರದ ಮೊಲೆಯು, ಹೊರಹೊಮ್ಮುವ ಮೊಲೆಯು, ತುಂಬಿದ ತೆಂಗಿನಕಾಯಿಯಂಥ ಮೊಲೆಯು, ಹೊಚ್ಚ ಹೊಸ ಚಿನ್ನದ ಬುಗುರಿಯಾಕಾರದ ಮೊಲೆಯು, ಶೃಂಗಾರದ ಮೊಲೆಯು, ಬೇಲದಕಾಯಿಯಂಥ ಮೊಲೆಯು. ದುಂಡಾದ ಅಡಿಕೆಯ ಮೊಲೆಯು, ಕಡುಮೊಗ್ಗಿನ ಮೊಲೆಯು, ಬಳುಕಾಡುತ್ತಿರುವ ಮೊಲೆಯು, ನುಣುಪಾದ ಮೊಲೆಯು, ನೋಡುವವರನ್ನು ಬೆರಗುಗೊಳಿಸುವ ಮೊಲೆಯು, ಎದೆಯ ಮೇಲಿನ ಸೆರಗನ್ನು ತಳ್ಳಿಹಾಕುವ ಮೊಲೆಯು, ಭಾರವಾದ ಮೊಲೆಯು, ದಪ್ಪ ಮೊಲೆಯು ಸ್ತ್ರೀಯರು ಬರುತ್ತಿದ್ದರು. ೪೪. ಬೊಗಸೆ ಗಣ್ಣಿನ, ತಾವರೆಗಣ್ಣಿನ, ನಗೆಗಣ್ಣಿನ, ಹೆದರಿದ ಜಿಂಕೆಗಣ್ಣಿನ, ಒತ್ತಾದ ಎವೆಯ ಕಣ್ಣಿನ, ಕಿವಿಯನ್ನು ಕೂಡುವಷ್ಟು ವಿಶಾಲವಾದ ಕಣ್ಣಿನ, ಹೊಳಪುಗಣ್ಣಿನ, ಉದ್ದವಾದ ಹೂವಿನ ಎಸಳಿನಂಥ ಕಣ್ಣಿನ, ಮಿಾನಿನ ಕಣ್ಣಿನ, ಅಚ್ಚಕಾಡಿಗೆ ಕಣ್ಣಿನ, ಮಿಂಚುಗಣ್ಣಿನ, ಆಗತಾನೆ ಅರಳಿದ ಹೂವಿನಂತಹ ಕಣ್ಣಿನ, ದೊಡ್ಡ ಬೊಗಸೆಗಣ್ಣಿನ ತರುಣಿಯರು, ಸೊಗಸಾದ ನಾರಿಯರು, ಒತ್ತಾದ ಭಾರವಾದ ಮೊಲೆಯುಳ್ಳವರು ಸಂಭ್ರಮದಿಂದ ಬರುತ್ತಿದ್ದರು.

CC-0. Jangamwadi Math Collection. Digitized by eGangotri

ತಳಿರ್ದುಟಿಯು ತೊಂಡೆವಣ್ದುಟಿಯು ಬಂದುಗೆದುಟಿಯು
ಪೊಳೆವ ಸಸಿಗೆರೆದುಟಿಯು ಆಲವಣ್ದುಟಿಯು ಥಳ
ಥಳಿಪ ಚೆಂದುಟಿಯು ಪೊಸ ಪವಳದುಟಿಯೊಳು ರನ್ನದುಟಿ ರಂಗುದುಟಿಗಳವರು
ಸುಲಿಪಲ್ಲ ಕೆಂಬಲ್ಲ ಮೊಲ್ಲೆಯ ಮುಗುಳ್ವಲ್ಲ
ಯೆಳೆರನ್ನವಲ್ಲ ಕುಲಿಶದ ಪಂತಿವಲ್ಲ ಕಂ
ಗೊಳಿಪ ಮೊನೆವಲ್ಲುಗಳ ನಾರಿಯರ್ ಶೃಂಗಾರಹಾರಿಯರ್ ಬರುತಿರ್ದರು ೪೫

ಕಡುಚೆಲ್ವ ಮೊಗದ ಸಸಿಮೊಗದ ನಗೆಮೊಗದ ಸೊಂ
ಪಿಡಿದ ತಾವರೆಮೊಗದ ನೆರೆ ಮುದ್ದುಮೊಗದ ಕ
ನ್ನಡಿಮೊಗದ ನುಣ್ಮೊಗದ ಸಲೆ ಬಟ್ಟಮೊಗದೆಸೆವ ಸಂಪೂರ್ಣಸೌಂದರಿಯರು
ಮಡಕಿಳಿದ ಕುರುಳ ನಿರಿಗುರುಳ ಸುಕ್ಕುಂಗುರುಳ
ನಿಡಿಗುರುಳ ಪೊಸ ನೀಲಗುರುಳ ಪೆರೆನೊಸಲೊಳೆಡೆ
ವಿಡದಲೆವ ಕುರುಳ ನುಣ್ಗುರುಳ ಕೋಮಲೆಯರೆಡೆವಿಡದೊದಗಿ ಬರುತಿರ್ದರು ೪೬

ಎಳೆಯ ಬಿದಿರಿನ ಬಣ್ಣ ಸುಳಿವಾಳೆಲೆಯ ಬಣ್ಣ
ಮೊಳೆಗರಿಕೆವಣ್ಣ ಪೊಂಬಣ್ಣಮೆಯ್ಯಬಲೆಯರ್
ಸುಳಿಯ ಸಂಪಗೆಗಂಪು ತಾವರೆಯಗಂಪು ಕತ್ತುರಿಗಂಪು ಸಿರಿಕಂಡದ

೪೫. ಚಿಗುರಿನಂತಹ ತುಟಿಯು, ತೊಂಡೆಹಣ್ಣಿನ ತುಟಿಯು, ಬಂದುಗೆಹೂವಿನ ತುಟಿಯು, ಹೊಳೆಯುವ ಅರ್ಧಚಂದ್ರಾಕಾರದ ತುಟಿಯು, ಆಲದಹಣ್ಣಿನಂತಹ ತುಟಿಯು, ಥಳ ಥಳಿಸುವ ಕೆಂಪಾದ ತುಟಿಯು, ಹೊಸ ಹವಳದ ತುಟಿಯು, ರತ್ನದಂತಹ ತುಟಿಯು, ಬಣ್ಣದ ತುಟಿಗಳವರು, ಹೊಳೆಯುವ ಹಲ್ಲಿನ,ಕೆಂಪಾದ ಹಲ್ಲಿನ, ಮಲ್ಲಿಗೆಮೊಗ್ಗಿನ ಹಲ್ಲಿನ, ರತ್ನದೆಳೆ ಯಂತಹ ಹಲ್ಲಿನ, ವಜ್ರದಂತಹ ಹಲ್ಲಿನ,ಮೊನಚಾದ ಹಲ್ಲುಗಳ ಶೃಂಗಾರವನ್ನು ಬಯಸುವ ನಾರಿಯರು ಬರುತ್ತಿದ್ದರು. ೪೬. ಬಹು ಚೆಲುವಾದ ಮೊಗದ, ಚಂದ್ರನಂತಹ ಮುಖದ, ನಗುಮುಖದ, ಸೊಗಸಾದ ತಾವರೆಯ ಮುಖದ, ಮುದ್ದು ಮುಖದ, ಕನ್ನಡಿಯಂತಹ ಮುಖದ, ನುಣುಪಾದ ಮುಖದ, ದುಂಡು ಮುಖದ ಪ್ರಕಾಶಿಸುವ ಅತಿಸುಂದರಿಯರು; ಹಿಮ್ಮಡಿವರೆಗೆ ಇಳಿದ ಕೂದಲಿನ, ಅಲೆಯಲೆಯಾದ ಕೂದಲ, ಸುಕ್ಕು ಕೂದಲ, ಉದ್ದ ವಾದ ಕೂದಲ, ಅಚ್ಚಕಪ್ಪು ಕೂದಲ, ಹಣೆಯ ಮೇಲೆ ಸುತ್ತ ಅಲೆದಾಡುವ ಕೂದಲ, ನುಣುಪಾದ ಕೂದಲಿನ ಕೋಮಲೆಯರು ಎಡೆಬಿಡದೆ ಒಟ್ಟಾಗಿ ಬರುತ್ತಿದ್ದರು. ೪೭. ಎಳೆಯ ಬಿದಿರಿನ ಬಣ್ಣದ, ಸುಳಿಬಾಳೆಲೆಯ ಬಣ್ಣದ, ಮೊಳೆಯುವ ಗರಿಕೆಯ ಬಣ್ಣದ, ಹೊಳೆಯುವ ಬಂಗಾರದ ಬಣ್ಣದ, ಶರೀರಕಾಂತಿಯುಳ್ಳ ಅಬಲೆ ಯರು ಸುಳಿದಾಡಿದಾಗ ಸಂಪಿಗೆಯ ಕಂಪು, ತಾವರೆಯ ಸುವಾಸನೆ, ಕಸ್ತೂರಿಯ

CC-0. Jangamwadi Math Collection. Digitized by eGangotri

ತಿಳಿಗಂಪು ಪೊಂಬಾಳೆಗಂಪು ಕರ್ಪುರಗಂಪು
ಗಳೆ ಸುಯ್ಯೊಳುಣ್ಮುವ ಬೆಮರ್ಗಳೊಳ್ ಮೆಯ್ಗಳೊಳ್
ಸಲೆ ಸಾಜಮಾದ ಸಾಮಜಗಮನೆಯರ್ ಧೈರ್ಯಶಮನೆಯರ್ ಬರುತಿರ್ದರು ೪೭

ನುಡಿವ ಕನ್ನಡಿ ನೋಡುವುತ್ಪಲಂ ಪೂಗಳಂ
ಮುಡಿವ ಕಾಳಾಹಿ ಚಲಿಸದೆ ನಿಂದ ಮರಿದುಂಬಿ
ನಡೆವ ಪೊಂಬಾಳೆಯಲರದ ಮೊಗ್ಗೆ ತಳರದೊಳ್ದೆರೆ ಪರಿಯದೆಳೆಯಹಾವು
ಕುಡಿವರಿಯದಿರ್ಪ ಲತೆ ಕಾಯದ ಸುಮಂ ಸಿಂಹ
ಕಡಗದಾನೆಯ ಕುಂಭವೆಂಬಿವವಯವಮಾಗೆ
ಬಿಡದೆ ಮೂಲೋಕಮೋಹಿನಿಯರಾ ಗಿರಿತನುಜೆಯೆಡಬಲದೊಳಿಟ್ಟಣಿಸಿತು ೪೮

ನಡೆಗಳಿಂದರಸಂಚೆವಿಂಡು ನಡೆವಂತೆ ಸವಿ
ನುಡಿಯೊಳರಗಿಳಿಯ ಬಳಗಂ ತಳರ್ವಂತೆ ಸೋ
ರ್ಮುಡಿಗಳಿಂ ಸೋಗೆಗಳ ಸಾಲ್ ತೆರಳ್ವಂತೆ ನಿರಿಗುರುಳ್ಗಳಿಂ ಮರಿದುಂಬಿಯ
ಗಡಣಮೆದ್ದಂತೆ ನೆಲೆಮೊಲೆಗಳಿಂದೆಣೆವಕ್ಕಿ
ವಡೆದುಗುಳ್ವಂತೆ ತನುವಿಂದತನುಶರಕೋಟಿ
ಯೆಡೆವಿಡದೆ ಭರದೊಳೊದಗುವ ತೆರದೊಳೊದಗಿ ಬರುತಿರ್ದರಖಿಳಸ್ತ್ರೀಯರು ೪೯

ಪರಿಮಳ, ಶ್ರೀಗಂಧದ ಸುವಾಸನೆ, ಹೊಂಬಾಳೆಯ ಕಂಪು, ಕರ್ಪೂರದ ಸುಗಂಧಗಳೇ ಉಸಿರಿನಲ್ಲಿ ಹೊಮ್ಮುವ ಬೆವರುಗಳಲ್ಲಿ ಮೈಗಳಲ್ಲಿ ಸಹಜವಾಗಿದ್ದ ಧೈರ್ಯವನ್ನು ಶಾಂತಗೊಳಿಸುವ ಮದಗಜಗಮನೆಯರು ಬರುತ್ತಿದ್ದರು. ೪೮. ಮಾತನಾಡುವ ಕನ್ನಡಿ, ನೋಡುವ ಉತ್ಪಲ, ಹೂಗಳನ್ನು ಮುಡಿಯುವ ಸರ್ಪ, ಅಲ್ಲಾಡದೆ ನಿಂತ ಮರಿದುಂಬಿ, ನಡೆದಾಡುವ ಹೊಂಬಾಳೆ, ಅರಳದ ಮೊಗ್ಗು, ಚಲಿಸದ ಅಲೆ, ಹರಿದಾಡದ ಎಳೆಯ ಹಾವು, ಚಿಗುರದ ಬಳ್ಳಿ, ಬಾಡದ ಹೂ, ಸಿಂಹಕ್ಕೆ ಹೆದರದ ಆನೆಯ ಕುಂಭಸ್ಥಳ ಎನ್ನುವುಗಳೇ ಅವಯವಗಳಾಗಲು ಮೂರು ಲೋಕವನ್ನೂ ಮೋಹಿಸುವಂತಹ ಸ್ತ್ರೀಯರು ಪಾರ್ವತಿಯ ಎಡಬಲಗಳಲ್ಲಿ ಗುಂಪುಗೂಡಿದ್ದರು. ೪೯. ತಮ್ಮ ನಡಿಗೆಗಳಿಂದ ರಾಜಹಂಸಗಳು ನಡೆಯುವಂತೆ, ಇಂಪಾದ ಮಾತುಗಳಲ್ಲಿ ಅರಗಿಳಿಗಳ ಸಮೂಹ ಹೋಗುವಂತೆ, ತಮ್ಮ ಜೋಲಾಡುವ ಕೂದಲಿನಿಂದ ನವಿಲುಗಳ ಸಾಲು ಹೋಗುವಂತೆ. ಗುಂಗುರುಕೂದಲುಗಳಿಂದ ಮರಿದುಂಬಿಯ ಸಮೂಹ ಎದ್ದಂತೆ, ಭಾರವಾದ ತೋರ ಮೊಲೆಗಳಿಂದ ಚಕ್ರವಾಕ ಪಕ್ಷಿಗಳು ಹೊರಟುಬರುವಂತೆ, ಶರೀರದಿಂದ ಮನ್ಮಥನ ಕೋಟಿ ಬಾಣಗಳು ಎಡೆಬಿಡದೆ ಜೋರಾಗಿ ಬರುವ ರೀತಿಯಲ್ಲಿ ಗುಂಪು

CC-0. Jangamwadi Math Collection. Digitized by eGangotri

ಚರಣನೂಪುರರವಂ ಕಾಂಚೀರವಂ ಚೆಲ್ವ
ಕರದ ಕಂಕಣರವಂಗಳ್ ಪೊಣ್ಮೆ ಸುಯ್ಯೆಗಂ
ಪರಳ್ಮುಡಿಯ ಗಂಪು ಮೈಗಂಪೊಂದನೊಂದೊದಗಿ ತಂಗಾಳಿಯುಂ ಕೊರ್ವಿಸೆ
ತರಳಾಕ್ಷಿಗಳ ಬೆಳ್ಪು ಸುಲಿಪಲ್ಲ ಬೆಳ್ಪೆಸೆವ
ಕರದ ಸೆಳ್ಗುಗುರ್ವೆಳ್ಪು ದೆಸೆಗಳೊಳ್ ಪಸರಿಸಲ್
ಬರುತಿರ್ದರತಿಸೊಗಸುಗಾರ್ತಿಯರ್ ಮದನಶರಮೂರ್ತಿಯರ್ ತವಕದಿಂದೆ ೫೦

ಪಿಕತುಂಡಹತಿ ಶೀತಭಯ ನಿರಾಧಾರ ಸ
ತ್ಪ್ರಕಟಮಾರುತ ಕಂಪ ವಜ್ರಹತಿ ಶರಭಕಂ
ಟಕ ಗರುಡಭೀತಿ ಗಜಕರಪಂದ ದುಷ್ಟಜಲಚರಸಂಗ ಫಣಿಪೀಡೆಯು
ನಿಕರದಟ್ಟುಳಿಗೆ ಪಲ್ಲವ ಕಮಠ ಸ್ಮರ ಶರಧಿ
ಸುಕರರಂಭಾದ್ರಿ ಹರಿ ರಾಹು ಪಂಕೇಜಾತ
ಮುಕುಳ ಶಂಖೇಂದುಗಳ್ ಕಾಂತೆಯರ ಕಾಯದೊಳಡಂಗಿದುವೆನಲ್ ಮೆರೆದರು ೫೧

ಕರಿಕಳಭಯಾನೆಯರ್ ಕೌಶಲ್ಯಗಾನೆಯರ್
ಕರಮಬ್ಜನೇತ್ರೆಯರ್ ಕಾಂತಿಯುತಗಾತ್ರೆಯರ್
ಕರಿವೈರಿಮಧ್ಯೆಯರ್ ಕಾಮುಕಾಸಾಧ್ಯೆಯರ್ ಕಠಿಣಕುಚಮಂಡಲೆಯರು

ಗೂಡಿ ಎಲ್ಲ ಸ್ತ್ರೀಯರೂ ಬರುತ್ತಿದ್ದರು. ೫೦. ಕಾಲಿನ ಗೆಜ್ಜೆಗಳ ಶಬ್ದ, ಒಡ್ಯಾಣದ ಶಬ್ದ, ಚೆಲುವಾದ ಕೈಯಕಂಕಣದ ಶಬ್ದಗಳು ಹೊಮ್ಮುತ್ತಿರಲು, ಉಸಿರಿನ ಗಾಳಿಯ ಸುವಾಸನೆ, ಮುಡಿಯ ಹೂವಿನ ಪರಿಮಳ, ಮೈಯಕಂಪು ಒಂದರೊಡನೊಂದು ಸೇರಿ ತಂಗಾಳಿಯನ್ನು ತುಂಬಿ ಭಾರಗೊಳಿಸಲು, ಚಂಚಲವಾದ ಕಣ್ಣುಗಳ, ಬಿಳುಪಾದ ಹೊಳಪು ಹಲ್ಲಿನ ಬಿಳುಪು ಪ್ರಕಾಶಿಸುವ, ಕೈಯಲ್ಲಿನ ಚೂಪಾದ ಉಗುರಿನ ಕಾಂತಿ ದಿಕ್ಕುದಿಕ್ಕುಗಳಲ್ಲಿ ಹರಡುವ ಮನ್ಮಥನ ಬಾಣದಾಕಾರದ ಸೊಗಸುಗಾತಿಯರು ತವಕದಿಂದ ಬರುತ್ತಿದ್ದರು. ೫೧. ಕೋಗಿಲೆಯ ಕೊಕ್ಕಿನ ಹೊಡೆತಕ್ಕೆ ಚಿಗುರು, ಶೈತ್ಯದ ಹೆದರಿಕೆಗೆ ಆಮೆ, ಆಧಾರವಿಲ್ಲದೆ ಇರುವಿಕೆಗೆ ಮನ್ಮಥ, ಬೀಸುವ ಗಾಳಿಗೆ ಸಮುದ್ರ, ಚವುಳುನೆಲಕ್ಕೆ ಕೋಮಲವಾದ ಬಾಳೆಯ ಮರ, ವಜ್ರಾಯುಧಕ್ಕೆ ಪರ್ವತ, ಶರಭಕ್ಕೆ ಸಿಂಹ, ಗರುಡನಿಗೆ ರಾಹು, ಆನೆಯ ಸೊಂಡಲಿನ ಆಘಾತಕ್ಕೆ ಕಮಲದ ಹೂ, ದುಷ್ಟ ಜಲಚರಗಳ ಸಂಗಕ್ಕೆ ಶಂಖಗಳು, ಹಾವುಗಳ ಪೀಡೆಗೆ ಚಂದ್ರನು ಹೆದರಿ ಈ ಕಾಂತೆಯರ ಶರೀರದಲ್ಲಿ ಅಡಗಿದರೊ ಎಂಬಂತೆ ಅವರು ಶೋಭಿಸಿದರು. ೫೨. ಮತ್ತಗಜಗಮನೆಯರು, ಗಾನ ಕುಶಲಿಗಳು, ಶ್ರೇಷ್ಠವಾದ ತಾವರೆಗಣ್ಣಿನವರು, ಕಾಂತಿಯಿಂದ ಕೂಡಿದ ಶರೀರದವರು, ಸಿಂಹದಂತೆ ತೆಳು ನಡುವಿನವರು, ಅತಿಯಾದ ಕಾಮುಕರು,ಕಠಿಣವಾದ ಮೊಲೆಗಳುಳ್ಳವರು,

CC-0. Jangamwadi Math Collection. Digitized by eGangotri

ಕರಣಸುವಿಲಾಸೆಯರ್ ಕಳಕಳಿಪ ಹಾಸೆಯರ್
ಕರಜಪ್ರಕಾಶೆಯರ್ ಕಳಕೀರಭಾಷೆಯರ್
ಕರಚರಣಭೂಷೆಯರ್ ಕಾಮುಪರಿತೋಷೆಯರ್ ಕಳಕಳದೊಳೈತಂದರಂ ೫೨

ನೀಲಾಳಕಪ್ರಭೆಯೊಳಾಗಸಂ ಕತ್ತಲಿಸೆ
ಲೋಲಾಕ್ಷಿಗಳ ಬೆಳ್ಪು ಬೆಳಗನಾಗಿಸೆ ಬರ್ಪ
ಗಾಳಿಯಂ ಸುನಿತಂಬ ಕುಚಗಿರಿಗಳಡ್ಡೈಸಿ ಸೆಕೆಯನುಬ್ಬಿಸೆ ಸುಯ್ಗಳ
ಗಾಳಿ ತಂಪೀಯೆ ಕಟಿತಟಕಾಂಚಿ ಪದನೂಪು
ರಾಳಿಸ್ವನಂ ದಿಗ್ಗಜಂಗಳ್ಗೆ ಬಧಿರತೆಯ
ನೋಲೈಸೆ ಬರುತಿರ್ದುದಾ ಭವಾನಿಯ ಸಖೀನಿವಹಮುವನೇನೆಂಬೆನು ೫೩

ಪೊಳೆವ ಮಿಂಚಿನ ಗೊಂಚಲಂತೆ ಮರಿದುಂಬಿಗಳ
ಬಳಗದಂತಚ್ಚ ಪೊಸ ಬೆಳ್ದಿಂಗಳಂತೆ ಮಿಾ
ನ್ಗಳ ಮಾಲೆಯಂತೆ ಪಾಲ್ನೊರೆವೆಳ್ಪಿನಂತೆ ಕುಮುದಂಗಳೊಳ್ನನೆಗಳಂತೆ
ಜಲಜದ ವಿಕಾಸದಂತಮರ್ದುವಳೆಯಂತೆ ಕಂ
ಗಳ ಕಾಂತಿ ದೆಸೆದೆಸೆಗೆ ಪಸರಿಸಲ್ ನೋಡುತಿ
ರ್ಪಲಘುಜಘನೆಯರಾಗ ಪಾರ್ವತಿಯ ದಂಡಿಗೆಯ ಮುಂಗಡೆಯೊಳಿಟ್ಟಣಿಸಿತು ೫೪

ಇಂತು ನಾನಾ ವಿಲಾಸದ ವಿಡಾಯಿಗಳಿಂದೆ
ಕಂತುಹರನರಸಿ ವೈವಾಹಮಂಟಪದೆಡೆಗೆ
ಸಂತಸದೊಳೈತಂದು ದಂಡಿಗೆಯನಿಳಿದು ಕೆಳದಿಯರ ಕೈಲಾಗಿನಿಂದೆ

ಪಂಚೇಂದ್ರಿಯಗಳಿಗೂ ಸುಖವನ್ನು ನೀಡುವವರು, ಕಳಕಳಿಸಿ ನಗುತ್ತಿರುವವರು, ಪ್ರಕಾಶವಾದ ಉಗುರುಳ್ಳವರು, ಶುಕಭಾಷಿಣಿಯರು, ಸುಂದರವಾದ ಕೈಕಾಲುಗಳುಳ್ಳವರು, ಕಾಮಾಸಕ್ತಿಯಲ್ಲಿ ಅತ್ಯಂತ ಆನಂದ ಹೊಂದಿದವರು ಅತ್ಯಂತ ಆಸಕ್ತಿಯಿಂದ ಬಂದರು. ೫೩. ಕಪ್ಪುಬಣ್ಣದ ಗುಂಗುರುಕೂದಲಿನ ಪ್ರಕಾಶವು ಆಕಾಶದಲ್ಲಿ ಕತ್ತಲನ್ನುಂಟು ಮಾಡಲು, ಚಂಚಲವಾದ ಕಣ್ಣುಗಳ ಪ್ರಭೆ ಬೆಳಗನ್ನು ಮೂಡಿಸಿತು. ಬೀಸುತ್ತಿರುವ ಗಾಳಿಯನ್ನು ಪೃಷ್ಠ ಮತ್ತು ಸ್ತನಗಳೆಂಬ ಪರ್ವತಗಳು ತಡೆಗಟ್ಟಿ ಸೆಖೆಯನ್ನುಂಟುಮಾಡಿದುವು. ಉಸಿರಾಟದ ಗಾಳಿ ತಂಪನ್ನುಂಟುಮಾಡಿತು. ಸೊಂಟಪಟ್ಟಿ-ಕಾಲ್ಗೆಜ್ಜೆಗಳ ಶಬ್ದ ದಿಗ್ಗಜಗಳಿಗೆ ಕಿವುಡುಂಟುಮಾಡಿತು. ಈ ರೀತಿ ಆ ಅಂಬಿಕೆಯ ಸಖಿಯರ ಸಮೂಹ ಬರುತ್ತಿದ್ದಿತು. ೫೪. ಹೊಳೆಯುವ ಮಿಂಚಿನ ಗೊಂಚಲಿನಂತೆ, ಮರಿದುಂಬಿಗಳ ಬಳಗದಂತೆ, ಅಚ್ಚ ಹೊಸದಾದ ಬೆಳುದಿಂಗಳಿನಂತೆ,ನಕ್ಷತ್ರಗಳ ಮಾಲೆಯಂತೆ, ಹಾಲಿನ ನೊರೆಯ ಬಿಳುಪಿನಂತೆ, ಒಳ್ಳೆನೈದಿಲೆಗಳ ಮೊಗ್ಗಿನಂತೆ, ಕಮಲದ ಅರಳುವಿಕೆಯಿಂದ ಅಮೃತದ ಮಳೆಯಂತೆ ಕಂಗಳ ಪ್ರಕಾಶ ದಿಕುದಿಕ್ಕಿಗೆ ಹರಡಿ ನೋಡುತ್ತಿರುವ ಭಾರವಾದ ಪಿರ್ರೆಗಳುಳ್ಳ ಆ ಲಲನೆಯರು ಪಾರ್ವತಿಯ ಪಲ್ಲಕ್ಕಿಯ ಮುಂದೆ ಒಟ್ಟಾಗಿ ನಡೆದರು, ೫೫. ಈ ರೀತಿ ನಾನಾ ವೈಭವಾಡಂಬರಗಳಿಂದ ಪಾರ್ವತಿಯು ವಿವಾಹಮಂಟಪದ ಬಳಿಗೆ

CC-0. Jangamwadi Math Collection. Digitized by eGangotri

ಮುಂತೆಸೆವ ನವರತ್ನಖಚಿತವೇದಿಕೆಯುನೊಲ
ವಿಂ ತಡೆಯದೇರಿದಳ್ ಸಕಲಜನನಿಕರಮೋ
ರಂತೆ ಹರುಷದಿ ಜಯಜಯೆಂದು ಕೈಮುಗಿವುತಿರ್ದುದು ಜಲಧಿಘೋಷದಂತೆ ೫೫

ಸಿರಿ ಸರಸ್ವತಿ ಶಚಿಯಹಲ್ಯೆ ಲೋಪಾಮುದ್ರೆ
ವರಮುಗಾಯತ್ರಿ ಸಾವಿತ್ರಿ ಮುಂತಾಗಿರ್ದ
ಸುರನರಭುಜಂಗಮಸ್ತ್ರೀಯರೊಲವಿಂದೆ ಶೋಭಾನಮಂ ಪಾಡುತಿರಲು
ವರಮೂಹೂರ್ತದ ಸಮಯಮಾಯ್ತೆಂದು ಬಂದು ಸುರ
ಗುರುವಾಗ ಬಿನ್ನೈಸೆ ಕೇಳ್ದು ನಸುನಗುತಲೀ
ಶ್ವರ ಗಿರಿಜೆಯರ್ ಮಹಾಹರುಷದಿಂ ಮೆಟ್ಟಕ್ಕಿಗಿರದೆ ಬಿಜಯಂಗೈದರು ೫೬

ಸುರರ ಗುರುವಾ ಸಮಯದೊಳ್ ಭಕ್ತಿಯಿಂ ಶಿವನ
ವರಮಂಗಳಾಷ್ಟಕವನೋದುತಾಯತವೆಯೆನ
ಲಿರದೆ ಮುನಿವರರು ಸರ್ವಾಯತಾಯತವೆನಲ್ ತೆರೆಸೀರೆಯುಂ ಸರಿಯಲು
ಕರದ ಜೀರಿಗೆಬೆಲ್ಲದಿಂದಲೊರ್ಬೊರ್ಬರಂ
ಹರ ಗಿರಿಜೆಯರ್ ಬೇಗದಿಂದಿಡುತಿರಲ್ ನೋಡಿ
ಹರಿಯಜೇಂದ್ರಾದಿಗಳ್ ಜಯಜಯಧ್ವಾನದಿಂ ನುತಿಸಿದರ್ ಭಕ್ತಿಯಿಂದೆ ೫೭

ಸಂತೋಷದಿಂದ ಬಂದು ಪಲ್ಲಕ್ಕಿಯಿಂದ ಇಳಿದು, ಸಖಿಯರ ಕೈಯಾಸರೆಯಿಂದ, ಮುಂದೆ ಕಂಗೊಳಿಸುತ್ತಿದ್ದ ನವರತ್ನಖಚಿತವಾದ ವೇದಿಕೆಯನ್ನು ಆನಂದದಿಂದ ಹತ್ತಿದಳು. ಆಗ ಅಲ್ಲಿದ್ದ ಎಲ್ಲ ಜನರೂ ಒಂದೇ ಸಮನೆ ಸಂತೋಷದಿಂದ ಸಮುದ್ರದ ಅಬ್ಬರದಂತೆ ಜಯ ಜಯ ಘೋಷಮಾಡಿ ಕೈಮುಗಿಯುತ್ತಿದ್ದರು. ೫೬. ಲಕ್ಷ್ಮಿ, ಸರಸ್ವತಿ. ಶಚಿ, ಅಹಲ್ಯೆ, ಲೋಪಾಮುದ್ರೆ,ಶ್ರೇಷ್ಠಳಾದ ಗಾಯಿತ್ರಿ,ಸಾವಿತ್ರಿ ಮೊದಲಾದ ದೇವ ಮಾನವ ನಾಗಸ್ತ್ರೀಯರೆಲ್ಲ ಪ್ರೀತಿಯಿಂದ ಸೋಬಾನೆಯನ್ನು ಹಾಡುತ್ತಿದ್ದರು. ಆಗ ಬೃಹಸ್ಪತಿಯು ಬಂದು ಮುಹೂರ್ತದ ಸಮಯ ಆಯಿತೆಂದು ವಿಜ್ಞಾಪಿಸಿಕೊಳ್ಳಲು, ಅದನ್ನು ಕೇಳಿ ನಸುನಗುತ್ತ ಈಶ್ವರ ಪಾರ್ವತಿಯರು ಬಹು ಆನಂದದಿಂದ ಮೆಟ್ಟಕ್ಕಿಯ ಸ್ಥಳಕ್ಕೆ ದಯಮಾಡಿಸಿದರು. ೫೭. ದೇವಗುರುವಾದ ಬೃಹಸ್ಪತಿಯು ಆ ಸಮಯದಲ್ಲಿ ಭಕ್ತಿಯಿಂದ ಶಿವನ ಪವಿತ್ರವಾದ ಮಂಗಳಾಷ್ಟಕವನ್ನು ಓದುತ್ತ ಸಮ್ಮತವೇ ಎಂದನು. ಕೂಡಲೇ ಮುನಿಶ್ರೇಷ್ಠರು ಎಲ್ಲರಿಗೂ ಸಮ್ಮತ ಎನ್ನಲು ಅಂತರ್ಪಟವನ್ನು ಸರಿಸಿದರು. ಆಗ ಕೈಯಲ್ಲಿದ್ದ ಜೀರಿಗೆ ಬೆಲ್ಲದಿಂದ ಶಿವಪಾರ್ವತಿಯರು ಒಬ್ಬರನ್ನೊಬ್ಬರು ಬೇಗನೆ ಹೊಡೆಯುತ್ತಿರಲು ನೋಡಿ ವಿಷ್ಣು ಬ್ರಹ್ಮ ಇಂದ್ರಾದಿಗಳು ಭಕ್ತಿಯಿಂದ ಜಯಜಯ ಶಬ್ದದಿಂದ ಹೊಗಳಿದರು,

CC-0. Jangamwadi Math Collection. Digitized by eGangotri

ಆ ಸಮಯದೊಳ್ ಸಕಲವಾದ್ಯನಿರ್ಘೋಷದಿಂ
ಗಾಸಿಯಾದುವು ದಿಗ್ಗಜಂ ಮುತ್ತಿನಕ್ಷತೆಯು
ಸೂಸಿದರ್ ಶಿವಶಿವೆಯರೊರ್ಬೊರ್ಬರುತ್ತಮಾಂಗದಮೇಲೆ ಲೀಲೆಯಿಂದೆ
ಈ ಸದಾಶಿವನೆಡೆಗೆ ಗಿರಿರಾಜನೈದಿ ಸುವಿ
ಲಾಸದಿಂ ಮಗಳ ಮುಂದಿಟ್ಟು ಧಾರೆಯನೆರೆಯು
ಲಾ ಸಮೀಪದ ಮನೆಯೊಳೀಶ್ವರಂ ಶಿವೆಗೂಡಿ ಹಸೆಯೊಳಗೆ ಮಂಡಿಸಿದನು ೫೮

ಇಂತು ಶಿವಶಿವೆಯರಿರೆ ಹರಿಯಜೇಂದ್ರಾದಿ ಸುರ
ಸಂತತಿಗಳಿರದೆ ಸೇಸೆಯನಿಕ್ಕಿ ಪೋಪ ಸಮ
ನಂತರದೊಳೀಶ್ವರಂ ನಾನಾ ಗಣಂಗಳಂ ಪಙ್ಕ್ತಿಯೊಳ್ ಕೂಡಿಕೊಂಡು
ಸಂತಸದೊಳಗಜೆಯೊಡಗೂಡಿ ಭೂಮವನುಂಡು
ಪಿಂತೆ ಪರಿಮಳಗಂಧ ಪುಷ್ಪ ತಾಂಬೂಲಂಗ
ಳಿಂ ತಣಿಸಿ ಕಳುಹಿದಂ ಬಂದ ನಿಬ್ಬಣಿಗರಂ ಗಿರಿರಾಜನಲ್ಲಿಯಿಂದೆ ೫೯

ಬಳಿಕ ನಾಲ್ಕನೆಯ ದಿವಸದ ರಾತ್ರಿಯೊಳ್ ನಾಗ
ವಲಿಯ ಮೆರೆದಂ ನವ್ಯರತ್ನನಿರ್ಮಿತಮಾದ
ಪೊಳೆವ ಪಲ್ಲಕ್ಕಿಯೊಳ್ ಗಿರಿರಾಜೆ ಸಹಿತೆ ನಾನಾ ವೇದಘೋಷದಿಂದ

೫೮. ಆ ವೇಳೆಯಲ್ಲಿ ಎಲ್ಲ ವಾದ್ಯಗಳ ಘೋಷದಿಂದ ದಿಗ್ಗಜಗಳು ಹೆದರಿದುವು. ಶಿವ ಪಾರ್ವತಿಯರು ಒಯ್ಯಾರದಿಂದ ಒಬ್ಬರು ಇನ್ನೊಬ್ಬರ ತಲೆಯ ಮೇಲೆ ಮುತ್ತಿನ ಅಕ್ಷತೆಯನ್ನು ಸುರಿದರು. ಸದಾಶಿವನ ಬಳಿಗೆ ಪರ್ವತರಾಜನು ಬಂದು ವಿಲಾಸದಿಂದ ಮಗಳನ್ನು ಮುಂದಿಟ್ಟು ಧಾರೆಯನ್ನು ಎರೆಯಲು ಹತ್ತಿರದಲ್ಲಿದ್ದ ಅರಮನೆಯಲ್ಲಿ ಈಶ್ವರನು ಪಾರ್ವತಿಯ ಜೊತೆಗೂಡಿ ಹಸೆಯ ಮೇಲೆ ಕುಳಿತನು. ೫೯. ಈ ರೀತಿ ಶಿವ ಪಾರ್ವತಿಯರು ಇರಲು ವಿಷ್ಣು-ಬ್ರಹ್ಮ-ಇಂದ್ರ ಮೊದಲಾದ ದೇವಸಮೂಹಗಳು ಅಕ್ಷತೆಯನ್ನು ಹಾಕಿ ಹೋಗುವ ಸಮಯದಲ್ಲಿ ಈಶ್ವರನು ಎಲ್ಲ ಗಣಗಳನ್ನು ಸಾಲಿನಲ್ಲಿ ಕೂಡಿಕೊಂಡು ಸಂತೋಷದಿಂದ ಪಾರ್ವತಿಯ ಜೊತೆಯಲ್ಲಿ ಭೂಮದಊಟ ಮಾಡಿದನು. ಅನಂತರ ಪರಿಮಳಗಂಧ, ಹೂ, ತಾಂಬೂಲಗಳಿಂದ ಅವರ ಮನಸ್ಸನ್ನು ಸಂತೋಷಪಡಿಸಿ ಪರ್ವತರಾಜನು ಬಂದಿದ್ದ ನಿಬ್ಬಣದವರನ್ನು ಕಳುಹಿಸಿದನು. ೬೦. ಅನಂತರ ನಾಲ್ಕನೆಯ ದಿವಸದ ರಾತ್ರಿಯಲ್ಲಿ ಶಿವನು ನಾಗವಲ್ಲಿಯಲ್ಲಿ ರಂಜಿಸಿದನು. ನವರತ್ನದಿಂದ ನಿರ್ಮಿಸಲ್ಪಟ್ಟ ಹೊಳೆಯುವ ಪಲ್ಲಕ್ಕಿಯಲ್ಲಿ ಪಾರ್ವತಿಯ ಜೊತೆಯಲ್ಲಿ ಕುಳಿತು, ನಾನಾ ವೇದಗಳ ಘೋಷಗಳಾಗುತ್ತಿರಲು, ಥಳಥಳಿಸಿ ಬೆಳಗುತ್ತಿದ್ದ ಪಂಜುಗಳ ಸಮೂಹದಿಂದ

CC-0. Jangamwadi Math Collection. Digitized by eGangotri

ಥಳಥಳಿಪ ಪಂಜುಗಳ ಪೊತ್ತದಿಂ ವಂದಿಗಳ
ಕಳಕಳಧ್ವನಿಯಿಂದೆ ವಾದ್ಯನಿರ್ಘೋಷದಿಂ
ಜಲಜಭವ ಹರಿ ಸುರೇಂದ್ರಾದಿಗಳ್ ಕಾಲ್ನಡೆಯೊಳೈದಿ ಬರಲುತ್ಸವದೊಳು ೬೦

ಇಂತೆಸೆವ ವಿಭವದಿಂದುತ್ಸವಿರಲಾಗ ಹಿಮ
ವಂತನಳಿಯಂಗಿತ್ತನುಡುಗೊರೆಯನೋವಿಸಿದ
ರಂತಾಗ ಮುಯ್ಯನೀಶಂಗೆ ಗಿರಿಜೆಗೆ ಹರಿಯಜೇಂದ್ರರುಂ ಸುರನಿಕರಮುಂ
ಮುಂತೆ ಕಾಣ್ಕೆಯನಿಕ್ಕಿ ನಮಿಸಿದರ್ ಸಕಲಸುರ
ಸಂತತಿಗಳಾಮ್ನಾಯಮಂತ್ರದಿಂ ನುತಿಸಿದರ್
ಸಂತಸದೆ ನಂದಿಮುಖ್ಯರ್ ನಲಿದರಭವನ ವಿವಾಹೋತ್ಸವವನೀಕ್ಷಿಸಿ ೬೧

ನಾಗವಲಿಯಾದ ಮರುದಿವಸ ನಗರಾಜನನು
ರಾಗದಿಂ ಬಂದ ನಿಬ್ಬಣಿಕೆ ಮೃಷ್ಟಾನ್ನದಾ
ರೋಗಣೆಯನೈದೆ ಮಾಡಿಸಿ ದಿವ್ಯಗಂಧತಾಂಬೂಲದಿಂ ತುಷ್ಟಿವಡಿಸಿ
ಮೇಗೆ ವಸ್ತ್ರಾಭರಣದುಡುಗೊರೆಗಳಂ ಕೊಟ್ಟು
ಬೇಗದಿಂ ಕೋಟಿಯೋಜನದಿಂದೆ ಚಚ್ಚೌಕ
ವಾಗಿರ್ಪ ವರವಸಂತೋತ್ಸವದ ದೊಡ್ಡ ಖೇಡಾಕುಳಿಯನಾಗಿಸಿದನು ೬೨

ಥಳಥಳಿಪ ಶಶಿಕಾಂತಶಿಲೆಯ ನೆಲಗಟ್ಟುಗಳ
ನಳವಡಿಸಿ ಮುತ್ತು ಮಾಣಿಕ ವಜ್ರ ವೈಡೂರ್ಯ
ಲಲಿತಗೋಮೇದಿಕ ಸುಪದ್ಮರಾಗಾದಿ ನಾನಾ ರತ್ನನಿಚಯದಿಂದೆ

ವಂದಿಮಾಗಧರ ಕಲಕಲ ಧ್ವನಿಯಿಂದ, ವಾದ್ಯಗಳ ಧ್ವನಿಯಿಂದ ಬ್ರಹ್ಮ-ವಿಷ್ಣು-ದೇವೇಂದ್ರ ಮೊದಲಾದವರು ಸಂಭ್ರಮದಿಂದ ನಾಲ್ಕನೆಯ ದಿನದ ರಾತ್ರಿಯಲ್ಲಿ ನಡೆವ ಆ ನಾಗೋಲಿಯಲ್ಲಿ ಕಾಲುನಡಿಗೆಯಲ್ಲಿ ಬರುತ್ತಿದ್ದರು. ೬೧. ಈ ರೀತಿ ಕಂಗೊಳಿಸುವ ವೈಭವದಿಂದ ಉತ್ಸವದಲ್ಲಿ ಇರಲು ಹಿಮವಂತನು ಅಳಿಯನಿಗೆ ಉಡುಗೊರೆಗಳನ್ನು ಕೊಟ್ಟನು. ಆಗ ವಿಷ್ಣು-ಬ್ರಹ್ಮ-ಇಂದ್ರರು ಈಶ್ವರ-ಪಾರ್ವತಿಯರಿಗೆ ಮುಯ್ಯಿ ಮಾಡಿದರು. ದೇವಸಮೂಹ ಅವರ ಮುಂದೆ ಕಾಣಿಕೆಯನ್ನಿಟ್ಟು ನಮಸ್ಕರಿಸಿದರು. ಎಲ್ಲ ದೇವ ಕುಲವೂ ವೇದಮಂತ್ರದಿಂದ ಸ್ತೋತ್ರ ಮಾಡಿದರು. ನಂದಿ ಮೊದಲಾದವರು ಈಶ್ವರನ ಮದುವೆಯ ಉತ್ಸವವನ್ನು ನೋಡಿ ಸಂತೋಷದಿಂದ ನಲಿದರು. ೬೨. ನಾಗೋಲಿಯಾದ ಮಾರನೆಯದಿನ ಪರ್ವತರಾಜನು ಪ್ರೀತಿಯಿಂದ ಬಂದಿದ್ದ ದಿಬ್ಬಣಿಕ್ಕೆ ಮೃಷ್ಟಾನ್ನ ಭೋಜನವನ್ನು ಮಾಡಿಸಿ ದಿವ್ಯಗಂಧ-ತಾಂಬೂಲಗಳಿಂದ ತೃಪ್ತಿಪಡಿಸಿದನು, ಜೊತೆಗೆ ವಸ್ತ್ರಾಭರಣದ ಉಡುಗೊರೆಯನ್ನು ಕೊಟ್ಟನು. ಕೋಟಿ ಯೋಜನದಿಂದ ಚಚ್ಚೌಕವಾಗಿರುವ ವಸಂತೋತ್ಸವದ ದೊಡ್ಡ ಆಟದ ಕುಳಿಯನ್ನು ನಿರ್ಮಿಸಿದನು. ೬೩. ಥಳಥಳಿಸುವ ಚಂದ್ರಕಾಂತಶಿಲೆಯ ನೆಲಗಟ್ಟುಗಳನ್ನು ಸಿದ್ಧಮಾಡಿಸಿ ಮುತ್ತು-ಮಾಣಿಕ್ಯ-ವಜ್ರ-ವೈಡೂರ್ಯ, ಮನೋಹರವಾದ ಗೋಮೇದಿಕ, ಪದ್ಮರಾಗ ಮೊದಲಾದ ಎಲ್ಲ ರತ್ನ

CC-0. Jangamwadi Math Collection. Digitized by eGangotri

ಹೊಳೆಹೊಳೆವ ಸೋಪಾನಪಙ್ಕ್ತಿಯಿಂ ವಿಸ್ತರಿಸಿ
ಯೊಳಗೆ ಕುಂಕುಮಮಲಯಜಾತಮಿಶ್ರಾಂಬುವಂ
ನೆಲೆಗೊಳಿಸಿ ಕಸ್ತೂರಿಮಲಯಜೋದಕದ ಕೊಪ್ಪರಿಗೆಯಿಂ ಬಳಸಿಟ್ಟರು ೬೩

ಭೋಜನಾನಂತರದೊಳಜ ಹರೀಂದ್ರಾದಿ ಜನ
ರಾಜಿಯಂ ಕೂಡಿಕೊಂಡತುಳವೈಭವದಿಂದೆ
ರಾಜಶೇಖರನಗಜೆಗೂಡಿ ನಡೆತಂದು ಖೇಡಾಕುಳಿಯ ಬಳಿಯೊಳಿರ್ಪ
ರಾಜಿಸುವ ಮಂಟಪದೊಳಮಳಮಣಿಖಚಿತಮೃಗ
ರಾಜಪೀಠವನೇರಿಯೋಲಗದೊಳಿರೆ ಶೈಲ
ರಾಜನಂದನೆ ಮಲಯಜೋದಕದ ಪೊಟ್ಟಣದೊಳಿಟ್ಟಳಾ ಶಂಕರನನು ೬೪

ಇಟ್ಟನೀಶಂ ತನ್ನ ಕೈಯ ಕತ್ತುರಿನೀರ
-ಪೊಟ್ಟಣದೊಳಗಜೆಯಿಂ ದೇವಿ ಹೊರಕೆಯ್ಯಿಂದೆ
ತಟ್ಟಿ ಮರಳೀಶ್ವರನನಿಡೆ ನಗುತೆ ಹರಿಯಜೇಂದ್ರಾದಿಗಳ ಮನವನರಿದು
ಕೊಟ್ಟಂ ನಿರೂಪಮಂ ಜಲಕೇಳಿಗಭವನವ
ರಿಟ್ಟಣಿಸಿ ಹರುಷದಿಂ ತಮತಮಗೆ ಹಸ್ತಕಳ
ವಟ್ಟಿ ಜಲಯಂತ್ರ ಪೊನ್ನಂಡೆಗಳ ಗಡಣದಿಂ ನೀರಾಟಕನುವಾದರು ೬೫

ಹರಿವಿಧಿಗಳುಂ ಸುರೇಂದ್ರಾದಿ ದಿಕ್ಪಾಲಕರ
ನೆರವಿ ಚಂದ್ರಾರ್ಕ ವಸು ಮನುಮುಖ್ಯಪುರುಷರುಂ
ಸಿರಿ ಸರಸ್ವತಿ ಶಚಿ ಸ್ವಾಹೆ ರೋಹಿಣಿಮುಖ್ಯಮಾದ ತತ್ಪತ್ನೀಕುಳಂ

ಸಮೂಹದಿಂದ ಹೊಳೆ-ಹೊಳೆಯುವ ಮೆಟ್ಟಿಲುಗಳ ಸಾಲನ್ನು ಕಟ್ಟಿಸಿದನು. ಒಳಗೆ ಕುಂಕುಮಕೇಸರಿ ಮತ್ತು ಶ್ರೀಗಂಧವನ್ನು ಬೆರೆಸಿದ್ದ ನೀರನ್ನು ಕಸ್ತೂರಿಗಂಧದ ಕೊಪ್ಪರಿಗೆಯಲ್ಲಿ ತುಂಬಿಟ್ಟರು. ೬೪. ಊಟವಾದ ನಂತರ ಬ್ರಹ್ಮ ವಿಷ್ಣು ಇಂದ್ರ ಮೊದಲಾದ ಜನಸಮೂಹವನ್ನು ಕೂಡಿಕೊಂಡು ಈಶ್ವರನು ಪಾರ್ವತಿಯೊಡನೆ ಬಂದು ಆಟದ ಕುಳಿಯ ಹತ್ತಿರದಲ್ಲಿ ಪ್ರಕಾಶಿಸುತ್ತಿದ್ದ ಮಂಟಪದಲ್ಲಿ ಮಣಿಖಚಿತವಾದ ಸಿಂಹಾಸನದ ಮೇಲೆ ಕುಳಿತು ಓಲಗದಲ್ಲಿದ್ದನು. ಆ ಈಶ್ವರನನ್ನು ಪಾರ್ವತಿಯು ಗಂಧದ ನೀರಿನ ದೊನ್ನೆಯಿಂದ ಹೊಡೆದಳು. ೬೫. ಈಶ್ವರನು ಕೂಡ ತನ್ನ ಕೈಯಲ್ಲಿದ್ದ ಕಸ್ತೂರಿ ನೀರಿನ ದೊನ್ನೆಯಿಂದ ಪಾರ್ವತಿಗೆ ಹೊಡೆದನು. ಪಾರ್ವತಿಯು ಅದನ್ನು ಕೈಯಿಂದ ಹೊರಗಡೆಯೆ ತಡೆದು ಮತ್ತೆ ಈಶ್ವರನನ್ನು ಹೊಡೆದಳು. ಶಿವನು ನಗುತ್ತ ವಿಷ್ಣು-ಬ್ರಹ್ಮ-ದೇವೇಂದ್ರ ಮೊದಲಾದವರ ಮನಸ್ಸಿನ ಇಂಗಿತವನ್ನು ತಿಳಿದು ಅವರಿಗೆ ಓಕುಳಿಯಾಟಕ್ಕೆ ಅನುಮತಿಕೊಟ್ಟನು. ಅವರು ಗುಂಪುಗೂಡಿ ಸಂತೋಷದಿಂದ ತಮ್ಮ ತಮ್ಮ ಕೈಗೆ ಸಿಕ್ಕಿದ ಜೀರ್ಕೊಳವೆ ಮತ್ತು ಚಿನ್ನದ ಕೊಳವೆಗಳನ್ನು ಹಿಡಿದು ನೀರಾಟಕ್ಕೆ ಸಿದ್ಧರಾದರು. ೬೬. ವಿಷ್ಣು ಬ್ರಹ್ಮ ದೇವೇಂದ್ರ ಮೊದಲಾದ ದಿಕ್ಪಾಲಕರ ಸಮೂಹ, ಚಂದ್ರ-ಸೂರ್ಯ-ವಸು-ಮನು ಮೊದಲಾದ ಪುರುಷರು, ಲಕ್ಷ್ಮಿ, ಸರಸ್ವತಿ, ಶಚಿ,

CC-0. Jangamwadi Math Collection. Digitized by eGangotri

ವರರಂಭೆಯೂರ್ವಸಿ ತಿಲೋತ್ತಮೆ ಸುಕೇಶಿ ಸೌಂ
ದರಿ ಮುಖ್ಯಸುರವರಾಂಗನೆಯರುಂ ನಡೆತಂದು
ಹರುಷದಿಂದೆಸೆವ ಖೇಡಾಕುಳಿಯನೊಳಪೊಕ್ಕರೇನೆಂಬೆನಚ್ಚರಿಯನು ೬೭

ಪೊಕ್ಕು ಕುಂಕುಮವಿಮಿಶ್ರಾಂಬುವಂ ಮಾನಿನಿಯ
ರೆಕ್ಕತುಳದಿಂದೊರ್ಬರೊರ್ಬರಂಗಂಗಳೊಳ್
ಮಿಕ್ಕುಸೂಸಲ್ ಸಿಡಿದ ಜಲಕಣಾವಳಿಯವರ ಮುಖಪಂಕಜಂಗಳೊಳಗೆ
ಮುಕ್ಕುರಿಕೆ ಶಶಿಯೊಡನೆ ಪಂಕಜಂಗಳ್ ಖಾತಿ
ಮಿಕ್ಕು ಕಿಡಿಗಳನುಗುಳ್ದಪ್ಪವೆನಲ್ ಸುರರ ನೋ
ಟಕ್ಕೆ ಸೋಜಿಗಮನಾಗಿಸಿತಂಬುಕೇಳಿಯೊಳ್ ಪೇಳ್ವುದೇನಚ್ಚರಿಯನು ೬೭

ಕೆಲಕೆಲರ್ ತಜ್ಜಲವನೀಸುತುಂ ಸೂಸುತುಂ
ಕೆಲಕೆಲರ್ ಕುಚಭರದೆ ಬಳ್ಕುತುಂ ತಳ್ಕುತುಂ
ಕೆಲಕೆಲರ್ ಬೆಂಬತ್ತಿ ಬಯ್ಯುತುಂ ಪೊಯ್ಯುತುಂ ಪೊನ್ನಂಡೆಗಳನೆ ಪಿಡಿದು
ಕೆಲಕೆಲರ್ ಪೊಯ್ಲ್ಲ ಪೊರೆಗಳೆವುತುಂ ಕಳೆವುತುಂ
ಕೆಲಕೆಲರ್ ಪಂಥಗಳ ನುಡಿವುತುಂ ಜಡಿವುತುಂ
ಕೆಲಕೆಲರ್ ಸೊಗಸಿನಿಂದಾಡುತುಂ ಪಾಡುತುಂ ಕಣ್ಗೆಸೆದರಾ ಕೊಳದೊಳು ೬೮

ಪೊರವಾರ ಭಾರಂಗಳಂ ಕುಚಭರಂಗಳಂ
ತುರುಬುಗಳ ಬಿಣ್ಪುಗಳನಡಿಯಿಡುವ ಕಾಲದೊಳ್
ಪೊರಲಾರದಳಲಿ ಬಳಲ್ದಿ ತಳೋದರಿಯರಾ ಸರಸೀಜಲಂಗಳೊಳಗೆ

ಸ್ವಾಹೆ, ರೋಹಿಣಿ ಮೊದಲಾದ ಅವರ ಪತ್ನಿಯರ ಸಮೂಹ, ಶ್ರೇಷ್ಠರಾದ ರಂಭೆ, ಊರ್ವಶಿ, ತಿಲೋತ್ತಮೆ, ಸುಕೇಶಿ, ಸೌಂದರಿ ಮೊದಲಾದ ದೇವತಾಸ್ತ್ರೀಯರು ಬಂದು ಸಂತೋಷದಿಂದ ಮೆರೆಯುತ್ತಿರುವ ಆಟದ ಕುಳಿಯನ್ನು ಹೊಕ್ಕರು. ೬೭. ಹಾಗೆ ಒಳ ಪೊಕ್ಕು ಆ ಮಾನಿನಿಯರು ಆವೇಶದಿಂದ ಒಬ್ಬರ ಮೇಲೆ ಒಬ್ಬರು ಕುಂಕುಮ ಮಿಶ್ರವಾದ ನೀರನ್ನು ಹೆಚ್ಚಾಗಿ ಚೆಲ್ಲಿದರು. ಆಗ ಸಿಡಿದ ನೀರಿನ ಹನಿಗಳು ಅವರ ಮುಖಕಮಲಗಳ ಮೇಲೆ ಬೀಳಲು ಚಂದ್ರನ ಜೊತೆಯಲ್ಲಿ ಕಮಲಗಳು ಅತಿಯಾದ ಕೋಪದಿಂದ ಕಿಡಿಗಳನ್ನು ಉಗುಳಿದುವೋ ಎಂಬಂತಿರಲು ನೀರಾಟ ದೇವತೆಗಳ ಕಣ್ಣಿಗೆ ಸೋಜಿಗವನ್ನುಂಟು ಮಾಡಿತು. ೬೮. ಕೆಲಕೆಲವರು ಆ ನೀರನ್ನು ಈಜುತ್ತ–ಚೆಲ್ಲುತ್ತಾ ; ಕೆಲಕೆಲವರು ಸ್ತನಗಳ ಭಾರದಿಂದ ಬಳುಕುತ್ತ–ಲೇಪಿಸಿಕೊಳ್ಳುತ್ತಾ; ಮತ್ತೆ ಕೆಲಕೆಲವರು ಬೆನ್ನಟ್ಟಿ ಬಯ್ಯುತ್ತ, ಹೊನ್ನಕೊಳವೆಗಳನ್ನು ಹಿಡಿದು ಹೊಡೆಯುತ್ತಾ ; ಕೆಲಕೆಲವರು ಹೊಡೆತದ ತೀವ್ರತೆಯನ್ನು ತಪ್ಪಿಸಿಕೊಳ್ಳುತ್ತ ಕಳೆಯುತ್ತಾ, ಮತ್ತೆ ಕೆಲಕೆಲವರು ಶಪಥ ಮಾಡುತ್ತ-ಹೊಡೆಯುತ್ತಾ ; ಕೆಲಕೆಲವರು ಸೊಗಸಿನಿಂದ ಆಡುತ್ತ-ಹಾಡುತ್ತಾ ಆ ಕೊಳದಲ್ಲಿ ಮೆರೆಯುತ್ತಿದ್ದರು. ೬೯. ಪೃಷ್ಠಗಳ ಭಾರವನ್ನೂ, ಸ್ತನಗಳ ಹೊರೆಯನ್ನೂ, ತುರುಬುಗಳ ಪುಷ್ಟತೆಯನ್ನೂ ಹೆಜ್ಜೆಗಳನ್ನು ಇಡುವ ಕಾಲದಲ್ಲಿ ಹೊರಲಾರದೆ ದುಃಖಿಸಿ

CC-0. Jangamwadi Math Collection. Digitized by eGangotri

ತರಿಸಂದವೆಲ್ಲವುಂ ಲಘುವಾಗೆ ನೆಗೆದು ಧುಡು
ಮಿರಿದೀಸಿದರ್ ಜಡಸ್ನೇಹದಿಂದೀ ಲೋಕ
ಮರಿಯಲ್ ಗುರುತ್ವಕೆ ಲಘುತ್ವಮುಪ್ಪುದನುದಾಹರಿಪಂತದೇನೆಂಬೆನು ೬೯

ಅಲ್ಲಲ್ಲಿ ಸತಿಯರಿಂತಾಡುತಿರೆ ಸಿರಿ ತನ್ನ
ವಲ್ಲಭಾಂಗಕೆ ಕುಂಕುಮಾಂಬುವಂ ಲೀಲೆಯಿಂ
ಚೆಲ್ಲೆ ಮಿಂಚುಂದಳೆದ ಕಾರ್ಮುಗಿಲಿನಂದಮುಂ ಧರಿಸಿ ಹರಿ ಮರಳಿ ತನ್ನ
ನಲ್ಲಳಂ ಮಲಯಜಾಂಬುವಿನಿಂ ಮುಸುಂಕೆ ರಸ
ದಲ್ಲಿ ಲೇಪಿಸಿದ ಪೊಂಬುತ್ತಳಿಯು ಮಾಳ್ಕೆಯೊಳ್
ತಲ್ಲಲನೆಯೊಪ್ಪಿದಳ್ ನೋಳ್ಪವರ ಕಣ್ಗಳ್ಗದೇನೆಂಬೆನಚ್ಚರಿಯನು ೭೦

ಒಂದೆಸೆಯೊಳಬ್ಜಜಂ ಸರಸತಿಯ ಮೇಲೆ ತಾ
ನೊಂದೆಸೆಯೆ ಕತ್ತುರಿಜಲಂಗಳಂ ನಿಸಿ ಬಳಸಿ
ನಿಂದೆಸೆಯಲೆಸೆವ ಸಸಿಗಲ್ಲ ಪುತ್ತಳಿಯೊಲಾ ವಾಣಿ ಜೀರ್ಕೊಳವಿಯೊಳಗೆ
ಒಂದಿಸಿದ ಮಲಯಜಜಲಂ ಬೊಮ್ಮನಂಗದೊಳ್
ಸಂದಿಸಿದೊಡೊಡನಾ ಸ್ವಯಂಭುವಂ ತಿಳಿಜೊನ್ನ
ದಿಂದೆ ಮುಸುಕಲ್ಪಟ್ಟ ಕನಕಾದ್ರಿಯಂತೆ ಕಣ್ಗಳ್ಗದೇಂ ರಾಜಿಸಿದನೋ ೭೧

ಬೇರೊಂದು ದಿಕ್ಕಿನೊಳ್ ಕೋಟಿಗಳ್ ಮೂವತ್ತು
ಮೂರೊಂದುಗೂಡಿದ ಸುರಸ್ತ್ರೀಯರುಂ ಬರಲ್
ಸಾರೆಂದು ಪೌಲೋಮಿ ಸುರಪನು ಕರೆದಳರಸರೆ ಸರಸಕೆನಗೆ ಮೆಯ್ಯು

ಆಯಾಸಗೊಂಡ ಈ ಸ್ತ್ರೀಯರು ನೀರಿನೊಳಗೆ ತಮ್ಮ ಭಾರವು ಹಗುರವಾಗುವುದನ್ನು ಉದಾಹರಿಸುವಂತೆ ಈ ಲೋಕ ತಿಳಿಯಲು ನೀರಾಟದಲ್ಲಿ ಬಂದು ಅವೆಲ್ಲವೂ ಹಗುರವಾಗಲು ನೆಗೆದು, ದುಮುಕಿ ಈಜಿದರು. ೭೦. ಅಲ್ಲಲ್ಲಿ ಸ್ತ್ರೀಯರು ಈ ರೀತಿ ನೀರಾಟವಾಡುತ್ತಿರಲು ಲಕ್ಷ್ಮಿ ತನ್ನ ಪತಿಯ ದೇಹಕ್ಕೆ ಕುಂಕುಮದ ನೀರನ್ನು ಒಯ್ಯಾರದಿಂದ ಚೆಲ್ಲಲು, ಮಿಂಚನ್ನು ತಳೆದ ಕಾರ್ಮುಗಿಲ ಅಂದವನ್ನು ಹೊಂದಿ, ವಿಷ್ಣು ತಿರುಗಿ ತನ್ನ ಹೆಂಡತಿಯನ್ನು ಗಂಧದ ನೀರಿನಿಂದ ಮುಳುಗಿಸಿದನು. ಬಣ್ಣವನ್ನು ಬಳಿದ ಚಿನ್ನದ ಬೊಂಬೆಯಂತೆ ಲಕ್ಷ್ಮಿಯು ನೋಡುವವರ ಕಣ್ಣಿಗೆ ಕಾಣಿಸಿದಳು. ಆ ಆಶ್ಚರ್ಯವನ್ನು ಏನೆಂದು ಹೇಳಲಿ. ೭೧. ಒಂದೆಡೆಯಲ್ಲಿ ಬ್ರಹ್ಮನು ಸರಸ್ವತಿಯ ಮೇಲೆ ಕಸ್ತೂರಿಯ ಪರಿಮಳದ ನೀರನ್ನು ಎರಚಲು ಕತ್ತಲೆಯಿಂದ ಆವರಿಸಿ ಪ್ರಕಾಶಿಸುವ ಚಂದ್ರಕಾಂತ ಶಿಲೆಯ ಬೊಂಬೆಯಂತೆ ಸರಸ್ವತಿ ಕಾಣಿಸಿದಳು. ಮತ್ತೆ ಸರಸ್ವತಿಯು ಜೀರ್ಕೊಳವೆಯೊಳಗೆ ತುಂಬಿದ ಗಂಧದ ನೀರನ್ನು ಬ್ರಹ್ಮನ ಶರೀರದ ಮೇಲೆ ಸುರಿಸಲು ತಕ್ಷಣ ಆ ಬ್ರಹ್ಮನು ತಿಳಿಯಾದ ಬೆಳುದಿಂಗಳಿನಿಂದ ಮುಸುಕಿದ ಮೇರುಪರ್ವತದಂತೆ ಕಣ್ಣುಗಳಿಗೆ ಬಹು ಚೆಲುವಾಗಿ ಪ್ರಕಾಶಿಸಿದನು. ೭೨. ಬೇರೊಂದು ದಿಕ್ಕಿನಲ್ಲಿ ಮೂವತ್ತುಮೂರು ಕೋಟಿ ದೇವಸ್ತ್ರೀಯರು ಒಂದುಗೂಡಿ ಬರಲು ಅವರನ್ನು ಪಕ್ಕಕ್ಕೆ ಸರಿಯಿರಿ ಎಂದು

CC-0. Jangamwadi Math Collection. Digitized by eGangotri

ತೋರೆಂದು ಕೆನ್ನೀರ್ಗಳಂ ಪೊಯ್ಯುತಿರೆ ಪತ್ತು
ನೂರೆಂದೆನಿಪ ಲೆಕ್ಕದಕ್ಷಿಯುಂ ಪಡೆದ ನಗೆ
ಗಾರೆಂದರನಿಮಿಷತೆಯುಂ ಪಡೆದನಮರಿಯರ್ ಕೈವೊಯ್ದು ನಗುತಿರಲ್ಕೆ ೭೨

ಮರಳಿ ಸುರಪಂ ನಗುತ್ತೂರ್ವಸಿಯ ಮೇಲೆ ಕ
ತ್ತುರಿಯ ಮಲಯಜದ ಕುಂಕುಮಧಾರೆಗಳನೊತ್ತು
ತಿರೆ ಪಡೆದುದಾಕೆಯುಂಗು ನೀಲಮಾಣಿಕ್ಯ ಮೌಕ್ತಿಕದ ಹಾರಂಗಳಂ
ಪೊರೆಯೊಳಿದನೀಕ್ಷಿಪ ಶಚೀಮನಂ ಪಡೆದುದಾ
ಸ್ಮರರಾಜನೆಚ್ಚ ಕನ್ನೈದಿಲೆಯ ಕೆಂಪ್ರದಾ
ವರೆಯ ಮಲ್ಲಿಗೆಯರಳ ಸರಳ ಬಾಯ್ಧಾರೆಗಳನಿಂತಿದು ವಿಚಿತ್ರಮೆನಲು ೭೩

ಮತ್ತಮೂರ್ವಸಿಯ ಮೊಗಕಾ ಸುರಪನಕ್ಕರಿಂ
ಕತ್ತುರಿಯನೀರನಾ ಜೀರ್ಕೊಳವಿಯಿಂದೆ ತೆಗ
ದೊತ್ತಲಾಕೆಯ ಮೊಗಂ ಕಳಕಳಿಸಿ ಹೊಳೆಹೊಳೆದು ಸೊಂಪಾದುದಾ ಕ್ಷಣದೊಳು
ಇತ್ತಲ್ ಶಚೀಮುಖಂ ಸರ್ವರುಂ ನೋಡಲಾ
ಕತ್ತುರಿಯ ಬಣ್ಣಮಾದುದು ಚಿತ್ರಮಿದು ಜಗದೊ
ಳೆತ್ತ ಮೆಟ್ಟೆತ್ತ ಚಪ್ಪಟೆಯೆಂಬ ನಾಣ್ನುಡಿಯನಭಿನಯಿಸುವಂತಾದುದು ೭೪

ಶಚಿದೇವಿ ಹೇಳಿ ಅನಂತರ ದೇವೇಂದ್ರನನ್ನು ಕರೆದು, ಅರಸನೆ ಸರಸಕೇಳಿಗೆ ನನಗೆ ಮೈಯನ್ನು ತೋರು ಎಂದು ಕೆಂಪುನೀರನ್ನು ಹೊಯ್ಯುತ್ತಿರಲು ಸಾವಿರ ಕಣ್ಣನ್ನು ಹೊಂದಿದ ನಗೆಗಾರ ಎಂದು ದೇವಸ್ತ್ರೀಯರು ಕೈತಟ್ಟಿ ನಗುತ್ತಿರಲು ಇಂದ್ರನು ದೇವತ್ವ ವನ್ನು ಪಡೆದನು. ೭೩. ಮತ್ತೆ ದೇವೇಂದ್ರನು ನಗುತ್ತ ಊರ್ವಶಿಯ ಮೇಲೆ ಕಸ್ತೂರಿಯ, ಗಂಧದ, ಕುಂಕುಮದ ನೀರನ್ನು ಎರಚುತ್ತಿರಲು ಆಕೆಯ ದೇಹವು ನೀಲ ಮಾಣಿಕ್ಯ ಮತ್ತು ಮುತ್ತಿನ ಹಾರಗಳನ್ನು ಪಡೆಯಿತು. ಪಕ್ಕದಲ್ಲಿ ಇದನ್ನು ನೋಡುವ ಶಚಿಯ ಮನಸ್ಸು ಇದು ವಿಚಿತ್ರ ಎನ್ನುವಂತೆ ಮನ್ಮಥನು ಬಿಟ್ಟ ಕನ್ನೈದಿಲೆ, ಕೆಂಪುದಾವರೆ ಮತ್ತು ಮಲ್ಲಿಗೆಯ ಹೂಬಾಣಗಳ ಬಾಯ ಅಲಗಿನ ರೂಪನ್ನು ಪಡೆಯಿತು. ೭೪. ಮತ್ತೆ ದೇವೇಂದ್ರನು ಪ್ರೀತಿಯಿಂದ ಕಸ್ತೂರಿಯ ನೀರನ್ನು ಜೀರ್ಕೊಳವೆಯಿಂದ ತೆಗೆದು ಊರ್ವಶಿಯ ಮುಖದ ಮೇಲೆ ಚಿಮ್ಮಲು ಆಕೆಯ ಮುಖ ಕಳಕಳಿಸಿ ಹೊಳೆಹೊಳೆದು ಸೊಂಪಾಯಿತು. ಅದೇ ಕ್ಷಣ ಇತ್ತಲಾಗಿ ಎಲ್ಲರೂ ನೋಡಲು ಶಚೀದೇವಿಯ ಮುಖವು ಅಚ್ಚರಿಗೊಳ್ಳುವಂತೆ ಜಗತ್ತಿನಲ್ಲಿ ಕಾಲಿನ ಒದೆತವೆಲ್ಲಿ ? ಚಪ್ಪಾಳೆಯಲ್ಲಿ ? ಎನ್ನುವ ಗಾದೆಯ ಮಾತನ್ನು ಅಭಿನಯಿಸುವಂತೆ



CC-0. Jangamwadi Math Collection. Digitized by eGangotri

ಸಂಗಳಿಸಿ ನೀರ್ಹೊಯ್ವ ಕಾಲದೊಳ್ ಕರೆದ ಪೊಸ
ಪೊಂಗಳಸಗಳ್ ಜಗುಳೆ ನೀರನೀಸುತ್ತಿರ್ಪ
ಹೇಂಗಳ ಕುಚಂಗಳ್ಗೆ ಕೈನೀಡುವರ್ ಪೊನ್ನ ಜೀರ್ಕೊಳವಿಗಳ್ ಬೀಳಲು
ಮುಂಗಡೆಯೊಳೀಸಾಡುವಬಲೆಯರ ನಳಿತೋಳ್ಗ
ಳಂಗವಿಸಿ ಪಿಡಿದೊಡನೆ ನಗಿಸುವರ್ ತಮ್ಮೊಳಗೆ
ಹಿಂಗದಾ ಮುಗ್ಧೆಯರ್ ತಜ್ಜಲಕ್ರೀಡೆಯೊಳ್ ಪೇಳ್ವುದೇನಚ್ಚರಿಯನು ೭೫

ನಾಕದಬಲೆಯರನಾಲಿಂಗಿಸುವ ಬಯಕೆಯೊಳ
ನೇಕಕಾಲಂ ಭ್ರಮೆಯೊಳಿರ್ದೊಡಂ ದೊರಕದಿ
ನ್ನಾಕಸ್ಮಿಕಂ ಬಂದ ಜಲಕೇಳಿಯೊಳಗಿದರೊಳಾದ ಕಿಂಚಿದ್ಭೋಗಮೇ
ಸಾಕೆಂದು ಕೆಲಕೆಲರ್ ನೀರ್ಹೊಯ್ವ ಸಂದಣಿಯ
ನೂಕುನೂಂಕಿನ ಸೋಂಕಿನೊಳ್ ಸುಖಂಬಡೆದರಿಂ
ದೋಕುಳಿಯ ನೆವದೊಳಪ್ಪಿದರೆಂಬ ನಾಣ್ನುಡಿಯನಭಿನಯಿಸಿ ತೋರುವಂತೆ ೭೬

ನಡುಕಮಾದುದು ಮೆಯ್ಗೆ ರೋಮಾಂಚಮಾಯ್ತು ಕಂ
ಗಡೆ ಕೆಂಪನಾಳ್ದುದಧರಂ ಬೆಳರ್ತುದು ನಡೆಗೆ
ತಡಬಡಿಸಿದುದು ಗುಜ್ಜುಗೊಂಡುವಾ ಪೆರ್ಮೊಲೆಗಳುಗುರ್ಪೊಯಿಲ್ಗಳುಂ ಮೆರೆದುವು

ಕಪ್ಪಾಯಿತು. ೭೫. ಕೂಡಿಕೊಂಡು ನೀರು ಹೊಯ್ಯುವ ಸಮಯದಲ್ಲಿ ಕೈಯಲ್ಲಿದ್ದ ಹೊಸ ಹೊನ್ನ ಕಳಶಗಳು ಜಾರಲು ನೀರನ್ನು ಸುರಿಸುತ್ತಿರುವ ಹೆಂಗಸರ ಮೊಲೆಗಳಿಗೆ ಕೈಚಾಚುವರು. ಚಿನ್ನದ ಪಿಚಕಾರಿಗಳು ಬೀಳಲು ಮುಂದೆ ಈಜಾಡುವ ಸ್ತ್ರೀಯರ ಮೃದುವಾದ ತೋಳುಗಳನ್ನು ಬಯಸಿ ಹಿಡಿದ ತಕ್ಷಣ ತಮ್ಮಲ್ಲಿಯೆ ಆ ಜಲಕ್ರೀಡೆಯ ಆಸೆ ತೃಪ್ತಿಯಾಗದ ಮುಗ್ಧೆಯರು ನಗಿಸುವರು. ೭೬. ಸ್ವರ್ಗದ ಸ್ತ್ರೀಯರನ್ನು ಅಪ್ಪಿಕೊಳ್ಳುವ ಆಸೆಯಿಂದ ಅನೇಕ ಕಾಲದವರೆಗೆ ಭ್ರಾಂತಿಯಿಂದ ಇದ್ದರೂ ಅದು ದೊರೆಯದು. ಆಕಸ್ಮಿಕವಾಗಿ ಬಂದ ನೀರಾಟದಲ್ಲಿ ಆದ ಸ್ವಲ್ಪ ಭೋಗವೇ ಸಾಕು ಎಂದು ಕೆಲವರು ಓಕುಳಿಯಾಡುವ ನೆಪದಲ್ಲಿ, ನೀರನ್ನು ಹೊಯ್ಯುವ ಸಂಭ್ರಮದ ನೂಕುನುಗ್ಗಲಿನಲ್ಲಿ ಅವರನ್ನು ಸೋಕಿ ಸುಖವನ್ನು ಪಡೆದರು ಎಂಬುದನ್ನು ಅಭಿನಯಿಸಿ ತೋರುವಂತೆ ಕಂಡರು. ೭೭. ನಡುಕ ಉಂಟಾಯಿತು, ಮೈ ಪುಳಕಗೊಂಡಿತು. ಕಣ್ಣುಗಳು ಕೆಂಪಾದುವು, ತುಟಿಗಳು ಬಿಳಿಚಿಕೊಂಡುವು, ಹೆಜ್ಜೆ ತಡವರಿಸಿತು, ನುಜ್ಜು ನುಜ್ಜಾಗಿದ್ದ ದಪ್ಪನಾದ ಮೊಲೆಗಳು ಉಗುರಿನ ಹೊಡೆತದಿಂದ ತುಂಬಿದುವು, ಮಾತು ಭಿನ್ನವಾಯಿತು, ಮುಖ ಬಿಳಿಚಿಕೊಂಡಿತು, ಮುಡಿ ಬಿಚ್ಚಿಹೋಯಿತು, ತಿಲಕ ಮೈಗೆ

CC-0. Jangamwadi Math Collection. Digitized by eGangotri

ನುಡಿ ಖಿನ್ನನಾದುವು ಮುಖಂ ವಿವರ್ಣಿಸಿದುವೊ
ಳ್ಮುಡಿ ಬಿಚ್ಚಿದುವು ತಿಲಕಲೇಪಂಗಳಳಿದುವಿದು
ಜಡಕೇಳಿಯೋ ನಿಶ್ಚಯಂ ಸುರತಕೇಳಿಯೋಯೆಂಬಂತೆ ಕಣ್ಗೆಸೆದರು ೭೭

ಪಲತೆರದೊಳಬಲೆಯರ್ ಸಲಿಲಕೇಳಿಯೊಳಿರಲ್
ಮಲಯಜದ ಕುಂಕುಮದ ಕತ್ತುರಿಯ ಪರಿಮಳಂ
ಗಳ ತಂಪು ತಣ್ಗೊಳದ ತಂಪು ತಣ್ಣೆಲರ ತಂಪಾ ನವ್ಯಯೌವನೆಯರ
ಪೊಳೆವ ಮುಖಶಶಿರುಚಿಯೊಳೊಸರ್ವಿಂದುಕಾಂತನಿ
ರ್ಮಳಿನಸೋಪಾನನೀರ್ಗಳ ತಂಪು ಕೂಡಲಾ
ಲಲನೆಯರ ಮೈಗೆ ತಣ್ಣಸಮೇರೆ ಮೆಲ್ಲನಾ ಕೊಳದಿಂದೆ ಪೊರಮಟ್ಟರು ೭೮

ಗುರುಕುಚಂಗಳೊಳೆಸೆವ ಸ್ವಸ್ತಿಕಕರಂಗಳೊ
ಳ್ಗುರುಳಬಂಬಲೊಳಿಳಿವ ಜಲಧಾರೆಗಳ್ ಮೆಯ್ಯೊ
ಳೊರೆದಂತೆ ನಾಂದು ಪತ್ತಿದ ಸೀರೆಗಳ್ ಹುಹೂಯೆಂಬ ನಡುಕದ ನುಡಿಗಳು
ಪಿರಿದು ಸೀರ್ಪನಿಯಾಂತ ಮೈನವಿರ್ ಮೌನಮುಂ
ಧರಿಸಿದ ಸುಕಾಂಚಿಕಿಂಕಿಣಿ ಕಂಕಣಾಂಘ್ರಿನೂ
ಪುರಸಂಚಯಂಗಳಿವು ಬೇರೊಂದು ಚೆಲ್ವಿನಿಂ ತಡಿಗಡರ್ದರ್ ಸತಿಯರು ೭೯

ಇಂತು ನಾನಾ ವಿನೋದಂಗಳ ವಿಲಾಸಂಗ
ಳಂ ತಳೆದು ಹರಿಮುಖ್ಯಮಾದ ದಿವಿಜರ್ ತಮ್ಮ
ಕಾಂತೆಯರ್ವೆರಸಿ ತಡೆಗಡರ್ದು ವರವಸ್ತ್ರಾನುಲೇಪನಾಭರಣಂಗಳ

ಹಚ್ಚಿಕೊಂಡಿದ್ದ ಗಂಧ ಮೊದಲಾದುವು ಅಳಿಸಿಹೋದುವು. ಇದೇನು ನಿಜವಾಗಿಯೂ ಜಲಕೇಳಿಯೊ ಅಥವಾ ಸುರತಕೇಳಿಯೊ ಎಂಬಂತೆ ಕಣ್ಣಿಗೆ ಅವರು ಕಾಣಿಸಿದರು. ೭೮. ನಾನಾ ರೀತಿಯಲ್ಲಿ ಸ್ತ್ರೀಯರು ನೀರಾಟದಲ್ಲಿರಲು ಗಂಧದ, ಕುಂಕುಮದ, ಕಸ್ತೂರಿಯ ಪರಿಮಳಗಳ ತಂಪು, ತಣ್ಣೀರಿನ ಕೊಳದ ತಂಪು, ತಂಗಾಳಿಯ ತಂಪು, ಹೊಸಯವ್ವನವತಿಯರ ಹೊಳೆಯುವ ಮುಖಚಂದ್ರನ ಕಿರಣದಲ್ಲಿ ಒಸರುವ ಚಂದ್ರಕಾಂತಶಿಲೆಯ ಶುಭ್ರವಾದ ಮೆಟ್ಟಿಲುಗಳ ನೀರಿನ ತಂಪು ಕೂಡಿಕೊಂಡು ಆ ಸ್ತ್ರೀಯರ ಮೈಗೆ ಶೀತ ಹತ್ತಲು ಮೆಲ್ಲನೆ ಆ ಕೊಳದಿಂದ ಹೊರ ಹೊರಟರು. ೭೯. ಭಾರವಾದ ದೊಡ್ಡ ಮೊಲೆಗಳಿಂದ, ಸ್ವಸ್ತಿಕವನ್ನು ಬರೆದ ಕೈಗಳಿಂದ, ಜೋತಾಡುವ ಕೂದಲ ಶ್ರೇಣಿಯಿಂದ ಇಳಿಯುವ ನೀರಿನ ಧಾರೆಗಳು ; ಮೈಯಲ್ಲಿ ಜಿನುಗಿದಂತೆ ನೆನೆದು ಮೈಗೆ ಅಂಟಿಕೊಂಡ ಸೀರೆಗಳು ; ಹು ಹೂ ಎಂಬ ನಡುಗುವ ಮಾತುಗಳು, ದೊಡ್ಡ ತುಂತುರುಹನಿಗಳನ್ನು ತಳೆದ ಮೈಪುಳಕ, ಮೌನವನ್ನು ತಾಳಿದ ಸೊಂಟಪಟ್ಟಿಯ ಗೆಜ್ಜೆ, ಕೈಕಡಗ, ಕಾಲ್ಗೆಜ್ಜೆಗಳು, ಇವುಗಳ ಬೇರೆಯ ಒಂದು ಸೊಗಸಿನಿಂದ ಸ್ತ್ರೀಯರು ದಡಕ್ಕೆ ಬಂದರು. ೮೦. ಈ ರೀತಿ ನಾನಾ ವಿನೋದಗಳಿಂದ ವಿಲಾಸಗಳನ್ನು ಹೊಂದಿ ವಿಷ್ಣು ಮೊದಲಾದ ದೇವತೆಗಳು ತಮ್ಮ ಪತ್ನಿಯರೊಡಗೂಡಿ ದಡಕ್ಕೆ ಬಂದು ಉತ್ತಮವಾದ ವಸ್ತ್ರ, ಮೈಗೆ ಹಚ್ಚಿ

CC-0. Jangamwadi Math Collection. Digitized by eGangotri

ತಂತಮ್ಮ ಕಾಯದೊಳ್ ಸಂಗೊಳಿಸಿಯನಿಬರುಂ
ಸಂತಸದೆ ಕರ್ಪೂರತಾಂಬೂಲವಂ ಕೊಂಡು
ಕಂತುಹರನೊಡ್ಡೋಲಗಕ್ಕೆ ನಡೆತಂದು ನಿಂದಿರ್ದ ಸಮನಂತರದೊಳು ೮೦

ಓಲಗದಿನೆದ್ದು ಜಗದೀಶ್ವರಂ ಗಿರಿರಾಜ
ನಾಲಯಕೆ ಬರೆ ಮಹಾಭಕ್ತಿಯಿಂದಳಿಯಂಗೆ
ಮೇಲಾದ ವಸ್ತುಗಳ ಕಾಣ್ಕೆಗಳನಿತ್ತು ನಿಜನಂದನೆಗೆ ಬಳುವಳಿಯನು
ಮೇಳವಾಳಿಯರ ಜಯೆ ವಿಜಯೆ ಮುಂತಾದ ಸಖಿ
ಜಾಲಮನನರ್ಘ್ಯವಸ್ತ್ರಾಭರಣಮಂ ಕೊಟ್ಟು
ಲೀಲೆಯಿಂ ಸಕಲಗಣವೃಂದಕುಡುಗೊರೆಯಿತ್ತು ಬೀಳ್ಕೊಟ್ಟನಗರಾಜನು ೮೧

ಕಳುಹಲ್ಕೆತಂದ ಗಿರಿರಾಜಮೇನಕೆಯರಂ
ಕಳುಹಿದಂ ಶಿವನುಚಿತವಚನರಚನೆಗಳಿಂದೆ
ಬಳಿಕವರ್ ಗಿರಿಜೆಯಡಿಗಳ್ಗೆರಗಿ ತಾಯೆ ನಿನ್ನಂ ಪೆತ್ತ ಸುಕೃತಕುಜದ
ಫಲದಿಂದಲೀಶ್ವರಂ ನಮ್ಮ ಮನೆಗೈತಂದ
ನುಳಿದವರನೆಲ್ಲರಂ ಕಂಡೆವಾವಿಂತಪ್ಪ
ಸುಲಭತೆಯ ಮರೆಯಬೇಡೆಂದಂಬಕಾಂಬುವಂ ತುಂಬಿ ಕಳುಹಿಸಿಕೊಂಡರು ೮೨

ಗಿರಿಜೆಸಹಿತೀಶ್ವರಂ ವೃಷಪತಿಯನೇರಲಂ
ದಿರದೆ ಹರಿಯಜ ಸುರೇಂದ್ರಾದಿಗಳ್ ತಂತಮ್ಮ
ವರವಾಹನಂಗಳುಮನೇರಿ ಶಿವನೊಡನೆ ಬರುತಿರಲಾಗ ಸಂಭ್ರಮದೊಳು

ಕೊಳ್ಳುವ ಗಂಧ ಆಭರಣಗಳನ್ನು ತಮ್ಮ ತಮ್ಮ ಶರೀರದಲ್ಲಿ ಧರಿಸಿ ಎಲ್ಲರೂ ಸಂತೋಷ ದಿಂದ ಕರ್ಪೂರ ತಾಂಬೂಲಗಳನ್ನು ಪಡೆದು ಈಶ್ವರನ ಒಡ್ಡೋಲಗಕ್ಕೆ ಬಂದು ನಿಂತಿದ್ದ ಸಮಯದಲ್ಲಿ, ೮೧. ದರ್ಬಾರಿನಿಂದ ಎದ್ದು ಈಶ್ವರನು ಪರ್ವತರಾಜನ ಅರಮನೆಗೆ ಬರಲು ಅವನು ಮಹಾಭಕ್ತಿಯಿಂದ ಅಳಿಯನಿಗೆ ಉತ್ಕೃಷ್ಟವಾದ ವಸ್ತುಗಳನ್ನು ಕಾಣಿಕೆ ಯಾಗಿ ಕೊಟ್ಟು, ತನ್ನ ಮಗಳಿಗೆ ಬಳುವಳಿಯನ್ನೂ ಕೆಲಸದಾಳುಗಳಾದ ಜಯೆ-ವಿಜಯೆ ಮೊದಲಾದ ಸಖೀಜನರನ್ನೂ ಅಮೂಲ್ಯವಾದ ವಸ್ತ್ರಾಭರಣಗಳನ್ನೂ ಕೊಟ್ಟು, ಎಲ್ಲ ಗಣಸಮೂಹಕ್ಕೂ ಸಂತೋಷದಿಂದ ಉಡುಗೊರೆಗಳನ್ನು ಕೊಟ್ಟು ಹಿಮವಂತನು ಎಲ್ಲರನ್ನೂ ಕಳುಹಿಸಿಕೊಟ್ಟನು. ೮೨. ಬೀಳ್ಕೊಡಲು ಬಂದ ಹಿಮವಂತ–ಮೇನೆಯರನ್ನು ಶಿವನು ಸಂದರ್ಭೋಚಿತವಾದ ಮಾತುಗಳನ್ನಾಡಿ ಕಳಿಸಿದನು. ಅನಂತರ ಅವರು ಪಾರ್ವತಿಯ ಪಾದಗಳಿಗೆ ನಮಸ್ಕರಿಸಿ ತಾಯೆ, ನಿನ್ನನ್ನು ಹೆತ್ತ ಪುಣ್ಯವೆಂಬ ಮರದ ಹಣ್ಣಿನಿಂದ ಇಂದು ಈಶ್ವರನು ನಮ್ಮ ಮನೆಗೆ ಬಂದನು. ಉಳಿದ ದೇವ–ದೇವತೆಗಳನ್ನು ನಾವು ನೋಡಿದೆವು. ಈ ರೀತಿಯಾದ ಅನುಗ್ರಹವನ್ನು ನಮ್ಮ ಮೇಲೆ ಯಾವಾ ಗಲೂ ಮರೆಯದೆ ಇರಿಸು ಎಂದು ಕಣ್ಣೀರನ್ನು ತುಂಬಿ ಬೀಳ್ಕೊಂಡರು. ೮೩. ಪಾರ್ವತೀ ಸಮೇತನಾಗಿ ಈಶ್ವರನು ನಂದಿಯನ್ನು ಏರಲು ವಿಷ್ಣು–ಬ್ರಹ್ಮ–ಇಂದ್ರನೇ ಮೊದ

CC-0. Jangamwadi Math Collection. Digitized by eGangotri

ಮೊರೆವ ಬಹುವಿಧವಾದ್ಯಘೋಷದಿಂ ಕೈಲಾಸ
ಪುರವ ಗುಡಿತೋರಣದ ವಿಭವದಿಂದೈದಿ ಸುರ
ತರುಣಿಯರ ಮಂಗಳಾರತಿಗಳಂ ನೋಡಿ ಮನ್ನಿಸುತೆ ಮನೆಯಂ ಪೊಕ್ಕನು ೮೩

ನಂದೀಶ ಮೊದಲಾದ ಸಕಲ ಗಣನಿಕರವಾ
ನಂದಿಸುತ್ತಿರಲಭವನಗಜೆಸಹವಾಗಿ ನಿಜ
ಮಂದಿರದೊಳೆಸೆವ ಸಿಂಹಾಸನದ ಮೇಲೆ ಕುಳ್ಳಿರ್ದು ಹರಿಯಜಮುಖ್ಯರ
ಛಂದದಿಂದುಡುಗೊರೆಯನಿತ್ತು ಬೀಳ್ಕೊಟ್ಟು ಮುನಿ
ವೃಂದವಂ ಕರುಣದಿಂ ಕಳುಪಿ ಕೈಲಾಸದೊಳ್
ಮಂದಾಕಿನೀಧರಂ ಪರಮಸಂತೋಷದಿಂದಿರುತಿರ್ದನುತ್ಸವದೊಳು ೮೪

ಸನ್ನಿಯಿಂದಾತ್ಮಶಕ್ತಿಯನೇ ಬಹಿಷ್ಕರಿಸಿ
ತನ್ನ ನಿಜಸುಖವನಿದಿರಿಟ್ಟು ಸಂಸ್ಕೃತಿಗಳಿಗ
ಭಿನ್ನವಾಗದೆ ತೋರಿ ನಾಡಾಡಿಗಳ ತೆರದೆ ನಾನಾ ವಿಲಾಸದಿಂದೆ
ಸನ್ನುತಮಹಾವಿಭವದಿಂದೆ ಭೃಂಗಿಯ ನಾಟ್ಯ
ದುನ್ನತಿಯ ನೋಡಿ ಕರುಣಾಕಟಾಕ್ಷದೊಳೈದೆ
ಮನ್ನಿಸುತೆ ಪಂಪಾವಿರೂಪಾಕ್ಷನೊಪ್ಪಿದಂ ಕೈಲಾಸದರಮನೆಯೊಳು ೮೫

ಲಾದವರು ತಮ್ಮ ತಮ್ಮ ವಾಹನಗಳನ್ನೇರಿ ಶಿವನೊಡನೆ ಬರುತ್ತಿದ್ದರು. ಆಗ ಸಂಭ್ರಮದಿಂದ ವಾದ್ಯಗಳು ನಾನಾ ವಿಧವಾದ ಶಬ್ದಗಳಿಂದ ಮೊಳಗುತ್ತಿರಲು ಕೈಲಾಸಪಟ್ಟಣದ ಬಾವುಟ-ತೋರಣದ ವೈಭವದಿಂದ ಬಂದು ದೇವತಾಸ್ತ್ರೀಯರ ಮಂಗಳಾರತಿಗಳನ್ನು ನೋಡಿ ಸಂತೋಷಿಸುತ್ತಾ ಅರಮನೆಯನ್ನು ಹೊಕ್ಕನು. ೮೪. ನಂದಿ ಮೊದಲಾದ ಎಲ್ಲ ಗಣಸಮೂಹವು ಆನಂದಪಡುತ್ತಿರಲು, ಶಿವನು ಪಾರ್ವತೀ ಸಮೇತನಾಗಿ ತನ್ನ ಅರಮನೆಯಲ್ಲಿ ಪ್ರಕಾಶಿಸುವ ಸಿಂಹಾಸನದ ಮೇಲೆ ಕುಳಿತು, ವಿಷ್ಣು-ಬ್ರಹ್ಮ ಮೊದಲಾದ ಎಲ್ಲರಿಗೂ ಅವರವರ ಸ್ಥಾನಕ್ಕೆ ತಕ್ಕಂತೆ ಉಡುರೆಗೊಗಳನ್ನು ಕೊಟ್ಟು ಬೀಳ್ಕೊಟ್ಟನು. ಮುನಿಸಮೂಹವನ್ನು ಕರುಣೆಯಿಂದ ಕಳುಹಿಸಿಕೊಟ್ಟು ಗಂಗಾಧರನು ಕೈಲಾಸದಲ್ಲಿ ಬಹಳ ಸಂತೋಷ ಸಂಭ್ರಮಗಳಿಂದ ಇರುತ್ತಿದ್ದನು. ೮೫. ಪ್ರೀತಿಯಿಂದ ಆತ್ಮಶಕ್ತಿಯನ್ನೆ ಪ್ರಕಟಗೊಳಿಸಿ ತನ್ನ ಆತ್ಮಸುಖವನ್ನೆ ಎದುರಿಟ್ಟು ಸಂಸ್ಕೃತಿಗಳಿಗೆ ಭಿನ್ನನಾಗದಂತೆ ಕಾಣಿಸಿಕೊಂಡು ಜನಸಾಮಾನ್ಯರ ರೀತಿಯಲ್ಲಿ ನಾನಾ ವಿಲಾಸದಿಂದ, ಹೊಗಳಿಕೆಗೆ ಪಾತ್ರವಾದ ವೈಭವದಿಂದ, ಭೃಂಗಿಯ ನಾಟ್ಯದ ಔನ್ನತ್ಯವನ್ನು ನೋಡಿ ಕಣ್ಣಿನ ನೋಟದಿಂದಲೇ ಮೆಚ್ಚಿಗೆಯನ್ನು ಸೂಚಿಸುತ್ತ ಕೈಲಾಸದ ಅರಮನೆಯಲ್ಲಿ ಪಂಪಾವಿರೂಪಾಕ್ಷನು

CC-0. Jangamwadi Math Collection. Digitized by eGangotri

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೮೬

**ಮೂವತ್ತೇಳನೆಯ ಸಂಧಿ ಸಂಪೂರ್ಣ**

ಪ್ರಕಾಶಿಸುತ್ತಿದ್ದನು. ೮೬. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೇಳನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತೆಂಟನೆಯ ಸಂಧಿ

ಸೂಚನೆ : ಶಿವನ ವೀರ್ಯವನಗ್ನಿ ಧರಿಸಲದರಿಂದೊಗೆದು
ಶಿವಕುಮಾರಂ ಸಕಲಸುರಸೈನ್ಯಪತಿಯಾಗಿ
ಶಿವನಾಜ್ಞೆಯಿಂ ತಾರಕಾಸುರನ ಮೇಲಿರದೆ ದಂಡೆತ್ತಿ ನಡೆತಂದನು

ಹೊರೆಗಾಣದಿಹ ನೇಹಗಲಹದೆ ಮೊಗಂಗೊಡದ
ಗಿರಿಸುತೆಯ ಬೆಂಗಡೆಗೆ ಸೊಪ್ಪುಳಾಗದ ತೆರದೊ
ಳಿರದೆ ಬಳಿಸಂದು ತನ್ನಯನಾಬ್ಜಮಂ ನಿಜಾಂಜಲಿಯಿಂದೆ ಬಾಸಣಿಸಲು
ಗಿರಿಜೆ ನಿಜಸಖಿಯೆಂದು ಬೇಡಿತಂ ನಿನ್ನಾಣೆ
ಯರವರಸದೀವೆನುಗಿಯೆನಲಾಣೆಗೊಳಗೆನಿಸಿ
ಕರವನುಗಿದಾಲಿಂಗನಂಗೆಯ್ವ ಪಂಪಾವಿರೂಪಾಕ್ಷ ಸಲಹೆಮ್ಮನು ೧

ಆಲಿಸೈ ಸಿದ್ಧರಾಮೇಶ ಕೈಲಾಸದೊಳ್
ಭಾಳಲೋಚನನಗಜೆಯೊಡನೆ ಮುದದಿಂ ಸುರತ
ಕೇಳಿಯಿಂದಿರುತಿರಲ್ಕತ್ತಲಿಂದ್ರಾದಿ ನಿರ್ಜರರಜನ ಪೊರೆಗೆ ಬಂದು
ಪೇಳೆ ತಾರಕನುರುಬೆಯಂ ಕೇಳ್ದು ಚಿಂತೆಯಂ
ತಾಳಿ ದಿವಜರ್ವೆರಸಿ ಹರಿಯೆಡೆಗೆ ಬಂದು ಕಂ
ಡಾಳೋಚನಂಗೈದರಸುರನಟ್ಟುಳಿಗೇನುಪಾಯಮಂ ಕಾಣ್ಬೆವೆಂದು ೨

ಸೂಚನೆ : ಶಿವನವೀರ್ಯವನ್ನು ಅಗ್ನಿಯು ಧರಿಸಲು ಅದರಿಂದ ಹುಟ್ಟಿ ಈಶ್ವರನ ಮಗನು ಎಲ್ಲ ದೇವಸೈನ್ಯಕ್ಕೂ ನಾಯಕನಾಗಿ ಶಿವನ ಆಜ್ಞೆಯಂತೆ ತಾರಕಾಸುರನ ಮೇಲೆ ದಂಡೆತ್ತಿ ಹೊರಟನು. ೧. ಲಘುವಾದ ಪ್ರೇಮಕಲಹದಿಂದ ಮುಖ ಕೊಡದೆ ಇರುವ ಪಾರ್ವತಿಯ ಬೆನ್ನಹಿಂದೆ ಶಬ್ದವಾಗದಂತೆ ಸಮೀಪಿಸಿ ಆಕೆಯ ಮುಖಕಮಲ ವನ್ನು ತನ್ನ ಕೈಗಳಿಂದ ಮುಚ್ಚಲು ಪಾರ್ವತಿಯು ತನ್ನ ಸಖಿಯೆಂದು ತಿಳಿದು, ನಿನ್ನಾಣೆ ಯಾಗಿಯೂ ನೀನು ಕೇಳಿದ್ದನ್ನು ತಡಮಾಡದೆ ಕೊಡುತ್ತೇನೆ, ಕೈಬಿಡು ಎನ್ನಲು ಆಣೆಗೆ ಒಳಗುಮಾಡಿ ಕೈತೆಗೆದು ಆಲಿಂಗಿಸಿಕೊಳ್ಳುವ ಪಂಪಾವಿರೂಪಾಕ್ಷನೇ ನಮ್ಮನ್ನು ಕಾಪಾಡು. ೨. ಕೇಳಯ್ಯ ಸಿದ್ಧರಾಮ, ಕೈಲಾಸದಲ್ಲಿ ಶಿವ ಪಾರ್ವತಿಯೊಡನೆ ಸಂತೋಷ ದಿಂದ ಸಂಭೋಗಸುಖದಲ್ಲಿ ಇರುತ್ತಿರಲು ಇತ್ತಕಡೆ ಇಂದ್ರ ಮೊದಲಾದ ದೇವತೆಗಳು ಬ್ರಹ್ಮನ ಬಳಿಗೆ ಬಂದು ತಾರಕಾಸುರನ ಕ್ರೂರತನವನ್ನು ಹೇಳಿದರು. ಅದನ್ನು ಕೇಳಿ ಬ್ರಹ್ಮನು ಚಿಂತೆಯಿಂದ ದೇವತೆಗಳೊಡಗೂಡಿ ವಿಷ್ಣುವಿನ ಬಳಿಗೆ ಬಂದು, ಅವನನ್ನು

CC-0. Jangamwadi Math Collection. Digitized by eGangotri

ಗಿರಿಜೆಯೊಡನಭವನಿರ್ಪಂ ಸುರತಕೇಳಿಯೊಳ್
ತರುಣನಾಕೆಯ ಗರ್ಭದೊಳ್ ಜನಿಸಿದೊಡೆ ತಮ್ಮ
ನಿರಗೊಡಂ ತಾರಕಾಸುರನಿಂದೆ ನೂರ್ಮಡಿಯುಪದ್ರವಂ ಮಾಳ್ಪನದನು
ಪರಿಹರಿಸಿ ಬೇರೊಂದುಪಾಯದಿಂದೀಶ್ವರನ
ವರವೀರ್ಯದಿಂದೆ ಸುತನಪ್ಪಂತೆ ಮಾಳ್ಪೆವೆಂ
ದಿರದೆ ನಿರ್ಧರಿಸಿ ಶಿವನಂ ಕುರಿತು ಹರಿಮುಖ್ಯರೆಸಗಿದರ್ ಘನತಪವನು ೩

ಹರನರಿದು ಕರುಣದಿಂ ಸುರರೆಡೆಗೆ ನಡೆತಂದು
ವರವದೇಂ ಬೇಡಿಮೆನೆ ಕಣ್ದೆರೆದು ಕಂಡರಾ
ಪರಶಿವನ ದಿವ್ಯಮೂರ್ತಿಯನೆದ್ದು ಭಯಭರಿತ ಭಕ್ತಿಯಿಂದೆರಗಿ ನಿಂದು
ಗಿರಿಸುತೆಯ ಗರ್ಭದೊಳ್ ಸುತರುದಿಸದಂತೆ ತವ
ವರವೀರ್ಯದಿಂದಲುದ್ಭವಿಸಿ ತಾರಕನ ಸಂ
ಹರಿಪಂತೆ ಕರುಣಿಸೆನಲಂತೆಗೈದಪೆವೆಂದು ಕೈಲಾಸಮಂ ಪೊಕ್ಕನು ೪

ಶಿವೆ ಕಂಡು ಕೇಳ್ದಳೆನ್ನೆಡೆಯಿಂದೆ ಪೋಗಿರ್ದ
ವಿವರವೇನೆನೆ ಶಂಕರಂ ಪೇಳ್ದನಖಿಳ ಸುರ
ನಿವಹಮೆನ್ನಂ ಕುರಿತು ತಪಿಸಲ್ಕೆ ಮೆಚ್ಚಿ ವರವೇಂ ಬೇಡಿಮೆಂದೆನಲ್ಕೆ

ಕಂಡು ರಾಕ್ಷಸನ ಪೀಡೆಗೆ ಏನುಪಾಯ ಮಾಡೋಣವೆಂದು ಆಲೋಚಿಸಿದನು. ೩. ಗಿರಿಜೆಯ ಜೊತೆಯಲ್ಲಿ ಶಿವನು ಸುರತಕೇಳಿಯಲ್ಲಿದ್ದಾನೆ. ಆಕೆಯ ಬಸಿರಿನಲ್ಲಿ ಮಗನು ಹುಟ್ಟಿದರೆ ನಮ್ಮನ್ನು ಇರಗೊಡುವುದಿಲ್ಲ. ತಾರಕಾಸುರನಿಗಿಂತ ನೂರುಪಟ್ಟು ಹೆಚ್ಚು ತೊಂದರೆಯನ್ನು ಮಾಡುತ್ತಾನೆ. ಅದನ್ನು ತಡೆದು ಬೇರೊಂದು ಉಪಾಯದಿಂದ ಈಶ್ವರನ ಶ್ರೇಷ್ಠವಾದ ವೀರ್ಯದಿಂದ ಮಗನಾಗುವಂತೆ ಮಾಡುತ್ತೇನೆ ಎಂದು ನಿರ್ಧಾರ ಮಾಡಿ ವಿಷ್ಣು ಮೊದಲಾದವರು ಈಶ್ವರನನ್ನು ಕುರಿತು ಘೋರತಪಸ್ಸನ್ನು ಮಾಡಿದರು. ೪. ಈಶ್ವರನು ಇದನ್ನು ತಿಳಿದು ಕರುಣೆಯಿಂದ ದೇವತೆಗಳ ಬಳಿಗೆ ಬಂದನು. ವರವನ್ನು ಕೇಳಿ ಎನ್ನಲು ಕಣ್ಣಿಟ್ಟು ಪರಮೇಶ್ವರನ ದಿವ್ಯರೂಪವನ್ನು ನೋಡಿ ಭಯಭರಿತ ಭಕ್ತಿಯಿಂದ ನಮಸ್ಕರಿಸಿ ನಿಂತು ಗಿರಿಜೆಯ ಹೊಟ್ಟೆಯಲ್ಲಿ ಮಗನಾಗದಂತೆಯೂ, ನಿಮ್ಮ ವೀರ್ಯದಿಂದ ಮಗನಾಗಿ ತಾರಕಾಸುರದನ್ನು ಕೊಲ್ಲುವಂತೆಯೂ ಕರುಣಿಸಬೇಕೆಂದು ಕೇಳಿದರು. ಹಾಗೆಯೆ ಮಾಡುತ್ತೇನೆ ಎಂದು ಶಿವನು ಕೈಲಾಸಕ್ಕೆ ಹೋದನು. ೫. ಪಾರ್ವತಿಯು ಶಿವನನ್ನು ನೋಡಿ ನನ್ನನ್ನಗಲಿ ಹೋಗಿದ್ದ ಕಾರಣವೇನೆಂದು ಕೇಳಿದಳು. ಎಲ್ಲ ದೇವತೆಗಳ ಸಮೂಹವೂ ನನ್ನನ್ನು ಕುರಿತು ತಪಸ್ಸು ಮಾಡಿದರು, ಅದಕ್ಕೆ ಮೆಚ್ಚಿ ವರವೇನು ಕೇಳಿ

CC-0. Jangamwadi Math Collection. Digitized by eGangotri

ಶಿವೆಯುದರದೊಳ್ ತನುಜರುದಿಸದಂತೀಯೆನಲ್
ತವೆಕೊಟ್ಟು ಬಂದೆನೆನಲೆನಗಿಂತು ಗೈದರೇ
ದಿವಿಜಸಂಕುಲಕೆ ನಿಸ್ಸಂತಾನವಾಗಲೆಂದಗಜಾತೆ ಶಾಪಿಸಿದಳು ೫

ಇಂತು ದಿವಜರ್ಗೆ ಶಾಪವನಿತ್ತು ಶಿವೆ ತನಗೆ
ಸಂತಾನವಿಲ್ಲದಾಯ್ತೆಂದು ಮನದೊಳ್ ಬಹಳ
ಚಿಂತೆಯಿಂದಿರುತಿರಲ್ಕಗಜೆಯಂ ಸಂತಯಿಸಿ ನಾನಾ ವಿನೋದದಿಂದೆ
ಸಂತಸದೆ ನಾನಾ ಪ್ರಕಾರಸ್ವರೂಪದಿಂ
ಸಂತತಂ ಕ್ರೀಡಿಸುತ್ತಿರ್ದನಗಜೆಯೊಳಮರ
ಸಂತತಿಗೆ ಕೊಟ್ಟ ವರಕಾಗಿ ಗಿರಿಜಾವರಂ ದಿವ್ಯಸಾಹಸ್ರವರ್ಷಂ ೬

ಪರಮತಪದಿಂದೆ ಮೆಚ್ಚಿಸಿ ವರಂಬಡೆದುದಂ
ಹರನೆಮ್ಮವಂ ಮರೆದು ಗಿರಿಜೆಯೊಡನಿರ್ದಪಂ
ದುರುಳ ರಕ್ಕಸನೆಮ್ಮನಿರಲೀಯನೆಮ್ಮ ದೂರಂ ಪೇಳ್ವರಿಲ್ಲೆನುತ್ತೆ
ಸುರಕುಲಂ ಯೋಚಿಸುತ್ತಗ್ನಿಯಂ ಕರೆದು ನೀಂ
ಹರನೆಡೆಗೆ ಪೋಗಿ ಬಿನ್ನಯಿಸೆನಲ್ ಭೀತಿಯಿಂ
ಸ್ಮರನುರಿದುದಂ ಕಂಡು ಕಂಡಿಂತು ಪೇಳ್ವರೇ ಪೋಗಲಂಜುವೆನೆಂದನು ೭

ಅಂಜಲೇಕೈ ಶಿವಂ ತಪ್ಪಿಲ್ಲದಾರನುಂ
ಭಂಜಿಸುವನಲ್ಲ ಕರುಣದೊಳಖಿಳ ನಿರ್ಜರರ
ಪುಂಜಮಂ ಕಾಯಬೇಕೆಂದನಿಬರುಂ ದೈನ್ಯವಚನದಿಂ ಬೇಡಿಕೊಳಲು

ಎನ್ನಲು ಪಾರ್ವತಿಯ ಹೊಟ್ಟೆಯಲ್ಲಿ ಮಕ್ಕಳಾಗದಂತೆ ಬೇಡಿದರು. ಅದನ್ನು ಕೊಟ್ಟು ಬಂದೆ ಎಂದು ಶಿವನು ಹೇಳಿದನು. ನನಗೆ ಈ ರೀತಿ ಮಾಡಿದರೆ ? ಈ ದೇವತೆಗಳಿಗೆ ಮಕ್ಕಳಾಗದೆ ಇರಲಿ ಎಂದು ಪಾರ್ವತಿಯು ಶಾಪಕೊಟ್ಟಳು. ೬. ಈ ರೀತಿ ದೇವತೆಗಳಿಗೆ ಶಾಪಕೊಟ್ಟು ಪಾರ್ವತಿ ತನಗೆ ಮಕ್ಕಳಿಲ್ಲದಂತೆ ಆಯಿತೆಂದು ಮನಸ್ಸಿನಲ್ಲಿ ಬಹಳ ಚಿಂತೆ ಪಡುತ್ತಿದ್ದಳು. ದೇವತೆಗಳಿಗೆ ಕೊಟ್ಟ ವರಕ್ಕಾಗಿ ಶಿವನು ಪಾರ್ವತಿಯನ್ನು ನಾನಾ ರೀತಿಯ ವಿನೋದಗಳಿಂದ ಸಂತೈಸಿ, ನಾನಾ ರೀತಿಯ ಸ್ವರೂಪದಿಂದ ದೇವ ಸಾವಿರ ವರ್ಷಗಳವರೆಗೆ ಪಾರ್ವತಿಯೊಡನೆ ಕ್ರೀಡಿಸುತ್ತಿದ್ದನು. ೭. ಅವನನ್ನು ಘೋರ ವಾದ ತಪಸ್ಸಿನಿಂದ ಮೆಚ್ಚಿಸಿ ವರವನ್ನು ಪಡೆದುದನ್ನು ಮರೆತು ಶಿವನು ಪಾರ್ವತಿಯೊಡ ನಿದ್ದಾನೆ. ದುಷ್ಟ ರಾಕ್ಷಸನು ನಮ್ಮನ್ನು ಜೀವದಿಂದಿರಲು ಬಿಡುವುದಿಲ್ಲ. ನಮ್ಮ ದೂರನ್ನು ಹೇಳುವವರೇ ಇಲ್ಲ ಎಂದು ದೇವತೆಗಳು ಚಿಂತಿಸುತ್ತ ಅಗ್ನಿಯನ್ನು ಕರೆದು ನೀನು ಈಶ್ವ ರನ ಬಳಿಗೆ ಹೋಗಿ ಇದನ್ನು ವಿಜ್ಞಾಪಿಸು ಎಂದರು. ಅವನು ಅಂಜಿ ಮನ್ಮಥನು ಸುಟ್ಟು ಹೋದುದನ್ನು ನೋಡಿ ನೋಡಿ ಈ ರೀತಿ ಹೇಳಬಹುದೇ ? ಅವನ ಬಳಿಗೆ ಹೋಗಲು ಹೆದರುತ್ತೇನೆ ಎಂದನು. ೮. ಅಂಜುವುದೇಕೆ ? ಶಿವನು ತಪ್ಪಿಲ್ಲದೆ ಯಾರನ್ನೂ ನಾಶ ಮಾಡುವುದಿಲ್ಲ. ಕರುಣೆಯಿಂದ ಎಲ್ಲ ದೇವಸಮೂಹವನ್ನೂ ಕಾಪಾಡು ಎಂದು ಎಲ್ಲರೂ

CC-0. Jangamwadi Math Collection. Digitized by eGangotri

ಅಂಜುವೆಂ ಸರ್ವಥಾ ನಾನೆನಲ್ ಕೇಳ್ಕೆ ಧ
ನಂಜಯನೆ ನಿನಗಾದ ಸುಖದುಃಖವೆಮಗೆ ಮೃ
ತ್ಯುಂಜಯನ ಪೊರೆಗೆ ಪೋಗೆನುತೆ ನಂಬುಗೆಯಿತ್ತು ಕಳುಪಿದರ್ ಸಕಲ ಸುರರು ೮

ಬಂದನಾ ಪಾವಕಂ ಸುರರ ನಂಬುಗೆವಿಡಿದು
ಮಂದರಾಚಲದೊಳೀಶಂ ತುಹಿನಗಿರಿರಾಜ
ನಂದನೆಯ ಕೂಟದಿಂದಿರ್ಪ ಸೆಜ್ಜೆಯ ಮನೆಗೆ ಪಾರಿವದ ಪಕ್ಷಿಯಾಗಿ
ನಿಂದು ಜಾಳಂಧರದೆ ನೋಡೆ ಗಿರಿಶಂ ಲಜ್ಜೆ
ಯಿಂದೆ ಸುರತವನುಳಿದು ಬೇಗಲಾ ಪಕ್ಕಿಯುಂ
ತಂದದರ ವದನದೊಳ್ ತನ್ನ ರೇತಸ್ಸನಿಂಬಿಟ್ಟನದನೇನೆಂಬೆನು ೯

ಶಿವನ ವೀರ್ಯವನಗ್ನಿ ಧರಿಸಿ ಬರಲಾಗ ಸುರ
ನಿವಹಕಾದುದು ಪುರುಷಗರ್ಭಂಗಳಾ ಕ್ಷಣಂ
ತವೆ ಮಿಸೆಗಡ್ಡಂಗಳುದುರ್ದುವಾ ಮುಖಮಂಡಲಂಗಳುಂ ಬೆಳ್ಪಾದುವು
ನವೆದರೀಪರಿ ದಿವ್ಯಸಾಹಸ್ರವರ್ಷಮುಂ
ಹವಿಯುನುರೆ ಕೇಳ್ದರೀ ಪುರುಷಗರ್ಭಂ ಪೋಪ
ವಿವರವೇನೆನೆ ಶಂಭುಮಂ ಕೇಳ್ವೆನೆಂದವಂ ಮಾಡಿದಂ ಘನತಪವನು ೧೦

ಪರಶಿವಂ ಮೆಚ್ಚಿ ಪಾವಕನೆಡೆಗೆ ನಡೆತಂದು
ವರವದೇಂ ಬೇಡೆನಲ್ ಕಣ್ದೆರೆದು ನೋಡಿ ಶಂ
ಕರ ನಿನ್ನ ವೀರ್ಯಮುಂ ತಾಂ ಧರಿಸಿದುದರಿಂದೆ ಸಕಲ ವೃಂದಾರಕರ್ಗೆ

ದೈನ್ಯವಾದ ಮಾತುಗಳಿಂದ ಬೇಡಿಕೊಂಡರು.ನಿಜವಾಗಿಯೂ ನಾನು ಹೆದರುತ್ತೇನೆ ಎಂದು ಅಗ್ನಿಯು ಹೇಳಲು. ಧನಂಜಯನೇ (ಅಗ್ನಿ) ನಿನಗಾದ ಸುಖದುಃಖವೆಲ್ಲದರಲ್ಲಿಯೂ ನಮಗೂ ಪಾಲು ಇರಲಿ. ನೀನು ಮೃತ್ಯುಂಜಯನಾದ ಶಿವನ ಬಳಿಗೆ ಹೋಗು ಎನ್ನುತ್ತ ಎಲ್ಲ ದೇವತೆಗಳೂ ನಂಬಿಕೆ ಕೊಟ್ಟು ಕಳಿಸಿದರು. ೯. ದೇವತೆಗಳ ನಂಬಿಕೆಯ ಆಸರೆಯಿಂದ ಮಂದರಪರ್ವತದಲ್ಲಿ ಈಶ್ವರನು ಪಾರ್ವತಿಯ ಸಂಗದಲ್ಲಿ ಇರುವ ಮಲಗುವ ಮನೆಗೆ ಪಾರಿವಾಳದ ಹಕ್ಕಿಯ ರೂಪದಲ್ಲಿ ಅಗ್ನಿಯು ಪ್ರವೇಶಿಸಿದನು. ಕಿಟಕಿಯ ಕಂಡಿಗಳಿಂದ ನೋಡುತ್ತಿರಲು ಈಶ್ವರನು ನಾಚಿಕೆಯಿಂದ ಸಂಭೋಗವನ್ನು ಬಿಟ್ಟು ಬೇಗನೆ ಆ ಹಕ್ಕಿಯನ್ನು ತಂದು ಅದರ ಬಾಯಲ್ಲಿ ತನ್ನ ವೀರ್ಯವನ್ನು ವಿಸರ್ಜಿಸಿದನು. ೧೦. ಶಿವನ ವೀರ್ಯವನ್ನು ಧರಿಸಿ ಅಗ್ನಿಯು ಬರಲು ಆಗ ಎಲ್ಲ ದೇವತೆಗಳ ಸಮೂಹಕ್ಕೂ ಪುರುಷ ಗರ್ಭವಾಯಿತು. ಆ ತಕ್ಷಣ ಗಡ್ಡ-ಮೀಸೆಗಳು ಉದುರಿ ಹೋದವು, ಮುಖಗಳು ಬಿಳಿಚಿಕೊಂಡವು. ಈ ರೀತಿ ದೇವ ಸಾವಿರ ವರ್ಷದವರೆಗೆ ಅವರೆಲ್ಲರೂ ನವೆದರು. ಈ ಪುರುಷಗರ್ಭ ಹೋಗುವ ರೀತಿ ಏನು ಎಂದು ಅಗ್ನಿಯನ್ನು ಕೇಳಲು ಅವನು ಶಿವನನ್ನು ಕೇಳುತ್ತೇನೆ ಎಂದು ಘೋರವಾದ ತಪಸ್ಸನ್ನಾಚರಿಸಿದನು. ೧೧. ತಪಸ್ಸಿಗೆ ಪರಶಿವನು ಮೆಚ್ಚಿ ಅಗ್ನಿಯ ಬಳಿಗೆ ಬಂದು ವರವನ್ನು ಕೇಳೆಂದನು. ಅವನು ಕಣ್ಣನ್ನು ಬಿಟ್ಟು ನೋಡಿ

CC-0. Jangamwadi Math Collection. Digitized by eGangotri

ಪುರುಷಗರ್ಭಂಗಳಾದುವು ಕರುಣದಿಂದದಂ
ಪರಿಹರಿಸಬೇಳ್ಪುದೆನೆ ಮೇರುವಿನ ಪೊರೆಯೊಳಿಹ
ಶರವಣದ ಗಂಗೆಯೊಳಗಿರಿಸೆಂದು ಹರನಗ್ನಿಗೊರೆದು ನಿರವಯವಾದನು ೧೧

ಇತ್ತಲೀ ಪಾವಕಂ ಶರವಣಕೆ ನಡೆತಂದು
ಚಿತ್ತಜಾರಾತಿಯ ನಿರೂಪದಿಂ ಧರಿಸಿದ ಮ
ಹತ್ತಾದ ವೀರ್ಯವಂ ತದ್ಗಂಗೆಯೊಳ್ ಬಿಡಲ್ ಸಕಲ ದೇವವ್ರಾತಕೆ
ಪೊತ್ತ ಗರ್ಭಂಗಳಿರದಡಗಿ ಪೋದುವು ಬಳಿ
ಕ್ಕತ್ತಲಾ ಗಂಗೆಯೊಳಗಿದ್ದ ರೇತಸ್ಸು ಕುದಿ
ವುತ್ತಿರದೆ ಪೊರವಟ್ಟು ತತ್ತಟದೊಳುಜ್ವಲಿಸುತಿರ್ದುದದನೇನೆಂಬೆನು ೧೨

ಗಂಗಾನದೀತಟಕೆ ನಡೆತಪ್ಪ ಷಟ್ಕೃತ್ತಿ
ಕಾಂಗನೆಯರೀ ಮಹಾಜ್ವಾಲೆಯೆತ್ತಣದೆಂದು
ಹಿಂಗದೀ ವೀರ್ಯದೆಡೆಗೈತಂದು ನೋಡುತಿರಲಾ ಸ್ತ್ರೀಯರಂ ಕಾಣುತೆ
ಪೊಂಗುತೊಡನೊಡನೆ ಘನಗಾಢದಿಂದವರ ಗ
ರ್ಭಂಗಳಂ ಬಿಡದೆ ಭೇದಿಸಿ ಬಲಿಯಲಾಕ್ಷಣಂ
ಕಂಗೆಟ್ಟು ಕಾಂತೆಯರ್ ಶಿಶುಗಳಂ ಪಡೆದಿರಿಸಿ ಪೋದರತಿವೇಗದಿಂದೆ ೧೩

ಮಿಕ್ಕ ರೇತಸ್ಸು ಮಿಗೆ ಗಗನಾಂತಪರ್ಯಂತ
ಮುಕ್ಕಿ ಸುರಗಿರಿಯ ಶಿಖರಮನೊಡೆದುಕೊಂಡು ನೆಲ
ಕೊಕ್ಕ ಭರಕೈದುಕೂಪಂ ಬೇರೆ ಬೇರೆ ಶತಯೋಜನದ ಘಾತದಿಂದೆ

ಶಿವನೆ, ನಿನ್ನ ವೀರ್ಯವನ್ನು ನಾನು ಧರಿಸಿದ್ದರಿಂದ ಎಲ್ಲ ದೇವತೆಗಳಿಗೂ ಪುರುಷಗರ್ಭಗಳಾದುವು, ಕರುಣೆಯಿಂದ ಅದನ್ನು ಹೋಗಲಾಡಿಸು ಎಂದು ಬೇಡಿಕೊಂಡನು. ಅದಕ್ಕೆ ಶಿವನು ಅಗ್ನಿಯನ್ನು ಕುರಿತು ಮೇರುಪರ್ವತದ ಪಕ್ಕದಲ್ಲಿರುವ ಜೊಂಡಿನ ಗಂಗೆಯಲ್ಲಿ ಅದನ್ನಿಡು ಎಂದು ಹೇಳಿ ಮಾಯವಾದನು. ೧೨. ಇತ್ತಲಾಗಿ ಅಗ್ನಿಯು ಶರವಣದ ಬಳಿಗೆ ಬಂದು ಈಶ್ವರನ ಅಪ್ಪಣೆಯಂತೆ ತಾನು ಧರಿಸಿದ್ದ ಮಹತ್ತರವಾದ ವೀರ್ಯವನ್ನು ಆ ನೀರಿನಲ್ಲಿ ಬಿಟ್ಟನು. ಆಗ ಎಲ್ಲ ದೇವತೆಗಳ ಸಮೂಹಕ್ಕೂ ಆಗಿದ್ದ ಪುರುಷ ಗರ್ಭಗಳು ಅಡಗಿಹೋದವು. ಬಳಿಕ ಆ ಜೊಂಡಿನ ಗಂಗೆಯಲ್ಲಿದ್ದ ವೀರ್ಯ ಕುದಿಯುತ್ತ ನೀರಿನಲ್ಲಿರದೆ ಹೊರಬಂದು ಆ ತೀರದಲ್ಲಿ ಸುಡುತ್ತಿತ್ತು. ೧೩. ಗಂಗಾನದೀತೀರಕ್ಕೆ ಬಂದ ಆರು ಮಂದಿ ಕೃತ್ತಿಕಾಸ್ತ್ರೀಯರು ಈ ಮಹಾಜ್ವಾಲೆ ಎಲ್ಲಿಯದು ಎಂದು ತಡೆಯದೆ ಆ ವೀರ್ಯದ ಬಳಿಗೆ ಬಂದು ನೋಡುತ್ತಿದ್ದರು, ಆ ಹೆಂಗಸರನ್ನು ನೋಡಿ ವೀರ್ಯ ಉಕ್ಕಿ ಒಡನೆಯೇ ಗಾಢವಾಗಿ ಅವರ ಗರ್ಭವನ್ನು ಹೊಕ್ಕು ಅಲ್ಲಿ ಬೆಳೆಯಿತು. ಆ ಸ್ತ್ರೀಯರು ಕಂಗೆಟ್ಟು ತಕ್ಷಣ ಮಕ್ಕಳನ್ನು ಹೆತ್ತು ಅಲ್ಲಿಯೇ ಇರಿಸಿ ಬಹಳ ತ್ವರೆಯಿಂದ ಹೊರಟುಹೋದರು. ೧೪. ಉಳಿದ ವೀರ್ಯ ಆಕಾಶದವರೆಗೆ ಉಕ್ಕಿ ಮೇರುಪರ್ವತದ ಶಿಖರವನ್ನು ಒಡೆದುಕೊಂಡು ಭೂಮಿಗೆ ಸಿಡಿದ ರಭಸಕ್ಕೆ ಸಾವಿರಯೋಜನದಷ್ಟು ವಿಶಾಲ

CC-0. Jangamwadi Math Collection. Digitized by eGangotri

ಸಕ್ಕಸಮನಾದುವಾ ಹರವೀರ್ಯಬಿಂದುಗಳ್
ಕಿಕ್ಕಿರಿದು ತುಂಬಿದುವು ಪಂಚಕೂಪಂಗಳೊಳ್
ಚೊಕ್ಕವಾಗಿರ್ದ ರಸವೈದು ಬಣ್ಣಂಗಳಿಂ ಕಣ್ಗೊಳಿಪುದೇವೇಳ್ವೆನು ೧೪

ಆ ಸಿದ್ಧರಸದ ಸೋಂಕಿಂದೆ ಸುರಗಿರಿತರುಲ
ತಾಸಮುದಯಂ ಪಕ್ಷಿಮೃಗವಾದಿಯಾದವುಂ
ಲೇಸಾದ ಕನಕಮಯತನುವಾದುವಾ ಮನುಜರಮರತ್ವಮಂ ಪಡೆದರು
ಆ ಸಮಯದೊಳ್ ಶಂಭು ಗಿರಿಜೆಯೊಡನೆಂದಂ ವಿ
ಲಾಸದಿಂ ನಿನಗೆ ಸುತರಾಗಿಹರ್ ನೋಳ್ಪವೆಂ
ದೋಸರಿಸದೈತಂದು ಚೀರುತಿಹ ಬಾಲರಂ ಕಂಡರ್ ಮಹೋತ್ಸವದೊಳು ೧೫

ಕಾಣುತಗಜಾತೆಯಾ ಬಾಲರಂ ತೆಗೆದೆತ್ತಿ
ಮಾಣದಮರ್ದಪ್ಪಲಾ ಭರಕೆ ಶಿಶುಗಳ ತನು
ಶ್ರೇಣಿಯೊಂದಾಗಲಾರ್ಮೊಗಗಳಂ ಮುಂಡಾಡಿ ತೊರೆದ ಮೊಲೆಯೂಡುತಿರಲು
ಪ್ರಾಣವೈತಂದಂತೆ ಹರುಷದಿಂ ಸಕಲ ಗೀ
ರ್ವಾಣತತಿ ಪುಷ್ಪವರ್ಷಂಗಳಂ ಕರೆಯಲಾ
ಸ್ಥಾಣುವದ್ರಿಜೆಕುಮಾರರ್ವೆರಸಿ ಕೈಲಾಸಮಂ ಪೊಕ್ಕನುತ್ಸವದೊಳು ೧೬

ಗಿರಿಜೆ ಕುವರನನೆತ್ತಿ ಮುದ್ದಾಡುತಿರಲಾಗ
ಗಿರಿಗಳಂ ಕಿತ್ತು ಚೆಂಡಾಡಲವ್ವಳಿಸುವಂ
ಶರಧಿಯೊಳ್ ನೀರಾಟವಾಡಲುಜ್ಜುಗಿಸುವಂ ಸಿಡಿಲ ತೊಡಲಂಗೈಸುವಂ

ವಾದ ಬೇರೆ ಬೇರೆಯಾದ ಬಾವಿಗಳು ಸರಿಸಮನಾಗಿ ಆದುವು. ಈಶ್ವರನ ವೀರ್ಯದ ತೊಟ್ಟುಗಳು ಆ ಐದು ಬಾವಿಗಳಲ್ಲಿಯೂ ತುಂಬಿ ತುಳುಕಾಡಿದುವು. ಶುದ್ಧವಾಗಿದ್ದ ಆ ರಸ ಐದು ಬಣ್ಣಗಳಿಂದ ಶೋಭಿಸುತ್ತಿತ್ತು, ೧೫. ಆ ಸಿದ್ಧರಸ ಸೋಕಿದೊಡನೆ ಮೇರು ಪರ್ವತದ ಗಿಡ-ಮರಗಳು ಪಕ್ಷಿ-ಪ್ರಾಣಿಗಳೆಲ್ಲ ಉತ್ತಮವಾದ ಬಂಗಾರಮಯ ಶರೀರ ವನ್ನು ಪಡೆದವು, ಅಲ್ಲಿದ್ದ ಜನರು ದೇವತ್ವವನ್ನು ಪಡೆದರು, ಆ ಸಮಯದಲ್ಲಿ ಶಿವನು ಸಂತೋಷದಿಂದ ಪಾರ್ವತಿಯನ್ನು ಕುರಿತು, ನಿನಗೆ ಮಕ್ಕಳಾಗಿದ್ದಾರೆ ನೋಡೋಣ ವೆಂದು ತಡಮಾಡದೆ ಬಂದು ಅರಚುತ್ತಿದ್ದ ಬಾಲಕರನ್ನು ಉತ್ಸಾಹದಿಂದ ನೋಡಿದರು. ೧೬. ಗಿರಿಜೆ ಆ ಬಾಲಕರನ್ನು ನೋಡಿದೊಡನೆ ಎತ್ತಿಕೊಂಡು ಬಿಡದೆ ತಬ್ಬಿಕೊಳ್ಳಲು ಆ ರಭಸಕ್ಕೆ ಮಕ್ಕಳ ಶರೀರಗಳು ಒಂದಾದುವು. ಆರು ಮುಖಗಳನ್ನು ಮುದ್ದಾಡಿ ಹಾಲು ತುಂಬಿದ ಮೊಲೆಯನ್ನು ಊಡಿದಳು, ಆಗ ಪ್ರಾಣ ಬಂದಂತೆ ಸಂತೋಷದಿಂದ ಎಲ್ಲ ದೇವತಾಸಮೂಹ ಹೂಮಳೆಗರೆಯಿತು. ಆಗ ಶಿವನು ಪಾರ್ವತಿ ಹಾಗೂ ಮಗನೊಡನೆ ಸಂತೋಷದಿಂದ ಕೈಲಾಸಕ್ಕೆ ಹೋದನು. ೧೭. ಪಾರ್ವತಿ ಮಗನನ್ನೆತ್ತಿ ಮುದ್ದಾಡು ತ್ತಿರಲು ಆಗ ಸುಕುಮಾರನು ಪರ್ವತಗಳನ್ನು ಕಿತ್ತು ಚೆಂಡಾಟವಾಡಲು ಮೇಲೆರಗುವನು, ಸಮುದ್ರದಲ್ಲಿ ನೀರಾಟವಾಡಲು ತೊಡಗುವನು, ಸಿಡಿಲನ್ನು ತೊಟ್ಟುಕೊಳ್ಳಲು ಆಸೆ

CC-0. Jangamwadi Math Collection. Digitized by eGangotri

ತರಣಿ ಚಂದ್ರಮರ ಬಿಂಬಂಗಳಂ ಕಾಣುತುಂ
ಹರುಷದಿಂ ಮಿಂಚುಬುಳುವೆಂದು ಕೈನೀಡುವಂ
ಧರೆ ನಭಂಗಳನುಗಿದು ತಾಟಡಕೆಯೆಂದಾಡಲೆಳಸುವಂ ಸುಕುಮಾರನು ೧೭

ಇಂತಪ್ಪ ಸುಕುಮಾರನಂ ನೋಡಿ ಗಿರಿಜೆ ಸುಖ
ಸಂತಸದೊಳೋಲಾಡುತಿರಲಾಗ ಗೀರ್ವಾಣ
ಸಂತತಿಗಳಂ ಕೂಡಿಕೊಂಡು ಹರಿಯಜರಿರದೆ ಕೈಲಾಸಕೈದಿ ಶಿವನ
ಮುಂತಡ್ಡಬಿದ್ದೆದ್ದು ಕೈಮುಗಿದು ನಿಂದು ಕಾ
ಮಾಂತಕನೆ ಕರುಣಿಪುದು ತಾರಕಾಸುರನಿಂದ
ನಂತಕಾಲಂ ನೊಂದೆವಿನ್ನಾದೊಡಂ ಕಾಯಬೇಕೆಂದು ಮೊರೆಯಿಟ್ಟರು ೧೮

ಆಲಿಸಿದನಭವನಮರರ ಮೊರೆಯನೆಮ್ಮ ನಿಜ
ಬಾಲನಂ ಕಳುಪಿ ತಾರಕನಡಗನಖಿಳ ಭೂ
ತಾಳಿಗಣಕೌತಣವನಿಕ್ಕಿಸುವೆನಂಜಬೇಡೆನುತವರ್ಗಭಯವಿತ್ತು
ಲೀಲೆಯಿಂ ಕುವರಂಗೆ ಯುವರಾಜಪಟ್ಟವಂ
ಭಾಳಲೋಚನನಿರದೆ ಕಟ್ಟಿ ಸಂತಸದೆ ಸುರ
ಜಾಲಮಂ ಕರೆದು ಕಾಣ್ಕೆಯನಿತ್ತು ನಮಿಸೆಂದು ನಿರವಿಸಿದನಾ ಕ್ಷಣದೊಳು ೧೯

ವಾಣೀಧವಾಚ್ಯುತರ್ ಮೊದಲಾದ ನಿರ್ಜರ
ಶ್ರೇಣಿ ನಡೆತಂದು ಕಾಣ್ಕೆಯನಿತ್ತು ಮೈಯಿಕ್ಕಿ
ಮಾಣದತಿಭಯಭರಿತಭಕ್ತಿಯಿಂ ಕುವರನಂ ಕೆಯ್ಯೆತ್ತಿ ಕೊಂಡಾಡುತೆ

ಪಡುವನು, ಸೂರ್ಯ ಚಂದ್ರರ ಬಿಂಬಗಳನ್ನು ನೋಡಿ ಸಂತೋಷದಿಂದ ಮಿಂಚುಹುಳು ವೆಂದು ಅದಕ್ಕೆ ಕೈ ಚಾಚುವನು, ಭೂಮಿ-ಆಕಾಶಗಳನ್ನು ಕಿತ್ತು ಒಂದಕ್ಕೊಂದು ಹೊಡೆಯುವುದು ಎಂದು ಆಡಲು ತೊಡಗುವನು. ೧೮. ಈ ರೀತಿಯಾಗಿ ಆಡುವ ಮಗನನ್ನು ನೋಡಿ ಗಿರಿಜೆ ಸುಖಸಂತೋಷದಲ್ಲಿ ಓಲಾಡುತ್ತಿರುವಾಗ ದೇವಸಮೂಹ ವನ್ನು ಕೂಡಿಕೊಂಡು ವಿಷ್ಣು-ಬ್ರಹ್ಮರು ಕೈಲಾಸಕ್ಕೆ ಬಂದರು. ಶಿವನ ಮುಂದೆ ಅಡ್ಡಬಿದ್ದು ಎದ್ದು ನಮಸ್ಕರಿಸಿ ನಿಂತು, ಪರಶಿವನೇ, ಕರುಣಿಸು, ತಾರಕಾಸುರನಿಂದ ಅನೇಕ ವರ್ಷಗಳ ಕಾಲ ನೋವನ್ನನುಭವಿಸಿದೆವು, ಇನ್ನಾದರೂ ಕಾಪಾಡಬೇಕು ಎಂದು ಮೊರೆಯಿಟ್ಟರು. ೧೯. ಶಿವನು ದೇವತೆಗಳ ಮೊರೆಯನ್ನು ಕೇಳಿದನು. ನಮ್ಮ ಮಗನನ್ನು ಕಳಿಸಿ ತಾರಕಾ ಸುರನ ಮಾಂಸವನ್ನು ಭೂತಗಣಕ್ಕೆ ಔತಣ ಮಾಡಿಸುತ್ತೇನೆ ಹೆದರಬೇಡಿ, ಎನ್ನುತ್ತಾ ಅವರಿಗೆ ಅಭಯ ಕೊಟ್ಟು ಸಂತೋಷದಿಂದ ಮಗನಿಗೆ ಯುವರಾಜಪದವಿಯನ್ನು ಕಟ್ಟಿ, ದೇವತಾಸಮೂಹವನ್ನು ಕರೆದು ಕಾಣಿಕೆಯನ್ನು ಕೊಟ್ಟು, ನಮಸ್ಕಾರ ಮಾಡೆಂದು ನೇಮಿಸಿದನು. ೨೦. ಬ್ರಹ್ಮ-ವಿಷ್ಣು ಮೊದಲಾದ ದೇವತಾಸಮೂಹ ಬಂದು ಕಾಣಿಕೆ ಯನ್ನು ಕೊಟ್ಟು ನಮಸ್ಕರಿಸಿ ಭಯಭರಿತ ಭಕ್ತಿಯಿಂದ ಕುಮಾರನನ್ನು ಕೈಎತ್ತಿ ಕೊಂಡಾಡಿದರು. ಪ್ರತಿಜ್ಞೆ ಮಾಡಿ ಇಂದು ತಾರಕನ ಮಾಂಸವನ್ನು ನಿನ್ನ ಬಾಣಕ್ಕೆ

CC-0. Jangamwadi Math Collection. Digitized by eGangotri

ಹೂಣೆಸುತ್ತಿಂದು ತಾರಕನಡಗ ನಿನ್ನ ನಿಜ
ಬಾಣಕಾಹುತಿಯ ಕೊಟ್ಟೆಮ್ಮನುಳಿಪೆನುತೆ ಗೀ
ರ್ವಾಣತತಿ ಬಿನ್ನೈಸೆ ಕೇಳ್ದು ಶಿವನಾಜ್ಞೆಯಿಂ ಷಣ್ಮುಖಂ ಬೀಳ್ಕೊಂಡನು ೨೦

ಧಳಧಳಂ ಧಳಧಳಂ ಧಳವೆಂಬ ಶಬ್ದಸ
ಮ್ಮಿಳಿತಕೋಣಪ್ರಹಾರದಿನುಣ್ಮಿದತಿರವಂ
ನಳಿನಜಾಂಡಮನೊಡೆದು ಬಹಿರಾವರಣಮನಾವರಿಸಲಾ ನೀರೊಳಿರ್ದ
ಜಲಚರಂ ಬೆದರಿ ಪರಿದಾಡಲ್ ತದಂಡಮೆಡ
ಬಲಕೊಲಿವುತಿರ್ದುದಭವನ ಸುತಂ ಸಂಗರಕೆ
ಮುಳಿದು ನಡೆಗೊಂಡ ಸಮಯದೊಳಮರರುರೆ ಕೋಟಿದುಂದುಭಿಗಳಂ ಪೊಯ್ಸಲು ೨೧

ಮೇಲೆ ಸಂಗರದ ಸನ್ನಾಹದಿಂ ಷಣ್ಮುಖಂ
ಪೇಳಲೇನೆಡೆವಿಡದೆ ತೆರಳಿತು ಸಮಸ್ತ ಸುರ
ಜಾಲ ತಂತಮ್ಮ ವಾಹನ ಶಸ್ತ್ರ ಕರಿ ತುರಗ ರಥ ಪತ್ತಿಗಳ ಗಡಣದೆ
ತೂಳುವರೆಗಳ ರವಂ ತುಂಬಿತಾಶೆಗಳಂ ಮು
ರಾಳವಾಹನ ಗರುಡಗಮನರಿಕ್ಕೆಲದೊಳಿರೆ
ನೀಲಕಂಠಾರೂಢನಾಗಿ ಸುರಗಣಸಹಿತೆ ಷಣ್ಮುಖಂ ನಡೆಗೊಂಡನು ೨೨

ಬಿರುದನುರೆ ಸಂಬಾಳಿಸಿತು ಮುಂದೆ ಪಾಠಕರ
ನೆರವಿ ಶ್ರುತಿವಿತತಿ ಜಯ ಜಯವೆನುತೆ ಸಕಲ ನಿ
ರ್ಜರಜನಂ ಕೈಯೆತ್ತಿ ಪೊಗಳಿದುದು ನಿಸ್ಸಾಳಕೋಟಿಗಳ್ ನೆರೆ ಮೊಳಗಲು

ಆಹುತಿ ಕೊಟ್ಟು, ನಮ್ಮನ್ನು ಕಾಪಾಡು ಎನ್ನುತ್ತ ದೇವತಾಸಮೂಹ ವಿಜ್ಞಾಪಿಸಿಕೊಳ್ಳಲು ಅದನ್ನು ಕೇಳಿ ಶಿವನ ಅಪ್ಪಣೆಯಂತೆ ಷಣ್ಮುಖನು ಬೀಳ್ಕೊಂಡನು. ೨೧. ಶಿವನ ಮಗನಾದ ಷಣ್ಮುಖನು ಕೆರಳಿ ಯುದ್ಧಕ್ಕೆ ಹೊರಟ ಸಮಯದಲ್ಲಿ ದೇವತೆಗಳು ಕೋಟಿ ದುಂದುಭಿಗಳನ್ನು ಹೊಡೆಸಿದರು. ಆಗ ಧಳಧಳಂ ಧಳಧಳಂ ಧಳ ಎಂಬ ಶಬ್ದದಿಂದ ಕೂಡಿದ ನಗಾರಿಯ ಕೋಲಿನ ಹೊಡೆತದಿಂದ ಹೊರಹೊಮ್ಮಿದ ಭಯಂಕರವಾದ ಶಬ್ದ ಬ್ರಹ್ಮಾಂಡವನ್ನು ಒಡೆದು ಹೊರ ಆವರಣವನ್ನು ತುಂಬಲು ನೀರಿನಲ್ಲಿದ್ದ ಪ್ರಾಣಿಗಳೆಲ್ಲ ಹೆದರಿ ಹರಿದಾಡಿದವು. ಆಗ ಬ್ರಹ್ಮಾಂಡವು ಎಡ-ಬಲಕ್ಕೆ ತೂಗಾಡುತ್ತಿತ್ತು. ೨೨. ಹೇಳುವುದೇನು? ಎಲ್ಲ ದೇವತೆಗಳ ಸಮೂಹವೂ ಯುದ್ಧಸನ್ನಾಹದಿಂದ ತಂತಮ್ಮ ವಾಹನ, ಆಯುಧ, ಆನೆ, ಕುದುರೆ, ರಥ, ಕಾಲಾಳುಗಳ ಸಮೂಹದಿಂದ ಷಣ್ಮುಖನ ಜೊತೆಯಲ್ಲಿ ಹೊರಟಿತು. ರಣದುಂದುಭಿಗಳ ಶಬ್ದ ದಿಕ್ಕನ್ನು ತುಂಬಿತು. ಬ್ರಹ್ಮ ವಿಷ್ಣುಗಳು ಎರಡು ಕಡೆಯಲ್ಲೂ ಇರಲು ನವಿಲನ್ನು ಏರಿ ದೇವಗಣ ಸಹಿತವಾಗಿ ಷಣ್ಮುಖನು ಹೊರಟನು. ೨೩. ಮುಂದೆ ಹೊಗಳುಭಟ್ಟರ ಸಮೂಹ ಬಿರುದನ್ನು ಚೆನ್ನಾಗಿ ಹೊಗಳಿತು, ವೇದಸಮೂಹ ಜಯಜಯವೆನ್ನುತ್ತಿದ್ದುವು, ಎಲ್ಲ ದೇವತಾ ಸಮೂಹ ಕೈಯೆತ್ತಿ ಹೊಗಳಿತು, ನಗಾರಿಗಳ ಸಮೂಹ ಅರ್ಭಟಿಸುತ್ತಿರಲು ದೇವೇಂದ್ರ,

CC-0. Jangamwadi Math Collection. Digitized by eGangotri

ಸುರಪ ಶಿಖಿ ಯಮ ನಿರುತಿ ವರುಣ ವಾಯು ಕುಬೇರ
ಹರರೆಂಟುದಿಕ್ಕಿನೊಳ್ ಕೈವಾರಿಸಲ್ ಗಣೇ
ಶ್ವರರುಘೆಯುಘೇಯೆನೆ ವಿಲಾಸದಿಂ ಸೇನಾನಿ ಸಂಗರಕೆ ನಡೆಗೊಂಡನು ೨೩

ಎತ್ತೆತ್ತಲುಂ ತೀವಿ ನಡೆವ ಕರಿ ತುರಗ ರಥ
ಪತ್ತಿಗಳ ಸಂದಣಿಗಳಂ ನೋಡಿ ತೂಗಿ ತ
ನ್ನುತ್ತಮಾಂಗವನೆಲ್ಲಿಯಡಗಿರ್ದರೋ ದಿವಿಜರಿನಿತುದಿನವೀ ಬಲವನು
ತತ್ತೊಡರಿದೋಡಿಸುವೊಡಸುರಂಗೆ ವಶವೆ ಶಿವ
ನಿತ್ತನಿಂದೆಮಗೆ ವಿಜಯವನೆನುತೆ ಸಂತಸಂ
ಬೆತ್ತು ದಿವಿಜೇಂದ್ರನೈತಂದನಾನೆಯನೇರಿ ದಿಗಧಿಪರ್ ಬಳಸಿ ಬರಲು ೨೪

ಸುರರಭವಜಂಗೆ ಸೇನಾಧಿಪತ್ಯವನಿತ್ತು
ನಿರುತಮೈತಂದರೆಂದೆಂಬ ವಾರ್ತೆಯನೊರ್ವ
ಚರನೈದಿ ದಾನವೇಶಂಗೆ ಪೇಳಲ್ ಕೇಳ್ದು ರೋಷತಾಮ್ರಾಕ್ಷನಾಗಿ
ಉರಿ ಸೂಸೆ ವದನದೊಳ್ ಕುಡಿಮೀಸೆ ಕುಣಿದಾಡೆ
ಕರವಾಳನುರೆ ಜಡಿದು ಮಹಿಲದೊಳ್ ನಿಂದು ಸಂ
ಗರಕೆ ಬರಹೇಳು ಸುರರಂ ಬೇಗೆನುತ್ತೆ ತಾರಕನಾಗಳೈತಂದನು ೨೫

ತಾರಕಂ ವೈರಿಸೇನಾಚಕ್ರವಾರ್ಧಿಯು
ತ್ತಾರಕಂ ಸಂತತಂ ಸುರಲೋಕಶೋಕವಿ
ಸ್ತಾರಕಂ ನಿಜಮಹಾಸೈನ್ಯಲೋಚನಮಧ್ಯತಾರಕಂ ಮಸಗಿ ಕೂಡೆ

ಅಗ್ನಿ, ಯಮ, ನೈರುತ್ಯ, ವರುಣ, ವಾಯು, ಕುಬೇರ, ಈಶಾನರು ಎಂಟು ದಿಕ್ಕಿನಲ್ಲಿಯೂ ಹೊಗಳುತ್ತಿರಲು, ಗಣೇಶ್ವರರು ಉಘೇ ಉಘೇ ಎನ್ನಲು ಸಂಭ್ರಮದಿಂದ ಷಣ್ಮುಖನು ಯುದ್ಧಕ್ಕೆ ಹೊರಟನು, ೨೩. ಎಲ್ಲೆಲ್ಲಿಯೂ ಸಂದಣಿಸಿ ನಡೆಯುತ್ತಿದ್ದ ಆನೆ,ಕುದುರೆ, ರಥ, ಕಾಲಾಳುಗಳ ಗುಂಪನ್ನು ನೋಡಿ ತಲೆದೂಗಿ ಇಷ್ಟು ದಿನವೂ ಈ ಸೈನ್ಯವನ್ನು ದೇವತೆಗಳು ಎಲ್ಲಿ ಬಚ್ಚಿಟ್ಟುಕೊಂಡಿದ್ದರೊ! ಇದನ್ನು ಎದುರಿಸಿ ಓಡಿಸುವುದು ಆ ರಾಕ್ಷಸನಿಗೆ ಸಾಧ್ಯವೆ! ಶಿವನು ಇಂದು ನಮಗೆ ಗೆಲುವನ್ನು ಕೊಟ್ಟನು ಎಂದು ಹೇಳಿ ಸಂತೋಷಿಸುತ್ತ ದಿಕ್ಪಾಲಕರು ಸುತ್ತುವರಿದಿರಲು ದೇವೇಂದ್ರನು ಐರಾವತವನ್ನೇರಿ ಬಂದನು. ೨೪. ಒಬ್ಬ ದೂತನು ಬಂದು ದೇವತೆಗಳು ಷಣ್ಮುಖನಿಗೆ ಸೇನಾಧಿಪತ್ಯವನ್ನು ಕೊಟ್ಟು ದಿಟಕ್ಕೂ ಹೊರಟುಬಂದರು ಎಂಬ ಸಮಾಚಾರವನ್ನು ರಾಕ್ಷಸರಾಜನಿಗೆ ಹೇಳಿದನು, ಅದನ್ನು ಕೇಳಿ ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ, ಮುಖವು ಬೆಂಕಿಯನ್ನು ಹೊಮ್ಮಿಸಲು, ಮೀಸೆಯ ತುದಿ ಕುಣಿದಾಡಲು, ಕತ್ತಿಯನ್ನು ಝಳಪಿಸಿ ತ್ವರಿತವಾಗಿ ನಿಂತು ದೇವತೆಗಳನ್ನು ಬೇಗ ಯುದ್ಧಕ್ಕೆ ಬರಹೇಳು ಎನ್ನುತ್ತ ತಾರಕನು ಬಂದನು. ೨೫. ವೈರಿಸೇನಾಚಕ್ರವೆಂಬ ಸಮುದ್ರವನ್ನು ದಾಟುವ ಹಡಗು, ಯಾವಾಗಲೂ ದೇವ ಲೋಕದ ದುಃಖವನ್ನು ಹೆಚ್ಚು ಮಾಡುವವನು, ತನ್ನ ಮಹಾ ಸೈನ್ಯದ ಕಣ್ಣಿನ ಮಧ್ಯದ

CC-0. Jangamwadi Math Collection. Digitized by eGangotri

ತಾರಕಾಂಚನರತ್ನಮಯ ವರೂಥವನೇರಿ
ತಾರಕಾಧ್ವದೊಳಾರಿ ಬೊಬ್ಬಿರಿದು ಶಚಿಯ ಭ
ರ್ತಾರಕಾದ್ಯರ ಮೇಲೆ ಮುಳಿದು ಸಂಗರಕೆ ಸನ್ನಾಹದಿಂ ಬರುತಿರ್ದನು ೨೬

ಸುರಪಮೃಗ ಶಾರ್ದೂಲ ಹರಿವೋಘಪವನ ಯಮ
ಶರಧಿವಾಡಬ ನಿರುತಿವನದಾವ ವರುಣಭೂ
ಧರವಜ್ರ ವಾಯುರವಿರಾಹು ವಿತ್ತಪಪಕ್ಷಿಸಾಳ್ವ ತನ್ಮಿತ್ರಸರ್ಪ
ಗರುಡ ಕಮಲಾಕ್ಷಪದ್ಮಜ ಮುಖ್ಯ ದಿವಿಜಕುಲ
ಶರಭಭೇರುಂಡ ಜಯಜಯಯೆಂದು ಮುಂದುಲಿವ
ಬಿರುದುಪಾಠಕರ ಗಡಬಡೆ ಮಸಗೆ ತಾರಕಂ ಬರುತಿರ್ದನುತ್ಸವದೊಳು ೨೭

ಚಂಬಕ ಪಟಹ ಪಣಹ ಡಿಂಡಿಮ ಡಮರು ಢಕ್ಕೆ
ತಂಬಟ ಕರಡೆ ಡೌಡೆ ರಾಯಗಿಡಿಬಿಡಿ ಕಹಳೆ
ಕಂಬು ಭೇರಿ ಮೃದಂಗ ಬೊಂಬುಳಿರವಂಗಳಿಂದಂಬುಜಭವಾಂಡಮದಿರೆ
ಮುಂಬರಿವ ಕುದುರೆಗಳ ಮೊತ್ತದಿಂ ಬಹುಮದ
ಸ್ತಂಭೇರತತಿಯ ಸುತ್ತಂ ಪರಿವ ತೇರ್ಗಳೊ
ತ್ತಂಬರದೆ ತಾರಕಾಸುರನಾಹವಕೆ ನಡೆವ ಸಂಭ್ರಮವನೇನೆಂಬೆನು ೨೮

ಕರಿಯ ಗುಡ್ಡೆಯಾದ ತಾರಕನು ಕುಪಿತನಾಗಿ ತಕ್ಷಣ ನಕ್ಷತ್ರ ಕಾಂಚನರತ್ನಮಯವಾದ ರಥವನ್ನು ಏರಿ, ನಕ್ಷತ್ರಮಾರ್ಗದಲ್ಲಿ ಬೊಬ್ಬೆ ಹಾಕಿ, ದೇವೇಂದ್ರ ಮೊದಲಾದವರ ಮೇಲೆ ಕೋಪಗೊಂಡು ಯುದ್ಧಕ್ಕೆ ಸನ್ನದ್ಧನಾಗಿ ಬರುತ್ತಿದ್ದನು. ೨೭. ದೇವೇಂದ್ರನೆಂಬ ಸಿಂಹಕ್ಕೆ ಶಾರ್ದೂಲ, ಅಗ್ನಿಯೆಂಬ ಮೋಡಕ್ಕೆ ಬಿರುಗಾಳಿ, ಯಮನೆಂಬ ಸಮುದ್ರಕ್ಕೆ ಬಡಬಾಗ್ನಿ, ನಿರುತಿಯೆಂಬ ವನಕ್ಕೆ ಕಾಳ್ಗಿಚ್ಚು, ವರುಣನೆಂಬ ಪರ್ವತಕ್ಕೆ ವಜ್ರಾಯುಧ, ವಾಯುವೆಂಬ ಸೂರ್ಯನಿಗೆ ರಾಹು, ಕುಬೇರನೆಂಬ ಪಕ್ಷಿಗೆ ಗಿಡುಗ, ಈಶಾನ್ಯವೆಂಬ ಸರ್ಪಕ್ಕೆ ಗರುಡ, ವಿಷ್ಣು-ಬ್ರಹ್ಮ ಮೊದಲಾದ ಮುಖ್ಯ ದೇವಕುಲವೆಂಬ ಶರಭಕ್ಕೆ ಭೇರುಂಡ, ಜಯಜಯ ಎಂದು ಮುಂದೆ ಹೊಗಳುವ ವಂದಿಮಾಗಧರ ಗಜಿಬಿಜಿ ಶಬ್ದ ತುಂಬಲು ತಾರಕನು ಸಂಭ್ರಮದಿಂದ ಬರುತ್ತಿದ್ದನು. ೨೮. ಡೋಲು,ತಮಟೆ, ದುಂದುಭಿ, ಮದ್ದಲೆ, ಡಮರುಗ, ಢಕ್ಕೆ, ಕರಡಿವಾದ್ಯ, ಸಣ್ಣಡೋಲು, ರಾಯಭೇರಿ, ಕಹಳೆ, ತುತ್ತೂರಿ, ಭೇರಿ, ಮೃದಂಗ, ಚರ್ಮವಾದ್ಯಗಳ ಶಬ್ದದಿಂದ ಬ್ರಹ್ಮಾಂಡವು ಅದುರಿತು. ಮುಂದೆ ಸಾಗುತ್ತಿದ್ದ ಕುದುರೆಗಳ ಸಮೂಹ, ಬಹುವಾಗಿ ಮದಿಸಿದ ಆನೆಗಳ ಗುಂಪು. ಸುತ್ತಲೂ ಹರಿದಾಡುವ ತೇರುಗಳ ಗಡಿಬಿಡಿಯಿಂದ ತಾರಕಾಸುರನು ಯುದ್ಧಕ್ಕೆ

CC-0. Jangamwadi Math Collection. Digitized by eGangotri

ಇಟ್ಟಣಿಸಿ ಶತಮಾಯು ವೃಷಪರ್ವ ಶಬಲ ಜಗ
ಜಟ್ಟಿ ಗಜಶಿರ ಶಂಖುಕರ್ಣ ದುಂದುಭಿ ಸುರಘ
ರಟ್ಟ ವಿದ್ರಾವಣ ವಿರೂಪಾಕ್ಷ ಸ್ವರ್ಭಾನು ವಾಮನ ವಿಧಾತ್ರ ಕಪಿಲ
ಕಟ್ಟಾಳ್ತನದ ಶುಂಭ ರಣಜಯಮಹಾನಾಭ
ದಿಟ್ಟನು ಹಯಗ್ರೀವ ಶಂಖುಶಿರರೆನಿಸುವೊಡ
ಹುಟ್ಟಿದರ ತಂಡವೆಡಬಲದೊಳ್ಳೈತರುತಿರಲ್ ತಾರಕಂ ಬರುತಿರ್ದನು ೨೯

ಅಡೆಯುಡುಗದುರುಬಿದುದು ದಾನವೇಶ್ವರನ ಮಂ
ಗಡಮಹಾಪದ್ಮವಲ್ಲಿರ್ದಾನೆ ಕುದುರೆ ತೇರ್
ನಡೆತಪ್ಪ ಕಾಲಾಳ ಲೆಕ್ಕಮಂ ಕಮಲಜಂ ಬಲ್ಲನೋ ಮೇಣರಿಯನೋ
ನುಡಿಯಲಳವೇ ವಾದ್ಯರಭಸಂ ಲಯಾಂಬುದದ
ಸಿಡಿಲ ನಿನದಕ್ಕೆ ತಾಯ್ಗುರುವೆನಿಸಿತೆನೆ ರಣಕೆ
ನಡೆದುದಿಟ್ಟಣಿಸಿ ತಾರಕನ ಪಡೆ ಪಡೆದುವಚ್ಚರಿಯುನನಿಮಿಷರ ಕಣ್ಗೆ ೩೦

ಕರಿ ತುರಗ ರಥ ಪದಾತಿಗೆ ಧರಣಿಮಂಡಲಂ
ಮೊರೆವ ವಾದ್ಯದ ನಿನಾದಕೆ ದಿಶಾಮಂಡಲಂ
ಪರಿಪರಿಯ ಛತ್ರ ಚಾಮರ ಪತಾಕೆಗೆ ಗಗನಮಂಡಲಂ ನೆರೆಯವೆನಲು

ನಡೆಯುವ ಸಂಭ್ರಮವನ್ನು ಏನೆಂದು ಹೇಳಲಿ? ೨೯. ಶತಮಾಯು, ವೃಷಪರ್ವ, ಶಬಲ, ಜಗಜಟ್ಟಿಯಾದ ಗಜಶಿರ, ಶಂಖುಕರ್ಣ, ದುಂದುಭಿ, ಸುರಘರಟ್ಟ, ವಿದ್ರಾವಣ, ವಿರೂಪಾಕ್ಷ, ಸ್ವರ್ಭಾನು, ವಾಮನ, ವಿಧಾತ್ರ, ಕಪಿಲ, ವೀರನಾದ ಶುಂಭ, ಯುದ್ಧ ವಿಜಯ ಮಹಾನಾಭ, ದಿಟ್ಟನಾದ ಹಯಗ್ರೀವ, ಶಂಖುಶಿರ ಮೊದಲಾದ ಒಡಹುಟ್ಟಿದವರ ಸಮೂಹ ಎಡಬಲದಲ್ಲಿ ಬರುತ್ತಿರಲು ತಾರಕಾಸುರನು ಬರುತ್ತಿದ್ದನು. ೩೦. ರಾಕ್ಷಸನ ಸೈನ್ಯಸಮೂಹ ಅಲ್ಲಿ ಸ್ವಲ್ಪವೂ ಜಾಗ ಬಿಡದಂತೆ ಆಕ್ರಮಿಸಿತು, ಆನೆ. ಕುದುರೆ, ರಥ, ನಡೆದುಬರುತ್ತಿದ್ದ ಕಾಲಾಳುಗಳ ಲೆಕ್ಕವನ್ನು ಬ್ರಹ್ಮನು ಕೂಡ ತಿಳಿದಿದ್ದನೊ ಇಲ್ಲವೊ ! ಹೇಳಲು ಸಾಧ್ಯವೇ? ವಾದ್ಯಗಳ ರಭಸ ಪ್ರಳಯಮೇಘದ ಸಿಡಿಲಿನ ಆರ್ಭಟಕ್ಕೆ ತೌರುಮನೆ ಎನ್ನಿಸಿತು ಎನ್ನಲು, ತಾರಕಾಸುರನ ಸೈನ್ಯ ಗುಂಪುಗೂಡಿ ಯುದ್ಧಕ್ಕೆ ಹೊರಟಿತು. ಇದು ದೇವತೆಗಳು ನೋಡಲು ಆಶ್ಚರ್ಯವನ್ನುಂಟುಮಾಡಿತು. ೩೧. ಆನೆ, ಕುದುರೆ, ರಥ, ಕಾಲಾಳುಗಳಿಗೆ ಭೂಮಂಡಲ. ಮೊರೆಯುತ್ತಿರುವ ವಾದ್ಯದ ಶಬ್ದಕ್ಕೆ ದಿಗ್ಮಂಡಲ, ನಾನಾರೀತಿಯ ಛತ್ರ, ಚಾಮರ, ಬಾವುಟಗಳಿಗೆ ಗಗನಮಂಡಲ ಸಾಲದು ಎಂಬಂತೆ ರಾಕ್ಷಸನ ಸೈನ್ಯ ತಮ್ಮ ತಮ್ಮ ನಾಯಕರನ್ನು ಬಳಸಿ ಕುಲಪರ್ವತ



CC-0. Jangamwadi Math Collection. Digitized by eGangotri

ಭರವಸದೆ ನಡೆದುದಸುರನ ಸೇನೆ ತಂತಮ್ಮ
ದೊರೆಗಳಂ ಬಳಸಿ ಕುಲಗಿರಿ ಜರಿಯೆ ಫಣಿಕುಲೇ
ಶ್ವರನ ತಲೆ ಬಿರಿಯೆ ದಿಕ್ಕರಿಗಳೆರ್ದೆವೊಡೆಯೆ ಕೂರ್ಮನ ಖರ್ಪರಂ ನೆಗ್ಗಲು ೩೧

ನಿಲಿಸಿದಂ ನಾಡೆ ಪದ್ಮಾಯುತವ್ಯೂಹವಮಂ
ದಳದೊಳಗ್ಗಳೆಯರೆಸಳೆಸಳಾಗೆ ದನುಜಕುಲ
ತಿಲಕನನುಜರ್ ಕೇಸರಂಗಳಾಗಲ್ ಮಧ್ಯಕರ್ಣಿಕೆಗೆ ಶುಂಭಾಸುರಂ
ನಿಲೆ ಪರಾಕ್ರಮಿ ತಾರಕಾಸುರಂ ತನ್ಮಹಾ
ಬಲದ ಕಾವಲ್ಗೆ ತಾನೊತ್ತಾಗಿ ನಿಲೆ ರಣಕೆ
ಮಲೆತು ನಿಂದಂ ವಜ್ರನಾಭನೆಂದೆಂಬ ಸೇನಾನಿ ಸನ್ನದ್ಧನಾಗಿ ೩೨

ಮುಂದುಗಡೆಯೊಳ್ ರಣವಿಜೃಂಭನಂ ಕುಂಭನಂ
ಹಿಂದೆ ರಿಪುಬಲಜಯಪ್ರಬಲನಂ ಶಬಲನಂ
ತಂದು ಸುರಕುಲಧೂಮಕೇತುವಂ ಕೇತುವಂ ನಿಲಿಸಿದಂ ತತ್‌ಕ್ಷಣದೊಳು
ಕುಂದದಾದಿತ್ಯಹರಿಶರಭನಂ ಶರಭನಂ
ನಿಂದಿರಿಸಿ ಬಲದ ಸನ್ನಾಹವಮಂ ವ್ಯೂಹವಮಂ
ನಂದದಿಂ ನೋಡಿ ಕೊಂಡಾಡಿದಂ ನೀಡಿದಂ ವೀಳೆಯವನತಿಬಲರ್ಗೆ ೩೩

ಎಡೆವರಿಯದಿಟ್ಟಣಿಸಿ ತೋರಿದುದು ಮೀರಿದುದು
ನಡೆದು ಪೊಯ್ದಾಡಲುದ್ಯೋಗಿಸಿತು ರಾಗಿಸಿತು
ಬಿಡದೆ ಖತಿ ಮುಸಗಿ ಪೊಯ್ದಾಡಿದುದು ಮಾಡಿದುದು ಭಾಷೆಯಂ ದಿವಿಜಭಟರ

ಜರುಗಲು, ಆದಿಶೇಷನ ತಲೆ ಬಿರಿಯಲು, ದಿಗ್ಗಜಗಳ ಎದೆ ಒಡೆಯಲು, ಆದಿಕೂರ್ಮನ ಬೆನ್ನಚಿಪ್ಪು ನೆಗ್ಗಿಹೋಗಲು ರಭಸದಿಂದ ಹೊರಟಿತು. ೩೨. ವಜ್ರನಾಭನೆಂಬ ಸೇನಾಧಿಪತಿ ಗರ್ವಿಸಿ ಯುದ್ಧಸನ್ನದ್ಧನಾಗಿ ಎದುರಿಸಿ ನಿಂತು ಸೈನ್ಯವನ್ನು ಪದ್ಮವ್ಯೂಹದಲ್ಲಿ ನಿಲ್ಲಿಸಿದನು. ಸೈನ್ಯದಲ್ಲಿದ್ದ ಪರಾಕ್ರಮಿಗಳು ಅದರ ದಳಗಳಾದರು, ತಾರಕನ ತಮ್ಮಂದಿರು ಅದರ ಕೇಸರಗಳಾದರು. ಶುಂಭಾಸುರನು ಮಧ್ಯದ ತೆನೆಯಾಗಿ ನಿಂತನು. ಆ ಮಹಾ ಸೈನ್ಯದ ಕಾವಲಿಗೆ ಪರಾಕ್ರಮಿಯಾದ ತಾರಕಾಸುರನು ಒತ್ತಾಗಿ ನಿಂತನು. ೩೩. ಮುಂದೆ ಯುದ್ಧವಿಜೃಂಭನಾದ ಕುಂಭನನ್ನು, ಹಿಂದೆ ಶತ್ರುಸೈನ್ಯವನ್ನು ಜಯಿಸುವುದರಲ್ಲಿ ಪ್ರಬಲನಾದ ಶಬಲನನ್ನು, ದೇವಕುಲಕ್ಕೆ ಧೂಮಕೇತುವಾದ ಕೇತುವನ್ನು ತಂದು ನಿಲ್ಲಿಸಿದನು. ಸೂರ್ಯನೆಂಬ ಸಿಂಹಕ್ಕೆ ಶರಭನಾದ ಶರಭನನ್ನು ನಿಲ್ಲಿಸಿ ಸೈನ್ಯದ ಸಿದ್ಧತೆಯನ್ನೂ, ವ್ಯೂಹವನ್ನೂ ಆನಂದದಿಂದ ನೋಡಿ ಕೊಂಡಾಡಿದನು. ಪರಾಕ್ರಮಿಗಳಿಗೆ ವೀಳಯವನ್ನು ನೀಡಿದನು. ೩೪. ರಾಕ್ಷಸರ ಸೈನ್ಯದ ಮುಂಚೂಣಿ ಜಾಗವಿಲ್ಲದಂತೆ ಆವರಿಸಿಕೊಂಡಿತು, ಮಿತಿಮೀರಿತು, ಹೊರಟು ಹೋರಾಡಲು ಪ್ರಾರಂಭಿಸಿತು, ದ್ವೇಷ ತಾಳಿತು, ಕೋಪ ಆವರಿಸಿ ಹೊಡೆದಾಡಿತು, ಪ್ರತಿಜ್ಞೆ ಮಾಡಿತು, ಫಡ ಎನ್ನುತ್ತ ದೇವಸೈನಿಕರನ್ನು

CC-0. Jangamwadi Math Collection. Digitized by eGangotri

ಘಡಯೆನುತೆ ತಡೆದು ತಲೆಯೊತ್ತಿದುದು ಮುತ್ತಿದುದು
ಕಡುಗಿ ಕಾಳಿಗಕೆ ಮೂದಲಿಸಿದುದು ಚಲಿಸಿದುದು
ಗೆಡೆಗೊಂಡು ಪತ್ತಿರಕೆ ಸೇರಿದುದು ಪೋರಿದುದು ಚೂಳಿ ದಾನವರ ಪಡೆಯು ೩೪

ತಲೆಪಟ್ಟುದುಭಯಸೈನಿಕಕೆ ಚೂಳಿಯೊಳಾಜಿ
ಜಲಧಿ ಜಲಧಿಯನೊತ್ತುವಂತೆ ಘನಘೋಷದಿಂ
ನಲಿದು ಬಿಲ್ಲವರೊಡನೆ ಬಿಲ್ಲವರ್ ಪರಿಗೆಯುವರೊಡನೆ ಪರಿಗೆಯು ವೀರರು
ಅಳವಿಗೊಟ್ಟರ್ ಸಬಳದವರೊಡನೆ ಸಬಳದವ
ರುಲಿದು ನೂಂಕಿತು ಪಯಕೆ ಪಯಮಾನೆಗಾನೆಯು
ಚ್ಚಳಿಪ ತೇರ್ಗಂ ತೇರ್ಗಳಾಂತಾಂತು ಸಮವೆನಲ್ ಕಾದುತಿರ್ದುದು ಕ್ರಮದೊಳು ೩೫

ಎಸೆವರಿರಿವರ್ ಪೊಯ್ವರುಬ್ಬುವರ್ ಕೊಬ್ಬುವರ್
ಮುಸಕದಿಂ ಸಮರಂಗಕುರುಬುವರ್ ತರುಬುವರ್
ಪೊಸಪರಿಯ ಬಿರುದನುರೆ ಪೆಸರಿಪರ್ ಪಸರಿಪರ್ ತಂತಮ್ಮ ಬೀರಂಗಳ
ಅಸಮುಸೆಯನುಳಿದು ಕೈದುಡುಕುವರ್ ಮಿಡುಕುವರ್
ಕುಸುರಿದರಿದಡಗನಿರದೊಟ್ಟುವರ್ ಮೆಟ್ಟುವರ್
ಬಸೆನೆಣನನುರುಬಿ ಮೂದಲಿಸುವರ್ ನಿಲಿಸುವರ್ ಪಟುತನವನುಭಯಭಟರು ೩೬

ತಡೆದು ತಲೆಯನ್ನು ಕತ್ತರಿಸಿತು, ಮುತ್ತಿಗೆ ಹಾಕಿತು, ಯುದ್ಧಕ್ಕೆ ಉತ್ಸಾಹಿಸಿ ಮೂದಲಿಸಿತು, ಆವರಿಸಿ ಚಲಿಸಿತು, ಹತ್ತಿರ ನಡೆದು ಹೋರಾಡಿತು. ೩೫. ಸೈನ್ಯದ ಮುಂಭಾಗದಲ್ಲಿ ಎರಡು ಸೈನ್ಯಗಳೂ ಕೈಕೈ ಮಿಲಾಯಿಸಿದುವು. ಸಮುದ್ರ ಸಮುದ್ರವನ್ನು ಹಿಂದಕ್ಕೆ ಒತ್ತುವಂತೆ ಭಯಂಕರವಾಗಿ ಆರ್ಭಟಿಸಿ ಬಿಲ್ಗಾರರು-ಬಿಲ್ಗಾರರೊಡನೆ, ಗುರಾಣಿಯವರು-ಗುರಾಣಿಯವರೊಡನೆ,ಈಟಿಯುವರು-ಈಟಿಯವರೊಡನೆ ಅಬ್ಬರಿಸಿ ನುಗ್ಗಿದರು. ಕುದುರೆಗೆ ಕುದುರೆ ಆನೆಗೆ-ಆನೆ:ನೂಕಿತು,ಚಲಿಸುವ ರಥಕ್ಕೆ ರಥ ಸಮವೆನ್ನಲು ಕ್ರಮವಾಗಿ ಎದುರಿಸಿ ಹೋರಾಡುತ್ತಿದ್ದರು. ೩೬. ಎರಡು ಸೈನ್ಯದ ಭಟರೂ ಒಬ್ಬರಮೇಲೊಬ್ಬರು ಆಯುಧಗಳನ್ನು ಎಸೆಯುವರು, ಇರಿಯುವರು, ಹೊಡೆಯುವರು, ಪರಾಕ್ರಮದಿಂದ ಉಬ್ಬುವರು, ಕೊಬ್ಬುವರು, ಉತ್ಸಾಹದಿಂದ ಯುದ್ಧಭೂಮಿಯನ್ನು ತುಂಬುವರು, ಅಡ್ಡಹಾಕುವರು, ಹೊಸರೀತಿಯ ಬಿರುದುಗಳನ್ನು ಚೆನ್ನಾಗಿ ಹೆಸರಿಸುವರು, ತಮ್ಮ ತಮ್ಮ ಪರಾಕ್ರಮವನ್ನು ಹರಡುವರು, ಸಣ್ಣಪುಟ್ಟ ಗಾಯಗಳನ್ನು ಲೆಕ್ಕಿಸದೆ ಹೊಡೆದಾಡುವರು, ಮಿಡುಕುವರು, ಕತ್ತರಿಸಿದ ಮಾಂಸವನ್ನು ಗುಡ್ಡೆಹಾಕುವರು, ಕೊಬ್ಬು ನೆಣಗಳನ್ನು ತುಳಿಯುವರು, ಮೇಲೇರಿ ಮೂದಲಿಸುವರು, ಶೌರ್ಯವನ್ನು ಸ್ಥಾಪಿಸು

CC-0. Jangamwadi Math Collection. Digitized by eGangotri

ಹರಿಗೆಗಳ ಮೇಘದೊಡ್ಡಣೆ ಕತ್ತಿಗಳ ತೊಳಪ
ದಿರವೆ ಹೊಂಚುವ ಮಿಂಚು ಕವಿದೆಸೆವ ಸಾಯಕದ
ಸರಿಯೆ ಸರಿವಳೆ ಭುಜಂಬೊಯ್ಪು ಬೊಬ್ಬಿರಿದಿಡುವ ಶಕ್ತಿಯುಬ್ಬರವೆ ಸಿಡಿಲು
ಭರದೆ ಪೊಯ್ದಾಡಲಸಿಯುಸಿಯಿಂದೊಗೆದ ಕಿಡಿಯೆ
ಹರಿಗೋಪಮಾ ವೀರರಸವೆ ಪರಿವೊನಲಾಗೆ
ವರುಷದಂತಿರ್ಪ ರಣಮಂ ಕಂಡು ವೀರರ ಮನಶ್ಚಾತಕಂ ನಲಿದುದು ೩೭

ಬೆರಸಿ ಪೊಯ್ದಾಡಿದುದು ಚೂಳಿಯೊಳ್ ತಮತಮಗೆ
ಶರ ಶಕ್ತಿ ಶಲ್ಲೆಹ ಕೃಪಾಣ ತೋಮರ ಚಕ್ರ
ಪರಶು ಮುಸಲ ಮುಸುಂಡಿ ಗದೆ ಪಿಂಡಿವಾಳ ಮೊದಲಾಗಿರ್ದ ಕೈದುಗಳೊಳು
ಕರಚಮತ್ಕಾರ ಲಾಘವ ಲವಣಿ ಪಯ ಪಾಡು
ಮುರಿಪು ಮೈಲುಳಿ ಲಾಗುಲವಣಿ ಲಕ್ಷ್ಯಂಗಳಿಂ
ಧುರದೊಳೇರಂ ತೋರಿ ಮಿಾರುತತಿಬಲದಲ್ಲಿ ನಾನಾ ಪ್ರಹಾರದಿಂದೆ ೩೮

ಕಡಿವಡೆದ ತೋಳ್ಗಳಿಂ ಸಿಡಿದ ತಲೆಯೋಡ್ಗಳಿಂ
ಮಡಿದ ವಾರಣದಿಂದೆ ಕರುಳ ತೋರಣದಿಂದೆ
ಕಡಿದ ರಥರಾಜಿಯಿಂ ಹರಿದ ಬಹುವಾಜಿಯಿಂ ಸೆರೆಗಳಿಂ ನರಗಳಿಂದೆ

ವರು. ೩೭. ಗುರಾಣಿಗಳೇ ಮೋಡಗಳ ಗುಂಪು, ಕತ್ತಿಗಳ ಹೊಳಪು ಮತ್ತು ಅದಿರು ವಿಕೆಯೇ ಹೊಳೆಯುವ ಒಳ್ಳಿಮಿಂಚು, ಮುತ್ತಿಬಿಡುವ ಬಾಣಗಳ ಸಮೂಹವೇ ಸುರಿಯುವ ಮಳೆ, ಭುಜತಟ್ಟಿ ಆರ್ಭಟಿಸಿ ಹೊಡೆಯುವ ಶಕ್ತ್ಯಾಯುಧದ ಶಬ್ದವೇ ಸಿಡಿಲು, ರಭಸದಿಂದ ಹೋರಾಡಲು ಕತ್ತಿಗೆಕತ್ತಿ ತಾಗಿ ಹೊರಹೊಮ್ಮುವ ಕಿಡಿಯೇ ಮಳೆಯೊಡನೆ ಬೀಳುವ ಇಂದ್ರಗೋಪವೆಂಬ ಹುಳುಗಳು, ವೀರರಸವೇ ಹರಿಯುವ ಹೊನಲಾಗಲು ಮಳೆಯಂತಿರುವ ಯುದ್ಧವನ್ನು ನೋಡಿ ವೀರರ ಮನವೆಂಬ ಚಾತಕ ಪಕ್ಷಿ ಆನಂದಿಸಿತು. ೩೮. ಮುಂಚೂಣಿಯಲ್ಲಿ ಸಂಧಿಸಿ ತಮ್ಮ ತಮ್ಮಲ್ಲಿದ್ದ ಬಾಣ, ಶಕ್ತ್ಯಾಯುಧ. ಭರ್ಜಿ, ಕತ್ತಿ, ತೋಮರ, ಚಕ್ರ, ಕೊಡಲಿ, ಒನಕೆ, ಮುಸುಂಡಿ ಆಯುಧ, ಗದೆ, ಪಿಂಡಿವಾಳ ಮೊದಲಾದ ಆಯುಧಗಳಿಂದ ಕೈಚಳಕ, ಚುರುಕುತನ, ಹಿಂದೆ-ಮುಂದೆ ಬಾಗುವಿಕೆ, ಕಾಲುಗಳನ್ನು ಇಡುವ ರೀತಿ, ಪಾಡು, ಕೈ ತಿರುಗಿಸುವಿಕೆ, ಶರೀರದ ಚುರುಕಾದ ಚಲನೆ, ಬಾಗಿಸುವುದು, ಗುರಿಯಿಡುವುದು ಮುಂತಾಗಿ ಯುದ್ಧದಲ್ಲಿ ಮೇಲಾಟವನ್ನು ತೋರಿ, ಶೌರ್ಯದಲ್ಲಿ ಮಿಾರುತ್ತ ನಾನಾ ಹೊಡೆತಗಳಿಂದ ಹೋರಾಡಿತು. ೩೯. ಕಡಿದು ಕೊಂಡ ತೋಳುಗಳಿಂದ, ಸಿಡಿದುಹೋದ ತಲೆಚಿಪ್ಪುಗಳಿಂದ, ಸತ್ತ ಆನೆಗಳಿಂದ, ಕರುಳಿನ ತೋರಣಗಳಿಂದ, ಕಡಿದುಹಾಕಿದ ರಥದ ಸಮೂಹದಿಂದ, ಕೊಯ್ದು ಅನೇಕ ಕುದುರೆಗಳಿಂದ, ಕತ್ತರಿಸಲ್ಪಟ್ಟ ಹಿಡಿಗಳಿಂದ, ನರಗಳಿಂದ, ತಲೆಯಿಂದ ಬೇರ್ಪಟ್ಟು

CC-0. Jangamwadi Math Collection. Digitized by eGangotri

ಬಿಡೆ ಕುಣಿವ ಮುಂಡದಿಂ ಬೊಬ್ಬಿಡುವ ರುಂಡದಿಂ
ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡದಿಂ
ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು ೩೯

ಚೂಣಿ ಪೊಯ್ದಾಡಿ ಮಡಿಯಲ್ಕೆ ಸುರನಾಯಕರ್
ಬಾಣಾಸನದೊಳಂಬ ಪೂಡಿ ಕೆಲಬಲದೊಳೆ
ಕ್ಷೋಣಿ ದೈತ್ಯರ ಮಹಾಸೇನೆ ನಡೆತರೆ ನಾಡೆ ಸಮರಸನ್ನಾಹದಿಂದೆ
ಕಾಣಬರ್ಪುದು ಸುರೇಂದ್ರನ ಬಲ್ಮೆಯುಂ ಮಹಾ
ತ್ರಾಣನಲ್ಲಾ ಕಂಡು ಮುನ್ನರಿವೆವೆಂದು ಗೀ
ರ್ವಾಣಭಟರಂ ಪಚಾರಿಸಿ ವಜ್ರನಾಭನುರುಬಿದನೊಡನೆ ಬೊಬ್ಬಿರಿವುತೆ ೪೦

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೪೧

## ಮೂವತ್ತೆಂಟನೆಯ ಸಂಧಿ ಸಂಪೂರ್ಣ

ಕುಣಿದಾಡುವ ಶರೀರಗಳಿಂದ, ಆರ್ಭಟಿಸುವ ತಲೆಗಳಿಂದ,ಮಿದುಳಿನಿಂದ ಹೊರಟ ಜೊಂಡಿನಿಂದ; ಸೊಂಟ ತೊಡೆಗಳ ತುಂಡಿನಿಂದ, ಹೊಡೆದು ಕತ್ತರಿಸಿಬಿದ್ದವರಿಂದ, ರಕ್ತದಲ್ಲಿ ಹೊರಳಾಡುತ್ತಿರುವವರಿಂದ ಯುದ್ಧಭೂಮಿ ಭಯಂಕರವಾಗಿ ಕಂಡಿತು. ೪೦. ಮುಂಭಾಗದ ಸೈನ್ಯ ಹೋರಾಡಿ ಮಡಿಯಲು ಸುರನಾಯಕರು ಬಿಲ್ಲಿಗೆ ಬಾಣವನ್ನು ಹೂಡಿ ಅಕ್ಕಪಕ್ಕಗಳಲ್ಲಿ ಬರಲು, ದೊಡ್ಡ ಸಂಖ್ಯೆಯ ರಾಕ್ಷಸರ ಮಹಾಸೈನ್ಯ ಯುದ್ಧ ಸನ್ನಾಹದಿಂದ ನಡೆದುಬರಲು, ವಜ್ರನಾಭನು ಉತ್ಸಾಹದಿಂದ ಆರ್ಭಟಿಸುತ್ತ ದೇವೇಂದ್ರನ ಪರಾಕ್ರಮವನ್ನು ನೋಡಲು ಬರುತ್ತೇನೆ; ಮಹಾಪರಾಕ್ರಮಿಯಲ್ಲವೆ ! ನೋಡಿ ತಿಳಿಯುತ್ತೇನೆ ಎಂದು ದೇವಸೈನಿಕರನ್ನು ಹೀಯಾಳಿಸಿ ಬೊಬ್ಬಿರಿಯುತ್ತ ಕೂಡಲೆ ಮೇಲೆಬಿದ್ದನು; ೪೧. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ; ಅರ್ಥವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ, ಎಲ್ಲ ಭೋಗಗಳನ್ನೂ, ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೆಂಟನೆಯ ಸಂಧಿ ಮುಗಿಯಿತು

CC-0. Jangamwadi Math Collection. Digitized by eGangotri

# ಮೂವತ್ತೊಂಬತ್ತನೆಯ ಸಂಧಿ

ಸೂಚನೆ : ಹರಿ ವಜ್ರನಾಭನಂ ಹರಿಸಲ್ ಮಹಾನಾಭ
ನಿರದಾಗ ಹರಿಯನತಿಪರಿಭವಿಸೆ ಕಾಣುತುಂ
ಹರಕುಮಾರಂ ತಾರಕಾಸುರನ ಸೇನೆಯುಂ ಬರಿಕೈದನುಗ್ರದಿಂದೆ

ಹರಿಹರಿಯ ಹಗೆಗೆಳೆಯುನಂ ಹರಿಯೊಳೊಂದಿರ್ದ
ವರಕಮಲಪರ್ಯಾಯವಂ ತದ್ವಿರೋಧಿಯಾ
ಕರಧೃತಾಯುಧಭೇದವಮಂ ಹಸ್ತದೊಳ್ ತಳೆದು ಶಿವರಿಪ್ರುವನೇರಿದವನ
ತರುಣಿಯಯ್ಯನ ಮೆರೆವ ಪರ್ಯಾಯದಾತ್ಮಜನ
ಶಿರವನರಿದಮಳ ಪಂಪಾವಿರೂಪಾಕ್ಷ ಘನ
ಕರುಣದಿಂ ರಕ್ಷಿಪುದು ಭೀಮಾಂಗದಹನನಿಸ್ಸೀಮ ಲೋಕಾಭಿರಾಮಾ ೧

ಸೂಚನೆ : ವಿಷ್ಣುವು ವಜ್ರನಾಭನನ್ನು ಸಂಹರಿಸಿದನು. ಆಗ ಮಹಾನಾಭನು ವಿಷ್ಣುವನ್ನು ಅತಿಯಾಗಿ ಪರಾಭವಗೊಳಿಸಲು ಅದನ್ನು ನೋಡಿ ಬಹಳ ಕೋಪಾವಿಷ್ಟ ನಾದ ಷಣ್ಮುಖನು ತಾರಕಾಸುರನ ಸೈನ್ಯವನ್ನು ನಾಶಮಾಡಿದನು. ೧. ಹರಿಹರಿಯ= ಸರ್ಪವನ್ನು ಕೊಲ್ಲುವ ಗರುಡನ (ಹರಿಯರಿಯ ಎಂಬ ಪಾಠವಿದ್ದರೆ ಉತ್ತಮ) ಹಗೆ= ವೈರಿಯಾದ ಇಂದ್ರನಿಗೆ, ಗೆಳೆಯನಾದ ವಿಷ್ಣುವನ್ನು ಬಾಣದಲ್ಲಿ ಧರಿಸಿರುವ (ಇದು ಪಂಪಾವಿರೂಪಾಕ್ಷನಿಗೆ ವಿಶೇಷಣ), ಕಮಲದ ಪರ್ಯಾಯವಾದ ಅಬ್ಜವನ್ನು ಎಂದರೆ ಶಂಖವನ್ನು ಕೈಯಲ್ಲಿ ಧರಿಸಿರುವ ಮತ್ತು ಅಬ್ಜಕ್ಕೆ = ಚಂದ್ರನಿಗೆ ವಿರೋಧಿಯೆನಿಸಿದ ಚಕ್ರವನ್ನು (ಚಕ್ರವಾಕಪಕ್ಷಿ–ಸುದರ್ಶನಚಕ್ರ) ಕೈಯಲ್ಲಿ ಧರಿಸಿರುವ, ಅಲ್ಲದೆ ಶಿವರಿಪುವ = ಸರ್ಪವೈರಿಯಾದ ಗರುಡನನ್ನು ಏರಿರುವ, ವಿಷ್ಣುವಿನ ಮಡದಿಯಾದ ಲಕ್ಷ್ಮಿಗೆ ತಂದೆ ಯಾದ ಸಮುದ್ರದ ಪರ್ಯಾಯವಾದ ಜಲಂಧರ (ಜಲಧಿ–ಒಬ್ಬರಾಕ್ಷಸ) ಎಂಬ ಸಮುದ್ರ ಪುತ್ರನನ್ನು ಸಂಹರಿಸಿದ ಪಂಪಾವಿರೂಪಾಕ್ಷನೆ, ಯಮನನ್ನು ನಾಶಮಾಡಿದ ನಿಸ್ಸೀಮನೆ,

---

ಟಿಪ್ಪಣಿ : ಶಿವರಿಪು ಎಂದರೆ ಗರುಡನೆಂದು ಅರ್ಥಮಾಡಬೇಕಾಗುತ್ತದೆ, ಅದು ಹೇಗೆ ? ಶಿವಶಬ್ದಕ್ಕೆ ಸರ್ಪವೆಂಬ ಅರ್ಥ ಯಾವ ಕೋಶದಲ್ಲೂ ದೊರೆಯಲಿಲ್ಲ. ಲಿಂಗಾಯತ ವಿದ್ಯಾಭಿ ವೃದ್ಧಿಸಂಸ್ಥೆ, ಧಾರವಾಡ ಇವರು ಪ್ರಕಟಿಸಿರುವ ಚೆನ್ನಬಸವ ಪುರಾಣದಲ್ಲಿ (1934) ಸರ್ಪವೆಂಬ ಅರ್ಥವನ್ನು ಬರೆದಿದೆ (ಪುಟ 820).

CC-0. Jangamwadi Math Collection. Digitized by eGangotri

ಎಲೆ ಸಿದ್ಧರಾಮೇಶ ಕೇಳಿನ್ನು ದನುಜಸಂ
ಕುಲದೊಳಗ್ಗಳೆಯು ವೀರರೆ ತವಕದಿಂದಲಾ
ಖಳವಜ್ರನಾಭನಿರದೊತ್ತಾಗಿ ಬರಲಿತ್ತ ಕಾಣುತ್ತಲಾಗ ಸುರರ
ಬಲದ ದೊರೆದೊರೆಗಳೇ ಕೋಪದಿಂ ಕೂಡಿ ನಿಜ
ಬಲವೆರಸಿ ಸಕಲಸನ್ನಾಹದಿಂದೊದಗಿ ಭುಜ
ಬಲದಿಂದೆ ನಡೆತಂದು ಸುರಪನಂ ಬಳಸಿದರದೇನೆಂಬೆನಚ್ಚರಿಯನು ೨

ಕವಿದುದಿಂದ್ರನ ಕೆಲಬಲಂಗಳೊಳ್ ದಿಕ್ಪಾಲ
ನಿವಹಮಾ ಸುರ ಸಿದ್ಧ ವಿದ್ಯಾಧರರ್ ಮುಖ್ಯ
ದಿವಿಜರಿಟ್ಟಣಿಸಿ ನೂಕಿದರಿಭ ತುರಂಗ ರಥ ಪತ್ತಿಗಳ ಗಡಣದಿಂದೆ
ವಿವಿಧ ವಾದ್ಯಂಗಳ ವಿಡಾಯಿಯಿಂದಾರ್ಭಡಿಸಿ
ತಿವಿ ಬಸುರನುಗಿ ಕರುಳನಗಿಯೆನುತ್ತಾಹವ
ಕ್ಕವಗಡಿಸಿದುದು ವಜ್ರನಾಭನಿದಿರೊಳ್ ನಿಂದು ಸರಳ್ವಳೆಗಳಂ ಕರೆವುತೆ ೩

ರಣಕೆ ಬಂದವರಮರರಾಜರೋ ಕೂಡೆ ಸಂ
ದಣಿಸುವವರಷ್ಟದಿಕ್ಪಾಲಕರೊ ಮುಂದೆ ಮಾ
ರ್ಗಣದ ಮಳೆಗರೆವವರ್ ಸುಭಟರೋ ಚೋದ್ಯಮಿದು ಪಸಿದ ಪೆರ್ಬುಲಿಯ ಬನಕೆ
ಸೆಣಸಲೆಂದೆರಳೆವಳಗಂ ಬಂದೊಲಾದುದೀ
ಕಣೆಯದೊಳ್ಪರಿವಪ್ಪುದೆಂದೆನುತ್ತಸುರಕುಲ
ಮಣೆ ಭುಜಂಬೊಯ್ದಾರಿ ಬೊಬ್ಬಿರಿದು ಬೆರಸಿದಂ ಖಾತಿಯಿಂ ಪರಬಲವನು ೪

ಲೋಕಾಭಿರಾಮನೆ ಸಲಹು. ೨. ಅಯ್ಯ ಸಿದ್ಧರಾಮ, ಇನ್ನು ಕೇಳು. ರಾಕ್ಷಸಸಮೂಹದಲ್ಲಿ ಶ್ರೇಷ್ಠವೀರರೂ ಮತ್ತು ತವಕದಿಂದ ದುಷ್ಟ ವಜ್ರನಾಭನೂ ತಡಮಾಡದೆ ಗುಂಪು ಕೂಡಿ ಬಂದರು. ಅದನ್ನು ನೋಡಿ ಆಗ ದೇವತೆಗಳ ಸೈನ್ಯದ ದೊಡ್ಡದೊಡ್ಡ ನಾಯಕರೇ ಕೋಪದಿಂದ ತಮ್ಮ ಸೈನ್ಯದೊಡಗೂಡಿ ಸಕಲಸನ್ನಾಹಗೊಂಡು ಮೇಲೆರಗಿ ಪರಾಕ್ರಮದಿಂದ ಹೊರಟುಬಂದು ದೇವೇಂದ್ರನನ್ನು ಬಳಸಿದರು. ಆ ಆಶ್ಚರ್ಯವನ್ನು ಏನೆಂದು ಹೇಳಲಿ ? ೩. ಇಂದ್ರನ ಅಕ್ಕಪಕ್ಕಗಳಲ್ಲಿ ದಿಕ್ಪಾಲಕರ ಸಮೂಹ ಸುತ್ತಿಕೊಂಡಿತು. ಸುರ-ಸಿದ್ಧ-ಸಾಧ್ಯ-ವಿದ್ಯಾಧರರೇ ಮೊದಲಾದ ಮುಖ್ಯದೇವತೆಗಳು ಗುಂಪುಗೂಡಿ ಎದುರಿಸಿದರು. ಕುದುರೆ-ರಥ-ಪದಾತಿಗಳ ಸಮೂಹದಿಂದ, ನಾನಾ ವಾದ್ಯಗಳು ಬಹುವಾಗಿ ಆರ್ಭಟಿಸಿ, ತಿವಿ, ಹೊಟ್ಟೆಯನ್ನು ಬಗಿ, ಕರುಳನ್ನು ಎಳೆ ಎನ್ನುತ್ತ ವಜ್ರನಾಭನ ಎದುರಿನಲ್ಲಿ ನಿಂತು ಬಾಣಗಳ ಮಳೆಯನ್ನು ಕರೆಯುತ್ತ ಯುದ್ಧಸಾಹಸಕ್ಕೆ ಎಳಸಿತು. ೪. ಯುದ್ಧಕ್ಕೆ ಬಂದವರು ದೇವತೆಗಳ ರಾಜರೊ ? ಅವರ ಸಂಗಡ ಸೇರಿಕೊಂಡವರು ಅಷ್ಟದಿಕ್ಪಾಲಕರೊ ? ಮುಂದೆ ಬಾಣದ ಮಳೆಯನ್ನು ಸುರಿಸುವವರು ಶೂರಭಟರೊ ? ಇದು ವಿಸ್ಮಯಕರವಾದುದು. ಹಸಿದ ಹೆಬ್ಬುಲಿಯ ಕಾಡಿಗೆ ಹೋರಾಡಲೆಂದು ಜಿಂಕೆಗಳ ಸಮೂಹ ಬಂದಂತಾಯಿತು, ಈ ಬಾಣದ ರೀತಿ ಎಂದೆನ್ನುತ್ತ ರಾಕ್ಷಸರ ಕುಲದ

CC-0. Jangamwadi Math Collection. Digitized by eGangotri

ತೆಗೆಯದಿರಿ ಕೊಂಡ ಹಜ್ಜೆಯ ಬೆನ್ನೊಳಿರ್ಪವಂ
ಜಗದ ವಲ್ಲಭನ ಸುಕುಮಾರನಲ್ಲಾ ಸಾಕು
ಬಗಿಯದಿರಿ ದಾನವರ ಸಾಹಸಂಗಳನೆನುತ್ತುಬ್ಬಿ ಬೊಬ್ಬಿರಿದು ಜರಿದು
ತೆಗದರಿಟ್ಟಣಿಸಿ ಪೊಯ್ ತಿವಿ ಪಿಡಿಸು ಬಸುರ್ಗಳಂ
ಬಗಿ ಕರುಳನುಗಿ ಮಿದುಳನಗಿ ರಕ್ತವಾರಿಧಾ
ರೆಗಳನೆರೆ ಭೂತವೇತಾಳರ್ಗೆನುತ್ತೆ ಕವಿದುದು ಸುರಪದಾತಿ ಮಸಗಿ ೫

ಮುಂದುವರಿದಿರದುರುಬಿ ತರುಬಿ ಕಾದಿತು ಖಾತಿ
ಯಿಂದೆ ನಾನಾ ದಿಕ್ಕುಗಳೊಳೆ ಬೊಬ್ಬಿರುವುತ್ತೆ
ನಿಂದು ಸುರಪಾಗ್ನಿ ಯಮ ನಿರುತಿ ವರುಣಾನಿಲ ಕುಬೇರರೀಶಾನ್ಯರೆಂಬ
ಸಂದ ದಿಕ್ಪಾಲಕನಿಕಾಯ ವಸು ತರಣಿಗಳ
ವೃಂದ ಯಕ್ಷೋರಕ್ಷ ಸಿದ್ಧ ಸಾಧ್ಯೋರಗರ
ಮುಂದಿಯದನೀಕ್ಷಿಸುತೆ ವಜ್ರನಾಭಂ ಕೋಪದಿಂದಾರಿ ಬೊಬ್ಬಿರಿವುತೆ ೬

ಸರಳ ಮಳೆಗರೆದು ಕೈದೋರಿದಂ ಮೀರಿದಂ
ಸುರಸುಭಟರಸುಗಳಂ ಸೇದಿದಂ ಕಾದಿದಂ
ಧುರದೊಳಗೆ ಮಲೆತವರನಟ್ಟಿದಂ ಕುಟ್ಟಿದಂ ಪೆಸರುಳ್ಳ ನಾಯಕರನು
ಕರೆಕರೆದು ಮೂದಲಿಸಿ ತಾಗಿದಂ ಕೂಗಿದು
ತುರಗ ಮದಕರಿಗಳಂ ಕೆಡೆಪಿದಂ ಮಡಿಪಿದಂ
ಭರದಿಂ ವರೂಥವಂ ರೂಥಮಂ ಕೆಡಸಿದಂ ದಾನವಂ ದಿವಿಜಬಲದ ೭

ನಾಯಕನಾದ ವಜ್ರನಾಭನು ಭುಜತಟ್ಟಿ ಆರ್ಭಟಿಸಿ ಕೋಪದಿಂದ ಶತ್ರುಸೈನ್ಯವನ್ನು ಎದುರಿಸಿದನು. ೫. ಇಟ್ಟಹೆಜ್ಜೆಯನ್ನು ಹಿಂತೆಗೆಯಬೇಡಿ. ನಮ್ಮ ಬೆಂಗಾವಲಿಗೆ ಜಗದೊಡೆಯನಾದ ಶಿವನ ಮಗನೆ ಇದ್ದಾನಲ್ಲ ! ಸಾಕು, ರಾಕ್ಷಸರ ಪರಾಕ್ರಮವನ್ನು ಲೆಕ್ಕಿಸದಿರಿ ಎನ್ನುತ್ತ ಉಬ್ಬಿ ಆರ್ಭಟಿಸಿ, ಹೀಯಾಳಿಸಿ ಗುಂಪುಗೂಡಿದರು. ಹೊಡಿ, ತಿವಿ, ಹಿಡಿಸು, ಹೊಟ್ಟೆಗಳನ್ನು ಬಗಿ, ಕರುಳನ್ನು ಕೀಳು, ಮಿದುಳನ್ನು ಜಗಿ, ರಕ್ತಪ್ರವಾಹವನ್ನು ಭೂತಭೇತಾಳಗಳಿಗೆ ಸುರಿ ಎನ್ನುತ್ತ ದೇವತೆಗಳ ಕಾಲಾಳುಸೈನ್ಯ ಕೋಪಗೊಂಡು ಮುತ್ತಿತು. ೬. ಪ್ರಖ್ಯಾತರಾದ ದೇವೇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನ್ಯ ಎಂಬ ಅಷ್ಟದಿಕ್ಪಾಲಕರ ಸಮೂಹ, ವಸು, ಸೂರ್ಯರ ವೃಂದ, ಯಕ್ಷ, ರಕ್ಷ, ಸಿದ್ಧ, ಸಾಧ್ಯ, ಸರ್ಪಸಮೂಹ ಇವೆಲ್ಲವೂ ನಾನಾ ದಿಕ್ಕುಗಳಲ್ಲಿ ಆರ್ಭಟಿಸುತ್ತ ನಿಂತು ಮುಂದುವರಿದು, ಉಬ್ಬಿ, ಹಿಂದೊತ್ತಿ ಕೋಪದಿಂದ ಹೋರಾಡಿತು. ಅದನ್ನು ನೋಡಿ ವಜ್ರನಾಭನು ಕೋಪದಿಂದ ಅರಚಿ ಆರ್ಭಟಿಸುತ್ತ, ೭. ಬಾಣಗಳ ಮಳೆಗರೆದು ಪರಾಕ್ರಮವನ್ನು ತೋರಿಸಿದನು; ಎಲ್ಲರನ್ನೂ ಮೀರಿಸಿದನು, ದೇವತೆಗಳ ಕಡೆಯ ಶೂರ ಭಟರ ಪ್ರಾಣಗಳನ್ನು ಸೆಳೆದನು, ಹೋರಾಡಿದನು. ಯುದ್ಧದಲ್ಲಿ ಎದುರಿಸಿದವರನ್ನು ಹಿಂದಟ್ಟಿ ಕುಟ್ಟಿದನು. ಹೆಸರಾಂತ ನಾಯಕರನ್ನು ಕರೆಕರೆದು ಹೀಯಾಳಿಸಿ ಎದುರಿಸಿದನು,

CC-0. Jangamwadi Math Collection. Digitized by eGangotri

ಸುರಪತಿಯನೆಚ್ಚನಗ್ನಿಯನೊತ್ತಿದಂ ಯಮನ
ಭರವಮುರೆ ನಿಲಿಸಿದಂ ನೈರುತ್ಯನೊಡಲ ಜ
ರ್ಜರಿತಮಂ ಮಾಡಿದಂ ವರುಣನಂ ಘಾತಿಸಿದನನಿಲನೊಡಲಂ ಸೀಳ್ದನು
ವಿರಥನಂ ಮಾಡಿದಂ ಧನಪತಿಯನೀಶಾನ
ನುರದೊಳಗೆ ಸೆಕ್ಕಿದಂ ಸರಳ್ಗಳಂ ವಸು ರುದ್ರ
ತರಣಿಗಳ ಕಾಯಮಂ ನೋಯಿಸಿದನಾಹವದೊಳಸುರಸೇನಾನಿಯುಂದು ೮

ಮುರಿದುದೆಮ್ಮಯ ಸೇನೆ ಸಮರದೊಳ್ ಪೊಕ್ಕು ಮೈ
ಗುರುಹ ಕಾಣಿಸಿಕೊಂಬರಂ ಕಾಣೆವಗ್ನಿಜನ
ಬರಿದೆ ಕರೆತಂದೆವಕಟಕಟ ಪುಗುದೆಸೆಯಾವುದೆಮಗೆಂದು ಬಾಯ್ಬಿಡುತ್ತೆ
ಒರಲ್ವಮರರಂ ನೋಡಿ ನಗುತೆ ನಿಜವಾಹನದ
ಗರಿಯ ಗಾಳಿಯೊಳೆ ಗಿರಿಕುಲವನಲ್ಲಾಡಿಸುತ್ತೆ
ತರಿಸಂದು ಸೆಣಸಿದಂ ಕಲಿವಜ್ರನಾಭನಂ ಕಮಲಾಕ್ಷನಾ ಕ್ಷಣದೊಳು ೯

ಆದುದೀರ್ವರ್ಗೆ ಸಮರಂಗವಂಬುಂಬುಗಳ
ಬೀದಿವರಿಗಿಂಬಿಲ್ಲವಾಗಸಂ ಬೊಬ್ಬೆಯ ನಿ
ನಾದಕಾಶಾತಟಂ ಸಾಲದು ಸುಪರ್ಣರಥಚಕ್ರಂಗಳೋಡಾಟಕೆ

ಆರ್ಭಟಿಸಿದನು, ಕುದುರೆ ಮದದಾನೆಗಳನ್ನು ಹೊಡೆದು ಕೆಡವಿದನು,ಸಾಯಿಸಿದನು. ರಾಕ್ಷಸನು ದೇವಸೈನ್ಯದ ರಥಗಳನ್ನು ಹಾಳುಮಾಡಿದನು. ೮. ಅಂದು ರಾಕ್ಷಸರ ಸೇನಾಧಿಪತಿ ಯುದ್ಧದಲ್ಲಿ ದೇವೇಂದ್ರನನ್ನು ಬಾಣದಿಂದ ಹೊಡೆದನು. ಅಗ್ನಿಯನ್ನು ಹಿಂದಟ್ಟಿದನು. ಯಮನ ರಭಸವನ್ನು ನಿಲ್ಲಿಸಿದನು. ನೈರುತ್ಯನ ದೇಹವನ್ನು ಜರ್ಜರಿತವನ್ನಾಗಿ ಮಾಡಿದನು. ವರುಣನನ್ನು ನೋಯಿಸಿದನು. ವಾಯುವಿನ ದೇಹವನ್ನು ಸೀಳಿದನು. ಕುಬೇರನನ್ನು ರಥವಿಲ್ಲದವನ್ನಾಗಿ ಮಾಡಿದನು. ಈಶಾನನ ದೇಹದಲ್ಲಿ ಬಾಣಗಳನ್ನು ನಾಟಿದನು. ವಸು, ರುದ್ರ, ಸೂರ್ಯರ ದೇಹವನ್ನು ನೋಯಿಸಿದನು. ೯. ನಮ್ಮ ಸೈನ್ಯ ಚದುರಿ ಹಿಮ್ಮೆಟ್ಟಿತು. ಯುದ್ಧದಲ್ಲಿ ಹೊಕ್ಕು ಸಾಹಸವನ್ನು ತೋರಿಸುವವರನ್ನು ಕಾಣೆ. ಗುಹನನ್ನು ಸುಮ್ಮನೆ (ವ್ಯರ್ಥವಾಗಿ) ಕರೆತಂದೆವು. ಅಯ್ಯೊ ! ತಲೆತಪ್ಪಿಸಿಕೊಳ್ಳುವ ಸ್ಥಳ ನಮಗೆ ಯಾವುದು ? ಎಂದು ಬಾಯ್ಬಿಡುತ್ತ ಕೂಗಿಕೊಳ್ಳುವ ದೇವತೆಗಳನ್ನು ನೋಡಿ ನಗುತ್ತ ವಿಷ್ಣುವು ತನ್ನ ವಾಹನವಾದ ಗರುಡನ ರೆಕ್ಕೆಯಿಂದ ಹೊರಟ ಗಾಳಿಯಿಂದ ಪರ್ವತಸಮೂಹವನ್ನು ಅಲ್ಲಾಡಿಸುತ್ತ ಬಂದು ವಜ್ರನಾಭನ ಜೊತೆಯಲ್ಲಿ ಹೋರಾಡಿದನು. ೧೦. ಅವರಿಬ್ಬರಿಗೂ ಸಮನಾದ ಯುದ್ಧವಾಯಿತು. ಸಿಕ್ಕಸಿಕ್ಕೆಡೆಗೆ ಹರಿಯುವ ಬಾಣಗಳಿಗೆ ಆಕಾಶದಲ್ಲಿ ಜಾಗವಿಲ್ಲದಂತಾಯಿತು. ಆರ್ಭಟದ ಶಬ್ದಕ್ಕೆ ದಿಕ್ತಟಗಳು ಸಾಲ

CC-0. Jangamwadi Math Collection. Digitized by eGangotri

ಮೇದಿನಿಯೆ ನೆರೆಯದೆನೆ ಸಮಜೋಳಿ ಜೋಕಿಯಿಂ
ಕಾದಿದರ್ ಬಲ್ಲಬಿನ್ನಾಣೆಗಳ್ ನಾನಾ ವಿ
ನೋದದಿಂದಸ್ತ್ರ ಪ್ರತ್ಯಸ್ತ್ರ ದಿವ್ಯಾಸ್ತ್ರ ಮಂತ್ರಾಸ್ತ್ರಂಗಳೇಳ್ಗೆಯಿಂದೆ ೧೦

ಉರಗಬಾಣದೊಳಿಸುವನವನಾಕಳಂಬವಂ
ಗರುಡಾಸ್ತ್ರದಿಂದಿವಂ ಕಡಿದು ಕೆಯ್ಯೊಡನೆ ದ
ಳ್ಳುರಿಯಂಬಿನಿಂದೆಸುವನಾ ಶರವನಾ ಖಳಂ ನಂದಿಪಂ ವರುಣಾಸ್ತ್ರದೆ
ಮರಳಿ ಗಿರಿಖಗದೊಳವನೆಸುವನಾ ಮಾರ್ಗಣವ
ನರವಿಂದನಾಭನಾ ವಜ್ರಶರದಿಂದೆ ಜ
ರ್ಜರಿತವಂ ಮಾಡುವಂ ತೊಡುವ ಕಡಿವದಟೀರ್ವರಿಗೆ ಸಾಟಿಯಾಯ್ತು ಬಳಿಕ ೧೧

ಖಳಪತಿಗೆ ದಳಪತಿಯೆ ನೀನು ತಾಳೆನುತೆ ಕೈ
ಚಳಕದಿಂ ವೈಷ್ಣವಾಸ್ತ್ರದೊಳಾರ್ದೆಸಲ್ಕವನ
ತಲೆ ಚಿಗಿದುದಾಗಸಕೆ ಮುಂಡವೆಸುತಿರ್ದುದರೆಜಾವವರಿಯಂತರದೊಳು
ಬಳಿಕ ಗರುಡನಿರದೆ ನೂಂಕೆ ತಾಗಿದುದು ಭುಜ
ಬಲದರ್ಪದಿಂದೆ ಪುಂಖಾನುಪುಂಖಂಗಳಿಂ
ಮುಳಿದೆಸುತ್ತಾ ಮಹಾನಾಭನ ಚತುರ್ಬಲಂ ಹರಿಯ ಸಮ್ಮುಖದೊಳಾರ್ದು ೧೨

ಎತ್ತಲುಂ ಕವಿದೆಸುವ ಖಳಸೇನೆಯುಂ ಕಂಡು
ಚಿತ್ತಜಪಿತಂ ಮಹಾಕೋಪದಿಂದನಿಬರಂ
ಕತ್ತರಿಸಿ ಮುಂಬರಿದು ಬರ್ಪುದಂ ಕಂಡು ಮಹಾನಾಭನಾ ಕ್ಷಣದೊಳು

ದಾಯಿತು. ಗರುಡ ಮತ್ತು ರಥಚಕ್ರಗಳ ಓಡಾಟಕ್ಕೆ ಭೂಮಿಯೇ ಸಾಲದು ಎನ್ನುವಂತೆ ಸಮಜೋಡಿಯ ರೀತಿಯಿಂದ ಬಲ್ಲ ಜಾಣರೂ ನಾನಾ ವಿನೋದದಿಂದ, ಅಸ್ತ್ರ-ಪ್ರತಿ ಅಸ್ತ್ರ, ದಿವ್ಯಾಸ್ತ್ರ, ಮಂತ್ರಾಸ್ತ್ರಗಳ ಮೇಲಾಟದಿಂದ ಯುದ್ಧ ಮಾಡಿದರು. ೧೧. ಸರ್ಪಾಸ್ತ್ರದಿಂದ ಅವನು ಹೊಡೆಯುತ್ತಾನೆ. ಆ ಬಾಣವನ್ನು ಗರುಡಾಸ್ತ್ರದಿಂದ ಕಡಿದು ಒಡನೆಯೆ ಇವನು ಆಗ್ನೇಯಾಸ್ತ್ರದಿಂದ ಹೊಡೆಯುತ್ತಾನೆ. ಆ ಬಾಣವನ್ನು ಆ ರಾಕ್ಷಸನು ವರುಣಾಸ್ತ್ರದಿಂದ ಆರಿಸುತ್ತಾನೆ. ಮತ್ತೆ ಪರ್ವತಾಸ್ತ್ರದಿಂದ ಹೊಡೆಯುತ್ತಾನೆ. ಆ ಬಾಣವನ್ನು ವಿಷ್ಣುವು ವಜ್ರಾಯುಧಾಸ್ತ್ರದಿಂದ ಜರ್ಜರಿತವನ್ನಾಗಿ ಮಾಡುತ್ತಾನೆ. ಈ ರೀತಿ ಬಿಡುವ ಕಡಿಯುವ ಸಾಹಸ ಇಬ್ಬರಿಗೂ ಸರಿಸಮವಾಯಿತು. ಅನಂತರ, ೧೨. ರಾಕ್ಷಸನಿಗೆ ನೀನು ಸೇನಾಪತಿಯೇ, ತಾಳು ಎನ್ನುತ್ತ ಅಬ್ಬರಿಸಿ ಕೈಚಳಕದಿಂದ ವೈಷ್ಣವಾಸ್ತ್ರದಿಂದ ಹೊಡೆಯಲು ವಜ್ರನಾಭನ ತಲೆ ಆಕಾಶಕ್ಕೆ ಹಾರಿತು. ಒಂದು ಜಾವಕಾಲದವರೆಗೆ ಶರೀರ ಬಾಣದ ಮಳೆ ಸುರಿಸುತ್ತಿತ್ತು. ಬಳಿಕ ಗರುಡನು ತಡೆಯದೆ ಹಿಂದಟ್ಟಲು ಮಹಾನಾಭನ ಚತುರ್ಬಲವೂ ಕೋಪದಿಂದ ಆರ್ಭಟಿಸಿ ವಿಷ್ಣುವಿನ ಎದುರಿನಲ್ಲಿ ಭುಜಪರಾಕ್ರಮದಿಂದ ಒಂದೇ ಸಮನಾಗಿ ಬಾಣ ಪ್ರಯೋಗಿಸುತ್ತ ಪ್ರತಿಭಟಿಸಿತು. ೧೩. ಎಲ್ಲೆಲ್ಲೂ ಮುತ್ತಿ ಬಾಣ ಬಿಡುತ್ತಿದ್ದ ರಾಕ್ಷಸಸೈನ್ಯವನ್ನು ನೋಡಿದ ವಿಷ್ಣುವು ಅತಿಯಾದ ಕೋಪದಿಂದ ಆ

CC-0. Jangamwadi Math Collection. Digitized by eGangotri

ಮತ್ತದಂತಿಯ ಕರದ ಕಬ್ಬನುಗಿದವನದಾ
ರಿತ್ತ ಸಮ್ಮುಖವಾಗೆನುತ್ತೆ ಖಳನೊದನೆ ಮಸೆ
ವೆತ್ತ ಶರವೈದರಿಂ ಮೂದಲಿಸಿ ಕಮಲಾಂಬಕನನೆಚ್ಚು ಬೊಬ್ಬಿರಿದನು ೧೩

ಭರದೊಳಗೆ ವಜ್ರನಾಭನ ಹರಿಬಕಿದಿರಾದ
ಮರುಳನಾರೆಲವೊ ನೀ ನಿನ್ನ ಸೇನಾಖಳಂ
ಕರೆಯಲಟ್ಟಿದನೊ ಮೇಣಂತಲ್ಲದಿರಲೆನ್ನ ಸರಿಸದೊಳ್ ಮಾರಾಂಪೆಯಾ
ಶಿರವನೀಯದೆ ಪೋಗು ಕಾಯ್ವೆನೆಂದಾ ಖಳನ
ಶರವನೈದಂಬಿನಿಂ ಕಡಿದು ಪುನರಪಿ ನಾಲ್ಕು
ಶರದಿಂದಲವನ ರಥ ತುರಗ ಸಾರಥಿ ಕರದ ಚಾಪಂಗಳಂ ಕಡಿದನು ೧೪

ಚಾಪಮಂ ಕೊಂಡು ಸೂತಾಶ್ವಧ್ವಜಂಗಳಿಂ
ಚಾಪಲ್ಯಸ್ಯಂದನಮನೇರಿ ಮಚ್ಛರಮನೆ
ಚ್ಚಾ ಪಂಥಮಂ ಮಗುಳೆ ತೋರೆನುತೆ ನಾಲ್ಕಂಬಿನಿಂ ಹರಿಯ ಬಾಹುಗಳನು
ಕೋಪದಿಂದೆಸೆಯೆ ಹರಿ ನೊಂದನಕಟೆನುತಂತ
ಕೋಪಮರ್ ದಿಕ್ಪಾಲರೊತ್ತಿದರ್ ತತ್‌ಸೈನ್ಯ
ಕೋಪಮಿತಭಟರೆಸುತೆ ಕೈಚಳಕದಿಂದವನ ತೇರ ಸುತ್ತಲ್ ಮುತ್ತಲು ೧೫

ಎಲ್ಲರನ್ನೂ ತುಂಡರಿಸಿ ಮುಂದುವರಿದು ಬರುವುದನ್ನು ನೋಡಿ ಆ ಕ್ಷಣದಲ್ಲಿ ಮಹಾನಾಭನು ಮದಿಸಿದ ಆನೆಯ ಕೈಯ ಕಬ್ಬನ್ನು ಕಿತ್ತವನು ಯಾರು ? ಎದುರಿನಲ್ಲಿ ಬಾ ಎಂದು ವಿಷ್ಣು ವನ್ನು ಹೀಯಾಳಿಸಿ ಆ ರಾಕ್ಷಸನು ತೀಕ್ಷ್ಣವಾದ ಐದು ಬಾಣಗಳಿಂದ ಅವನನ್ನು ಹೊಡೆದು ಅಬ್ಬರಿಸಿದನು. ೧೪. ರಭಸದಿಂದ ವಜ್ರನಾಭನ ಕೆಲಸಕ್ಕೆ ಎದುರಾದ ಮೂರ್ಖ ನೀನು ಯಾರೊ ? ಏನು ನಿನಗೆ ಆ ರಾಕ್ಷಸನು ಕರೆಕಳಿಸಿದನೆ ? ಹಾಗಿಲ್ಲದಿದ್ದರೆ ನನ್ನ ಎದುರಿನಲ್ಲಿ ಪ್ರತಿಭಟಿಸಿ ನಿಲ್ಲುತ್ತಿದ್ದೆಯಾ ? ನಿನ್ನ ತಲೆಯನ್ನು ಒಪ್ಪಿಸಬೇಡ ಹೋಗು, ರಕ್ಷಿಸುತ್ತೇನೆ ಎಂದು ಆ ರಾಕ್ಷಸನ ಐದು ಬಾಣಗಳನ್ನು ಕತ್ತರಿಸಿ ಮತ್ತೆ ನಾಲ್ಕು ಬಾಣಗಳಿಂದ ಅವನ ರಥ, ಕುದುರೆ, ಸಾರಥಿ ಮತ್ತು ಕೈಯ ಬಿಲ್ಲುಗಳನ್ನು ತುಂಡು ಮಾಡಿದನು. ೧೫. ಬೇರೊಂದು ಬಿಲ್ಲನ್ನು ತೆಗೆದುಕೊಂಡು ಸಾರಥಿ, ಕುದುರೆ, ಧ್ವಜಗಳಿಂದ ತಕ್ಷಣ ವೇಗವಾಗಿ ಸಂಚರಿಸುವ ರಥವನ್ನೇರಿ ನನ್ನ ಬಾಣವನ್ನೆ ಕಡಿದ ಆ ಶೌರ್ಯವನ್ನು ಮತ್ತೆ ತೋರಿಸು ಎನ್ನುತ್ತ ನಾಲ್ಕು ಬಾಣಗಳಿಂದ ವಿಷ್ಣುವಿನ ತೋಳ್ಗಳನ್ನು ಕೋಪದಿಂದ ಹೊಡೆಯಲು ವಿಷ್ಣುವು ನೊಂದನು. ಅಯ್ಯೋ ಎನ್ನುತ್ತ ಮೃತ್ಯುಸದೃಶರಾದ ಶೂರರಾದ ದಿಕ್ಪಾಲಕರು ಮೇಲೆ ಬಿದ್ದು ಕೈಚಳಕದಿಂದ ಬಾಣ ಪ್ರಯೋಗಿಸುತ್ತ ಅವನ ರಥವನ್ನು

CC-0. Jangamwadi Math Collection. Digitized by eGangotri

ಸುರಪತಿಯ ಚಾಪಮಂ ಕಡಿದು ವಹ್ನಿಯ ತಗರ
ಬರಿಯನೆಚ್ಚಂತಕನನಟ್ಟಿ ದೈತ್ಯನನಣೆದು
ವರುಣನೊಡಲೊಳಗರುಣವಾರಿಯಂ ತೋರಿ ವಾಯುವಿಗಾಯಸಂಗಾಣಿಸಿ
ಹರಮಿತ್ರನಂ ಪರಾಭವಿಸಿಯಿಶಾನನಗೋ
ಚರನೆನಿಸಿ ತತ್ಸೈನ್ಯಮಂ ಸವರಿ ಮತ್ತೆಯುಂ
ಹರಿಯೊಡಲೊಳೇರುಗಾಣಿಸಿ ಮಹಾನಾಭನುರೆ ಬೆಂಕೊಂಡನರಿಬಲವನು ೧೬

ಓಡಿದರ್ ಸುರರಪ್ಸರರ್ ಕೆಟ್ಟೆವೆಂದು ಮಾ
ತಾಡಿದರ್ ಯಕ್ಷರಕ್ಷೀಣಸಾಧ್ವಸರಾಗಿ
ನೀಡಿದರ್ ಖಳನಿದಿರೊಳಂಗಮಂ ಭಂಗಮಂ ಕಿನ್ನರರ್ ಕೈಕೊಂಡರು
ಬೇಡಿದರ್ ಪ್ರಾಣದಾನಮನಖಿಳಗರುಡರುರೆ
ಕೂಡಿದರ್ ಕಣ್ಗೆಟ್ಟು ಬಾಯ್ಬಿಟ್ಟು ಖತಿಯೊಳೋ
ಲಾಡಿದರ್ ದಿಕ್ಪಾಲರನಿಬರುಂ ಬಂದಭವತನುಜನಂ ಮರೆಗೊಂಡರು ೧೭

ಬನ್ನದಿಂದಂ ಮಹಾನಾಭನುರುಬೆಗೆ ಮುರಿದು
ಬೆನ್ನ ಹಿಂದಡಗಿದ ಸಮಸ್ತ ದಿಕ್ಪಾಲರಂ
ಕೆನ್ನೀರ ಧಾರೆಯಿಂ ನನೆದ ಮೈಗಳ ಯಕ್ಷ ಗರುಡ ಗಂಧರ್ವರ್ಕಳ
ತಿನ್ನಡಗನುಗಿ ಕರುಳನಗಿಯೆಲುವನೆನುತೆ ಭರ
ದಿನ್ನಡೆದು ಬರ್ಪಸುರವೀರರಂ ಕಂಡೊಡನೆ
ಪನ್ನೆರಳ್ಕಣ್ಣಿಯನದಿಂ ಕಿಡಿಸುರಿಯೆ ಕಲ್ಪಾಂತ ಹರನಂತೆ ಗುಹನೆಸೆದನು ೧೮

ಸುತ್ತ ಮುತ್ತಲು ಮುಂದಾಗಲು, ೧೬. ದೇವೇಂದ್ರನ ಬಿಲ್ಲನ್ನು ಕಡಿದು, ಅಗ್ನಿಯ ಟಗರಿನ ಪಕ್ಕೆಯನ್ನು ಬಾಣದಿಂದ ಹೊಡೆದು, ಯಮನನ್ನು ಓಡಿಸಿ, ನಿರುತಿಯನ್ನು ಸದೆ ಬಡಿದು, ವರುಣನ ಮೈಯಲ್ಲಿ ರಕ್ತದ ಪ್ರವಾಹವನ್ನು ಸುರಿಸಿ, ವಾಯುವಿಗೆ ಆಯಾಸ ವುಂಟುಮಾಡಿ, ಕುಬೇರನನ್ನು ಸೋಲಿಸಿ, ಈಶಾನ್ಯನನ್ನು ಬಾಣಗಳಿಂದ ಕಣ್ಣಿಗೆ ಕಾಣಿಸದಂತೆ ಮಾಡಿ, ಆ ಸೈನ್ಯವನ್ನೆಲ್ಲ ತರಿದು, ಮಹಾನಾಭನು ಮತ್ತೆ ವಿಷ್ಣುವಿನ ಶರೀರದಲ್ಲಿ ಗಾಯ ವಾಗುವಂತೆ ಮಾಡಿ ಶತ್ರುಸೈನ್ಯವನ್ನು ಬೆನ್ನಟ್ಟಿದನು. ೧೭. ದೇವತೆಗಳು ಓಡಿದರು. ಅಪ್ಸರರು ಕೆಟ್ಟೆವೆಂದು ಕೂಗಿಕೊಂಡರು. ಯಕ್ಷರು ಬಹಳ ಧೈರ್ಯಗುಂದಿ ರಾಕ್ಷಸನ ಎದುರಿನಲ್ಲಿ ದೇಹತ್ಯಾಗ ಮಾಡಿದರು. ಕಿನ್ನರರು ಪರಾಭವ ಹೊಂದಿದರು. ಎಲ್ಲ ಗರುಡರೂ ಪ್ರಾಣಭಿಕ್ಷೆ ಬೇಡಿದರು. ದಿಕ್ಪಾಲಕರೆಲ್ಲರೂ ಒಟ್ಟುಗೂಡಿ ಕಂಗೆಟ್ಟು ಬಾಯ್ಬಿಟ್ಟು ಕೋಪದಲ್ಲಿ ಮುಳುಗಿ ಬಂದು ಷಣ್ಮುಖನ ಮರೆ ಹೊಕ್ಕರು. ೧೮. ಸೋತು ಮಹಾನಾಭನ ಆವೇಶಕ್ಕೆ ಬೆದುರಿ ಬೆನ್ನ ಹಿಂದುಗಡೆ ಬಚ್ಚಿಟ್ಟುಕೊಂಡ ಎಲ್ಲ ದಿಕ್ಪಾಲಕ ರನ್ನು, ರಕ್ತ ಪ್ರವಾಹದಿಂದ ನೆನೆದ ಮೈಯುಳ್ಳ ಯಕ್ಷ, ಗರುಡ, ಗಂಧರ್ವರ ಮಾಂಸವನ್ನು ತಿನ್ನು, ಕರುಳನ್ನು ಕೀಳು, ಎಲುಬನ್ನು ಅಗಿ ಎನ್ನುತ್ತ ರಭಸದಿಂದ ಬರುತ್ತಿದ್ದ ರಾಕ್ಷಸ ವೀರರನ್ನು ನೋಡಿದ ತಕ್ಷಣ ಹನ್ನೆರಡು ಕಣ್ಣುಗಳಿಂದಲೂ ಕಿಡಿ ಸೂಸಲು ಪ್ರಳಯ

CC-0. Jangamwadi Math Collection. Digitized by eGangotri

ಓಡುವ ಹರೀಂದ್ರಾದಿ ಸಕಲ ಸುರಸಂತತಿಗೆ
ನೀಡಿ ನಂಬುಗೆಯಂ ಸ್ವಹಸ್ತಧೃತ ಚಾಪಮಂ
ತೀಡಿ ಮಸೆವೆತ್ತ ಕೂರ್ಗಣೆಗಳಂ ಡೊಣೆಗಳಿಂದುಗಿದುಗಿದು ತೆಗೆದೆಸೆಯಲು
ಆಪಲೇನಖಿಳ ಖಳರಂಬಿನಂಬುಧಿಯೊಳೋ
ಲಾಡಿದರ್ ಕೋಡಿದರ್ ಮೂಡಿದರ್ ಭಯರಸದೊ
ಳೀಡಿರಿದುವೆತ್ತಲುಂ ಸುತ್ತಲುಂ ಪೊತ್ತಲುರಿ ಹರಸುತನ ಬಾಣಂಗಳು ೧೯

ಎಡದೊಳೌಂಕುವ ಕುದುರೆಕಾರರಂ ಬೇಗದೊಳ್
ತಡೆಗಡಿದು ಬಲದೊಳೊತ್ತುವ ಗಜಘಟಾಳಿಯಂ
ಕೆಡಹಿ ಹಿಂದೆಸೆಯೊಳುರುಬುವ ರಥಾರೂಢರಂ ದೆಸೆದೆಸೆಗೆ ಚೆಲ್ಲಬಡಿದು
ಬಿಡದೆ ಮುಂದೆಸೆವ ಕಾಲಾಳ್ಗಳಂ ಸಾಲ್ಗಳಂ
ಪೊಡವಿಯೊಳಗುರುಳಿಸುತ್ತಾ ಮಹಾನಾಭ ಖಳ
ನೊಡಲೊಳಂಬಂ ತುಂಬಿ ಮತ್ತವನ ಚಾಪಮಂ ಕೋಪದಿಂ ಖಂಡಿಸಿದನು ೨೦

ಕಾರ್ಮುಕಂ ಕಡಿವಡೆದು ಪೊಡವಿಗುರುಳಲ್ಕಿವಂ
ನೂರ್ಮಡಿ ಪರಾಕ್ರಮದೆ ಹಲಗೆ ಖಂಡೆಯವನಾಂ
ತಾರ್ಮೊಗನನಿರಿದು ಕೆಡಪುವೆನೆಂದು ತೇರಿನಿಂ ದುಮ್ಮಿಕ್ಕಿ ಧರಣಿತಳಕೆ

ಕಾಲದ ರುದ್ರನಂತೆ ಷಣ್ಮುಖನು ಕಂಗೊಳಿಸಿದನು. ೧೯. ಓಡಿಹೋಗುತ್ತಿದ್ದ ದೇವೇಂದ್ರನೇ ಮೊದಲಾದ ದೇವತೆಗಳ ಸಮೂಹಕ್ಕೆ ಧೈರ್ಯ ಕೊಟ್ಟು, ತನ್ನ ಕೈಯಲ್ಲಿ ಹಿಡಿದಿದ್ದ ಬಿಲ್ಲನ್ನು ಠೇಂಕಾರ ಮಾಡಿ, ಮಸೆದ ತೀಕ್ಷ್ಣವಾದ ಬಾಣಗಳನ್ನು ಬತ್ತಳಿಕೆಯಿಂದ ತೆಗೆತೆಗೆದು ಬಿಡಲು, ಹೇಳುವುದೇನು ? ಎಲ್ಲ ರಾಕ್ಷಸರೂ ಬಾಣಗಳ ಮಳೆಯಲ್ಲಿ ಓಲಾಡಿ ಓಂಜರಿದರು, ಭಯಗೊಂಡರು. ಸುತ್ತಲೂ ಬೆಂಕಿ ಹತ್ತಲು ಕುಮಾರನ ಬಾಣಗಳು ಎಲ್ಲೆಲ್ಲೂ ತುಂಬಿತು. ೨೦. ಎಡಭಾಗದಲ್ಲಿ ಮುತ್ತುತ್ತಿದ್ದ ಕುದುರೆಸವಾರರನ್ನು ಬೇಗನೆ ತಡೆದು, ಕಡಿದು, ಬಲಭಾಗದಲ್ಲಿ ಮೇಲೆ ಬೀಳುತ್ತಿದ್ದ ಆನೆಗಳ ಸಮೂಹವನ್ನು ಕೆಳಕ್ಕೆ ಕೆಡವಿ, ಹಿಂದುಗಡೆ ಆವೇಶದಿಂದ ಮೇಲೆ ಬೀಳುತ್ತಿದ್ದ ರಥಿಕರನ್ನು ದಿಕ್ಕುದಿಕ್ಕಿಗೆ ಚೆದುರುವಂತೆ ಬಡಿದು, ಮುಂದಿದ್ದ ಕಾಲಾಳುಗಳ ಸಾಲುಗಳನ್ನು ನೆಲದ ಮೇಲೆ ಉರುಳಿಸುತ್ತ ಮಹಾನಾಭರಾಕ್ಷಸನ ದೇಹವನ್ನು ಬಾಣದಿಂದ ತುಂಬಿದನು. ಅಲ್ಲದೆ ಅವನ ಬಿಲ್ಲನ್ನು ಕೋಪದಿಂದ ಕಡಿದುಹಾಕಿದನು. ೨೧. ಬಿಲ್ಲು ಮುರಿದು ನೆಲಕ್ಕೆ ಬೀಳಲು ಅವನು ನೂರು ಪಟ್ಟು ಹೆಚ್ಚಾದ ಶೌರ್ಯದಿಂದ ಗುರಾಣಿ ಮತ್ತು ಕತ್ತಿಯನ್ನು ಹಿಡಿದು ಆರು ಮುಖದವನನ್ನು ಕಡಿದು ಕೆಡವುತ್ತೇನೆ ಎಂದು ರಥದಿಂದ ಭೂಮಿಗೆ ಧುಮುಕಿ

CC-0. Jangamwadi Math Collection. Digitized by eGangotri

ಪೆರ್ಮೆಯಿಂ ಸಮ್ಮುಖದೊಳಾರ್ಭಟಿಸುತ್ತೈತರ್ಪ
ಕಾರ್ಮುಗಿಲ ಕಾಂತಿಯ ಮಹಾನಾಭನಂ ಕಂಡು
ಕೂರ್ಮೊನೆಯ ಶರವೆರಡರಿಂ ಗುಹನೆಸಲ್ಕವನ ತಲೆ ಚಿಗಿದುದಾ ಕ್ಷಣದೊಳು ೨೧

ಭೋರೆಂದುವಖಿಳವಾದ್ಯಂಗಳಮರರ ಪಡೆಯೊ
ಳೋರಂತೆ ದೊರೆ ಮಡಿದನುರುಬೆಂದು ದಿವಿಜಪರಿ
ವಾರ ಮುತ್ತಲ್ ಕಾಣುತಾ ಮಹಾನಾಭನಾಪ್ತರ್ ತಮ್ಮ ಸೇನೆಸಹಿತೆ
ವೀರದಿಂದಿರಿವುತ್ತೈತರೆ ಕಂಡು ಖತಿಯಿಂ ಕು
ಮಾರನನಿಬರನನಿತು ಬಾಣದಿಂ ಸದೆಬಡಿವು
ತಾರಿ ಬೊಬ್ಬಿರಿದು ಬೆನ್ನಟ್ಟಿ ಖಳಸೇನೆಯೊಳ್ ಕೋಳಾಹಳಂಗೈದನು ೨೨

ಗಜ ತುರಗ ರಥವೆರಸಿ ನೂಂಕಿದುದು ಸಂಗರಕೆ
ಗಜಬಜವಿದೇಕೆ ಹೋ ಹೋ ಸಾಕು ಸಾಕೆನುತೆ
ಗಜಶಿರಸ್ವರ್ಭಾನು ಶಬಲ ವಾಮನ ಶಂಖುಶಿರ ಹಯಗ್ರೀವರೆನಿಪ
ರಜನೀಚರರ್ ನಿಜಪದಾತಿಪದಸಂಜನಿತ
ರಜವಜಾಂಡಂ ಮುಸುಕೆ ಸರ್ವಸನ್ನಾಹದಿಂ
ರಜತಗಿರಿವಾಸನ ಕುಮಾರನಂ ಜರಿದು ಮೂದಲಿಸುತೆಣ್ದೆಸೆಯೊಳಂದು ೨೩

ಛಲದಿಂದಮುರವಣಿಸಿ ನೂಂಕುವರ್ ಸೋಂಕುವರ್
ಸಲೆ ಬಾಣಜಾಲಮಂ ಬೀಸುವರ್ ಸೂಸುವರ್
ಬಳಸಿ ಸುರಗಿರಿಯ ಕೈಮಿಗಾರುವರ್ ತೋರುವರ್ ಭುಜಬಲಪರಾಕ್ರಮದೊಳು

ಹೆಮ್ಮೆಯಿಂದ ಆರ್ಭಟಿಸುತ್ತ ಎದುರಿಗೆ ಬರುತ್ತಿರುವ ಕರಿಮೋಡದ ಬಣ್ಣದ ಕಾಂತಿಯಿಂದ ಕೂಡಿದ ನಾಭನನ್ನು ನೋಡಿ ಗುಹನು ಎರಡು ಚೂಪಾದ ಬಾಣಗಳಿಂದ ಹೊಡೆಯಲು ಅವನ ತಲೆ ಆ ಕ್ಷಣ ಕತ್ತರಿಸಿಹೋಗಿ ಹಾರಿತು. ೨೨. ದೇವಸೈನ್ಯದಲ್ಲಿ ಎಲ್ಲ ವಾದ್ಯಗಳೂ ಭೋರೆಂದು ಮೊಳಗಿದವು. ನಾಯಕನು ಸತ್ತನು, ಮೇಲೆಬೀಳು ಎಂದು ದೇವತೆಗಳ ಸೈನ್ಯ ಮುತ್ತಲು ಮಹಾನಾಭನ ಆಪ್ತರು ಅದನ್ನು ನೋಡಿ ತಮ್ಮ ಸೈನ್ಯ ಸಮೇತ ಪರಾಕ್ರಮದಿಂದ ಇರಿಯುತ್ತ ಬರಲು ಅದನ್ನು ನೋಡಿ ಕೋಪದಿಂದ ಕುಮಾರನು (ಗುಹನು) ಎಲ್ಲರನ್ನೂ ಬಾಣದಿಂದ ಸದೆಬಡಿಯುತ್ತ ಆರ್ಭಟಿಸಿ ಬೊಬ್ಬೆ ಹಾಕಿ ಬೆನ್ನಟ್ಟಿ ರಾಕ್ಷಸಸೈನ್ಯದಲ್ಲಿ ಕೋಲಾಹಲವನ್ನುಂಟುಮಾಡಿದನು. ೨೩. ಆನೆ, ಕುದುರೆ, ರಥ ಕೂಡಿಕೊಂಡು ಯುದ್ಧಕ್ಕೆ ಮುಂದಾಯಿತು. ಕೋಲಾಹಲವೇಕೆ ! ಹೊಹೊ ! ಸಾಕು ಸಾಕು ಎಂದು ಕುಮಾರನನ್ನು ಬೈದು ಹೀಯಾಳಿಸುತ್ತ ಗಜಶಿರ, ಸ್ವರ್ಭಾನು, ಶಬಲ, ವಾಮನ, ಶಂಖುಶಿರ, ಹಯಗ್ರೀವ ಮೊದಲಾದ ರಾಕ್ಷಸರು ಅಂದು ತಮ್ಮ ಪದಾತಿ ಸೈನ್ಯದ ಕಾಲ್ತುಳಿತದಿಂದ ಹೊರಟ ಧೂಳು ಬ್ರಹ್ಮಾಂಡವನ್ನು ತುಂಬಲು ಸರ್ವಸನ್ನಾಹದಿಂದ ಎಂಟು ದಿಕ್ಕಿನಲ್ಲಿಯೂ ಮುಂದೆ ನಡೆದರು. ೨೪. ಛಲದಿಂದ ರಭಸದಿಂದ ಹಿಂದಕ್ಕೆ ನೂಕುವರು. ಒಬ್ಬರನ್ನೊಬ್ಬರು ತಾಗುವರು. ಅತಿಯಾದ ಬಾಣದ ಬಲೆಯನ್ನು

CC-0. Jangamwadi Math Collection. Digitized by eGangotri

ಕಲಿತನದ ಮಸಕದಿಂದುಬ್ಬುವರ್ ಕೊಬ್ಬುವರ್
ಪಲವಾಯುಧಂಗಳಿಂ ಮೆತ್ತುವರ್ ಕುತ್ತುವರ್
ಜ್ವಲಿತಕೋಪಾಗ್ನಿಯಿಂದುರುಬುವರ್ ತರುಬುವರ್ ಗುಹನನಾ ಖಳನನುಜರು ೨೪

ದೊರೆಗಳೇ ಮುತ್ತಿದರ್ ಮೂವತ್ತು ಪದ್ಮಮುಂ
ಮರಳಿ ಮೂವತ್ತೈದು ಕೋಟಿಗಳ್ ಮಿಕ್ಕಳಿದ
ಕರಿರಥಾಶ್ವಪದಾತಿಗಳನೆಣಿಸಿ ನೋಡೆ ಕಡೆಗಾಣ್ಬ ಗಣಿತಜ್ಞರೊಳರೇ
ಧುರದೊಳೊಂದೊಂದು ಸಾರಿಗೆಗನಿತು ಬಾಣಂಗ
ಳುರವಣಿಸಿ ಕಡಿದನಿತು ಮುಂದಿ ಸುಭಟರ ಕಳೇ
ವರದೊಳಂಬಂ ಬಿಡದೆ ತುಂಬುವನೆನಲ್ ಬಣ್ಣಿಸಲ್ ಪವಣೆ ಗುಹನದಟನು ೨೫

ಮರಳಿ ಚೇತರಿಸಿಕೊಂಡನಿಬರೆಚ್ಚರ್ ಮಹಾ
ಶರದಿಂದವನಿಯಾವುದಾಶೆಗಳದಾವುದಂ
ಬರಚಕ್ರವಾವುದೆಂಬಂತೆ ನಿಮಿಷಾರ್ಧದೊಳಗನಿಬರೆಚ್ಚಂಬುಗಳನು
ಸರಳ್ಗಳಿಂದೆಚ್ಚು ಕತ್ತರಿಸಿ ಮೊದಲವರೆಚ್ಚ
ಸರಳಿನಿಮ್ಮಡಿಯನೆಚ್ಚನಿಬರಂ ಬಾಣಮಂ
ಜರದೊಳಗೆ ಪೊಗಿಸಿದನೆನಲ್ ಕರಚಮತ್ಕಾರವಂ ಪೊಗಳಲಳವೆ ಗುಹನಾ ೨೬

ಬೀಸುವರು, ಬಾಣಗಳ ಮಳೆ ಸುರಿಸುವರು. ಸುತ್ತ ಮುತ್ತಿ ತೋಳುಬಲದ ಪರಾಕ್ರಮ ದಲ್ಲಿ ಮೇರುಪರ್ವತವನ್ನು ಮೀರುವರು. ಪರಾಕ್ರಮದಿಂದ ಕಾಣುವರು, ಶೌರ್ಯದ ಆವೇಶದಿಂದ ಉಬ್ಬುವರು, ಕೊಬ್ಬುವರು, ಹಲವು ಆಯುಧಗಳಿಂದ ಹೊಡೆಯುವರು, ತಿವಿಯುವರು. ರಾಕ್ಷಸನ ತಮ್ಮಂದಿರು ಉರಿಯುತ್ತಿರುವ ಕೋಪವೆಂಬ ಬೆಂಕಿಯಿಂದ ಷಣ್ಮುಖನ ಮೇಲೆ ಬೀಳುವರು, ಅಡ್ಡಗಟ್ಟುವರು. ೨೫. ಮೂವತ್ತು ಪದ್ಮಗಳಷ್ಟು ನಾಯಕರೇ ಅವನನ್ನು ಮುತ್ತಿದರು. ಮತ್ತೆ ಮೂವತ್ತೈದು ಕೋಟಿ. ಇನ್ನು ಆನೆ, ರಥ, ಕುದುರೆ, ಕಾಲಾಳುಗಳನ್ನು ಎಣಿಸಿ ನೋಡಿ ಮುಗಿಸುವ ಗಣಿತಜ್ಞರು ಇದ್ದಾರೆಯೆ ? ಯುದ್ಧದಲ್ಲಿ ಒಂದೊಂದು ಬಾರಿಗೆ ಅಷ್ಟು ಬಾಣಗಳನ್ನು ವಿಜೃಂಭಿಸಿ ಕಡಿದು ಅಷ್ಟು ಮಂದಿ ಶೂರ ಭಟರ ದೇಹದಲ್ಲಿ ಬಿಡದೆ ಕ್ರೂರವಾದ ಬಾಣಗಳನ್ನು ಷಣ್ಮುಖನು ತುಂಬುವನು ಎಂದ ಮೇಲೆ ಅವನ ಪರಾಕ್ರಮವನ್ನು ಬಣ್ಣಿಸಲು ಸಾಧ್ಯವೆ ? ೨೬. ಮತ್ತೆ ಚೇತರಿಸಿಕೊಂಡು ಅಷ್ಟು ಜನರೂ ಮಹಾಬಾಣಗಳಿಂದ ಹೊಡೆದರು. ಭೂಮಿ ಯಾವುದು ? ದಿಕ್ಕುಗಳು ಯಾವುವು ? ಆಕಾಶ ಯಾವುದು? ಎನ್ನುವಂತೆ ಅರ್ಧ ನಿಮಿಷ ದೊಳಗೆ ಅಷ್ಟು ಜನರೂ ಹೊಡೆದ ಬಾಣಗಳನ್ನು ಪ್ರತಿ ಬಾಣ ಹೂಡಿ ಕತ್ತರಿಸಿ, ಮೊದಲು ಅವರು ಹೊಡೆದ ಬಾಣಗಳಿಗೆ ಎರಡರಷ್ಟು ಬಾಣ ಬಿಟ್ಟು ಅವರೆಲ್ಲರನ್ನೂ ಬಾಣಗಳ

CC-0. Jangamwadi Math Collection. Digitized by eGangotri

ಎಚ್ಚು ರಥ ಚಕ್ರ ಹಯ ಸಿಂಧಂಗಳಂ ಮಗು
ಳ್ದೆಚ್ಚು ಸೀಸಕ ಕವಚ ಬಾಹುರಕ್ಕೆಗಳನಾ
ರ್ದೆಚ್ಚು ಕಾರ್ಮುಕ ಶರಧಿ ಛತ್ರಚಮರಂಗಳಂ ಸಕಲಸಾಧನತತಿಯುಮಂ
ಕೊಚ್ಚಿ ಬಿಸುಟತುಳ ಬಾಣಂಗಳಂ ಪೂಡಿ ತೆಗೆ
ದೆಚ್ಚು ಮೂವತ್ತೆರಡು ಪದ್ಮ ರಥಿಕಾಂಗಮಂ
ಪೆಚ್ಚಿದಂ ಸೀಳೆರಡು ಸಮನಾಗಿ ಸಮರದೊಳ್ ಗುಹನ ಸಾಮರ್ಥ್ಯಮೆಂತೋ ೨೭

ಪೌಲೋಮಿ ಕಾಳಿಕೇಯರನೆಚ್ಚು ಕೇತುವಿಗೆ
ಕೋಲ ಸವಿದೋರಿಸಿ ವಿರೂಪಾಕ್ಷನಂಗಮಂ
ಕೀಲಿಸಿ ಗಗನಮೂರ್ಧ್ನಿಯೊಡಲೊಳೇರಂ ತೋರಿ ಶಂಖುಶಿರನಂ ನೋಯಿಸಿ
ಮೇಲೆ ವಾಮನಹಯಗ್ರೀವರಂ ಸಮರದೊಳ್
ಕೋಳಾಹಳಂಗೈದು ಮಿಕ್ಕುಳಿದ ದನುಜರಂ
ಘೋಳಿಡಿಸಿದಂ ಸರಳ ಮಳೆಗರೆದು ನಿಮಿಷದೊಳಗೇನೆಂಬೆನಚ್ಚರಿಯುಮಂ ೨೮

ಶಿರಮುಡಿದು ಶಂಖುಕರ್ಣಂ ಬಿದ್ದನಾ ಶಬಲ
ನಿರೆದೆರಳ್ತುಂಡಾದನಬ್ಜಸಖಸಂಭವಂ
ಬರಸೆಳದನಾ ಕಪಿಲನಸುವನೇನಾದನೋ ಶಂಖುಕರ್ಣಂ ತಿಳಿಯಲು
ಸುರನಾರಿಯರನಪ್ಪಿದಂ ಗಗನಮೂರ್ಧ್ನಿ ಗಜ
ಶಿರನಿಳೆಯ ಬಾಳ್ಕೆಯಂ ನೀಗಿದಂ ತಾರಕಂ
ಗರಮನೆಯ ಕಟ್ಟಿಸಲ್ ಜವನಪುರಕ್ಕೈದಿದಂ ಶರಭನರೆಗಳಿಗೆಯೊಳಗೆ ೨೯

ಪಂಜರದೊಳಗೆ ಕೂಡಿಹಾಕಿದನು ಎನ್ನಲು ಗುಹನ ಕೈಚಳಕವನ್ನು ಹೊಗಳಲು ಸಾಧ್ಯವೆ? ೨೭. ಬಾಣಬಿಟ್ಟು ರಥದ ಚಕ್ರ, ಕುದುರೆ, ಆನೆಗಳನ್ನು, ಮತ್ತೆ ಶಿರಸ್ತ್ರಾಣ, ಕವಚ, ಬಾಹುರಕ್ಷೆಗಳನ್ನು ಹೊಡೆದು, ಆರ್ಭಟಿಸಿ ಬಿಲ್ಲಸಮೂಹ ಛತ್ರ ಚಾಮರಗಳನ್ನು ಹೊಡೆದು, ಎಲ್ಲ ಯುದ್ಧ ಸಾಧನಗಳನ್ನೂ ಕೊಚ್ಚಿ ಬಿಸುಟನು. ಅನೇಕ ಬಾಣಗಳನ್ನು ಹೂಡಿ ಹೊಡೆದು ಮೂವತ್ತೆರಡು ಪದ್ಮದಷ್ಟು ರಥಸೈನ್ಯವನ್ನು ಎರಡು ಸಮ ಹೋಳಾಗಿ ಸೀಳಿದನು. ಯುದ್ಧದಲ್ಲಿ ಷಣ್ಮುಖನ ಸಾಮರ್ಥ್ಯ ಎಷ್ಟೋ! ೨೮. ಪೌಲೋಮಿ, ಕಾಲಕೇಯರನ್ನು ಹೊಡೆದು, ಕೇತುವಿಗೆ ಬಾಣದ ರುಚಿಯನ್ನು ತೋರಿಸಿ, ವಿರೂಪಾಕ್ಷನ ದೇಹವನ್ನು ಅಲ್ಲಾಡದಂತೆ ಮಾಡಿ, ಗಗನಮೂರ್ಧ್ನಿಯ ದೇಹದಲ್ಲಿ ಗಾಯ ಮಾಡಿ, ಶಂಖುಶಿರನನ್ನು ನೋಯಿಸಿ, ಅಲ್ಲದೆ ವಾಮನ ಹಯಗ್ರೀವರನ್ನು ಯುದ್ಧದಲ್ಲಿ ಕೋಲಾಹಲ ಮಾಡಿ, ನಿಮಿಷದಲ್ಲಿ ಬಾಣಗಳ ಮಳೆಗರೆದು ಉಳಿದ ರಾಕ್ಷಸರನ್ನು ಗೋಳು ಗುಟ್ಟಿಸಿದನು. ಆಶ್ಚರ್ಯವನ್ನು ಏನೆಂದು ಹೇಳಲಿ? ೨೯. ಶಂಖುಕರ್ಣನು ತಲೆ ಕಡಿದು ಬಿದ್ದನು. ಆ ಶಬಲನು ಎರಡು ತುಂಡಾದನು. ಯಮನು ಕಪಿಲನ ಪ್ರಾಣವನ್ನು ಬರಸೆಳೆದನು. ಶಂಖುಕರ್ಣ ಏನಾದನೊ? ಆಲೋಚಿಸಲು ಗಗನಮೂರ್ಧ್ನಿಯು ದೇವತಾಸ್ತ್ರೀಯರನ್ನಪ್ಪಿಕೊಂಡನು. ಗಜಶಿರನು ಭೂಮಿಯ ಬಾಳುವೆಯನ್ನು ನೀಗಿದನು.

CC-0. Jangamwadi Math Collection. Digitized by eGangotri

ಕಿಟ್ಟೋಡಿದರ್ ಕೆಲಕೆಲರ್ ಗಜರಥಂಗಳಂ
ಬಿಟ್ಟೋಡಿದರ್ ಕೆಲಕೆಲರ್ ಕೈದುಗಳನವನಿ
ಗಿಟ್ಟೋಡಿದರ್ ಕೆಲಕೆಲರ್ ಜೀವದಾಸೆಯಿಂ ಬೇಗ ಬಹುರೂಪಂಗಳ
ತೊಟ್ಟೋಡಿದರ್ ಕೆಲಕೆಲರ್ ಬಿರುದನಾಗಳ್ ಬಿ
ಸುಟ್ಟೋಡಿದರ್ ಕೆಲಕೆಲರ್ ಬೆದರಿ ರಣಕೆ ಬೆಂ
ಗೊಟ್ಟೋಡಿದರ್ ಕೆಲಕೆಲರ್ ಗುಹನ ಕಣೆ ತಾಗದುಳಿದ ದೊರೆಗಳ್ ಧುರದೊಳು ೩೦

ಖಂಡಿಸಿದನಸುರನ ಚತುರ್ಬಲವನೀ ಪರಿ ಶಿ
ಖಂಡಿವಾಹನನುಳಿದ ದನುಜಭಟರೋಡುವೊಡೆ
ಖಂಡಿಗಳನರಸಿ ತೊಳಲುತ್ತಿರ್ದರಬುಜಸಂಭೂತಾಂಡಖರ್ಪರದೊಳು
ಖಂಡವುಯಮೆಸೆವ ಪೊಸಮುಂಡಮುಯವಾಯ್ತು ನವ
ಖಂಡಧಾರುಣಿಯೆಲ್ಲಮಾ ಕ್ಷಣದೊಳೊಪ್ಪುವಾ
ಖಂಡಲಾದ್ಯಮರತತಿ ನಲಿದುದುರೆ ನರ್ತಿಸಿತು ಭೂತವೇತಾಳನಿವಹಂ ೩೧

ಅಳಿದರಸುರನ ಸಹೋದರರಖಿಳನಾಯಕರ್
ತಲೆಯ ನೀಗಾಡಿದರ್ ಕರಿರಥಾಶ್ವಪದಾತಿ
ನೆಲಕೆ ಸಾರ್ದುದು ಬಾಂಧವಪ್ರತತಿ ಬಯಲಾದುದಾಪ್ತರಡಗಿದರಿಳೆಯೊಳು

ಅರಗಳಿಗೆಯೊಳಗೆ ಶರಭನು ತಾರಕನಿಗೆ ಅರಮನೆಯನ್ನು ಕಟ್ಟಿಸಲು ಯಮನ ಪಟ್ಟಣಕ್ಕೆ ಹೋದನು. ೩೦. ಗುಹನ ಬಾಣಗಳಿಗೆ ಸಿಕ್ಕದೆ ಯುದ್ಧದಲ್ಲಿ ಉಳಿದ ಕೆಲ ನಾಯಕರು ದಿಕ್ಕೆಟ್ಟು ಓಡಿದರು. ಮತ್ತೆ ಕೆಲವರು ಆನೆ ರಥಗಳನ್ನು ಬಿಟ್ಟು ಓಡಿದರು. ಕೆಲ ಕೆಲವರು ಆಯುಧಗಳನ್ನು ಬಿಸುಟು ಪಲಾಯನ ಮಾಡಿದರು. ಜೀವದಾಸೆಯಿಂದ ಕೆಲವರು ಅನೇಕ ರೂಪಗಳನ್ನು ಧರಿಸಿ ಓಡಿದರು. ಕೆಲಕೆಲವರು ತಮ್ಮ ಪರಾಕ್ರಮದಿಂದ ಪಡೆದಿದ್ದ ಬಿರುದುಗಳನ್ನು ಮರೆತು ಓಡಿದರು. ಮತ್ತೆ ಕೆಲವರು ಹೆದರಿ ಯುದ್ಧದಲ್ಲಿ ಬೆನ್ನು ತೋರಿಸಿ ಓಡಿದರು. ೩೧. ಈ ರೀತಿ ಷಣ್ಮುಖನು ರಾಕ್ಷಸರ ಚತುರ್ಬಲವನ್ನು ನಾಶಮಾಡಿದನು. ಉಳಿದ ರಾಕ್ಷಸಭಟರು ಬ್ರಹ್ಮಾಂಡದಲ್ಲಿ ಓಡಿಹೋಗಿ ತಪ್ಪಿಸಿ ಕೊಳ್ಳಲು ಕಿಂಡಿಯನ್ನು ಹುಡುಕುತ್ತ ತೊಳಲಾಡುತ್ತಿದ್ದರು. ಯುದ್ಧಭೂಮಿಯು ಪ್ರಕಾಶಿಸುವ ಹೊಸ ರುಂಡ ಮುಂಡಗಳಿಂದ ತುಂಬಿಹೋಯಿತು. ದೇವೇಂದ್ರ ಮೊದಲಾದ ದೇವಕುಲವೂ ಬಹಳ ಸಂತೋಷಗೊಂಡಿತು. ಭೂತಭೇತಾಳಗಳ ಸಮೂಹ ಗಳು ಕುಣಿದಾಡಿದುವು. ೩೨. ರಾಕ್ಷಸರಾಜನ ತಮ್ಮಂದಿರು ಸತ್ತುಹೋದರು. ಎಲ್ಲ ನಾಯಕರೂ ತಲೆಯನ್ನು ಕಳೆದುಕೊಂಡರು. ಆನೆ, ರಥ, ಕುದುರೆ, ಪದಾತಿಸೇನೆ ನೆಲಕ್ಕೆ ಉರುಳಿತು. ಬಂಧುಸಮೂಹ ನಾಶವಾಯಿತು. ಆಪ್ತರು ಭೂಮಿಯಲ್ಲಿ ಮಾಯವಾದರು.



CC-0. Jangamwadi Math Collection. Digitized by eGangotri

ಮಲೆತು ನಿಲ್ವದಟರೊರ್ವರುಮಿಲ್ಲವಿಾ ಗುಹನ
ಕಲಹವೊಡನೊಡನೆ ಕೈಮೇಲಾಯ್ತು ತಾರಕಂ
ಗಳವಿಗೊಟ್ಟುದು ದಿವಿಜಸೇನೆ ಪೊಯ್ ಪೊಯ್ಯೆನುತ್ತೇನೆಂಬೆನದ್ಭುತವನು ೩೨

ಕೆಡೆಕೆಡೆಯೆನುತ್ತೆ ಕಪಳೆಗಳುಲಿವುತಿರ್ಪುದಂ
ನಡುನಡುಗಿ ಸುರವಿರೋಧಿಗಳೋಡುತಿರ್ಪುದಂ
ಕಡಿಕಡಿಯೆನುತ್ತೆ ಸುಮನಸರಟ್ಟುತಿರ್ಪುದಂ ಸೊಕ್ಕಾನೆ ಕುದುರೆಗಳನು
ಪಿಡಿಪಿಡಿದು ವೀರಸುಭಟರ್ ಕಟ್ಟುತಿರ್ಪುದಂ
ತಡೆತಡೆದು ಕಾದಿ ವೀರರ್ ಮಡಿವುತಿರ್ಪುದಂ
ಗುಡುಗುಡಿಸಿದಂ ಕಂಡು ಕನಲಿ ಕಿಡಿಕಿಡಿಯಾಗಿ ತಾರಕಂ ಸಂಗರದೊಳು ೩೩

ಪ್ರಳಯರುದ್ರನ ಭಾಳಲೋಚನಕೃಶಾನುವೀ
ಖಳನಕ್ಷಿಯುಗಳದೊಳ್ ತತ್ಸಮಯಕೈತಂದು
ನೆಲೆಗೊಂಡುದೋಯೆನಲ್ ಕೆಂಪ ಕಾರಿದುವಾಲಿಗಳ್ ಕೋಟಿಸಿಡಿಲೊರ್ಮೆಯೆ
ಮೊಳಗಿದುದೊಯೆನೆ ಬೆರಳ ಬೊಬ್ಬೆ ರಂಜಿಸಿತು ಪೊ
ಕ್ಕಳವಿಯೊಳ್ ನೂಂಕಿದಂ ರಥವನುರೆ ಮುರಿದ ನಿಜ
ಬಳಕಭಯಮುಂ ಕೊಡುತೆ ತಾರಕಂ ಶೌರ್ಯವಿಸ್ತಾರಕಂ ಸಂಗರದೊಳು ೩೪

ಆಳಲ್ದುರಗನೋ ನೊಂದ ಪೆರ್ಬುಲಿಯೊ ಕಿನಿಸಿದ
ಕ್ಕಲನೊ ಪಸಿದೈತಂದ ಪೆರ್ಮಾರಿಯೋ ಜಗದ
ಕೊಲೆಗುಜ್ಜುಗಿಸಿ ಬಂದ ಮಿಳ್ತುವೊ ಮಹಾಕ್ರೋಧವವೆಗೊಂಡ ಕೀನಾಶನೋ

ಎದುರಿಸಿ ನಿಲ್ಲುವ ಪರಾಕ್ರಮಿಗಳು ಒಬ್ಬರೂ ಇಲ್ಲ. ಈ ಗುಹನ ಯುದ್ಧ ಒಂದೇ ಸಮನೆ ಮೇಲಾಯಿತು. ದೇವಸೈನ್ಯ ಹೊಡಿ ಹೊಡಿ ಎನ್ನುತ್ತ ತಾರಕನಿಗೆ ಯುದ್ಧ ಕೊಟ್ಟಿತು. ಅದ್ಭುತವನ್ನು ಏನೆನ್ನಲಿ ? ೩೩. ಬೀಳು ಬೀಳು ಎನ್ನುತ್ತ ಕಹಳೆಗಳು ಕೂಗುತ್ತಿರುವುದನ್ನು, ಹೆದರಿ ನಡುಗಿ ರಾಕ್ಷಸರು ಓಡುತ್ತಿರುವುದನ್ನು, ಕಡಿ ಕಡಿ ಎನ್ನುತ್ತ ದೇವತೆಗಳು ಬೆನ್ನಟ್ಟುತ್ತಿರುವುದನ್ನು, ಮದಿಸಿದ ಆನೆ ಕುದುರೆಗಳನ್ನು ಹಿಡಿದು ಹಿಡಿದು ಶೂರಭಟರು ಕಟ್ಟಿಹಾಕುತ್ತಿರುವುದನ್ನು, ಎದುರಿಸಿ ಯುದ್ಧ ಮಾಡಿ ವೀರರು ಸಾಯುತ್ತಿರುವುದನ್ನು ನೋಡಿ ತಾರಕನು ಕೋಪದಿಂದ ಕಿಡಿಕಿಡಿಯಾಗಿ ಯುದ್ಧದಲ್ಲಿ ಗುಡುಗುಡಿಸಿದನು. ೩೪. ಪ್ರಳಯರುದ್ರನ ಹಣೆಗಣ್ಣಿನ ಬೆಂಕಿಯು ಆ ಸಮಯದಲ್ಲಿ ಬಂದು ಈ ರಾಕ್ಷಸನ ಎರಡು ಕಣ್ಣುಗಳಲ್ಲೂ ನೆಲೆಯೂರಿತೊ ಎನ್ನುವಂತೆ ಕಂಗಳು ಕೆಂಪನ್ನು ಕಾರಿದುವು. ಕೋಟಿ ಸಿಡಿಲುಗಳು ಒಂದೇಬಾರಿಗೆ ಆರ್ಭಟಿಸಿದವೊ ಎನ್ನಲು ಬೆರಳಿಂದ ಮಿಾಟುವ ಹೆದೆಯ ಝೇಂಕಾರ ಮೊಳಗಿತು. ತಾರಕನು ಯುದ್ಧಭೂಮಿಯನ್ನು ಪ್ರವೇಶಿಸಿ ರಥವನ್ನು ನಡೆಯಿಸಿದನು. ಶೌರ್ಯವಿಸ್ತಾರಕನಾದ ತಾರಕನು ಚದುರಿದ ತನ್ನ ಸೈನ್ಯಕ್ಕೆ ಧೈರ್ಯ ಹೇಳುತ್ತ ಯುದ್ಧ ಮಾಡುತ್ತಿದ್ದನು. ೩೫. ಏಟನ್ನು ತಿಂದ ಸರ್ಪವೊ ? ನೋವುಗೊಂಡ ಹೆಬ್ಬುಲಿಯೊ ? ಕೋಪಗೊಂಡ ಕಾಡುಹಂದಿಯೊ ? ಹಸಿದುಬಂದ

CC-0. Jangamwadi Math Collection. Digitized by eGangotri

ಪ್ರಳಯಭೈರವನೊ ಮಸಗಿದ ವೀರಭದ್ರನೋ
ತಿಳಿಯೆ ಕಲ್ಪಾಂತಸಮಯದ ರುದ್ರನೋಯೆಂದು
ಕಳವಳಿಸಿ ಮುರಿದೋಡಿತಸುರನ ಭಯಂಕರಾಕಾರವಂ ಕಂಡು ಸುರರು ೩೫

ಜಾಳಿಸಿದನಿಂದ್ರನನಲಂ ಪೋದನಂತಕಂ
ಕಾಲ ಬೇಗುದೋರಿದಂ ನಿರುತಿ ಸಾಗಿದಂ
ಕಾಳಾಗಿ ವನಧಿಪಂ ಸರಿದು ವಾಯುವಡಂಗಿ ಧನದಂ ಪಲಾಯನವನು
ಓಲಗಿಸಲನಿಬರ್ಗೆ ಗುರುವಾದನೀಶಂ ಮು
ರಾಳವಾಹನ ಗರುಡಗಮನರೇನಾದರೋ
ಪೇಳಲಚ್ಚರಿಯಾಯ್ತು ತಾರಕನ ಭೀಕರಾಕಾರವಂ ಕಾಣುತೊಡನೆ ೩೬

ಏನೆಂಬೆನೈ ಸಿದ್ಧರಾಮ ಹರಿಮುಖ್ಯ ಸುರ
ಸೇನೆಯೊಳಸರಿವುದಂ ಕಂಡು ಖತಿಯಿಂದಂ ಷ
ಡಾನನಂ ವಾಹನಮನೊಲಿದು ಬೋಳೈಸಿ ಬಲವನಧಿಗಭಯವನೀವುತೆ
ತಾನಿರದೆ ಬಾಯಾರರಿಂ ಬೊಬ್ಬೆಗೊಡುತಂ ಕೃ
ಶಾನುಮಂ ಕಣ್ಗಳೊಳ್ ಕೆದರುತ್ತಲಾಗಲಾ
ದಾನವಾಧೀಶನಂ ಸಂಹರಿಪೆನೆಂದು ಧನುವಂ ಪಿಡಿವುತೈತಂದನು ೩೭

ಕಾಲಮೇಘದ ಸಿಡಿಲ ಛಟಛಟನಿನಾದವೋ
ಕಾಲಭೈರವನ ಡಮರುಗದ ನಿರ್ಘೋಷವೋ
ಕಾಲರುದ್ರನ ಘನತರಟ್ಟಹಾಸಸ್ವನವೊ ಪೇಳೆನಲ್ಕಾ ಕ್ಷಣದೊಳು

ಹೆಮ್ಮಾರಿಯೊ ? ಜಗತ್ತನ್ನು ಕೊಲೆಗೈಯಲು ತೊಡಗಿ ಬಂದ ಮೃತ್ಯುವೊ ? ಬಹು ಕೋಪಗೊಂಡ ಯಮನೊ ? ಪ್ರಳಯಭೈರವನೊ ? ಕುಪಿತನಾದ ವೀರಭದ್ರನೊ ? ಯೋಚಿಸಲು ಪ್ರಳಯಕಾಲದ ರುದ್ರನೊ ಎಂದು ಕಳವಳಗೊಂಡು ರಾಕ್ಷಸನ ಭಯಂಕರ ವಾದ ಆಕಾರವನ್ನು ನೋಡಿ ದೇವತೆಗಳು ಹಿಮ್ಮೆಟ್ಟಿ ಓಡಿದರು. ೩೬. ತಾರಕನ ಭೀಕರಾಕಾರವನ್ನು ನೋಡಿದೊಡನೆ ಇಂದ್ರನು ಭಯದಿಂದ ನಡುಗಿದನು, ಅಗ್ನಿಯು ಓಡಿಹೋದನು. ಯಮನು ಕಾಲಿಗೆ ಬುದ್ಧಿ ಹೇಳಿದನು. ನಿರುತಿಯು ಕೆಟ್ಟೋಡಿದನು. ವರುಣನು ಸರಿದುಹೋದನು. ವಾಯುವು ಮರೆಯಾದನು. ಕುಬೇರನು ಪಲಾಯನ ಮಾಡಿದನು. ಓಡುವುದರಲ್ಲಿ ಅವರೆಲ್ಲರಿಗೂ ಈಶಾನ್ಯನು ಗುರುವಾದನು. ಬ್ರಹ್ಮ ವಿಷ್ಣುಗಳು ಏನಾದರೊ ? ಹೇಳುವುದಕ್ಕೆ ಆಶ್ಚರ್ಯವಾಯಿತು. ೩೭. ಏನು ಹೇಳಲಯ್ಯ, ಸಿದ್ಧರಾಮ, ವಿಷ್ಣು ಮೊದಲಾದ ದೇವತೆಗಳ ಸೈನ್ಯ ಹಿಂದೆ ಸರಿಯುತ್ತಿದ್ದುದನ್ನು ನೋಡಿ ಕೋಪದಿಂದ ತಡೆಯದೆ ಷಣ್ಮುಖನು ತನ್ನ ವಾಹನವನ್ನು ಏರಿ ಪ್ರೀತಿಯಿಂದ ಮೈದಡವಿ ಸೈನ್ಯಸಾಗರಕ್ಕೆ ಧೈರ್ಯ (ಅಭಯ) ಹೇಳುತ್ತಾ, ತನ್ನ ಆರು ಬಾಯಿಗಳಿಂದ ಬೊಬ್ಬೆ ಹಾಕುತ್ತ ಕಣ್ಣುಗಳಲ್ಲಿ ಬೆಂಕಿಯನ್ನು ಹರಡುತ್ತ ಆಗ ತಾರಕನನ್ನು ಸಂಹಾರ ಮಾಡುತ್ತೇನೆಂದು ಬಿಲ್ಲನ್ನು ಹಿಡಿದು ಬಂದನು. ೩೮. ಕಾಲಮೇಘದ ಸಿಡಿಲಿನ ಛಟ ಛಟ ಎನ್ನುವ ಶಬ್ದವೊ ? ಕಾಲಭೈರವನ ಡಮರುಗದ ಭಯಂಕರ ಶಬ್ದವೋ ? ಕಾಲರುದ್ರನ

CC-0. Jangamwadi Math Collection. Digitized by eGangotri

ಬಾಲಕಂ ಧನುವ ಮಿಡಿಯಲ್ ಬೆದರಿತವನಿ ಜಂ
ಬಾಲವಾಯ್ತುಬುಧಿಯಿಾತಂಗಗುರ್ವೆನಿಸಿಕೊಂ
ಬಾ ಲಯಾಂತಕನಿದಿರೆ ಸಾಕೆನಲ್ ತಡೆದಂ ಕುಮಾರಕಂ ತಾರಕನನು ೩೮

ಕಂಡನಸುರೇಶ್ವರಂ ಬೇಸಗೆಯ ನಡುವಗಲ
ಚಂಡಕರನಂತೆಸೆವ ಕುವರನಾಕಾರಮಂ
ಖಂಡಪರಶುವಿನ ಸುಕುಮಾರನಾಹವಧೀರನಾರುಮಂ ಬಗೆಯನಿವನು
ದಿಂಡೆಯಂ ಪಲವಂಗದಿಂದಮಿಂದೆನ್ನಸುವ
ಕೊಂಡಲ್ಲದಿರನೆಂದು ನಿರ್ಧರಿಸಿ ವಿಜಯಕೋ
ದಂಡಮಂ ದನಿಮಾಡುತಿದಿರಾಗಿ ನುಡಿಸಿದಂ ಮಧುರವಚನಂಗಳಿಂದೆ ೩೯

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ೪೦

**ಮೂವತ್ತೊಂಬತ್ತನೆಯ ಸಂಧಿ ಸಂಪೂರ್ಣ**

ಭಯಂಕರವಾದ ಅಟ್ಟಹಾಸದ ಧ್ವನಿಯೊ ? ಹೇಳು ಎನ್ನಲು ಆ ಕ್ಷಣದಲ್ಲಿ ಬಾಲಕನು ಬಿಲ್ಲನ್ನು ಮಿಾಟಲು ಭೂಮಿ ಬೆದರಿತು, ಸಮುದ್ರ ಅಲ್ಲೋಲಕಲ್ಲೋಲವಾಯಿತು. ಭೀಕರ ಎನಿಸಿಕೊಳ್ಳುವ ಅಕಾಲಯಮನು ಈತನಿಗೆ ಸಮನೆ ? ಸಾಕು, ಎನ್ನಲು ಕುಮಾರನು (ಷಣ್ಮುಖನು) ತಾರಕನನ್ನು ತಡೆದನು. ೩೯. ಬೇಸಿಗೆಯ ನಡುಹಗಲಿನ ಸೂರ್ಯನಂತೆ ಪ್ರಕಾಶಿಸುವ ಕುಮಾರನ ಆಕಾರವನ್ನು ತಾರಕಾಸುರನು ನೋಡಿದನು. ಈಶ್ವರನ ಮಗನು ಯುದ್ಧಶೂರ, ಯಾರನ್ನೂ ಲೆಕ್ಕಿಸುವುದಿಲ್ಲ,ಕೆಚ್ಚುಳ್ಳ ಇವನು ಯಾವ ರೀತಿಯಲ್ಲಾದರು ನನ್ನ ಪ್ರಾಣ ತೆಗೆಯದೆ ಇರುವುದಿಲ್ಲ ಎಂದು ನಿರ್ಧರಿಸಿ ವಿಜಯಚಾಪ ವನ್ನು ಶಬ್ದ ಮಾಡುತ್ತ ಅವನಿಗೆದುರಾಗಿ ನಿಂತು ಮೃದುವಾದ ಮಾತುಗಳಿಂದ ಮಾತ ನಾಡಿಸಿದನು. ೪೦. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿ ಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ಪಾಠನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ಮೂವತ್ತೊಂಬತ್ತನೆಯ ಸಂಧಿ ಮುಗಿಯಿತು.

CC-0. Jangamwadi Math Collection. Digitized by eGangotri

# ನಲವತ್ತನೆಯ ಸಂಧಿ

ಸೂಚನೆ : ವೀರಷಣ್ಮುಖನದಟನೀಕ್ಷಿಸುತೆ ಖತಿಯಿಂದೆ
ತಾರಕಾಸುರನಿರದೆ ಕಾದಲ್ಕೆ ಕೂಡೆ ಸಂ
ಹಾರಮಂ ಮಾಡಿ ಸುರರಂ ಕಾಯ್ದನಭವನ ಕುಮಾರಕಂ ಲೀಲೆಯಿಂದೆ

ಪಕ್ಷಿವಾಹನ ಸಹಸ್ರಾಕ್ಷ ಪಂಕೇಜಭವ
ಯಕ್ಷಪತಿನಮಿತ ಗಜರಾಕ್ಷಸಾಜಿನಚೇಲ
ಚಕ್ಷುಃಶ್ರವೋಭೂಷ ಋಕ್ಷಪತಿಶೇಖರ ಮಹಾಕ್ಷ್ವೇಳ ಲಸಿತಕಂಠ
ಅಕ್ಷೀಣತರ ಮಹಿಮದಕ್ಷ ಮತ್ತೇಭಹ
ರ್ಯಕ್ಷ ಚಿತ್ತೋದ್ಭವವಿಪಕ್ಷ ಘನಕರುಣಾಕ
ಟಾಕ್ಷ ಪಂಪಾಪುರಾಧ್ಯಕ್ಷ ಜಯಜಯ ವಿರೂಪಾಕ್ಷ ಭುವನೈಕರಕ್ಷಾ ೧

ಆಲಿಸಿನ್ನೆಲೆ ಸಿದ್ಧರಾಮ ಖಳನೆಂದನೆಲೆ
ಬಾಲ ಕೇಳ್ ನಿನ್ನನೀಕ್ಷಿಸೆ ಮಿಕ್ಕ ನಾಡಾಡಿ
ಬಾಲನೇ ತವೆ ನಿನ್ನ ಪಡೆದ ಜನನಿಯದಾರೊ ಮಗ್ಗುಲೊಳ್ ತಾಯ ಮೊಲೆಯ
ಪಾಲನುಂಡೊರಗಿರ್ಪ ದಿನದೊಳೈತಂದು ಗೋ
ಪಾಲಕಾದ್ಯರ ಬಲಿಗೆ ಸಿಲ್ಕಿ ಕೆಡಬೇಡ ನಾಂ
ಪಾಲನಂಗೆಯ್ದೆ ಪೋಗೆನೆ ನಗುತೆ ಗುಹನಸುರವಲ್ಲಭಂಗಿಂತೆಂದನು ೨

ಸೂಚನೆ : ವೀರನಾದ ಷಣ್ಮುಖನ ಪರಾಕ್ರಮವನ್ನು ನೋಡುತ್ತ ಕೋಪದಿಂದ ತಾರಕಾಸುರನು ಯುದ್ಧಮಾಡಿದನು. ತಕ್ಷಣ ಅವನನ್ನು ಶಿವನ ಮಗನಾದ ಕುಮಾರಸ್ವಾಮಿ ಲೀಲೆಯಿಂದ ಸಂಹಾರಮಾಡಿ ದೇವತೆಗಳನ್ನು ರಕ್ಷಿಸಿದನು. ೧. ವಿಷ್ಣು, ಇಂದ್ರ, ಬ್ರಹ್ಮ, ಕುಬೇರರಿಂದ ನಮಸ್ಕರಿಸಿಕೊಳ್ಳುವವ, ಗಜರಾಜನ ಚರ್ಮವನ್ನು ಉಡುಪಾಗಿ ಉಳ್ಳವ, ಸರ್ಪಭೂಷಣ, ಚಂದ್ರಶೇಖರ, ವಿಷಕಂಠ, ನಾಶವಾಗದ ಮಹಿಮೆಯುಳ್ಳವ. ದಕ್ಷ ಎಂಬ ಮದಿಸಿದ ಆನೆಗೆ ಸಿಂಹದಂಥವ, ಮದನಾರಿ, ಕೃಪಾಕಟಾಕ್ಷ, ಪ್ರಪಂಚವನ್ನೆಲ್ಲ ಪಾಲಿಸುವ ಪಂಪಾಪುರಾಧ್ಯಕ್ಷನಾದ ವಿರೂಪಾಕ್ಷನಿಗೆ ಜಯವಾಗಲಿ. ೨. ಇನ್ನು ಕೇಳಯ್ಯ ಸಿದ್ಧರಾಮ, ರಾಕ್ಷಸನು ಷಣ್ಮುಖನನ್ನು ಕುರಿತು ಈ ರೀತಿ ಹೇಳಿದನು–ಬಾಲಕನೇ ಕೇಳು, ನಿನ್ನನ್ನು ನೋಡಿದರೆ ಮಿಕ್ಕ ಸಾಮಾನ್ಯ ಬಾಲಕನಂತೆ ಕಾಣುವುದಿಲ್ಲ. ನಿನ್ನನ್ನು ಹೆತ್ತ ತಾಯಿ ಯಾರು ? ಮೊಲೆಹಾಲನ್ನು ಕುಡಿಯುತ್ತ, ತಾಯಮಗ್ಗುಲಲ್ಲಿ ಮಲಗಿರಬೇಕಾದ ದಿನಗಳಲ್ಲಿ ಎಂದರೆ ಈ ಎಳೆತನದಲ್ಲಿ ಬಂದು ವಿಷ್ಣು ಮುಂತಾದವರ ಬಲಿಗೆ ಯಜ್ಞಪಶುವಾಗಿ ಕೆಡಬೇಡ. ನಾನು ನಿನ್ನನ್ನು ರಕ್ಷಿಸಿದ್ದೇನೆ; ಹೋಗು–ಎಂದ ಮಾತಿಗೆ ಗುಹನು

CC-0. Jangamwadi Math Collection. Digitized by eGangotri

ಬಾಲಕಂ ತಾನಾದೊಡೇನಾಯ್ತು ಕತ್ತಲೆಗೆ
ಬಾಲಾರ್ಕನಂಜುವನೆ ವನದ ಮದದಾನೆಯು ಕ
ರಾಳತೆಗೆ ಸಿಂಗವರಿಯೋಡುವುದೆ ಪರ್ವತಕೆ ವಜ್ರವೇನಳವಳಿವುದೇ
ಮೇಲನರಿಯದೆ ನುಡಿವರೇ ಮರುಳೆ ನೀಂ ನೋಡೆ
ಮೂಲೋಕವಂ ಕೊಂದು ತೇಗುತಿರ್ದಪೆ ನಿನಗೆ
ಪಾಲನಾಗುಣವೇಕೆನುತ್ತಾತನಂ ಬಾಣಜಾಲದಿಂ ಮುಳುಗಿಸಿದನು ೩

ಮಾನವ ಭುಜಂಗರೆನಗಿದಿರಿಲ್ಲ ದಿವಿಜರ ವಿ
ಮಾನಂಗಳಂ ಸೆಳೆದು ಹರಿಯಜೇಂದ್ರಾದ್ಯರ್ಗೆ
ಮಾನಸವ್ಯಥೆಯನಾಗಿಸಿದೆನಾಹವದೊಳಗೆ ನೀನದು ಕೇಳ್ದರಿಯಲಾ
ಮಾನಗರ್ವದ ಮಾತಿದೆನ್ನದಿರು ನೀಂ ಜಯರ
ಮಾನಯಸಕುಮುದಚಂದ್ರಮನೆನಿಸುವೆನ್ನಯ ಸ
ಮಾನನೇ ನೀಂ ಪಸುಳೆ ಪೋಗೆನುತ್ತಸುರೇಂದ್ರನಾರ್ದೆಚ್ಚು ಬೊಬ್ಬಿರಿದನು ೪

ಹರಿಯಜೇಂದ್ರಾದಿ ಸುರನರಭುಜಂಗಮರ ನೀಂ
ಧುರದೊಳೋಡಿಸಿದೆನೆಂದೆಂಬ ಸುದ್ದಿಯ ಕೇಳ್ದು
ಹರಿಮುಖ್ಯರಂ ಕಾಯ್ದು ನಿನ್ನನಾಂ ಸಂಹರಿಸಲೈತಂದೆ ನೋಡು ತನ್ನ

ನಗುತ್ತ ತಾರಕಾಸುರನಿಗೆ ಈ ರೀತಿ ಹೇಳಿದನು. ೩. ತಾನು ಬಾಲಕನಾದ ಮಾತ್ರಕ್ಕೆ ಏನಾಯಿತು ? ಕತ್ತಲೆಗೆ ಬಾಲಸೂರ್ಯನು ಹೆದರುತ್ತಾನೆಯೆ ? ಕಾಡಿನ ಮದಿಸಿದ ಆನೆಯ ಕ್ರೂರತನಕ್ಕೆ ಸಿಂಹದ ಮರಿ ಹೆದರಿ ಓಡುವುದೆ ? ಪರ್ವತವನ್ನು ನೋಡಿ ವಜ್ರಾಯುಧವು ಶಕ್ತಿಗುಂದುವುದೆ ? ಅಯ್ಯೊ ಮೂರ್ಖ, ಯಾವುದು ಉತ್ತಮ ಅಥವಾ ಅಲ್ಲ ಎಂಬುದನ್ನು ತಿಳಿಯದೆ ಮಾತನಾಡುತ್ತಾರೆಯೆ ? ನೀನು ನೋಡಿದರೆ ಮೂರು ಲೋಕಗಳನ್ನೂ ಕೊಂದು ತೇಗುತ್ತಿದ್ದೀಯೆ. ನಿನಗೆ ರಕ್ಷಣೆ ಮಾಡುವ ಗುಣ ಏತಕ್ಕೆ (ಎಲ್ಲಿ ಬಂತು) ಎನ್ನುತ್ತ ಅವನನ್ನು ಬಾಣಗಳ ಸಮೂಹದಲ್ಲಿ ಮುಳುಗಿಸಿದನು. ೪. ಮನುಷ್ಯರು ನಾಗರು ನನಗೆ ಎದುರಲ್ಲ. ದೇವತೆಗಳ ವಿಮಾನವನ್ನು ಕಿತ್ತುಕೊಂಡು, ಯುದ್ಧದಲ್ಲಿ ವಿಷ್ಣು-ಇಂದ್ರ ಮೊದಲಾದವರಿಗೆ ಮಾನಸಿಕ ವ್ಯಥೆಯನ್ನು ಉಂಟು ಮಾಡಿದೆ. ನೀನು ಅದನ್ನು ಕೇಳಿ ತಿಳಿಯೆ. ಅಭಿಮಾನದ ಜಂಬದ ಮಾತು ಇದು ಎಂದು ನೀನು ಹೇಳದಿರು.ನೀನು ಜಯಲಕ್ಷ್ಮಿಯ ಮುಖಚಂದ್ರನು ಎನ್ನಿಸುವ ನನ್ನ ಸಮಾನನೇ? ನೀನು ಇನ್ನೂ ಹಸುಗೂಸು ಹೋಗು ಎನ್ನುತ್ತ ತಾರಕನು ಆರ್ಭಟಿಸಿ ಹೊಡೆದು, ಬೊಬ್ಬೆಹಾಕಿದನು. ೫. ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವ-ನರ-ನಾಗರನ್ನು ನೀನು ಯುದ್ಧದಲ್ಲಿ ಸೋಲಿಸಿದೆ ಎಂಬ ವಿಷಯವನ್ನು ಕೇಳಿ ವಿಷ್ಣು ಮೊದಲಾದವರನ್ನು ಕಾಪಾಡಿ ನಿನ್ನನ್ನು ಸಂಹಾರ ಮಾಡಲು ಬಂದೆ. ನನ್ನ ಮಹಾಪರಾಕ್ರಮವನ್ನು

CC-0. Jangamwadi Math Collection. Digitized by eGangotri

ಪರಮವಿಕ್ರಮವ ನೀಂ ಮುನ್ನ ತಪವಂ ಮಾಡಿ
ಪರಮೇಷ್ಠಿಯಿಂ ಪಡೆದ ಪದವಿಂದಿನಲ್ಲಿಸರಿ
ಪರಶಿವನ ಕುವರನಾನರಿಯುನಲಾಯೆಂದೆನುತಲಸುರನಂಬುಂ ಕಡಿದನು ೫

ಪಲಬರ್ಗೆ ಜನಿಸಿ ಪರಶಿವನಣುಗನಾನೆನಲ್
ಕೆಲದವರ್ ನಗದಿಹರೆ ತೆಗೆ ಬೇರ ಬಲ್ಲವ
ರ್ಗೆಲೆಯ ತೋರ್ಪರೆ ಸಾಕು ಸಾಕು ಕೂರಂಬಿನಿಂ ತವೆ ನಿನ್ನ ಸಾಲ್ದಲೆಯುನು
ಕಳಚುವೆಂ ನೋಡೆನುತೆ ದಾನವಂ ಬೆನ್ನ ಬ
ತ್ತಳಿಕೆಯಿಂದುಗಿದುಬಿಡಲಾ ಬಾಣವೆಲ್ಲವಂ
ಮುಳಿದು ಕಡಿದಂ ಗುಹಂ ಮತ್ತಿಸುವನಾ ಖಳಂ ಮರಳಿ ಕಡಿವಂ ಕುವರನು ೬

ಎಸುವ ಹೊದೆಯಿಂದೆ ತೆಗೆದೆಸುವ ಬೊಬ್ಬಿರಿದು ತೊ
ಟ್ಟೆಸುವ ಕುಶಲಂಗಳಿಂದೆಸುವ ಕೈಚಳಕದಿಂ
ದೆಸುವ ಕಿವಿವರೆಗೆ ತೆಗೆದೆಸುವ ತವಕದೊಳೆ ಸವ್ಯಾಪಸವ್ಯಂಗಳಿಂದೆ
ಎಸುವ ದಶದಿಕ್ಕುಗಳೊಳೆಸುವ ಲಘುಪಾಳಿಯಿಂ
ದೆಸುವ ದೂರಾಪಾತ ಲಕ್ಷಸಿದ್ಧಿಗಳಿಂದ
ಮೆಸುವ ಚಾಪಕಲಾಪ್ರವೀಣರೆಚ್ಚಾಡಿದರ್ ಪಟುಭಟರ್ ಸಂಗರದೊಳು ೭

ನೋಡು. ನೀನು ಹಿಂದೆ ತಪಸ್ಸನ್ನು ಮಾಡಿ ಬ್ರಹ್ಮನಿಂದ ಪಡೆದ ಪದವಿ ಇಂದಿಗೆ ಸರಿಯಾಯಿತು (ಎಂದರೆ ಕೊನೆಗೊಂಡಿತು). ಪರಮೇಶ್ವರನ ಮಗ ನಾನು ಎಂಬುದು ತಿಳಿಯದೇನು ? ಎನ್ನುತ್ತ ರಾಕ್ಷಸನ ಬಾಣವನ್ನು ತುಂಡರಿಸಿದನು. ೬. ಹಲವರಿಗೆ ಹುಟ್ಟಿ "ಈಶ್ವರನ ಮಗ ನಾನು" ಎನ್ನಲು ಅಕ್ಕಪಕ್ಕದವರು ನಗದಿರುತ್ತಾರೆಯೆ ? ತೆಗೆ ! ಬೇರನ್ನು ತಿಳಿದವರಿಗೆ ಎಲೆಯನ್ನು ತೋರಿಸುತ್ತಾರೆಯೆ ? ಸಾಕು ಸಾಕು ! ಕ್ರೂರವಾದ ಬಾಣದಿಂದ ನಿನ್ನ ಸಾಲಾದ ತಲೆಗಳನ್ನು ಕಡಿದು ಕಳಚುತ್ತೇನೆ, ನೋಡು ಎನ್ನುತ್ತ ತಾರಕಾಸುರನು ಬೆನ್ನ ಬತ್ತಳಿಕೆಯಿಂದ ಬಾಣವನ್ನು ಸೆಳೆದು ಬಿಡಲು, ಗುಹನು ಕೋಪಗೊಂಡು ಆ ಎಲ್ಲ ಬಾಣಗಳನ್ನೂ ಕಡಿದನು. ಮತ್ತೆ ರಾಕ್ಷಸನು ಬಿಡುವನು ; ಕುಮಾರನು ಮರಳಿ ಅದನ್ನು ಕತ್ತರಿಸುವನು. ೭. ಬತ್ತಳಿಕೆಯಿಂದ ಬಾಣ ಬಿಡುವ, ಆರ್ಭಟಿಸಿ ತೆಗೆದು ಹೊಡೆಯುವ, ಬಿಲ್ಲಿಗೆ ಹೂಡಿ ಬಾಣ ಬಿಡುವ, ಚಾತುರ್ಯದಿಂದ ಹೊಡೆಯುವ, ಕೈಚಳಕದಿಂದ ಹೊಡೆಯುವ, ಕಿವಿಯವರೆಗೆ ಎಳೆದು ಬಿಡುವ, ತವಕದಿಂದ ಎಡಬಲಗಳಿಂದ ಬಿಡುವ, ಹತ್ತು ದಿಕ್ಕುಗಳಲ್ಲಿಯೂ ಪ್ರಯೋಗಿಸುವ, ಹಗುರವಾದ ರೀತಿಯಿಂದ ಹೊಡೆಯುವ, ದೂರಾಪಾತಲಕ್ಷಸಿದ್ಧಿಗಳಿಂದ ಹೊಡೆಯುವ ಚಾಪವಿದ್ಯಾ ಪ್ರವೀಣರಾದ ಶೂರಭಟರು ಬಾಣಗಳನ್ನು ಪ್ರಯೋಗಿಸುತ್ತ ಹೋರಾಡಿದರು.

CC-0. Jangamwadi Math Collection. Digitized by eGangotri

ಖಣಿಖಟಿಲ್ ಛಿಳಿಛಿಟಿಲ್ ಭುಗಿಲೆಂಬ ಸಾಯಕ
ಕ್ವಣನದಿಂ ತೀವಿದುದಜಾಂಡಮುಂಡಲವುಸ್ತ್ರ
ಗಣದ ತುಂಡುಗಳಿಂದಲಿಡಿದುದವನೀಚಕ್ರವೇನೆಂಬೆನಚ್ಚರಿಯುನು
ಕಣೆ ಕಣೆಯು ತಾಗೆ ಪೊಣ್ಮಿದ ಕಿಡಿಯ ಗಡಣದಿಂ
ಪೆಣೆದುದು ಸಮಸ್ತ ಜಗಮೆನಲೊರ್ವರೆಚ್ಚ ಮಾ
ರ್ಗಣವನೊರ್ವರ್ ಕಡಿವುತೆಚ್ಚಾಡಿದರ್ ಕುಮಾರಕತಾರಕರ್ ಧುರದೊಳು ೮

ಪುರ್ವುಗಳ್ ಬಿಗಿದವುಡುಗರ್ಚಿ ಮುಂಡಿಗಳನಿ
ಟ್ಟೊರ್ವರೊರ್ವರ್ಗೆ ತೆರಳದೆ ಮಹಾಕೋಪಾಗ್ನಿ
ಯುರ್ವುತಿರೆ ಕಂಗಳೊಳ್ ನಾಸಿಕದೆ ಸೂಸೆ ಕಾರ್ಬೊಗೆ ಭುಜಬಲಾಟೋಪದ
ಗರ್ವದಿಂ ಸರಿಯಾಗಿ ಕಾದಿದರ್ ಧುರದೊಳ್ ಧ
ನುರ್ವೇದನಿಪುಣರಾಮೇಲೆ ಗುಹನದಟಿಂ ಸು
ಪರ್ವರಾಯೆನಲೆರಳ್ಮಂತ್ರಾಸ್ತ್ರಮಂ ಪೂಡಿ ಕೂಡೆ ಬೊಬ್ಬಿರಿದೆಚ್ಚನು ೯

ಕೀಲಿಸಿದುವವನ ನೊಸಲಂ ನೊಸಲ ಕಣ್ಣವನ
ಬಾಲನೆಚ್ಚಂಬು ಪೊಸ ಬಿಸಿಯ ನೆತ್ತರ ಪೊನಲ್
ಭಾಳದಿಂ ಪರಿದುದವನಿಗೆ ದಾನವನ ವೀರರಸಮುಕ್ಕಿ ಸೂಸುವಂತೆ

೮. ಖಣಿಖಟಿಲ್, ಛಿಳಿಛಿಟಿಲ್, ಭುಗಿಲ್ ಎಂಬ ಬಾಣದ ಶಬ್ದ ಬ್ರಹ್ಮಾಂಡವನ್ನು ಆವರಿಸಿತು. ಬಾಣಗಳ ತುಂಡುಗಳಿಂದ ಭೂಮಿ ತುಂಬಿತು. ಆಶ್ಚರ್ಯವನ್ನು ಏನೆನ್ನಲಿ ? ಬಾಣವು ಬಾಣವನ್ನು ತಾಗಲು ಹೊಮ್ಮಿದ ಬೆಂಕಿಯ ಕಿಡಿಗಳ ಸಮೂಹದಿಂದ ಸಮಸ್ತ ಜಗತ್ತು ಒಂದಾಗಿ ತುಂಬಿತು ಎನ್ನುವಂತೆ ಒಬ್ಬರು ಬಿಟ್ಟ ಬಾಣವನ್ನು ಮತ್ತೊಬ್ಬರು ಕಡಿಯುತ್ತ ಯುದ್ಧದಲ್ಲಿ ಕುಮಾರ(ಷಣ್ಮುಖ)–ತಾರಕರು ಹೋರಾಡಿದರು. ೯. ಹುಬ್ಬು ಗಂಟಿಕ್ಕಿ, ಅವುಡು ಕಚ್ಚಿ, ಮುಂಡಿಯೂರಿ ಮುಂದಡಿಯಿಡದೆ ಒಬ್ಬರೊಬ್ಬರು ಕಣ್ಣಿನಲ್ಲಿ ಮಹಾಕೋಪದ ಬೆಂಕಿ ಉರಿಯುತ್ತಿರಲು, ಮೂಗಿನಲ್ಲಿ ಕಪ್ಪಾದ ಹೊಗೆ ಹೊಮ್ಮುತ್ತಿರಲು, ಭುಜಬಲಪರಾಕ್ರಮದ ಗರ್ವದಿಂದ ಬಿಲ್ವಿದ್ಯಾನಿಪುಣರು ಯುದ್ಧದಲ್ಲಿ ಸರಿಸಮನಾಗಿ ಹೋರಾಡಿದರು. ಅನಂತರ ಕುಮಾರನು ಪರಾಕ್ರಮದಿಂದ, ದೇವತೆಗಳು ಆ ! ಎನ್ನುವಂತೆ, ಎರಡು ಮಂತ್ರಾಸ್ತ್ರಗಳನ್ನು ಹೂಡಿ ಆರ್ಭಟಿಸುತ್ತ ಹೊಡೆದನು. ೧೦. ಹಣೆಗಣ್ಣನ ಮಗನು (ಗುಹನು) ಬಿಟ್ಟ ಬಾಣವು ತಾರಕನ ಹಣೆಯಲ್ಲಿ ನಾಟಿತು. ಹೊಸಬಿಸಿಯಾದ ರಕ್ತದ ಪ್ರವಾಹ ರಾಕ್ಷಸನ ವೀರರಸವುಕ್ಕಿ ಹರಿಯುವಂತೆ ಹಣೆಯಿಂದ ನೆಲಕ್ಕೆ ಹರಿಯಿತು. ಏನು ಹೇಳಲಿ ? ರಾಕ್ಷಸನು ಆ ಬಾಣವನ್ನು ಕಿತ್ತು, ರಕ್ತವನ್ನು

CC-0. Jangamwadi Math Collection. Digitized by eGangotri

ಪೇಳಲೇನಾ ಶರವನುಗಿದು ರಕ್ತವನೊರಸಿ
ವೀಳೆಯಂಗೊಂಡು ಪೊದೆಗಳೊಳ್ಪಿದೆ ಪೊಸ ಮಸೆಯ
ಬೋಳೆಗಳನಾಯ್ದು ಕುವರನನೆಸೆಯಲವನರಿದು ತಾನೆಚ್ಚು ಬೊಬ್ಬಿರಿದನು ೧೦

ಪೊಗರೊಗುವ ಪೊಸಮಸೆಯ ಬಾಣವಸುರನ ತನುವ
ನುಗಿದು ಭರವಸದಿಂದೆ ಪಾಯ್ತಂದು ಧರಣಿಯಂ
ಬಗಿದು ಪಾತಾಳವಂ ಪೊಕ್ಕು ಫಣಿಪನನಲೆಯಲಾತನೊಡಲಂ ಬಿರಿಯಲು
ವಿಗಡದನುಜಂ ಶರವಿಘಾತಿಯಿಂದಳವಳಿದು
ಮಿಗೆ ಮೂರ್ಛೆವೋಗಿ ಧರೆಯದಿರಲೆಚ್ಚತ್ತು ದೃ
ಗ್ಯುಗಳವಂ ತೆರೆದೆದ್ದು ನಿಂದು ಕಟ್ಟಾಳಾಗಿ ಸೇನಾನಿಗಿಂತೆಂದನು ೧೧

ಕಿರುಬನೊಡನೇನೆಂದು ಕೈದೆಗೆದು ಕಾದಿದೊಡೆ
ಚೆರೆದೆಲಾ ಬಹಳಗರ್ವದೆ ನಿನ್ನ ತಲೆಗಳಂ
ತರಿದು ಬಿಸುಡುವೆನೀಗ ನೋಡೆನುತೆ ಹೊಸಮಸೆಯ ಬಾಣಂಗಳಂ ತೊಡರ್ಚಿ
ಹೆರೆದಲೆಯನಾತ್ಮಜನನೆಚ್ಚು ಮರಳೆಚ್ಚು ಬೊ
ಬ್ಬಿರಿದು ಕೈಯೊಡನೆಸೆಯೆ ಸೇನಾನಿಯನಿತುವಂ
ಮುರಿದು ಮುಗುಳೆಚ್ಚು ಸಾರಥಿವರೂಥಾಶ್ವಂಗಳಂ ಕಡಿದು ಬೊಬ್ಬಿರಿದನು ೧೨

ಒರೆಸಿ, ಅವನನ್ನು ಕರೆಯುತ್ತ, ಪ್ರತಿಯಾಗಿ ಬತ್ತಳಿಕೆಯಿಂದ ಹೊಸದಾಗಿ ಮಸೆದ ಹೊಸರೀತಿಯ ಬಾಣಗಳನ್ನು ಆರಿಸಿ ಕುಮಾರನ ಮೇಲೆ ಪ್ರಯೋಗಿಸಲು ಅವನು ಅದನ್ನು ಖಂಡಿಸಿ ತಾನು ಪ್ರತಿಯಾಗಿ ಬಾಣವನ್ನು ಬಿಟ್ಟು, ಅಬ್ಬರಿಸಿದನು. ೧೧. ಪ್ರಕಾಶವನ್ನು ಬೀರುತ್ತಿದ್ದ ಹೊಸದಾಗಿ ಮಸೆದಿದ್ದ ತೀಕ್ಷ್ಣವಾದ ಬಾಣವು ರಾಕ್ಷಸನ ದೇಹವನ್ನು ಸೀಳಿ, ರಭಸದಿಂದ ಹಾದುಬಂದು, ಭೂಮಿಯನ್ನು ಬಗಿದು, ಪಾತಾಳವನ್ನು ಹೊಕ್ಕು, ಆದಿಶೇಷನು ನೋಯುವಂತೆ ಅವನ ಶರೀರವನ್ನು ಪ್ರವೇಶಿಸಿತು. ಕ್ರೂರಿಯೂ ಪರಾಕ್ರಮಿಯೂ ಆದ ತಾರಕಾಸುರನು ಬಾಣದ ಹೊಡೆತದಿಂದ ಶಕ್ತಿಗುಂದಿ ಮೂರ್ಛೆ ಹೊಂದಿದನು. ಭೂಮಿ ಕಂಪಿಸಲು ಎಚ್ಚರಗೊಂಡು ಎರಡು ಕಣ್ಣನ್ನೂ ತೆರೆದು ಮೇಲೆದ್ದು ನಿಂತು ಶೌರ್ಯದಿಂದ ದೇವಸೇನಾಧಿಪತಿಯಾದ ಗುಹನಿಗೆ ಹೀಗೆ ಹೇಳಿದನು. ೧೨. ಹಸುಗೂಸಿನೊಡನೆ ಏನು ಹೋರಾಟ ಎಂದು ಕೈತಡೆದು ಯುದ್ಧಮಾಡಿದರೆ ಬಹಳ ಗರ್ವದಿಂದ ಕೂಡಿದೆಯಲ್ಲವೆ ? ನಿನ್ನ ತಲೆಗಳನ್ನು ತರಿದು ಬಿಸುಡುತ್ತೇನೆ. ಈಗ ನೋಡು ಎನ್ನುತ್ತ ಮಸೆದು ಹರಿತವಾದ ಬಾಣಗಳನ್ನು ಹೂಡಿ ಚಂದ್ರಶೇಖರನ ಮಗ (ಗುಹ) ನನ್ನು ಹೊಡೆದು, ಮತ್ತೆ ಹೊಡೆದು ಆರ್ಭಟಿಸಿ ಬಾಣದಿಂದ ಹೊಡೆಯಲು ಗುಹನು ಆ ಬಾಣಗಳೆಲ್ಲವನ್ನೂ ಖಂಡಿಸಿ, ಪ್ರತಿಯಾಗಿ ಬಾಣ ಪ್ರಯೋಗಮಾಡಿ, ತಾರಕನ ಸಾರಥಿ,

CC-0. Jangamwadi Math Collection. Digitized by eGangotri

ಬಳಿಕ ನೂತನವರೂಥಾಶ್ವಸಾರಥಿಗಳುಮ
ನಳವಡಿಸಿ ತತ್ಸ್ಯಂದನವನೇರಿ ಷಡ್ವದನ
ನಳವಿಗೈತಂದು ಬಿಲ್ಗೊನೆಯನುರೆ ನೇವರಿಸಿ ಬೆನ್ನ ಬತ್ತಳಿಕೆಯಿಂದೆ
ಪೊಳೆವ ಪೊಸಮಸೆಯ ಕೂರ್ಗಣೆಗಳಂ ತೊಟ್ಟಾರ್ದು
ಖಳನೆಸೆಯಲನಿತುಬಾಣಂಗಳಂ ಕಡಿದೊಡನೆ
ಮುಳಿದವನ ಕರದ ಕಾರ್ಮುಕವನಿರ್ಕಡಿಗೈದನಾ ಕುವರನಾಕ್ಷಣದೊಳು ೧೩

ಮತ್ತೆ ಪೊಸಬಿಲ್ವಿಡಿದಿಸಲ್ ಕೆರಳಿ ಗುಹನದು
ಕತ್ತರಿಸಿ ಬಿಸುಡಲಾ ಕ್ಷಣದೊಳಗೆ ಸಾಹಸೋ
ನ್ಮತ್ತಂ ಬಳಿಕ್ಕೊಂದು ಕಾರ್ಮುಕವನಳವಡಿಸಿ ತೆಗೆದೆಸಲ್ ಕೋಪದಿಂದೆ
ಉತ್ತರಿಸಿದಂ ಹಿಡಿವ ಕಡಿವ ಕೈಯೊದಗಿನಿಂ
ಹತ್ತುಕೋಟಿ ಶರಾಸನಂ ತೀರಲಾಗ ದನು
ಜೋತ್ತಮಂ ಮರಳಿ ಪೊಸಬಿಲ್ಪಿಡಿದು ಪಾವಕಕಳಂಬದಿಂದಾರ್ದೆಚ್ಚನು ೧೪

ಉರಿದುವು ರಥಚ್ಛತ್ರ ಚಾಮರಂಗಳ್ ಕರಿಕು
ವರಿದು ಕರಿತುರಗಮುರುಳ್ದುವು ದೊಡ್ಡ ಹಂಚಿಟ್ಟು
ಹುರಿದವೋಲ್ ಸೇನೆ ಸಿಡಿಮಿಡಿಗೊಂಡು ಬೇವ ಕಮರ್ವರಿಯಿತ್ತಜಾಂಡಕಂದು

ತೇರು ಕುದುರೆಗಳನ್ನು ನಾಶಗೊಳಿಸಿ ಅಬ್ಬರದಿಂದ ಬೊಬ್ಬಿರಿದನು. ೧೩. ಅನಂತರ ತಾರಕನು ಹೊಸ ರಥ, ಕುದುರೆ, ಸಾರಥಿಗಳನ್ನು ಹೊಂದಿಸಿಕೊಂಡು ರಥವನ್ನು ಏರಿ, ಷಣ್ಮುಖನ ಸಮೀಪಕ್ಕೆ ಬಂದು, ಬಿಲ್ಲಿನ ತುದಿಯನ್ನು ಸವರಿ, ಬೆನ್ನಲ್ಲಿದ್ದ ಬತ್ತಳಿಕೆಯಿಂದ ಹೊಸದಾಗಿ ಮಸೆದು ಹೊಳೆಯುವ ಹರಿತವಾದ ಬಾಣಗಳನ್ನು ತೆಗೆದು ಹೂಡಿ, ಆರ್ಭಟಿಸಿ ಪ್ರಯೋಗಿಸಿದನು. ಕುಮಾರನು (ಗುಹ) ಅಷ್ಟು ಬಾಣಗಳನ್ನೂ ಕಡಿದು ಹಿಂದೆಯೇ ಕೋಪದಿಂದ ಅವನ ಕೈಯಲ್ಲಿದ್ದ ಬಿಲ್ಲನ್ನು ಎರಡು ತುಂಡಾಗಿ ಕತ್ತರಿಸಿದನು. ೧೪. ರಾಕ್ಷಸನು ಮತ್ತೆ ಹೊಸಬಿಲ್ಲನ್ನು ಹಿಡಿದು ಬಾಣದಿಂದ ಹೊಡೆಯಲು, ಕೋಪಗೊಂಡು ಗುಹನು ಅದನ್ನೂ ಕತ್ತರಿಸಿ ಬಿಸುಟನು. ಆ ಕ್ಷಣವೇ ಸಾಹಸದಿಂದ ಉನ್ಮತ್ತನಾದ ತಾರಕಾಸುರನು ಮತ್ತೊಂದು ಬಿಲ್ಲನ್ನು ಅಳವಡಿಸಿಕೊಂಡು ತೆಗೆದುಹೊಡೆಯಲು, ಕೋಪದಿಂದ ಅದಕ್ಕೆ ಗುಹನು ಪ್ರತಿಯಾಗಿ ಉತ್ತರಿಸಿದನು. ಬಿಲ್ಲನ್ನು ಹಿಡಿಯುವ, ಅದನ್ನು ಕಡಿಯುವ, ಕೈಗೆ ಒದಗಿಬಂದ ಹತ್ತುಕೋಟಿ ಬಿಲ್ಲುಗಳ ಸಮೂಹ ಮುಗಿದು ಹೋಯಿತು. ಆಗ ರಾಕ್ಷಸಶ್ರೇಷ್ಠನು ಮತ್ತೆ ಹೊಸಬಿಲ್ಲನ್ನು ಹಿಡಿದು ಆರ್ಭಟಿಸುತ್ತ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ೧೫. ರಥ, ಛತ್ರ, ಚಾಮರಗಳು ಉರಿದು ಹೋದುವು. ಆನೆ ಕುದುರೆಗಳು ಬೆಂದು ಕರಿಕಾಗಿ ಉರುಳಿದುವು. ದೊಡ್ಡದಾದ ಬಾಣಲೆಯಲ್ಲಿ ಹುರಿದ ರೀತಿಯಲ್ಲಿ ಸೈನ್ಯ ಸಿಡಿಮಿಡಿಗೊಂಡು ಬೇಯುವ ವಾಸನೆ

CC-0. Jangamwadi Math Collection. Digitized by eGangotri

ಹರಸುತಂ ಕೋಪದಿಂದೀ ಕಿಚ್ಚನೀಗ ಸಂ
ಹರಿಸುವೆಂ ವರುಣಬಾಣದೊಳೆಂದು ಧನುವಿನಿಂ
ಹರಿಸಿದಂ ಪಿರಿದು ಸಂಹರಿಸುವುರಿಯ ದಗೆಯಾವರಿಸೆ ನೀರ್ ನಿಮಿಷದೊಳಗೆ ೧೫

ಕಾರವುಗಿಲುರೆ ಕರೆವ ನೀರೆಂಬೊಲುದಕದಾ
ಕಾರಮಾಯ್ತಾ ಬಲಮದೆಲ್ಲಮುಂ ಬಿಲ್ಲ ಟಂ
ಕಾರಮುಖ್ಯಧ್ವನಿಗಳಡಗಿದುವು ಚಾತುರಂಗಂಗಳ್ ಮಹಾಪ್ರಳಯದ
ವಾರಾಸಿಜಲಚರವೆನಲ್ ತೇಂಕುತಿರ್ದುವಿದ
ಕಾರಾಸೆಯೆಂದೆಲ್ಲರುಂ ಬಾಯ್ಬಿಡಲ್ ಬಳಿ
ಕ್ಕಾ ರಾಸಿತೋಯಸಂಹಾರವಡಬಾಸ್ತ್ರಮಂ ತಾರಕಂ ತೊಟ್ಟೆಚ್ಚನು ೧೬

ಕೆರಳಿ ಪುನರಪಿ ತಾರಕಾಸುರಂ ಕೋಪದಿಂ
ಗಿರಿಶರಂ ತೊಟ್ಟೆಚ್ಚನಾ ಗುಹಂ ಕೂಡೆ ಸಂ
ಹರಿಸಿದಂ ವಜ್ರಕಾಂಡವನೆಚ್ಚು ದನುಜೇಂದ್ರನೆಚ್ಚಂ ನಿಶಾಬಾಣಮಂ
ತರಣಿಶರದಿಂ ಕಾರ್ತಿಕೇಯನೆಚ್ಚಂ ಬಳಿ
ಕ್ಕುರಗವಿಶಿಖಮಸುರನೆಚ್ಚಂ ಮಹಾ
ಗರುಡಾಸ್ತ್ರಮಂ ತೊಟ್ಟು ತತ್ಸರ್ಪಬಾಣಮಂ ಗುಹನಾರ್ದು ಖಂಡಿಸಿದನು ೧೭

ಹರಡಿತು. ಬ್ರಹ್ಮಾಂಡವನ್ನು ಆವರಿಸುವ ಬೆಂಕಿಯನ್ನು ನೋಡಿ ಕೋಪದಿಂದ ಷಣ್ಮುಖನು ಈ ಕಿಚ್ಚನ್ನು ಕೂಡಲೇ ವರುಣಾಸ್ತ್ರದಿಂದ ಆರಿಸುತ್ತೇನೆ ಎಂದು ಬಹಳವಾಗಿ ಎಲ್ಲವನ್ನೂ ನಾಶಮಾಡುವ ಬೆಂಕಿಯ ದಗೆಯನ್ನು ನೀರು ಆವರಿಸುವಂತೆ ಬಿಲ್ಲಿನಿಂದ ನಿಮಿಷದಲ್ಲಿ ನೀರನ್ನು ಹರಿಸಿದನು. ೧೬. ಭೀಕರವಾದ ಕಾರ್ಮೋಡಗಳು ಸುರಿಯುವ ಮಳೆಯೊ ಎನ್ನುವಂತೆ ಆ ಸೈನ್ಯವೆಲ್ಲವೂ ನೀರಿನಲ್ಲಿ ಮುಳುಗಿಹೋಯಿತು. ಬಿಲ್ಲಿನ ಠಂಕಾರ ಮೊದಲಾದ ಎಲ್ಲ ಶಬ್ದಗಳೂ ಅವರಲ್ಲಿ ಅಡಗಿಹೋದುವು. ಚತುರಂಗವೆಲ್ಲವೂ ಮಹಾಪ್ರಳಯಕಾಲದ ಸಾಗರದ ಜಲಚರಗಳೆನ್ನುವಂತೆ ತೇಲಾಡುತ್ತಿದ್ದುವು. ಇದಕ್ಕೆ ಯಾರು ದಿಕ್ಕು ಎಂದು ಎಲ್ಲರೂ ದಿಕ್ಕೆಟ್ಟು ಬಾಯ್ಬಿಡಲು ಬಳಿಕ ತಾರಕನು ಆ ವಾರುಣಾಸ್ತ್ರದಿಂದ ಉಂಟಾದ ಸಾಗರೋಪಮ ಜಲವನ್ನು ಬತ್ತಿಸುವಂತೆ ಮಾಡುವ ವಡಬಾಸ್ತ್ರವನ್ನು ಹೂಡಿದನು. ೧೭. ಮತ್ತೆ ಕೆರಳಿ ತಾರಕಾಸುರನು ಕೋಪದಿಂದ ಪರ್ವತಾಸ್ತ್ರವನ್ನು ಬಿಟ್ಟನು. ಗುಹನು ತಕ್ಷಣ ವಜ್ರಾಸ್ತ್ರದಿಂದ ಅದನ್ನು ಸಂಹರಿಸಿದನು. ತಾರಕಾಸುರನು ನಿಶಾಸ್ತ್ರವನ್ನು ಬಿಟ್ಟನು. ಬಳಿಕ ಸೂರ್ಯಾಸ್ತ್ರದಿಂದ (ಕಾರ್ತಿಕೇಯನು) ಷಣ್ಮುಖನು ಹೊಡೆದನು. ಮತ್ತೆ ತಾರಕಾಸುರನು ಕ್ರೂರವಾದ ಸರ್ಪಾಸ್ತ್ರವನ್ನು ಬಿಟ್ಟನು. ಗುಹನು ಮಹಾ ಗಾರುಡಾಸ್ತ್ರವನ್ನು ಹೂಡಿ ಆರ್ಭಟಿಸಿ ಆ ಸರ್ಪಾಸ್ತ್ರವನ್ನು

CC-0. Jangamwadi Math Collection. Digitized by eGangotri

ಇಂತಖಿಳದಿವ್ಯಾಸ್ತ್ರತತಿಗಳಿಂದೋರೊರ್ವ
ರುಂ ತೊಲಗದೆಚ್ಚಾಡುತಿರೆ ಮಹಾಕೋಪದಿಂ
ದಂತಕೋಪಮತಾರಕಂ ಬಳಿಕ ಬ್ರಹ್ಮಾಸ್ತ್ರವುಂ ಮಾಡಿ ತೆಗೆದೆಸಲ್ಕೆ
ಸಂತಾಪಿಸಿತು ನಿಖಿಳಲೋಕಮಾ ಬಾಣಮಂ
ಕಂತುಹರನಣುಗನತಿವೇಗದಿಂ ರುದ್ರಾಸ್ತ್ರ
ಮಂ ತೊಟ್ಟು ಬಿಟ್ಟು ಖಂಡಿಸಿದನಿಕ್ಕಡಿಗಳ್ ರಣಾಂಕಣದೊಳಡಗೆಡೆಯಲು ೧೮

ಅಂಬುಜಭವಾಸ್ತ್ರಮಂ ಕಡಿದು ಬಿಡಿಸಲ್ ದೈತ್ಯ
ನಂಬಕಂ ಕೆಂಪೇರಿ ಘುಡುಘುಡಿಸಿ ಮುನ್ನಮೆ
ಚ್ಚಂಬುಗಳ ಹವಣಲ್ಲ ಬಾಲ ಬಾಲಕನೆಂದು ಕೈಗಾಯ್ದೊಡರಿಯೆನುತ್ತೆ
ತಾಂ ಬೇಗದಿಂ ದಿವ್ಯಶಕ್ತಿಯುಂ ಸೆಳೆಯಲಾ
ಡಂಬರದ ಕಿಡಿಯ ಗಡಣಂಗಳಿಂ ಗಗನಮಂ
ಚುಂಬಿಸುತ್ತತಿಭಯಂಕರಮಾಗಿ ತಾರಕನ ಕರದೊಳಗೆ ರಂಜಿಸಿದುದು ೧೯

ಧಗಧಗತ್ಕಾರದಿಂದಂ ಧರಣಿಮಂಡಲಂ
ಪೊಗೆವುತಿರ್ದುದು ಸಮುದ್ರಂ ಕುದಿದು ತಳಮಳಲ
ನುಗುಳುತಿರ್ದುದು ನಭದ ನಕ್ಷತ್ರತತಿ ಭೂಮಿಗುದುರುತಿರ್ದುದು ದನುಜನು
ನಗುತೆ ಕೇಳೆಲವೆಲವೊ ಬಾಲ ನೀನೆನ್ನೊಡನೆ
ಪಗೆಗೊಂಡ ಫಲವನುಣ್ಣೆನುತೆ ತಿರುಪಿಡಲುರಿಯ
ನುಗುಳುತ್ತೈದುವ ಶಕ್ತಿಯುಂ ಗುಹಂ ಪಿಡಿದಿಡಲ್ ಖಳನೆರ್ದೆಯ ತಟ್ಟುಗಿದುದು ೨೦

ಕತ್ತರಿಸಿದನು. ೧೮. ಈ ರೀತಿ ಸಮಸ್ತ ದಿವ್ಯಾಸ್ತ್ರಗಳ ಸಮೂಹದಿಂದ ಒಬ್ಬರನ್ನೊಬ್ಬರು ಹಿಮ್ಮೆಟ್ಟದೆ ಹೋರಾಡುತ್ತಿರಲು ಯಮಸದೃಶನಾದ ತಾರಕನು ಮಹಾಕುಪಿತನಾಗಿ ಬ್ರಹ್ಮಾಸ್ತ್ರವನ್ನು ಹೂಡಿ ತೆಗೆದು ಹೊಡೆಯಲು ಎಲ್ಲ ಲೋಕಗಳೂ ಅದರ ತಾಪದಿಂದ ನೊಂದುವು. ಶಿವನಮಗನು ವೇಗದಿಂದ ರುದ್ರಾಸ್ತ್ರವನ್ನು ಬಿಟ್ಟು ಆ ಬ್ರಹ್ಮಾಸ್ತ್ರವು ಎರಡು ತುಂಡಾಗಿ ರಣರಂಗದಲ್ಲಿ ಬೀಳುವಂತೆ ಅದನ್ನು ಖಂಡಿಸಿದನು. ೧೯. ಬ್ರಹ್ಮಾಸ್ತ್ರವನ್ನು ಕಡಿದುಹಾಕಲು ತಾರಕನಕಣ್ಣು ಕೆಂಪೇರಿತು. ಅವನು ಘುಡುಘುಡಿಸಿ ಗುಹನನ್ನು ಕುರಿತು ಬಾಲಕ, ಹಸುಳೆಯೆಂದು ತಡೆದು ಈವರೆಗೆ ಬಿಟ್ಟ ಬಾಣಗಳ ರೀತಿಯಲ್ಲ ಇದು, ತಿಳಿ ಎನ್ನುತ್ತ ಬೇಗನೆ ದಿವ್ಯ ಶಕ್ತ್ಯಾಯುಧವನ್ನು ಎಳೆಯಲು, ಭಯಂಕರವಾದ ಬೆಂಕಿಯ ಕಿಡಿಗಳ ಸಮೂಹದಿಂದ ಆಕಾಶವನ್ನು ಮುತ್ತುತ್ತ ಅತಿಭಯಂಕರವಾಗಿ ಅದು ತಾರಕನ ಕೈಯಲ್ಲಿ ಪ್ರಕಾಶಿಸಿತು. ೨೦. ಭೂಮಂಡಲವು ಧಗಧಗನೆ ಹೊಗೆಕಾರುತ್ತಿತ್ತು. ಸಮುದ್ರ ಕುದಿದು ತಳದ ಮರಳನ್ನು ಮೇಲಕ್ಕೆ ಉಗುಳುತ್ತಿತ್ತು. ಆಕಾಶದ ನಕ್ಷತ್ರಗಳು ಭೂಮಿಗೆ ಉದುರುತ್ತಿದ್ದುವು. ರಾಕ್ಷಸನು ನಗುತ್ತ ಎಲವೆಲವೊ ಬಾಲಕ ಕೇಳು, ನೀನು ನನ್ನ ಸಂಗಡ ದ್ವೇಷಕಟ್ಟಿಕೊಂಡ ಫಲವನ್ನು ಈಗ ಅನುಭವಿಸು—ಎನ್ನುತ್ತ ಶಕ್ತಿಯನ್ನು ತಿರುಗಿಸಿ ಬಿಡಲು, ಅದು ಬೆಂಕಿಯನ್ನು ಕಾರುತ್ತ ಬರುತ್ತಿರುವ ಅದನ್ನೇ ಗುಹನು ಹಿಡಿದು

CC-0. Jangamwadi Math Collection. Digitized by eGangotri

ತನು ನಡುಗಿ ತುಟಿಯೊಣಗಿ ತಲೆ ತಿರುಗಿ ಬಸವಳಿದು
ದನುಜನುರೆ ಬೀಳ್ವಂ ರಣಾಗ್ರದೊಳ್ ನನೆದ ಜಾ
ಜಿನ ಗಿರಿಯೊಲಿರ್ದುದು ಕಳೇವರಂ ರಕ್ತಾಂಬು ಸರ್ವಾಂಗವಂ ಮುಸುಕಲು
ಕನಲಿ ಕಡುವೇಗದಿಂದೊಡೆಯನಾಹವವೆನಗೆ
ತನಗೆನುತೆ ಮುತ್ತಿದುದು ದೈತ್ಯಬಲವೀ ಷಡಾ
ನನನಂಬನ ಮಳೆಯೊಳಂಬರಂ ತುಂಬಿ ಕೋಳಾಹಳದ ರಭಸದಿಂದೆ ೨೧

ಕೆರಳಿ ನಾಲ್ದೆಸೆಯೊಳಿರದೊತ್ತಿದರ್ ಮುತ್ತಿದರ್
ಕರಿತುರಂಗಾರೂಢರುರುಬಿದರ್ ತರುಬಿದರ್
ವರಮಹಾರಥರಿರದೆ ತಾಗಿದರ್ ಕೂಗಿದರ್ ಸರಳ ಸರಿವಳೆಗರೆವುತೆ
ದೊರೆದೊರೆಗಳಡಿಗಡಿಗೆ ಮಿಸುಕಿದರ್ ಮುಸುಕಿದರ್
ಪರಿಪರಿಯ ಕೈದುಗಳೊಳಿಕ್ಕಿದರ್ ಸೊಕ್ಕಿದರ್
ಸರಳ್ಗಳಂ ತನತನಗೆ ಬೀರಿದರ್ ತೋರಿದರ್ ಪೌರುಷಮನಸುರಭಟರು ೨೨

ಇತ್ತಲೀ ತಾರಕಂ ಮೂರ್ಚೆತಿಳಿದೆದ್ದು ಮಿಗೆ
ಕೆತ್ತೆರ್ದೆಯ ಶಕ್ತಿಯಂ ಕಿತ್ತು ಮನದೊಳ್ ಚಿಂತೆ
ವೆತ್ತಿವನೊಳಿನಿತು ಪೊಳ್ತಂ ಪಸುಳೆಯೆಂದುದಾಸೀನದಿಂ ಸೆಣಸಿದೆನಲಾ

ಕೊಂಡು ತಿರುಗಿಸಿ ಹಿಂದಕ್ಕೆ ಬಿಡಲು ಅದು ರಾಕ್ಷಸನ ಎದೆಯನ್ನು ಅಪ್ಪಳಿಸಿ ಹೊಕ್ಕಿತು. ೨೧. ಶರೀರ ನಡುಗಿ, ತುಟಿ ಒಣಗಿ, ತಲೆ ತಿರುಗಿ ಹತೋಟಿ ತಪ್ಪಿ, ರಾಕ್ಷಸನು ರಣರಂಗದಲ್ಲಿ ಬಿದ್ದನು. ರಕ್ತವು ಅವನ ದೇಹವನ್ನೆಲ್ಲ ಆವರಿಸಲು ನೆನೆದ ಮುಂದಕ್ಕೆ ಚಾಚಿಕೊಂಡಿರುವ ಬೆಟ್ಟದಂತೆ ಶರೀರ ಕಾಣಿಸಿತು. ರಾಕ್ಷಸರ ಸೈನ್ಯ ಕೋಪಗೊಂಡು ಬೇಗನೆ ನಮ್ಮ ನಾಯಕನ ಯುದ್ಧ ನನಗೆ ತನಗೆ ಎನ್ನುತ್ತ ಕೋಲಾಹಲದ ರಭಸದಿಂದ ಬಾಣಗಳ ಮಳೆಯಿಂದ ಆಕಾಶವನ್ನು ತುಂಬುತ್ತ ಷಣ್ಮುಖನನ್ನು ಮುತ್ತಿತು. ೨೨. ಉದ್ರೇಕಗೊಂಡು ನಾಲ್ಕು ದಿಕ್ಕಿನಿಂದಲೂ ಮೇಲೆ ಬಿದ್ದು ಮುತ್ತಿದರು. ಆನೆ-ಕುದುರೆಗಳ ಸವಾರರು ಆವೇಶಗೊಂಡರು, ಅಡ್ಡಗಟ್ಟಿದರು. ಶ್ರೇಷ್ಠರಾದ ರಥಿಕರು ಇರದೆ ಬಾಣಗಳ ಮಳೆಗರೆಯುತ್ತ ಎದುರಿಸಿದರು, ಕೂಗಿದರು. ನಾಯಕ ನಾಯಕರು ಮತ್ತೆ ಮತ್ತೆ ಮುಂದುವರಿದು ಮುತ್ತಿದರು. ನಾನಾರೀತಿಯ ಆಯುಧಗಳಿಂದ ಹೊಡೆದರು, ಕೊಬ್ಬಿದರು. ರಾಕ್ಷಸಸೈನಿಕರು ತಾವು ತಾವು ಬಾಣಗಳನ್ನು ಬಿಟ್ಟರು, ಪೌರುಷವನ್ನು ತೋರಿಸಿದರು. ೨೩. ಇತ್ತಕಡೆ ತಾರಕನು ಮೂರ್ಛೆಯಿಂದ ಎಚ್ಚರಗೊಂಡು ಎದ್ದು ಬಲವಾಗಿ ಎದೆಯಲ್ಲಿ ಹೊಕ್ಕ ಶಕ್ತ್ಯಾಯುಧವನ್ನು ಕಿತ್ತು, ಮನಸ್ಸಿನಲ್ಲಿ ಚಿಂತೆತುಂಬಿ ಇಷ್ಟು ಹೊತ್ತು ಬಾಲಕನೆಂದು ಉದಾಸೀನದಿಂದ ಯುದ್ಧಮಾಡಿದೆನಲ್ಲದೆ ಇನ್ನು ಈ

CC-0. Jangamwadi Math Collection. Digitized by eGangotri

ಕತ್ತರಿಸುವಂ ಶಿರವನಿನ್ನಿರಲ್ ಕೇಳ್ ದಿನವ
ನುತ್ತರಿಸಿ ನಾಳೆ ಸುರರಂ ತಿಂದು ತೇಗುವೆನೆ
ನುತ್ತಮಂ ಕ್ರೌಂಚಪರ್ವತದ ಮರೆಯೊಳ್ ಪೋಗಿ ಮೈಗರೆದನಾ ಕ್ಷಣದೊಳು ೨೩

ಸೇನಾನಿ ತನ್ನನುರುಬುವ ಸಕಲ ತಾರಕನ
ಸೇನಾಸಮುದ್ರಮಂ ಕಲಕಿ ತತ್ಸುಭಟರಂ
ನಾನಾಪ್ರಕಾರದಿಂ ಸಂಹರಿಸಿದಂ ಮಹಾಪ್ರಳಯಸಮವರ್ತಿಯಂತೆ
ಏನೆಂಬೆನೈ ರಾಮ ಹರಿಯಜೇಂದ್ರಾದ್ಯರ್ ಮ
ಹಾನಂದದಿಂ ಗುಹನನೊಲ್ದು ಕೊಂಡಾಡೆ ಸಲೆ
ದಾನವಾಧೀಶನಂ ಕಾಣದೆ ರಣಾಂಕಣದೆ ನೋಡುತ್ತೈತರುತಿರ್ದನು ೨೪

ಇರುಳಂತೆ ದಳಿತೋತ್ಪಲಾಳಿಮಯಮುಭವಭೂ
ಧರದಂತೆ ಶಿವಗಣವಿಲಾಸಮಯಮಬಲೆಯರ
ಗುರುಕುಚದ್ವಯದಂತೆ ವರಪತ್ರಭಂಗಮಯಮಾನೆಗಳ್ ಕದಡಿ ಬಿಟ್ಟ
ಸರಸಿಯಂತೆ ನಿಪಾತಪುಂಡರೀಕೌಘಮಯ
ವಿರದೆ ಹರನಾಭರಣದೊಲ್ ರುಂಡಮಯಮೆಸೆವ
ತರಣಿಜನ ಪುರದಂತೆ ಬಹುನರಕಬಂಧಮಯಮಾಗಿ ರಣಮೆಸೆದಿರ್ದುದು ೨೫

ರೀತಿಯೇ ಬಿಟ್ಟರೆ ಇವನು ನನ್ನ ತಲೆಯನ್ನು ಕತ್ತರಿಸುತ್ತಾನೆ. ಕೇಳು, ಈ ದಿವಸವನ್ನು ಕಳೆದು ನಾಳೆ ದೇವತೆಗಳನ್ನು ತಿಂದು ತೇಗುತ್ತೇನೆ ಎನ್ನುತ್ತ ಅವನು ಆಕ್ಷಣ ಕ್ರೌಂಚ ಪರ್ವತದ ಮರೆಗೆ ಹೋಗಿ ತಲೆಮರೆಸಿಕೊಂಡನು. ೨೪. ದೇವಸೇನಾನಿಯಾದ ಗುಹನು ತನ್ನನ್ನು ಆವರಿಸಿದ್ದ ತಾರಕನ ಎಲ್ಲ ಸೇನಾಸಮುದ್ರವನ್ನೂ ಕಲಕಿ ಆ ಶೂರ ಭಟರನ್ನು ಮಹಾ ಪ್ರಳಯಕಾಲದ ಯಮನಂತೆ ನಾನಾರೀತಿ ಸಂಹರಿಸಿದನು. ಏನೆನ್ನ ಲಯ್ಯ ಸಿದ್ಧರಾಮ, ವಿಷ್ಣು-ಬ್ರಹ್ಮ-ಇಂದ್ರ ಮೊದಲಾದವರು ಬಹಳ ಸಂತೋಷದಿಂದ ಷಣ್ಮುಖನನ್ನು ಒಲಿದು ಕೊಂಡಾಡಿದರು. ಅನಂತರ ತಾರಕಾಸುರನನ್ನು ಯುದ್ಧಭೂಮಿ ಯಲ್ಲಿ ಕಾಣದೆ, ಹುಡುಕುತ್ತ ಬರುತ್ತಿದ್ದರು. ೨೫. ರಾತ್ರಿಯಂತೆ ಮುಚ್ಚಿದ ಕಮಲ ಗಳಿಂದ (ಮುಚ್ಚಿದ ಕಣ್ಣುಗಳಿಂದ) ಕೂಡಿತ್ತು. ಶಿವನೆಂಬ ಪರ್ವತದಂತೆ ಶಿವಗಣಗಳಿಂದ (ಭೂತಗಣಗಳಿಂದ) ಆವರಿಸಿತ್ತು. ಸ್ತ್ರೀಯರ ದೊಡ್ಡದಾದ ಎರಡು ಮೊಲೆಗಳ ಮೇಲೆ ಬರೆದ ಪತ್ರರೇಖೆ (ಮುರಿದ ರಥಚಕ್ರ)ಯಿಂದ ಕೂಡಿತ್ತು. ಆನೆಗಳು ಕಲಕಿ ಬಿಟ್ಟ ಕೊಳ ದಂತೆ ನೆಲಕ್ಕೆ ಬಿದ್ದ ತಾವರೆಸಮೂಹ (ಆನೆಗಳ ಸಮೂಹ) ಮಯವಾಗಿತ್ತು. ಶಿವನ ಆಭರಣದಂತೆ ರುಂಡಗಳಮಯವಾದ ಯಮನ ಸಂಯಮೀಪುರದಂತೆ ನರಕಸದೃಶವಾಗಿ

CC-0. Jangamwadi Math Collection. Digitized by eGangotri

ಕರಿಯ ಚರ್ಮವನುಗಿದು ಪೊದ್ದು ತಲೆಗಳ ಕೋದು
ಕೊರಳೊಳಗೆ ಹಾಯ್ಕಿ ಬಿದ್ದಿರ್ದ ಶೂಲಮನಾಂತು
ನೊರೆನೆತ್ತರಂ ತೆಗೆದು ಪಣೆಯೊಳಗೆ ಬೊಟ್ಟಿಟ್ಟು ಮತ್ತೊಂದು ಬಲ್ದಲೆಯನು
ಕರತಳದೆ ಪಿಡಿದು ಮರುಳ್ಗಳ ಮೇಳದಲಿ ಪೆ
ರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ
ಚರಣಕೆರಗಿದುದೊಂದು ಪಲ್ಮರುಳ್ ಶಿವನೆಂದು ಗುಹನಿರಿದ ಸಂಗರದೊಳು ೨೬

ಪೆಣನ ತಿಂದೊಳ್ವ ಬಳ್ಳುಗಳ ದನಿಗಾನಮಾ
ವ್ರಣದ ನೋವಿಂ ನರಳ್ವರ ರವದ ತಾಳಮುಂ
ಕುಣಿವ ಮುಂಡಗಳ ನವಪಾತ್ರಮಲ್ಲಿಯು ನೋಟಕರ್ಕಳೇ ಣೆಣನ ತಿಂದು
ತಣಿದು ತಲೆಗಳ ತೊನೆವ ಬೇತಾಳತತಿ ನಭೋಂ
ಗಣದಿಂದೆ ಜಿಗಿಜಿಗಿದು ಬೀಳ್ವತಲೆ ಮಚ್ಚಾಗೆ
ರಣರಂಗವೇ ನಾಟ್ಯರಂಗದಂತೊಪ್ಪಿದುದು ಖಳನ ಶೋಧಿಪರ ಕಣ್ಗೆ ೨೭

ಮುಂಡಂಗಳಂ ಮಗುಚಿ ನೋಡಿ ಬೆಟ್ಟಾಗಿರ್ದ
ಖಂಡಂಗಳಂ ಕೆದರಿ ನೋಡಿ ಮಿಗೆ ಮಡಿದ ವೇ
ತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ

(ನರ-ಶರೀರಮಯವಾಗಿ) ಯುದ್ಧರಂಗ ಕಣ್ಣಿಗೆ ಕಾಣಿಸಿತು. ೨೬. ಷಣ್ಮುಖನು ನಾಶ ಮಾಡಿದ ಯುದ್ಧಭೂಮಿಯಲ್ಲಿ ದೊಡ್ಡಭೂತವೊಂದು ಆನೆಯ ಚರ್ಮವನ್ನು ಕಿತ್ತು ಹೊದ್ದು, ತಲೆಗಳನ್ನು ಪೋಣಿಸಿ ಕೊರಳೊಳಗೆ ಧರಿಸಿ, ನೆಲದ ಮೇಲೆ ಬಿದ್ದಿದ್ದ ಶೂಲ ವೊಂದನ್ನು ಹಿಡಿದು ನೊರೆನೊರೆಯಾದ ರಕ್ತವನ್ನು ತೆಗೆದು ಹಣೆಯಲ್ಲಿ ಬೊಟ್ಟಿಟ್ಟು, ಮತ್ತೊಂದು ದೊಡ್ಡ ತಲೆಯನ್ನು ಅಂಗೈಯಲ್ಲಿ ಹಿಡಿದು ಭೂತಗಳ ಸಮೂಹದಲ್ಲಿ ಇರಲು, ಅದನ್ನು ನೋಡಿ ಸಣ್ಣಭೂತವೊಂದು ಶಿವನೆಂದು ತಿಳಿದು ಭಯಭಕ್ತಿಯಿಂದ ನಮಸ್ಕ ರಿಸಿತು. ೨೭. ಹೆಣಗಳನ್ನು ತಿಂದು ಅರಚುವ ನರಿಗಳ ಧ್ವನಿಯೆ ಗಾಯನ, ಆ ಗಾಯದ ನೋವಿನಿಂದ ನರಳುವವರ ಶಬ್ದವೇ ತಾಳ,ತಲೆ ಕಳೆದುಗೊಂಡು ಕುಣಿಯುತ್ತಿದ್ದ ಮುಂಡ ಗಳೇ ವೇಷಧಾರಿಗಳು, ಕೊಬ್ಬನ್ನು ತಿಂದು ತೃಪ್ತಿಹೊಂದಿ ತಲೆದೂಗುತ್ತಿದ್ದ ಬೇತಾಳಗಳ ಸಮೂಹವೇ ಪ್ರೇಕ್ಷಕರು, ಆಕಾಶದಿಂದ ಹಾರಿಹಾರಿ ಬೀಳುವ ತಲೆಯೇ ಮೆಚ್ಚುಗೆಯ ಬಹುಮಾನವಾಗಲು ರಾಕ್ಷಸನನ್ನು ಹುಡುಕುವವರ ಕಣ್ಣಿಗೆ ರಣರಂಗವೇ ನಾಟ್ಯಶಾಲೆ ಯಂತೆ ಶೋಭಿಸುತ್ತಿತ್ತು. ೨೮. ದೇವಸೈನಿಕರು ದೇಹಗಳನ್ನು ತಿರುವಿ ನೋಡಿದರು. ಒತ್ತೊತ್ತಾಗಿ ಬೆಟ್ಟದಂತಿದ್ದ ಮಾಂಸಖಂಡಗಳ ರಾಶಿಯನ್ನು ಕೆದಕಿ ನೋಡಿದರು. ಅಧಿಕಸಂಖ್ಯೆಯಲ್ಲಿ ಸತ್ತ ಆನೆಗಳನ್ನು ಸರಿಸಿ ನೋಡಿದರು. ಅಸ್ತವ್ಯಸ್ತವಾಗಿ ಬಿದ್ದಿದ್ದ

CC-0. Jangamwadi Math Collection. Digitized by eGangotri

ರುಂಡಂಗಳಂ ಒಗಿದುನೋಡಿ ಹಯದೊಟ್ಟಲಿನ
ತುಂಡಂಗಳಂ ತೆಗೆದು ನೋಡಿ ನೊರೆನೆತ್ತರಿನ
ಕೊಂಡಂಗಳಂ ಮುಳುಗಿ ನೋಡಿದರ್ ಮಾಡಿದರ್ ಕ್ಲೇಶವಂ ದಿವಿಜಭಟರು ೨೮

ಇಂತು ರಣರಂಗದೆಲ್ಲೆಡೆಯೊಳುಂ ಸಕಲ ಸುರ
ಸಂತತಿಗಳರಸುತಿರೆ ದಿಗ್ವರರ್ ನಾನಾ ದಿ
ಗಂತದೊಳ್ ನೋಡೆ ಹರಿ ಕ್ರೌಂಚಪರ್ವತದ ಮರೆಯೊಳಗಿರ್ದ ಖಳನಿರವನು
ತಾಂ ತಿಳಿದು ಬಂದು ಸುರಪಾಲಂಗೆ ಪೇಳಲ್ಕೆ
ಸಂತಸದೊಳಿಂದ್ರನೈತಂದು ತಾರಕನ ವೃ
ತ್ತಾಂತಮಂ ಗುಹನೊಡನೆ ಬಿನ್ನೈಸೆ ಶಾಂಭವಾಸ್ತ್ರಕೆ ನೀಡಿದಂ ಕೈಯನು ೨೯

ಮೂಡಿಗೆಯೊಳುಗಿದು ಶಾಂಭವಬಾಣಮಂ ಹೆದೆಗೆ
ಹೂಡಲೀರೇಳ್ ಜಗಂ ನಡುಗಿತದ್ರಿಗಳ ತತಿ
ಬೀಡೆಬಿರಿದುದು ಸಪ್ತಶರನಿಧಿಗಳುಕ್ಕಿದುವು ಕುಸಿದುದಿಳೆ ಧ್ರುವನ ಪೊರೆಗೆ
ಓಡಿದುವು ತಾರೆ ಹರಿಯಜಪುರದ ಸರಕುಗಳ್
ಪೊಡಿದುವು ಶಿವಲೋಕಕಹಿಪ ಕರಿ ಕಮಠರ
ಲ್ಲಾಡಿದರಕಾಲದೊಳ್ ಪ್ರಳಯವಾಯ್ತೆಂದು ಪಂಕಜಭವಂ ಚಿಂತಿಸಿದನು ೩೦

ನಿನಗೆ ಗುರಿ ಕ್ರೌಂಚಪರ್ವತದ ಮರೆಯೊಳಗಿರ್ದ
ದನುಜನೊಡಲೆಂದು ಬಾಣಕೆ ಬೆಸಸಿ ಮಂತ್ರಮಂ
ಮನದೊಳಗೆ ಜಪಿಸಿ ಕಿವಿವರೆಗುಗಿದು ಬಿಡಲುದಿರ್ವ ಕೆಂಗಿಡಿಯ ಗಡಣದಿಂದೆ

ರಥಗಳ ಸಮೂಹವನ್ನು ಕೆದಕಿ ನೋಡುತ್ತಿದ್ದರು. ತಲೆಗಳನ್ನು ಸರಿಸಿ ನೋಡುತ್ತಿದ್ದರು. ಕುದುರೆರಾಶಿಯನ್ನು ತೆಗೆದು ನೋಡುತ್ತಿದ್ದರು. ನೊರೆಯಾದ ರಕ್ತದ ಹೊಂಡಗಳಲ್ಲಿ ಮುಳುಗಿ ನೋಡಿ (ತಾರಕಾಸುರನನ್ನು ಕಾಣದೆ) ಅತಿಯಾಗಿ ಆಯಾಸಗೊಂಡರು. ೨೯. ಈ ರೀತಿಯಾಗಿ ಎಲ್ಲ ದೇವಸಮೂಹವೂ ಯುದ್ಧರಂಗದ ಎಲ್ಲ ಕಡೆಯೂ ಹುಡುಕುತ್ತಿರಲು, ದಿಕ್ಪಾಲಕರು ನಾನಾದಿಕ್ಕುಗಳಲ್ಲಿ ನೋಡಲು ವಿಷ್ಣುವು ಕ್ರೌಂಚಪರ್ವತದ ಮರೆಯಲ್ಲಿ ಬಚ್ಚಿಟ್ಟುಕೊಂಡಿದ್ದ ರಾಕ್ಷಸನನ್ನು ನೋಡಿ ಬಂದು ದೇವೇಂದ್ರನಿಗೆ ಹೇಳಿದನು. ಅವನು ಸಂತೋಷದಿಂದ ಗುಹನ ಬಳಿಗೆ ಬಂದು ತಾರಕಾಸುರನ ಸಮಾಚಾರವನ್ನು ತಿಳಿಸಿದನು. ಷಣ್ಮುಖನು ಶಾಂಭವಾಸ್ತ್ರಕ್ಕೆ ಕೈಚಾಚಿದನು. ೩೦. ಬತ್ತಳಿಕೆಯಿಂದ ತೆಗೆದು ಶಾಂಭವಾಸ್ತ್ರವನ್ನು ಬಿಲ್ಲಿನ ಹೆದೆಗೆ ಹೂಡಲು ಹದಿನಾಲ್ಕು ಲೋಕವೂ ನಡುಗಿತು. ಪರ್ವತಗಳ ಸಮೂಹ ಬಿರುಕುಬಿಟ್ಟಿತು. ಏಳು ಸಮುದ್ರಗಳೂ ಉಕ್ಕಿದುವು. ಭೂಮಿ ಕುಸಿಯಿತು. ನಕ್ಷತ್ರಗಳು ಧ್ರುವನ ಬಳಿಗೆ ಓಡಿದುವು. ವಿಷ್ಣು-ಬ್ರಹ್ಮರ ಲೋಕದವರು ಶಿವಲೋಕಕ್ಕೆ ವಲಸೆಹೋದರು. ಆದಿಶೇಷ, ದಿಗ್ಗಜಗಳು, ಆದಿಕೂರ್ಮರು ಅಲ್ಲಾಡಿದರು. ಆ ಕಾಲದಲ್ಲಿ ಪ್ರಳಯವಾಯಿತೆಂದು ಬ್ರಹ್ಮನು ಚಿಂತೆಗೀಡಾದನು. ೩೧. ಕ್ರೌಂಚಪರ್ವತದ ಮರೆಯಲ್ಲಿರುವ ರಾಕ್ಷಸನ ದೇಹ ನಿನಗೆ ಗುರಿ ಎಂದು ಬಾಣಕ್ಕೆ ಅಪ್ಪಣೆ

CC-0. Jangamwadi Math Collection. Digitized by eGangotri

ಅನಿಲಪಥದಿಂದಲೈತಂದದ್ರಿವಲ್ಲಭನ
ತನುವನಿಬ್ಬಗಿಗೈದು ತಾರಕನ ದೇಹಮಂ
ಚಿನಕಡಿಯನಿರದೆ ಮಾಡಿತು ಶಾಂಭವಾಸ್ತ್ರಮದನೇನೆಂಬೆನದ್ಭುತವನು ೩೧

ತ್ರಿದಶರರಲ್ಮಳೆಗರೆದು ನೋಡಿದರ್ ಪಾಡಿದರ್
ಪದೆದು ಗಂಧರ್ವರಾನಂದದಿಂ ಛಂದದಿಂ
ಮೊರೆದುವು ಸುಮನಸರ ಭೇರಿಗಳ್ ಸೂರಿಗಳ್ ಕೈಯೆತ್ತಿ ಬಣ್ಣಿಸಿದರು
ಮುದದೆ ಸುರಕಾಂತಾಳಿ ನರ್ತಿಸಿತು ವರ್ತಿಸಿತು
ಪದಪಿನಿಂ ಜಯರವಂ ಲೋಕದೊಳ್ ನಾಕದೊಳ್
ಪದುಳಿಸಿದರಮರರ್ ಪ್ರಮೋದದಿಂ ಭೇದದಿಂದುಳಿದಸುರರಳವಳಿದರು ೩೨

ಪೊಡವಿಯೊಳ್ ದುರ್ಜನರನೊಳಕೊಂಡವರ್ಗೆ ಕೇ
ಡಡಸುವುದು ನಿಜವೆಂದು ಲೋಕದವರೆಂಬ ನಾ
ಣ್ಣುಡಿ ಪುಸಿವುದೇ ಕ್ರೌಂಚಪರ್ವತಂ ತಾರಕನನಂದು ತನ್ನಯ ಮರೆಯೊಳು
ಅಡಗಿರಿಸಿಕೊಂಡಿರ್ದಕಾರಣಂ ನಾಡೆ ತ
ನ್ನೊಡಲೊಳೇರಾದುದನಿತಲ್ಲದಾ ದಾನವಂ
ಮಡಿದು ಪೋದಂ ನಿಮಿಷಮಾತ್ರದೊಳ್ ಜಗವರಿಯೆ ರಾಮ ಕೇಳಚ್ಚರಿಯನು ೩೩.

ಮಾಡಿ ಮನಸ್ಸಿನಲ್ಲಿ ಮಂತ್ರವನ್ನು ಜಪಿಸಿ ಕಿವಿಯವರೆಗೆ ಎಳೆದುಬಿಟ್ಟನು. ಆ ಶಾಂಭವಾಸ್ತ್ರವು ಬೆಂಕಿಯ ಕಿಡಿಗಳನ್ನು ಕಾರುತ್ತ ಆಕಾಶಮಾರ್ಗದಿಂದ ಬಂದು ಕ್ರೌಂಚಪರ್ವತದ ಶರೀರವನ್ನು ಎರಡು ಭಾಗವಾಗಿ ಸೀಳಿ ತಾರಕಾಸುರನ ದೇಹವನ್ನು ಬಿಡದೆ ಸಣ್ಣ ಸಣ್ಣ ಚೂರಾಗಿ ಮಾಡಿತು. ಆ ಅದ್ಭುತವನ್ನು ಏನೆಂದು ಹೇಳಲಿ ? ೩೨. ದೇವತೆಗಳು ಹೂಮಳೆಗರೆದು ನೋಡಿದರು. ಗಂಧರ್ವರು ಆನಂದದಿಂದ ಉತ್ಸುಕರಾಗಿ ಹಾಡಿದರು. ದೇವತೆಗಳ ಭೇರಿಗಳು ಚಂದದಿಂದ ಆರ್ಭಟಿಸಿದುವು. ಋಷಿಮುನಿಗಳು ಕೈಯೆತ್ತಿ ಹೊಗಳಿದರು. ದೇವತಾಸ್ತ್ರೀಸಮೂಹ ಆನಂದದಿಂದ ನರ್ತನಮಾಡಿತು. ಲೋಕದಲ್ಲಿ ಉತ್ಸಾಹದಿಂದ ಜಯಕಾರ ತುಂಬಿತು. ಸ್ವರ್ಗದಲ್ಲಿ ಅತಿಯಾದ ಸಂತೋಷದಿಂದ ದೇವತೆಗಳು ಕ್ಷೇಮದಿಂದಿದ್ದರು. ಮೋಸದಿಂದ ಉಳಿದಿದ್ದ ರಾಕ್ಷಸರು ಶಕ್ತಿಗುಂದಿದರು. ೩೩. ಸಿದ್ಧರಾಮ, ಆಶ್ಚರ್ಯವನ್ನು ಕೇಳು, ಭೂಮಿಯಲ್ಲಿ ದುರ್ಜನರಿಗೆ ಆಶ್ರಯಕೊಟ್ಟವರಿಗೆ ಕೇಡಾಗುವುದು ನಿಜ ಎಂದು ಲೋಕದ ಜನ ಹೇಳುವ ಗಾದೆಯ ಮಾತು ಸುಳ್ಳಾಗುತ್ತದೆಯೆ ? ಕ್ರೌಂಚಪರ್ವತ ಆ ದಿನ ತಾರಕಾಸುರನನ್ನು ತನ್ನ ಮರೆಯಲ್ಲಿ ಅಡಗಿಸಿಕೊಂಡಿದ್ದ ಕಾರಣ ಅದರ ದೇಹದಲ್ಲಿ ಅತಿಯಾದ ಗಾಯವಾಯಿತು. ಅಷ್ಟೇ ಅಲ್ಲದೆ



CC-0. Jangamwadi Math Collection. Digitized by eGangotri

ರುಂಡಂಗಳಂ ಬಗಿದುನೋಡಿ ಹಯದೊಟ್ಟಿಲಿನ
ತುಂಡಂಗಳಂ ತೆಗೆದು ನೋಡಿ ನೊರೆನೆತ್ತರಿನ
ಕೊಂಡಂಗಳಂ ಮುಳುಗಿ ನೋಡಿದರ್ ಮಾಡಿದರ್ ಕ್ಲೇಶಮಂ ದಿವಿಜಭಟರು ೨೮

ಇಂತು ರಣರಂಗದೆಲ್ಲೆಡೆಯೊಳುಂ ಸಕಲ ಸುರ
ಸಂತತಿಗಳರಸುತಿರೆ ದಿಗ್ವರರ್ ನಾನಾ ದಿ
ಗಂತದೊಳ್ ನೋಡೆ ಹರಿ ಕ್ರೌಂಚಪರ್ವತದ ಮರೆಯೊಳಗಿರ್ದ ಖಳನಿರವನು
ತಾಂ ತಿಳಿದು ಬಂದು ಸುರಪಾಲಂಗೆ ಪೇಳಲ್ಕೆ
ಸಂತಸದೊಳಿಂದ್ರನೈತಂದು ತಾರಕನ ವೃ
ತ್ತಾಂತಮಂ ಗುಹನೊಡನೆ ಬಿನ್ನೈಸೆ ಶಾಂಭವಾಸ್ತ್ರಕೆ ನೀಡಿದಂ ಕೈಯನು ೨೯

ಮೂಡಿಗೆಯೊಳುಗಿದು ಶಾಂಭವಬಾಣಮಂ ಹೆದೆಗೆ
ಹೂಡಲೀರೇಳ್ ಜಗಂ ನಡುಗಿತದ್ರಿಗಳ ತತಿ
ಬೀದೆಬಿರಿದುದು ಸಪ್ತಶರನಿಧಿಗಳುಕ್ಕಿದುವು ಕುಸಿದುದಿಳೆ ಧ್ರುವನ ಪೊರೆಗೆ
ಓಡಿದುವು ತಾರೆ ಹರಿಯಜಪುರದ ಸರಕುಗಳ್
ಪೂಡಿದುವು ಶಿವಲೋಕಕಹಿಪ ಕರಿ ಕಮಠರ
ಲ್ಲಾಡಿದರಕಾಲದೊಳ್ ಪ್ರಳಯವಾಯ್ತೆಂದು ಪಂಕಜಭವಂ ಚಿಂತಿಸಿದನು ೩೦

ನಿನಗೆ ಗುರಿ ಕ್ರೌಂಚಪರ್ವತದ ಮರೆಯೊಳಗಿರ್ದ
ದನುಜನೊಡಲೆಂದು ಬಾಣಕೆ ಬೆಸಸಿ ಮಂತ್ರಮಂ
ಮನದೊಳಗೆ ಜಪಿಸಿ ಕಿವಿವರೆಗುಗಿದು ಬಿಡಲುದಿರ್ವ ಕೆಂಗಿಡಿಯ ಗಡಣದಿಂದೆ

ರಥಗಳ ಸಮೂಹವನ್ನು ಕೆದಕಿ ನೋಡುತ್ತಿದ್ದರು. ತಲೆಗಳನ್ನು ಸರಿಸಿ ನೋಡುತ್ತಿದ್ದರು. ಕುದುರೆರಾಶಿಯನ್ನು ತೆಗೆದು ನೋಡುತ್ತಿದ್ದರು. ನೊರೆಯಾದ ರಕ್ತದ ಹೊಂಡಗಳಲ್ಲಿ ಮುಳುಗಿ ನೋಡಿ (ತಾರಕಾಸುರನನ್ನು ಕಾಣದೆ) ಅತಿಯಾಗಿ ಆಯಾಸಗೊಂಡರು. ೨೮. ಈ ರೀತಿಯಾಗಿ ಎಲ್ಲ ದೇವಸಮೂಹವೂ ಯುದ್ಧರಂಗದ ಎಲ್ಲ ಕಡೆಯೂ ಹುಡುಕುತ್ತಿರಲು, ದಿಕ್ಪಾಲಕರು ನಾನಾದಿಕ್ಕುಗಳಲ್ಲಿ ನೋಡಲು ವಿಷ್ಣುವು ಕ್ರೌಂಚಪರ್ವತದ ಮರೆಯಲ್ಲಿ ಬಚ್ಚಿಟ್ಟುಕೊಂಡಿದ್ದ ರಾಕ್ಷಸನನ್ನು ನೋಡಿ ಬಂದು ದೇವೇಂದ್ರನಿಗೆ ಹೇಳಿದನು. ಅವನು ಸಂತೋಷದಿಂದ ಗುಹನ ಬಳಿಗೆ ಬಂದು ತಾರಕಾಸುರನ ಸಮಾಚಾರವನ್ನು ತಿಳಿಸಿದನು. ಷಣ್ಮುಖನು ಶಾಂಭವಾಸ್ತ್ರಕ್ಕೆ ಕೈಚಾಚಿದನು. ೩೦. ಬತ್ತಳಿಕೆಯಿಂದ ತೆಗೆದು ಶಾಂಭವಾಸ್ತ್ರವನ್ನು ಬಿಲ್ಲಿನ ಹೆದೆಗೆ ಹೂಡಲು ಹದಿನಾಲ್ಕು ಲೋಕವೂ ನಡುಗಿತು. ಪರ್ವತಗಳ ಸಮೂಹ ಬಿರುಕುಬಿಟ್ಟಿತು. ಏಳು ಸಮುದ್ರಗಳೂ ಉಕ್ಕಿದುವು. ಭೂಮಿ ಕುಸಿಯಿತು. ನಕ್ಷತ್ರಗಳು ಧ್ರುವನ ಬಳಿಗೆ ಓಡಿದುವು. ವಿಷ್ಣು-ಬ್ರಹ್ಮರ ಲೋಕದವರು ಶಿವಲೋಕಕ್ಕೆ ವಲಸೆಹೋದರು. ಆದಿಶೇಷ, ದಿಗ್ಗಜಗಳು, ಆದಿಕೂರ್ಮರು ಅಲ್ಲಾಡಿದರು. ಆ ಕಾಲದಲ್ಲಿ ಪ್ರಳಯವಾಯಿತೆಂದು ಬ್ರಹ್ಮನು ಚಿಂತೆಗೀಡಾದನು. ೩೧. ಕ್ರೌಂಚಪರ್ವತದ ಮರೆಯಲ್ಲಿರುವ ರಾಕ್ಷಸನ ದೇಹ ನಿನಗೆ ಗುರಿ ಎಂದು ಬಾಣಕ್ಕೆ ಅಪ್ಪಣೆ

CC-0. Jangamwadi Math Collection. Digitized by eGangotri

ಅನಿಲಪಥದಿಂದಲೈತಂದದ್ರಿವಲ್ಲಭನ
ತನುವನಿಬ್ಬಗಿಗೈದು ತಾರಕನ ದೇಹಮಂ
ಚಿನಕಡಿಯನಿರದೆ ಮಾಡಿತು ಶಾಂಭವಾಸ್ತ್ರಮದನೇನೆಂಬೆನದ್ಭುತವನು ೩೧

ತ್ರಿದಶರರಲ್ಮಳೆಗರೆದು ನೋಡಿದರ್ ಪಾಡಿದರ್
ಪದೆದು ಗಂಧರ್ವರಾನಂದದಿಂ ಛಂದದಿಂ
ದೊದರಿದುವು ಸುಮನಸರ ಭೇರಿಗಳ್ ಸೂರಿಗಳ್ ಕೈಯೆತ್ತಿ ಬಣ್ಣಿಸಿದರು
ಮುದದೆ ಸುರಕಾಂತಾಳಿ ನರ್ತಿಸಿತು ವರ್ತಿಸಿತು
ಪದಪಿನಿಂ ಜಯರವಂ ಲೋಕದೊಳ್ ನಾಕದೊಳ್
ಪದುಳಿಸಿದರಮರರ್ ಪ್ರಮೋದದಿಂ ಛೇದದಿಂದುಳಿದಸುರರಳವಳಿದರು ೩೨

ಪೊಡವಿಯೊಳ್ ದುರ್ಜನರನೊಳಕೊಂಡವರ್ಗೆ ಕೇ
ಡಡಸುವುದು ನಿಜವೆಂದು ಲೋಕದವರೆಂಬ ನಾ
ಣ್ಣುಡಿ ಪುಸಿವುದೇ ಕ್ರೌಂಚಪರ್ವತಂ ತಾರಕನನಂದು ತನ್ನಯ ಮರೆಯೊಳು
ಅಡಗಿರಿಸಿಕೊಂಡಿರ್ದಕಾರಣಂ ನಾಡೆ ತ
ನ್ನೊಡಲೊಳೇರಾದುದನಿತಲ್ಲದಾ ದಾನವಂ
ಮಡಿದು ಪೋದಂ ನಿಮಿಷಮಾತ್ರದೊಳ್ ಜಗವರಿಯೆ ರಾಮ ಕೇಳಚ್ಚರಿಯನು ೩೩

ಮಾಡಿ ಮನಸ್ಸಿನಲ್ಲಿ ಮಂತ್ರವನ್ನು ಜಪಿಸಿ ಕಿವಿಯವರೆಗೆ ಎಳೆದುಬಿಟ್ಟನು. ಆ ಶಾಂಭವಾಸ್ತ್ರವು ಬೆಂಕಿಯ ಕಿಡಿಗಳನ್ನು ಕಾರುತ್ತ ಆಕಾಶಮಾರ್ಗದಿಂದ ಬಂದು ಕ್ರೌಂಚಪರ್ವತದ ಶರೀರವನ್ನು ಎರಡು ಭಾಗವಾಗಿ ಸೀಳಿ ತಾರಕಾಸುರನ ದೇಹವನ್ನು ಬಿಡದೆ ಸಣ್ಣ ಸಣ್ಣ ಚೂರಾಗಿ ಮಾಡಿತು. ಆ ಅದ್ಭುತವನ್ನು ಏನೆಂದು ಹೇಳಲಿ ? ೩೨. ದೇವತೆಗಳು ಹೂಮಳೆಗರೆದು ನೋಡಿದರು. ಗಂಧರ್ವರು ಆನಂದದಿಂದ ಉತ್ಸುಕರಾಗಿ ಹಾಡಿದರು. ದೇವತೆಗಳ ಭೇರಿಗಳು ಚಂದದಿಂದ ಆರ್ಭಟಿಸಿದುವು. ಋಷಿಮುನಿಗಳು ಕೈಯೆತ್ತಿ ಹೊಗಳಿದರು. ದೇವತಾಸ್ತ್ರೀಸಮೂಹ ಆನಂದದಿಂದ ನರ್ತನಮಾಡಿತು. ಲೋಕದಲ್ಲಿ ಉತ್ಸಾಹದಿಂದ ಜಯಕಾರ ತುಂಬಿತು. ಸ್ವರ್ಗದಲ್ಲಿ ಅತಿಯಾದ ಸಂತೋಷದಿಂದ ದೇವತೆಗಳು ಕ್ಷೇಮದಿಂದಿದ್ದರು. ಮೋಸದಿಂದ ಉಳಿದಿದ್ದ ರಾಕ್ಷಸರು ಶಕ್ತಿಗುಂದಿದರು. ೩೩. ಸಿದ್ಧರಾಮ, ಆಶ್ಚರ್ಯವನ್ನು ಕೇಳು, ಭೂಮಿಯಲ್ಲಿ ದುರ್ಜನರಿಗೆ ಆಶ್ರಯಕೊಟ್ಟವರಿಗೆ ಕೇಡಾಗುವುದು ನಿಜ ಎಂದು ಲೋಕದ ಜನ ಹೇಳುವ ಗಾದೆಯ ಮಾತು ಸುಳ್ಳಾಗುತ್ತದೆಯೆ ? ಕ್ರೌಂಚಪರ್ವತ ಆ ದಿನ ತಾರಕಾಸುರನನ್ನು ತನ್ನ ಮರೆಯಲ್ಲಿ ಅಡಗಿಸಿಕೊಂಡಿದ್ದ ಕಾರಣ ಅದರ ದೇಹದಲ್ಲಿ ಅತಿಯಾದ ಗಾಯವಾಯಿತು. ಅಷ್ಟೇ ಅಲ್ಲದೆ



CC-0. Jangamwadi Math Collection. Digitized by eGangotri

ತೀರಿತ್ತು ತಿಪ್ಪ ವಿಪದ ವಿಲ್ಲಗವಮರರ್ಗಮರ
ನಾರಿಯರ್ಗೆಗೆತನಂ ನೆಲೆಯಾಯ್ತು ನಾಕದೊಳ್
ಶೌರಿ ಪದ್ಮಜಸುರೇಂದ್ರಾದಿ ದಿಗ್ವರರ ಪುರಮವರವರ ವಶವಾದುವು
ದೂರವಾದುದು ದುರಾಚಾರವಾಗ್ನೇಯಕಂ
ಸೇರತೊಡಗಿದುದವನಿಯಮರರಿಂದಮರರ್ಗ
ವಾರೋಗಿಸಿತ್ತು ಪಾಲೆರೆದಖಿಳ ಭುವನಜನಮುಸುರೇಂದ್ರನಸ್ತಮಿಸಲು ೩೪

ತಾರಕನ ಸುತರಾದಿ ಮಿಕ್ಕ ರಕ್ಕಸರೋಡಿ
ಸೇರಿದರ್ ಗಿರಿಗುಹೆಗಳಂ ಬಳಿಕ್ಕಿತ್ತಲ್ ಕು
ಮಾರಕಂ ಹರಿಯಜೇಂದ್ರಾದ್ಯಮರತತಿವೆರಸಿ ಕೈಲಾಸಪುರವನ್ನೈದಿ
ಮಾರಹರನಡಿಗೆರಗೆ ಕುವರನಂ ತೆಗೆದಪ್ಪಿ
ವಾರಿಜಾಂಬಕಂ ಕಮಲಭವಮುಖ್ಯ ಸಕಲವೃಂ
ದಾರಕರನವರವರ ಪುರಕೆ ಬೀಳ್ಕೊಟ್ಟಾ ವಿರೂಪಾಕ್ಷನೊಪ್ಪಿರ್ದನು ೩೫

ಇದು ಸಕಲ ವೀರಮಾಹೇಶ್ವರರ ಸದ್ವಿಮಲ
ಹೃದಯಾಬ್ಜಮಿತ್ರನುರುಷಟ್ಸ್ಥಲಬ್ರಹ್ಮವೆಂ
ಬುದಧಿವರ್ಧನ ಪೂರ್ಣಸೋಮನಾ ಸಿದ್ಧವೀರೇಶ್ವರನ ಕರಜಾತನು

ನಿಮಿಷಮಾತ್ರದಲ್ಲಿ ಪ್ರಪಂಚಕ್ಕೆಲ್ಲ ತಿಳಿಯುವಂತೆ ರಾಕ್ಷಸನೂ ಸಾವಿಗೀಡಾದನು. ೩೪. ತಾರಕಾಸುರನು ಸಾಯಲು, ದೇವತೆಗಳಿಗೆ ಬಂದಿದ್ದ ತೊಂದರೆಯಿಂದ ನಿವಾರಣೆ ಯಾಯಿತು. ದೇವಸ್ತ್ರೀಯರಿಗೆ ಸ್ವರ್ಗದಲ್ಲಿ ಸಂಸಾರ ಸ್ಥಿರವಾಯಿತು. ವಿಷ್ಣು-ಬ್ರಹ್ಮ-ಇಂದ್ರ ಮೊದಲಾದ ದಿಕ್ಪಾಲಕರ ಪಟ್ಟಣಗಳು ಅವರವರ ವಶಕ್ಕೆ ಬಂದುವು, ದುರಾಚಾರ ದೂರವಾಯಿತು. ಬ್ರಾಹ್ಮಣರಿಂದ ದೇವತೆಗಳಿಗೆ ಹವನ ಹೋಮಗಳು ದೊರೆಯ ತೊಡಗಿದವು. ಎಲ್ಲ ಪ್ರಪಂಚದ ಜನರೂ ಹಾಲೆರೆದು ಊಟ ಮಾಡಿದರು. ೩೫. ತಾರಕನ ಮಕ್ಕಳಾದಿಯಾಗಿ ಉಳಿದಿದ್ದ ರಾಕ್ಷಸರು ಓಡಿ ಪರ್ವತದ ಗುಹೆಗಳನ್ನು ಹೊಕ್ಕರು. ನಂತರ ಇತ್ತಕಡೆ ಗುಹನು ವಿಷ್ಣು-ಬ್ರಹ್ಮ-ಇಂದ್ರ ಮೊದಲಾದ ದೇವ ಸಮೂಹದೊಡಗೂಡಿ ಕೈಲಾಸಕ್ಕೆ ಹಿಂದಿರುಗಿ ಶಿವನ ಪಾದಗಳಿಗೆ ನಮಸ್ಕರಿಸಲು ಅವನು ಮಗನನ್ನು ಹಿಡಿದೆತ್ತಿ ಅಪ್ಪಿಕೊಂಡು ವಿಷ್ಣು-ಬ್ರಹ್ಮ-ಮುಖ್ಯರಾದ ಎಲ್ಲ ದೇವತಾ ಸಮೂಹವನ್ನೂ ಅವರವರ ಪಟ್ಟಣಕ್ಕೆ ಕಳಿಸಿಕೊಟ್ಟು ಇರುತ್ತಿದ್ದನು. ೩೬. ಎಲ್ಲ ವೀರ ಮಾಹೇಶ್ವರರ ನಿರ್ಮಲ ಹೃದಯಕಮಲಗಳಿಗೆ ಮಿತ್ರನಾದ ಸೂರ್ಯನಂತಹವನು ಶ್ರೇಷ್ಠವಾದ ಷಟ್ಸ್ಥಲಬ್ರಹ್ಮವೆಂಬ ಸಮುದ್ರವನ್ನು ಉಬ್ಬುವಂತೆ ಮಾಡುವ ಚಂದ್ರ

CC-0. Jangamwadi Math Collection. Digitized by eGangotri

ಸದಮಲ ಜ್ಞಾನಿ ಸಕಲಾಗಮಪುರಾಣಕೋ
ವಿದನೆನಿಪ ವಿರೂಪಾಕ್ಷಪಂಡಿತಾರಾಧ್ಯರತಿ
ಮುದದೆ ಪೇಳ್ದೀ ಚೆನ್ನಬಸವಪೌರಾಣಕಥೆಯೊಳಗೆ ಮೂರನೆಯ ಕಾಂಡಂ ೩೬

ಇಂತೆಸೆವ ಚೆನ್ನಬಸವೇಶನ ಪುರಾಣಮಂ
ಸಂತಸದೆ ಬರೆದವರ್ಗೋದಿದರ್ಗರ್ಥಮಾ
ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ
ಸಂತತಂ ಸಕಲಸುಖಮಂ ಸಕಲಭೋಗಮನ
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದೆ ೩೭

## ನಲವತ್ತನೆಯ ಸಂಧಿ ಸಂಪೂರ್ಣ

## ತೃತೀಯ ಕಾಂಡ ಸಮಾಪ್ತ

ಸಂಘವನಾದ ಗುರುಸಿದ್ಧ ವೀರೇಶ್ವರನ ಶಿಷ್ಯನಾದ ವಿರೂಪಾಕ್ಷಪಂಡಿತನು ನಿರ್ಮಲಜ್ಞಾನಿಯಾದ, ಎಲ್ಲ ಆಗಮ ಪುರಾಣಗಳಲ್ಲಿ ಕೋವಿದನಾದ ವಿರೂಪಾಕ್ಷ ಪಂಡಿತನು ಅತಿಪ್ರೀತಿಯಿಂದ ಬರೆದ ಚೆನ್ನಬಸವಪುರಾಣವೆಂಬ ಉತ್ತಮವಾದ ಕಥೆಯಲ್ಲಿ ಇದು ಮೂರನೆಯ ಕಾಂಡವು. ೩೭. ಈ ರೀತಿಯಲ್ಲಿ ಶ್ರೇಷ್ಠವಾದ ಚೆನ್ನಬಸವ ಪುರಾಣವನ್ನು ಸಂತೋಷದಿಂದ ಪ್ರತಿಮಾಡಿದವರಿಗೆ, ಓದಿದವರಿಗೆ, ಅರ್ಥವನ್ನು ಮೊದಲಿನಿಂದ ಕೊನೆಯವರೆವಿಗೂ ಹೇಳಿದವರಿಗೆ, ವಾಚನ ಮಾಡಿದವರಿಗೆ, ಭಕ್ತಿಯಿಂದ ಕೇಳಿದವರಿಗೆ, ಪರಮೇಶ್ವರನ ಅಪರಾವತಾರನಾದ ಚೆನ್ನಬಸವೇಶ್ವರನು ಪ್ರೀತಿಯಿಂದ ಯಾವಾಗಲೂ ಎಲ್ಲ ಸುಖಗಳನ್ನೂ ಎಲ್ಲ ಭೋಗಗಳನ್ನೂ ಅನಂತ ಸೌಭಾಗ್ಯವನ್ನೂ ಕೊಟ್ಟು ಕಾಪಾಡುವನು.

ನಲವತ್ತನೆಯ ಸಂಧಿ ಮುಗಿಯಿತು.

## ಮೂರನೆಯ ಕಾಂಡ ಸಮಾಪ್ತ

CC-0. Jangamwadi Math Collection. Digitized by eGangotri

# ಶಬ್ದ ಕೋಶ

ಅ

ಅರ್ಕ–ಸೂರ್ಯ

ಅಗಜೆ–ಪಾರ್ವತಿ, ಗಿರಿಜೆ

ಅಘಹರ–ಈಶ್ವರ

ಅಗಳು ಕಂದಕ

ಅಗ್ಗಳಿಕೆ–ದೊಡ್ಡಸ್ತಿಕೆ

ಅಘ–ಪಾಪ

ಅರ್ಘ್ಯಪಾದ್ಯ–ಕೈಕಾಲು ತೊಳೆಯಲು ಕೊಡುವ ನೀರು

ಅಚ್ಚರೆ–ಅಪ್ಸರೆ

ಅಚ್ಚಿ–ಅಕ್ಷಿ, ಕಣ್ಣು

ಅಜ–ಹೋತ ; ಬ್ರಹ್ಮ

ಅಜಾಂಡ-ಬ್ರಹ್ಮಾಂಡ

ಅಜಾತ-ಹುಟ್ಟಿಲ್ಲದವನು

ಅಜಿನ–ಚರ್ಮ

ಅಟ್ಟಳಿಗೆ–ಪೀಡೆ

ಅಟ್ಟಳೆ–ಗೋಪುರ

ಅಟ್ಟೆ–ರುಂಡವಿಲ್ಲದ ದೇಹ

ಅಡಕಿಲ್–ಒಂದರಮೇಲೊಂದು ಪೇರಿಸಿದ್ದು

ಅಣಲ್–ದವಡೆ

ಅರ್ಣವ–ಸಮುದ್ರ

ಅಣೆಯರ–ಚೆನ್ನಾಗಿ

ಆಣುಗಿ-ಪ್ರೀತಿಯವಳು ; ಮಗಳು

ಅತಿಸಂಚಯ–ರಸಭರಿತ

ಅದಿತಿನಂದನ-ದೇವೇಂದ್ರ

ಅನಡ್ವಾಹ-ಎತ್ತು, ಹೋರಿ

ಅನಿಮಿಷಾಪಗ ದೇವಗಂಗೆ

ಅನಿಮೇಷ–ದೇವತೆ, ಮೀನು

ಅಪನೋದ–ಹೋಗಲಾಡಿಸುವುದು

ಅಪರಾಂಗನೆ–ಸಂಧ್ಯಾಂಗನೆ, ಸಂಜೆ

ಅಬ್ಜ–ಕಮಲ ; ಚಂದ್ರ

ಅಬ್ಜಸಖಿಸಂಭವ–ಸೂರ್ಯನ ಮಗ ಯಮ

ಅಬ್ಜಾರಿಚೂಡ-ಚಂದ್ರಶೇಖರ

ಅಬ್ಜಿನಿ–ಹೂವು

ಅಭವ–ಶಿವ

ಅಭವಮಿತ್ರ-ಕುಬೇರ

ಅಭ್ರ–ಮೋಡ

ಅರ್ಭಕ–ಮಗು

ಅಮರ್ದು-ಅಮೃತ

ಅಮೃತಾಂಗನೆ-ಗಂಗೆ

ಅರಲ್–ಹೂವು

ಅರಹು–ವಿಸ್ತಾರ

ಅರಿಷ್ಟ–ಅನಿಷ್ಟ

ಅರುಜಾಂಗ–ರೋಗವಿಲ್ಲದವ

ಅರುಣ–ಕೆಂಪು ; ಸೂರ್ಯ

ಅರೆ–ನಗಾರಿ ; ಬಂಡೆ ; ನಾಶಮಾಡು

ಅರೆವೆರಸಿ-ದೂರಮಾಡಿ

ಅಲರುಣಿ–ದುಂಬಿ

ಅಲರ್ಗಣೆ–ಹೂಬಾಣ

ಅವಗಡಿಸು–ಹುರಿದುಂಬು

ಅಶನ–ಊಟ

ಅಷ್ಟಮೂರ್ತಿ–ಈಶ್ವರ

ಅಷ್ಟಾಪದ–ಬಂಗಾರ

ಅಸತಿ-ಕೆಟ್ಟಹೆಂಗಸು

ಅಸದಳಪೆರ್ಮೆ–ಅಸಾಧ್ಯವಾದ ಸಾಮರ್ಥ್ಯ

ಅಸಮಾಸ್ತ್ರ–ಮನ್ಮಥ

ಅಸಿಧಾರೆ-ಕತ್ತಿಯ ಅಲಗು

ಅಸಿಧೇನು–ಕತ್ತಿ

CC-0. Jangamwadi Math Collection. Digitized by eGangotri

ಅಸುಗೆ–ಅಶೋಕ
ಅಳಕ–ಮುಂಗುರುಳು
ಅಳರ್ವ–ಮುಂದೆ ಹೋಗುವ
ಅಳಲು–ವ್ಯಥೆ
ಅಳವಳಿ–ಬಲಗುಂದು
ಅಳವಿಗೆ–ದುಂಬಿ
ಅಳಿ–ಸಾಯು ; ಕೆಟ್ಟ ; ದುಂಬಿ
ಅಳಿಜಸ–ಅಪಕೀರ್ತಿ
ಅಳುಪು–ಅನುರಾಗ
ಅಳ್ಕರಿ–ಭಯಹುಟ್ಟಿಸು
ಅಳೆ–ಮಜ್ಜಿಗೆ
ಅಳ್ತಿ–ಆಸೆ
ಅಂಗಜಾರಿ–ಶಿವ
ಅಂಗುಲಿ–ಹೆಬ್ಬೆರಳು
ಅಂಘ್ರಿ–ಪಾದ
ಅಂಚಲ–ಸೆರಗು, ಅಂಚು
ಅಂಚಿತ–ಕೂಡಿದ
ಅಂಡಲೆ–ಪೀಡಿಸು
ಅಂತರ–ಒಳಗೆ
ಅಂತರಿಸದೆ–ತಡಮಾಡದೆ
ಅಂದುಗೆ–ಕಾಲಂದುಗೆ
ಅಂಬರ–ಬಟ್ಟೆ ; ಆಕಾಶ
ಅಂಬುಚರ–ಜಲಚರ
ಅಂಭೋರುಹಾಸನ–ಬ್ರಹ್ಮ

ಆ

ಆಕೆವಾಳ–ಶೂರ
ಆಖಂಡಲ–ದೇವೇಂದ್ರ
ಆಣೆ–ಆಜ್ಞೆ
ಆತಪತ್ರ–ಬಿಳಿಕೊಡೆ
ಆನಲು–ತಡೆಯಲು
ಆಮಳಕ–ನೆಲ್ಲಿಕಾಯಿ
ಆಮ್ನಾಯ–ವೇದ
ಆಯತ–ವಿಸ್ತೃತ
ಆಯತಿ–ವಿಸ್ತಾರ
ಆಯತಿಕೆ–ವೈಭವ
ಆರಡಿ–ದುಂಬಿ
ಆರಡಿವಾತು–ಚಾಡಿಮಾತು ; ದುಂಬಿಯೆಂಬ ನುಡಿ
ಆರಾಧ್ಯ–ಪೂಜಿಸಲ್ಪಡುವ
ಆರೈದು–ವಿಚಾರಿಸಿ
ಆಲಿಬರಲು–ಆಲಿಕಲ್ಲು
ಆಶಾ–ದಿಕ್ಕು, ಆಸೆ
ಆಶ್ಲೇಷೆ–ಆಲಿಂಗನ ; ಒಂದು ನಕ್ಷತ್ರ
ಆಸರು–ಆಯಾಸ ; ಬಾಯಾರಿಕೆ
ಆಳ್ದ–ಅಧಿಪತಿ
ಆಳಿ–ದಾಸಿ
ಆಳೆಯರ–ಸ್ನೇಹಿತೆಯರ
ಆಳ್ವೇರಿ–ಕೋಟೆಯಗೋಡೆ

ಇ

ಇಕ್ಕೆಕ್ಕೆ–ಒತ್ತೊತ್ತಾಗಿ
ಇಕ್ಕೆ–ಮನೆ
ಇಟ್ಟಣಿಸು–ಒಟ್ಟುಮಾಡು, ಗುಂಪಾಗು
ಇನಸುತ–ಯಮ
ಇರೆ–ಇಳೆ, ಭೂಮಿ
ಇಸು–ಬಾಣಪ್ರಯೋಗಮಾಡು
ಇಳೆಯರಸಿ–ರಾಜ್ಯಲಕ್ಷ್ಮಿ
ಇಂದಿರನದೆಸೆ–ಪೂರ್ವದಿಕ್ಕು
ಇಂದೂಪಲ–ಚಂದ್ರಕಾಂತಶಿಲೆ

ಈ

ಈಕ್ಷಣರಜ್ಜು–ಕಣ್ನೋಟವೆಂಬ ಹಗ್ಗ

ಉ

ಉರ್ಚು–ಸೆಳೆ, ಚುಚ್ಚು
ಉಡಿ–ಸೊಂಟದ ಮೇಲ್ಭಾಗ, ಕತ್ತರಿಸು; ಮುರಿ;

CC-0. Jangamwadi Math Collection. Digitized by eGangotri

ಜಜ್ಜು ; ಮಡಿಲು
ಉಡುಪ–ಚಂದ್ರ
ಉತ್ಕಳಿಕೆ–ಹೂವು, ಕಮಂಡಲು, ಅಲೆ
ಉತ್ತಾರಕ–ಹಡಗು
ಉದ್ದಂಡ–ವಿಶಾಲ ; ಉದ್ಧತ
ಉಪೇಂದ್ರ–ವಿಷ್ಣು
ಉಬ್ಬಸ-ತೊಂದರೆ
ಉಬ್ಬೇರು–ಹುರುಪುಗೊಳ್ಳು
ಉರವಣೆ–ಪ್ರಭಾವ
ಉರು–ಹೆಚ್ಚಾದ
ಉರುಗಲ್–ದೊಡ್ಡ ಬಂಡೆ
ಉರುಗಿಸು–ವಕ್ರಮಾಡು
ಉರುಜವಣೆ–ಲಾಮಂಚ
ಉರುಬು–ಹಲ್ಲೆಮಾಡು, ಉಬ್ಬು
ಉರೆ–ಹೆಚ್ಚಾಗಿ, ಚೆನ್ನಾಗಿ
ಉಳುಹು–ಉದ್ಧಾರಮಾಡು
ಉಂಗುರುಡಿಕೆ–ಉಡಿಕೆ ಶಾಸ್ತ್ರದಲ್ಲಿ ಉಂಗುರ ವೀಳೆಯ, ವಸ್ತ್ರಗಳನ್ನು ಕೊಡುವುದು

ಊ

ಊರು–ತೊಡೆ
ಊಳ್ವ–ಬೊಗಳುವ

ಋ

ಋಕ್ಷಪತಿ–ಚಂದ್ರ

ಎ

ಎಕ್ಕಸರ–ಏಕಾವಳಿಸರ
ಎಕ್ಕೆಕ್ಕೆ–ಸಾಲು ಸಾಲು
ಎಗ್ಗ–ದಡ್ಡ
ಎಚ್ಚು–ಬಿಡು
ಎರೆಯುರ ನಾಯಕರ
ಎರೆವರು–ದಾಸಿಗಳು
ಎಸಕ–ಸಾಮರ್ಥ್ಯ, ಸರಿಯಾದ ರೀತಿ
ಎಳೆವರೆ–ಅರ್ಧಚಂದ್ರ
ಎಳೆಲ್–ಜೋತಾಡು

ಏ

ಏರ್–ಗಾಯ

ಒ

ಒಕ್ಕಲಿಕ್ಕು–ನಾಶಮಾಡು
ಒಗ್ಗುಡಿಸು–ಒರೆಯಾಗು
ಒಚ್ಚತ-ಸಂತೋಷ ; ಚೆನ್ನಾಗಿ
ಒಟ್ಟಿಲ್–ಜೊಗಸೆ
ಒಡ್ಡಣೆ–ರಾಶಿ
ಒಡ್ಡವಣೆ–ಗುಂಪು
ಒಸಗೆ–ಶುಭಸಮಾಚಾರ, ಉತ್ಸಾಹ
ಒಸೆದ–ಪ್ರೀತಿಸಿ

ಓ

ಓತಪ್ಪು–ಪ್ರೀತಿಯಿಂದ ಅಪ್ಪಿಕೊ
ಓಪಳು–ಪ್ರಿಯಳು
ಓವದೆ–ಮುದ್ದಿಸದೆ
ಓಷಧಿ ಗಿಡಮೂಲಿಕೆ
ಓಸರಿಸು–ಹಿಂದೆ ಮುಂದೆ ನೋಡು
ಓಳಿ–ಪಂಕ್ತಿ

ಕ

ಕಕ್ಕಸ-ಗಟ್ಟಿ, ಒರಟು, ಕ್ರೂರ
ಕಕ್ಷ–ಕಂಕುಳು
ಕಚ–ತಲೆಕೂದಲು
ಕಚ್ಛಪ–ಆಮೆ
ಕಚ್ಚುರಿ–ಬಜ್ಜಿ (ತಿನಿಸು)
ಕಜ್ಜಳ–ಕಾಡಿಗೆ
ಕಟಕ-ಸೈನ್ಯ
ಕಟಕಿ–ಅಣಕ
ಕಟ್ಟೆಸಕ–ಅತಿ ಪರಾಕ್ರಮ
ಕಡವ-ಈಚಲು ಮರ

CC-0. Jangamwadi Math Collection. Digitized by eGangotri

ಕಡವರ-ಬಂಗಾರ
ಕಡಿಯಣ–ಕಡಿವಾಣ
ಕಡುಪು-ಅದಟು, ಸಾಮರ್ಥ್ಯ
ಕಡಂಬ–ಈಚಲು ಮರ
ಕಣ್ಗೊನೆ-ಕಡೆಗಣ್ಣು
ಕದಕ್ಕದಿಸು–ಮೇಲೆ ಕೆಳಗೆ ಆಡಿಸುವುದು
ಕರ್ದಮ–ಪಾಪಪುರುಷ
ಕರ್ದುಂಕು-ಕಚ್ಚು, ಕುಕ್ಕು
ಕನಕಾಂಬಕ–ಹಿರಣ್ಯಾಕ್ಷ
ಕನಲ್ಕೆ-ಕೋಪ
ಕರ್ಪರ–ತಲೆಬುರುಡೆ, ಮಡಿಕೆ
ಕಬರಿ-ತುರುಬು
ಕಮಠ-ಆಮೆ
ಕಮಲಸಖಿಪುತ್ರ–ಸೂರ್ಯನ ಮಗ ಯಮ
ಕರ–ಸೊಂಡಿಲು ; ಕೈ
ಕರಟ–ಕಾಗೆ
ಕರಡೆ–ಕಟ್ಟಿಗೆಯಿಂದ ಬಾರಿಸುವ ಒಂದು ರೀತಿಯ ಮೃದಂಗ
ಕರಣಿ–ಹೆಣ್ಣಾನೆ
ಕರಣಿಕೆ–ಕಿವಿಯ ಆಭರಣ
ಕರಹ–ಕೂಗು ; ಆಮಂತ್ರಣ
ಕರು–ಅಚ್ಚೊತ್ತು
ಕರುಪಿಟ್ಟ–ಎರಕಹೊಯ್ದ
ಕರೋಟಿ–ತಲೆಬುರುಡೆ
ಕಲಧೌತ–ಬೆಳ್ಳಿ
ಕವೆಡು–ಮೋಸ
ಕವಳ–ತಾಂಬೂಲ ; ಗಂಡೂಷ ; ತುತ್ತು
ಕಸವರ–ಚಿನ್ನ
ಕಳಕಳಿ–ಚಿಂತೆ
ಕಳಿಕೆ–ಮೊಗ್ಗು
ಕಳಂಬು–ಬಾಣ
ಕಳಲ್ವ–ಸಡಿಲಮಾಡುವ
ಕಳಹಂಸಿ–ರಾಜಹಂಸ
ಕಾರ್ತಸ್ವರ–ಬಂಗಾರ
ಕಾದಂಬರಿ–ಹೆಂಡ
ಕಾದಂಬಿನಿ–ಮೋಡ
ಕಾಯಮಾನ–ಮಂಟಪ
ಕಾಯಿ–ಕೋಪಗೊಳ್ಳು
ಕಾರಣೆ–ಗೋಡೆಯ ಕೆಳಭಾಗವನ್ನು ಅಲಂಕರಿಸುವ ಬಣ್ಣದಪಟ್ಟಿ
ಕಾಲ–ಕಪ್ಪು ; ಯಮ ; ವಿಷ
ಕಾಲಹರ–ಶಿವ
ಕಾವಗಲಹ–ಮನ್ಮಥನ ಯುದ್ಧ
ಕಾವರ–ಅವಕಾಶ
ಕಾಷಾಂಬರ–ಕೆಂಪು ಬಟ್ಟೆ
ಕಾಸು–ಕಾಚು
ಕಾಳಾಂಜಿ–ರಸಪಾತ್ರೆ, ಗುಲಾಬ್‌ದಾನಿ
ಕಾಳಿಕೆ–ಕಪ್ಪು
ಕಾಳಿಮಲೇಖೆ–ಕಪ್ಪುಗೆರೆ
ಕಿಗ್ಗಡೆ–ಸಣ್ಣದಾಗಿ ತಾಗು
ಕಿಟಿ–ಹಂದಿ
ಕಿಸಲಯ–ಚಿಗುರು
ಕಿಸುರು–ಅಸಹ್ಯಭಾವ
ಕಿರುಬ–ಹಸುಗೂಸು
ಕೀನಾಶ–ಯಮ, ಮೃತ್ಯು
ಕೀರ–ಗಿಳಿ
ಕೀರು–ಸಿಕ್ಕ ಸಿಕ್ಕಕಡೆ ನುಗ್ಗು
ಕೀಲಾಲ–ನೀರು ; ರಕ್ತ
ಕುಚಿತ–ಕುತ್ಸಿತ ; ಮೋಸ
ಕುಜ–ಮರ ; ಮಂಗಳಗ್ರಹ
ಕುಟಿಲಗಮನ–ಕದ್ದು ಬೇರೆಯವರೊಂದಿಗೆ ಸುಖಿಸುವುದು

CC-0. Jangamwadi Math Collection. Digitized by eGangotri

ಕುಡಿ-ಮೊಳಕೆ, ಮದ್ಯಪಾನ ಮಾಡು
ಕುರುಚು-ಕುಳಿತುಕೊಳ್ಳುವ ಮಂಟಪ, ಬುರುಜು
ಕುರವಕ-ಗೋರಂಟಿ
ಕುರಿದರಿ-ಕೊಲೆಮಾಡು
ಕುಲಗೋತ್ರ-ಕುಲಪರ್ವತ
ಕುಲಾಲಚಕ್ರ-ಕುಂಬಾರನ ಚಕ್ರ
ಕುಶೇಶಯ-ಕಮಲ
ಕೂಚು-ಸೈನ್ಯವನ್ನು ಸಿದ್ಧಪಡಿಸಿ ಹೊರಡಿಸು
ಕೇಸರ-ಕಡೆಗಣ್ಣು
ಕೇಣಿಗಾರ-ವ್ಯಾಪಾರಿ
ಕ್ಷ್ವೇಳ-ವಿಷ
ಕ್ರಮುಕ-ಅಡಕೆ
ಕೈದು-ಆಯುಧ
ಕೈದೋರ್ಪು-ಕೈಚಳಕ
ಕೈಯೆಡೆಯ-ಆಶ್ರಿತರಾದ
ಕೈರವ-ನೈದಿಲೆ ; ಕಮಲ
ಕೃಪಾಣ-ಕತ್ತಿ
ಕೊಟಾರ-ಉಗ್ರಾಣ
ಕೊತ್ತಡಸು-ಮೇಲೆಬಿದ್ದು ಜಜ್ಜು
ಕೊರಚಾಡು-ಚುಚ್ಚುಮಾತಾಡು, ನಿಂದಿಸು
ಕೊಲ್ಲಟಿಕೆವೆಣ್ಣು-ದೊಂಬರಾಟದ ಹೆಣ್ಣು
ಕೊಳುಗುಳ-ಯುದ್ಧ
ಕೋಕ-ಚಕ್ರವಾಕ
ಕೋಟೀರ-ಕಿರೀಟ
ಕೋಡಿ-ಕೊರತೆ
ಕೋಡು-ಹಿಂಜರಿ ; ಹೆದರು
ಕೋಣ-ಸಗಾರಿಬಾರಿಸುವ ಕೋಲು
ಕ್ರೋಡ-ಹಂದಿ
ಕೋಕ-ಚಕ್ರವಾಕ
ಕೋಲುಚಾರಿ-ಕೋಲುಕಾರ
ಕೋವಿ-ಬಿಸುಟು

ಕೋಹು-ಸಾಲು
ಕೋಳಹಿಡಿ-ಸೆರೆಹಿಡಿ
ಕೋಳುಗೊಳ್-ಸುಲಿಗೆಮಾಡು
ಕೌಶಿಕ ಇಂದ್ರ, ಗೂಬೆ
ಕೌಳಿಕ-ಮೋಸ
ಕಂ-ನೀರು
ಕಂಕಾಳ-ಬೆನ್ನೆಲುಬು
ಕಂಕೇಳಿ-ಅಶೋಕ
ಕಂಜ-ತಾವರೆ
ಕಂಡಪೊಕ್ಕರ-ಮಾಂಸಖಂಡದ ಹೊಡೆತ
ಕಂಡೆಯ-ಕತ್ತಿ
ಕಂಠೀರವ-ಸಿಂಹ
ಕಂಧರ-ಹೆಗಲು, ಕುತ್ತಿಗೆ, ಕಂಠ
ಕಂಬು-ಶಂಖ
ಕುಂಜಾಳಿಕ-ಒಂದು ರೀತಿಯ ಕ್ರಿಮಿ
ಕುಂಜರ-ಆನೆ
ಕುಂತಳ-ಕೂದಲು
ಕುಂದ-ಸೂಜಿಮಲ್ಲಿಗೆ
ಕುಂಭಿನಿ-ಭೂಮಿ
ಕೊಂಚೆ-ಕ್ರೌಂಚ
ಕೊಂಡೆಯ-ಚಾಡಿಕೋರ
ಕೊಂತ-ಭರ್ಜಿ
ಕೌಂಗು-ಅಡಿಕೆ

## ಖ

ಖರ್ಪರ-ತಲೆಯೋಡು
ಖರ್ವಡ-ಬೆಟ್ಟದ ಅಥವಾ ನದೀತೀರದ ಊರು
ಖಲಿಂಧರ-ಮುಸಲ್ಮಾನ
ಖೇಡ-ಬೆಟ್ಟದ ತಪ್ಪಲುಪ್ರದೇಶದ ಮನೆ
ಖೇಡಾಕುಳಿ-ಆಟದ ತಗ್ಗು
ಖಂಡಶರ್ಕರೆ-ಕಲ್ಲುಸಕ್ಕರೆ

CC-0. Jangamwadi Math Collection. Digitized by eGangotri

ಗ

ಗಕ್ಕುಪಾಡು–ಇದ್ದಕ್ಕಿದ್ದಂತೆ
ಗನ್ನಗತನ-ಠಕ್ಕುತನ
ಗಭಸ್ತಿ–ಕಾಂತಿ, ಕಿರಣ
ಗಮ್ಮನೆ-ಕೂಡಲೆ
ಗರುತ್ಮ–ಗರುಡ
ಗರುವಿಕೆ–ಶ್ರೇಷ್ಠತೆ
ಗವಾಸ್ಪದ- ಗೋಮಾಳ
ಗಸಣೆ–ತೊಂದರೆ ; ವಿಪತ್ತು
ಗಂಧಿಗರು-ಔಷಧಿ ಮಾರುವವರು
ಗಾವಳಿ–ಆರ್ಭಟ, ಶಬ್ದ
ಗಿಡಿ-ತುರುಕು
ಗಿಡಿಬಿಡಿ–ಡಚುರುಗ
ಗಿರಿಕ–ಇಲಿ
ಗೀರ್ವಾಣ–ದೇವತೆ
ಗೀಷ್ಪತಿ-ಬ್ರಹ್ಮ ; ಬೃಹಸ್ಪತಿ
ಗ್ರೀವ–ಕತ್ತು, ಕಂಠ
ಗುಡ–ಬೆಲ್ಲ
ಗುದಿ–ಗೊಂಚಲು
ಗುಲ್ಫ–ಕಾಲಿನ ಹರಡು
ಗುಲ್ಮ–ಪೊದೆ
ಗುಹ್ಯಕೇಶ್ವರ–ಕುಬೇರ
ಗುಂಜಿ–ಗುಲಗಂಜಿ
ಗುಂಡು–ರಾಶಿ
ಗೂಳೆಯ–ಒಲಸೆ ಹೊಗು
ಗೇಹ-ಮನೆ
ಗೊಂದಣ–ಸಮೂಹ
ಗೋ–ಕೂದಲು ; ಕಿರಣ ; ಹಸು ; ಸರಸ್ವತಿ ; ನೀರು
ಗೋಕರ್ಣ–ಕಣ್ಣನ್ನೇ ಕಿವಿಯಾಗಿ ಉಳ್ಳದ್ದು–ಹಾವು
ಗೋತ್ರ–ಪರ್ವತ, ಭೂಮಿ
ಗೋಪ–ಇಂದ್ರ : ವೃಷಭ
ಗೋಪಾಟವ–ವಾಕ್ಪಟುತ್ವ
ಗೋಮಾಯು–ನರಿ
ಗೋಂಟು–ಮೂಲೆ

ಘ

ಘಟಕಾ ಶತಕ–ಒಂದು ಗಳಿಗೆಗೆ ನೂರು ಪದ್ಯಗಳ ರಚನಾಸಾಮರ್ಥ್ಯ
ಘನಕೇಕಿ–ನವಿಲು
ಘರ್ಮಜಲ–ಬೆವರು
ಘಾಟಿ–ಇಳಿಯುವ ಮೆಟ್ಟಿಲು

ಚ

ಚಕ್ರಿ–ಸರ್ಪ
ಚಟುಲ- ಚಂಚಲ
ಚರಣಾಯುಧ-ಕೋಳಿ
ಚಲ್ಲಣ–ಚಡ್ಡಿ
ಚಲ್ಲೆ–ದೀರ್ಘತೆ
ಚಲ್ಲೆಗಂಗಳು–ವಿಲಾಸದ ಕಣ್ಣುಗಳು
ಚಷಕ–ಬಟ್ಟಲು
ಚಳೆಯ–ಚಿಮುಕಿಸು
ಚಕ್ಷುಶ್ರವ–ಸರ್ಪ
ಚಂಚರೀಕ–ದುಂಬಿ
ಚಂದ್ರಾಶ್ಮ–ಚಂದ್ರಶಿಲೆ
ಚಂಬಕ–ಒಂದು ತರದ ಡೋಲು
ಚಾರಿವರಿ–ವ್ಯವಸ್ಥಿತವಾಗಿ ಮುಂದುವರಿ
ಚಾಳಾಂಕಿ–ಒಂದು ಹಕ್ಕಿ
ಚುಬುಕ–ಗಲ್ಲ
ಚೂಚಕ–ಮೊಲೆತೊಟ್ಟು
ಚೇಲ–ಬಟ್ಟೆ
ಚೌಕಳಿ–ಕಿವಿಯ ಆಭರಣ

ಛ

ಛರ್ದಿ–ವಾಂತಿ

CC-0. Jangamwadi Math Collection. Digitized by eGangotri

ಛಪ್ಪನ–ಐವತ್ತಾರು

ಛಲಿ–ಲೂಟಿ ಮಾಡುವವ

ಛಾನಸ–ವಿಳಂಬ

ಜ

ಜಕ್ಕಣಿ–ಯಕ್ಷಿಣಿ

ಜಲವ್ಯಾಳ- ನೀರುಹಾವು

ಜರ್ವಿ–ಗಂಟಿಕ್ಕು

ಜೀಮೂತ–ಮೋಡ

ಜುಣುಗು ಹಿಂದೆಸರಿ

ಜುಮ್ಮನೆ–ತಕ್ಷಣ

ಜೇಟಿಕಾರ–ಜಟೆಯುಳ್ಳವ,ಶಿವ, ಚಾಟುಕಾರ(?)

ಜೊತ್ತು–ಜೋಡಿ

ಜಂಬೀರ–ಗಜನಿಂಬೆ

ಜಂಬು–ನೇರಳೆ

ಜಂಭಾರಿ–ದೇವೇಂದ್ರ

ಜುಂಜುದಲೆ–ಕೆದರಿದತಲೆ

ಜೋಡು–ಪಾಚಿ

ಝ

ಝುಲ್ಲೆ-ಗೊಂಡೆಗಳು

ಝುಲ್ಲಿಪಟ್ಟೆ–ಗೋಂಡೆಗಳ ಸಾಲು

ಠ

ಠಾಣೆ–ಸ್ಥಳ, ಕಾವಲು ಕಟ್ಟೆ

ಠೌಳಿ–ಮೋಸ

ಡ

ಡಕ್ಕೆ–ಡೋಲು

ಡಮಾನ–ಡೋಲು

ಡೌಡೆ–ಸಣ್ಣಡೋಲು

ಡಾಳಿ–ಒಯ್ಯಾರ

ಡಾಳಿಸು–ಬೀಸು

ಡಿಂಡಿಮ -ಮದ್ದಳೆ

ಡೊಕ್ಕರ–ಹೊಡೆತ

ಡೊಳ್ಳಾರಿ–ನಗಾರಿ

ತ

ತರಹರ–ತಾಳ್ಮೆ

ತರಹರಿಸು–ತಾಳಿಕೊ

ತರಕ್ಷು–ಹುಲಿ

ತಳ್ಗು–ಧೈರ್ಯಗುಂದು

ತಳ್ವು-ನಿಧಾನಮಾಡು

ತಾಮ್ರಚೂಡ–ಕೋಳಿ

ತಾರುಥಟ್ಟು–ಚೆಲ್ಲಾಪಿಲ್ಲಿಯಾಗಿ ಓಡು

ತಾಲವೃಂತ–ಬೀಸಣಿಗೆ

ತಿಗುರು–ಸುವಾಸನೆ, ಬಳಿ, ಸವರು

ತಿಣ್ಣ–ದೊಡ್ಡದಾದ

ತಿಮಿ–ಮೀನು

ತಿರಿಕಲ್ಲು–ಕವಣೆಕಲ್ಲು

ತಿರುಕುಳಿ–ಭಿಕ್ಷುಕ

ತ್ರಿದಶ–ದೇವತೆ

ತ್ರಿವಳಿ–ಹೆಂಗಸಿನ ಹೊಟ್ಟೆಯ ಮೇಲಿನ ಮೂರು ಗೆರೆಗಳು (ಸುಕ್ಕುಗಳು)

ತುರುಗೆವೆ–ಒತ್ತಾದ ಹುಬ್ಬು

ತುಮುರಾಗು–ಚೂರಾಗು

ತುಳಿಲ್–ಪರಾಕ್ರಮ : ವಂದನೆ

ತೂಪಿರಿ–ಊದು

ತೂರ್ಯತ್ರಯ–ಗೀತ-ನಾಟ್ಯ-ವಾದ್ಯ

ತೆತ್ತೀಸ–ಮೂವತ್ತುಮೂರು

ತೆವರು–ಹೋಗಲಾಡಿಸು

ತೈಜಸ–ತೇಜಸ್ಸು

ತೊಕ್ಕು–ಅಂಶ

ತೊದಲು-ಸುಳ್ಳು

ತೋಟಿ–ಜಗಳ, ಯುದ್ಧ

ತೋರ–ಗಾತ್ರವಾದ

ತಿಂಗಳು–ಚಂದ್ರ, ಅಮೃತಕಿರಣ

CC-0. Jangamwadi Math Collection. Digitized by eGangotri

ತಿಂತಿಣಿ–ಸಮೂಹ

## ದ

ದಶನದೀಧಿತಿ–ಹಲ್ಲಿನ ಹೊಳಪು
ದಾಮ–ಹಗ್ಗ
ದಿಮ್ಮಿದರ್–ಶ್ರೇಷ್ಠರು
ದಿಶಾಪರಿವೃಢ–ದಿಕ್ಪಾಲಕ
ದುಗ್ಧ–ಹಾಲು
ದುಮ್ಮಾನ–ಮನಸ್ಸಿನ ಆತಂಕ
ದೂವೆ–ಹೊಗೆ
ದೂಸರು–ಕಾರಣ
ದೂಸಿಗರ್–ಬಟ್ಟೆವ್ಯಾಪಾರಿಗಳು
ದೇವನಿಮ್ನಗೆ–ದೇವಗಂಗೆ
ದೇವಮಾತೃಕ–ಮಳೆಯ ನೀರಿನಿಂದ ಬೆಳೆಯುವ ಹೊಲ
ದೊದ್ದೆಗ–ಸೈನಿಕ : ಗುಂಪಿಗೆ ಸೇರಿದವ
ದಾಂಗುಡಿ–ನೀಳವಾದ ಕುಡಿ

## ಧ

ಧನಂಜಯ–ಅಗ್ನಿ
ಧನುಷ್ಕ–ಬಿಲ್ಲುಳ್ಳವನು
ಧವಳಾಂಶು ಚಂದ್ರ
ಧರಾಧೃತ–ಪರ್ವತ
ಧೀರ್ಘಿಕೆ–ಕೆರೆ
ಧುರ–ಯುದ್ಧ

## ನ

ನಕುಲ-ಮುಂಗುಸಿ
ನನೆ-ಮೊಗ್ಗು
ನಸೆ–ಮೃದುಗೊಳಿಸು
ನಾಕರಿಸು-ದೂರಮಾಡು
ನಾಗ–ಆನೆ ; ಸರ್ಪ
ನಾಗಾರಿ–ಸಿಂಹ ; ಗರುಡ
ನಾಣ್–ನಾಚು
ನಾರಂಗ–ಕಿತ್ತಳೆ
ನಾರಾಚ–ಬಾಣ
ನಾರಿ–ಬಿಲ್ಲಿನ ಹಗ್ಗ
ನಿರಯ–ನರಕ
ನಿದಾಘ–ಬೇಸಗೆಯ ಸಮಯ
ನಿಗಮ–ವೇದ : ಪಟ್ಟಣ
ನಿಗ್ಗವ–ಆನೆಯ ಕೋರೆಹಲ್ಲು
ನಿಧಾನ–ಸಂಪತ್ತು, ರಹಸ್ಯ, ಮೂಲಕಾರಣ
ನಿಮ್ನಗಾ–ನದಿ
ನಿಮಿಷ–ರೆಪ್ಪೆ ಮುಚ್ಚುವುದು
ನಿಲಿಂಪೇಶ–ದೇವೇಂದ್ರ
ನಿಶಾಟ–ರಾಕ್ಷಸ
ನಿಸ್ಸಾಳ–ಡೋಲು
ನಿಹಾರ–ಮಂಜು
ನೆಗಳ್–ಮೊಸಳೆ
ನೆವರು-ಜಾರು ; ನುಸುಳು ; ಮೇಲೆತ್ತು

## ಪ

ಪಕ್ಕರಕ್ಕೆ–ಜೀನು
ಪಚಾರಿಸು–ಹೀಯಾಳಿಸು, ತಿರಸ್ಕರಿಸು
ಪಚ್ಚುವ–ಹಂಚುವ
ಪಚ್ಚೆಯಾಡು–ಹಸಿರು ಕಾಯನ್ನು ನಡೆಸು
ಪಟ್ಟಿಸ–ಒಂದು ರೀತಿಯ ಆಯುಧ
ಪಟಹ-ಡೋಲು, ನಗಾರಿ
ಪಡಿಗ–ಪೀಕದಾನಿ
ಪಡಿಯರ–ಬಾಗಿಲು ಕಾಯುವವ
ಪಡಿಹಾರ–ಕೈತುಂಬ
ಪಣಹ–ದುಂದುಭಿ
ಪತ್ರಿ–ಪಕ್ಷಿ ; ಬಾಣ
ಪದಪು–ಸಂತೋಷ ; ಆಸೆ
ಪದ್ಮ–ಒಂದು ಸಂಖ್ಯೆ, ಕಮಲ, ಒಂದು ರೀತಿಯ ಹಾವು

CC-0. Jangamwadi Math Collection. Digitized by eGangotri

ಪಣರು—ರೀತಿ ; ಶಕ್ತಿ
ಪರಪುಟ್ಟ-ಕೋಗಿಲೆ
ಪರಭೃತ-ಕೋಗಿಲೆ
ಪರವೆ-ಎಚ್ಚರ, ಅರಿವು
ಪರಿಣಾಮ-ತೃಪ್ತಿ
ಪರಿವೇಶ-ಸೂರ್ಯನ ಸುತ್ತಲಿನ ರೇಖೆ
ಪಲ್ಲವಕ-ವಿಟಪುರುಷ
ಪಸದನ-ಅಲಂಕಾರ
ಪಳಂಚು-ಎದುರಾಗು, ವಿರೋಧಿಸು
ಪಳಿಕು-ಸ್ಫಟಿಕ
ಪಸರ-ವಿಸ್ತಾರ ; ಹರಡುವಿಕೆ
ಪಳಿವು-ನಿಂದೆ
ಪಾಕಶಾಸನ-ಇಂದ್ರ
ಪಾಟಕರಕೈವಾರ-ವಂದಿಮಾಗಧರು
ಪಾಳಿ-ಸಾಲು
ಪಾಸಟಿ-ಸಮಾನ
ಪಿಡಿ-ಹೆಣ್ಣಾನೆ
ಪಿಶಂಗ-ಕಂದು ಬಣ್ಣ
ಪೀತಪಟ-ವಿಷ್ಣು
ಪೀತವಾಸ-ವಿಷ್ಣು
ಪೀಲಿ-ನವಿಲು
ಪುನ್ನಾಗ-ಸುರಗಿ ಮರ
ಪುರುಹೂತ-ಇಂದ್ರ
ಪುರುಳಿ-ಹೆಣ್ಣು ಗಿಳಿ
ಪುಷ್ಕರಭವ-ಬ್ರಹ್ಮ
ಪುಷ್ಕರಾಪ್ತ-ಸೂರ್ಯ
ಪೂವಂಡು-ಹೂವಿನರಸ, ಮಕರಂದ
ಪೆಣೆಲ್-ದುಬ್ಬ
ಪೊಡಕರಿಸು-ಕಾಣಿಸು
ಪೊಣರ್-ಹೋರಾಡು
ಪೊಣ್ಮೆ-ಅರಳಿ
ಪೊಣ್ಮು-ಹೊರಬೀಳು
ಪೊರವಾರ-ಪೃಷ್ಠ, ನಿತಂಬ
ಪೊರೆ-ಹೊರೆ, ಪಕ್ಕ, ಉಕ್ಕಿಹರಿ
ಪೊರೆಯೇರು-ಪುರುಷೇರು
ಪೊಳಕು-ಸ್ಫಟಿಕ
ಪೋರು-ಹೋರಾಡು
ಪಂಚಧಾರಾ-ಕುದುರೆಯ ಓಟದ ಐದು ಗತಿಗಳು
ಪಂಥ-ಸ್ಪರ್ಧೆ
ಪಾಂಥ-ದಾರಿಹೋಕ
ಪಿಂಜರ-ಬಂಗಾರದ ಬಣ್ಣ
ಪುಂಡರೀಕ-ಬಿಳಿಯ ತಾವರೆ ; ಹುಲಿ
ಪೆಂಡೆಯ-ಬಿರುದಿನ ಬಳೆ
ಪೆಂಪು-ಪ್ರಖ್ಯಾತಿ, ಹೆಚ್ಚಳ
ಪೊಂಗು-ಆನಂದಪಡು, ಉಬ್ಬು
ಪೊಂಗುವ-ಅರಳುವ
ಪ್ರಭಂಜನ-ಬಿರುಗಾಳಿ
ಪ್ರವಾಳ-ಹವಳ
ಪ್ರವೇಷ್ಟಿಸು-ಸುತ್ತುವರಿ
ಪ್ರಸೂನ-ಹೂವು
ಪ್ಲವಗ-ಕಪ್ಪೆ ; ಕೋತಿ
ಪ್ಲವಂಗ-ಕೋತಿ ; ಒಂದು ಸಂವತ್ಸರ
ಪಲ್ಗುಣಮಿತ್ರ-ಕೃಷ್ಣ

ಫ

ಫೇನ-ನೊರೆ

ಬ

ಬಕ್ಕುಡೆ-ಬೆರಗು ; ಭೀತಿ
ಬಗರಿ-ಅಗಲಬಾಯಿನ ಪಾತ್ರೆ
ಬಗ್ಗದೊವಲು-ಹುಲಿಯಚರ್ಮ
ಬಗ್ಗರಿ-ಗಂಟಲು ; ಎದೆಪಂಜರ
ಬತ್ತೀಸ-ಮೂವತ್ತೆರಡು
ಬದರೀಫಲ-ಬೋರೆಹಣ್ಣು
ಬಧಿರ-ಕಿವುಡ

CC-0. Jangamwadi Math Collection. Digitized by eGangotri

ಬಳ್ಳು—ನರಿ
ಬಸೆ—ನೆಣ, ಮೇದಸ್ಸು
ಬಾಸೆ—ಹೆಂಗಸಿನ ಹೊಕ್ಕುಳ ಮೇಲಿನ ಕೂದಲು
ಬಾಹುರಕ್ಕೆ—ಭುಜಕೀರ್ತಿ
ಬಾಹೆ—ಹೊರಭಾಗ
ಬಿಜ್ಜಣಿಗೆ—ಬೀಸಣಿಗೆ
ಬಿಡಾಲ—ಬೆಕ್ಕು
ಬಿಡೆವಣ್—ಬಿರುಕುಬಿಟ್ಟ ಹಣ್ಣು
ಬಿದಿರು—ಹರಡು ; ಸಡಲಿಸು
ಬಿಸುಗದಿರ—ಸೂರ್ಯ
ಬುದ್ಬುದ—ಗುಳ್ಳೆ
ಬೆಟ್ಟಿತು—ಕಠಿಣ ; ದೊಡ್ಡದು
ಬೆರೆ—ಅಹಂಕಾರ
ಬೆಳರ್ತುದು-ಕಾಂತಿಯುಳ್ಳದು
ಬೆಳುಗವತೆ—ಹಗಲುದರೋಡೆ
ಬೆಳ್ಸರಿಗೆ-ಬಿಳಿಯ ಪ್ರವಾಹ
ಬೇಳು—ಹೋಮಮಾಡು, ಬಲಿಕೊಡು
ಬೋದುಗೆ-ಕಂಬದ ಮೇಲಿಟ್ಟ ಚಪ್ಪಡಿ
ಬಂಡು-ಮಧು, ಲಜ್ಜಾಸ್ಪದ ನಡತೆ
ಬಂಧಕಿ—ಜಾರಸ್ತ್ರೀ
ಬಿಂಜ—ವಿಂಧ್ಯಪರ್ವತ
ಬಿಂಬಾಫಲ-ತೊಂಡೆಹಣ್ಣು
ಬೃಂಹಿತ—ಗರ್ಜನೆ
ಬೊಂಬಲು—ಗುಂಪು
ಬೊಂಬಾಳದೀವಿಗೆ-ಬೊಂಬೆಯಾಕಾರದಲ್ಲಿ ಕೆತ್ತಿರುವ ದೀಪ
ಭಣಿತೆ-ಧ್ವನಿ ; ಶಬ್ದ
ಭರ್ಮ—ಬಂಗಾರ
ಭಾರಣೆ—ಗೌರವ, ಹೆಚ್ಚಳ
ಭಲ್ಲೆಹ—ಈಟಿ
ಭಿತ್ತಿ—ಗೋಡೆ
ಭೈತ್ರ-ಹಡಗು
ಭಂಗ—ಮೋಸ, ಅಲೆ

ಮ

ಮಘವ—ದೇವೇಂದ್ರ
ಮಡ-ಹಿಮ್ಮಡಿ
ಮಡಹು—ಹೆಗಲು
ಮಣಿಹ-ಅಧಿಕಾರ
ಮುರುಜ—ಮದ್ದಳೆ
ಮಲಯಜ-ಶ್ರೀಗಂಧ
ಮಸಕ-ಉದ್ರೇಕ, ಅಬ್ಬರ, ವೇಗ
ಮಕ್ಷಿಕ—ನೊಣ
ಮುಡುಹು-ಹೆಗಲು
ಮುನ್ನೀರಸತಿ-ಸಮುದ್ರರಾಜನ ಪತ್ನಿ
ಮುರುಕಿಸು—ಕೊಂಕುತನ
ಮೇಘ್ರ—ಟಗರು
ಮೇರುವೆ—ಗೋಪುರಾಕಾರದ ಮಂಟಪ
ಮೇಲುಗುಲ್ಲಾಯಿ—ತಲೆಗೆ ಹಾಕಿಕೊಳ್ಳುವ ಕುಲಾವಿ
ಮೇಳ—ಜೊತೆ
ಮೊಗರಂಬ—ಶಿರಸ್ತ್ರಾಣ
ಮಂಡನ—ಅಲಂಕಾರ

ಯ

ಯಕ್ಷಪತಿ-ಕುಬೇರ
ಯಮಿ—ತಪಸ್ವಿ
ಯೂತಿಕ—ಕಾಡುಮಲ್ಲಿಗೆ

ರ

ರಕ್ತಾಕ್ಷಿ—ಸಂವತ್ಸರ, ರಕ್ತದಂತೆ ಕಣ್ಣುಳ್ಳವಳು
ರಕ್ಕೆ—ಭಸ್ಮದಿಂದ ಮಾಡುವ ರಕ್ಷೆ
ರಕ್ಕೆವಣಿ—ರಕ್ಷಾಮಣಿ
ರದನ-ಹಲ್ಲು
ರವಿಗ್ರಾವ—ಸೂರ್ಯಕಾಂತಶಿಲೆ
ರಾಜ—ಚಂದ್ರ

CC-0. Jangamwadi Math Collection. Digitized by eGangotri

ರಾಜೀವ-ತಾವರೆ
ರೋಚಿ–ಕಾಂತಿ
ರಂಚಿಕೆ–ಅಂಬಾರಿ
ರಂಭಾ–ಬಾಳೆ

ಲ

ಲಾಕುಳ–ತಪಸ್ವಿಗಳು ಹಿಡಿಯುವ ಕೋಲು
ಲಾವಕರು–ಚಾಡಿಕೋರರು
ಲಾಸ್ಯಭವನ–ನಾಟ್ಯಮಂದಿರ
ಲೆತ್ತ–ಪಗಡೆ
ಲೋವೆ–ಸೂರಿನ ಮಾಡು
ಲೌಡಿ–ಕಬ್ಬಿಣದ ಗದೆ
ಲೆಂಕ–ಸೇವಕ

ವ

ವನಾಧಿಪ–ಸಮುದ್ರರಾಜ
ವಾಘೆ–ಲಗಾಮು
ವಾಡವ - ಕುದುರೆ
ವಾಣಿಯರ್–ವ್ಯಾಪಾರಿಗಳು
ವಾರಣ ಆನೆ
ವಾರುಣಿ–ಪಶ್ಚಿಮದಿಕ್ಕು, ಹೆಂಡ
ವಿಚಕಿಲ–ಸೂಜಿಮಲ್ಲಿಗೆ
ವಿತರಣ–ದಾನ
ವಿಧಾವಂತ–ಬಾಡಿಗೆ ಆಳು
ವಿಧು–ಚಂದ್ರ
ವಿಯದ್–ಆಕಾಶ
ವಿರತೆ–ವಿರಕ್ತೆ
ವೀತಿಹೋತ್ರ–ಅಗ್ನಿ
ವೀರಣ–ಲಾವಂಚ
ವೇಡಯು–ಮುತ್ತಿಗೆ
ವೇತಂಡ–ಆನೆ
ವೇಷ್ಟಿಸು–ಆವರಿಸು
ವೈಸಿಕ- ವೇಶ್ಯಾವೃತ್ತಿ ; ಮೋಸ

ಶ

ಶ್ವಸನ–ವಾಯು
ಶಾತ–ಹರಿತ
ಶಾತಕುಂಭ-ಬಂಗಾರ
ಶಿವ–ಗಿಳಿ, ಸರ್ಪ, ಹೆಣ್ಣುನರಿ, ನೀರು
ಶಂಖ ನಿಧಿ, ಹಣೆಯ ಮಧ್ಯದ ಮೂಳೆ, ನೀರಿನಲ್ಲಿ ಸಿಗುವ ಶಂಖ
ಶುಂಡಾಳ–ಆನೆ
ಶೈಲಾದಿ–ನಂದಿ

ಷ

ಷಟ್ಪದ–ದುಂಬಿ

ಸ

ಸಕ್ಕಸಮು–ಒಂದೇಸಮು
ಸಕಳೆ–ಶಾಖೆ
ಸಗಾಟ–ರಭಸ ; ಶೌರ್ಯ
ಸತ್ರ–ಯಜ್ಞ
ಸದಳಿಗ–ಧಾನ್ಯ ವ್ಯಾಪಾರಿ
ಸಪ್ತಾಂಗ–ಸ್ವಾಮಿ-ಅಮಾತ್ಯ-ಸ್ನೇಹಿತ-ಕೋಶ-ರಾಷ್ಟ್ರ-ದುರ್ಗ-ಸೈನ್ಯ
ಸರ್ಪಿ–ತುಪ್ಪ
ಸ್ವರ್ಭಾನು–ರಾಹು
ಸಮ್ಮ–ಚರ್ಮ
ಸರಿಸ–ಹತ್ತಿರ
ಸಾಧ್ವಸ–ಭಯ
ಸಾಮಜ–ಆನೆ
ಸಾಯಕ–ಬಾಣ
ಸಾರಣೆ–ಬಳಿಯುವಿಕೆ
ಸಿಕತ–ಮರಳು
ಸಿತ–ಬಿಳಿಯಬಣ್ಣ, ಸಕ್ಕರೆ
ಸಿರಿಖಂಡ–ಶ್ರೀಗಂಧ
ಸೀಕರ–ತುಂತುರುಹನಿ

CC-0. Jangamwadi Math Collection. Digitized by eGangotri

ಸೀಸಕ-ಶಿರಸ್ತ್ರಾಣ
ಸುಪರ್ವ-ದೇವತೆ
ಸುಮನ-ದೇವತೆ ; ಹೂ
ಸುರಗಿ-ಕಠಾರಿ
ಸುರುಜಾಂಗ-ರೋಗಿಷ್ಠ
ಸುರತಾಳ-ಸುಲ್ತಾನ
ಸುಷಿರ-ರಂಧ್ರ
ಸೂಳೆಬಂಟಿಕೆ-ಸೂಳೆಗೇರಿ
ಸೆಜ್ಜರ-ಹಾಸಿಗೆ
ಸೆಲವು-ಅಪ್ಪಣೆ
ಸೊದೆ-ಸುಣ್ಣ
ಸೋಗಿಲು-ಮಡಿಲು
ಸೌದಾಮಿನಿ-ಮಿಂಚು
ಸೌಮ್ಯ-ಬುಧ
ಸಂವರ್ತ-ಪ್ರಳಯ
ಸೈಂಹಿಕೇಯ-ರಾಹು
ಸಿಂಗಾಡಿ-ಬಿಲ್ಲು
ಸಿಂಜಿನಿ-ಬಿಲ್ಲಿನ ಹೆದೆ
ಸಿಂಧು-ಸಮುದ್ರ ; ನದಿ

ಹ

ಹದಿರುಕಾರ-ಅನನುಭವಿ
ಹಮ್ಮ್ಯ-ಉಪ್ಪರಿಗೆ
ಹರವಿರೋಧಿ-ಕೇತಕಿ
ಹರಿಗೆ-ಗುರಾಣಿ
ಹಲಗೆ-ಗುರಾಣಿ
ಹಸಗೈ-ಉದ್ದೀಪನಗೊಳಿಸು
ಹಸರ-ಅಂಗಡಿ
ಹಸ್ತಿರಾಣ್ಮುಖಿ-ಗಣೇಶ
ಹಾಹೆ-ದೋಣಿಯ ಹಾಯಿ
ಹೇತಿ-ಆಯುಧ, ಕಿರಣ
ಹೊಕ್ಕರಿಣಿ-ಪುಷ್ಕರಣಿ
ಹೊಗರು-ಕಾಂತಿ
ಹೊರಜು-ದಪ್ಪನೆಯ ಹಗ್ಗ
ಹಂಸ-ಸೂರ್ಯ ; ಹಂಸಪಕ್ಷಿ

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. ......4227......

CC-0. Jangamwadi Math Collection. Digitized by eGangotri







[ಮುಂದುವರಿದದ್ದು]

ಕೆಳದಿನೃಪ ವಿಜಯ ★ ದಮಯಂತೀ ಸ್ವಯಂವರ
ಶಾಂತಿಪುರಾಣ ★ ಚಂದ್ರಪ್ರಭ ಪುರಾಣ
ಉದ್ಭಟ ಕಾವ್ಯ ★ ಕುಸುಮಾವಳಿ
ಅಭಿನವ ದಶಕುಮಾರ ಚರಿತೆ
ಮಲ್ಲಿನಾಥಪುರಾಣ ★ ರಾಜಶೇಖರ
ವಿಳಾಸ ★ ಚಿಕ್ಕದೇವರಾಜ ವಂಶಾವಳಿ
ದಿವ್ಯಸೂರಿ ಚರಿತೆ ★ ಸಿದ್ಧರಾಮಚಾರಿತ್ರ
ಬಸವಪುರಾಣ ★ ಪ್ರಭುಲಿಂಗ ಲೀಲೆ

CC-0. Jangamwadi Math Collection. Digitized by eGangotri



1979

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹ ಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ......ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲ ಪಾಠವನ್ನು ಪ್ರಕಟಿಸಿ ಪುಸ್ತಕರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದ ಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು ಇವು ಆ ಯೋಜನೆಯ ಮುಖ್ಯ ಅಂಶಗಳು.

—ಪ್ರಸ್ತಾವನೆಯಿಂದ

---

ಈ ಕಾರ್ಯಕ್ರಮದಲ್ಲಿ ಈಗ ಅಂಗೀಕರಿಸಿರುವ ಹಳಗನ್ನಡ-ನಡುಗನ್ನಡ ಕಾವ್ಯಗಳು ನಲವತ್ತನಾಲ್ಕು. ಇವುಗಳಲ್ಲಿ ಮೊದಲ ಕಂತಾಗಿ ಹದಿಮೂರು ಗ್ರಂಥಗಳು ಪರಿಷತ್ತಿನ ವಜ್ರಮಹೋತ್ಸವ ಸಂದರ್ಭದಲ್ಲಿ ಬಿಡುಗಡೆಯಾಗಲಿವೆ

CC-0. Jangamwadi Math Collection. Digitized by eGangotri